# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಕರ್ಣ ಪರ್ವ
ಶಲ್ಯಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೯

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 19**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್,M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ಪರಮಾತ್ಮನ ದಯೆಯಿಂದಲೂ ಗುರುಭಗವಂತನ ಕೃಪಾಕಟಾಕ್ಷ ದಿಂದಲೂ ಹತ್ತೊಂಬತ್ತನೆಯ ಕುಸುಮರೂಪವಾದ ಸಂಪುಟವನ್ನು ದಯಾ ಮಯನ ದಿವ್ಯಪಾದಾರವಿಂದಗಳಲ್ಲಿ ಸಮರ್ಪಿಸಿ, ಭಗವಂತನ ದಿವ್ಯಪ್ರಸಾದ ರೂಪವಾದ ಘಮ-ಘಮಿಸುವ ಈ ದಿವ್ಯಕುಸುಮವನ್ನು ನಮ್ಮ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಸಂಕ್ರಾಂತಿಯಂದು ಪ್ರಕಟಿಸ ಬೇಕೆಂದಿದ್ದ ನಮ್ಮ ಆಶಯವು ಫಲಿಸಲಿಲ್ಲ. ಆದರೆ ಹೆಚ್ಚು ಸಾವಕಾಶ ವಾಗದೆ ಹದಿನೈದು ದಿವಸಗಳ ಅಂತರದಲ್ಲಿಯೇ ಈ ಸಂಪುಟವು ಹೊರಬೀಳಲು ಸಾಧ್ಯವಾದುದಕ್ಕೆ ಸಂತೋಷಿಸಬೇಕಾಗಿದೆ. ಈ ಸಂಪುಟದಲ್ಲಿ ಕರ್ಣಪರ್ವವು ಮುಗಿದು ಶಲ್ಯಪರ್ವದಲ್ಲಿ–ಶಲ್ಯ ಮತ್ತು ಹ್ರದಪ್ರವೇಶ– ಎಂಬ ಎರಡು ಉಪ ಶಲ್ಯಪರ್ವಗಳು ಮುಗಿದಿವೆ. ಹಿಂದಿನ ಪರ್ವಗಳಂತೆ ಯುದ್ಧದ ವರ್ಣನೆಯೇ ಹೆಚ್ಚಾಗಿದ್ದರೂ ರಸವತ್ತಾದ ಅನೇಕ ಭಾಗಗಳಿವೆ. ಕೃಷ್ಣಾರ್ಜುನರು ಬಂದುದನ್ನು ನೋಡಿ ಕರ್ಣನ ವಧೆಯಾಯಿತೆಂದೇ ಭಾವಿಸಿದ ಯುಧಿಷ್ಠಿರನಾಡುವ ಮಾತುಗಳು ಮಾರ್ಮಿಕವಾಗಿವೆ. ಕರ್ಣನನ್ನು ಸಂಹರಿಸದೇ ಅರ್ಜುನನು ತನ್ನ ಸಮೀಪಕ್ಕೆ ಬಂದನೆಂದು ತಿಳಿದನಂತರ ಧರ್ಮರಾಜನಾಡುವ ಮಾತುಗಳು ಬಹಳ ಸ್ವಾರಸ್ಯವಾಗಿವೆ. ಯುಧಿಷ್ಠಿರನಾಡಿದ ಮಾತಿನಿಂದ ಕುಪಿತನಾದ ಅರ್ಜುನನು ಅಣ್ಣನನ್ನೇ ಸಂಹರಿಸಲು ಹೋದಾಗ ಶ್ರೀಕೃಷ್ಣನು ಅರ್ಜುನನನ್ನು ತಡೆದು ಅವನಿಗೆ ಮಾಡಿದ ಹಿತೋಪದೇಶವು ಪುಟ್ಟ ಗೀತೆಯಂತೆಯೇ ಇದೆ. ಇಂತಹ ಸ್ವಾರಸ್ಯವಾದ ಅನೇಕ ಪ್ರಕರಣಗಳು ಈ ಸಂಪುಟದಲ್ಲಿವೆ. ಮುಂದಿನ ೨೦ನೆಯ ಸಂಪುಟದಲ್ಲಿ ಶಲ್ಯಪರ್ವದಲ್ಲಿ ಉಳಿದಿರುವ ಗದಾಪರ್ವವನ್ನೂ ಮತ್ತು ಸೌಪ್ತಿಕಪರ್ವ-ಸ್ತ್ರೀಪರ್ವಗಳನ್ನೂ ಮುಗಿಸಿ ಶಾಂತಿಪರ್ವಕ್ಕೆ ಪ್ರವೇಶಿಸಬೇಕಾಗುತ್ತದೆ. ಕೌರವ-ಪಾಂಡವರ ಮಹಾಯುದ್ಧಕ್ಕೆ ಶಾಂತಿರೂಪವಾಗಿಯೇ ಶಾಂತಿಪರ್ವ ವಿದ್ದರೂ–ಮಹಾಯುದ್ಧದ ಪರಿಸಮಾಪ್ತಿಯ ಸಂಬಂಧವಾಗಿ ಅನ್ನಶಾಂತಿ ಯನ್ನು ಇಟ್ಟುಕೊಳ್ಳುವ ಆಶಯವಿದೆ. ಅತಿರಥ-ಮಹಾರಥರು ಅನೇಕ ಸಾವಿರ ವರ್ಷಗಳ ಹಿಂದೆಯೇ ಅವಸಾನಹೊಂದಿರಬಹುದು. ಆದರೆ ನಾವು

ಸಂಪುಟವನ್ನು ಅಧ್ಯಯನಮಾಡುವಾಗ ಅವರ ಅವಸಾನದ ವಿಷಯವು ನಮ್ಮ ಮನಸ್ಸನ್ನು ಹೊಕ್ಕು ಆಯಾ ಸಂದರ್ಭಕ್ಕೆ ಅನುಸಾರವಾಗಿ ನಮ್ಮ ಮನಸ್ಸಿನಲ್ಲಿ ಅನೇಕರೀತಿಯ ಪರಿಣಾಮಗಳು ಆಗಿಯೇ ತೀರುತ್ತವೆ. ಆದುದರಿಂದ ಮಹಾಭಾರತದ ವಾಚಕರೆಲ್ಲರೂ ಈ ಶಾಂತಿಸಮಾರಂಭದಲ್ಲಿ ಯಾವುದಾದರೂ ರೀತಿಯಲ್ಲಿ ಭಾಗವಹಿಸಬಹುದಾಗಿದೆ. ೨೦ನೆಯ ಸಂಪುಟವು ಪ್ರಕಾಶನವಾಗಿ ಅದನ್ನು ಓದಿ ಮುಗಿಸಿದನಂತರ ತಮ್ಮ ಬಂಧು-ಮಿತ್ರರೊಡನೆ ಕಲೆತು ತಾವಿರುವಲ್ಲಿಯೇ ಯಥಾಶಕ್ತಿ ಅನ್ನಶಾಂತಿಯನ್ನು ಮಾಡಿಸಬಹುದು. ಒಟ್ಟಿನಲ್ಲಿ ಭೂತತೃಪ್ತಿಯಾಗಬೇಕು. ನಾವೂ ಈ ಬಗೆಗೆ ಏನು ಮಾಡಬೇಕೆಂಬ ಆಲೋಚನೆಯಲ್ಲಿದ್ದೇವೆ. ೨೦ನೆಯ ಸಂಪುಟವು ಯಶಸ್ವಿಯಾಗಿ ಮುಗಿದನಂತರ ಜಪ-ಹೋಮಗಳನ್ನೂ ಯಥಾಶಕ್ತಿ ಭೂರಿಭೋಜನಾದಿಗಳನ್ನೂ ಮಾಡಿಸಬೇಕೆಂಬ ಆಶಯವಿದೆ. ಪರಮಾತ್ಮನ ಇಚ್ಛೆಯು ಹೇಗಿದೆಯೋ ತಿಳಿಯದು. ಯಾವ ರೀತಿಯಲ್ಲಿ ಈ ಶಾಂತಿಕರ್ಮವನ್ನು ನಡೆಸಬಹುದೆಂಬುದರ ಬಗೆಗೆ ಸಲಹೆಗಳನ್ನು ಕೊಡಬಹುದು.

ಶ್ರೀಮನ್ಮಹಾಭಾರತದ ಪ್ರಚಾರಕಾರ್ಯವು ಯಥಾಪೂರ್ವ ಸಾಗುತ್ತಿದೆ. ನೂರಾರು ಮಂದಿ ಸತ್ಪುರುಷರ ಸತತಪ್ರಯತ್ನದಿಂದಾಗಿ ಮಹಾಭಾರತವೆಂಬ ದಿವ್ಯಜ್ಯೋತಿಯು ಕನ್ನಡ ಸಹೋದರರ ಸಾವಿರಾರು ಮನೆಗಳಲ್ಲಿ ಬೆಳಗುತ್ತಿದೆ. ಎಲ್ಲರ ಮನೆಯಲ್ಲಿಯೂ ಈ ದಿವ್ಯಜ್ಯೋತಿಯು ಬೆಳಗುವಂತಾಗಬೇಕು– ಎಂಬುದೇ ನಮ್ಮ ಮಹಾಶಯವಾಗಿದೆ. ಬೆಂಗಳೂರು ನಗರಸಭೆಯವರು ತಾವು ನಡೆಸುತ್ತಿರುವ ಎಲ್ಲ ಪ್ರೌಢಶಾಲೆಗಳಿಗೂ ಮಹಾಭಾರತದ ಸಂಪುಟಗಳನ್ನು ತೆಗೆದುಕೊಂಡಿರುತ್ತಾರೆ. ಇದಕ್ಕೆ ಸಂಬಂಧಿಸಿದ ಎಲ್ಲ ಅಧಿಕಾರಿಗಳಿಗೂ ನಮ್ಮ ಹೃತ್ಪೂರ್ವಕವಂದನೆಗಳನ್ನು ಅರ್ಪಿಸುತ್ತೇವೆ.

೧೮ನೆಯ ಸಂಪುಟದ ಪ್ರಕಾಶನಸಮಾರಂಭವು ಶ್ರೀಬ್ರಹ್ಮತಂತ್ರ ಸ್ವತಂತ್ರಪರಕಾಲಮಠದ ಶ್ರೀ ಲಕ್ಷ್ಮೀಹಯಗ್ರೀವಕಲ್ಯಾಣಮಂಟಪದಲ್ಲಿ ತಾರೀಖು 1-10-1979ರ ವಿಜಯದಶಮಿಯಂದು ವೈಭವದಿಂದ ನೆರವೇರಿತು. ಸಮಾರಂಭದ ಅಧ್ಯಕ್ಷತೆಯನ್ನು ಗೋಕರ್ಣ ಪರ್ತಗಾಳಿಮಠದ ಶ್ರೀ ಶ್ರೀಮದ್ವಿದ್ಯಾಧಿರಾಜತೀರ್ಥವಡೇರ್ ಸ್ವಾಮಿಗಳವರು ವಹಿಸಿದ್ದರು.

ಉಚ್ಚನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಎಂ. ರಾಮಾಜೋಯಿಸ್ ಅವರು ಮುಖ್ಯಅತಿಥಿಗಳಾಗಿದ್ದರು. ವೇದಘೋಷದೊಡನೆ ಸಮಾರಂಭವು ಪ್ರಾರಂಭವಾಯಿತು. ಕುಮಾರೀ ಮೈಥಿಲೀ ಅವರು ಸ್ವಾಗತಪದ್ಯಮಾಲೆಯನ್ನು ಸುಶ್ರಾವ್ಯವಾಗಿ ಹಾಡಿದರು. ವಿದ್ವಾನ್ ಹೆಚ್.ಎನ್. ರಂಗಸ್ವಾಮಿಯವರಿಂದ ಸ್ವಾಗತಭಾಷಣವಾದನಂತರ ಶ್ರೀ ನೆ.ವೆಂ. ಶ್ರೀನಿವಾಸರಾಯರು ಸಂದೇಶಗಳನ್ನು ಓದಿದರು. ಶ್ರೀ ಎಂ. ರಾಮಾಜೋಯಿಸ್ ಅವರು ಸಂಪುಟಕ್ಕೆ ಅರ್ಚನೆಯನ್ನು ಸಲ್ಲಿಸಿದನಂತರ ಸ್ವಾಮೀಜೀಯವರು ಸಂಪುಟವನ್ನು ಪ್ರಕಾಶನಗೊಳಿಸಿದರು. ಕುಮಾರೀ ಮೈಥಿಲೀ ಅವರು ಸಂಪುಟದಿಂದ ಆಯ್ದ ಶ್ಲೋಕಗಳನ್ನು ಹಾಡಿದರು. ಬಳಿಕ ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು ೧೮ನೆಯ ಸಂಪುಟದ ಪರಿಚಯಮಾಡಿಕೊಟ್ಟರು. ಅನಂತರ ಶ್ರೀ ಎಂ. ರಾಮಾಜೋಯಿಸ್ ಅವರು ಮಾತನಾಡಿ ಮಹಾಭಾರತದ ಹಿರಿಮೆಯನ್ನು ಸಾಕ್ಷ್ಯಾಧಾರಗಳೊಡನೆ ಪ್ರತಿಪಾದಿಸಿದರು. ಶ್ರೀ ಶ್ರೀ ಸ್ವಾಮೀಜೀಯವರು ಅಧ್ಯಕ್ಷಭಾಷಣ ಮಾಡುತ್ತಾ: "ನಮ್ಮ ದೇಶ ಭಾರತ-ನಮ್ಮ ಭಾಷೆ ಭಾರತಿ–ನಮ್ಮ ಪೂಜ್ಯಗ್ರಂಥ ಭಾರತ–ನಾವು ಭಾರತೀಯರು"– ಎಂಬುದನ್ನು ಅಚ್ಚುಕಟ್ಟಾಗಿ ಸ್ವಾರಸ್ಯವಾಗಿ ಪ್ರತಿಪಾದಿಸಿ ಮಾತನಾಡಿ ಮಹಾಭಾರತವು ಯಾವ ವಿಧವಾದ ವಿಘ್ನಗಳೂ ಇಲ್ಲದೇ ಮುಗಿಯಲೆಂದು ಆಶೀರ್ವದಿಸಿದರು. ಶ್ರೀರಾಮಚಂದ್ರಾಪುರಮಠದ ಶ್ರೀ ಶ್ರೀ ರಾಘವೇಂದ್ರ ಭಾರತೀಸ್ವಾಮಿಗಳವರು ಕಳುಹಿಸಿಕೊಟ್ಟಿದ್ದ ಸುವರ್ಣಮಂತ್ರಾಕ್ಷತೆಯನ್ನು ಸ್ವಾಮೀಜೀಯವರು ಸಂಪಾದಕಮಂಡಲಿಯವರಿಗೆ ಆಶೀರ್ವದಿಸಿ ದಯಪಾಲಿಸಿದರು. ವಿದ್ವಾನ್ ರಾಮೇಶ್ವರಾವಧಾನಿಗಳಿಂದ ವಂದನಾರ್ಪಣೆಯಾದನಂತರ ಸಮಾರಂಭವು ಮುಕ್ತಾಯವಾಯಿತು.

ತಾ|| 13-10-79ನೇ ಶನಿವಾರ ಸಾಯಂಕಾಲ ಮೈಸೂರಿನ ಶ್ರೀ ಶಂಕರಮಠದಲ್ಲಿ ಭಾರತ ದರ್ಶನ ಪ್ರಸಾರಾಂಗಸಮಾರಂಭವು ನಡೆಯಿತು. ಶ್ರೀ ರಾಮಕೃಷ್ಣವಿದ್ಯಾಲಯದ ಪೂಜ್ಯ ಶ್ರೀ ಜಗದಾತ್ಮಾನಂದಸ್ವಾಮೀಜೀಯವರು ಅಧ್ಯಕ್ಷತೆ ವಹಿಸಿದ್ದರು. ಶ್ರೀಮತೀ ಗೌರಮ್ಮನಾಗರಾಜ್ ಅವರು ಪ್ರಾರ್ಥನೆಮಾಡಿದರು. ವಿದ್ವಾನ್ ಹೆಚ್. ಎನ್. ರಂಗಸ್ವಾಮಿಗಳವರು

ಭಾರತ ದರ್ಶನ ನಡೆದು ಬಂದ ಬಗೆಯನ್ನು ವಿವರಿಸಿ ಹೇಳಿದರು. ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು ಮಹಾಭಾರತದ ಬಗೆಗೆ ವಿದ್ವತ್ಪೂರ್ಣವಾದ ಉಪನ್ಯಾಸಮಾಡಿದರು. ಶ್ರೀ ಕೆ. ವಿ. ಶ್ರೀನಿವಾಸಮೂರ್ತಿಗಳ ವಂದನಾರ್ಪಣೆಯೊಂದಿಗೆ ಸಮಾರಂಭವು ಮುಕ್ತಾಯವಾಯಿತು.

ತಾ|| 14-10-79ನೇ ಭಾನುವಾರ ಕೆ.ಜಿ.ಎಫ್. ಸಂಸ್ಕೃತಪರಿಷತ್ತಿನ ಆಶ್ರಯದಲ್ಲಿ ಶ್ರೀಮನ್ಮಹಾಭಾರತದ ೧೮ನೆಯ ಸಂಪುಟದ ಪ್ರಕಾಶನ ಸಮಾರಂಭವು ಶ್ರೀರಾಘವೇಂದ್ರಸ್ವಾಮಿಗಳವರ ಮಠದ ಸಭಾಂಗಣದಲ್ಲಿ ನಡೆಯಿತು. ವಿದ್ವಾನ್ ಹಿರಣ್ಯಶರ್ಮರು ಸ್ವಾಗತಭಾಷಣಮಾಡಿದರು. ಶ್ರೀ ಟಿ.ಎನ್. ಪ್ರಭಾಕರ್‌ರವರು ಭಾರತ ದರ್ಶನ ಪ್ರಕಾಶನಸಂಸ್ಥೆಯವರು ಕೈಗೊಂಡಿರುವ ಅಗಾಧಕಾರ್ಯದ ಬಗೆಗೆ ವಿವರಣೆ ನೀಡಿದರು. ವಿದ್ವಾನ್ ಹೆಚ್. ಎನ್. ರಂಗಸ್ವಾಮಿಗಳವರು ಭಾರತ ದರ್ಶನವು ನಡೆದುಬಂದ ಬಗೆಯನ್ನೂ–ಧ್ಯೇಯೋದ್ದೇಶಗಳನ್ನೂ ವಿವರಿಸಿ ಹೇಳಿದರು. ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್‌ನ ಸೂಪರಿಂಟೆಂಡೆಂಟ್ ಇಂಜಿನಿಯರ್ ಶ್ರೀ ಹೆಚ್. ಆರ್. ರಂಗನಾಥರಾಯರು ೧೮ನೆಯ ಸಂಪುಟವನ್ನು ಪ್ರಕಾಶನ ಗೊಳಿಸಿದರು. ಡಾ|| ಎಸ್.ಕೆ. ಸುಶೀಲಾಬಾಯಿಯವರು ಗದುಗಿನ ಭಾರತದಲ್ಲಿನ ಕರ್ಣಪರ್ವದ ಕೆಲವು ಕಥಾಭಾಗಗಳನ್ನು ಕರ್ಣಾನಂದ ಕರವಾಗಿ ವಾಚನಮಾಡಿದರು. ವಿದ್ವಾನ್ ಹೆಚ್. ಎಸ್. ವರದದೇಶಿಕಾ ಚಾರ್ಯರಂಗಪ್ರಿಯರು ಮೊದಲು ಸಂಸ್ಕೃತಭಾಷೆಯ ಸರ್ವಶ್ರೇಷ್ಠತೆಗೆ ಕಾರಣಗಳನ್ನು ವಿವರಿಸಿ ಹೇಳಿ, ಅನಂತರ ಮಹಾಭಾರತದ ಬಗೆಗೆ ಉದ್ದಾಮಭಾಷಣ ಮಾಡಿದರು. ಮುಖ್ಯ ಅತಿಥಿಗಳಾಗಿದ್ದ ಕೆನರಾ ಬ್ಯಾಂಕ್ ಮ್ಯಾನೇಜರ್ ಶ್ರೀ ಎ. ಎಂ. ಶೆಣವಿಯವರು ಗ್ರಾಹಕರಾಗಲು ಇಚ್ಛಿಸುವವರಿಗೆ ಬ್ಯಾಂಕಿನಿಂದ ಕೊಡುತ್ತಿರುವ ಸವಲತ್ತುಗಳ ಬಗೆಗೆ ವಿವರಿಸಿ ಹೇಳಿದರು. ವಂದನಾರ್ಪಣೆ ಮತ್ತು ಶಾಂತಿಪಾಠಗಳೊಡನೆ ಸಭೆಯು ಮುಕ್ತಾಯವಾಯಿತು.

ಕರ್ನಾಟಕದ ಎಲ್ಲ ಪ್ರೌಢಶಾಲೆಗಳಿಗೂ ಶ್ರೀಮನ್ಮಹಾಭಾರತದ ಸಂಪುಟಗಳನ್ನು ತೆಗೆದುಕೊಳ್ಳಬೇಕೆಂದು ಮಾಡಿದ್ದ ನಮ್ಮ ಪ್ರಾರ್ಥನೆಯು

ಫಲಕಾರಿಯಾಗಲಿಲ್ಲ. ಪ್ರಯತ್ನವನ್ನು ಮುಂದುವರಿಸುತ್ತಲೇ ಇದ್ದೇವೆ. ಪರಮಾತ್ಮನ ದಿವ್ಯಾನುಗ್ರಹದಿಂದಲೇ ಈ ಕಾರ್ಯವೂ ಆಗಬೇಕಾಗಿದೆ.

ಸಂಪಾದಕಮಂಡಲಿಯ ವಿದ್ವಾಂಸರು ಯಥಾಪೂರ್ವ ಅವಿಶ್ರಾಂತರಾಗಿ ದುಡಿಯುತ್ತಾ ಸಂಪಾದನಾಕಾರ್ಯವನ್ನು ಚೊಕ್ಕವಾಗಿ ನಿರ್ವಹಿಸಿಕೊಡು ತ್ತಿದ್ದಾರೆ. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಈ ಮಹಾಕಾರ್ಯವನ್ನು ಮುಗಿಸಬೇಕೆನ್ನುವ ಉತ್ಸಾಹದಿಂದಿರುತ್ತಾರೆ. ಇಂತಹ ಮಹನೀಯರ ಸಹಯೋಗದಿಂದ ಈ ಮಹಾಕಾರ್ಯವನ್ನು ಮಾಡಲು ಅನುವುಮಾಡಿಕೊಟ್ಟ ಪರಮಾತ್ಮನನ್ನು ಎಷ್ಟು ಹೊಗಳಿದರೂ ಅಲ್ಪವೇ ಆದೀತು. ಅವನ ದಯೆ, ಸತ್ಯಸಂಕಲ್ಪ, ಅನುಗ್ರಹ–ಇವುಗಳಿಂದಲೇ ಈ ಮಹಾಕಾರ್ಯವು ಸುಗಮ ವಾಗಿ ನಡೆಯುತ್ತಿದೆಯೆಂಬುದರಲ್ಲಿ ಸಂಶಯಲೇಶವೂ ಇರುವುದಿಲ್ಲ. ನಮ್ಮ ಸಂಪಾದಕಮಂಡಲಿಯ ವಿದ್ವಾಂಸರಿಗೆ ದಯಾಮಯನಾದ ಪರಮಾತ್ಮನು ಸುಖ-ಶಾಂತಿಗಳನ್ನೀಯಲೆಂದು ಸರ್ವಕಾಲದಲ್ಲಿಯೂ ಪ್ರಾರ್ಥಿಸುತ್ತೇವೆ.

ಎರಡನೆಯ ಸಂಪುಟದ ಪ್ರತಿಗಳು ಮುಗಿಯುತ್ತಾ ಬಂದಿದೆ. ನೂರು ಪ್ರತಿಗಳು ಮಾತ್ರವೇ ಉಳಿದಿವೆ. ಈ ವರ್ಷ ಎರಡನೆಯ ಸಂಪುಟದ ತೃತೀಯಮುದ್ರಣದ ಕಾರ್ಯಕ್ರಮವೂ ಇರುತ್ತದೆ. ಇದರ ಜೊತೆಗೆ 20, 21 ಮತ್ತು 22ನೆಯ ಸಂಪುಟಗಳನ್ನೂ ಮುಗಿಸಬೇಕೆಂಬ ಕಾರ್ಯಕ್ರಮವನ್ನು ಹಾಕಿಕೊಂಡಿರುತ್ತೇವೆ. ಅಂತರ್ಯಾಮಿಯು 'ಅಸ್ತು' ಎಂದರೆ ನಡೆದುಹೋಗುತ್ತದೆ.

ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ಡಾ|| ಎಸ್. ವಿ. ರಂಗಣ್ಣನವರು ಈ ಸಂಪುಟಕ್ಕೆ ಮುನ್ನುಡಿಯನ್ನು ಬರೆದುಕೊಟ್ಟಿರುತ್ತಾರೆ. ಅವರಿಗೆ ನಮ್ಮ ಅಭಿನಂದನೆಗಳು.

ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನೆರವು ನೀಡುತ್ತಿರುವ ಮಹಾಭಾರತದ ಎಲ್ಲ ಬಂಧುಗಳಿಗೂ ದಯಾಮಯನಾದ ಪರಮಾತ್ಮನು ಸಕಲವಿಧವಾದ ಇಷ್ಟಾರ್ಥಗಳನ್ನೂ ನೆರವೇರಿಸಿಕೊಡಲೆಂಬ ಸದಾಶಯಗಳೊಡನೆ ವಿರಮಿಸುತ್ತೇವೆ.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು । ಸಮಸ್ತಸನ್ಮಙ್ಗಲಾನಿ ಭವನ್ತು ।

-ಪ್ರಕಾಶಕರು.

# ಮುನ್ನುಡಿ

'ಇದೋ ಮಹಾಭಾರತ!' ಎಂಬ ಎರಡು ಮಾತೇ ಈ ಬೃಹತ್ ಭವ್ಯಕಾವ್ಯ (Epic)ಕ್ಕೆ ಅನುರೂಪವಾದ ಮುನ್ನುಡಿ. ಏತಕ್ಕೆಂದರೆ: ಅದರಲ್ಲಿ ಸಾಂದ್ರವಾಗಿ ತುಂಬಿಕೊಂಡಿರುವ ವಿಷಯ-ವಸ್ತು-ವ್ಯಕ್ತಿಗಳಲ್ಲಿ ಕಿಂಚಿದಲ್ಪಭಾಗವನ್ನು ವರ್ಣಿಸಬೇಕಾದರೂ ನೂರಾರು ಪುಟಗಳ ಒಂದು ಪುಸ್ತಕವೇ ಬೇಕಾಗುತ್ತದೆ. ಪಾಶ್ಚಾತ್ಯಕವಿಯೊಬ್ಬನನ್ನು ವಿಮರ್ಶಿಸುತ್ತ ಒಬ್ಬ ವಿದ್ವಾಂಸನು ಹೀಗೆ ಹೇಳಿದ: 'ಇಲ್ಲಿ ದೈವಿಕವಾದ ಸಮೃದ್ಧಿಯಿದೆ! (Here is God's Plenty!)' ಆ ನುಡಿಯು ನಮ್ಮ ಮಹಾಭಾರತಕ್ಕೆ ಇನ್ನೂ ಹೆಚ್ಚು ಯುಕ್ತವಾಗಿ ಅನ್ವಯಿಸುತ್ತದೆ–ಎಂದು ನನ್ನ ಭಾವನೆ. ಕಥೆ-ಉಪಕಥೆಗಳ ಸಮುದಾಯ, ಪುರುಷಶ್ರೇಷ್ಠರ ಸಂದೋಹ, ನಾನಾಬಗೆಯ ಮನುಷ್ಯರ ಸಂತೆ, ಬಗೆ-ಬಗೆಯ ಭಾವಮಿಶ್ರಣದ ಘಟನಾ ವಳಿಗಳ ಕೂಟ, ಹಲವು ದರ್ಶನಗಳ ವೈವಿಧ್ಯ, ಅನೇಕತತ್ತ್ವಗಳ ಭಂಡಾರ, ನೀತಿಸೂಕ್ತಿ-ಚತುರೋಕ್ತಿಗಳ ಸುರಿಮಳೆ, ಮಾನವನ ಅಂತರ್ಯದ ಸಕಲ ರಾಗಗಳ ಅಚ್ಚರಿ ಪ್ರದರ್ಶನ, ಹತ್ತೆಂಟು ವಿಸ್ಮಯದೃಶ್ಯಗಳ ಸಮಂಜಸ ವರ್ಣನೆಗಳು, ಇಹಬಾಳಿನ ಅಗಾಧಸಮಸ್ಯೆಗಳ ನಿರೂಪಣೆ ಮತ್ತು ಅವುಗಳಿಗೆ ಸೂಕ್ತ ಪರಿಹಾರ ಸೂಚನೆ–ಹೀಗೆ ಎಲ್ಲವನ್ನೂ ತನ್ನೊಳಗೆ ಅಳವಡಿಸಿಕೊಂಡಿ ರುವ 'ಮಹಾಭಾರತ'ಕ್ಕೆ ಸರಿಸಮನಾದ ಇನ್ನೊಂದು ಕಾವ್ಯವನ್ನು ಎಲ್ಲಿ ಕಾಣೋಣ? ಇಷ್ಟೇ ಕಾಲದಲ್ಲಿ ಇದನ್ನು ಓದಿ ಮುಗಿಸುತ್ತೇನೆಂದು ಯಾವ ಶ್ರದ್ಧಾಳು ಸಾಹಿತ್ಯಪ್ರೇಮಿಯೂ ಪ್ರತಿಜ್ಞೆಕೈಗೊಳ್ಳಲಾರ. ಅಷ್ಟೇಕೆ, ಓದಿ ಮುಗಿಸಿಬಿಡುವ ಮಾತೇ ಸಲ್ಲದು; ತಿರು-ತಿರುಗಿ ಓದಿ ಆನಂದಪುಳಕಿತನಾಗ ತಕ್ಕುದೇ ಹೊರತು ಓದಿ ಅತ್ತಕಡೆಗೆ ಇಟ್ಟುಬಿಡುವುದು ಅಸಾಧ್ಯ.

ಭವ್ಯಕಾವ್ಯಕ್ಕೆ ಆರು ಅಂಗಗಳೆಂದೂ ಅವುಗಳಲ್ಲಿ ಕಥಾವಸ್ತುವಿನ್ಯಾಸ (Plot) ಮತ್ತು ಪಾತ್ರವರ್ಗ (Character) ಎರಡೂ ಬಹಳ ಮುಖ್ಯವೆಂದೂ ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. ಕಥಾವಸ್ತು ಹಾಗಿರಲಿ. 'ಮಹಾಭಾರತ'ದ ಪಾತ್ರವರ್ಗವನ್ನು ಕುರಿತು ಕೆಲವು ವಾಕ್ಯಗಳನ್ನು ಆಡೋಣ. ಸಜ್ಜನರಾಗಲೀ–ದುರ್ಜನರಾಗಲೀ ಅವರೆಲ್ಲರೂ ಮಾನವಾತೀತ ಸತ್ತ್ವದ ಪ್ರಚಂಡರು; ಆದರ್ಶವ್ಯಕ್ತಿಗಳಾದ್ದರಿಂದ ನಮ್ಮ ಪ್ರಪಂಚದಲ್ಲಿ ನಡೆ ದಾಡುವವರಲ್ಲ ಹಾಗೂ ಮನುಷ್ಯಸಹಜವಾದ ಗುಣ-ಲಕ್ಷಣಗಳನ್ನು ಆಗಾಗ

ಪ್ರಕಟಿಸಿ ನಮ್ಮ ಸಹವರ್ತಿಗಳಾಗಿ ಸಹಾನುಭೂತಿ-ಸೌಹಾರ್ದಗಳನ್ನು ಸೆಳೆದುಕೊಳ್ಳುತ್ತಾರೆ. ಇವರು ನಮಗಿಂತ ಎಷ್ಟೋ ಎತ್ತರದವರೆಂಬುದನ್ನು ಮರೆತು ಇವರೂ ನಮ್ಮಂಥವರೇ ಎಂದು ಅವರೊಡನೆ ನಾವು ಸಹಭಾಗಿ ಗಳಾಗುತ್ತೇವೆ. ಹೀಗೆ ಭವ್ಯಕಾವ್ಯ ನಮ್ಮ ವಾಸ್ತವಿಕಜೀವನಕ್ಕೂ ಕೈಪಿಡಿಯಾಗುತ್ತದೆ.

ಧರ್ಮರಾಯ-ಪಾರ್ಥರ ಮಧ್ಯೆ ಏಳುವ ಘೋರವಿರಸವನ್ನು ಪರಿಶೀಲಿಸಿ **'ಕರ್ಣಭೂತಮಯಂ ಜಗತ್'** ಎಂಬ ಚಿಂತೆಯಿಂದ ಬಹುವಾಗಿ ನೊಂದಿರುವ, ಕರ್ಣನ ನಾರಾಚಗಳಿಂದ ತುಂಬ ಗಾಯಗೊಂಡಿರುವ ಧರ್ಮರಾಯನಿಗೆ ಕೃಷ್ಣಾರ್ಜುನರು ತನ್ನನ್ನು ನೋಡಲು ಬಂದಾಗ ಅವರಿಂದ ಕರ್ಣವಧೆ ಆಗಿದೆಯೆಂದೇ ನಂಬಿಕೆ. ಅರ್ಜುನ, ಕರ್ಣನನ್ನು ಎದುರಿಸಿಯೇ ಇಲ್ಲವೆಂಬ ಸಂಗತಿ ತಿಳಿದಾಗ ಅವನಿಗೆ ಶೋಕದ ಮೇಲೆ ದುರ್ಭರಕೋಪ, ಅದರಿಂದ ಅವನಲ್ಲಿ ತಾಳ್ಮೆಯ ನಾಶ, ವಿವೇಕದ ನಾಶ. ಅರ್ಜುನನನ್ನು, ಭೀಮಸೇನನನ್ನು ರಣರಂಗದಲ್ಲಿ ಬಿಟ್ಟು ಬಂದ ಹೇಡಿಯೆಂದು ಹಳಿಯುತ್ತಾನೆ. 'ನಿನ್ನ ಗಾಂಡೀವವನ್ನು ನಿನಗಿಂತ ಹೆಚ್ಚು ಪರಾಕ್ರಮಶಾಲಿಗೆ ಕೊಟ್ಟುಬಿಡು' ಎನ್ನುತ್ತಾನೆ. ಅರ್ಜುನನ 'ಉಪಾಂಶುವ್ರತ' ಅವನಿಗೆ ಗೊತ್ತಿತ್ತು; ಆದರೂ ಹುಚ್ಚು ಸಿಟ್ಟಿನಲ್ಲಿ ಆ ಮಾರಕವಚನವನ್ನು ಆಡಿಯೇ ಬಿಡುತ್ತಾನೆ. ಅರ್ಜುನ ಕತ್ತಿಯನ್ನು ಹಿರಿದು ಹೋಗುತ್ತಾನೆ ಅಣ್ಣನಾದರೂ ಈಗ ವಧ್ಯನೇ ಸರಿ ಎಂದು ತಿಳಿದುಕೊಂಡು. ಕೃಷ್ಣ ಮಧ್ಯೆ ಪ್ರವೇಶಿಸಿ ಅವನನ್ನು ತಡೆಯುತ್ತಾನೆ. ಆಮೇಲೆ ಧರ್ಮರಾಯನಿಗೆ ತಾನು ಸಾಯಬೇಕೆಂಬ ವಿಕಟಾಭಿಲಾಷೆ; ಅನಂತರ ಅರ್ಜುನನಿಗೂ ಪಶ್ಚಾತ್ತಾಪ; ಅದೇ ಅಭಿಲಾಷೆ. ಕೃಷ್ಣನು ಧರ್ಮ-ಅಧರ್ಮ, ಸತ್ಯ-ಸುಳ್ಳುಗಳ ಸೂಕ್ಷ್ಮತೆಯನ್ನು ವಿವರಿಸಿ ಇಬ್ಬರನ್ನೂ ಪುನಃ ಪ್ರೀತಿಯ ಅಣ್ಣ-ತಮ್ಮಂದಿರನ್ನಾಗಿ ಪರಿವರ್ತಿಸುತ್ತಾನೆ. ಕೃಷ್ಣನಿಲ್ಲದಿದ್ದರೆ ಪಾಂಡವರ ಗತಿ ಏನಾಗುತ್ತಿತ್ತೋ! ಇಲ್ಲಿ ಕವಿವರ್ಯನ ಕಾವ್ಯಕಲಾತಂತ್ರವನ್ನೂ ಬಗೆಯಿರಿ. ಭವ್ಯಕಾವ್ಯದಲ್ಲಿ ಸಾಮಾನ್ಯವಾಗಿ ಅನಿರೀಕ್ಷಿತ ವಿಸ್ಮಯ (Surprise) ಗಳು ಆಗಬೇಕು; ಅವು ಕೃತಕವಾಗಿ ಏರ್ಪಟ್ಟವಾಗಕೂಡದು; ಮನುಷ್ಯ ಸ್ವಭಾವಕ್ಕೆ ಅನುಗುಣವಾಗಿರಬೇಕು; ತರ್ಕಸಮ್ಮತವಾಗಿರಬೇಕು. ಸದಾ

ಧರ್ಮರಾಯನ ನೆಳಲಾಗಿದ್ದ ಪಾರ್ಥನಿಂದ ಇಂಥ ವರ್ತನೆ ಹೇಗಾಯ್ತು? ಮಹಾಶಪಥವನ್ನು ಅವನು ಹೇಗೆ ಉಲ್ಲಂಘಿಸಿಯಾನು? ಮಂಗಳಾಂತ್ಯದ ಈ ಕಿರುಗಂಭೀರನಾಟಕ ಕರ್ಣಪರ್ವದ ಒಂದು ಸುಂದರ ರಸಘಟ್ಟ.

ಇನ್ನೊಂದು ರೌದ್ರ-ರಮ್ಯರಸಘಟ್ಟವೆಂದರೆ ದುಃಶಾಸನನ ವಧೆಯ ಪ್ರಕರಣ. ಅಲ್ಲಿನ ಭೀಮಸೇನ ಒಂದು ದೃಷ್ಟಿಗೆ ರಾಕ್ಷಸನಂತೆ ತೋರಿ ಬಂದರೂ ಪೂರ್ಣದೃಷ್ಟಿಗೆ ಪ್ರಲಯಭೈರವನ ಪೃಥ್ವೀರೂಪ. ಭೀಷ್ಮ- ದ್ರೋಣಾದಿಗಳನ್ನು ಪ್ರಚ್ಛನ್ನಪಾಂಡವರೆಂದು ದೂಷಿಸುತ್ತಿದ್ದ ಕರ್ಣನೇ ಸೇನಾಪತಿಯಾಗಿದ್ದಾಗ ದುಃಶಾಸನನ ಕಗ್ಗೊಲೆಯಾಗುವಂತೆ ನಿಯೋಜಿಸಿದ ಕಾವ್ಯಕಲೆ ದಿಟವಾಗಿಯೂ ಶ್ಲಾಘನೆಗೆ ಮೀರಿದ್ದು. 'ಪಾಪಾಯ ಪರಪೀಡನಂ' ಪಾಪಗಳಲ್ಲಿ ಹಲವು ಕ್ಷಮ್ಯವಾದುವು; ಕೆಲವಾದರೋ ಅಕ್ಷಮ್ಯ.

ಪಾತ್ರಗಳಿಗೆ ಮಾನವತೆಯ ತಿಳಿಲೇಪವನ್ನು ಬಳಿಯುವುದರಲ್ಲಿ ವ್ಯಾಸರು ಎತ್ತಿದ ಕೈ. ಭೀಮ ಒಬ್ಬನೇ ಯುದ್ಧಮಾಡುತ್ತಾ ಕೃಷ್ಣಾರ್ಜುನ ರನ್ನು ಶಿಬಿರಕ್ಕೆ ಕಳಿಸುತ್ತಾನೆ. ಧರ್ಮರಾಯನ ಸಂತೈಕೆಗಾಗಿ ಕಾಳಗಗೈಯುತ್ತಾ ಅವನು ತಾನೊಬ್ಬನೇ ಶತ್ರುಗಳನ್ನೆಲ್ಲ ಮರ್ದಿಸುವುದಕ್ಕೆ ಸಮರ್ಥನೆಂದು ಭರವಸೆ ತಾಳಿದ್ದರೂ, ಹಾಗೆ ಘೋಷಿಸಿದರೂ, ದೇವತೆಗಳಿಗೆ ಅವನ ದ್ದೊಂದು ಪ್ರಾರ್ಥನೆಯು ಇತ್ತಂತೆ; 'ಅರ್ಜುನ ಬೇಗ ಯುದ್ಧಭೂಮಿಗೆ ಪುನಃ ಆಗಮಿಸಲಿ!' ಸಾರಥಿ ವಿಶೋಕ ಅರ್ಜುನ ಬರುತ್ತಿದ್ದಾನೆಂಬುದನ್ನು ರಿಪುಗಳ ದಿಕ್ಕೆಟ್ಟೋಟದಿಂದ ನಿರ್ಧರಿಸಿ ಭೀಮನಿಗೆ ಸಮಾಧಾನ ತರುತ್ತಾನೆ. ಧೂರ್ಜಟಿಸಮಾನನಾದ ಭೀಮಸೇನನೂ ಮನುಷ್ಯನೆ! ಕರ್ಣ, ಅರ್ಜುನನನ್ನು ಮೆಚ್ಚುತ್ತಾ ಹೀಗೆ ಹೇಳುತ್ತಾನೆ: 'ಅಸ್ವೇದಿನೌ ರಾಜಪುತ್ರಸ್ಯ ಹಸ್ತೌ' ಎಷ್ಟೊಂದು ಯಥಾವತ್ತಾದ ಲೋಕಸಹಜವಾದ ಚಿತ್ರ!

ಮೂಲದ ಕಥಾಸರಣಿಯನ್ನು ನೇರವಾಗಿ ಹಿಂಬಾಲಿಸುವುದಕ್ಕೂ ವ್ಯಕ್ತಿಗಳ ಚಿತ್ತವೃತ್ತಿ ಮತ್ತು ನಡವಳಿಕೆಗಳನ್ನು ಸುಲಭವಾಗಿ ಅರ್ಥಮಾಡಿ ಕೊಳ್ಳುವುದಕ್ಕೂ ಯಾವ ಭಾಷಾಂತರ ಸಹಾಯಮಾಡುತ್ತದೋ ಅದು ಸ್ವೀಕರಣೀಯ. ಜೊತೆಗೆ ಮೂಲದ ಶಬ್ದರಾಜಿ-ಅಲಂಕಾರ ಶೈಲಿ ಇತ್ಯಾದು ವನ್ನೂ ಕೊಂಚಮಟ್ಟಿಗೆ ಅನುಕರಿಸುವುದೂ ಒಳ್ಳೆಯದು. ಮಹಾಭಾರತ ದಂಥ ಉದ್ಗ್ರಂಥದ ತರ್ಜುಮೆಯಲ್ಲಿ ಸರಳತೆ-ಕ್ಲಿಷ್ಟತೆಗಳ ಮಿಶ್ರಣ

ಅನಿವಾರ್ಯ. ಭಾಷಾಂತರಕಾರರು ಆ ಕಷ್ಟದ ಕೆಲಸವನ್ನು ಶ್ಲಾಘ್ಯವಾಗಿ ನೆರವೇರಿಸಿದ್ದಾರೆಂದು ನನ್ನ ಅಭಿಮತ. ಅವರ ಕಾರ್ಯ ಪೂರ್ಣಗೊಂಡು ಅವರ ಯಶಸ್ಸು ವೆಗ್ಗಳವಾಗಲಿ!

ಮೈಸೂರು
ತಾ|| ೨೪-೧-೧೯೮೦ —ಎಸ್.ವಿ. ರಂಗಣ್ಣ

## ದ್ವಿತೀಯ ಮುದ್ರಣದ ಪ್ರಸ್ತಾವನೆ

ಭಗವಂತನ ದಯೆಯಿಂದ 19ನೆಯ ಸಂಪುಟದ ಪುನರ್ಮುದ್ರಣವು ಮುಗಿದಿರುತ್ತದೆ. ಈ ಸಂಪುಟವನ್ನು ನಮ್ಮ ಮುದ್ರಣಾಲಯದಲ್ಲೇ ಸಂಪೂರ್ಣವಾಗಿ ಛಾಪಿಸಬೇಕೆಂಬುದೇ ಭಗವಂತನ ಸಂಕಲ್ಪವಾಗಿತ್ತು. ಮೈಸೂರು ಮುದ್ರಣಾಲಯದವರಿಗೆ ಕೊಟ್ಟಿದ್ದ ಹಲವಾರು ಬ್ಲಾಕ್‌ಗಳು ಹಿಂದಿರುಗಿ ಬಾರದೆ ಹೊಸದಾಗಿ ಕೆಲವನ್ನು ಮಾಡಿಸಬೇಕಾಯಿತು. ನಷ್ಟದ ಮೇಲೆ ನಷ್ಟ. ಅನುಭವಿಸಬೇಕಾಗಿದ್ದು ಅನಿವಾರ್ಯವಾಗಿತ್ತೆಂದು ತೋರುತ್ತದೆ. ಗ್ರಾಹಕರಿಗೆ ಸಾಧ್ಯವಾದಷ್ಟು ಬೇಗ ಸಂಪುಟಗಳನ್ನು ಒದಗಿಸಬೇಕೆನ್ನುವ ಒಳ್ಳೆಯ ಆಶಯದಿಂದಲೇ ಮೈಸೂರಿನ ಮುದ್ರಣಾಲಯಕ್ಕೆ ಕೆಲವು ಸಂಪುಟಗಳನ್ನು ಮುದ್ರಿಸಲು ಕೊಟ್ಟಿದ್ದೆವು. ಆದರೆ ದುರದೃಷ್ಟವಶಾತ್ ಅವರ ಅನೀತಿಯಿಂದಾಗಿ ಸುಮಾರು ನಲವತ್ತು ಸಾವಿರ ರೂ.ಗಳಷ್ಟು ನಷ್ಟವನ್ನು ಅನುಭವಿಸಬೇಕಾಗಿ ಬಂದಿದೆ. ಹಣವನ್ನು ಪಡೆದುಕೊಳ್ಳಲು ಪ್ರಯತ್ನಿಸಲಾಗುತ್ತಿದೆ. ಭಗವಂತನ ದಯೆಯಿಂದ ನಮ್ಮ ಪ್ರಯತ್ನವು ಸಫಲವಾಗಬೇಕಾಗಿದೆ.

19ನೆಯ ಸಂಪುಟವನ್ನು ಪೂರ್ಣವಾಗಿ ನಮ್ಮ ಮುದ್ರಣಾಲಯದಲ್ಲಿಯೇ ಮುಗಿಸಬೇಕಾಗಿ ಬಂದುದರಿಂದ ರಾಮಾಯಣದ 2ನೆಯ ಸಂಪುಟದ ಪ್ರಕಾಶನವು ಸ್ವಲ್ಪ ಮುಂದಕ್ಕೆ ಹೋಗಿದೆ. ಈ ಸಂಪುಟವು ಗ್ರಾಹಕರ ಕೈ ಸೇರುವ ವೇಳೆಗೆ ರಾಮಾಯಣದ 2ನೆಯ ಸಂಪುಟದ ಮುದ್ರಣವು ಅರ್ಧಕ್ಕಿಂತಲೂ ಹೆಚ್ಚು ಭಾಗ ಮುಗಿದಿರುತ್ತದೆ. ಮೊದಲಿನ ಆಶಯದಂತೆ ವಿಜಯದಶಮಿಯ ದಿನ ರಾಮಾಯಣದ 2ನೆಯ ಸಂಪುಟವನ್ನು ಪ್ರಕಾಶನಗೊಳಿಸುವ ಆಶಯವಿದ್ದಿತು. ಅಕ್ಟೋಬರ್ ಕಡೆಯ ವೇಳೆಗೆ ಅಥವಾ ದೀಪಾ

ವಳಿಯ ವೇಳೆಗಾದರೂ 2ನೆಯ ಸಂಪುಟವನ್ನು ಪ್ರಕಾಶನಗೊಳಿಸಲು ಭಗವತ್ಕೃಪೆಯಿಂದ ಸಾಧ್ಯವಾಗುವುದೆಂದು ಭಾವಿಸಿದ್ದೇವೆ.

ಈ ಸಂಪುಟದ ತಪ್ಪು-ಒಪ್ಪುಗಳನ್ನು ಸಂಪಾದಕಮಂಡಲಿಯವರು ದಯಮಾಡಿ ನೋಡಿಕೊಟ್ಟಿರುತ್ತಾರೆ. ಅವರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು. ಮಹಾಭಾರತದ ಗ್ರಾಹಕರೆಲ್ಲರೂ ರಾಮಾಯಣಕ್ಕೂ ಗ್ರಾಹಕರಾಗಬೇಕೆಂದೂ, ನಮ್ಮ ನಿಮ್ಮ ಸಂಬಂಧವು ಇಲ್ಲಿಗೇ ನಿಲ್ಲಬಾರದೆಂದೂ ನಮ್ಮ ಪ್ರಿಯಗ್ರಾಹಕರನ್ನು ಪುನಃ ಪುನಃ ಪ್ರಾರ್ಥಿಸಿಕೊಳ್ಳುತ್ತೇವೆ.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು । ಸಮಸ್ತಸನ್ಮಙ್ಗಲಾನಿಭವನ್ತು.

-ಪ್ರಕಾಶಕರು.

## ತೃತೀಯ ಮುದ್ರಣದ ಪ್ರಸ್ತಾವನೆ

ಪರಮಕಾರುಣಿಕನಾದ ಭಗವಂತನ ದಯೆಯಿಂದ 19ನೆಯ ಸಂಪುಟದ ಮೂರನೆಯ ಮುದ್ರಣವು ಮುಗಿದಿದೆ. ಆದರೆ ಮಹಾಭಾರತದಲ್ಲಿ ಈಗ 21 ಸಂಪುಟಗಳು ಮಾತ್ರ ಸಿಕ್ಕುತ್ತವೆ. ಒಂದು ಸಂಪುಟ ಪುನರ್ಮುದ್ರಣವಾಗುವ ವೇಳೆಗೆ 3 ಸಂಪುಟಗಳು ಮುಗಿದು ಹೋಗಿರುತ್ತವೆ. ಮುಂದೆಯೂ ಹೀಗಾಗುವುದು ಅನಿವಾರ್ಯವಾಗಿ ಕಾಣು ತ್ತಿದೆ. ಈ ಹಿಂದೆ ನಾವು ಪುನರ್ಮುದ್ರಣದಲ್ಲಿ ಐದು ಸಾವಿರ ಪ್ರತಿಗಳನ್ನು ಛಾಪಿಸುತ್ತಿದ್ದೆವು. ಕಾಗದದ ಬೆಲೆ ಅಧಿಕವಾಗಲಾಗಿ ಐದು ಸಾವಿರ ಪ್ರತಿಗಳಿಗೆ ಸಾಕಾಗುವಷ್ಟು ಕಾಗದಕ್ಕೆ ಕೊಡಬೇಕಾಗಿದ್ದ ಹಣವನ್ನು 3 ಸಾವಿರ ಪ್ರತಿಗಳಿಗೆ ಸಾಕಾಗುವಷ್ಟು ಕಾಗದಕ್ಕೇ ಕೊಡಬೇಕಾಗಿ ಬಂದಿತು. 3 ಸಾವಿರ ಪ್ರತಿಗಳು ಬಹಳ ಬೇಗ ಮುಗಿದುಹೋಗುತ್ತವೆ. ಸುಧಾರಣೆಯ ಮಾರ್ಗ ತಿಳಿಯದಾಗಿದೆ. ಭಗವಂತನೇ ತೋರಿಸಿಕೊಡಬೇಕು. ಕರ್ತವ್ಯವನ್ನು ನಿರ್ವಹಿಸುತ್ತಿದ್ದೇವೆ. ಪರಮಾತ್ಮನ ಕೃಪೆ ಗ್ರಾಹಕರ ಸಹಕಾರಗಳಿಂದ ಪುನರ್ಮುದ್ರಣದ ಕಾರ್ಯವನ್ನು ಮುಂದುವರಿಸುತ್ತಿದ್ದೇವೆ. ಅನಿವಾರ್ಯ ಕಾರಣಗಳಿಂದ ಸ್ವಲ್ಪ ಸಾವಕಾಶವಾಗುವುದಕ್ಕೆ ಕ್ಷಮೆಯಿರಲಿ. ಹಿಂದಿನಂತೆಯೇ ಸಂಪಾದಕಮಂಡಲಿಯ ವಿದ್ವಾಂಸರು ಈ ಮುದ್ರಣದ ತಪ್ಪು- ಒಪ್ಪುಗಳನ್ನು ನೋಡಿಕೊಟ್ಟಿರುತ್ತಾರೆ. ಅವರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

—ಪ್ರಕಾಶಕರು.

# ಮಹಾಭಾರತ-ಕರ್ಣಪರ್ವ-ಹತ್ತೊಂಬತ್ತನೆಯ ಸಂಪುಟದ ವಿಷಯಾನುಕ್ರಮಣಿಕೆ

ಶ್ರೀಮಹಾಗಣಪತಯೇ ನಮಃ    ಶ್ರೀಮಹಾಸರಸ್ವತ್ಯೈ ನಮಃ    ಶ್ರೀಸದ್ಗುರವೇ ನಮಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಮಹಾಭಾರತ–ಕರ್ಣಪರ್ವ
# ಹತ್ತೊಂಬತ್ತನೆಯ ಸಂಪುಟ

೫೯ನೆಯ ಅಧ್ಯಾಯ    ಕರ್ಣಪರ್ವ (ಮುಂದುವರಿದಿದೆ.)

## ಧೃಷ್ಟದ್ಯುಮ್ನ-ಕರ್ಣರ ಯುದ್ಧ: ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಆಕ್ರಮಿಸಿದುದು: ಅರ್ಜುನನು ಧೃಷ್ಟದ್ಯುಮ್ನನನ್ನು ರಕ್ಷಿಸಿದುದು: ಅಶ್ವತ್ಥಾಮನ ಪರಾಜಯ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

**ತತಃ ಪುನಃ ಸಮಾಜಗ್ಮುರಭೀತಾಃ ಕುರುಸೃಞ್ಜಯಾಃ ।**
**ಯುಧಿಷ್ಠಿರಮುಖಾಃ ಪಾರ್ಥಾಃ ಸೂತಪುತ್ರಮುಖಾ ವಯಮ್ ॥**

"ಮಹಾರಾಜ! ಅನಂತರ ಕುರು-ಸೃಂಜಯಯೋಧರು ನಿರ್ಭೀತರಾಗಿ ಪುನಃ ಯುದ್ಧದಲ್ಲಿ ತೊಡಗಿದರು. ಪಾರ್ಥರು ಯುಧಿಷ್ಠಿರನನ್ನು ಮುಂದೆ ಮಾಡಿಕೊಂಡು ಯುದ್ಧಮಾಡುತ್ತಿದ್ದರು. ನಾವು ಸೂತಪುತ್ರನನ್ನು ಮುಂದೆಮಾಡಿಕೊಂಡು ಯುದ್ಧಮಾಡುತ್ತಿದ್ದೆವು. ಬಳಿಕ ಕರ್ಣನಿಗೂ ಮತ್ತು ಪಾಂಡವರಿಗೂ ಯಮನ ರಾಷ್ಟ್ರದ ಜನಸಂಖ್ಯೆಯನ್ನು ಹೆಚ್ಚಿಸುವ ಭಯಂಕರವಾದ ಮತ್ತು ರೋಮಾಂಚಕರವಾದ ಯುದ್ಧವು ಪ್ರಾರಂಭ ವಾಯಿತು. ವೀರರ ರಕ್ತವು ನೀರಿನಂತೆಯೇ ಹರಿದುಹೋಗುತ್ತಿದ್ದ ಆ ಭಯಂಕರಸಂಗ್ರಾಮವು ಪ್ರಾರಂಭವಾಗಲಾಗಿ, ಸಂಶಪ್ತಕಯೋಧರು ಅಲ್ಪಾ ವಶಿಷ್ಟರಾಗಲಾಗಿ, ಧೃಷ್ಟದ್ಯುಮ್ನನು ಸರ್ವರಾಜರೊಡನೆ ಕರ್ಣನ

ಮೇಲೆಯೇ ದಾಳಿನಡೆಸಿದನು. ಮಹಾರಥರಾದ ಪಾಂಡವರೂ ಧೃಷ್ಟದ್ಯುಮ್ನನನ್ನೇ ಅನುಸರಿಸಿಹೋದರು. ವಿಜಯವನ್ನು ಗಳಿಸಬೇಕೆನ್ನುವ ಆಕಾಂಕ್ಷೆಯನ್ನಿಟ್ಟುಕೊಂಡು ತನ್ನೊಡನೆ ಯುದ್ಧಮಾಡಲು ಬರುತ್ತಿದ್ದ, ಪ್ರಹೃಷ್ಟರಾಗಿದ್ದ ಆ ಎಲ್ಲ ವೀರರನ್ನೂ–ನೀರಿನ ಪ್ರವಾಹಗಳನ್ನು ಪರ್ವತವೊಂದೇ ತಡೆದು ನಿಲ್ಲಿಸುವಂತೆ–ಕರ್ಣನೊಬ್ಬನೇ ತಡೆದು ನಿಲ್ಲಿಸಿದನು. ನೀರಿನ ಪ್ರವಾಹಗಳು ಪರ್ವತದ ಸಮೀಪಕ್ಕೆ ಹೋಗಿ (ಕೊರೆದುಕೊಂಡಾಗಲೀ–ಕೊಚ್ಚಿಕೊಂಡಾಗಲೀ ಹೋಗಲು ಸಾಧ್ಯವಾಗದೇ) ಹತ್ತಾರು ಕವಲುಗಳಾಗಿ ಒಡೆದು ಎಲ್ಲ ದಿಕ್ಕುಗಳಿಗೂ ಹರಿದುಹೋಗುವಂತೆ–ಕರ್ಣನ ಬಳಿಗೆ ಹೋದ ಮಹಾರಥರು ಅವನ ಎದುರಿನಲ್ಲಿ ನಿಲ್ಲಲಾಗದೆ ಸ್ವಲ್ಪಹೊತ್ತಿನಲ್ಲಿಯೇ ಚದುರಿಹೋದರು. (ಆದರೆ ಧೃಷ್ಟದ್ಯುಮ್ನನು ಮಾತ್ರ ಕರ್ಣನ ಎದುರಿನಲ್ಲಿ ಸುಸ್ಥಿರನಾಗಿ ನಿಂತಿದ್ದನು.) ಅವರಿಬ್ಬರಿಗೂ ರೋಮಾಂಚಕರವಾದ ಯುದ್ಧವಾಗತೊಡಗಿತು. ಧೃಷ್ಟದ್ಯುಮ್ನನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ರಾಧೇಯನನ್ನು ಪ್ರಹರಿಸಿ ನಿಲ್ಲು-ನಿಲ್ಲೆಂದು ಕೂಗುತ್ತಿದ್ದನು. ಮಹಾರಥನಾದ, ಕ್ರುದ್ಧನಾದ ಕರ್ಣನೂ ವಿಜಯವೆಂಬ ಶ್ರೇಷ್ಠವಾದ ಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಓಲಾಡಿಸುತ್ತಾ, ಧೃಷ್ಟದ್ಯುಮ್ನನು ಪ್ರಹರಿಸಿದ ಸರ್ಪೋಪಮವಾದ ಬಾಣಗಳನ್ನೂ, ಧನುಸ್ಸನ್ನೂ ಕತ್ತರಿಸಿ, ಒಂಬತ್ತು ಬಾಣಗಳಿಂದ ಪಾರ್ಷತನನ್ನೂ ಪ್ರಹರಿಸಿದನು. ಕರ್ಣನು ಬಿಟ್ಟ ಆ ಬಾಣಗಳು ಮಹಾತ್ಮನಾದ ಧೃಷ್ಟದ್ಯುಮ್ನನ ಸುವರ್ಣಮಯವಾದ ಕವಚವನ್ನು ಭೇದಿಸಿ ರಕ್ತದಿಂದ ಲೇಪಿಸಲ್ಪಟ್ಟುವುಗಳಾಗಿ ಇಂದ್ರಗೋಪಕ್ರಿಮಿಗಳಂತೆ ಪ್ರಕಾಶಿಸಿದುವು.

ಮಹಾರಥನಾದ ಧೃಷ್ಟದ್ಯುಮ್ನನು ಕತ್ತರಿಸಲ್ಪಟ್ಟ ಧನುಸ್ಸನ್ನೆಸೆದು ಮತ್ತೊಂದು ಧನುಸ್ಸನ್ನೆತ್ತಿಕೊಂಡು, ಸರ್ಪೋಪಮವಾದ ಬಾಣಗಳನ್ನು ಬತ್ತಳಿಕೆಯಿಂದ ತೆಗೆದು, ಬಗ್ಗಿದ ಗಿಣ್ಣುಗಳಿದ್ದ ಎಪ್ಪತ್ತು ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು. ಅದೇ ರೀತಿಯಲ್ಲಿ ಕರ್ಣನೂ ಶತ್ರುತಾಪನನಾದ ಧೃಷ್ಟದ್ಯುಮ್ನನನ್ನು ಸರ್ಪಸದೃಶವಾದ ಬಾಣಗಳಿಂದ ಮುಚ್ಚಿದನು. ಅದಕ್ಕೆ ಪ್ರತಿಯಾಗಿ ದ್ರೋಣರ ಶತ್ರುವಾದ ಪಾರ್ಷತನು ಕರ್ಣನನ್ನು ನಿಶಿತವಾದ ಬಾಣಗಳಿಂದ ಮತ್ತೆ ಪ್ರಹರಿಸಿದನು. ಬಳಿಕ ಕ್ರುದ್ಧನಾದ ಕರ್ಣನು ಸುವರ್ಣಭೂಷಿತವಾಗಿದ್ದ, ಎರಡನೆಯ ಯಮದಂಡದಂತೆಯೇ ಇದ್ದ ಬಾಣ

ವನ್ನು ಪಾರ್ಷತನ ಮೇಲೆ ಪ್ರಯೋಗಿಸಿದನು. ಬಹಳ ರಭಸದಿಂದ ಪಾರ್ಷತನ ಮೇಲೆ ಬೀಳಲು ಬರುತ್ತಿದ್ದ ಭಯಂಕರರೂಪವನ್ನು ತಳೆದಿದ್ದ ಆ ಬಾಣವನ್ನು ಸಿದ್ಧಹಸ್ತನೋಪಾದಿಯಲ್ಲಿ ಸಾತ್ಯಕಿಯು ನೂರು ಭಾಗಗಳಾಗಿ ಕತ್ತರಿಸಿಬಿಟ್ಟನು. ತಾನು ಬಿಟ್ಟ ಘೋರವಾದ ಬಾಣವನ್ನು ಅನೇಕಬಾಣಗಳಿಂದ ಸಾತ್ಯಕಿಯು ಕತ್ತರಿಸಿದುದನ್ನು ಕಂಡು ಕರ್ಣನು ಸಾತ್ಯಕಿಯನ್ನು ಬಾಣಗಳ ವರ್ಷದಿಂದ ಎಲ್ಲ ಕಡೆಗಳಿಂದಲೂ ತಡೆದನು. ಬಳಿಕ ಏಳು ನಾರಾಚಗಳಿಂದ ಅವನು ಸಾತ್ಯಕಿಯನ್ನೂ ಬಹಳವಾಗಿ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಸಾತ್ಯಕಿಯೂ ಹೇಮಭೂಷಿತವಾದ ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು.

ಮಹಾರಾಜ! ಬಳಿಕ ಕಣ್ಣುಗಳಿಂದ ನೋಡಲೂ ಮತ್ತು ಕಿವಿಗಳಿಂದ ಕೇಳಲೂ ಭಯಾವಹವಾದ ಯುದ್ಧವು ಪ್ರಾರಂಭವಾಯಿತು. ಆ ಮಹಾಯುದ್ಧವು ಘೋರವೂ, ವಿಚಿತ್ರವೂ ಮತ್ತು ಎಲ್ಲ ರೀತಿಗಳಿಂದಲೂ ಪ್ರೇಕ್ಷಣೀಯವೂ ಆಗಿದ್ದಿತು. ಕರ್ಣ-ಶೈನೇಯರ ಸಾಹಸಕರ್ಮವನ್ನು ಕಂಡು ಯುದ್ಧವನ್ನು ನೋಡುತ್ತಿದ್ದ ಎಲ್ಲ ಪ್ರಾಣಿಗಳ ರೋಮಕೋಟಿಗಳೂ ನಿಮಿರಿ ನಿಂತುವು. ಆ ಮಧ್ಯದಲ್ಲಿ ದ್ರೌಣಿಯು ಶತ್ರುದಮನನಾದ, ಶತ್ರುಗಳ ವೀರ್ಯ ಮತ್ತು ಪ್ರಾಣಗಳ ನಾಶಕನಾದ, ಮಹಾಬಲಿಷ್ಠನಾದ ಧೃಷ್ಟದ್ಯುಮ್ನನನ್ನು ಆಕ್ರಮಿಸಿದನು. ಪರಪುರಂಜಯನಾದ ಕ್ರುದ್ಧನಾಗಿದ್ದ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಸಂಬೋಧಿಸಿ ಹೇಳಿದನು:

**ತಿಷ್ಠ ತಿಷ್ಠಾದ್ಯ ಬ್ರಹ್ಮಘ್ನ ನ ಮೇ ಜೀವನ್ವಿಮೋಕ್ಷ್ಯಸೇ ॥೨೧॥**

“ಬ್ರಾಹ್ಮಣಹಂತಕನೇ! ನಿಲ್ಲು-ನಿಲ್ಲು. ಇಂದು ನೀನು ಜೀವಸಹಿತನಾಗಿ ನನ್ನಿಂದ ತಪ್ಪಿಸಿಕೊಂಡು ಹೋಗಲಾರೆ.”

ಹೀಗೆ ಹೇಳುತ್ತಿದ್ದ, ಶೀಘ್ರವಾಗಿ ಆದಾನ-ಸಂಧಾನಾದಿಗಳನ್ನು ಮಾಡುವ, ಪ್ರಯತ್ನಶೀಲನಾದ, ಮಹಾರಥಿಯಾದ ಅಶ್ವತ್ಥಾಮನು ವಿಜಯ ಗಳಿಸಲು ಬಹಳವಾಗಿ ಪ್ರಯತ್ನಿಸುತ್ತಿದ್ದ ವೀರನಾದ ಧೃಷ್ಟದ್ಯುಮ್ನನನ್ನು ಅತ್ಯಂತನಿಶಿತವಾದ ಘೋರರೂಪವಾದ ಬಾಣಗಳಿಂದ ಪ್ರಹರಿಸಿದನು. ಯಾವ ರೀತಿಯಲ್ಲಿ ದ್ರೋಣರು ಸಮರಾಂಗಣದಲ್ಲಿ ಧೃಷ್ಟದ್ಯುಮ್ನನನ್ನು ಕಂಡು ಮನಸ್ಸಿನಲ್ಲಿ ಇವನೇ ತಮ್ಮ ಮೃತ್ಯುವೆಂದು ಬಗೆದು ಖಿನ್ನಮನಸ್ಕ

ರಾಗುತ್ತಿದ್ದರೋ–ಅದೇ ರೀತಿಯಲ್ಲಿ ಶತ್ರುವೀರಹಂತಕನಾದ ಧೃಷ್ಟದ್ಯುಮ್ನನು ರಣರಂಗದಲ್ಲಿ ಅಶ್ವತ್ಥಾಮನನ್ನು ನೋಡಿದೊಡನೆಯೇ ಖಿನ್ನ ಮನಸ್ಕನಾಗುತ್ತಿದ್ದನು ಮತ್ತು ಅವನನ್ನೇ ತನ್ನ ಮೃತ್ಯುವೆಂದೂ ಭಾವಿಸುತ್ತಿದ್ದನು. ಆದರೆ ಧೃಷ್ಟದ್ಯುಮ್ನನಿಗೆ ತನ್ನ ಮರಣದ ರಹಸ್ಯವು ತಿಳಿದಿದ್ದಿತು. ಯುದ್ಧಸಮಯದಲ್ಲಿ ಶಸ್ತ್ರಾಘಾತದಿಂದ ತಾನು ವಧಿಸಲ್ಪಡತಕ್ಕವನಲ್ಲ ವೆಂಬುದನ್ನು ಅವನು ಚೆನ್ನಾಗಿ ತಿಳಿದಿದ್ದನು. ಆದುದರಿಂದಲೇ ಪಾರ್ಷತನು–ಪ್ರಳಯಕಾಲದಲ್ಲಿ ಅಂತಕನು ಅಂತಕನ ಮೇಲೆಯೇ ಕಾಳಗಕ್ಕೆ ಹೋಗುವಂತೆ–ಅತ್ಯಂತತ್ವರೆಯಿಂದ ದ್ರೌಣಿಯನ್ನು ಎದುರಿಸಲು ಮುಂದೆ ಹೋದನು. ವೀರನಾದ ಅಶ್ವತ್ಥಾಮನು ತನ್ನ ಮುಂದೆ ಪಾರ್ಷತನು ಬಂದು ನಿಂತುದುದನ್ನು ಕಂಡು ಕೋಪದಿಂದ ನಿಟ್ಟುಸಿರು ಬಿಡುತ್ತಾ ಪಾರ್ಷತನನ್ನು ಆಕ್ರಮಿಸಿದನು. ಒಬ್ಬರು ಮತ್ತೊಬ್ಬರನ್ನು ನೋಡಿದೊಡನೆಯೇ ಇಬ್ಬರೂ ಕೋಪದಿಂದ ಕಿಡಿ-ಕಿಡಿಯಾದರು. ಪ್ರತಾಪವಂತನಾದ ಅಶ್ವತ್ಥಾಮನು ತನ್ನ ಹತ್ತಿರದಲ್ಲಿಯೇ ಇದ್ದ ಧೃಷ್ಟದ್ಯುಮ್ನನನ್ನು ಕುರಿತು ಅವಸರದಿಂದ ಹೇಳಿದನು:

"ಪಾಂಚಾಲಕುಲಕಳಂಕನೇ! ನಿನ್ನನ್ನು ನಾನಿಂದು ಮೃತ್ಯುವಿಗೆ ಒಪ್ಪಿಸಿಬಿಡುತ್ತೇನೆ. ಶಸ್ತ್ರಸಂನ್ಯಾಸಮಾಡಿದ್ದ ದ್ರೋಣರನ್ನು ಸಂಹರಿಸಿ ನೀನು ಮಹಾಪಾಪಕರ್ಮವನ್ನೇ ಮಾಡಿರುವೆ. ತಿಳಿಯದವನನ್ನು (ಮೂರ್ಖನನ್ನು) ಅವನು ಮಾಡಿದ ಕೆಟ್ಟಕೆಲಸವೇ ತೊಂದರೆಗೆ ಈಡುಮಾಡುವಂತೆ–ನೀನು ಮಾಡಿರುವ ಆ ಪಾಪಕರ್ಮವೇ ಇಂದು ನಿನಗೆ ಸಂತಾಪವನ್ನುಂಟು ಮಾಡುತ್ತದೆ. ಮೂಢ! ನಮ್ಮಿಬ್ಬರ ಯುದ್ಧದ ಮಧ್ಯದಲ್ಲಿ ಪಾರ್ಥನು ರಕ್ಷಣೆಗೆ ಬಾರದಿದ್ದರೆ ಅಥವಾ ನೀನು ಪಲಾಯನಮಾಡದೇ ನನ್ನೊಡನೆಯೇ ಯುದ್ಧವನ್ನು ಮುಂದುವರಿಸಿದ್ದೇ ಆದರೆ ನಿನ್ನನ್ನಿಂದು ಸತ್ಯವಾಗಿಯೂ ಸಂಹರಿಸುತ್ತೇನೆ."

ಅಶ್ವತ್ಥಾಮನು ಹೇಳಿದ ಆ ಮಾತಿಗೆ ಉತ್ತರವಾಗಿ ಪ್ರತಾಪವಂತನಾದ ಧೃಷ್ಟದ್ಯುಮ್ನನು ಹೇಳಿದನು:

"ಎಲವೋ ಬ್ರಾಹ್ಮಣ! ನಿನಗೆ ಸರಿಯಾದ ಉತ್ತರವನ್ನು ನನ್ನ ಈ ಕತ್ತಿಯೇ ಕೊಡುತ್ತದೆ. ವಿಜಯಗಳಿಸಲು ಪ್ರಯತ್ನಿಸುತ್ತಿದ್ದ ನಿನ್ನ

ತಂದೆಗೂ ಇದೇ ಕತ್ತಿಯೇ ಸರಿಯಾಗಿ ಉತ್ತರಿಸಿದ್ದಿತು. ನಾನು ಈ ಹಿಂದೆ ಹೆಸರಿಗೆ ಮಾತ್ರವೇ ಬ್ರಾಹ್ಮಣನಾಗಿದ್ದ ದ್ರೋಣನನ್ನೇ ಸಂಹರಿಸಿರುವಾಗ ಈಗ ನಿನ್ನನ್ನೂ ನಾನು ನನ್ನ ಪರಾಕ್ರಮದಿಂದ ಏಕೆ ಸಂಹರಿಸದಿರುವೆನು?"

ಮಹಾರಾಜ! ಪಾಂಡವರ ಸೇನಾಪತಿಯಾದ, ಅಸಹನಶೀಲನಾದ ಪಾರ್ಷತನು ಹೀಗೆ ಹೇಳಿ ನಿಶಿತವಾಗಿದ್ದ ಬಾಣದಿಂದ ಅಶ್ವತ್ಥಾಮನನ್ನು ಅತಿಯಾಗಿ ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ ಅಶ್ವತ್ಥಾಮನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ, ಧೃಷ್ಟದ್ಯುಮ್ನನಿಗೆ ಯುದ್ಧದಲ್ಲಿ ಯಾವ ದಿಕ್ಕುಗಳೂ ತಿಳಿಯದಂತೆ, ಎಲ್ಲ ದಿಕ್ಕುಗಳನ್ನೂ ಸಂಪೂರ್ಣವಾಗಿ ಮುಚ್ಚಿದನು. ಆಗ ಅಂತರಿಕ್ಷವಾಗಲೀ, ದಿಕ್ಕುಗಳಾಗಲೀ, ಸುತ್ತಲೂ ಇದ್ದ ಯೋಧರಾಗಲೀ ಕಾಣಿಸುತ್ತಲೇ ಇರಲಿಲ್ಲ. ಸಾವಿರಾರು ಯೋಧರೂ ಅಶ್ವತ್ಥಾಮನು ಬಿಟ್ಟ ಬಾಣಗಳಿಂದ ಮುಚ್ಚಿಹೋಗಿದ್ದರು. ಅದೇ ರೀತಿ ಯಲ್ಲಿ ಧೃಷ್ಟದ್ಯುಮ್ನನೂ ಸಹ ಸೂತಪುತ್ರನಾದ ಕರ್ಣನ ಎದುರಿನಲ್ಲಿಯೇ ಆಹವಶೋಭಿಯಾದ ಅಶ್ವತ್ಥಾಮನನ್ನು ಬಾಣಗಳಿಂದ ಮುಚ್ಚಿದನು. ಎಲ್ಲ ಕಡೆಗಳಿಂದಲೂ ಪ್ರೇಕ್ಷಣೀಯನಾಗಿದ್ದ (ಎಲ್ಲರ ಗಮನವನ್ನೂ ಸೆಳೆದಿದ್ದ) ಕರ್ಣನೊಬ್ಬನೇ ಪಾಂಡವರಿಂದ ಕೂಡಿದ ಪಾಂಚಾಲರನ್ನೂ, ದ್ರೌಪದಿಯ ಮಕ್ಕಳನ್ನೂ, ಯುಧಾಮನ್ಯುವನ್ನೂ, ಮಹಾರಥನಾದ ಸಾತ್ಯಕಿಯನ್ನೂ ತಡೆದು ಅವರೆಲ್ಲರೊಡನೆ ಯುದ್ಧಮಾಡುತ್ತಿದ್ದನು. ಇತ್ತಲಾಗಿ ಧೃಷ್ಟದ್ಯುಮ್ನನು ಅಶ್ವತ್ಥಾಮನ ಧನುಸ್ಸನ್ನು ಕತ್ತರಿಸಿದನು. ವೇಗವಂತನಾದ ಅಶ್ವತ್ಥಾಮನು ಪಾರ್ಷತನಿಂದ ಕತ್ತರಿಸಲ್ಪಟ್ಟ ಆ ಧನುಸ್ಸನ್ನೆಸೆದು ಮರುಕ್ಷಣದಲ್ಲಿಯೇ ಮತ್ತೊಂದು ಧನುಸ್ಸನ್ನೆತ್ತಿಕೊಂಡು, ಸರ್ಪೋಪಮವಾಗಿದ್ದ ಬಾಣಗಳನ್ನು ಬತ್ತಳಿಕೆಯಿಂದ ತೆಗೆದು, ಸುಘೋರವಾದ ಆ ಯುದ್ಧದಲ್ಲಿ ನಿಶಿತವಾದ ಬಾಣಗಳಿಂದ ನಿಮೇಷಮಾತ್ರದಲ್ಲಿ ಧೃಷ್ಟದ್ಯುಮ್ನನ ಧನುಸ್ಸನ್ನೂ, ಗದಾ-ಶಕ್ತಿ-ಧ್ವಜಗಳನ್ನೂ ಕತ್ತರಿಸಿ, ಅಶ್ವ-ಸಾರಥಿಗಳನ್ನೂ ಸಂಹರಿಸಿ ರಥವನ್ನೂ ಧ್ವಂಸಮಾಡಿದನು. ರಥಾಶ್ವ-ಸಾರಥಿಗಳಿಂದಲೂ ಧನುಸ್ಸಿನಿಂದಲೂ ವಿಹೀನನಾಗಿದ್ದ ಧೃಷ್ಟದ್ಯುಮ್ನನು ಥಳ-ಥಳಿಸುತ್ತಿದ್ದ ಕತ್ತಿಯನ್ನೂ, ವಿಶಾಲವಾದ ಗುರಾಣಿಯನ್ನೂ ಒಡನೆಯೇ ಕೈಗಳಲ್ಲಿ ತೆಗೆದು ಕೊಂಡನು. ಪಾರ್ಷತನು ರಥದಿಂದ ಕೆಳಗಿಳಿಯುವ ಮೊದಲೇ ದೃಢಾಯುಧ

ನಾದ, ಕ್ಷಿಪ್ರಹಸ್ತನಾದ, ಮಹಾರಥನಾದ, ವೀರನಾದ ಅಶ್ವತ್ಥಾಮನು ಪಾರ್ಷತನು ಹಿಡಿದಿದ್ದ ಕತ್ತಿಯನ್ನೂ ಗುರಾಣಿಯನ್ನೂ ಭಲ್ಲಗಳಿಂದ ಕತ್ತರಿಸಿ ಬಿಟ್ಟನು. ಅಶ್ವತ್ಥಾಮನ ಆ ಸಾಹಸಕಾರ್ಯವು ನಮಗೆ ಪರಮಾದ್ಭುತ



ವಾಗಿ ಕಂಡಿತು. ದ್ರೌಣಿಯು ರಥಾಶ್ವ-ಸಾರಥಿಗಳಿಂದಲೂ, ಧನುಸ್ಸಿನಿಂದಲೂ, ಕತ್ತಿಯಿಂದಲೂ ವಿಹೀನನಾಗಿದ್ದ ಧೃಷ್ಟದ್ಯುಮ್ನನನ್ನು ಅನೇಕ ಬಾಣಗಳಿಂದ ಗಾಯಗೊಳಿಸಿದನು. ಅಸ್ತ್ರಗಳಿಂದ ಅವನ ಶರೀರವನ್ನು ಬಹಳವಾಗಿ ಕ್ಷತ-ವಿಕ್ಷತಗೊಳಿಸಿದನು. ಆದರೆ ಮಹಾರಥನಾದ ದ್ರೌಣಿಯು ಎಷ್ಟೇ

ಪ್ರಯತ್ನಿಸಿದರೂ ಧೃಷ್ಟದ್ಯುಮ್ನನನ್ನು ಶಸ್ತ್ರಾಸ್ತ್ರಗಳಿಂದ ಸಂಹರಿಸಲು ಸಾಧ್ಯವಾಗಲಿಲ್ಲ. ಬಾಣಗಳಿಂದ ಧೃಷ್ಟದ್ಯುಮ್ನನನ್ನು ಸಂಹರಿಸಲು ಸಾಧ್ಯವಾಗದಿರಲು ವೀರನಾದ ಅಶ್ವತ್ಥಾಮನು ಒಡನೆಯೇ ಧನುಸ್ಸನ್ನು ರಥದಲ್ಲಿಯೇ ಇಟ್ಟು ಅತ್ಯಂತತ್ವರೆಯಿಂದ ಧೃಷ್ಟದ್ಯುಮ್ನನ ಕಡೆಗೇ ನುಗ್ಗಿದನು. ಧೃಷ್ಟದ್ಯುಮ್ನನನ್ನು ಹಿಡಿಯಬೇಕೆಂದು ಮಹಾತ್ಮನಾದ ದ್ರೌಣಿಯು ರಥದಿಂದ ಕೆಳಕ್ಕೆ ಧುಮುಕಿ ಓಡಿಬರುತ್ತಿದ್ದ ವೇಗವು–ನೆಲದ ಮೇಲೆ ಹರಿದಾಡುವ ಮಹಾಸರ್ಪವನ್ನು ಹಿಡಿಯಲು ಅಂತರಿಕ್ಷದಿಂದ ಕೆಳಕ್ಕೆ ರಭಸದಿಂದ ಎರಗುವ ಗರುಡಪಕ್ಷಿಯ ವೇಗಕ್ಕೆ ಸಮಾನವಾಗಿದ್ದಿತು.

ಅದೇ ಸಮಯಕ್ಕೆ ಸರಿಯಾಗಿ ಅನತಿದೂರದಲ್ಲಿದ್ದ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು:

"ಪಾರ್ಥ! ಅಲ್ಲಿ ನೋಡು! ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಸಂಹರಿಸಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಿದ್ದಾನೆ. ನಿಶ್ಚಯವಾಗಿ ಈ ಸಮಯದಲ್ಲವನು ಪಾರ್ಷತನನ್ನು ಕೊಂದೇಬಿಡುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಮಹಾಬಾಹುವೇ! ಶತ್ರುಕರ್ಶನ! ಮೃತ್ಯುವಿನ ದವಡೆಯಲ್ಲಿಯೇ ಸಿಕ್ಕಿದವನಂತೆ ದ್ರೌಣಿಯ ದವಡೆಯಲ್ಲಿ ಸಿಕ್ಕಿಬಿದ್ದಿರುವ (ವಶನಾಗಿಬಿಟ್ಟಿರುವ) ಪಾರ್ಷತನನ್ನು ವಿಮೋಚಿಸು."

ಮಹಾರಾಜ! ಹೀಗೆಂದು ಹೇಳುತ್ತಾ ಪ್ರತಾಪವಂತನಾದ ಶ್ರೀಕೃಷ್ಣನು ಅಶ್ವತ್ಥಾಮನಿದ್ದೆಡೆಗೆ ಕುದುರೆಗಳನ್ನು ಓಡಿಸಿದನು. ಚಂದ್ರಸದೃಶವಾಗಿದ್ದ ಕೇಶವಪ್ರಚೋದಿತವಾದ ಆ ಕುದುರೆಗಳು ಆಕಾಶವನ್ನು ನುಂಗುತ್ತಿವೆಯೋ ಎಂಬಂತೆ ವೇಗವಾಗಿ ಓಡೋಡಿ ಅಶ್ವತ್ಥಾಮನ ರಥದ ಬಳಿಗೆ ಬಂದುವು. ಮಹಾಬಲನಾದ ಅಶ್ವತ್ಥಾಮನು ಮಹಾವೀರ್ಯರಾದ ಕೃಷ್ಣ-ಧನಂಜಯರಿಬ್ಬರೂ ಬಂದುದನ್ನು ಕಂಡಮೇಲೂ ಧೃಷ್ಟದ್ಯುಮ್ನನ ವಧೆಯ ಪ್ರಯತ್ನವನ್ನು ಮುಂದುವರಿಸಿದನು. ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಹಿಗ್ಗಾ-ಮುಗ್ಗಾಗಿ ಎಳೆಯುತ್ತಿರುವುದನ್ನು ನೋಡಿದೊಡನೆಯೇ ಮಹಾಬಲನಾದ ಪಾರ್ಥನು ಅಶ್ವತ್ಥಾಮನ ಮೇಲೆ ಹಲವಾರು ಬಾಣಗಳನ್ನು ಪ್ರಯೋಗಿಸಿದನು. ಗಾಂಡೀವಧನುಸ್ಸಿನಿಂದ ಬಿಡಲ್ಪಟ್ಟ ಸುವರ್ಣಮಯವಾದ ಆ ಬಾಣಗಳು–ಹಾವುಗಳು ಬಿಲವನ್ನು ಹೊಗುವಂತೆ–ದ್ರೌಣಿಯ ಶರೀರವನ್ನು ಹೊಕ್ಕುವು. ಘೋರವಾದ ಆ ಬಾಣಗಳಿಂದ

ವಿದ್ಧನಾದ (ಪೀಡಿತನಾದ,) ಪ್ರತಾಪವಂತನಾದ ಅಶ್ವತ್ಥಾಮನು ಅಮಿತೌಜಸ್ಕನಾದ ಧೃಷ್ಟದ್ಯುಮ್ನನನ್ನು ಬಿಟ್ಟು ತನ್ನ ರಥದಲ್ಲಿ ಕುಳಿತು ಶ್ರೇಷ್ಠವಾದ ಧನುಸ್ಸನ್ನು ಕೈಗೆತ್ತಿಕೊಂಡು ಪಾರ್ಥನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಆ ಮಧ್ಯದಲ್ಲಿ ವೀರನಾದ ಸಹದೇವನು ಶತ್ರುತಾಪನನಾದ ಧೃಷ್ಟದ್ಯುಮ್ನನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋದನು.

ದ್ರೌಣಿಯು ಪ್ರಹರಿಸಿದುದಕ್ಕೆ ಪ್ರತಿಯಾಗಿ ಅರ್ಜುನನೂ ಅಶ್ವತ್ಥಾಮನನ್ನು ಬಾಣಗಳಿಂದ ಗಾಯಗೊಳಿಸಿದನು. ಅದರಿಂದ ಕ್ರುದ್ಧನಾದ ದ್ರೋಣಪುತ್ರನು ಅರ್ಜುನನ ವಕ್ಷಃಸ್ಥಳವನ್ನೂ ಮತ್ತು ತೋಳುಗಳನ್ನೂ ಬಾಣಗಳಿಂದ ಗಾಯಗೊಳಿಸಿದನು. ಅದರಿಂದ ಪರಮಕ್ರುದ್ಧನಾದ ಅರ್ಜುನನು ಎರಡನೆಯ ಯಮದಂಡದಂತೆಯೇ ಇದ್ದ, ಮೃತ್ಯುಸ್ವರೂಪವೇ ಆಗಿದ್ದ ನಾರಾಚವನ್ನು ಅಶ್ವತ್ಥಾಮನ ಮೇಲೆ ಪ್ರಯೋಗಿಸಿದನು. ಮಹಾತೇಜಸ್ಸಿನಿಂದ ಯುಕ್ತವಾಗಿದ್ದ ಆ ನಾರಾಚವು ಬ್ರಾಹ್ಮಣನ ಹೆಗಲಿನ ಪ್ರದೇಶದಲ್ಲಿ ಬಿದ್ದಿತು. ನಾರಾಚದ ವೇಗಯುಕ್ತವಾದ ಪ್ರಹಾರದಿಂದಾಗಿ ಅಶ್ವತ್ಥಾಮನು ವಿಹ್ವಲನಾದನು. ಕುಳಿತುಕೊಳ್ಳಲು ಸಾಧ್ಯವಾಗದೇ ಪೀಠದ ಪಕ್ಕಕ್ಕೆ ಜರುಗಿದನು ಮತ್ತು ಒಡನೆಯೇ ಮೂರ್ಛಿತನೂ ಆದನು.

ಬಳಿಕ ಕ್ರುದ್ಧನಾದ ಕರ್ಣನು ಅರ್ಜುನನನ್ನು ಬಾರಿ-ಬಾರಿಗೂ ನೋಡುತ್ತಾ ವಿಜಯಧನುಸ್ಸನ್ನು ಟೇಂಕರಿಸಿದನು. ಅಂದಿನ ಮಹಾ ಯುದ್ಧದಲ್ಲಿ ಅರ್ಜುನನೊಡನೆ ದ್ವೈರಥಯುದ್ಧವನ್ನು ಮಾಡಬೇಕೆಂದು ಕರ್ಣನು ಇಚ್ಛಿಸಿದ್ದನು. ಅಶ್ವತ್ಥಾಮನು ವಿಹ್ವಲನಾದುದನ್ನು ಕಂಡು ಅವನ ಸಾರಥಿಯು ಬಹಳ ಬೇಗ ರಣಭೂಮಿಯಿಂದ ರಥದ ಮೂಲಕವಾಗಿ ದ್ರೌಣಿ ಯನ್ನು ಬೇರೆಯ ಕಡೆಗೆ ಒಯ್ದನು. ವಿಜಯದಿಂದ ಉಲ್ಲಸಿತರಾದ ಪಾಂಚಾಲಯೋಧರು ಧೃಷ್ಟದ್ಯುಮ್ನನು ಅಶ್ವತ್ಥಾಮನಿಂದ ಮುಕ್ತನಾದು ದನ್ನೂ, ಅಶ್ವತ್ಥಾಮನು ಅರ್ಜುನನಿಂದ ಪೀಡಿತನಾದುದನ್ನೂ ಕಂಡು ಆನಂದದಿಂದ ಕೂಗಾಡಿದರು. ಯುದ್ಧದಲ್ಲಿ ಅಂತಹ ಪರಮಾದ್ಭುತವಾದ ದೃಶ್ಯವನ್ನು ಕಂಡು ಸಂಹೃಷ್ಟರಾದ ಪಾಂಚಾಲಸೈನಿಕರು ಸಾವಿರಾರು ದಿವ್ಯ ವಾದ ರಣವಾದ್ಯಗಳನ್ನು ಬಾರಿಸಿದರು. ಸಿಂಹನಾದಗಳನ್ನೂ ಮಾಡಿದರು.

ಅಶ್ವತ್ಥಾಮನನ್ನು ಗಾಯಗೊಳಿಸಿ ಓಡಿಸಿದನಂತರ ಅರ್ಜುನನು ವಾಸುದೇವನನ್ನು ಕುರಿತು ಹೇಳಿದನು: "ಕೃಷ್ಣ! ಸಂಶಪ್ತಕರ ಬಳಿಗೆ ರಥವನ್ನು ನಡೆಸು. ಅವರನ್ನು ಸಂಹರಿಸುವುದೇ ನನಗೆ ಅತಿಮುಖ್ಯವಾದ ಕಾರ್ಯವಾಗಿದೆ."

ಮಹಾರಾಜ! ಅರ್ಜುನನು ಹೇಳಿದ ಈ ಮಾತುಗಳನ್ನು ಕೇಳಿದ ಶ್ರೀಕೃಷ್ಣನು ಎತ್ತರವಾದ ಪತಾಕೆಯಿದ್ದ, ವಾಯುವೇಗ-ಮನೋವೇಗಗಳಿಂದ ಕೂಡಿದ್ದ ರಥದ ಮೂಲಕವಾಗಿ ಸಂಶಪ್ತಕರಿದ್ದ ಸ್ಥಳಕ್ಕೆ ತೆರಳಿದನು."

೫೯ನೆಯ ಅಧ್ಯಾಯವು ಮುಗಿಯಿತು.

೬೦ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಅರ್ಜುನನಿಗೆ ದುರ್ಯೋಧನ-ಕರ್ಣರ ಪರಾಕ್ರಮವನ್ನು ವರ್ಣಿಸುತ್ತಾ ಕರ್ಣನನ್ನು ಸಂಹರಿಸಲು ಅರ್ಜುನನನ್ನು ಉತ್ಸಾಹಗೊಳಿಸಿದುದು: ಭೀಮಸೇನನ ದುಷ್ಕರಪರಾಕ್ರಮದ ವರ್ಣನೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಈ ಮಧ್ಯದಲ್ಲಿ ಧರ್ಮರಾಜನನ್ನು ತೋರಿಸುತ್ತಿರುವವನಂತೆ ಶ್ರೀಕೃಷ್ಣನು ಯುಧಿಷ್ಠಿರನಿದ್ದ ಕಡೆಗೆ ಬೆರಳು ತೋರುತ್ತಾ ಅರ್ಜುನನನ್ನು ಕುರಿತು ಹೇಳಿದನು:

"ಪಾರ್ಥ! ಅದೋ ಅಲ್ಲಿ ನೋಡು. ನಿನ್ನ ಅಣ್ಣನಾದ ಯುಧಿಷ್ಠಿರನು ಶತ್ರುಗಳೊಡನೆ ಯುದ್ಧಮಾಡುತ್ತಿದ್ದಾನೆ. ಅವನನ್ನು ಸಂಹರಿಸುವ ಇಚ್ಛೆಯಿಂದ ಕೂಡಿರುವ, ಮಹಾಬಲರಾದ, ಮಹಾಧನುಷ್ಮಂತರಾದ ಧೃತರಾಷ್ಟ್ರನ ಮಕ್ಕಳು ವೇಗವಾಗಿ ಅವನ ಹಿಂದೆಯೇ ಹೋಗುತ್ತಿದ್ದಾರೆ. ಮಹಾಬಲರಾದ, ಯುದ್ಧದುರ್ಮದರಾದ, ಕ್ರುದ್ಧರಾದ ಪಾಂಚಾಲರು ಮಹಾತ್ಮನಾದ ಯುಧಿಷ್ಠಿರನನ್ನು ರಕ್ಷಿಸಬೇಕೆನ್ನುವ ಇಚ್ಛೆಯಿಂದ ಅವನನ್ನು ಅನುಸರಿಸಿ ಹೋಗುತ್ತಿದ್ದಾರೆ. ಈಗ ಸರ್ವಲೋಕಕ್ಕೂ ರಾಜನಾಗಿರುವ ದುರ್ಯೋಧನನು ಕವಚವನ್ನು ಧರಿಸಿ ರಥಸೈನ್ಯದೊಡನೆ ಯುಧಿಷ್ಠಿರನನ್ನು ಹಿಂಬಾಲಿಸು

ತ್ತಿದ್ದಾನೆ. ವಿಷಸರ್ಪದ ಸ್ಪರ್ಶಕ್ಕೆ (ಕಚ್ಚುವಿಕೆಗೆ) ಸಮಾನವಾದ, ಕ್ರೂರಸ್ಪರ್ಶವುಳ್ಳ, ಎಲ್ಲ ವಿಧವಾದ ಯುದ್ಧಗಳಲ್ಲಿಯೂ ವಿಶಾರದರಾಗಿರುವ ತಮ್ಮಂದಿರೊಡನೆ ಕೂಡಿಕೊಂಡು ಧರ್ಮರಾಜನನ್ನು ಸಂಹರಿಸುವ ಇಚ್ಛೆಯಿಂದ ದುರ್ಯೋಧನನು ಅವನ ಹಿಂದೆಯೇ ಹೋಗುತ್ತಿದ್ದಾನೆ. ಯಾಚಕನು ಐಶ್ವರ್ಯವಂತನನ್ನು (ರಾಜನನ್ನು) ಅರಸಲು ಇಚ್ಛಿಸುವಂತೆ–ಯುಧಿಷ್ಠಿರನನ್ನು ಹಿಡಿಯುವ ಇಚ್ಛೆಯಿಂದ ಗಜಾಶ್ವ-ರಥ-ಪದಾತಿ ಸೈನಿಕರೂ, ಧೃತರಾಷ್ಟ್ರನ ಮಕ್ಕಳೂ ಅವನ ಹಿಂದೆಯೇ ಹೋಗುತ್ತಿದ್ದಾರೆ. ಅಮೃತವನ್ನು ಅಪಹರಿಸಿಕೊಂಡುಹೋಗಲು ಇಚ್ಛಿಸಿದ್ದ ದೈತ್ಯರನ್ನು ಇಂದ್ರಾಗ್ನಿಗಳು ಹಲವು ಬಾರಿ ತಡೆಹಿಡಿದಂತೆ–ಭೀಮ-ಸಾತ್ಯಕಿಗಳಿಂದ ಹತ್ತಾರು ಬಾರಿ ತಡೆಯಲ್ಪಟ್ಟರೂ ಮತ್ತೆ ವ್ಯವಸ್ಥಿತರಾಗಿ ಯುಧಿಷ್ಠಿರನನ್ನು ಹಿಡಿಯಬೇಕೆಂಬ ಆಸೆಯಿಂದ ಮುನ್ನುಗ್ಗಿಬರುತ್ತಿರುವ ಕೌರವರನ್ನು ನೋಡು, ಪಾರ್ಥ! ವರ್ಷಾಕಾಲದಲ್ಲಿ ತುಂಬಿಹರಿಯುವ ಪ್ರವಾಹಗಳು ಸಮುದ್ರವನ್ನು ಸೇರುವಂತೆ–ಕೌರವಮಹಾರಥರು ಬಹುಸಂಖ್ಯಾತರಾಗಿರುವುದರಿಂದ ಎಷ್ಟೇ ನಿರೋಧಿಸಲ್ಪಡುತ್ತಿದ್ದರೂ ಪುನಃ ಪುನಃ ಯುಧಿಷ್ಠಿರನ ಬಳಿಗೆ ಹೋಗುತ್ತಲೇ ಇದ್ದಾರೆ. ಮಹಾಬಲಿಷ್ಠರಾದ, ಮಹಾಧನುಷ್ಮಂತರಾದ ಕುರುಯೋಧರು ಸಿಂಹನಾದಗಳನ್ನು ಮಾಡುತ್ತಾ, ಶಂಖಗಳನ್ನು ಊದುತ್ತಾ, ಧನುಸ್ಸುಗಳನ್ನು ಟೇಂಕರಿಸುತ್ತಾ ಮುನ್ನುಗ್ಗುತ್ತಲೇ ಇದ್ದಾರೆ. ಈ ವೇಳೆಗೆ ಕುಂತಿಯ ಮಗನಾದ ಯುಧಿಷ್ಠಿರನು ದುರ್ಯೋಧನನ ವಶನಾಗಿಬಿಟ್ಟಿರುವನೆಂದೇ ನಾನು ಭಾವಿಸುತ್ತೇನೆ. ಅಥವಾ ಅವನು ಮೃತ್ಯುವಿನ ದವಡೆಯನ್ನಾದರೂ ಸೇರಿರಬಹುದು. ಯುದ್ಧವೆಂಬ ಅಗ್ನಿಯಲ್ಲಿ ಹೋಮಮಾಡಲ್ಪಟ್ಟವನಾಗಿರಬಹುದು. ಅರ್ಜುನ! ಇಂದಿನ ದುರ್ಯೋಧನನ ಸೈನ್ಯದ ವ್ಯೂಹವು ಹೇಗಿರುವುದೆಂದರೆ: ಅವರ ಬಾಣಗಳ ಮಾರ್ಗದಲ್ಲಿ ಸಿಕ್ಕಿಹಾಕಿಕೊಂಡವನು ಇಂದ್ರನೇ ಆದರೂ ಮುಕ್ತನಾಗಿ ಹೋಗಲಾರನು. (ಅಂತಹ ಸುಭದ್ರವಾದ ದುರ್ಗಮವಾದ ವ್ಯೂಹವನ್ನು ದುರ್ಯೋಧನನು ರಚಿಸಿಕೊಂಡಿದ್ದಾನೆ.) ಬಾಣಗಳ ಸಮೂಹಗಳನ್ನೇ ಶೀಘ್ರಾತಿಶೀಘ್ರವಾಗಿ ಬಿಡುವ, ವೀರನಾದ, ಕೋಪಗೊಂಡ ಅಂತಕನೋಪಾದಿಯಲ್ಲಿರುವ ದುರ್ಯೋಧನನ ವೇಗವನ್ನು ಯುದ್ಧದಲ್ಲಿ ಸಹಿಸಿಕೊಳ್ಳುವವರು

ಯಾರಿದ್ದಾರೆ? ವೀರನಾದ ದುರ್ಯೋಧನ, ಅಶ್ವತ್ಥಾಮಾ, ಕೃಪರು ಮತ್ತು ಕರ್ಣ–ಇವರ ಬಾಣಗಳ ವೇಗವು ಪರ್ವತಗಳನ್ನಾದರೂ ಸೀಳಿಹಾಕಬಲ್ಲುದು. ಶತ್ರುತಾಪನನಾದ, ಬಲಿಷ್ಠನಾದ, ಲಘುಹಸ್ತನಾದ ಕರ್ಣನು ಅಸ್ತ್ರವಿದ್ಯಾಪಾರಂಗತನಾದ, ಯುದ್ಧವಿಶಾರದನಾದ ಯುಧಿಷ್ಠಿರ ನನ್ನೂ ಪರಾಭವಗೊಳಿಸಿದನು. ರಾಧಾಪುತ್ರನು ಶೂರರಾದ ಮತ್ತು ಮಹಾಬಲರಾದ ಧೃತರಾಷ್ಟ್ರನ ಮಕ್ಕಳೊಡನೆ ಸೇರಿಕೊಂಡು ಪಾಂಡವಜ್ಯೇಷ್ಠನಾದ ಯುಧಿಷ್ಠಿರನನ್ನು ಪೀಡಿಸಲು ಸಮರ್ಥನಾಗಿದ್ದಾನೆ. ಕರ್ಣ-ದುರ್ಯೋಧನಾದಿಗಳೊಡನೆಯೂ, ಇತರ ಮಹಾರಥರೊಡನೆಯೂ ಯುದ್ಧಮಾಡುತ್ತಿದ್ದ ಜಿತೇಂದ್ರಿಯನಾದ, ಕುಂತಿಯ ಮಗನಾದ ಯುಧಿಷ್ಠಿರನ ಕವಚವು ಕರ್ಣಾದಿಗಳಿಂದ ಕತ್ತರಿಸಲ್ಪಟ್ಟಿತು. ಭರತಕುಲಶಿರೋಮಣಿಯಾದ ಯುಧಿಷ್ಠಿರರಾಜನು ಉಪವಾಸಾದಿಗಳಿಂದ ದೇಹವನ್ನು ಬಹಳವಾಗಿ ಕೃಶಗೊಳಿಸಿಬಿಟ್ಟಿದ್ದಾನೆ. ಆದುದರಿಂದ ಅವನೀಗ ಬ್ರಾಹ್ಮಬಲವನ್ನು ಮಾತ್ರವೇ ಹೊಂದಿದ್ದಾನೆ. ಅವನಲ್ಲೀಗ ಕ್ಷಾತ್ರಬಲವೇ ಉಳಿದಿಲ್ಲ. ಶತ್ರುತಾಪನನಾದ ಭೂಪತಿಯಾದ ಯುಧಿಷ್ಠಿರನೀಗ ಕರ್ಣನೊಡನೆ ಯುದ್ಧದಲ್ಲಿ ತೊಡಗಿ ಬಹಳ ಸಂಕಟಕ್ಕೆ ಗುರಿಯಾಗಿದ್ದಾನೆ. ಅರ್ಜುನ! ಯುಧಿಷ್ಠಿರಮಹಾರಾಜನು ಈ ವೇಳೆಗೆ ಬದುಕಿಯೇ ಇಲ್ಲವೆಂದೂ ನಾನು ಭಾವಿಸುತ್ತೇನೆ. ಏಕೆಂದರೆ: ವಿಜಯದಿಂದ ಉಲ್ಲಸಿತರಾಗಿರುವ ಧೃತರಾಷ್ಟ್ರನ ಮಕ್ಕಳು ಪದೇ-ಪದೇ ಮಾಡುತ್ತಿರುವ ಸಿಂಹನಾದಗಳನ್ನೂ ಮತ್ತು ಶಂಖಧ್ವನಿಗಳನ್ನೂ ಅಸಹನಶೀಲನಾದ ಭೀಮಸೇನನು ಸಹಿಸಿಕೊಂಡೇ ಇದ್ದಾನೆ. (ಯುಧಿಷ್ಠಿರನು ಬದುಕಿದ್ದರೆ ಅವನೆಂದಿಗೂ ಕೌರವರ ವಿಜಯಧ್ವನಿಯನ್ನು ಸಹಿಸಿಕೊಳ್ಳುತ್ತಲೇ ಇರಲಿಲ್ಲ. ಮೇಲಾಗಿ ಭೀಮಸೇನನ ಎದುರಿನಲ್ಲಿ ಕೌರವರು ಹೀಗೆ ಸಿಂಹನಾದಗಳನ್ನೂ ಮಾಡುತ್ತಿರಲಿಲ್ಲ.) ಕರ್ಣನು ಯುಧಿಷ್ಠಿರನನ್ನು ಕೊಲ್ಲುವಂತೆ ಮಹಾಬಲಿಷ್ಠರಾದ ಧೃತರಾಷ್ಟ್ರನ ಮಕ್ಕಳನ್ನು ಪದೇ-ಪದೇ ಪ್ರಚೋದಿಸುತ್ತಲೇ ಇದ್ದಾನೆ.

ಕೌರವಮಹಾರಥರು ಯುಧಿಷ್ಠಿರರಾಜನನ್ನು ಸ್ಥೂಣಾಕರ್ಣ, ಇಂದ್ರ ಜಾಲ, ಪಾಶುಪತ–ಇವೇ ಮುಂತಾದ ಶಸ್ತ್ರಗಳ ಸಮೂಹಗಳಿಂದ ಆಚ್ಛಾದಿ ಸುತ್ತಿದ್ದಾರೆ. ನಿಶ್ಚಯವಾಗಿಯೂ ಯುಧಿಷ್ಠಿರರಾಜನು ಈ ಸಮಯದಲ್ಲಿ

ರೋಗಪೀಡಿತನಂತಾಗಿದ್ದಾನೆ. ಈ ಸಮಯದಲ್ಲಿ ಅವನನ್ನು ಸರ್ವಾತ್ಮನಾ ಸೇವಿಸಬೇಕಾಗಿದೆ. (ರಕ್ಷಿಸಬೇಕಾಗಿದೆ.) ಈ ಕಾರಣದಿಂದಲೇ ಪಾಂಚಾಲ ಯೋಧರು ಪಾಂಡವಯೋಧರೊಡನೆ ಅವನನ್ನೇ ಅನುಸರಿಸಿ ಹೋಗುತ್ತಿದ್ದಾರೆ. ಶೀಘ್ರವಾಗಿ ಕಾರ್ಯಮಾಡಬೇಕಾಗಿರುವ ಸಮಯದಲ್ಲಿ ಅತ್ಯಂತ ತ್ವರೆಯಿಂದ ಕಾರ್ಯಮಾಡುವ, ಎಲ್ಲ ಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠರಾದ, ಮಹಾಬಲಿಷ್ಠರಾದ ಪಾಂಡವಯೋಧರು ಪಾತಾಳದಲ್ಲಿ ಮುಳುಗಿಹೋಗುತ್ತಿರುವವನನ್ನು ಮೇಲಕ್ಕೆ ತರುವಂತೆ–ಅತ್ಯಂತಕಷ್ಟದಲ್ಲಿರುವ ಯುಧಿಷ್ಠಿರನನ್ನು ಉದ್ಧರಿಸಲು ಪ್ರಯತ್ನಿಸುತ್ತಿದ್ದಾರೆ. ಅದೋ ನೋಡು, ಅರ್ಜುನ! ರಾಜನ ರಥದ ಮೇಲಿದ್ದ ಧ್ವಜವೇ ಕಾಣಿಸುತ್ತಿಲ್ಲ. ನಕುಲ-ಸಹದೇವರು, ಸಾತ್ಯಕಿ, ಶಿಖಂಡೀ, ಧೃಷ್ಟದ್ಯುಮ್ನ, ಭೀಮ, ಶತಾನೀಕ, ಚೇದಿ-ಪಾಂಚಾಲರು–ಇವರೆಲ್ಲರೂ ನೋಡುತ್ತಿರುವಂತೆಯೇ ಕರ್ಣನು ರಾಜನ ಧ್ವಜದಂಡವನ್ನು ಕತ್ತರಿಸಿಬಿಟ್ಟಿದ್ದಾನೆ. ಆನೆಯು ಕಮಲಗಳಿರುವ ಸರೋವರವನ್ನು ಧ್ವಂಸಮಾಡುವಂತೆ–ಕರ್ಣನು ಪಾಂಡವರ ಸೈನ್ಯವನ್ನು ನಿಶಿತವಾದ ಬಾಣಗಳಿಂದ ಧ್ವಂಸಮಾಡುತ್ತಿದ್ದಾನೆ. ಪಾಂಡುನಂದನ! ನಿನ್ನ ಕಡೆಯ ರಥಿಗಳೆಲ್ಲರೂ ಪಲಾಯನಮಾಡುತ್ತಿದ್ದಾರೆ. ನೋಡು, ಪಾರ್ಥ! ಅವರು ಹೇಗೆ ಭಯದಿಂದ ಹಿಂದಕ್ಕೂ ತಿರುಗದೇ ಓಡಿಹೋಗುತ್ತಿದ್ದಾರೆಂಬುದನ್ನು ವೀಕ್ಷಿಸು. ಅದೋ ಆ ಆನೆಗಳು ಕರ್ಣನ ಬಾಣಗಳಿಂದ ಕತ್ತರಿಸಲ್ಪಟ್ಟು ಆರ್ತನಾದಗಳನ್ನು ಮಾಡುತ್ತಾ ದಿಕ್ಕಾಪಾಲಾಗಿ ಓಡಿಹೋಗುತ್ತಿವೆ. ಶತ್ರುಸೂದನನಾದ ಕರ್ಣನಿಂದ ಓಡಿಸಲ್ಪಟ್ಟಿರುವ ರಥಿಗಳ ಸಮೂಹವು ದಿಕ್ಕು-ದಿಕ್ಕುಗಳಿಗೂ ಓಡಿಹೋಗುತ್ತಿದೆ. ಧ್ವಜಿಗಳಲ್ಲಿ ಶ್ರೇಷ್ಠನಾದವನೇ! ಅರ್ಜುನ! ಆನೆಯ ಹಗ್ಗವನ್ನೇ ಚಿಹ್ನೆಯನ್ನಾಗಿ ಹೊಂದಿರುವ ಸೂತಪುತ್ರನಾದ ಕರ್ಣನ ಧ್ವಜವು ಎಲ್ಲೆಂದರಲ್ಲಿ ಸಂಚರಿಸುತ್ತಿರುವುದನ್ನಾದರೂ ನೋಡು. ಈ ರಾಧೇಯನು ನೂರಾರು ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ನಿನ್ನ ಸೈನ್ಯವನ್ನು ಸಂಹರಿಸುತ್ತಾ ಭೀಮಸೇನನ ರಥದ ಕಡೆಗೇ ಧಾವಿಸುತ್ತಿದ್ದಾನೆ. ಯುದ್ಧದಲ್ಲಿ ಇಂದ್ರನು ದೈತ್ಯರನ್ನು ಶರಪ್ರಹಾರಗಳಿಂದ ಸಂಹರಿಸುತ್ತಿದ್ದಂತೆ ಮತ್ತು ಪಲಾಯನಮಾಡಿಸುತ್ತಿದ್ದಂತೆ–ಕರ್ಣನು ಪಾಂಚಾಲಮಹಾರಥರನ್ನು ಎಡೆಬಿಡದೇ ಸಂಹರಿಸು

ತ್ತಿರುವುದನ್ನೂ ಪಲಾಯನಪರಾಯಣರನ್ನಾಗಿ ಮಾಡುತ್ತಿರುವುದನ್ನೂ ನೋಡು, ಪಾರ್ಥ! ಕರ್ಣನು ಪಾಂಡು-ಪಾಂಚಾಲ-ಸೃಂಜಯರನ್ನು ಯುದ್ಧದಲ್ಲಿ ಜಯಿಸಿ ನಾಲ್ಕು ದಿಕ್ಕುಗಳಲ್ಲಿಯೂ ನೋಡುತ್ತಿದ್ದಾನೆ. ಅವನು ಹೀಗೆ ನೋಡುತ್ತಿರುವುದು ನಿನ್ನ ಸಲುವಾಗಿಯೇ ಎಂದು ನಾನು ಭಾವಿಸಿದ್ದೇನೆ. ಅಲ್ಲಿ ನೋಡು, ಅರ್ಜುನ! ಶತ್ರುಗಳನ್ನು ಜಯಿಸಿ ದೇವತೆಗಳ ಸಮೂಹಗಳಿಂದ ಸಮಾವೃತನಾದ ಇಂದ್ರನು ಶೋಭಾಯಮಾನವಾಗಿ ಕಾಣುವಂತೆ ಪಾಂಡು-ಪಾಂಚಾಲ-ಸೃಂಜಯಯೋಧರನ್ನು ಜಯಿಸಿ ಕೌರವರ ಮಧ್ಯದಲ್ಲಿ ಕರ್ಣನು ಶ್ರೇಷ್ಠವಾದ ತನ್ನ ಧನುಸ್ಸನ್ನು ಟೇಂಕರಿಸುತ್ತಾ ಬಹಳವಾಗಿ ಶೋಭಿಸುತ್ತಿದ್ದಾನೆ. ಕರ್ಣನ ಪರಾಕ್ರಮವನ್ನು ನೋಡಿ ಕೌರವರು ಎಲ್ಲ ಕಡೆಗಳಲ್ಲಿಯೂ ಪಾಂಡು-ಪಾಂಚಾಲ-ಸೃಂಜಯಯೋಧರನ್ನು ಭಯಪಡಿಸುತ್ತಾ ಗರ್ಜನೆಮಾಡುತ್ತಿದ್ದಾರೆ.

ಮಾನದನೇ! ರಾಧಾಪುತ್ರನಾದ ಈ ಕರ್ಣನು ಮಹಾಯುದ್ಧದಲ್ಲಿ ಪಾಂಡವರ ಸೈನ್ಯವನ್ನು ಸರ್ವಪ್ರಕಾರದಿಂದಲೂ ಭಯಪಡಿಸುತ್ತಾ ತನ್ನ ಕಡೆಯ ಎಲ್ಲ ಸೈನಿಕರನ್ನೂ ಕುರಿತು ಹೀಗೆ ಹೇಳುತ್ತಿದ್ದಾನೆ:

"ಕೌರವಯೋಧರೇ! ನಿಮಗೆ ಮಂಗಳವಾಗಲಿ, ಹೋಗಿರಿ! ಬೇಗ ಹೋಗಿರಿ! ಇಂದಿನ ಯುದ್ಧದಲ್ಲಿ ಒಬ್ಬನೇ ಒಬ್ಬ ಸೃಂಜಯನಾದರೂ ಪ್ರಾಣಸಹಿತನಾಗಿ ನಮ್ಮಿಂದ ತಪ್ಪಿಸಿಕೊಂಡು ಹೋಗಬಾರದು. ಪ್ರಯತ್ನಶೀಲ ರಾಗಿ ನೀವೆಲ್ಲರೂ ಹಾಗೆ ಮಾಡಿರಿ. ನಾವು ನಿಮ್ಮ ಹಿಂದೆಯೇ ಬರುತ್ತೇವೆ." ಕರ್ಣನು ಹೀಗೆ ಸೈನಿಕರನ್ನು ಪ್ರೋತ್ಸಾಹಿಸಿ ಹಿಂದಿನಿಂದ ಶತ್ರುಗಳ ಮೇಲೆ ಬಾಣಗಳ ಮಳೆಗರೆಯುತ್ತಾ ಹೋಗುತ್ತಿದ್ದಾನೆ. ಚಂದ್ರನಿಂದ ಶೋಭಾಯಮಾನವಾಗಿ ಕಾಣುವ ಉದಯಪರ್ವತದಂತೆ–ಶ್ವೇತಚ್ಛತ್ರದಿಂದ ವಿರಾಜಮಾನನಾಗಿ ಕಾಣುತ್ತಿರುವ ಕರ್ಣನನ್ನು ನೋಡು, ಪಾರ್ಥ! ಪೂರ್ಣಚಂದ್ರಸದೃಶವಾದ, ನೂರು ಶಲಾಕಗಳಿಂದ (ಛತ್ರಿಯ ಕಡ್ಡಿಗಳಿಂದ) ಯುಕ್ತವಾದ, ಕಾಂತಿಯುಕ್ತವಾದ ಶ್ವೇತಚ್ಛತ್ರವನ್ನು ಧರಿಸಿರುವ ಕರ್ಣನು ನಿನ್ನನ್ನು ಓರೆಗಣ್ಣಿನಿಂದ ನೋಡುತ್ತಿದ್ದಾನೆ. ನಿಶ್ಚಯವಾಗಿಯೂ ಅವನು ಬಹಳ ವೇಗದಿಂದ ನಿನ್ನ ಬಳಿಗೆ ಬರುತ್ತಾನೆ. ಮಹಾಬಾಹುವೇ!

ವಿಜಯವೆಂಬ ಮಹಾಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಸರ್ಪಗಳ ಆಕಾರವನ್ನು ಹೊಂದಿರುವ ಬಾಣಗಳನ್ನು ಬಿಡುತ್ತಿರುವ ಕರ್ಣನನ್ನು ನೋಡು, ಅರ್ಜುನ!

ಪರಂತಪನೇ! ಅದೋ ಅಲ್ಲಿ ನೋಡು. ನಿನ್ನ ವಾನರಧ್ವಜವನ್ನು ನೋಡಿದ ಕರ್ಣನು ನಿನ್ನೊಡನೆ ದ್ವೈರಥಯುದ್ಧವನ್ನು ಮಾಡುವ ಇಚ್ಛೆಯಿಂದ ಇತ್ತಕಡೆಗೇ ಬರುತ್ತಿದ್ದಾನೆ. ಪತಂಗದ ಹುಳುವು ಆತ್ಮನಾಶಕ್ಕಾಗಿಯೇ ಉರಿಯುತ್ತಿರುವ ಅಗ್ನಿಯ ಸಮೀಪಕ್ಕೆ ಹೋಗುವಂತೆ–ಕರ್ಣನು ತನ್ನ ವಿನಾಶಕ್ಕಾಗಿಯೇ ನಿನ್ನ ಸಮೀಪಕ್ಕೆ ಬರುತ್ತಿದ್ದಾನೆ. ಕರ್ಣನು ಏಕಾಕಿಯಾಗಿ ನಿನ್ನ ಸಮೀಪಕ್ಕೆ ಬರುತ್ತಿರುವುದನ್ನು ನೋಡಿ ಅವನನ್ನು ರಕ್ಷಿಸಲೇಬೇಕೆನ್ನುವ ಇಚ್ಛೆಯಿಂದ ದುರ್ಯೋಧನನು ರಥಾನೀಕದಿಂದ ಪರಿವೃತನಾಗಿ ಇತ್ತಕಡೆಗೇ ಬರುತ್ತಿದ್ದಾನೆ. ಯಶಸ್ಸು, ರಾಜ್ಯ ಮತ್ತು ಉತ್ತಮಸುಖಗಳನ್ನು ಆಶಿಸುತ್ತಿರುವ ನೀನು ಪ್ರಯತ್ನಪೂರ್ವಕವಾಗಿ ಈ ಎಲ್ಲರೊಡನೆ (ದುರ್ಯೋಧನಾದಿ ಗಳೊಡನೆ) ದುಷ್ಟಾತ್ಮನಾದ ಕರ್ಣನನ್ನು ಸಂಹರಿಸು. ಅರ್ಜುನ! ದೇವಾಸುರಯುದ್ಧದಲ್ಲಿ ದೇವತೆಗಳಿಗೂ ಮತ್ತು ದಾನವರಿಗೂ ನಡೆದ ಯುದ್ಧದಂತೆ–ಅದೀನರಾದ (ಧೀರರಾದ) ವಿಶ್ವವಿಖ್ಯಾತರಾದ ನೀವಿಬ್ಬರೂ ಉತ್ಸಾಹಪೂರ್ಣವಾಗಿ ಯುದ್ಧಮಾಡುತ್ತಿರುವಾಗ ನಿನ್ನ ಪರಾಕ್ರಮ ವೆಷ್ಟೆಂಬುದನ್ನು ಕೌರವರು ಪ್ರತ್ಯಕ್ಷವಾಗಿಯೇ ನೋಡಲಿ. ಪರಮ ಕ್ರುದ್ಧನಾಗಿರುವ ನಿನ್ನನ್ನೂ ಮತ್ತು ಕರ್ಣನನ್ನೂ ನೋಡಿದ ಮಾತ್ರದಿಂದಲೇ ಕ್ರುದ್ಧನಾಗುವ ಈ ದುರ್ಯೋಧನನು ಯಾವ ಉತ್ತರವನ್ನೂ (ಫಲಿತಾಂಶ ವನ್ನು) ಪಡೆಯಲಾರನು. (ಇಬ್ಬರಿಗೂ ಯುದ್ಧವಾದ ಹೊರತು ಯಾರಲ್ಲಿ ಎಷ್ಟು ಪರಾಕ್ರಮವಿರುವುದೆಂಬ ಅರಿವು ದುರ್ಯೋಧನನಿಗೆ ಉಂಟಾಗುವುದಿಲ್ಲ.) ಭರತರ್ಷಭನೇ! ಈ ಸಮಯದಲ್ಲಿ ನೀನು ನಿನ್ನನ್ನು ಪುಣ್ಯಾತ್ಮನೆಂದು ಭಾವಿಸಿಕೊಳ್ಳಬೇಕು. ರಾಧೇಯನು ಧರ್ಮಾತ್ಮನಾದ ಯುಧಿಷ್ಠಿರನ ವಿಷಯದಲ್ಲಿ ಅಪರಾಧವೆಸಗಿರುವನೆಂಬುದನ್ನು ಮನದಟ್ಟು ಮಾಡಿಕೊಳ್ಳಬೇಕು. ಅನಂತರವೇ ನೀನು ಸಮಯೋಚಿತವಾದ ಕರ್ತವ್ಯದ ಪರಿಪಾಲನೆಯನ್ನು ಮಾಡು. ಯುದ್ಧದ ವಿಷಯದಲ್ಲಿ ನೀನು ಶ್ರೇಷ್ಠವಾದ ಬುದ್ಧಿಯನ್ನು ಆಶ್ರಯಿಸಿ ರಥಯೂಥಪನಾದ ಕರ್ಣನನ್ನು ಆಕ್ರಮಿಸು.

ರಥಸತ್ತಮನೇ! ತೀಕ್ಷ್ಣವಾದ ತೇಜಸ್ಸಿನಿಂದ ಕೂಡಿರುವ, ಮಹಾ ಬಲಿಷ್ಠರಾದ, ಮುಖ್ಯ-ಮುಖ್ಯರಾದ ಐದು ನೂರು ರಥಿಗಳು ನಿನ್ನೊಡನೆ ಯುದ್ಧಮಾಡಲು ಬರುತ್ತಿದ್ದಾರೆ. ಈ ರಥಿಗಳನ್ನು ಅನುಸರಿಸಿ ಐದು ಸಾವಿರ ಆನೆಗಳೂ, ಹತ್ತು ಸಾವಿರ ಕುದುರೆಗಳೂ ಮತ್ತು ಹತ್ತು ಲಕ್ಷ ಪದಾತಿಗಳೂ ಸಂಘಟಿತರಾಗಿ ಬರುತ್ತಿದ್ದಾರೆ. ಅಶ್ವತ್ಥಾಮನನ್ನು ಮುಂದೆ ಮಾಡಿಕೊಂಡು ಪರಸ್ಪರವಾಗಿ ರಕ್ಷಣೆಮಾಡಿಕೊಳ್ಳುತ್ತಾ ನಿನ್ನ ಮೇಲೆ ದಾಳಿ ಮಾಡಲು ಈ ಸೈನಿಕರು ಬರುತ್ತಿದ್ದಾರೆ. ಇವರೆಲ್ಲರನ್ನೂ ಶೀಘ್ರವಾಗಿ ಸಂಹರಿಸು. ಈ ರಥಾನೀಕವನ್ನು ಸಂಹರಿಸಿ ಮಹಾಬಲಿಷ್ಠನಾದ, ಲೋಕ ವಿಶ್ರುತನಾದ, ಮಹಾಧನುಷ್ಮಂತನಾದ ಕರ್ಣನನ್ನು ಎದುರಿಸಿ ಅವನಿಗೆ ನೀನಾರೆಂಬುದನ್ನು ತೋರಿಸಿಕೊಡು. ಭರತಶ್ರೇಷ್ಠನೇ! ನೀನು ಮಹಾ ವೇಗವನ್ನಾಶ್ರಯಿಸಿ ಶತ್ರುಗಳನ್ನು ಆಕ್ರಮಿಸು. ಅವನ ರಥಧ್ವಜವು ಧೃಷ್ಟ ದ್ಯುಮ್ನನ ರಥದ ಕಡೆಗೇ ಹೋಗುತ್ತಿರುವುದನ್ನು ಆಕಾಶದಲ್ಲಿ ನಾನು ನೋಡುತ್ತಿದ್ದೇನೆ. ಪರಂತಪನೇ! ಕರ್ಣನು ಪಾಂಚಾಲರ ಮೇಲೆಯೇ ಆಕ್ರಮಣವನ್ನು ನಡೆಸುವನೆಂದು ನಾನು ಭಾವಿಸುತ್ತೇನೆ. ಪಾರ್ಥ! ನಿನ ಗೊಂದು ಪ್ರಿಯಸಮಾಚಾರವನ್ನು ತಿಳಿಸುತ್ತೇನೆ. ಧರ್ಮಪುತ್ರನಾದ ಶ್ರೀಮಂತನಾದ ಯುಧಿಷ್ಠಿರನು ಕುಶಲಿಯಾಗಿದ್ದಾನೆ. ಹೇಗೆಂದರೆ ಮಹಾ ಬಾಹುವಾದ ಭೀಮಸೇನನು ಸೇನೆಯ ಅಗ್ರಭಾಗಕ್ಕೆ ಹಿಂದಿರುಗಿದ್ದಾನೆ. ಮೇಲಾಗಿ ಭೀಮಸೇನನ ಜೊತೆಯಲ್ಲಿ ಸಾತ್ಯಕಿಯೂ ಮತ್ತು ಸೃಂಜಯ ಸೈನಿಕರೂ ಇದ್ದಾರೆ. ಭೀಮಸೇನನೂ ಮತ್ತು ಮಹಾತ್ಮರಾದ ಪಾಂಚಾಲ ಯೋಧರೂ ತಮ್ಮ ನಿಶಿತವಾದ ಬಾಣಗಳಿಂದ ಕೌರವರನ್ನು ವಧಿಸುತ್ತಿದ್ದಾರೆ. ಭೀಮಸೇನನ ಬಾಣಗಳಿಂದ ಗಾಯಗೊಂಡ ದುರ್ಯೋಧನನ ಸೈನ್ಯವು ಗಾಯಗಳಿಂದ ರಕ್ತವನ್ನು ಸುರಿಸುತ್ತಾ ಯುದ್ಧದಿಂದ ವಿಮುಖವಾಗಿ ವೇಗ ದಿಂದ ಪಲಾಯನಮಾಡುತ್ತಿದೆ. ರಕ್ತದಿಂದ ತೋಯ್ದುಹೋಗಿರುವ ಕೌರವ ಸೈನ್ಯವು–ಹಾಳಾಗಿಹೋಗಿರುವ ಪೈರುಳ್ಳ ಗದ್ದೆಯೋಪಾದಿಯಲ್ಲಿ–ಅತ್ಯಂತ ನಿಸ್ತೇಜವಾಗಿ ಕಾಣುತ್ತಿದೆ. ಅರ್ಜುನ! ಸರ್ಪದಂತೆ ಕ್ರುದ್ಧನಾಗಿರುವ, ಯೋಧರ ಪತಿಯಾದ ಭೀಮಸೇನನು ಯುದ್ಧಕ್ಕೆ ಹಿಂದಿರುಗಿ ಕೌರವರ ಸೈನ್ಯವನ್ನು ಓಡಿಸುತ್ತಿರುವುದನ್ನಾದರೂ ನೋಡು! ಸೂರ್ಯ-ಚಂದ್ರ-

ನಕ್ಷತ್ರಗಳ ಚಿಹ್ನೆಗಳಿಂದ ಸಮಲಂಕೃತವಾದ ಹಳದಿ, ಕೆಂಪು, ಕಪ್ಪು ಮತ್ತು ಬಿಳಿಯ ಬಣ್ಣದ ಪತಾಕೆಗಳು ಮತ್ತು ಶ್ವೇತಚ್ಛತ್ರಗಳು ಚಲ್ಲಾಪಿಲ್ಲಿಯಾಗಿ ಬೀಳುತ್ತಿರುವುದನ್ನು ನೋಡು! ಸುವರ್ಣಮಯವಾದ, ರಜತಮಯವಾದ ಮತ್ತು ಲೋಹಮಯವಾದ ನಾನಾವಿಧವಾದ ಧ್ವಜಗಳು ಭೀಮಸೇನನ ಬಾಣಗಳಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬೀಳುತ್ತಿವೆ. ಆನೆ-ಕುದುರೆಗಳೂ ಸಹ ದಿಕ್ಕಾಪಾಲಾಗಿ ಓಡಿಹೋಗುತ್ತಿವೆ. ಯುದ್ಧದಿಂದ ಪಲಾಯನಮಾಡದಿರುವ ಪಾಂಚಾಲಯೋಧರ ನಾನಾವಿಧವಾದ ಬಣ್ಣಗಳಿಂದ ಕೂಡಿದ ಬಾಣಗಳಿಂದ ಹತರಾದ ಶತ್ರುಪಕ್ಷದ ರಥಿಕರು ಪ್ರಾಣಗಳನ್ನು ಕಳೆದುಕೊಂಡು ರಥಗಳಿಂದ ಕೆಳಕ್ಕೆ ಬೀಳುತ್ತಿದ್ದಾರೆ. ವೇಗವಂತರಾದ, ಪುರುಷಸಿಂಹರಾದ ಪಾಂಚಾಲ ಯೋಧರು ಭೀಮಸೇನನ ಬಲವನ್ನು ಆಶ್ರಯಿಸಿ ದುರ್ಯೋಧನನ ಗಜಾಶ್ವ-ರಥಸೈನಿಕರನ್ನು ಆಕ್ರಮಿಸಿ ಆನೆ-ಕುದುರೆ- ರಥಗಳನ್ನು ಮನುಷ್ಯರಿಂದ ಹೀನವನ್ನಾಗಿ ಮಾಡಿ ಧ್ವಂಸಮಾಡುತ್ತಿದ್ದಾರೆ. ಅರ್ಜುನ! ದುರ್ಜಯರಾದ ಪಾಂಚಾಲವೀರರು ಪ್ರಾಣಗಳ ಹಂಗನ್ನೇ ತೊರೆದು ಯುದ್ಧಮಾಡುತ್ತಾ ಶತ್ರುಗಳನ್ನು ಧ್ವಂಸಮಾಡಿ ಗರ್ಜನೆಮಾಡುತ್ತಿದ್ದಾರೆ ಮತ್ತು ಶಂಖಗಳನ್ನು ಊದುತ್ತಿದ್ದಾರೆ.

ಅರ್ಜುನ! ಈ ಪಾಂಚಾಲಯೋಧರ ಮಾಹಾತ್ಮ್ಯವನ್ನಾದರೂ ನೋಡು. ಕೋಪಗೊಂಡ ಸಿಂಹಗಳು ಆನೆಗಳನ್ನು ಧ್ವಂಸಮಾಡುವಂತೆ– ಕ್ರುದ್ಧರಾದ ಪಾಂಚಾಲರು ತಮ್ಮ ಪರಾಕ್ರಮದಿಂದ ದುರ್ಯೋಧನನ ಸೈನ್ಯವನ್ನು ಧ್ವಂಸಮಾಡುತ್ತಿದ್ದಾರೆ. ಬಾಣಗಳಿಂದ ಶತ್ರುಗಳನ್ನು ಪ್ರಹರಿಸುತ್ತಾ ರಣಾಂಗಣದ ಸುತ್ತಲೂ ತಿರುಗುತ್ತಿದ್ದಾರೆ. ಈ ಪಾಂಚಾಲರು ಯದ್ಯಪಿ ಅಸ್ತ್ರ-ಶಸ್ತ್ರಗಳಿಂದ ವಿಹೀನರಾಗಿದ್ದರೂ ಸಾಯುಧರಾದ ಶತ್ರುಗಳಿಂದಲೇ ಆಯುಧಗಳನ್ನು ಕಿತ್ತುಕೊಂಡು ಅಮೋಘವಾದ ಅಸ್ತ್ರಗಳನ್ನು ಹೊಂದಿ ಅವುಗಳಿಂದಲೇ ಶತ್ರುಗಳನ್ನು ಸಂಹರಿಸಿ ಗರ್ಜನೆಮಾಡುತ್ತಿದ್ದಾರೆ. ಪಾಂಚಾಲಸೈನಿಕರು ಶತ್ರುಗಳ ಶಿರಸ್ಸುಗಳನ್ನೂ ತೋಳುಗಳನ್ನೂ ಕತ್ತರಿಸಿ ಹಾಕುತ್ತಿದ್ದಾರೆ. ರಥ-ಗಜಾಶ್ವಗಳನ್ನೂ ಯಶೋವಂತರಾದ ವೀರರನ್ನೂ ನೆಲಕ್ಕೆ ಉರುಳಿಸುತ್ತಿದ್ದಾರೆ. ಹಂಸಗಳು ಮಾನಸಸರೋವರದಿಂದ ಹೊರಟು

ವೇಗವಾಗಿ ಗಂಗಾನದಿಯ ಕಡೆಗೆ ಧಾವಿಸುವಂತೆ–ಪಾಂಚಾಲಸೈನಿಕರು ವೇಗವಾಗಿ ಹೋಗಿ ವಿಶಾಲವಾದ ದುರ್ಯೋಧನನ ಸೈನ್ಯವನ್ನು ಆಕ್ರಮಿಸುತ್ತಿದ್ದಾರೆ. ಗೂಳಿಗಳು ಎದುರುಪಕ್ಷದ ಗೂಳಿಗಳನ್ನು ಕಾಳಗಗಳಲ್ಲಿ ನಿರೋಧಿಸುವಂತೆ–ಕೃಪ-ಕರ್ಣರೇ ಮೊದಲಾದ ವೀರರು ಪಾಂಚಾಲ ಯೋಧರನ್ನು ತಡೆದು ನಿಲ್ಲಿಸಲು ತಮ್ಮ ಸಂಪೂರ್ಣ ಪರಾಕ್ರಮವನ್ನೂ ತೋರಿಸುತ್ತಿದ್ದಾರೆ. ಭೀಮನ ಅಸ್ತ್ರದಿಂದ ಸಂಪೂರ್ಣವಾಗಿ ಹತೋತ್ಸಾಹರಾದ ಧಾರ್ತರಾಷ್ಟ್ರಮಹಾರಥರನ್ನು ಧೃಷ್ಟದ್ಯುಮ್ನಪ್ರಮುಖರಾದ ನಿನ್ನ ಕಡೆಯ ವೀರರು ಸಾವಿರಾರು ಸಂಖ್ಯೆಯಲ್ಲಿ ಪ್ರಹರಿಸುತ್ತಿದ್ದಾರೆ. ಪಾಂಚಾಲಯೋಧರು ಪರಾಜಿತರಾದನಂತರ ವಾಯುಪುತ್ರನಾದ ಭೀಮಸೇನನು ಗರ್ಜನೆಮಾಡುತ್ತಾ ಶತ್ರುಪಕ್ಷದವರನ್ನು ನಿರ್ಭಯವಾಗಿ ಆಕ್ರಮಿಸಿ ಬಾಣಗಳ ಮಳೆಗರೆಯುತ್ತಿದ್ದಾನೆ. ದುರ್ಯೋಧನನ ಕಡೆಯ ಸೈನಿಕರಲ್ಲಿ ಅನೇಕರು ಅತ್ಯಂತವಿಷಣ್ಣರಾಗಿದ್ದಾರೆ. ಭೀಮಸೇನನ ಭಯದಿಂದ ಪೀಡಿತರಾದ ಆ ರಥಿಗಳೂ ಬಹಳವಾಗಿ ಆಯಾಸಗೊಂಡಿದ್ದಾರೆ.

ಅಲ್ಲಿ ನೋಡು, ಅರ್ಜುನ! ಪರ್ವತಶಿಖರಗಳು ಇಂದ್ರನ ವಜ್ರಾಯುಧ ದಿಂದ ಪ್ರಹೃತವಾಗಿ ಕೆಳಗೆ ಬೀಳುವಂತೆ–ಭೀಮಸೇನನ ನಾರಾಚಗಳಿಂದ ಭಿನ್ನವಾದ ಆನೆಗಳು ಕೆಳಗೆ ಬೀಳುತ್ತಿವೆ. ಬಗ್ಗಿದ ಗಿಣ್ಣುಗಳಿರುವ ಭೀಮ ಸೇನನ ಬಾಣಗಳಿಂದ ಗಾಯಗೊಂಡ ಮಹಾಗಜಗಳು ತಮ್ಮ ಕಡೆಯ ಸೈನಿಕರನ್ನೇ ತುಳಿದು ಧ್ವಂಸಮಾಡುತ್ತಾ ಓಡಿಹೋಗುತ್ತಿವೆ. ವಿಜಯ ದಿಂದ ಉಲ್ಲಸಿತನಾಗುವ ವೀರನಾದ ಭೀಮಸೇನನು ಮಾಡುತ್ತಿರುವ, ಶತ್ರು ಗಳಿಂದ ಸಹಿಸಿಕೊಳ್ಳಲು ಅಸಾಧ್ಯವಾದ ಸಿಂಹನಾದವನ್ನು ಕೇಳಿದನಂತರ ವಾದರೂ ಇದು ಭೀಮನ ಸಿಂಹನಾದ–ಎಂಬುದನ್ನು ಮನಗಾಣುವವನಾಗು. ಅಗೋ ಅಲ್ಲಿ ನೋಡು, ಪಾರ್ಥ! ದಂಡಪಾಣಿಯಾದ ಯಮನೋಪಾದಿ ಯಲ್ಲಿ ಕ್ರುದ್ಧನಾದ ನಿಷಾದರಾಜಪುತ್ರನು ಭೀಮನನ್ನು ತೋಮರಗಳ ಮೂಲಕವಾಗಿ ಸಂಹರಿಸುವ ಇಚ್ಛೆಯಿಂದ ಶ್ರೇಷ್ಠವಾದ ಆನೆಯ ಮೇಲೆ ಕುಳಿತು ಭೀಮಸೇನನ ಸಮೀಪಕ್ಕೆ ಹೋಗುತ್ತಿದ್ದಾನೆ. ನೋಡು! ನೈಷಾದಿಯ ತೋಳುಗಳು ಬಿದ್ದೇ ಹೋದುವು. ಅರ್ಜುನ! ಸಿಂಹನಾದ

ವನ್ನು ಮಾಡುತ್ತಿರುವ ಭೀಮಸೇನನು ತೋಮರಗಳಿಂದ ಯುಕ್ತವಾಗಿದ್ದ ನಿಷಾದಪುತ್ರನ ತೋಳುಗಳನ್ನು ಕತ್ತರಿಸಿಯೇಬಿಟ್ಟನು. ತೀಕ್ಷ್ಣವಾದ ಹತ್ತು ಬಾಣಗಳಿಂದ ನೈಷಾದಿಯನ್ನೂ ಸಂಹರಿಸಿಬಿಟ್ಟನು. ನಿಷಾದಪುತ್ರನನ್ನು ಸಂಹರಿಸಿದೊಡನೆಯೇ ಆನೆಗಳ ಮೇಲೆ ಕುಳಿತು ಬರುತ್ತಿರುವ



ಪ್ರಹಾರಕುಶಲರಾದ ಶತ್ರುಪಕ್ಷದ ಇತರ ಗಜಯೋಧರನ್ನು ಆಕ್ರಮಿಸಲು ಭೀಮನು ಬರುತ್ತಿದ್ದಾನೆ. ಮಾವಟಿಗರಿಂದ ಅಧಿಷ್ಠಿತವಾಗಿರುವ, ನೀಲ ಮೇಘಸದೃಶವಾದ ಆ ಆನೆಗಳನ್ನು ಶಕ್ತಿ-ತೋಮರಗಳ ಸಮೂಹಗಳಿಂದ ಸಂಹರಿಸುತ್ತಿರುವ ಭೀಮಸೇನನನ್ನು ನೋಡು.

ಪಾರ್ಥ! ನಿನ್ನ ಅಣ್ಣನಾದ ಭೀಮಸೇನನು ಧ್ವಜಗಳಿಂದ ಕೂಡಿದ

ವೈಜಯಂತೀಪತಾಕೆಗಳನ್ನು ನಿಶಿತವಾದ ಬಾಣಗಳಿಂದ ಕತ್ತರಿಸಿ ಆ ನಲವತ್ತೊಂಬತ್ತು ಆನೆಗಳನ್ನೂ ಸಂಹರಿಸುತ್ತಿದ್ದಾನೆ. ಭೀಮಸೇನನು ಹತ್ತು-ಹತ್ತು ನಾರಾಚಗಳಿಂದ ಒಂದೊಂದು ಆನೆಯನ್ನು ಸಂಹರಿಸುತ್ತಿದ್ದಾನೆ. ಪುರಂದರಸಮಪರಾಕ್ರಮನಾದ, ಕ್ರುದ್ಧನಾದ ಭೀಮಸೇನನು ಯುದ್ಧಕ್ಕೆ ಹಿಂದಿರುಗಲಾಗಿ, ದುರ್ಯೋಧನನ ಸೈನಿಕರು ಮಾಡುತ್ತಿದ್ದ ಘೋರವಾದ ಸಿಂಹನಾದಗಳೀಗ ಕೇಳಿಬರುತ್ತಿಲ್ಲ. ನರಸಿಂಹನಾದ, ಕ್ರುದ್ಧನಾದ ಭೀಮಸೇನನು ದುರ್ಯೋಧನನ ಸುಸಂಘಟಿತವಾದ ಮೂರು ಅಕ್ಷೌಹಿಣೀಸೇನೆಯನ್ನೂ ತಡೆದು ನಿಲ್ಲಿಸಿದನು. ದುರ್ಬಲವಾದ ಕಣ್ಣುಳ್ಳವರಿಗೆ ಮಧ್ಯಾಹ್ನದ ಸೂರ್ಯನನ್ನು ನೋಡಲು ಸಾಧ್ಯವಾಗದಂತೆ–ಕ್ರುದ್ಧನಾಗಿದ್ದ ಭೀಮಸೇನನನ್ನು ದಿಟ್ಟಿಸಿನೋಡಲು ದುರ್ಯೋಧನನ ಕಡೆಯ ರಾಜರಿಗೆ ಶಕ್ಯವಾಗಲಿಲ್ಲ. ಸಿಂಹದಿಂದ ಇತರ ಮೃಗಗಳು ಭಯಗೊಳ್ಳುವಂತೆ–ಭೀಮನ ಬಾಣಗಳಿಂದ ಎಲ್ಲ ಸೈನಿಕರೂ ಭಯಗೊಂಡಿದ್ದಾರೆ. ಯುದ್ಧದಲ್ಲಿ ಬಾಣಗಳಿಂದ ಭಯಗೊಳಿಸಲ್ಪಡುತ್ತಿರುವ ಕೌರವಸೈನಿಕರಿಗೆ ಎಲ್ಲಿ ಹೋದರೂ ಸುಖವೆಂಬುದೇ ಲಭಿಸುತ್ತಿಲ್ಲ."

ಸಂಜಯನು ಹೇಳುತ್ತಾನೆ:

"ಮಹಾರಾಜ! ಧನಂಜಯನು ಶ್ರೀಕೃಷ್ಣನಿಂದ ಈ ವಿಷಯಗಳನ್ನು ಕೇಳಿ, ಭೀಮಸೇನನ ಸುದುಷ್ಕರವಾದ ಆ ಸಾಹಸಕರ್ಮವನ್ನೂ ಪ್ರತ್ಯಕ್ಷವಾಗಿಯೇ ಕಂಡು, ಉಳಿದ ಶತ್ರುಸೈನಿಕರನ್ನು ನಿಶಿತವಾದ ಬಾಣಗಳಿಂದ ಧ್ವಂಸಮಾಡಿದನು. ಅರ್ಜುನನಿಂದ ಪೀಡಿಸಲ್ಪಡುತ್ತಿದ್ದ ಮಹಾಬಲರಾದ ಸಂಶಪ್ತಕರು ಹತೋತ್ಸಾಹರಾಗಿ ಭಯಗೊಂಡು ದಿಕ್ಕಾಪಾಲಾಗಿ ಓಡಿಹೋದರು. ಅವರಲ್ಲಿ ಅನೇಕರು ಇಂದ್ರನ ಅತಿಥಿಗಳಾಗಿ ಶೋಕರಹಿತರೂ ಆದರು. (ಮೃತರಾಗಿ ಸ್ವರ್ಗವನ್ನು ಸೇರಿದರು.) ಪುರುಷಸಿಂಹನಾದ ಪಾರ್ಥನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ದುರ್ಯೋಧನನ ಗಜಾಶ್ವ-ರಥ-ಪದಾತಿಗಳೆಂಬ ನಾಲ್ಕು ಬಗೆಯ ಸೈನ್ಯಗಳನ್ನೂ ಸಂಹರಿಸಿದನು."

೬೦ನೆಯ ಅಧ್ಯಾಯವು ಮುಗಿಯಿತು.

## ಕರ್ಣನು ಶಿಖಂಡಿಯನ್ನು ಪರಾಜಯಗೊಳಿಸಿದುದು: ಧೃಷ್ಟದ್ಯುಮ್ನ-ದುಃಶಾಸನರ ಯುದ್ಧ: ವೃಷಸೇನ-ನಕುಲರ ಯುದ್ಧ: ಸಹದೇವನು ಉಲೂಕನನ್ನೂ, ಸಾತ್ಯಕಿಯು ಶಕುನಿಯನ್ನೂ ಪರಾಜಯಗೊಳಿಸಿದುದು: ಕೃಪರು ಯುಧಾಮನ್ಯುವನ್ನೂ, ಕೃತವರ್ಮನು ಉತ್ತಮೌಜಸನನ್ನೂ ಪರಾಜಯಗೊಳಿಸಿದುದು: ಭೀಮನಿಂದ ದುರ್ಯೋಧನನ ಸೋಲು: ಗಜಸೇನೆಯ ಸಂಹಾರ ಮತ್ತು ಪಲಾಯನ

ಪಾರ್ಥನು ದುರ್ಯೋಧನನ ಚತುರಂಗಬಲವನ್ನೂ ಧ್ವಂಸಮಾಡಿದನೆಂಬ ವಾರ್ತೆಯನ್ನು ಕೇಳಿ ಧೃತರಾಷ್ಟ್ರನು ನಿಟ್ಟುಸಿರುಬಿಡುತ್ತಾ ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ನೀನು ಹೇಳಿದಂತೆ ಭೀಮಸೇನ-ಯುಧಿಷ್ಠಿರರು ಯುದ್ಧಕ್ಕೆ ಹಿಂದಿರುಗಿಬಂದರು. ಪಾಂಡವ-ಸೃಂಜಯರು ನನ್ನ ಸೈನ್ಯವನ್ನು ಧ್ವಂಸಮಾಡಿದರು. ನನ್ನ ಕಡೆಯ ಅಳಿದುಳಿದ ಸೈನಿಕರು ಪಲಾಯನ ಮಾಡತೊಡಗಿದರು. ನನ್ನ ಕಡೆಯ ಸೈನಿಕರಿಗೆ ಪದೇ-ಪದೇ ಪಾಂಡವರ ಕಡೆಯಿಂದ ಪ್ರಹಾರಗಳು ಬೀಳುತ್ತಿದ್ದುದರಿಂದ ವಿಜಯದ ಸಂತೋಷವೆಂಬುದೇ ಅವರಲ್ಲಿರಲಿಲ್ಲ. ಆನಂದರಹಿತರಾಗಿಯೂ ವಿಷಣ್ಣರಾಗಿಯೂ ಇದ್ದರು. ಆ ಸಮಯದಲ್ಲಿ ಕುರುಗಳೇನು ಮಾಡಿದರೆಂಬುದನ್ನು ಹೇಳು."

"ಮಹಾರಾಜ! ಮಹಾಬಾಹುವಾದ ಭೀಮಸೇನನನ್ನು ನೋಡಿದೊಡನೆಯೇ ಕ್ರೋಧದಿಂದ ರಕ್ತಾಕ್ಷನಾಗಿದ್ದ ಪ್ರತಾಪವಂತನಾದ ಕರ್ಣನು ಭೀಮನನ್ನು ಆಕ್ರಮಿಸಿದನು. ಭೀಮಸೇನನ ಭಯದಿಂದ ಪರಾಙ್ಮುಖವಾಗುತ್ತಿದ್ದ ನಿನ್ನ ಸೈನ್ಯವನ್ನು ನೋಡಿ ಬಲಿಷ್ಠನಾದ ಕರ್ಣನು ಬಹಳ ಪ್ರಯತ್ನದಿಂದ ಆ ಸೈನಿಕರು ಪಲಾಯನಮಾಡದಂತೆಯೂ, ಪುನಃ ಸಮಸ್ಥಿತಿಯಲ್ಲಿ ನಿಲ್ಲುವಂತೆಯೂ ಮಾಡಿದನು. ಕರ್ಣನು ನಿನ್ನ ಮಗನ ಸೈನ್ಯವನ್ನು ಪುನಃ ಯುದ್ಧಮಾಡಲು ವ್ಯವಸ್ಥೆಗೊಳಿಸಿ ಯುದ್ಧದುರ್ಮದರಾಗಿದ್ದ ಪಾಂಡವ

ರನ್ನು ಆಕ್ರಮಿಸಲು ಧಾವಿಸಿದನು. ಪಾಂಡವಮಹಾರಥರು ತಮ್ಮ ಧನುಸ್ಸುಗಳನ್ನು ಹಿಂದಕ್ಕೂ ಮುಂದಕ್ಕೂ ಎಳೆಯುತ್ತಾ (ಒದರುತ್ತಾ) ಬಾಣಗಳನ್ನು ಸುರಿಸುತ್ತಾ ಕರ್ಣನನ್ನು ಎದುರಿಸಿದರು. ಸಂಕ್ರುದ್ಧರಾದ, ವಿಜಯೋಲ್ಲಸಿತರಾದ ಭೀಮಸೇನ, ಸಾತ್ಯಕಿ, ಶಿಖಂಡಿ, ಜನಮೇಜಯ, ಬಲಿಷ್ಠನಾದ ಧೃಷ್ಟದ್ಯುಮ್ನ ಮತ್ತು ಪ್ರಭದ್ರಕರು–ಇವರೆಲ್ಲರೂ ನಿನ್ನ ಸೈನ್ಯವನ್ನು ಸಂಹರಿಸುವ ಇಚ್ಛೆಯಿಂದ ಎಲ್ಲ ಕಡೆಗಳಿಂದಲೂ ಮುತ್ತಿಗೆ ಹಾಕಿದರು. ಅದೇ ರೀತಿಯಲ್ಲಿ ನಿನ್ನ ಕಡೆಯ ಮಹಾರಥರೂ ಪಾಂಡವರ ಕಡೆಯ ಸೈನ್ಯವನ್ನು ಸಂಹರಿಸಬೇಕೆನ್ನುವ ಇಚ್ಛೆಯಿಂದ ಬಹಳ ವೇಗವಾಗಿ ಮುಂದೆ ಹೋದರು. ರಥಗಳಿಂದಲೂ, ಆನೆ-ಕುದುರೆ-ಕಾಲಾಳುಗಳಿಂದಲೂ, ಧ್ವಜಗಳಿಂದಲೂ ಸಮಾಕುಲವಾಗಿದ್ದ ಆ ಸೈನ್ಯವು ನೋಡಲು ಪರಮಾದ್ಭುತವಾಗಿ ಕಾಣುತ್ತಿದ್ದಿತು.

ಮಹಾರಾಜ! ಆ ಸಮಯದಲ್ಲಿ ಶಿಖಂಡಿಯು ಕರ್ಣನನ್ನು ಆಕ್ರಮಿಸಿದನು. ಮಹಾಸೈನ್ಯದಿಂದ ಪರಿವೃತನಾಗಿದ್ದ ನಿನ್ನ ಮಗ ದುಃಶಾಸನನನ್ನು ಧೃಷ್ಟದ್ಯುಮ್ನನು ಆಕ್ರಮಿಸಿದನು. ನಕುಲನು ವೃಷಸೇನನನ್ನೂ, ಯುಧಿಷ್ಠಿರನು ಚಿತ್ರಸೇನನನ್ನೂ ಎದುರಿಸಿ ಯುದ್ಧಮಾಡಲು ತೊಡಗಿದರು. ಆ ಮಹಾಯುದ್ಧದಲ್ಲಿ ಸಹದೇವನು ಉಲೂಕನನ್ನು ಆಕ್ರಮಿಸಿದನು. ಸಾತ್ಯಕಿಯು ಶಕುನಿಯನ್ನೂ, ದ್ರೌಪದಿಯ ಮಕ್ಕಳು ಕೌರವ ರಾಜಕುಮಾರರನ್ನೂ ಎದುರಿಸಿ ಯುದ್ಧಮಾಡಲು ತೊಡಗಿದರು. ಪ್ರಯತ್ನಶೀಲನಾದ, ಮಹಾರಥನಾದ ಅಶ್ವತ್ಥಾಮನು ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದನು. ಮಹಾಧನುಷ್ಮಂತನಾದ ಯುಧಾಮನ್ಯುವನ್ನು ಕೃಪರು ಆಕ್ರಮಿಸಿದರು. ಮಹಾಬಲಿಷ್ಠನಾದ ಕೃತವರ್ಮನು ಉತ್ತಮೌಜಸನನ್ನು ಆಕ್ರಮಿಸಿದನು. ಭೀಮಸೇನನು ಎಲ್ಲ ಕುರುಗಳನ್ನೂ, ಸೇನಾಸಹಿತರಾದ ನಿನ್ನ ಮಕ್ಕಳನ್ನೂ ಏಕಾಕಿಯಾಗಿಯೇ ತಡೆದು ನಿಲ್ಲಿಸಿದನು.

ಯಾವ ವಿಧವಾದ ಭಯವೂ ಇಲ್ಲದವನಂತೆ ನಿರಾತಂಕನಾಗಿ ರಣರಂಗದಲ್ಲಿ ಬಾಣಗಳ ಮಳೆಗರೆಯುತ್ತಾ ಸಂಚರಿಸುತ್ತಿದ್ದ ಕರ್ಣನನ್ನು ಭೀಷ್ಮರ ಹಂತಕನಾದ ಶಿಖಂಡಿಯು ಬಾಣಗಳ ಪ್ರಹಾರಗಳಿಂದ ತಡೆದು ನಿಲ್ಲಿಸಿದನು. ಶಿಖಂಡಿಯ ಬಾಣಗಳ ಪ್ರಹಾರದಿಂದ ತಡೆಯಲ್ಪಟ್ಟ ಕರ್ಣನು ಬಹಳವಾಗಿ

ಕೋಪಗೊಂಡನು. ಅವನ ತುಟಿಗಳು ಅದುರತೊಡಗಿದುವು. ಒಡನೆಯೇ ಮೂರು ಬಾಣಗಳಿಂದ ಶಿಖಂಡಿಯ ಹುಬ್ಬುಗಳ ನಡುವೆ ಪ್ರಹರಿಸಿದನು. ಮೇಲಕ್ಕೆದ್ದಿರುವ ಮೂರು ಶಿಖರಗಳಿಂದ ಕೂಡಿರುವ ರಜತಪರ್ವತವು ಶೋಭಾಯಮಾನವಾಗಿ ಕಾಣುವಂತೆ–ಕರ್ಣನು ಬಿಟ್ಟ ಮೂರು ಬಾಣಗಳನ್ನು ಹಣೆಯಲ್ಲಿ ಧಾರಣೆಮಾಡಿಕೊಂಡಿದ್ದ ಶಿಖಂಡಿಯು ಬಹಳವಾಗಿ



ಶೋಭಿಸಿದನು. ಕರ್ಣನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಮಹಾಧನುಷ್ಮಂತನಾದ ಶಿಖಂಡಿಯು ಕರ್ಣನನ್ನು ನಿಶಿತವಾದ ತೊಂಬತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಮಹಾರಥನಾದ ಕರ್ಣನೂ ಶಿಖಂಡಿಯ ರಥದ ಕುದುರೆಗಳನ್ನು ಸಂಹರಿಸಿ, ಅನಂತರ ಮೂರು ಬಾಣಗಳಿಂದ ಅವನ ಸಾರಥಿಯನ್ನೂ ಯಮಲೋಕಕ್ಕೆ ಕಳುಹಿಸಿಕೊಟ್ಟನು.

ಪುನಃ ಕ್ಷುರಪ್ರವೆಂಬ ಮತ್ತೊಂದು ಬಾಣದಿಂದ ಶಿಖಂಡಿಯ ರಥದಲ್ಲಿದ್ದ ಧ್ವಜವನ್ನೂ ಧ್ವಂಸಮಾಡಿದನು. ಕುದುರೆಗಳನ್ನೂ ಮತ್ತು ಸಾರಥಿಯನ್ನೂ ಕಳೆದುಕೊಂಡ ಮಹಾರಥನಾದ ಶತ್ರುತಾಪನನಾದ ಶಿಖಂಡಿಯು ಸಂಕ್ರುದ್ಧನಾಗಿ ಮರುಕ್ಷಣದಲ್ಲಿಯೇ ರಥದಿಂದಿಳಿದು ಕರ್ಣನ ಮೇಲೆ ಶಕ್ತ್ಯಾಯುಧವನ್ನು ರಭಸದಿಂದೆಸೆದನು. ಕರ್ಣನು ತನ್ನ ಕಡೆಗೆ ರಭಸದಿಂದ ಬರುತ್ತಿದ್ದ ಶಕ್ತ್ಯಾಯುಧವನ್ನು ಮೂರು ಬಾಣಗಳಿಂದ ಕತ್ತರಿಸಿದುದಲ್ಲದೇ ಶಿಖಂಡಿಯನ್ನೂ ನಿಶಿತವಾದ ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಕರ್ಣನ ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡ ನರೋತ್ತಮನಾದ ಶಿಖಂಡಿಯು ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ತಪ್ಪಿಸಿಕೊಳ್ಳುವ ಸಲುವಾಗಿ ಅವನೆದುರಿನಲ್ಲಿ ನಿಲ್ಲಲಾಗದೇ ಬಹಳ ಬೇಗ ಪಲಾಯನಮಾಡಿದನು. ಮಹಾಬಲಿಷ್ಠನಾದ ವಾಯುವು (ಬಿರುಗಾಳಿಯು) ಹತ್ತಿಯ ರಾಶಿಯನ್ನು ಕ್ಷಣಮಾತ್ರದಲ್ಲಿ ಹಾರಿಸಿ ಬಿಡುವಂತೆ–ಕರ್ಣನು ಪಾಂಡವರ ಸೈನ್ಯವನ್ನು ಧ್ವಂಸಮಾಡಲು ಉಪಕ್ರಮಿಸಿದನು.

ಮತ್ತೊಂದು ವಿಭಾಗದಲ್ಲಿ ಧೃಷ್ಟದ್ಯುಮ್ನ-ದುಃಶಾಸನರು ಸುಘೋರ ವಾದ ಯುದ್ಧದಲ್ಲಿ ತೊಡಗಿದ್ದರು. ನಿನ್ನ ಮಗನ ಬಾಣಗಳಿಂದ ಪೀಡಿತ ನಾದ ಧೃಷ್ಟದ್ಯುಮ್ನನು ಕುಪಿತನಾಗಿ ದುಃಶಾಸನನ ವಕ್ಷಃಸ್ಥಳವನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ದುಃಶಾಸನನು ಧೃಷ್ಟದ್ಯುಮ್ನನ ಎಡತೋಳನ್ನು ಭಲ್ಲದಿಂದ ಪ್ರಹರಿಸಿದನು. ಬಗ್ಗಿದ ಗಿಣ್ಣೆ ನಿಂದ ಕೂಡಿದ್ದ ಮತ್ತು ಚಿನ್ನದ ಮೂಲಭಾಗವುಳ್ಳದ್ದಾಗಿದ್ದ ದುಃಶಾಸನ ಪ್ರಮುಕ್ತವಾದ ಆ ಭಲ್ಲದಿಂದ ಬಹಳವಾಗಿ ಪೀಡಿತನಾದ ಧೃಷ್ಟದ್ಯುಮ್ನನು ಅತ್ಯಂತ ಕುಪಿತನಾಗಿ ಘೋರವಾದ ಬಾಣವೊಂದನ್ನು ದುಃಶಾಸನನ ಮೇಲೆ ಪ್ರಯೋಗಿಸಿದನು . ಧೃಷ್ಟದ್ಯುಮ್ನನಿಂದ ಬಿಡಲ್ಪಟ್ಟು ಮಹಾವೇಗದೊಡನೆ ತನ್ನ ಮೇಲೆ ಬೀಳುವುದರಲ್ಲಿದ್ದ ಮಹಾಭಯಂಕರವಾದ ಆ ಬಾಣವನ್ನು ನಿನ್ನ ಮಗನು ಮೂರೇ ಬಾಣಗಳಿಂದ ಕತ್ತರಿಸಿಹಾಕಿದನು. ಬಳಿಕ ದುಃಶಾಸ ನನು ಸುವರ್ಣಭೂಷಿತವಾಗಿದ್ದ ಇನ್ನೂ ಹದಿನೇಳು ಭಲ್ಲಗಳಿಂದ ಧೃಷ್ಟ ದ್ಯುಮ್ನನ ತೋಳುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿದನು. ಅದರಿಂದ ಬಹಳವಾಗಿ ಕೋಪಗೊಂಡ ಪಾರ್ಷತನು ಸುತೀಕ್ಷ್ಣವಾದ ಕ್ಷುರಪ್ರ

ದಿಂದ ನಿನ್ನ ಮಗನ ಧನುಸ್ಸನ್ನು ಕತ್ತರಿಸಿದನು. ಅದನ್ನು ನೋಡಿದ ಪ್ರೇಕ್ಷಕರು ಗಟ್ಟಿಯಾಗಿ ಕೂಗಿಕೊಂಡರು. ಅನಂತರ ನಿನ್ನ ಮಗನು ಖಿನ್ನನಾಗದೇ ನಗುತ್ತಿರುವನೋ ಎಂಬಂತೆ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಬಾಣಗಳ ಸಮೂಹದಿಂದ ಧೃಷ್ಟದ್ಯುಮ್ನನನ್ನು ಎಲ್ಲ ಕಡೆಗಳಿಂದಲೂ ಪ್ರತಿರೋಧಿಸಿದನು. ಮಹಾತ್ಮನಾದ ನಿನ್ನ ಮಗನ ಆ ಅದ್ಭುತಪರಾಕ್ರಮವನ್ನು ನೋಡಿ ಯೋಧರೂ, ಸಿದ್ಧರೂ, ಅಪ್ಸರೆಯರೂ ವಿಸ್ಮಿತರಾದರು. ಸಿಂಹದಿಂದ ಆನೆಯು ನಿರೋಧಿಸಲ್ಪಡುವಂತೆ–ದುಃಶಾಸನನಿಂದ ನಿರೋಧಿಸಲ್ಪಟ್ಟು, ಅವನ ಬಾಣಗಳ ಸಮೂಹಗಳಿಂದ ತಪ್ಪಿಸಿಕೊಳ್ಳಲು ಬಹಳವಾಗಿ ಪ್ರಯತ್ನಿಸುತ್ತಿದ್ದ ಧೃಷ್ಟದ್ಯುಮ್ನನು ಆ ಸಮಯದಲ್ಲಿ ಯಾರಿಗೂ ಕಾಣಿಸಲೇ ಇಲ್ಲ.

ಪಾಂಡವಾಗ್ರಜನೇ! ಬಳಿಕ ರಥ-ಗಜಾಶ್ವಗಳಿಂದ ಕೂಡಿದ ಪಾಂಚಾಲರು ತಮ್ಮ ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ರಕ್ಷಿಸುವ ಇಚ್ಛೆಯಿಂದ ನಿನ್ನ ಮಗನನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿದರು. ಅನಂತರ ನಿನ್ನ ಕಡೆಯ ಸೈನಿಕರಿಗೂ, ಶತ್ರುಪಕ್ಷದ ಸೈನಿಕರಿಗೂ ಮತ್ತು ಸಮಸ್ತಪ್ರಾಣಿಗಳಿಗೂ ಭಯವನ್ನುಂಟುಮಾಡುವ ಘೋರತರವಾದ ಯುದ್ಧವು ಪ್ರಾರಂಭವಾಯಿತು.

ಕುರುಕ್ಷೇತ್ರದ ಮತ್ತೊಂದು ವಿಭಾಗದಲ್ಲಿ ನಕುಲ-ವೃಷಸೇನರು ಅತಿಘೋರವಾದ ಯುದ್ಧದಲ್ಲಿ ತೊಡಗಿದ್ದರು. ವೃಷಸೇನನು ತಂದೆಯಾದ ಕರ್ಣನ ಸಮೀಪದಲ್ಲಿ ನಿಂತು ಲೋಹಮಯವಾದ ಐದು ಬಾಣಗಳಿಂದ ನಕುಲನನ್ನು ಪ್ರಹರಿಸಿ ಪುನಃ ಮೂರು ಬಾಣಗಳಿಂದ ಅವನನ್ನು ಗಾಯ ಗೊಳಿಸಿದನು. ಅದಕ್ಕೆ ಪ್ರತಿಯಾಗಿ ಶೂರನಾದ ನಕುಲನು ನಗು-ನಗುತ್ತಲೇ ಸುತೀಕ್ಷ್ಣವಾದ ನಾರಾಚದಿಂದ ವೃಷಸೇನನನ್ನು ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಮಹಾಬಲಿಷ್ಠನಾದ ಶತ್ರುವಿನಿಂದ ಬಹಳವಾಗಿ ಗಾಯಗೊಂಡ ವೃಷಸೇನನು ತನ್ನ ಶತ್ರುವನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ನಕುಲನೂ ವೃಷಸೇನನನ್ನು ಐದು ಬಾಣಗಳಿಂದ ಪ್ರಹರಿಸಿದನು. ಬಳಿಕ ಪುರುಷಶ್ರೇಷ್ಠರಾದ ನಕುಲ-ವೃಷಸೇನರಿಬ್ಬರೂ ಸಾವಿರಾರು ಬಾಣಗಳನ್ನು ಸತತವಾಗಿ ಬಿಡುತ್ತಾ

ಒಬ್ಬರು ಮತ್ತೊಬ್ಬರನ್ನು ಬಾಣಗಳಿಂದಲೇ ಮುಚ್ಚಿಬಿಟ್ಟರು. ವೃಷಸೇನನನ್ನು ಕಾಣದ ಕೌರವಸೈನ್ಯವು ಭಗ್ನವಾಗಿಹೋಯಿತು. ಕರ್ಣನು ಕೌರವಸೈನ್ಯವು ಪಲಾಯನಮಾಡುತ್ತಿರುವುದನ್ನು ಕಂಡು ಅದರ ಹಿಂದೆಯೇ ತಾನೂ ಹೋಗಿ ಓಡಿಹೋಗುತ್ತಿದ್ದವರನ್ನು ಬಲಾತ್ಕಾರಪೂರ್ವಕವಾಗಿ ತಡೆದು ನಿಲ್ಲಿಸಿದನು. ಕರ್ಣನು ಹೊರಟುಹೋಗಲಾಗಿ ನಕುಲನು ಕೌರವಸೈನ್ಯದೆಡೆಗೆ ನುಗ್ಗಿದನು. ಕರ್ಣನ ಮಗನಾದ ವೃಷಸೇನನೂ ನಕುಲನನ್ನು ಬಿಟ್ಟು ಅತ್ಯಂತತ್ವರೆಯಿಂದ ಕರ್ಣನ ರಥವನ್ನೇ ಹಿಂಬಾಲಿಸಿ ಹೋಗಿ ಅವನ ರಥದ ಚಕ್ರಗಳ ರಕ್ಷಣೆಯಲ್ಲಿಯೇ ನಿರತನಾದನು.

ಮಹಾರಾಜ! ಉಲೂಕನು ಸಹದೇವನೊಡನೆ ಯುದ್ಧದಲ್ಲಿ ತೊಡಗಿದ್ದನೆಂದು ಈ ಮೊದಲೇ ಹೇಳಿದ್ದೆನಲ್ಲವೇ? ಸಹದೇವನಿಂದ ತಡೆಯಲ್ಪಟ್ಟ ಉಲೂಕನು ಮಹಾಕೋಪದಿಂದ ಯುದ್ಧಮಾಡುತ್ತಿದ್ದನು. ಪ್ರತಾಪವಂತನಾದ ಸಹದೇವನು ಉಲೂಕನ ರಥದ ನಾಲ್ಕು ಕುದುರೆಗಳನ್ನು ಸಂಹರಿಸಿ ಅವನ ಸಾರಥಿಯನ್ನೂ ಯಮಾಲಯಕ್ಕೆ ಕಳುಹಿಸಿಕೊಟ್ಟನು. ತಂದೆಗೆ ಆನಂದದಾಯಕನಾದ ಉಲೂಕನು ಒಡನೆಯೇ ರಥದಿಂದ ಕೆಳಕ್ಕೆ ಧುಮುಕಿ ಓಡಿಹೋಗಿ ತ್ರಿಗರ್ತರ ಮಹಾಸೈನ್ಯದೊಳಗೆ ನುಸುಳಿಕೊಂಡನು.

ಮತ್ತೊಂದು ವಿಭಾಗದಲ್ಲಿ ಸಾತ್ಯಕಿಗೂ, ಶಕುನಿಗೂ ಯುದ್ಧವಾಗುತ್ತಿದ್ದಿತು. ಸಾತ್ಯಕಿಯು ಶಕುನಿಯನ್ನು ನಿಶಿತವಾದ ಇಪ್ಪತ್ತು ಬಾಣಗಳಿಂದ ಪ್ರಹರಿಸಿ ನಸುನಗುತ್ತಾ ಭಲ್ಲವೊಂದರಿಂದ ಶಕುನಿಯ ಧ್ವಜವನ್ನೂ ಕತ್ತರಿಸಿ ಹಾಕಿದನು. ಅದರಿಂದ ಅತಿಕುಪಿತನಾದ ಪ್ರತಾಪವಂತನಾದ ಸೌಬಲನು ನಿಶಿತವಾದ ಬಾಣದಿಂದ ಸಾತ್ಯಕಿಯ ಕವಚವನ್ನೂ ಮತ್ತು ಸುವರ್ಣಮಯವಾದ ಅವನ ಧ್ವಜವನ್ನೂ ಕತ್ತರಿಸಿದನು. ಅದೇ ರೀತಿಯಲ್ಲಿ ಸಾತ್ಯಕಿಯೂ ನಿಶಿತವಾದ ಬಾಣಗಳಿಂದ ಶಕುನಿಯನ್ನು ಪ್ರಹರಿಸಿ ಅವನ ಸಾರಥಿಯನ್ನೂ ಮೂರು ಬಾಣಗಳಿಂದ ಗಾಯಗೊಳಿಸಿದನು. ಬಳಿಕ ಸಾತ್ಯಕಿಯು ಅತ್ಯಂತತ್ವರೆಯಿಂದ ಬಾಣಗಳನ್ನು ಪ್ರಯೋಗಿಸುತ್ತಾ ಶಕುನಿಯ ರಥದ ಕುದುರೆಗಳನ್ನೂ ಸಂಹರಿಸಿದನು. ಕುದುರೆಗಳನ್ನು ಕಳೆದುಕೊಂಡ ಶಕುನಿಯು ಒಡನೆಯೇ ರಥದಿಂದ ಕೆಳಕ್ಕೆ ಧುಮುಕಿ ಬಹಳ ಬೇಗನೆ ಮಹಾತ್ಮನಾದ ಉಲೂಕನ ರಥವನ್ನು ಹತ್ತಿ ಕುಳಿತನು. ಒಡನೆಯೇ

ಉಲೂಕನು ಆಹವಶೋಭಿಯಾದ ಸಾತ್ಯಕಿಯ ಸಮೀಪದಲ್ಲಿದ್ದ ತನ್ನ ರಥವನ್ನು ಬಹಳ ದೂರಕ್ಕೆ ಒಯ್ದುಬಿಟ್ಟನು. ಅನಂತರ ಸಾತ್ಯಕಿಯು ನಿನ್ನ ಕಡೆಯ ಸೈನ್ಯದ ಮೇಲೆ ಭಯಂಕರವಾದ ದಾಳಿಯನ್ನು ನಡೆಸಿದನು. ಆ ವಿಭಾಗದಲ್ಲಿದ್ದ ನಿನ್ನ ಸೈನ್ಯವೂ ಭಗ್ನವಾಗಿ ಹೋಯಿತು.

ಮಹಾರಾಜ! ಸಾತ್ಯಕಿಯ ಬಾಣಗಳಿಂದ ಕ್ಷತ-ವಿಕ್ಷತವಾದ ನಿನ್ನ ಸೈನ್ಯವು ಬಹಳ ಬೇಗ ಹತ್ತು ದಿಕ್ಕುಗಳಿಗೂ ಓಡಿಹೋಯಿತು. ಹೀಗೆ ಓಡಿಹೋಗುತ್ತಿರುವಾಗ ನಿನ್ನ ಸೈನಿಕರು ಪ್ರಾಣಗಳನ್ನು ಕಳೆದುಕೊಂಡವರಂತೆ ಮುಗ್ಗರಿಸಿ ಭೂಮಿಯ ಮೇಲೆ ಬೀಳುತ್ತಿದ್ದರು.

ಕೌರವೇಶ್ವರ! ಆ ಯುದ್ಧಸಮಯದಲ್ಲಿ ನಿನ್ನ ಹಿರಿಯ ಮಗನಾದ ದುರ್ಯೋಧನನು ಭೀಮಸೇನನನ್ನು ಬಾಣಗಳಿಂದ ತಡೆದು ನಿಲ್ಲಿಸಿದನು. ಲೋಕೇಶ್ವರನಾದ ನಿನ್ನ ಮಗನನ್ನು ಭೀಮಸೇನನು ಮುಹೂರ್ತಮಾತ್ರದಲ್ಲಿ ಅಶ್ವ-ಸೂತ-ರಥ-ಧ್ವಜಗಳಿಂದ ವಿಹೀನನನ್ನಾಗಿ ಮಾಡಿದನು. ಅದನ್ನು ನೋಡಿದ ಪ್ರೇಕ್ಷಕರು ಭೀಮಸೇನನ ಹಸ್ತಲಾಘವವನ್ನು ನೋಡಿ ಪರಮಹೃಷ್ಟರಾದರು. ಬಳಿಕ ದುರ್ಯೋಧನನು ಭೀಮಸೇನನ ದೃಷ್ಟಿಪಥದಿಂದ ಅದೃಶ್ಯನಾದನು. ಒಡನೆಯೇ ಎಲ್ಲ ಕುರುಸೈನಿಕರೂ ಭೀಮಸೇನನನ್ನು ಆಕ್ರಮಿಸಿದರು. ವಾಯುಪುತ್ರನನ್ನು ಸಂಹರಿಸಲು ಇಚ್ಛಿಸಿದ್ದ ನಿನ್ನ ಸೈನಿಕರ ಮಧ್ಯದಲ್ಲಿ ದೊಡ್ಡ ಕೋಲಾಹಲವುಂಟಾಯಿತು.

ರಣಾಂಗಣದ ಮತ್ತೊಂದು ವಿಭಾಗದಲ್ಲಿ ಕೃಪರಿಗೂ–ಯುಧಾಮನ್ಯುವಿಗೂ ಘೋರಯುದ್ಧವು ನಡೆಯುತ್ತಿದ್ದಿತು. ಯುಧಾಮನ್ಯುವು ಕೃಪರನ್ನು ಬಾಣಗಳಿಂದ ಪ್ರಹರಿಸಿ ಮರುಕ್ಷಣದಲ್ಲಿಯೇ ಅವರ ಧನುಸ್ಸನ್ನೂ, ಕತ್ತರಿಸಿದನು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಕೃಪರು ಒಡನೆಯೇ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಯುಧಾಮನ್ಯುವಿನ ಧ್ವಜವನ್ನೂ, ಸೂತನನ್ನೂ, ಛತ್ರವನ್ನೂ ಭೂಮಿಗೆ ಕೆಡವಿದರು. ಬಳಿಕ ಮಹಾರಥನಾದ ಯುಧಾಮನ್ಯುವು ಸೂತನಿಂದ ರಹಿತವಾದ ರಥದ ಮೂಲಕವಾಗಿಯೇ ಪಲಾಯನ ಮಾಡಿದನು.

ಕುರುಕ್ಷೇತ್ರದ ಮತ್ತೊಂದು ವಿಭಾಗದಲ್ಲಿ ಉತ್ತಮೌಜಸನು ಭಯಂಕರಪರಾಕ್ರಮನಾದ ಭಯಂಕರಸ್ವರೂಪನಾದ ಹಾರ್ದಿಕ್ಯನನ್ನು–ಕಾಳಮೇಘವು ಜಲವೃಷ್ಟಿಯಿಂದ ಪರ್ವತವನ್ನು ಮುಚ್ಚುವಂತೆ–ಬಾಣ ಗಳಿಂದ ಬಹಳ ಬೇಗ ಮುಚ್ಚಿದನು. ಆ ಇಬ್ಬರ ನಡುವೆ ನಡೆಯುತ್ತಿದ್ದ ಯುದ್ಧವು ಬಹಳ ಭಯಂಕರವಾಗಿದ್ದಿತು. ಅಂತಹ ಯುದ್ಧವನ್ನು ನಾನು ಈ ಹಿಂದೆ ಕಂಡಿರಲೇ ಇಲ್ಲ. ಹೀಗೆಯೇ ಅವರಿಬ್ಬರೂ ಯುದ್ಧಮಾಡುತ್ತಿದ್ದಾಗ ಕೃತವರ್ಮನು ಉತ್ತಮೌಜಸನನ್ನು ಅವನ ವಕ್ಷಃಸ್ಥಳದಲ್ಲಿ ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಅದರಿಂದ ಬಹಳವಾಗಿ ಗಾಯಗೊಂಡ ಉತ್ತಮೌಜಸನು ರಥದಲ್ಲಿ ಹಿಂಭಾಗಕ್ಕೆ ಸರಿದು ಕುಳಿತನು. ಸಾರಥಿಯು ರಥಿಗಳಲ್ಲಿ ಶ್ರೇಷ್ಠನಾದ ಉತ್ತಮೌಜಸನನ್ನು ಬಹಳ ದೂರಕ್ಕೆ ಒಯ್ದುಬಿಟ್ಟನು. ಅನಂತರ ಎಲ್ಲ ಕುರುಸೈನಿಕರೂ ಭೀಮಸೇನನ ಕಡೆಗೆ ಧಾವಿಸಿದರು.

ಆ ಸಮಯದಲ್ಲಿ ದುಃಶಾಸನ ಮತ್ತು ಸೌಬಲರು ಗಜಸೈನ್ಯದಿಂದ ಕೂಡಿದವರಾಗಿ ಭೀಮಸೇನನನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿ ಕ್ಷುದ್ರಕಗಳೆಂಬ ಬಾಣಗಳಿಂದ ಪ್ರಹರಿಸಿದರು. ನಾನು ಈ ಹಿಂದೆ ಹೇಳಿ ದಂತೆ ಆ ಸಮಯದಲ್ಲಿ ಭೀಮಸೇನನು ಅಸಹನಶೀಲನಾದ ದುರ್ಯೋಧನ ನನ್ನು ನೂರಾರು ಬಾಣಗಳಿಂದ ಪ್ರಹರಿಸಿ ಅವನನ್ನು ಪರಾಙ್ಮುಖಗೊಳಿಸಿ ನಿನ್ನ ಕಡೆಯ ಗಜಸೈನ್ಯದ ಮೇಲೆ ಆಕ್ರಮಣ ನಡೆಸುತ್ತಿದ್ದನು. ದುಃಶಾಸನ-ಸೌಬಲರಿಂದ ಕೂಡಿದ ಗಜಸೈನ್ಯವೂ ಆ ಸಮಯದಲ್ಲಿ ತನ್ನ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ಅತ್ಯಂತಕುಪಿತನಾದ ವೃಕೋದರನು ದಿವ್ಯಾಸ್ತ್ರವನ್ನು ಪ್ರಕಟಿಸಿದನು. ಇಂದ್ರನು ವಜ್ರಾಯುಧ ದಿಂದ ಅಸುರರನ್ನು ಪ್ರಹರಿಸುತ್ತಿದ್ದಂತೆ–ಭೀಮಸೇನನು ಆನೆಗಳಿಂದಲೇ ಆನೆಗಳನ್ನು ಪ್ರಹರಿಸಿ ಸಂಹರಿಸುತ್ತಿದ್ದನು. ವೃಕೋದರನು ಈ ರೀತಿಯಲ್ಲಿ ಆನೆಗಳನ್ನು ಸಂಹರಿಸುತ್ತಾ–ಮಿಡತೆಗಳಿಂದ ವೃಕ್ಷವನ್ನು ಆಚ್ಛಾದಿಸುವಂತೆ– ಬಾಣಗಳ ಸಮೂಹಗಳಿಂದ ಆಕಾಶವನ್ನೇ ಮುಚ್ಚಿಬಿಟ್ಟನು. ಚಂಡಮಾರುತವು ಮೇಘಗಳ ಸಮೂಹಗಳನ್ನು ವಿಧ್ವಂಸಗೊಳಿಸುವಂತೆ–ಗುಂಪು-ಗುಂಪುಗಳಲ್ಲಿದ್ದ ಸಾವಿರಾರು ಆನೆಗಳನ್ನು ಭೀಮಸೇನನು ಬಹಳಬೇಗ ಧ್ವಂಸ

ಮಾಡಿದನು. ಸುವರ್ಣಮಯವಾದ ಮತ್ತು ಮಣಿಮಯವಾದ ಬಲೆಗಳಿಂದ ಆಚ್ಛಾದಿತವಾಗಿದ್ದ ಸಲಗಗಳು ಆ ಯುದ್ಧಸಮಯದಲ್ಲಿ ಮಿಂಚಿನಿಂದ ಕೂಡಿದ ಮೋಡಗಳಂತೆಯೇ ಬಹಳವಾಗಿ ಪ್ರಕಾಶಿಸಿದುವು. ಭೀಮನಿಂದ ಪ್ರಹೃತವಾದ ಹಲವು ಆನೆಗಳು ಪಲಾಯನಮಾಡಿದುವು. ಅವುಗಳಲ್ಲಿ ಕೆಲವು ಆನೆಗಳು ಎದೆಯೊಡೆದು ಭೂಮಿಯ ಮೇಲೆ ಬಿದ್ದುವು. ಕೆಳಕ್ಕೆ ಬಿದ್ದಿದ್ದ ಮತ್ತು ಬೀಳುವುದರಲ್ಲಿದ್ದ ಸುವರ್ಣಾಭರಣಭೂಷಿತವಾದ ಆನೆಗಳ ಸಮೂಹಗಳಿಂದ ರಣಾಂಗಣವು ಛಿದ್ರ-ವಿಚ್ಛಿದ್ರವಾದ ಪರ್ವತಗಳಿಂದ ಕೂಡಿರುವಂತೆಯೇ ಪ್ರಕಾಶಿಸಿತು. ಪ್ರದೀಪ್ತವಾದ ಕಾಂತಿಯಿಂದ ಬೆಳಗುತ್ತಿದ್ದು ರತ್ನಹಾರಗಳನ್ನು ಧರಿಸಿದ್ದ, ಆನೆಗಳಿಂದ ಕೆಳಕ್ಕೆ ಬಿದ್ದಿದ್ದ ಗಜಯೋಧರಿಂದ ಕೂಡಿದ್ದ ರಣಾಂಗಣವು–ಪುಣ್ಯವು ಕ್ಷೀಣಿಸಿದೊಡನೆಯೇ ಸ್ವರ್ಗದಿಂದ ಚ್ಯುತವಾಗಿ ಕೆಳಗೆ ಬಿದ್ದಿರುವ ಗ್ರಹಗಳಿಂದ ಕೂಡಿರುವಂತೆಯೇ ಪ್ರಕಾಶಿಸುತ್ತಿದ್ದಿತು. ಭೀಮಸೇನನ ಬಾಣಗಳಿಂದ ಹತವಾದ ಹಲವು ಆನೆಗಳು ಭಿನ್ನವಾದ ಗಂಡಸ್ಥಳಗಳಿಂದಲೂ, ಕುಂಭಸ್ಥಳಗಳಿಂದಲೂ ಮತ್ತು ಸೊಂಡಿಲುಗಳಿಂದಲೂ ಕೂಡಿದುವುಗಳಾಗಿ ನೂರಾರು ಸಂಖ್ಯೆಯಲ್ಲಿ ಓಡಿಹೋಗುತ್ತಿದ್ದುವು. ಭಯದಿಂದ ಪೀಡಿತವಾಗಿದ್ದ ಮತ್ತು ಪರ್ವತಗಳಂತೆ ಸ್ಥೂಲವಾದ ಶರೀರವುಳ್ಳ ಕೆಲವು ಆನೆಗಳು ರಕ್ತವನ್ನೇ ವಾಂತಿಮಾಡುತ್ತಾ ಬಾಣಗಳಿಂದ ಕ್ಷತ-ವಿಕ್ಷತವಾದ ಶರೀರಾವಯವಗಳನ್ನು ಹೊಂದಿ ಓಡಿಹೋಗುತ್ತಿದ್ದುವು. ಆ ಸಮಯದಲ್ಲಿ ಅವು ಗೈರಿಕಾದಿ ಧಾತುಗಳಿಂದ ಚಿತ್ರಿತವಾದ ಪರ್ವತಗಳಂತೆಯೇ ಕಾಣುತ್ತಿದ್ದುವು. ಮಹಾರಾಜ! ಆ ಸಮಯದಲ್ಲಿ ನಾನು ಚಂದನಾಗರುಗಳಿಂದ ಚರ್ಚಿತವಾದ, ಧನುಸ್ಸನ್ನು ಸುದೀರ್ಘವಾಗಿ ಸೆಳೆಯುತ್ತಿದ್ದ, ದೊಡ್ಡದಾದ ಹಾವುಗಳಂತಿದ್ದ ಭೀಮಸೇನನ ಎರಡು ಭುಜಗಳನ್ನೂ ನೋಡಿದೆನು. ಸಿಡಿಲಿನ ಶಬ್ದಕ್ಕೆ ಸಮಾನವಾದ ಶಬ್ದದಿಂದ ಕೂಡಿದ್ದ ಭೀಮಸೇನನ ಶಿಂಜಿನಿಯ ಟೇಂಕಾರವನ್ನು ಕೇಳಿದೊಡನೆಯೇ ಆನೆಗಳು ಭಯದಿಂದ ಲದ್ದಿಯನ್ನೂ, ಮೂತ್ರವನ್ನೂ ವಿಸರ್ಜಿಸುತ್ತಾ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು. ಮಹಾರಾಜ! ಧೀಮಂತನಾದ, ಏಕಾಕಿಯಾದ

ಭೀಮಸೇನನ ಭಯಂಕರವಾದ ಗಜಸಂಹಾರಕಾರ್ಯವು ಪ್ರಳಯಕಾಲದಲ್ಲಿ ಸರ್ವಪ್ರಾಣಿಗಳನ್ನೂ ಧ್ವಂಸಮಾಡುವ ರುದ್ರನ ಘೋರಕಾರ್ಯಕ್ಕೆ ಸಮಾನವಾಗಿದ್ದಿತು."

೬೧ನೆಯ ಅಧ್ಯಾಯವು ಮುಗಿಯಿತು.

೬೨ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವರ ಸೈನ್ಯವು ಯುಧಿಷ್ಠಿರನನ್ನು ಆಕ್ರಮಿಸಿದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಅನಂತರ ಶ್ರೀಮಂತನಾದ ಅರ್ಜುನನು ಶ್ವೇತಾಶ್ವಗಳಿಂದ ಯುಕ್ತವಾಗಿದ್ದ ಮತ್ತು ನಾರಾಯಣಸ್ವರೂಪನಾದ ಶ್ರೀಕೃಷ್ಣನಿಂದ ಸಂಚಾಲಿತವಾಗಿದ್ದ ಶ್ರೇಷ್ಠವಾದ ರಥದಲ್ಲಿ ಕುಳಿತು ರಣಾಂಗಣಕ್ಕೆ ಆಗಮಿಸಿದನು. ಚಂಡಮಾರುತವು ಮಹೋದಧಿಯನ್ನು ಅಲ್ಲೋಲ-ಕಲ್ಲೋಲಗೊಳಿಸುವಂತೆ–ಕುದುರೆಗಳಿಂದ ಸಮೃದ್ಧವಾಗಿದ್ದ ನಿನ್ನ ಸೈನ್ಯವನ್ನು ವಿಜಯನು ಕ್ಷೋಭೆಗೊಳಿಸಿದನು. ಮಹಾರಾಜ! ಹೀಗೆಯೇ ಯುದ್ಧಮಾಡುತ್ತಿದ್ದಾಗ ಅರ್ಜುನನೊಮ್ಮೆ ಅಸಾವಧಾನತೆಯಿಂದಿರುವುದನ್ನು ಗಮನಿಸಿದ ನಿನ್ನ ಮಗನಾದ ದುರ್ಯೋಧನನು, ಇದೇ ಸರಿಯಾದ ಸಮಯವೆಂದು ಭಾವಿಸಿ, ಪರಮಕ್ರುದ್ಧನಾಗಿ, ಅರ್ಧಭಾಗಸೈನ್ಯದಿಂದ ಸಮಾವೃತನಾಗಿ ತನ್ನೆದುರಾಗಿ ಬರುತ್ತಿದ್ದ ಬಹಳ ಕುಪಿತನಾಗಿದ್ದ ಯುಧಿಷ್ಠಿರನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದನು. ಬಳಿಕ ನಿನ್ನ ಮಗನು ಯುಧಿಷ್ಠಿರನನ್ನು ಎಪ್ಪತ್ತುಮೂರು ಕ್ಷುರಪ್ರಗಳೆಂಬ ಬಾಣಗಳಿಂದ ಪ್ರಹರಿಸಿದನು. ಅದರಿಂದಾಗಿ ಕುಂತಿಯ ಮಗನಾದ ಯುಧಿಷ್ಠಿರನು ಕೋಪದಿಂದ ಕಿಡಿ-ಕಿಡಿಯಾದನು. ಒಡನೆಯೇ ಅವನು ಮೂವತ್ತು ಭಲ್ಲಗಳನ್ನು ನಿನ್ನ ಮಗನ ಮೇಲೆ ಸುರಿಸಿದನು. ಯುಧಿಷ್ಠಿರನನ್ನು ಸೆರೆಹಿಡಿಯುವ ಆಶಯದಿಂದ ಕೌರವರು ಮುನ್ನುಗ್ಗಿದರು. ಶತ್ರುಗಳ ಮನಸ್ಸಿನಲ್ಲಿದ್ದ ಆ ದುರಾಲೋಚನೆಯನ್ನು ತಿಳಿದುಕೊಂಡ ಪಾಂಡವಮಹಾರಥರು ಯುಧಿಷ್ಠಿರನನ್ನು ರಕ್ಷಿಸುವ ಇಚ್ಛೆಯಿಂದ ಯುಧಿಷ್ಠಿರನು ಕೌರವರೊಡನೆ ಯುದ್ಧದಲ್ಲಿ ತೊಡಗಿದ್ದ

ಸ್ಥಳಕ್ಕೆ ಧಾವಿಸಿ ಬಂದರು. ನಕುಲ-ಸಹದೇವ-ಧೃಷ್ಟದ್ಯುಮ್ನರೆಲ್ಲರೂ ಅಕ್ಷೌಹಿಣೀಸೈನ್ಯದೊಡನೆ ಯುಧಿಷ್ಠಿರನ ಬಳಿಗೆ ಹೋದರು. ಭೀಮಸೇನನು ಶತ್ರುಗಳಿಂದ ಆವೃತನಾಗಿದ್ದ ಯುಧಿಷ್ಠಿರನನ್ನು ವಿಮೋಚನೆಗೊಳಿಸುವ ಸಲುವಾಗಿ ಎದುರಾಗಿ ಸಿಕ್ಕಿದ ನಿನ್ನ ಕಡೆಯ ಮಹಾರಥರನ್ನು ಧ್ವಂಸ ಮಾಡುತ್ತಾ ಯುಧಿಷ್ಠಿರನ ಬಳಿಗೆ ತೆರಳಿದನು. ಯುಧಿಷ್ಠಿರನ ರಕ್ಷಣೆಯ ಸಲುವಾಗಿ ಬರುತ್ತಿದ್ದ ಆ ಎಲ್ಲ ಧನುಷ್ಮಂತರನ್ನೂ ವೈಕರ್ತನಕರ್ಣನು ಬಾಣಗಳ ಮಹಾವೃಷ್ಟಿಯಿಂದ ತಡೆದು ನಿಲ್ಲಿಸಿದನು. ಪಾಂಡವರ ಕಡೆಯ ಮಹಾರಥರೆಲ್ಲರೂ ಪುಂಖಾನುಪುಂಖವಾಗಿ ಬಾಣಗಳನ್ನು ಬಿಡುತ್ತಿದ್ದರು. ತೋಮರಗಳನ್ನು ರಭಸದಿಂದ ಎಸೆಯುತ್ತಿದ್ದರು. ಆದರೆ ಅವರು ಎಷ್ಟೇ ಪ್ರಯತ್ನಿಸಿದರೂ ಆ ಸಮಯದಲ್ಲಿ ರಾಧೇಯನನ್ನು ದಿಟ್ಟಿಸಿ ನೋಡಲು ಅವರಿಂದ ಸಾಧ್ಯವಾಗಲಿಲ್ಲ. ಸರ್ವಶಸ್ತ್ರಪಾರಂಗತನಾದ ರಾಧೇಯನು ಆ ಎಲ್ಲ ಮಹಾಧನುಷ್ಮಂತರನ್ನೂ ಬಾಣಗಳ ಮಹಾವೃಷ್ಟಿಯಿಂದ ಮುಂದಕ್ಕೆ ಬರದಂತೆ ನಿರೋಧಿಸಿದನು. ಆ ಸಮಯದಲ್ಲಿ ಪ್ರತಾಪವಂತನಾದ ಸಹದೇವನು ಬಹುಶೀಘ್ರವಾಗಿ ಮುಂದೆ ಬಂದು ಶೀಘ್ರವಾಗಿ ಬಾಣಗಳನ್ನು ಬಿಡುತ್ತಾ ಇಪ್ಪತ್ತು ಬಾಣಗಳಿಂದ ದುರ್ಯೋಧನನನ್ನು ಪ್ರಹರಿಸಿದನು. ಸಹದೇವನ ಬಾಣಗಳಿಂದ ಪ್ರಹೃತನಾದ ದುರ್ಯೋಧನನು ಅನೇಕ ಶಿಖರಗಳಿಂದ ಯುಕ್ತವಾದ ಪರ್ವತದಂತೆಯೇ ಪ್ರಕಾಶಿಸಿದನು. ರಕ್ತದಿಂದ ತೋಯ್ದುಹೋಗಿದ್ದ ರಾಜನು ಮದೋದಕವನ್ನು ಸುರಿಸುತ್ತಿರುವ ಸಲಗದಂತೆಯೇ ಕಾಣುತ್ತಿದ್ದನು. ಬಹಳ ಚೂಪಾಗಿದ್ದ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದ ನಿನ್ನ ಮಗನನ್ನು ನೋಡಿ ರಥಿಗಳಲ್ಲಿ ಶ್ರೇಷ್ಠನಾದ ರಾಧೇಯನು ರಾಜನ ರಕ್ಷಣೆಗಾಗಿ ಮುಂದೆ ಧಾವಿಸಿದನು. ದುರ್ಯೋಧನನು ಆ ಸ್ಥಿತಿಯಲ್ಲಿದ್ದುದನ್ನು ಕಂಡು ವೀರನಾದ ಕರ್ಣನು ಅತ್ಯಂತ ಶೀಘ್ರವಾಗಿ ಮಹಾಸ್ತ್ರವನ್ನು ಪ್ರಕಟಿಸಿ ಆ ಮಹಾಸ್ತ್ರದಿಂದ ಯುಧಿಷ್ಠಿರನ ಸೈನ್ಯವನ್ನೂ ಮತ್ತು ಧೃಷ್ಟದ್ಯುಮ್ನನನ್ನೂ ಗಾಯಗೊಳಿಸಿದನು. ಮಹಾತ್ಮನಾದ ಸೂತಪುತ್ರನ ಬಾಣಗಳಿಂದ ಪೀಡಿಸಲ್ಪಡುತ್ತಿದ್ದ ಮತ್ತು ವಧಿಸಲ್ಪಡುತ್ತಿದ್ದ ಯುಧಿಷ್ಠಿರನ ಸೈನ್ಯವು ದಿಕ್ಕಾಪಾಲಾಗಿ ಓಡಿಹೋಯಿತು. ಕರ್ಣನ ಧನುಸ್ಸಿನಿಂದ ಚ್ಯುತವಾದ ವಿಧ-ವಿಧವಾದ ಬಾಣ

ಗಳು ತಮ್ಮ ಅಗ್ರಭಾಗಗಳಿಂದ–ಮುಂದಿರುವ ಬಾಣಗಳ ಮೂಲಭಾಗಗಳೊಡನೆ ಸೇರಿಕೊಂಡೇ ಹೊರಬರುತ್ತಿದ್ದುವು. (ಕರ್ಣನು ಬಾಣಗಳನ್ನು ಬಿಡುತ್ತಿರುವಾಗ ಒಂದು ಬಾಣಕ್ಕೆ ಮತ್ತೊಂದು ಬಾಣವು ಅಂಟಿಕೊಂಡಿರುವಂತೆಯೇ ಸಾಲಾಗಿ ಧನುಸ್ಸಿನಿಂದ ಹೊರಬರುತ್ತಿದ್ದುವು.) ಅಂತರಿಕ್ಷದಲ್ಲಿ ಸೊಯ್ಯನೆ ಹೋಗುತ್ತಿದ್ದ ಬಾಣಗಳ ಪರಸ್ಪರ ಸಂಘರ್ಷಣೆಯಿಂದಾಗಿ ಬೆಂಕಿಯು ಹುಟ್ಟಿಕೊಂಡಿತು. ಅನಂತರ ಕರ್ಣನು ಮಿಡತೆಹುಳುಗಳಂತೆ ಸಾಲಾಗಿ ಹತ್ತು ದಿಕ್ಕುಗಳಿಗೂ ಹೋಗುತ್ತಿದ್ದ ಶತ್ರುಗಳ ಶರೀರಗಳಲ್ಲಿ ನಾಟುತ್ತಿದ್ದ ಬಾಣಗಳಿಂದ ಶತ್ರುಗಳನ್ನು ಪ್ರಹರಿಸತೊಡಗಿದನು. ಕರ್ಣನು ದಿವ್ಯಾಸ್ತ್ರಗಳನ್ನು ಪ್ರದರ್ಶಿಸುತ್ತಾ, ಮಣಿಗಳಿಂದಲೂ ಸುವರ್ಣಮಯವಾದ ಅಂಗದ-ಭುಜಕೀರ್ತಿಗಳಿಂದಲೂ ಸುಶೋಭಿತವಾಗಿದ್ದ, ರಕ್ತಚಂದನದಿಂದ ಲೇಪಿತವಾಗಿದ್ದ ಎರಡು ಭುಜಗಳನ್ನೂ ಧನುರಾಕರ್ಷಣಕಾರಣದಿಂದಾಗಿ ಹಿಂದಕ್ಕೂ ಮುಂದಕ್ಕೂ ಸಂಚಾಲಿಸುತ್ತಿದ್ದನು. ಪುಂಖಾನುಪುಂಖವಾಗಿ ಬಾಣಗಳನ್ನು ಪ್ರಯೋಗಿಸುತ್ತಾ ಕರ್ಣನು ಎಲ್ಲ ದಿಕ್ಕುಗಳನ್ನೂ (ದಿಕ್ಕುಗಳಲ್ಲಿರುವವರನ್ನೂ) ಭ್ರಾಂತಗೊಳಿಸುತ್ತಾ, ಧರ್ಮಾತ್ಮನಾದ ಯುಧಿಷ್ಠಿರನನ್ನು ಬಹಳವಾಗಿ ಪೀಡಿಸಿದನು. ಅದರಿಂದ ಪರಮಕ್ರುದ್ಧನಾದ, ಧರ್ಮಾತ್ಮನಾದ ಯುಧಿಷ್ಠಿರನು ನಿಶಿತವಾದ ಐವತ್ತು ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು. ಧರ್ಮಪುತ್ರನು ಪುಂಖಾನುಪುಂಖವಾಗಿ ಬಾಣಗಳನ್ನು ಪ್ರಯೋಗಿಸುತ್ತಾ ನಿನ್ನ ಸೈನ್ಯವನ್ನು ಸಂಹರಿಸುತ್ತಿರಲಾಗಿ, ಆ ರಣರಂಗದಲ್ಲಿ ಆ ಬಾಣಗಳಿಂದಲೇ ಅಂಧಕಾರವು ಕವಿಯಿತು. ಯುದ್ಧವು ಭಯಂಕರ ಸ್ವರೂಪವನ್ನು ತಾಳಿತು. ನಿನ್ನ ಕಡೆಯ ಸೈನ್ಯದಲ್ಲಿ ದೊಡ್ಡದಾದ ಹಾಹಾಕಾರವೆದ್ದಿತು. ಧರ್ಮಾತ್ಮನಾದ ಯುಧಿಷ್ಠಿರನು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟ, ಹದ್ದುಗಳ ರೆಕ್ಕೆಗಳನ್ನು ಹೊಂದಿದ್ದ, ತೀಕ್ಷ್ಣವಾಗಿದ್ದ ವಿಧ-ವಿಧವಾದ ಬಾಣಗಳಿಂದಲೂ, ವಿಧ-ವಿಧವಾದ ಭಲ್ಲಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಋಷ್ಟಿಗಳಿಂದಲೂ, ಮುಸಲಗಳಿಂದಲೂ ಶತ್ರುಗಳನ್ನು ಪ್ರಹರಿಸುತ್ತಾ ಯಾವ ಯಾವ ಕಡೆಗೆ ತನ್ನ ಘೋರವಾದ ದೃಷ್ಟಿಯನ್ನು ಬೀರುತ್ತಿದ್ದನೋ ಆಯಾ ಕಡೆಗಳಲ್ಲಿರುತ್ತಿದ್ದ ನಿನ್ನ ಸೈನಿಕರು ಹಾಗೆಯೇ ವಿನಾಶಹೊಂದುತ್ತಿದ್ದರು. ಅಸಹನ

ಶೀಲನಾದ, ಕೋಪಿಷ್ಠನಾದ, ರೋಷದಿಂದ ಅದುರುತ್ತಿದ್ದ ಮುಖದಿಂದ (ತುಟಿಯಿಂದ) ಕೂಡಿದ್ದ, ಮಹಾತ್ಮನಾದ ಕರ್ಣನೂ ಸಹ ಯುಧಿಷ್ಠಿರನ ವಿಧ್ವಂಸನಕ್ರಿಯೆಯನ್ನು ನೋಡಿ ಬಹಳ ಕೋಪಗೊಂಡವನಾಗಿ ಧರ್ಮಾತ್ಮನಾದ ಯುಧಿಷ್ಠಿರನನ್ನು ನಾರಾಚಗಳಿಂದಲೂ, ಅರ್ಧಚಂದ್ರ-ವತ್ಸದಂತಗಳಿಂದಲೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಯುಧಿಷ್ಠಿರನೂ ಕರ್ಣನನ್ನು ಸುವರ್ಣಮಯವಾದ ಮೂಲಭಾಗಗಳಿಂದ ಕೂಡಿದ್ದ ಬಾಣಗಳಿಂದ ಪ್ರಹರಿಸಿದನು. ಕರ್ಣನು ನಸುನಗುತ್ತಾ ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಮೂರು ಭಲ್ಲಗಳಿಂದ ಧರ್ಮರಾಜನನ್ನು ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅದರಿಂದ ಬಹಳವಾಗಿ ಗಾಯಗೊಂಡು ಪೀಡಿತನಾದ ಯುಧಿಷ್ಠಿರನು ರಥದ ಹಿಂಭಾಗಕ್ಕೆ ಸರಿದು ಕುಳಿತು ಅಲ್ಲಿಂದ ಬೇರೆಯ ಕಡೆಗೆ ರಥವನ್ನು ನಡೆಸುವಂತೆ ಸೂತನಿಗೆ ಹೇಳಿದನು. ಆ ಸಮಯದಲ್ಲಿ ಅನೇಕರಾಜರಿಂದ ಪರಿವೃತರಾಗಿದ್ದ ಧೃತರಾಷ್ಟ್ರನ ಮಕ್ಕಳು 'ಯುಧಿಷ್ಠಿರರಾಜನನ್ನು ಬಂಧಿಸಿರಿ' ಎಂದು ಕೂಗಿಕೊಳ್ಳುತ್ತಾ ಎಲ್ಲ ಕಡೆಗಳಿಂದಲೂ ಧಾವಿಸಿ ಬಂದರು. ಆಗ ಪ್ರಹಾರಕುಶಲರಾದ ಹದಿನೇಳು ನೂರು ಕೇಕಯಯೋಧರು ಪಾಂಚಾಲರೊಡನೆ ಸೇರಿ ಧೃತರಾಷ್ಟ್ರನ ಮಕ್ಕಳನ್ನೂ ಮತ್ತು ಸೈನ್ಯವನ್ನೂ ಮುಂದೆ ಬರದಂತೆ ತಡೆದರು. ಜನಕ್ಷಯಕರವಾದ ಆ ಮಹಾಘೋರಯುದ್ಧವು ಈ ಪರಿಯಲ್ಲಿ ನಡೆಯುತ್ತಿರಲಾಗಿ ಮಹಾಬಲರಾದ ಭೀಮ-ದುರ್ಯೋಧನರು ಪುನಃ ಯುದ್ಧದಲ್ಲಿ ತೊಡಗಿದರು."

೬೨ನೆಯ ಅಧ್ಯಾಯವು ಮುಗಿಯಿತು.

೬೩ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನು ಯುಧಿಷ್ಠಿರ-ನಕುಲ-ಸಹದೇವರನ್ನು ಪರಾಜಯಗೊಳಿಸಿದುದು: ಕರ್ಣನ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದ ಯುಧಿಷ್ಠಿರನು ಶಿಬಿರದಲ್ಲಿ ವಿಶ್ರಾಂತಿಯನ್ನು ಪಡೆದುಕೊಂಡುದು

ಸಂಜಯನು ಮುಂದುವರಿದು ಕರ್ಣನ ಯುದ್ಧವನ್ನೇ ವರ್ಣಿಸುತ್ತಾನೆ:

"ಮಹಾರಾಜ! ಯುಧಿಷ್ಠಿರನನ್ನು ರಕ್ಷಿಸುವ ಸಲುವಾಗಿ ಕೇಕಯ-ಪಾಂಚಾಲಯೋಧರು ಕೌರವರನ್ನು ತಡೆದರೆಂಬ ವಿಷಯವನ್ನು ಈ ಹಿಂದೆಯೇ ಹೇಳಿದ್ದೆನಲ್ಲವೇ! ಕರ್ಣನು ತನ್ನ ಬಾಣಗಳ ಸಮೂಹದಿಂದ ಅಗ್ರಭಾಗದಲ್ಲಿಯೇ ತನ್ನನ್ನು ಸುತ್ತುವರಿದು ನಿಂತಿದ್ದ, ಮಹಾಧನುಷ್ಮಂತರಾದ ಕೇಕಯಮಹಾರಥರನ್ನು ಧ್ವಂಸಮಾಡಲು ಉಪಕ್ರಮಿಸಿದನು. ಕರ್ಣನನ್ನು ಮುಂದೆ ಹೋಗದಂತೆ ತಡೆಯಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಿದ್ದ ರಥಿಗಳಲ್ಲಿ ಐದು ನೂರು ರಥಿಗಳನ್ನು ಕರ್ಣನು ಕ್ಷಣಮಾತ್ರದಲ್ಲಿ ಯಮಪುರಿಗೆ ಕಳುಹಿಸಿಕೊಟ್ಟನು. ಕರ್ಣನ ಬಾಣಗಳಿಂದ ಪೀಡಿತರಾದ ಪಾಂಡವಯೋಧರು ರಾಧೇಯನನ್ನು ಎದುರಿಸಲು ಅಸಾಧ್ಯವೆಂಬುದನ್ನು ಮನಗಂಡು ಭೀಮಸೇನನಿದ್ದೆಡೆಗೆ ಹೊರಟುಹೋದರು. ಕರ್ಣನು ರಥೈಕಸಹಾಯನಾಗಿ ಬಾಣಗಳ ಸಮೂಹಗಳಿಂದ ಹಲವು ಬಾರಿ ಯುಧಿಷ್ಠಿರನ ರಥಸೈನ್ಯವನ್ನು ಭೇದಿಸಿಕೊಂಡು ಮುಂದೆ ಹೋಗಿ ಯುಧಿಷ್ಠಿರನ ಮೇಲೆ ದಾಳಿನಡೆಸಿದನು. ಆ ಸಮಯದಲ್ಲಿ ಯುಧಿಷ್ಠಿರನು ಬಾಣಗಳಿಂದ ಕ್ಷತ-ವಿಕ್ಷತನಾಗಿದ್ದನು. ಕದಡಿದ ಮನಸ್ಸುಳ್ಳವನಾಗಿದ್ದನು. ನಕುಲ-ಸಹದೇವರ ಮಧ್ಯಭಾಗ ದಲ್ಲಿದ್ದನು. ಮೆಲ್ಲ-ಮೆಲ್ಲಗೆ ಶಿಬಿರದ ಕಡೆಗೆ ಹೋಗುತ್ತಿದ್ದನು. ಅಂತಹ ದುಃಸ್ಥಿತಿಯಲ್ಲಿದ್ದ ಯುಧಿಷ್ಠಿರನನ್ನು ಆಕ್ರಮಿಸಿದ ಕರ್ಣನು ದುರ್ಯೋಧನನಿಗೆ ಹಿತವನ್ನುಂಟುಮಾಡುವ ಅಪೇಕ್ಷೆಯಿಂದ ತೀಕ್ಷ್ಣವಾದ ಮತ್ತು ಶ್ರೇಷ್ಠವಾದ ಮೂರು ಬಾಣಗಳಿಂದ ಅವನನ್ನು ಪ್ರಹರಿಸಿದನು. ಅದೇ ರೀತಿಯಲ್ಲಿ ಯುಧಿಷ್ಠಿರನೂ ಕರ್ಣನನ್ನು ನಿಶಿತವಾದ ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿ, ಬಳಿಕ ಮೂರು ಬಾಣಗಳಿಂದ ಕರ್ಣನ ಸಾರಥಿಯನ್ನೂ ಮತ್ತು ನಾಲ್ಕು ಬಾಣಗಳಿಂದ ರಥದ ಕುದುರೆಗಳನ್ನೂ ಪ್ರಹರಿಸಿದನು. ಯುಧಿಷ್ಠಿರನ ರಥಚಕ್ರಗಳ ರಕ್ಷಕರಾಗಿದ್ದ, ಶತ್ರುತಾಪಕರಾದ ಮಾದ್ರಿಯ ಮಕ್ಕಳೂ ಸಹ, ಕರ್ಣನು ರಾಜನನ್ನು ಸಂಹರಿಸಕೂಡದೆಂಬ ಅಭಿಪ್ರಾಯದಿಂದ, ಕರ್ಣನ ಮೇಲೆ ದಾಳಿನಡೆಸಿದರು. ನಕುಲ-ಸಹದೇವರಿಬ್ಬರೂ ಪ್ರತ್ಯೇಕ-ಪ್ರತ್ಯೇಕವಾಗಿ ಬಹಳ ಪ್ರಯತ್ನದಿಂದ ಕರ್ಣನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ಇದಕ್ಕೆ ಪ್ರತಿಯಾಗಿ

ಪ್ರತಾಪವಂತನಾದ ಕರ್ಣನೂ ನಿಶಿತವಾದ ಅಲುಗುಗಳಿಂದ ಕೂಡಿದ್ದ ಎರಡು ಭಲ್ಲಗಳಿಂದ ಮಹಾತ್ಮರಾದ, ಶತ್ರುಮರ್ದನರಾದ ನಕುಲ-ಸಹದೇವರನ್ನು ಪ್ರಹರಿಸಿದನು. ಅನಂತರ ರಾಧೇಯನು ಕಪ್ಪಾದ ಬಾಲಗಳನ್ನು ಹೊಂದಿದ್ದ, ದಂತದ ಬಣ್ಣಕ್ಕೆ ಸಮಾನವಾದ ಬಿಳಿಯ ಬಣ್ಣದ ಶರೀರವುಳ್ಳ, ಮನೋವೇಗವುಳ್ಳ, ಧರ್ಮಾತ್ಮನಾದ ಯುಧಿಷ್ಠಿರನ ಶ್ರೇಷ್ಠವಾದ ಕುದುರೆಗಳನ್ನು ಸಂಹರಿಸಿದನು. ಮಹಾಧನುಷ್ಮಂತನಾದ ಸೂತಪುತ್ರನು ನಸುನಗುತ್ತಾ ಮತ್ತೊಂದು ಭಲ್ಲದಿಂದ ಯುಧಿಷ್ಠಿರನ ಶಿರಸ್ತ್ರಾಣವನ್ನೇ ಕೆಳಕ್ಕೆ ಕೆಡವಿದನು. ಅದೇ ರೀತಿಯಲ್ಲಿ ಪ್ರತಾಪವಂತನಾದ ಕರ್ಣನು ಮಾದ್ರಿಯ ಮಗನಾದ, ಧೀಮಂತನಾದ ನಕುಲನ ರಥದ ಕುದುರೆಗಳನ್ನೂ ಸಂಹರಿಸಿ ರಥದ ಈಷಾದಂಡವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿದನು. ಕರ್ಣನ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದ, ರಥಾಶ್ವಗಳನ್ನು ಕಳೆದು ಕೊಂಡಿದ್ದ, ನಕುಲ-ಯುಧಿಷ್ಠಿರರಿಬ್ಬರೂ ಸಹದೇವನ ರಥವನ್ನು ಹತ್ತಿದರು. ಶತ್ರುವೀರಹಂತಕನಾದ, ನಕುಲ-ಸಹದೇವರ ಸೋದರಮಾವನಾದ ಮದ್ರರಾಜನು, ವಿರಥರಾಗಿದ್ದ ನಕುಲ-ಯುಧಿಷ್ಠಿರರನ್ನು ಕಂಡು ಅನುಕಂಪದಿಂದ ಕೂಡಿದವನಾಗಿ ಕರ್ಣನೊಡನೆ ಹೇಳಿದನು:

**ಯೋದ್ಧವ್ಯಮದ್ಯ ಪಾರ್ಥೇನ ಫಾಲ್ಗುನೇನ ತ್ವಯಾ ಸಹ ।**
**ಕಿಮರ್ಥಂ ಧರ್ಮರಾಜೇನ ಯುಧ್ಯಸೇ ಭೃಶರೋಷಿತಃ ॥೧೬॥**

"ಕರ್ಣ! ನೀನೀಗ ಪಾರ್ಥನೊಡನೆ ಯುದ್ಧಮಾಡಬೇಕಾಗಿದೆ. ಅತಿ ಕುಪಿತನಾಗಿ ಧರ್ಮರಾಜನೊಡನೆ ನೀನೇಕೀಗ ಯುದ್ಧಮಾಡುತ್ತಿರುವೆ? ಅವನೊಡನೆ ಯುದ್ಧಮಾಡುವುದರಿಂದ ಪ್ರಯೋಜನವೇನಿದೆ? ನೀನು ಪ್ರತ್ಯಕ್ಷವಾಗಿ ನೋಡುತ್ತಿರುವಂತೆಯೇ ಯುಧಿಷ್ಠಿರನೀಗ ಶಸ್ತ್ರಾಸ್ತ್ರಗಳಿಂದ ವಿಹೀನನಾಗಿದ್ದಾನೆ. ಅವನ ಕವಚವೂ ಹರಿದುಹೋಗಿದೆ. ಅವನಲ್ಲೀಗ ಬಾಣಗಳೇ ಇಲ್ಲವಾಗಿದೆ. ಬತ್ತಳಿಕೆಯೂ ಇಲ್ಲವಾಗಿದೆ. (ಅವನು ಈಗ ಕುಳಿತಿರುವ ಸಹದೇವನ ರಥದ) ಸಾರಥಿಯೂ ಬಳಲಿದ್ದಾನೆ. ಕುದುರೆ ಗಳೂ ಬಳಲಿ ಬೆಂಡಾಗಿವೆ. ಅವನ ಅಂಗಾಂಗಗಳೆಲ್ಲವೂ ಶತ್ರುಗಳ ಬಾಣ ಗಳಿಂದ ಚುಚ್ಚಲ್ಪಟ್ಟಿದ್ದು ಆ ಬಾಣಗಳಿಂದಲೇ ಅವನು ಆಚ್ಛಾದಿತನಾಗಿ ದ್ದಾನೆ. ಇಂತಹ ದುರವಸ್ಥೆಯಲ್ಲಿರುವ ಯುಧಿಷ್ಠಿರನೊಡನೆ ಮಹಾವೀರ

ನಾದ ನೀನು ಯುದ್ಧಕ್ಕೆ ಹೋದೆಯಾದರೆ ಎಲ್ಲರ ಉಪಹಾಸಕ್ಕೂ ಗುರಿಯಾಗುವೆ."

ಮಹಾರಾಜ! ಮದ್ರರಾಜನು ತನ್ನ ಸೋದರಳಿಯಂದಿರ ಮೇಲಿನ ಅನುಕಂಪದಿಂದ ಹೀಗೆ ಹೇಳಿದರೂ ಕುಪಿತನಾಗಿದ್ದ ಕರ್ಣನು ಯುಧಿಷ್ಠಿರನನ್ನು ಬಾಣಗಳಿಂದ ಪ್ರಹರಿಸುತ್ತಲೇ ಇದ್ದನು. ಮಾದ್ರಿಯ ಮಕ್ಕಳಾದ ನಕುಲ-ಸಹದೇವರನ್ನೂ ತೀಕ್ಷ್ಣವಾದ ಬಾಣಗಳಿಂದ ಪರಾಜಯಗೊಳಿಸಿ ಗಹ-ಗಹಿಸಿ ನಗುತ್ತಾ ಪುನಃ ಬಾಣಗಳನ್ನು ಪ್ರಯೋಗಿಸಿ ಕರ್ಣನು ಯುಧಿಷ್ಠಿರನನ್ನು ಯುದ್ಧದಿಂದ ವಿಮುಖನನ್ನಾಗಿ ಮಾಡಿದನು. ರಥದಲ್ಲಿ ಕುಳಿತಿದ್ದ, ಅತಿಕುಪಿತನಾಗಿದ್ದ ಯುಧಿಷ್ಠಿರನನ್ನು ಸಂಹರಿಸಬೇಕೆಂದು ದೃಢವಾಗಿ ನಿಶ್ಚಯಿಸಿದ್ದ ಕರ್ಣನನ್ನು ನೋಡಿ ಗಹ-ಗಹಿಸಿ ನಗುತ್ತಾ ಶಲ್ಯನು ಪುನಃ ಹೇಳಿದನು:

"ಕರ್ಣ! ಒಂದು ವಿಶೇಷವಾದ (ಅರ್ಜುನನನ್ನು ನೀನು ಸಂಹರಿಸುವೆ ಯೆಂಬ) ಆಕಾಂಕ್ಷೆಯನ್ನಿಟ್ಟುಕೊಂಡು ದುರ್ಯೋಧನನು ನಿನ್ನನ್ನು ಸತತವಾಗಿ ಗೌರವಿಸುತ್ತಿದ್ದಾನೆ. ಪಾರ್ಥನನ್ನು ಸಂಹರಿಸಬೇಕೆಂಬುದೇ ದುರ್ಯೋಧನನ ಪ್ರಬಲವಾದ ಇಚ್ಛೆಯಾಗಿದೆ. ಆದುದರಿಂದ ಅರ್ಜುನನನ್ನು ನೀನು ಸಂಹರಿಸು. ಯುಧಿಷ್ಠಿರನನ್ನು ಸಂಹರಿಸುವುದರಿಂದ ನಿನಗಾಗುವ ಲಾಭ ವೇನು? ಕೃಷ್ಣಾರ್ಜುನರು ಊದುತ್ತಿರುವ ಶಂಖಗಳ ಧ್ವನಿಯು ದೊಡ್ಡದಾಗಿ ಕೇಳಿಬರುತ್ತಿದೆ. ವರ್ಷಾಕಾಲದಲ್ಲಿನ ಮೇಘಗಳ ಗರ್ಜನೆಗೆ ಅನುರೂಪವಾದ ಗಾಂಡೀವಧನುಸ್ಸಿನ ಟೇಂಕಾರಶಬ್ದವೂ ಕೇಳಿಬರುತ್ತಿದೆ. ನಮ್ಮ ಕಡೆಯ ರಥಶ್ರೇಷ್ಠರನ್ನು ಅರ್ಜುನನು ಬಾಣಗಳ ಮಳೆಗರೆಯುವಿಕೆಯಿಂದ ಸಂಹರಿಸುತ್ತಾ ನಮ್ಮ ಎಲ್ಲ ಸೇನೆಗಳನ್ನೂ ನುಂಗಿಹಾಕುತ್ತಿದ್ದಾನೆ. ಅವನನ್ನು ನೋಡು. (ಅಂತಹ ಅರ್ಜುನನನ್ನು ಎದುರಿಸು.) ಯುಧಾ ಮನ್ಯೂತ್ತಮೌಜಸರು ಶೂರನಾದ ಅರ್ಜುನನ ಪೃಷ್ಠರಕ್ಷಕರಾಗಿರುತ್ತಾರೆ. ಪಾರ್ಥನ ರಥದ ಎಡಭಾಗದ ಚಕ್ರವನ್ನು ಶೂರನಾದ ಸಾತ್ಯಕಿಯು ರಕ್ಷಿಸುತ್ತಿದ್ದಾನೆ. ಧೃಷ್ಟದ್ಯುಮ್ನನು ರಥದ ಬಲಚಕ್ರವನ್ನು ರಕ್ಷಿಸುತ್ತಿದ್ದಾನೆ. ಮತ್ತೊಂದು ಕಡೆಯಲ್ಲಿ ಭೀಮಸೇನನು ದುರ್ಯೋಧನನೊಡನೆ ಯುದ್ಧದಲ್ಲಿ ತೊಡಗಿದ್ದಾನೆ. ನಮ್ಮ ಕಣ್ಣೆದುರಿನಲ್ಲಿಯೇ ಭೀಮಸೇನನು

ದುರ್ಯೋಧನನನ್ನು ಸಂಹರಿಸುವಂತಾಗಬಾರದು. ಭೀಮಸೇನನ ಹಿಡಿತದಿಂದ ನಮ್ಮ ರಾಜನು ವಿಮೋಚನೆ ಹೊಂದಬೇಕು. ಆ ರೀತಿಯಲ್ಲಿ ನೀನು ಯುದ್ಧನೀತಿಯನ್ನು ರೂಪಿಸು. ಅತ್ತನೋಡು, ಕರ್ಣ! ಆಹವಶೋಭಿಯಾದ ದುರ್ಯೋಧನನನ್ನು ಭೀಮಸೇನನು ನುಂಗಿಹಾಕುತ್ತಿದ್ದಾನೆ. ಈ ಸಮಯದಲ್ಲಿ ನೀನೇನಾದರೂ ರಾಜನನ್ನು ಭೀಮಸೇನನ ಹಿಡಿತದಿಂದ ವಿಮೋಚಿಸಿದರೆ ಒಂದು ದೊಡ್ಡ ಆಶ್ಚರ್ಯಕರವಾದ ಘಟನೆಯೇ ನಡೆದಂತಾಗುತ್ತದೆ. ಕರ್ಣ! ಮಹಾಸಂಕಟದಲ್ಲಿರುವ ರಾಜನನ್ನು ನೀನೀಗಲೇ ಹೋಗಿ ಸಂರಕ್ಷಿಸು. ಮಾದ್ರಿಯ ಮಕ್ಕಳನ್ನಾಗಲೀ ಯುಧಿಷ್ಠಿರನನ್ನಾಗಲೀ ಸಂಹರಿಸುವುದರಿಂದ ನಿನಗಾಗುವ ಲಾಭವೇನು?"

ಮಹಾರಾಜ! ರಾಜನ ಶ್ರೇಯೋಭಿಲಾಷಿಯಾದ, ವೀರ್ಯವಂತನಾದ ಕರ್ಣನು ಶಲ್ಯನ ಮಾತುಗಳನ್ನು ಕೇಳಿ, ಮಹಾಯುದ್ಧದಲ್ಲಿ ದುರ್ಯೋಧನನು ಭೀಮನ ಹಿಡಿತಕ್ಕೆ ಸಿಕ್ಕಿ ತೊಂದರೆಪಡುತ್ತಿರುವುದನ್ನೂ ಕಂಡು, ಶಲ್ಯನಿಂದಲೂ ಪ್ರೇರಿತನಾಗಿ, ಯುಧಿಷ್ಠಿರನನ್ನೂ ಮತ್ತು ನಕುಲ-ಸಹದೇವರನ್ನೂ ಅಲ್ಲಲ್ಲಿಯೇ ಬಿಟ್ಟು ದುರ್ಯೋಧನನನ್ನು ರಕ್ಷಿಸುವ ಆಶಯದಿಂದ ಅವನ ಬಳಿಗೇ ಧಾವಿಸಿದನು. ಮದ್ರರಾಜನಾದ ಶಲ್ಯನಿಂದ ಪ್ರಚೋದಿತವಾದ ಕುದುರೆಗಳು ಆಕಾಶದಲ್ಲಿ ಹಾರಿಹೋಗುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಕರ್ಣನು ಹೊರಟುಹೋದನಂತರ ಪಾಂಡುಪುತ್ರರಾದ ಯುಧಿಷ್ಠಿರ-ನಕುಲ-ಸಹದೇವರು ವೇಗವಾಗಿ ಹೋಗುವ ಕುದುರೆಗಳ ಮೂಲಕವಾಗಿ ರಣಾಂಗಣದಿಂದ ಹೊರಟುಹೋದರು. ಬಾಣಗಳಿಂದ ಕ್ಷತ-ವಿಕ್ಷತನಾಗಿದ್ದ ನರೇಶ್ವರನಾದ ಯುಧಿಷ್ಠಿರನು ನಾಚಿಕೆಗೊಂಡವನಂತೆ ನಕುಲ-ಸಹದೇವರೊಡನೆ ಬಹಳ ಬೇಗ ಸೇನಾಶಿಬಿರಪ್ರದೇಶವನ್ನು ಸೇರಿ ರಥದಿಂದ ಕೆಳಗಿಳಿದು ಶಿಬಿರವನ್ನು ಪ್ರವೇಶಿಸಿ ಶುಭಕರವಾದ ಹಾಸಿಗೆಯ ಮೇಲೆ ಮಲಗಿದನು. ಒಡನೆಯೇ ವೈದ್ಯರು ಅವನ ಶರೀರದಲ್ಲಿದ್ದ ಬಾಣಗಳೆಲ್ಲವನ್ನೂ ಹೊರತೆಗೆದರೂ ಹೃದಯದಲ್ಲಡಗಿದ್ದ ಶಲ್ಯರೂಪವಾದ ಮನೋವೇದನೆಯು ಮಾತ್ರ ಹೋಗಲಿಲ್ಲ. ಆದರಿಂದ ರಾಜನು ಬಹಳ ಪೀಡಿತನಾಗಿದ್ದನು. ಮಹಾರಥರಾದ ನಕುಲ-ಸಹದೇವರನ್ನು ಕುರಿತು ಯುಧಿಷ್ಠಿರನು ಹೇಳಿದನು:

"ಪಾಂಡುಕುಮಾರರೇ! ಭೀಮಸೇನನ ಸೈನ್ಯದ ಬಳಿಗೆ ಈ ಕೂಡಲೇ

ನೀವು ಹೋಗಿರಿ. ಮೇಘದಂತೆ ಗರ್ಜನೆಮಾಡುತ್ತಾ ವೃಕೋದರನು ಯುದ್ಧಮಾಡುತ್ತಿದ್ದಾನೆ."

ಅನಂತರ ರಥಶ್ರೇಷ್ಠನಾದ ನಕುಲನೂ, ತೇಜಸ್ವಿಯಾದ ಸಹದೇವನೂ ಮತ್ತೊಂದು ರಥವನ್ನೇರಿ ಯುದ್ಧರಂಗಕ್ಕೆ ಹೊರಟರು. ಆ ಇಬ್ಬರು ಸಹೋದರರೂ ಶತ್ರುಗಳನ್ನು ಪೀಡಿಸುವುದರಲ್ಲಿ ಸಮರ್ಥರಾಗಿದ್ದರು.



ತೀವ್ರವಾದ ವೇಗದಿಂದ ಕೂಡಿದ ಕುದುರೆಗಳ ಮೂಲಕವಾಗಿ ನಕುಲ-ಸಹದೇವರು ಭೀಮಸೇನನ ಬಳಿಗೆ ಹೋದರು. ಅನಂತರ ಬಲಿಷ್ಠರಾದ ಸಹೋದರರಿಬ್ಬರೂ ಭೀಮನ ಸೈನ್ಯದೊಡನೆ ಸೇರಿಕೊಂಡು ಯುದ್ಧಮಾಡಲು ತೊಡಗಿದರು."

ಅರವತ್ಮೂರನೆಯ ಅಧ್ಯಾಯವು ಮುಗಿಯಿತು.

# ಅರ್ಜುನನು ಅಶ್ವತ್ಥಾಮನನ್ನು ಪರಾಜಯಗೊಳಿಸಿದುದು: ಕೌರವಸೈನ್ಯದಲ್ಲಿ ಕೋಲಾಹಲ: ದುರ್ಯೋಧನನ ಪ್ರೇರಣೆಯಂತೆ ಕರ್ಣನು ಭಾರ್ಗವಾಸ್ತ್ರವನ್ನು ಪ್ರಯೋಗಿಸಿ ಪಾಂಚಾಲರನ್ನು ಸಂಹರಿಸಿದುದು

ಸಂಜಯನು ಅರ್ಜುನಾಶ್ವತ್ಥಾಮರ ಯುದ್ಧವನ್ನು ವರ್ಣಿಸುತ್ತಾ ಹೇಳುತ್ತಾನೆ:

"ಮಹಾರಾಜ! ಅಶ್ವತ್ಥಾಮನು ದೊಡ್ಡದಾದೊಂದು ರಥಗಳ ಸಾಲಿನಿಂದ ಪರಿವೃತನಾಗಿ ಪಾರ್ಥನಿದ್ದೆಡೆಗೆ ಹೋಗಿ ಅವನ ಮೇಲೆರಗಿದನು. ಅಶ್ವತ್ಥಾಮನು ಬಹಳ ರಭಸದಿಂದ ತನ್ನ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ಶೂರನಾದ, ಕೃಷ್ಣಸಹಾಯನಾದ ಅರ್ಜುನನು–ತೀರಪ್ರದೇಶವು ಉಕ್ಕಿಬರುವ ಸಮುದ್ರವನ್ನು ತಡೆದು ನಿಲ್ಲಿಸುವಂತೆ–ದ್ರೌಣಿಯನ್ನು ತಡೆದು ನಿಲ್ಲಿಸಿದನು. ಬಳಿಕ ಪ್ರತಾಪವಂತನಾದ ದ್ರೌಣಿಯು ಅತಿಕುಪಿತನಾಗಿ ಅರ್ಜುನ-ವಾಸುದೇವರಿಬ್ಬರನ್ನೂ ಬಾಣಗಳಿಂದ ಮುಚ್ಚಿಬಿಟ್ಟನು. ಅಲ್ಲಿದ್ದ ಮಹಾರಥರೂ ಮತ್ತು ಕೌರವರೂ–ಕೃಷ್ಣರಿಬ್ಬರೂ ಅಶ್ವತ್ಥಾಮನ ಬಾಣಗಳ ಸಮೂಹಗಳಿಂದ ಆಚ್ಛಾದಿತರಾದುದನ್ನು ಕಂಡು–ಅತ್ಯಂತವಿಸ್ಮಿತರಾಗಿ ಅವರಿಬ್ಬರ ಯುದ್ಧವನ್ನು ನೆಟ್ಟದೃಷ್ಟಿಯಿಂದ ನೋಡತೊಡಗಿದರು. ಅರ್ಜುನನಾದರೋ ನಸುನಗುತ್ತಲೇ ದಿವ್ಯವಾದ ಅಸ್ತ್ರವೊಂದನ್ನು ಪ್ರಕಟಿಸಿದನು. ಬ್ರಾಹ್ಮಣನಾದ ಅಶ್ವತ್ಥಾಮನು ಆ ಮಹಾಸ್ತ್ರವನ್ನು ತಡೆದುಬಿಟ್ಟನು. ಅರ್ಜುನನು ಆ ಮಹಾಯುದ್ಧದ ಸಮಯದಲ್ಲಿ ಅಶ್ವತ್ಥಾಮನನ್ನು ಸಂಹರಿಸುವ ಆಶಯದಿಂದ ಯಾವ-ಯಾವ ಅಸ್ತ್ರಗಳನ್ನು ಪ್ರಯೋಗಿಸುತ್ತಿದ್ದನೋ–ಆ ಎಲ್ಲ ಅಸ್ತ್ರಗಳನ್ನೂ ಮಹಾಧನುಷ್ಮಂತನಾದ ದ್ರೋಣಪುತ್ರನು ವಿನಾಶಗೊಳಿಸುತ್ತಿದ್ದನು.

ಮಹಾರಾಜ! ಈ ರೀತಿಯಲ್ಲಿ ಮಹಾಭಯಂಕರವಾದ ಅಸ್ತ್ರ ಯುದ್ಧವು ನಡೆಯುತ್ತಿರಲಾಗಿ, ಅಶ್ವತ್ಥಾಮನನ್ನು ನಾವು ಬಾಯ್ದೆರೆದಿರುವ ಯಮರಾಜನೆಂದೇ ಬಗೆದೆವು. ದ್ರೌಣಿಯು ನೇರವಾಗಿ ಹೋಗುವ ಬಾಣ

ಗಳಿಂದ ದಿಕ್ಕುಗಳನ್ನೂ ಮತ್ತು ಉಪದಿಕ್ಕುಗಳನ್ನೂ ಮುಚ್ಚಿ, ಮೂರು ಬಾಣಗಳಿಂದ ವಾಸುದೇವನ ಬಲತೋಳನ್ನು ಪ್ರಹರಿಸಿದನು. ಅದರಿಂದ ಅತಿಕ್ರುದ್ಧನಾದ ಅರ್ಜುನನು ಮಹಾತ್ಮನಾದ ಅಶ್ವತ್ಥಾಮನ ಎಲ್ಲ ಕುದುರೆ ಗಳನ್ನೂ ಸಂಹರಿಸಿ ರಣಭೂಮಿಯನ್ನು ರಕ್ತದ ಪ್ರವಾಹದಿಂದ ಕೂಡಿದ ನದಿಯುಳ್ಳದ್ದನ್ನಾಗಿ ಮಾಡಿದನು. ರಕ್ತಮಯವಾದ, ಭಯಂಕರವಾದ ಆ ನದಿಯು ಪರಲೋಕವಾಹಿನಿಯಾಗಿದ್ದಿತು ಮತ್ತು ಅದು ಸರ್ವಲೋಕ ಗಳನ್ನೂ ಕೊಚ್ಚಿಕೊಂಡು ಹೋಗುವ ಸಾಮರ್ಥ್ಯವನ್ನೂ ಹೊಂದಿದ್ದಿತು. ರಥಸಹಿತರಾಗಿದ್ದ ಅಶ್ವತ್ಥಾಮನ ಕಡೆಯ ಎಲ್ಲ ರಥಿಗಳೂ ಪಾರ್ಥನ ಚಾಪ ದಿಂದ ಚ್ಯುತವಾದ ಬಾಣಗಳಿಂದ ಹತರಾದುದನ್ನು ಎಲ್ಲರೂ ನೋಡಿದರು. ದ್ರೌಣಿಯೂ ಸಹ ಅದನ್ನು ಕಂಡನು. ಮರುಕ್ಷಣದಲ್ಲಿಯೇ ಅಶ್ವತ್ಥಾಮನು ಶತ್ರುಗಳನ್ನೊಯ್ಯುವ ಮಹಾಘೋರವಾದ ರಕ್ತನದಿಯೊಂದನ್ನು ಹರಿಸಿದನು. ಅಶ್ವತ್ಥಾಮ-ಪಾರ್ಥರ ನಡುವೆ ಭಯಂಕರವಾದ ಮತ್ತು ದಾರುಣವಾದ ಯುದ್ಧವು ನಡೆಯುತ್ತಿರಲಾಗಿ, ಇತರ ಯೋಧರು ಯುದ್ಧಮರ್ಯಾದೆಯನ್ನು ಮೀರಿ ಯುದ್ಧಮಾಡುತ್ತಾ ಓಡಿಹೋಗುತ್ತಿದ್ದವರನ್ನು ಅಟ್ಟಿಸಿಕೊಂಡು ಅವರ ಹಿಂದೆಯೇ ಓಡಿಹೋಗುತ್ತಿದ್ದರು. ಸತ್ತುಹೋಗಿದ್ದ ಅಶ್ವ-ಸೂತರುಳ್ಳ ರಥಗಳಿಂದಲೂ, ಸತ್ತುಹೋಗಿದ್ದ ಸವಾರರುಳ್ಳ ಕುದುರೆಗಳಿಂದಲೂ, ಮಾವಟಿಗರಿಂದ ವಿಹೀನವಾಗಿದ್ದ ಆನೆಗಳಿಂದಲೂ, ಆನೆಗಳನ್ನು ಕಳೆದುಕೊಂಡ ಮಾವಟಿಗರಿಂದಲೂ–ಆ ರಣರಂಗವು ತುಂಬಿಹೋಗಿದ್ದಿತು. ಅಂದಿನ ಯುದ್ಧದಲ್ಲಿ ಅರ್ಜುನನು ಅಪಾರಸಂಖ್ಯೆಯಲ್ಲಿ ಸೇನಾಜನರನ್ನು ಸಂಹರಿಸಿದನು. ಪಾರ್ಥನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಅನೇಕ ರಥಿಕರು ಅಸುನೀಗಿ ಕೆಳಕ್ಕೆ ಬಿದ್ದರು. ಕತ್ತರಿಸಲ್ಪಟ್ಟಿದ್ದ ಕಡಿವಾಣವುಳ್ಳ ಕುದುರೆಗಳು ರಣಾಂಗಣದ ಸುತ್ತಲೂ ಅಡೆ-ತಡೆಯೇ ಇಲ್ಲದೇ ಓಡಾಡು ತ್ತಿದ್ದುವು. ಪಾರ್ಥನ ಅಂತಹ ಅದ್ಭುತವಾದ ಸಂಹಾರಕಾರ್ಯವನ್ನು ಕಂಡು, ಆಹವಶೋಭಿಯಾದ ವೀರ್ಯವಂತನಾದ ಅಶ್ವತ್ಥಾಮನು ಸುವರ್ಣ ಭೂಷಿತವಾಗಿದ್ದ ತನ್ನ ಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ, ವಿಜಯಿಗಳಲ್ಲಿ ವೀರಶ್ರೇಷ್ಠನಾದ ಅರ್ಜುನನನ್ನು ಎಲ್ಲ ಕಡೆಗಳಿಂದಲೂ ನಿಶಿತವಾದ ಬಾಣಗಳಿಂದ ಮುಚ್ಚಿಬಿಟ್ಟನು. ಪುನಃ ಅಶ್ವತ್ಥಾಮನು

ಧನುಸ್ಸನ್ನು ಸುದೀರ್ಘವಾಗಿ ಸೆಳೆದು ಬಾಣದಿಂದ ಅರ್ಜುನನ ವಕ್ಷಃಸ್ಥಳವನ್ನು ನಿರ್ದಯತೆಯಿಂದ ಪ್ರಹರಿಸಿದನು. ದ್ರೋಣಪುತ್ರನ ಬಾಣದಿಂದ ಬಹಳವಾಗಿ ಗಾಯಗೊಂಡ, ಗಾಂಡೀವಧನ್ವನಾದ, ಉದಾರಬುದ್ಧಿಯವನಾದ ಅರ್ಜುನನು ಅಶ್ವತ್ಥಾಮನನ್ನು ನೂರಾರು ಬಾಣಗಳಿಂದ ಆಚ್ಛಾದಿಸಿ ಅವನ ಧನುಸ್ಸನ್ನು ಕತ್ತರಿಸಿದನು. ಧನುಸ್ಸನ್ನು ಕಳೆದುಕೊಂಡ ಅಶ್ವತ್ಥಾಮನು ವಜ್ರಾಯುಧದಂತೆ ಕಠಿನಸ್ಪರ್ಶಿಯಾದ ಪರಿಘಾಯುಧವನ್ನೆತ್ತಿಕೊಂಡು ಕಿರೀಟಿಯ ಮೇಲೆ ರಭಸದಿಂದ ಎಸೆದನು. ರಭಸದಿಂದ ತನ್ನ ಮೇಲೆ ಬೀಳಲು ಬರುತ್ತಿದ್ದ ಸುವರ್ಣಭೂಷಿತವಾದ ಪರಿಘಾಯುಧವನ್ನು ಅರ್ಜುನನು ನಗು-ನಗುತ್ತಲೇ ಬಾಣಗಳಿಂದ ಕ್ಷಣಮಾತ್ರದಲ್ಲಿ ಕತ್ತರಿಸಿಹಾಕಿದನು. ಪಾರ್ಥನ ಬಾಣಗಳಿಂದ ಕತ್ತರಿಸಲ್ಪಟ್ಟ ಪರಿಘವು–ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತವು ಭೂಮಿಯ ಮೇಲೆ ವಿಕೀರ್ಣವಾಗಿ ಬೀಳುವಂತೆ–ರಣರಂಗದಲ್ಲಿ ಹರಡಿಕೊಂಡು ಬಿದ್ದಿತು. ಅದರಿಂದ ಪರಮಕ್ರುದ್ಧನಾದ, ಮಹಾರಥನಾದ ಅಶ್ವತ್ಥಾಮನು (ಮತ್ತೊಂದು ಧನುಸ್ಸನ್ನೆತ್ತಿಕೊಂಡು) ಐಂದ್ರಾಸ್ತ್ರದ ಮೂಲಕವಾಗಿ ಹೊರಹೊಮ್ಮಿದ ಬಾಣಗಳಿಂದ ಅರ್ಜುನನನ್ನು ಮುಚ್ಚಿಬಿಟ್ಟನು. ಅಶ್ವತ್ಥಾಮನು ಐಂದ್ರಾಸ್ತ್ರದ ಮೂಲಕವಾಗಿ ತನ್ನ ಸುತ್ತಲೂ ಬಾಣಗಳನ್ನು ಹರಡಿದುದನ್ನು ಕಂಡು ವೇಗವಂತನಾದ ಅರ್ಜುನನು ಗಾಂಡೀವಧನುಸ್ಸನ್ನು ಮೇಲೆತ್ತಿದನು. ಮಹೇಂದ್ರಸೃಷ್ಟವಾದ ಶ್ರೇಷ್ಠವಾದ ಅಸ್ತ್ರವೊಂದನ್ನು ತೆಗೆದುಕೊಂಡು ಧನುಸ್ಸಿನಲ್ಲಿ ಆರೋಪಿಸಿ, ಮಂತ್ರಪೂರ್ವಕವಾಗಿ ಪ್ರಯೋಗಿಸಿ ಅಶ್ವತ್ಥಾಮನು ಪ್ರಯೋಗಿಸಿದ್ದ ಐಂದ್ರಜಾಲವನ್ನು ವಿನಾಶಗೊಳಿಸಿದನು. ಅಶ್ವತ್ಥಾಮನು ಬಿಟ್ಟಿದ್ದ ಐಂದ್ರಾಸ್ತ್ರದಿಂದ ಹೊರಬಂದಿದ್ದ ಬಾಣಗಳ ಸಮೂಹವನ್ನು ಧ್ವಂಸಮಾಡಿದನಂತರ ಅರ್ಜುನನು ಅಶ್ವತ್ಥಾಮನನ್ನು ಸಮೀಪಿಸಿ ಕ್ಷಣಮಾತ್ರದಲ್ಲಿ ಅಶ್ವತ್ಥಾಮನ ರಥವನ್ನು ಬಾಣಗಳಿಂದ ಮುಚ್ಚಿದನು. ಆ ಸಮಯದಲ್ಲಿ ದ್ರೌಣಿಯು ಪಾರ್ಥನ ಬಾಣಗಳಿಂದ ಸಂಪೂರ್ಣವಾಗಿ ಮುಚ್ಚಿಹೋಗಿದ್ದನು. ಮರುಕ್ಷಣದಲ್ಲಿಯೇ ಅಶ್ವತ್ಥಾಮನು ಬಾಣಗಳಿಂದ ಪಾಂಡವನ ಬಾಣವೃಷ್ಟಿಯನ್ನು ನಿವಾರಿಸಿ, ತನ್ನ ಹೆಸರನ್ನು ಉದ್ಘೋಷಿಸುತ್ತಾ ನೂರು ಬಾಣಗಳಿಂದ ಶ್ರೀಕೃಷ್ಣನನ್ನು ಪ್ರಹರಿಸಿದನು.

ಬಳಿಕ ಮೂರು ನೂರು ಕ್ಷುದ್ರಕಗಳಿಂದ ಅರ್ಜುನನನ್ನೂ ಪ್ರಹರಿಸಿದನು. ಅದರಿಂದ ಅತಿಕುಪಿತನಾದ ಅರ್ಜುನನು ನೂರು ಬಾಣಗಳಿಂದ ಗುರುಪುತ್ರನ ಮರ್ಮಸ್ಥಳಗಳನ್ನು ಭೇದಿಸಿದನು. ನಿನ್ನ ಕಡೆಯ ಯೋಧರು ನೋಡುತ್ತಿದ್ದಂತೆಯೇ ಅರ್ಜುನನು ದ್ರೌಣಿಯ ಕುದುರೆಗಳು, ಸೂತ, ಧನುಸ್ಸು ಮತ್ತು ಶಿಂಜಿನಿಗಳನ್ನು ಅಸ್ತವ್ಯಸ್ತಗೊಳಿಸಿದನು. ಶತ್ರುವೀರಹಂತಕನಾದ ಅರ್ಜುನನು ದ್ರೌಣಿಯನ್ನು ಮರ್ಮಸ್ಥಳಗಳಲ್ಲಿ ಪ್ರಹರಿಸಿ, ಭಲ್ಲದಿಂದ ಅವನ ಸಾರಥಿಯನ್ನು ಕುಳಿತಿದ್ದ ಸ್ಥಳದಿಂದ ಕೆಳಕ್ಕೆ ಬೀಳಿಸಿದನು. ಸಾರಥಿಯನ್ನು ಕಳೆದುಕೊಂಡ ಅಶ್ವತ್ಥಾಮನು ಎದೆಗುಂದದೇ ಕುದುರೆಗಳ ಕಡಿವಾಣಗಳನ್ನೂ ತಾನೇ ಹಿಡಿದುಕೊಂಡು ಕೃಷ್ಣಾರ್ಜುನರನ್ನು ಬಾಣಗಳಿಂದ ಮುಚ್ಚಿದನು. ಮಹಾರಾಜ! ಅಶ್ವತ್ಥಾಮನ ಅದ್ಭುತ ಪರಾಕ್ರಮವನ್ನು ನಾವು ಆಗ ನೋಡಿದೆವು. ಇತ್ತಲಾಗಿ ಅಶ್ವತ್ಥಾಮನು ಕುದುರೆಗಳನ್ನೂ ನಿಯಂತ್ರಿಸುತ್ತಿದ್ದನು. ಅತ್ತಲಾಗಿ ಅರ್ಜುನನೊಡನೆಯೂ ಯುದ್ಧಮಾಡುತ್ತಿದ್ದನು. ಅಶ್ವತ್ಥಾಮನ ಅಂತಹ ಅದ್ಭುತಪರಾಕ್ರಮವನ್ನು ನೋಡಿದ ಎಲ್ಲ ಯೋಧರೂ ಅಶ್ವತ್ಥಾಮನನ್ನು ಬಹಳವಾಗಿ ಶ್ಲಾಘಿಸಿದರು.

ಅನಂತರ ಜಯನಾಮಕನಾದ ಬೀಭತ್ಸುವು ಗಹ-ಗಹಿಸಿ ನಗುತ್ತಾ ದ್ರೋಣಪುತ್ರನು ಹಿಡಿದಿದ್ದ ಕುದುರೆಗಳ ಕಡಿವಾಣಗಳನ್ನು ಕ್ಷುರಪ್ರಗಳೆಂಬ ಬಾಣಗಳಿಂದ ಕತ್ತರಿಸಿದನು. ಪಾರ್ಥನ ಬಾಣಗಳ ವೇಗದಿಂದ ಪೀಡಿತವಾದ ಅಶ್ವತ್ಥಾಮನ ಕುದುರೆಗಳು ರಥವನ್ನೆಳೆದುಕೊಂಡು ರಣರಂಗದಿಂದ ಓಡಿಹೋದುವು. ಆಗ ನಿನ್ನ ಸೈನ್ಯದಲ್ಲಿ ಭಯಂಕರವಾದ ಕೋಲಾಹಲ ಶಬ್ದವಾಯಿತು. ವಿಜಯೇಚ್ಛುಗಳಾದ ಪಾಂಡವರು ಜಯಗಳಿಸಿ ನಿನ್ನ ಸೈನಿಕರ ಮೇಲೆ ಎಲ್ಲ ಕಡೆಗಳಿಂದಲೂ ನಿಶಿತವಾದ ಬಾಣಗಳನ್ನು ಸುರಿಸುತ್ತಾ ದಾಳಿಮಾಡಿದರು. ವಿಜಯೋಲ್ಲಸಿತರಾದ ಪಾಂಡವರು ದುರ್ಯೋಧನನ ಮಹಾಸೈನ್ಯವನ್ನು ಪುನಃ ಪುನಃ ಭಗ್ನಗೊಳಿಸುತ್ತಿದ್ದರು. ನಿನ್ನ ಪಕ್ಷದ ಸೈನಿಕರ ಆ ಸಂಹಾರಕಾರ್ಯವು ಚಿತ್ರಯೋಧಿಗಳಾದ ನಿನ್ನ ಮಕ್ಕಳ, ಸುಬಲನ ಮಗನಾದ ಶಕುನಿಯ ಮತ್ತು ಕರ್ಣನ ಸಮಕ್ಷದಲ್ಲಿಯೇ ನಡೆಯುತ್ತಿದ್ದಿತು.

ಜನೇಶ್ವರನೇ! ನಿನ್ನ ಮಕ್ಕಳು ಸೈನಿಕರನ್ನು ನಾನಾಪ್ರಕಾರವಾದ

ಉತ್ತೇಜಕವಾದ ಮಾತುಗಳಿಂದ ಪಲಾಯನಮಾಡದಂತೆ ತಡೆಯುತ್ತಿದ್ದರೂ ಎಲ್ಲ ಕಡೆಗಳಿಂದಲೂ ಪಾಂಡವಯೋಧರ ಬಾಣಗಳಿಂದ ಪೀಡಿಸಲ್ಪಡುತ್ತಿದ್ದ ನಿನ್ನ ಸೈನಿಕರು ರಣಾಂಗಣದಲ್ಲಿ ಸ್ಥಿರವಾಗಿ ನಿಲ್ಲಲಾಗಲಿಲ್ಲ. ನಿನ್ನ ಕಡೆಯ ಯೋಧರು ದಿಕ್ಕಾಪಾಲಾಗಿ ಪಲಾಯನಮಾಡುತ್ತಿದ್ದುದರಿಂದ ನಿನ್ನ ಮಕ್ಕಳ ಆ ಮಹಾಸೈನ್ಯವು ಹೆದರಿ ಬಹಳವಾಗಿ ವ್ಯಾಕುಲಗೊಂಡಿತು. ಸೇನಾಪತಿಯಾದ ಕರ್ಣನು–'ನಿಲ್ಲಿರಿ! ನಿಲ್ಲಿರಿ!'–ಎಂದು ಕೂಗಿಕೊಳ್ಳುತ್ತಿದ್ದರೂ ಮಹಾತ್ಮರಾದ ಪಾಂಡವರಿಂದ ವಧಿಸಲ್ಪಡುತ್ತಿದ್ದ ಆ ನಿನ್ನ ಸೈನ್ಯವು ಸ್ಥಿರವಾಗಿ ನಿಲ್ಲಲು ಸಾಧ್ಯವಾಗಲಿಲ್ಲ. ದುರ್ಯೋಧನನ ಸೈನ್ಯವು ದಿಕ್ಕಾಪಾಲಾಗಿ ಓಡಿಹೋಗುತ್ತಿರುವುದನ್ನು ಕಂಡು ವಿಜಯದಿಂದ ಉಲ್ಲಸಿತರಾದ ಪಾಂಡವರು ಗಟ್ಟಿಯಾಗಿ ಸಿಂಹನಾದಗಳನ್ನು ಮಾಡಿದರು. ಬಳಿಕ ದುರ್ಯೋಧನನು ಪ್ರೇಮಪೂರ್ವಕವಾಗಿ ಕರ್ಣನೊಡನೆ ಹೇಳಿದನು: "ನೋಡು, ಕರ್ಣ! ನಮ್ಮ ಮಹಾಸೈನ್ಯವನ್ನು ಪಾಂಚಾಲಸೈನಿಕರು ಬಹಳವಾಗಿ ಪೀಡಿಸುತ್ತಿದ್ದಾರೆ. ಮಹಾಪರಾಕ್ರಮಿಯಾದ ನೀನಿರುವಾಗಲೇ ನಮ್ಮ ಸೈನ್ಯವು ಪಾಂಡವರ ಭಯದಿಂದ ಪಲಾಯನಪರಾಯಣವಾಗಿದೆ. ಅರಿಂದಮನೇ! ಮಹಾಬಾಹುವೇ! ಈಗಿನ ನಮ್ಮ ಸೈನ್ಯದ ಪರಿಸ್ಥಿತಿಯನ್ನು ಅರಿತು ಕೂಡಲೇ ಮಾಡಬೇಕಾದ ಕರ್ತವ್ಯವನ್ನು ಮಾಡು. ಪುರುಷೋತ್ತಮನೇ! ಪಾಂಡವರಿಂದ ಓಡಿಸಲ್ಪಡುತ್ತಿರುವ ನಮ್ಮ ಕಡೆಯ ಸಾವಿರಾರು ಯೋಧರು ಸಹಾಯಕ್ಕಾಗಿ ನಿನ್ನ ಹೆಸರನ್ನೇ ಕೂಗಿಕೊಂಡು ಓಡಿಹೋಗುತ್ತಿದ್ದಾರೆ."

ಮಹಾರಾಜ! ಮಹಾಶೂರನಾದ ರಾಧಾಪುತ್ರನಾದ ಕರ್ಣನು ದುರ್ಯೋಧನನು ಹೇಳಿದ ಮಾತನ್ನು ಕೇಳಿ ನಸುನಕ್ಕು ಶಲ್ಯನನ್ನು ಕುರಿತು ಹೇಳಿದನು:

"ಜನೇಶ್ವರ! ಈಗ ನನ್ನ ಭುಜಗಳ ವೀರ್ಯವನ್ನೂ ಮತ್ತು ನನ್ನ ಅಸ್ತ್ರಗಳ ವೀರ್ಯವತ್ತ್ವವನ್ನಾದರೂ ನೋಡು. ಈಗ ನಾನು ಪಾಂಡವಸಹಿತರಾದ ಎಲ್ಲ ಪಾಂಚಾಲರನ್ನೂ ಸಂಹರಿಸುತ್ತೇನೆ. ಪುರುಷಸಿಂಹನೇ! ಮಂಗಳಮಯವಾದ ಮನಸ್ಸಿನಿಂದ ಕುದುರೆಗಳನ್ನು ಮುಂದೆ ನಡೆಸು."

ಮಹಾರಾಜ! ಪ್ರತಾಪವಂತನಾದ, ವೀರನಾದ, ಮಹಾಬಲನಾದ ಕರ್ಣನು ಶಲ್ಯನೊಡನೆ ಹೀಗೆಂದು ಹೇಳಿ, ವಿಜಯವೆಂಬ ಶ್ರೇಷ್ಠವಾದ

ಮತ್ತು ಪುರಾತನವಾದ ಧನುಸ್ಸನ್ನೆತ್ತಿಕೊಂಡು ಹೆದೆಯೇರಿಸಿ ಶಿಂಜಿನಿಯನ್ನು ಬಾರಿ-ಬಾರಿಗೂ ತೀಡುತ್ತಾ, ಸತ್ಯಶಪಥಗಳಿಂದ ತನ್ನ ಕಡೆಯ ಯೋಧರನ್ನು ಯುದ್ಧಕ್ಕೆ ಹಿಂದಿರುಗುವಂತೆ ಪ್ರೋತ್ಸಾಹಿಸುತ್ತಾ ಭಾರ್ಗವಾಸ್ತ್ರವನ್ನು ಪ್ರಯೋಗಿಸಿದನು. ಆ ಮಹಾಸ್ತ್ರದಿಂದ ಸಾವಿರಾರು, ಲಕ್ಷೋಪಲಕ್ಷ, ಕೋಟ್ಯನುಕೋಟಿ ಸುತೀಕ್ಷ್ಣವಾದ ಬಾಣಗಳು ಹೊರಬಂದುವು. ಹದ್ದಿನ ಮತ್ತು ನವಿಲಿನ ರೆಕ್ಕೆಗಳನ್ನು ಹೊಂದಿದ್ದ, ಪ್ರಜ್ವಲಿಸುತ್ತಿದ್ದ, ಘೋರ ರೂಪವಾಗಿದ್ದ ಬಾಣಗಳಿಂದ ಪಾಂಡವರ ಸೈನ್ಯವು ಮುಚ್ಚಿಹೋಯಿತು. ಎಲ್ಲಿ ಏನಾಗುತ್ತಿದೆಯೆಂಬುದೇ ಯಾರಿಗೂ ತಿಳಿಯುತ್ತಿರಲಿಲ್ಲ. ಮಹಾಬಲಿಷ್ಠವಾದ ಭಾರ್ಗವಾಸ್ತ್ರದಿಂದ ಪೀಡಿತರಾದ ಪಾಂಚಾಲಸೈನಿಕರಲ್ಲಿ ಮಹಾ ಕೋಲಾಹಲವುಂಟಾಯಿತು. ಸಾವಿರಾರು ಬಾಣಗಳ ಪ್ರಹಾರಗಳಿಂದ ಯಾವ ವಿಧವಾದ ಪ್ರತಿಕ್ರಿಯೆಯೂ ಇಲ್ಲದೇ ಅಸುತೊರೆದು ರಣಾಂಗಣದ ಸುತ್ತಲೂ ತೊಪ-ತೊಪನೆ ಬೀಳುತ್ತಿದ್ದ ಸಾವಿರಾರು ಆನೆಗಳಿಂದಲೂ, ಕುದುರೆಗಳಿಂದಲೂ, ರಥಗಳಿಂದಲೂ, ಪದಾತಿಗಳಿಂದಲೂ ಭೂಮಿಯೇ ನಡುಗಿಬಿಟ್ಟಿತು. ಪಾಂಡವರ ಸಮಸ್ತಸೈನ್ಯವೂ ಬಹಳವಾಗಿ ವ್ಯಾಕುಲ ಗೊಂಡಿತು. ಆ ಸಮಯದಲ್ಲಿ ಯೋಧಶ್ರೇಷ್ಠನಾದ, ಪರಂತಪನಾದ ಕರ್ಣನೊಬ್ಬನೇ ಹೊಗೆಯಿಲ್ಲದ ಧಗ-ಧಗಿಸುವ ಬೆಂಕಿಯಂತೆ ಶತ್ರುಗಳನ್ನು ಮಹಾಸ್ತ್ರದಿಂದ ದಹಿಸುತ್ತಾ ಪ್ರಕಾಶಿಸಿದನು. ಕರ್ಣನಿಂದ ವಧಿಸಲ್ಪಡು ತ್ತಿದ್ದ ಚೇದಿ-ಪಾಂಚಾಲಸೈನಿಕರು–ದಾವಾಗ್ನಿಯು ಹೊತ್ತಿಕೊಂಡ ಸಮಯ ದಲ್ಲಿ ಅರಣ್ಯದ ಆನೆಗಳು ಅಲ್ಲಲ್ಲಿಯೇ ಮುರುಟಿಕೊಂಡು ಬೀಳುವಂತೆ– ಅಲ್ಲಲ್ಲಿಯೇ ಮೂರ್ಛಿತರಾಗಿ ಕೆಳಕ್ಕೆ ಬೀಳುತ್ತಿದ್ದರು. ನರಶ್ರೇಷ್ಠರಾದ ಆ ಯೋಧರು ವ್ಯಾಘ್ರಗಳಂತೆಯೇ ಚೀತ್ಕಾರಮಾಡುತ್ತಿದ್ದರು. ಆ ರಣಾಗ್ರಭೂಮಿಯಲ್ಲಿ ಕರ್ಣನ ಮಹಾಸ್ತ್ರಕ್ಕೆ ಭಯಗೊಂಡು ಕಿರುಚಿಕೊಳ್ಳುತ್ತಿದ್ದ, ಭಯಗೊಂಡು ರಣಾಂಗಣದ ಸುತ್ತಲೂ ಓಡಿಹೋಗುತ್ತಿದ್ದ ಸೈನಿಕರ ಆರ್ತನಾದಗಳು–ಪ್ರಳಯಕಾಲದಲ್ಲಿ ಪ್ರಾಣಿಗಳು ಮಾಡುವ ಆರ್ತನಾದಗಳಂತೆಯೇ ಇದ್ದುವು. ಸೂತಪುತ್ರನಿಂದ ಪಾಂಡವರ ಕಡೆಯ ಸರ್ವಸೈನಿಕರೂ ಅವ್ಯಾಹತವಾಗಿ ವಧಿಸಲ್ಪಡುತ್ತಿರುವುದನ್ನು ಕಂಡು ಸಮಸ್ತಪ್ರಾಣಿಗಳೂ, ಪಶು-ಪಕ್ಷಿಗಳೂ ಭಯಗೊಂಡುವು. ಕರ್ಣನಿಂದ

ವಧಿಸಲ್ಪಡುತ್ತಿದ್ದ ಸೃಂಜಯರು–ಪ್ರೇತರಾಜನ ಪಟ್ಟಣಕ್ಕೆ ಹೋದ ಚೈತನ್ಯ ರಹಿತವಾದ ಪ್ರಾಣಿಗಳು ಪ್ರೇತರಾಜನನ್ನು ಕೂಗಿಕೊಳ್ಳುವಂತೆ–ಅರ್ಜುನನನ್ನೂ ವಾಸುದೇವನನ್ನೂ ಬಾರಿ-ಬಾರಿಗೂ ಕೂಗಿಕೊಳ್ಳುತ್ತಿದ್ದರು. ಕರ್ಣನ ಬಾಣಗಳಿಂದ ವಧಿಸಲ್ಪಡುತ್ತಿದ್ದು–'ಅರ್ಜುನ! ರಕ್ಷಿಸು; ಕೃಷ್ಣ! ರಕ್ಷಿಸು'–ಎಂದು ಕಿರುಚಿಕೊಳ್ಳುತ್ತಿದ್ದ ಸೈನಿಕರ ಧ್ವನಿಯನ್ನು ಕೇಳಿ, ಕರ್ಣನು ಮಹಾಘೋರವಾದ ಭಾರ್ಗವಾಸ್ತ್ರವನ್ನು ಪ್ರಯೋಗಿಸಿರುವುದನ್ನೂ ಗಮನಿಸಿ ಕುಂತಿಯ ಮಗನಾದ ಅರ್ಜುನನು ವಾಸುದೇವನೊಡನೆ ಹೇಳಿದನು:

"ಮಹಾಬಾಹುವೇ! ಕೃಷ್ಣ! ಭಾರ್ಗವಾಸ್ತ್ರದ ಸತ್ತ್ವವನ್ನಾದರೂ ಈಗ ನೋಡು. ಯುದ್ಧದಲ್ಲಿ ಈ ಮಹಾಸ್ತ್ರವನ್ನು ಉಪಶಮನಗೊಳಿಸಲು ಯಾರಿಂದಲೂ ಸಾಧ್ಯವಾಗುವುದೇ ಇಲ್ಲ. ಈ ಮಹಾಯುದ್ಧದಲ್ಲಿ ಸಂಕ್ರುದ್ಧನಾದ, ಯಮನ ಪರಾಕ್ರಮಕ್ಕೆ ಅನುರೂಪವಾದ ಪರಾಕ್ರಮವನ್ನು ಹೊಂದಿರುವ, ದಾರುಣವಾದ ಸಂಹಾರಕಾರ್ಯವನ್ನು ಮಾಡುತ್ತಿರುವ ಸೂತಪುತ್ರನನ್ನು ನೋಡು, ಕೃಷ್ಣ! ಬಾರಿ-ಬಾರಿಗೂ ಕುದುರೆಗಳನ್ನು ಚಪ್ಪರಿಸುತ್ತಾ ಪದೇ-ಪದೇ ನನ್ನನ್ನೇ ಅವನು ನೋಡುತ್ತಿದ್ದಾನೆ. ಕರ್ಣನನ್ನು ಎದುರಿಸಿ ಯುದ್ಧಮಾಡಲು ಹೋದನಂತರ ಪಲಾಯನಮಾಡಲು ಸಾಮರ್ಥ್ಯವಿರುವವನನ್ನು ನಾನು ಕಾಣುತ್ತಿಲ್ಲ.

**ಜೀವನ್ಪ್ರಾಪ್ನೋತಿ ಪುರುಷಃ ಸಂಖ್ಯೇ ಜಯಪರಾಜಯೌ ।**
***ಮೃತಸ್ಯ ತು ಹೃಷೀಕೇಶ ಭಙ್ಗ ಏವ ಕುತೋ ಜಯಃ ॥೬೪॥**

---

* 'ಜಿತಸ್ಯ ಚ ಹೃಷೀಕೇಶ ವಧ ಏವ ಕುತೋ ಜಯಃ'–ಎಂದು ಮತ್ತೊಂದು ಪಾಠವಿದೆ. 'ಸೋತವನಿಗೆ ವಧೆಯಲ್ಲದೇ ಜಯವೆಂಬುದೆಲ್ಲಿದೆ?'–ಎಂದು ಅರ್ಥವಾಗುತ್ತದೆ.

**ನ ಚ ಪಶ್ಯಾಮಿ ಸಮರೇ ಕರ್ಣ ಪ್ರತಿಪಲಾಯಿತುಮ್ ।** ಎಂದು ಹಿಂದಿನ ಶ್ಲೋಕವಿದೆ. ಇದಕ್ಕೆ ವ್ಯಾಖ್ಯಾನಕಾರರು 'ಕರ್ಣಂ ಪ್ರತಿಲಕ್ಷೀಕೃತ್ಯ ಪಲಾಯಿತುಂ ನ ಪಶ್ಯಾಮಿ–ನಿಷಿದ್ಧತ್ವಾತ್–ಕರ್ಣನನ್ನು ಅನುಲಕ್ಷಿಸಿ ಪಲಾಯನಮಾಡುವುದು ಸಮುಚಿತವಾಗಿ ಕಾಣುವುದಿಲ್ಲ. ಕರ್ಣನಿಗೆ ಹೆದರಿಕೊಂಡು ಓಡುವುದೂ ಸರಿಯಲ್ಲ. ವೀರನಾದವನು ಹೀಗೆ ಓಡುವುದು ನಿಷಿದ್ಧ'–ಎಂದು ಅರ್ಥಮಾಡಿದ್ದಾರೆ. ಹಿಂದೀ

ಮನುಷ್ಯನು ಜೀವಿಸಿದ್ದರೆ ಅವನಿಗೆ ಯುದ್ಧದಲ್ಲಿ ಜಯವೋ–ಪರಾಜಯವೋ ಲಭಿಸುತ್ತದೆ. ಮೃತನಾದವನಿಗೆ ಸರ್ವನಾಶವಾಗುತ್ತದೆ. ಆದುದರಿಂದ ಮೃತನಿಗೆ ಜಯವೆಂಬುದೆಲ್ಲಿದೆ? (ಕರ್ಣನೊಡನೆ ಯುದ್ಧಕ್ಕೆ ಹೋದವನು ಸರ್ವಥಾ ಬದುಕಿರಲಾರನು.)"

ಮಹಾರಾಜ! ಅರ್ಜುನನು ಹೀಗೆ ಹೇಳಿದನಂತರ ಬುದ್ಧಿವಂತರಲ್ಲಿ ಶ್ರೇಷ್ಠನಾದ ಕೃಷ್ಣನು ತತ್ಕಾಲಯೋಗ್ಯವಾದ ಮಾತನ್ನು ಅರ್ಜುನನೊಡನೆ ಹೇಳಿದನು:

"ಪಾರ್ಥ! ಕರ್ಣನಿಂದ ಯುಧಿಷ್ಠಿರನು ಬಹಳವಾಗಿ ಗಾಯಗೊಂಡಿರುತ್ತಾನೆ. ಅವನ ಶರೀರವು ಕ್ಷತ-ವಿಕ್ಷತವಾಗಿದೆ. ಅವನನ್ನು ನೋಡಿ ಸಮಾಧಾನಪಡಿಸಿ ಬಳಿಕ ಇಲ್ಲಿಗೆ ಬಂದು ಕರ್ಣನನ್ನು ವಧಿಸಬಹುದಾಗಿದೆ."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದನಂತರ ಇಬ್ಬರೂ ಯುಧಿಷ್ಠಿರನನ್ನು ನೋಡಲು ಹೋದರು. ಯುದ್ಧದಲ್ಲಿ ಕರ್ಣನನ್ನು ಶ್ರಮದೊಡನೆ ಯೋಜಿಸಲು ಸಹ (ಬೇರೆಯವರೊಡನೆ ಮಾಡುವ ಯುದ್ಧದಿಂದ

---

ವ್ಯಾಖ್ಯಾನಕಾರರೂ ಇದನ್ನೇ ಅನುಸರಿಸಿ–'ಸಮರಭೂಮೀಮೇ ಕರ್ಣಕೇ ಸಾಮನೇಸೇ ಪಲಾಯನ ಕರನಾ ಮೈ ಉಚಿತ ನಹೀ ಸಮಝುತಾ–ಸಮರಭೂಮಿಯಲ್ಲಿ ಕರ್ಣನ ಮುಂಭಾಗದಿಂದ ಪಲಾಯನಮಾಡುವುದು ಉಚಿತವೆಂದು ನಾನು ಭಾವಿಸುವುದಿಲ್ಲ. I will never be able to fly away from Karna in battle– ಇದು ಆಂಗ್ಲ ಅನುವಾದ. ಪಾಠಾಂತರದಲ್ಲಿ: ನ ಚ ಪಶ್ಯಾಮಿ ಸಮರೇ ಕರ್ಣಸ್ಯ ಪ್ರಪಲಾಯಿತಮ್–ಕರ್ಣನಿಂದ ತಪ್ಪಿಸಿಕೊಂಡು ಹೋದವನನ್ನು ನಾನು ಕಂಡಿಲ್ಲ–ಎಂದೇ ಈ ಪಾಠದ ಅರ್ಥವಾಗುತ್ತದೆ. ವ್ಯಾಖ್ಯಾನಕಾರರು ಅರ್ಜುನನು ತನ್ನ ವಿಷಯವಾಗಿ ಈ ಮಾತುಗಳನ್ನು ಹೇಳುತ್ತಿದ್ದಾನೆಂದು ಭಾವಿಸಿ ಹೀಗೆ ಅರ್ಥಮಾಡಿದ್ದಾರೆ. ಇಲ್ಲಿ ಅರ್ಜುನನು ಇತರ ಯೋಧರ ವಿಷಯವನ್ನು ಹೇಳುತ್ತಿರುವನೇ ಹೊರತು–'ನಾನು ಪಲಾಯನಮಾಡುವುದಿಲ್ಲ'–ಎಂದು ಹೇಳುತ್ತಿಲ್ಲ. ಪಲಾಯನಮಾಡುವ ಶಬ್ದವೇ ಅರ್ಜುನನ ಬಾಯಿಂದ ಬರಲು ಸಾಧ್ಯವಿಲ್ಲ. ಅರ್ಜುನನು ಕರ್ಣನನ್ನು ಎದುರಿಸಲು ಎಂದೂ ಹಿಂಜರಿದವನಲ್ಲ. ಆದುದರಿಂದ ಇಲ್ಲಿ ಅರ್ಜುನನು ಯೋಧರ ವಿಷಯವನ್ನು ಹೇಳುತ್ತಿರುವನೇ ಹೊರತು ತನ್ನ ವಿಷಯವನ್ನು ಹೇಳಿಕೊಳ್ಳುತ್ತಿಲ್ಲ. ಜೀವನ್ಪ್ರಾಪ್ನೋತಿ ಪುರುಷಃ–ಎಂಬುದು ಇತರ ಯೋಧರಿಗೆ ಅನ್ವಯಿಸುವ ಮಾತೇ ಹೊರತು ತನ್ನನ್ನು ಕುರಿತು ಹೇಳಿಕೊಂಡ ಮಾತಲ್ಲ. ಆದುದರಿಂದ ನಮ್ಮ ವಿವರಣೆಯೇ ಸಮಂಜಸವಾಗಿರುವುದೆಂದು ನಮ್ಮ ಅಭಿಪ್ರಾಯವಾಗಿದೆ.

ದಣಿಯುವಂತೆ ಮಾಡಲು) ಕೃಷ್ಣಾರ್ಜುನರು ಅಲ್ಲಿಂದ ಹೊರಟುಹೋದರು. ಅನಂತರ ಬಾಣಪೀಡಿತನಾದ ರಾಜನನ್ನು ನೋಡಲು ಕೇಶವನ ಆಜ್ಞೆಯಂತೆ ಅರ್ಜುನನು ರಥದಲ್ಲಿ ಕುಳಿತು ರಣಾಂಗಣದಿಂದ ಬಹಳ ಬೇಗ ಹೊರಟುಹೋದನು. ಕುಂತಿಯ ಮಗನಾದ ಅರ್ಜುನನು ಗುರುಪುತ್ರನೊಡನೆ ಯುದ್ಧಮಾಡಿ–ಯುದ್ಧದಲ್ಲಿ ಪರಾಜಯಗೊಳಿಸಲು ಇಂದ್ರನಿಂದಲೂ ದುಃಸಾಧ್ಯನೆನಿಸಿದ್ದ ಅಶ್ವತ್ಥಾಮನನ್ನು ಪರಾಜಯಗೊಳಿಸಿ, ಧರ್ಮರಾಜನನ್ನು ನೋಡಬೇಕೆನ್ನುವ ಇಚ್ಛೆಯಿಂದ ಧರ್ಮರಾಜನ ಸೈನ್ಯವಿದ್ದೆಡೆಗೆ ಹೋಗಿ ಆ ಸೈನ್ಯದ ಮಧ್ಯದಲ್ಲಿ ಯುಧಿಷ್ಠಿರನನ್ನು ಹುಡುಕಿದನು. ಆದರೆ ಅರ್ಜುನನು ಅಲ್ಲಿ ತನ್ನ ಅಣ್ಣನನ್ನು ಕಾಣಲಿಲ್ಲ."

೬೪ನೆಯ ಅಧ್ಯಾಯವು ಮುಗಿಯಿತು.

೬೫ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೃಷ್ಣಾರ್ಜುನರು ಸೇನೆಯ ರಕ್ಷಣಾಭಾರವನ್ನು ಭೀಮಸೇನನಿಗೆ ವಹಿಸಿಕೊಟ್ಟು ಯುಧಿಷ್ಠಿರನ ಬಳಿಗೆ ಹೋದುದು

ಸಂಜಯನು ಮುಂದುವರಿದು ಹೇಳುತ್ತಾನೆ:

"ಮಹಾರಾಜ! ಶ್ರೇಷ್ಠವಾದ ಗಾಂಡೀವಧನುಸ್ಸನ್ನು ಧರಿಸಿದ್ದ, ಶತ್ರುಗಳಿಂದ ಎದುರಿಸಲು ಅಸಾಧ್ಯನಾದ ಧನಂಜಯನು, ಇತರರಿಂದ ದುಷ್ಕರವೂ ಮತ್ತು ವೀರೋಚಿತವೂ ಆದ ಮಹಾಸಂಹಾರಕಾರ್ಯವನ್ನು ಮಾಡಿ ಅಶ್ವತ್ಥಾಮನನ್ನು ಪರಾಜಯಗೊಳಿಸಿ ತನ್ನ ಕಡೆಯ ಸೈನ್ಯವನ್ನೊಮ್ಮೆ ಅವಲೋಕಿಸಿದನು. ಶೂರನಾದ ಸವ್ಯಸಾಚಿಯು, ಸೈನ್ಯದ ಅಗ್ರಭಾಗದಲ್ಲಿ ನಿಂತು ಯುದ್ಧಮಾಡುತ್ತಿದ್ದ ಶೂರರನ್ನು ಪ್ರಶಂಸಾವಚನಗಳಿಂದ ಹರ್ಷಗೊಳಿಸುತ್ತಾ, ಹಿಂದೆ ಬಾಣಗಳ ಪ್ರಹಾರಗಳಿಂದ ಕ್ಷತ-ವಿಕ್ಷತರಾಗಿದ್ದ ತನ್ನ ಕಡೆಯ ರಥಸೈನಿಕರನ್ನು ಪ್ರಶಂಸಾವಚನಗಳಿಂದ ಸಮಾಧಾನಗೊಳಿಸುತ್ತಾ, ಅವರೆಲ್ಲರೂ ರಣಭೂಮಿಯಲ್ಲಿ ಸ್ಥಿರವಾಗಿ ನಿಲ್ಲುವಂತೆ ಪ್ರೋತ್ಸಾಹಿಸಿದನು. ಕಿರೀಟಧರನಾದ ಅರ್ಜುನನು ಸೈನ್ಯದಲ್ಲಿ ಅಣ್ಣನಾದ, ಅಜಮೀಢಕುಲನಂದನನಾದ ಯುಧಿಷ್ಠಿರನನ್ನು ಕಾಣದೇ ಭ್ರಾಂತನಾಗಿ ಭೀಮಸೇನನ ಬಳಿಗೆ ಬೇಗ

ಹೋಗಿ ರಾಜನ ವೃತ್ತಾಂತವನ್ನು ತಿಳಿಯಲು–'ರಾಜನೆಲ್ಲಿ'–ಎಂದು ಭೀಮನನ್ನು ಕೇಳಿದನು.

"ಅರ್ಜುನ! ಕರ್ಣನ ಬಾಣಗಳಿಂದ ಸಂತಾಪಗೊಂಡ ಅಂಗಾಂಗಗಳಿಂದ ಕೂಡಿದ್ದ ಧರ್ಮಪುತ್ರನಾದ ಯುಧಿಷ್ಠಿರನು ಇಲ್ಲಿಂದ ಹೊರಟುಹೋಗಿದ್ದಾನೆ. ಹೇಗೋ ಅವನಿನ್ನೂ ಜೀವಿಸಿರಬಹುದು."



"ಭೀಮಸೇನ! ಕುರುಶ್ರೇಷ್ಠನಾದ ಧರ್ಮರಾಜನ ಸಮಾಚಾರವನ್ನು ತಿಳಿಯಲು ನೀನು ಈಗಲೇ ಇಲ್ಲಿಂದ ಹೊರಡು. ಕರ್ಣನ ಬಾಣಗಳಿಂದ ಬಹಳವಾಗಿ ಗಾಯಗೊಂಡಿರುವ ನಮ್ಮ ರಾಜನು ನಿಶ್ಚಯವಾಗಿಯೂ ಶಿಬಿರಕ್ಕೆ ಹೊರಟುಹೋಗಿರುತ್ತಾನೆ. ವೇಗವಂತನಾದ ನಮ್ಮ ಅಣ್ಣನನ್ನು ಈ ಮೊದಲೇ ದ್ರೋಣರೂ ನಿಶಿತವಾದ ಬಾಣಗಳ ಪ್ರಹಾರದಿಂದ ಬಹಳ

ವಾಗಿ ಗಾಯಗೊಳಿಸಿದ್ದರು. ಅಷ್ಟೊಂದು ಗಾಯಗೊಂಡಿದ್ದರೂ ವಿಜಯದ ಪ್ರತೀಕ್ಷೆಯಿಂದಿದ್ದ ಧರ್ಮರಾಜನು ದ್ರೋಣರು ಹತರಾಗುವವರೆಗೂ ರಣರಂಗವನ್ನು ಬಿಟ್ಟು ಹೋಗಿರಲಿಲ್ಲ. ಆದರೆ ಮಹಾನುಭಾವನಾದ, ಪಾಂಡವಶ್ರೇಷ್ಠನಾದ ಯುಧಿಷ್ಠಿರನು ಇಂದಿನ ಯುದ್ಧದಲ್ಲಿ ಕರ್ಣನಿಂದ (ಕರ್ಣನ ಬಾಣಪ್ರಹಾರದಿಂದ) ಅತ್ಯಂತಸಂಕಟಕ್ಕೆ ಒಳಗಾಗಿದ್ದಾನೆ. ಇದು ನಿಜ. ನಮ್ಮಣ್ಣನ ಯೋಗಕ್ಷೇಮವನ್ನು ತಿಳಿದು ಬರಲು ನೀನು ಈಗಲೇ ಶಿಬಿರಕ್ಕೆ ಹೋಗು. ಶತ್ರುಗಳ ಸಮೂಹವನ್ನು ನಿರೋಧಿಸುತ್ತಾ ನಾನು ಇಲ್ಲಿಯೇ ಇರುತ್ತೇನೆ."

ಅರ್ಜುನನ ಮಾತಿಗೆ ಉತ್ತರವಾಗಿ ಭೀಮನು ಹೇಳುತ್ತಾನೆ:

"ಮಹಾನುಭಾವ! ನೀನೇ ಹೋಗಿ ಭರತರ್ಷಭನಾದ ಯುಧಿಷ್ಠಿರನ ಸಮಾಚಾರವನ್ನು ತಿಳಿದುಕೊಂಡು ಬಾ. ಈ ಸಮಯದಲ್ಲಿ ನಾನೇನಾದರೂ ಈ ಸ್ಥಳವನ್ನು ಬಿಟ್ಟು ಹೊರಟೆನೆಂದರೆ ಶತ್ರುಗಳ ಕಡೆಯ ಶ್ರೇಷ್ಠ ರಾದ ವೀರರು ನನ್ನನ್ನು ಭಯಪಟ್ಟು ಓಡಿಹೋದನೆಂದೇ ಹೇಳುತ್ತಾರೆ."

"ಭೀಮಸೇನ! ನಾನೂ ಸಹ ಅದೇ ಸ್ಥಿತಿಯಲ್ಲಿದ್ದೇನೆ. ನನ್ನೆದುರಾಗಿ ಸಂಶಪ್ತಕರು ಯುದ್ಧಸನ್ನದ್ಧರಾಗಿ ನಿಂತಿದ್ದಾರೆ. ಇವರನ್ನು ಸಂಹರಿಸದೇ ನಮ್ಮ ಶತ್ರುಗಳ ಸಮುದಾಯರೂಪವಾದ ಗೋಷ್ಠಿಯಿಂದ ಹೊರಬಂದು ಶಿಬಿರಕ್ಕೆ ಹೋಗಲು ನನ್ನಿಂದ ಸಾಧ್ಯವಾಗುವುದಿಲ್ಲ."

"ಕುರುಪ್ರವೀರನೇ! ಅರ್ಜುನ! ನಾನು ನನ್ನ ಭುಜಬಲ-ಪರಾ ಕ್ರಮಗಳನ್ನು ಅವಲಂಬಿಸಿ ಯುದ್ಧದಲ್ಲಿ ಸಂಶಪ್ತಕರೊಡನೆಯೂ ಮತ್ತು ಇತರ ಸೈನ್ಯಗಳೊಡನೆಯೂ ಯುದ್ಧಮಾಡುತ್ತೇನೆ. ಆದುದರಿಂದ ನೀನು ನಿಶ್ಚಿಂತನಾಗಿ ಧರ್ಮರಾಜನ ಬಳಿಗೆ ಹೋಗು."

ಮಹಾರಾಜ! 'ಸುದುಷ್ಕರವಾದ ಸಂಶಪ್ತಕಸೈನ್ಯವನ್ನು ನಾನೊಬ್ಬನೇ ಎದುರಿಸುತ್ತೇನೆ'–ಎಂಬ ಸತ್ಯಪರಾಕ್ರಮನಾದ ಭೀಮಸೇನನ ಸತ್ಯವಾದ ಮತ್ತು ಸುದುಷ್ಕರವಾದ ಮಾತನ್ನು ಕೇಳಿ ಶತ್ರುಸೈನ್ಯದ ಮಧ್ಯದಲ್ಲಿದ್ದ, ಕಪಿಧ್ವಜನಾದ, ಮಹಾಸತ್ತ್ವನಾದ, ಮಹಾತ್ಮನಾದ ಅರ್ಜು

ನನು ಭೀಮನ ಮಾತಿಗೆ ಸಮ್ಮತಿಯನ್ನಿತ್ತು ಕುರುಶ್ರೇಷ್ಠನಾದ ಯುಧಿಷ್ಠಿರನನ್ನು ನೋಡುವ ಸಲುವಾಗಿ ಮುಂದೆ ಹೋಗುತ್ತಾ, ಅಪ್ರಮೇಯನಾದ, ನಾರಾಯಣಸ್ವರೂಪನಾದ, ವೃಷ್ಣಿಶ್ರೇಷ್ಠನಾದ ಶ್ರೀಕೃಷ್ಣನನ್ನು ಕುರಿತು ಹೇಳಿದನು:

"ಹೃಷೀಕೇಶ! ಸಮುದ್ರರೂಪವಾದ ಈ ಸೈನ್ಯವನ್ನು ಬಿಟ್ಟು ಶಿಬಿರದ ಕಡೆಗೆ ಹೋಗುವಂತೆ ಕುದುರೆಗಳನ್ನು ಪ್ರಚೋದಿಸು. ಅಜಾತಶತ್ರುವಾದ ಯುಧಿಷ್ಠಿರರಾಜನನ್ನು ನಾನು ನೋಡಲಿಚ್ಛಿಸುತ್ತೇನೆ."

ಮಹಾರಾಜ! ಎಲ್ಲ ದಾಶಾರ್ಹರಿಗೂ ನಾಯಕನಾದ ಶ್ರೀಕೃಷ್ಣನು ಅರ್ಜುನನ ಮಾತಿನಂತೆ ಶಿಬಿರದ ಕಡೆಗೆ ಕುದುರೆಗಳನ್ನು ಪ್ರಚೋದಿಸುತ್ತಾ ಭೀಮನನ್ನು ಕುರಿತು ಹೇಳಿದನು:

"ಭೀಮಸೇನ! ನಿನ್ನ ಸಾಹಸಕರ್ಮದಲ್ಲಿ ಆಶ್ಚರ್ಯವೇನೂ ಕಾಣುವುದಿಲ್ಲ. (ನೀನು ಸಂಶಪ್ತಕರ ಸಹಿತವಾಗಿ ನಮ್ಮ ಎಲ್ಲ ಶತ್ರುಗಳನ್ನೂ ಎದುರಿಸಲು ಸಮರ್ಥನಾಗಿರುವೆ.) ನಾನು ಅರ್ಜುನನೊಡನೆ ಯುಧಿಷ್ಠಿರನ ಬಳಿಗೆ ಹೋಗುತ್ತೇನೆ. ಶತ್ರುಗಳ ಸಮೂಹವನ್ನು ವಿನಾಶಗೊಳಿಸು."

ಮಹಾರಾಜ! ಶ್ರೀಕೃಷ್ಣನು ಭೀಮಸೇನನೊಡನೆ ಹೀಗೆ ಹೇಳಿ, ಗರುಡಪಕ್ಷಿಗಳಂತೆ ಅತಿವೇಗವಾಗಿ ಹೋಗುವ ಕುದುರೆಗಳ ಮೂಲಕ ಶೀಘ್ರಾತಿಶೀಘ್ರವಾಗಿ ಯುಧಿಷ್ಠಿರನಿದ್ದೆಡೆಗೆ ಹೋದನು. ಪುರುಷಪ್ರವೀರರಾದ ಕೃಷ್ಣಾರ್ಜುನರು ಅರಿಂದಮನಾದ ಭೀಮಸೇನನನ್ನು ಶತ್ರುಗಳ ಎದುರಿನಲ್ಲಿ ನಿಲ್ಲಿಸಿ, ಅವನಿಗೆ ಯುದ್ಧವಿಷಯವಾಗಿ ಯಥಾಯೋಗ್ಯವಾದ ಸಲಹೆಗಳನ್ನಿತ್ತು, ಏಕಾಕಿಯಾಗಿ ಮಲಗಿದ್ದ ಯುಧಿಷ್ಠಿರನ ಶಿಬಿರದ ಬಳಿಗೆ ಹೋಗಿ, ರಥದಿಂದ ಕೆಳಗಿಳಿದು ಶಿಬಿರವನ್ನು ಪ್ರವೇಶಿಸಿ, ಧರ್ಮರಾಜನ ಕಾಲುಗಳಿಗೆ ಇಬ್ಬರೂ ನಮಸ್ಕರಿಸಿದರು. ಕುರುಶ್ರೇಷ್ಠನೇ! ಪುರುಷಸಿಂಹರಾದ ಕುಶಲಿಗಳಾದ ಕೃಷ್ಣಾರ್ಜುನರು–ಅಶ್ವಿನೀದೇವತೆಗಳು ಇಂದ್ರನನ್ನು ಅಭಿನಂದಿಸುವಂತೆ–ಯುಧಿಷ್ಠಿರನನ್ನು ಸಂತೋಷದಿಂದ ಅಭಿನಂದಿಸಿದರು.

ಸೂರ್ಯನು ಅಶ್ವಿನೀದೇವತೆಗಳನ್ನು ಸ್ವಾಗತಿಸುವಂತೆ ಮತ್ತು ಮಹಾಸುರನಾದ ಜಂಭನು ಹತನಾದನಂತರ ಬೃಹಸ್ಪತಿಯು ಇಂದ್ರಾವಿಷ್ಣುಗಳನ್ನು ಸ್ವಾಗತಿಸಿದಂತೆ–ಯುಧಿಷ್ಠಿರನು ಕೃಷ್ಣಾರ್ಜುನರನ್ನು ಸ್ವಾಗತಿಸಿದನು.



ಕೃಷ್ಣಾರ್ಜುನರಿಬ್ಬರೂ ಆನಂದತುಂದಿಲರಾಗಿ ತನ್ನನ್ನು ಕಾಣಲು ಬಂದುದನ್ನು ನೋಡಿ ಪರಂತಪನಾದ ಯುಧಿಷ್ಠಿರನು, ಕರ್ಣನು ಹತನಾದನೆಂದೇ ಭಾವಿಸಿ, ಪರಮಪ್ರೀತನಾಗಿ ಹರ್ಷದಿಂದುಂಟಾದ ಗದ್ಗದಧ್ವನಿಯಿಂದ ಹೇಳಿದನು.

ವಿಶಾಲವಾಗಿಯೂ ಕೆಂಪಾಗಿಯೂ ಇದ್ದ ಕಣ್ಣುಗಳುಳ್ಳವರಾಗಿದ್ದ,

ಬಾಣಗಳಿಂದ ಕ್ಷತವಾದ ಶರೀರವುಳ್ಳವರಾಗಿದ್ದ, ರಕ್ತದಿಂದ ತೋಯ್ದು ಹೋಗಿದ್ದ, ಸೇನೆಯ ಅಗ್ರಭಾಗದಲ್ಲಿ ನಿಂತು ಯುದ್ಧಮಾಡುವ ನರಶ್ರೇಷ್ಠರಾದ ಕೃಷ್ಣಾರ್ಜುನರನ್ನು ನೋಡಿ ಯುಧಿಷ್ಠಿರನು ಈ ಮಾತುಗಳನ್ನು ಹೇಳಿದನು. ಯುಧಿಷ್ಠಿರನು ಮಹಾಸತ್ತ್ವರಾದ ಕೇಶವಾರ್ಜುನರಿಬ್ಬರೂ ಜೊತೆಯಲ್ಲೇ ಬಂದುದನ್ನು ಕಂಡು ಯುದ್ಧದಲ್ಲಿ ಅರ್ಜುನನಿಂದ ಕರ್ಣನು ಹತನಾಗಿರುವನೆಂದೇ ಭಾವಿಸಿಬಿಟ್ಟನು. ಅನಂತರ ಯುಧಿಷ್ಠಿರನು ಮುಗುಳ್ನಗೆಯಿಂದ ಕೂಡಿದವನಾಗಿ ಶತ್ರುಸೂದನನಾದ ಶ್ರೀಕೃಷ್ಣನನ್ನೂ ಮತ್ತು ಅರ್ಜುನನನ್ನೂ ಪ್ರಶಂಸಿಸುತ್ತಾ ಮಧುರವೂ–ಸಾಂತ್ವನಪೂರ್ಣವೂ ಆದ ಮಾತುಗಳಿಂದ ಅಭಿನಂದಿಸಿದನು."

ಒಚಿನೆಯ ಅಧ್ಯಾಯವು ಮುಗಿಯಿತು.

೬೬ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನು ಹತನಾದನೆಂದೇ ಭಾವಿಸಿದ ಯುಧಿಷ್ಠಿರನು ಅರ್ಜುನನೊಡನೆ ಮಾತನಾಡಿದುದು

ಸಂಜಯನು ಕೃಷ್ಣಾರ್ಜುನ-ಯುಧಿಷ್ಠಿರರ ಸಮಾಗಮವನ್ನು ವರ್ಣಿಸುತ್ತಾನೆ. "ಮಹಾರಾಜ! ಕೃಷ್ಣಾರ್ಜುನರನ್ನು ಕಂಡೊಡನೆಯೇ ಆನಂದಭರಿತನಾದ ಯುಧಿಷ್ಠಿರನು ಅವರಿಬ್ಬರನ್ನೂ ಸ್ವಾಗತಿಸುತ್ತಾ ಹೇಳಿದನು:

**ಸ್ವಾಗತಂ ದೇವಕೀಮಾತಃ ಸ್ವಾಗತಂ ತೇ ಧನಂಜಯ ।**
**ಪ್ರಿಯಂ ಮೇ ದರ್ಶನಂ ಗಾಢಂ**
**ಯುವಯೋರಚ್ಯುತಾರ್ಜುನೌ ।**
**ಅಕ್ಷತಾಭ್ಯಾಮರಿಷ್ಟಾಭ್ಯಾಂ**
**ಹತಃ ಕರ್ಣೋ ಮಹಾರಥಃ ॥೧॥**

"ದೇವಕೀನಂದನನೇ! ಶ್ರೀಕೃಷ್ಣ! ನಿನಗೆ ಸ್ವಾಗತವನ್ನು ಬಯಸುತ್ತೇನೆ. ಧನಂಜಯ! ನಿನಗೂ ಸ್ವಾಗತಬಯಸುತ್ತೇನೆ. ಅಚ್ಯುತಾರ್ಜುನರೇ! ನಿಮ್ಮ ಈಗಿನ ದರ್ಶನವು ನನಗೆ ಅತ್ಯಂತಪ್ರೀತಿಕರವಾಗಿದೆ.

ಏಕೆಂದರೆ: ಕ್ಷತರಾಗದ (ಬಾಣಗಳಿಂದ ಹೆಚ್ಚು ಗಾಯಗೊಳ್ಳದಿರುವ) ಮತ್ತು ಕುಶಲಿಗಳಾಗಿರುವ ನೀವಿಬ್ಬರೂ ಮಹಾರಥನಾದ ಕರ್ಣನನ್ನು ಸಂಹರಿಸಿರುವಿರಿ.

ಕೇಶವಾರ್ಜುನರೇ! ನಿಶ್ಚಯವಾಗಿಯೂ ಕರ್ಣನು ಯುದ್ಧಸಮಯದಲ್ಲಿ ಸರ್ಪಕ್ಕೆ ಸಮಾನನಾಗಿ ಅತ್ಯಂತಭಯಂಕರನಾಗಿ ಕಾಣುತ್ತಿದ್ದನು. ಸರ್ವಶಾಸ್ತ್ರವಿಶಾರದನಾಗಿದ್ದನು. ದುರ್ಯೋಧನನ ಸೈನ್ಯಕ್ಕೆ ನಾಯಕನಾಗಿದ್ದನು. ಕೌರವರಿಗೆಲ್ಲರಿಗೂ ಅವನು ಸುಖದಾಯಕನೂ ಮತ್ತು ಕವಚದಂತೆ ರಕ್ಷಕನೂ ಆಗಿದ್ದನು. ವೃಷಸೇನನಿಂದಲೂ ಮತ್ತು ಧನುಷ್ಮಂತನಾದ ಸುಷೇಣನಿಂದಲೂ ರಕ್ಷಿಸಲ್ಪಡುತ್ತಿದ್ದನು. ಕರ್ಣನು ಪರಶುರಾಮನಿಂದ ಅಸ್ತ್ರಶಾಸ್ತ್ರದ ಜ್ಞಾನವನ್ನು ಪಡೆದುಕೊಂಡಿದ್ದನು. ಮಹಾವೀರ್ಯನಾಗಿದ್ದನು. ಸುದುರ್ಜಯನಾಗಿದ್ದನು. (ಅವನನ್ನು ಜಯಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ.) ಎಲ್ಲ ಲೋಕಗಳಲ್ಲಿಯೂ ಸರ್ವಶ್ರೇಷ್ಠನಾದ ರಥಿಯಾಗಿದ್ದನು. ಮೂರು ಲೋಕಗಳಲ್ಲಿಯೂ ಖ್ಯಾತಿಯನ್ನು ಪಡೆದಿದ್ದನು. ಧೃತರಾಷ್ಟ್ರನ ಮಕ್ಕಳ ರಕ್ಷಕನಾಗಿದ್ದನು. ಸೈನ್ಯದ ಅಗ್ರಭಾಗದಲ್ಲಿ ಹೋಗುತ್ತಿದ್ದನು. ಶತ್ರುಸೈನಿಕರನ್ನು ಅವ್ಯಾಹತವಾಗಿ ಸಂಹರಿಸುತ್ತಿದ್ದನು. ಮಿತ್ರರಲ್ಲದವರ (ಶತ್ರುಗಳ) ಸಮೂಹವನ್ನೇ ಮರ್ದನಮಾಡುತ್ತಿದ್ದನು. ದುರ್ಯೋಧನನಿಗೆ ಹಿತವನ್ನುಂಟುಮಾಡಲು ಸರ್ವದಾ ಪ್ರಯತ್ನಿಸುತ್ತಲೇ ಇದ್ದನು. ಮಹಾಯುದ್ಧದಲ್ಲಿ ಇಂದ್ರಸಹಿತರಾದ ದೇವತೆಗಳಿಂದಲೂ ಎದುರಿಸಲು ಅಸಾಧ್ಯನಾಗಿದ್ದನು. ತೇಜಸ್ಸಿನಲ್ಲಿ ಅಗ್ನಿಗೆ ಸಮಾನನಾಗಿದ್ದನು. ಬಲದಲ್ಲಿ ವಾಯುವಿಗೆ ಸದೃಶನಾಗಿದ್ದನು. ಗಾಂಭೀರ್ಯದಲ್ಲಿ ಪಾತಾಳಕ್ಕೆ ಸಮಾನನಾಗಿದ್ದನು. ಸುಹೃದರಿಗೆ ಆನಂದವರ್ಧಕನಾಗಿದ್ದನು. ನನ್ನ ಮಿತ್ರರಿಗೆ ಯಮಪ್ರಾಯನಾಗಿದ್ದನು. ಅಂತಹ ಕರ್ಣನನ್ನು ನೀವಿಬ್ಬರೂ ಅದೃಷ್ಟವಶಾತ್ ಸಂಹರಿಸಿ–ರಾಕ್ಷಸನನ್ನು ಸಂಹರಿಸಿ ಬಂದ ದೇವತೆಗಳೋಪಾದಿಯಲ್ಲಿ ನನ್ನ ಬಳಿಗೆ ಬಂದಿರುತ್ತೀರಿ. ಎಲ್ಲ ಪ್ರಜೆಗಳನ್ನೂ ಸಂಹಾರಮಾಡಲು ಉದ್ಯುಕ್ತನಾದ ಕಾಲನೋಪಾದಿಯಲ್ಲಿದ್ದ ಕರ್ಣನೊಡನೆ ಧೈರ್ಯಗೆಡದೇ ನಾನು ಇಂದು ಘೋರವಾದ ಯುದ್ಧವನ್ನೇ ಮಾಡಿದೆನು.

ಕೃಷ್ಣಾರ್ಜುನರೇ! ಸಾತ್ಯಕಿ, ಧೃಷ್ಟದ್ಯುಮ್ನ, ನಕುಲ-ಸಹದೇವರು, ವೀರನಾದ ಶಿಖಂಡೀ, ದ್ರೌಪದಿಯ ಮಕ್ಕಳು ಮತ್ತು ಎಲ್ಲ ಪಾಂಚಾಲರೂ ನೋಡುತ್ತಿದ್ದಂತೆಯೇ ಕರ್ಣನು ನನ್ನ ಧ್ವಜವನ್ನು ಕತ್ತರಿಸಿದನು. ಪಾರ್ಶ್ವ ರಕ್ಷಕರನ್ನು ಸಂಹರಿಸಿದನು. ರಥದ ಕುದುರೆಗಳನ್ನೂ ಯಮಲೋಕಕ್ಕೆ ಕಳುಹಿಸಿದನು. ಮಹಾಬಾಹುವೇ! ಶ್ರೀಕೃಷ್ಣ! ವಿಜಯಗಳಿಸಲು ಸತತ



ವಾಗಿ ಪ್ರಯತ್ನಿಸುತ್ತಿದ್ದ ಮಹಾವೀರ್ಯನಾದ ಕರ್ಣನು ನಮ್ಮ ಕಡೆಯ ಮಹಾಯೋಧರೆಲ್ಲರನ್ನೂ ಗೆದ್ದು ನನ್ನನ್ನೂ ಆ ಮಹಾಯುದ್ಧದಲ್ಲಿ ಜಯಿಸಿದನು. ನಾನು ಯುದ್ಧದಿಂದ ಪರಾಙ್ಮುಖನಾಗಿದ್ದರೂ ಕರ್ಣನು ನನ್ನನ್ನು ಬೆನ್ನಟ್ಟಿಬಂದು ಅಲ್ಲಲ್ಲಿ ಅನೇಕಪ್ರಕಾರವಾಗಿ ಅವಮಾನಗೊಳಿಸುತ್ತಾ ಕಠಿನ

ವಾದ ಹಲವು ಮಾತುಗಳನ್ನೂ ಹೇಳಿದನು. ಸಂಶಯಕ್ಕೆ ಅವಕಾಶವೇ ಇಲ್ಲದಂತೆ ಅವನು ಹೇಳಿದುದೆಲ್ಲವನ್ನೂ ಸಾಕ್ಷಾತ್ತಾಗಿ ನಾನೇ ಕೇಳಿದೆನು. ನಾನೀಗ ಭೀಮಸೇನನ ಪ್ರಭಾವದಿಂದಾಗಿ ಇನ್ನೂ ಜೀವಿಸಿದ್ದೇನೆ. ನಾನು ಈ ವಿಷಯದಲ್ಲಿ ಹೆಚ್ಚೇನು ಹೇಳಲಿ? ಅರ್ಜುನ! ಇಂತಹ ಅವಮಾನವನ್ನು ಸಹಿಸಿಕೊಂಡಿರಲು ಖಂಡಿತವಾಗಿಯೂ ಸಾಧ್ಯವಿಲ್ಲವಾಗಿದೆ. ಅರ್ಜುನ! ಹದಿಮೂರು ವರ್ಷಗಳ ಪರ್ಯಂತವಾಗಿ ನಾನು ಕರ್ಣನ ದೆಸೆಯಿಂದಲೇ ಭಯಪಡುತ್ತಾ ರಾತ್ರಿಯಲ್ಲಿಯೂ ನಿದ್ರೆಮಾಡುತ್ತಿರಲಿಲ್ಲ. ಹಗಲಿನಲ್ಲಿಯೂ ಮನಸ್ಸಿನ ಅಶಾಂತಿಯಿಂದಾಗಿ ಯಾವ ವಿಧವಾದ ಸುಖವನ್ನೂ ಅನುಭವಿಸುತ್ತಿರಲಿಲ್ಲ. ಅವನ ಮೇಲಿನ ದ್ವೇಷದಿಂದಾಗಿ ನಾನು ಯಾವಾಗಲೂ ಪರಿತಪಿಸುತ್ತಲೇ ಇದ್ದೇನೆ. ನನ್ನ ಅವಸಾನವೇ ಸಂಭವಿಸುವುದರಲ್ಲಿದ್ದಾಗ *ವಾಧ್ರೀಣಸವೆಂಬ ಪ್ರಾಣಿಯಂತೆ–ರಣರಂಗದಿಂದಲೇ ಪಲಾಯನಮಾಡಿದೆನು.

‘ಯುದ್ಧದಲ್ಲಿ ಕರ್ಣನನ್ನು ಸಂಹರಿಸಲು ನನ್ನಿಂದ ಹೇಗೆ ಸಾಧ್ಯವಾಗುತ್ತದೆ?’– ಎಂಬ ಚಿಂತೆಯಲ್ಲಿಯೇ ಅತಿದೀರ್ಘವಾದ ಕಾಲವೇ ಕಳೆದುಹೋಯಿತು.

**ಜಾಗ್ರತ್ಸ್ವಪಂಶ್ಚ ಕೌನ್ತೇಯ ಕರ್ಣಮೇವ ಸದಾ ಹ್ಯಹಮ್ ।**
**ಪಶ್ಯಾಮಿ ತತ್ರ ತತ್ರೈವ ಕರ್ಣಭೂತಮಿದಂ ಜಗತ್ ॥೧೮॥**

ಅರ್ಜುನ! ಜಾಗ್ರದವಸ್ಥೆಯಲ್ಲಿಯೂ ಮತ್ತು ಸ್ವಪ್ನಾವಸ್ಥೆಯಲ್ಲಿಯೂ ನಾನು ಕರ್ಣನನ್ನೇ ಸದಾ ಕಾಣುತ್ತಿದ್ದೆನು. ನನಗೆ ಅಲ್ಲಲ್ಲಿ ಕರ್ಣನೇ

---

* ಈ ಶ್ಲೋಕದಲ್ಲಿ ವಾಧ್ರೀಣಸ ಇವ ದ್ವಿಪಃ । ಎಂಬ ಕಡೆಯ ಪಾದವಿದೆ. ವಾಧ್ರೀಣಸ ಎಂಬುದಕ್ಕೆ ವ್ಯಾಖ್ಯಾನಕಾರರು ಟಗರಿನ ಒಂದು ವಿಶೇಷ ಜಾತಿ ಎಂದು ಅರ್ಥ ಮಾಡಿರುತ್ತಾರೆ. ಯಸ್ಯ ನಾಸಾಪುಟಯೋಃ ವಾಧ್ರೀಸದೃಶಂ ಚರ್ಮ ಭವತಿ– ಮೂಗಿನ ಬಳಿ ತೊಗಲಿನ ಬಾರಿನಂತಹ ಚರ್ಮವಿರುತ್ತದೆ–ಎಂದು ಲಕ್ಷಣ ಹೇಳಿದ್ದಾರೆ. ದ್ವಿಪಃ ಎಂಬುದಕ್ಕೆ ವಕ್ತ್ರಕರ್ಣಾಭ್ಯಾಂ ಪಿಬತಿ ಇತಿ ದ್ವಿಪ ; ಮುಖ ಮತ್ತು ಕಿವಿಗಳಿಂದಲೂ ಕುಡಿಯುವುದರಿಂದ ಇದಕ್ಕೆ ದ್ವಿಪವೆಂದು ಹೆಸರು. ದ್ವಿಜಃ ಎಂದು ಮತ್ತೊಂದು ಪಾಠವಿದೆ. ವಾಧ್ರೀಣಸಪಕ್ಷಿಯ ಪರ್ಯಾಯದಲ್ಲಿ ವ್ಯಾಖ್ಯಾನಕಾರರು ಈ ಶ್ಲೋಕವನ್ನು ಸಮನ್ವಯಿಸಿದ್ದಾರೆ. ಕೃಷ್ಣಗ್ರೀವೋ ರಕ್ತಶಿರಾಃ ಶ್ವೇತಪಕ್ಷೋ ವಿಹಙ್ಗಮಃ । ಸ ವೈ ವಾಧ್ರೀಣಸಃ ಪ್ರೋಕ್ತೋ ಯಾಜ್ಞಿಕೈಃ ಪಿತೃಕರ್ಮಣಿ। ಕಪ್ಪಾದ ಕುತ್ತಿಗೆಯುಳ್ಳ, ಕೆಂಪು ತಲೆಯುಳ್ಳ ಬಿಳಿಯ ರೆಕ್ಕೆಗಳುಳ್ಳ ಪಕ್ಷಿಯು ವಾಧ್ರೀ

ಕಾಣುತ್ತಿದ್ದನು. ಹೆಚ್ಚೇನು ಹೇಳಲಿ–ನನಗೆ ಈ ಜಗತ್ತೇ ಕರ್ಣಮಯವಾಗಿರುವಂತೆ ಕಾಣುತ್ತಿದ್ದಿತು.

**ಯತ್ರ ತತ್ರ ಹಿ ಗಚ್ಛಾಮಿ ಕರ್ಣಾದ್ಭೀತೋ ಧನಂಜಯ ।**
**ತತ್ರ ತತ್ರ ಹಿ ಪಶ್ಯಾಮಿ ಕರ್ಣಮೇವಾಗ್ರತಃ ಸ್ಥಿತಮ್ ॥೧೯॥**

ಕರ್ಣನಿಂದ ಭಯಗೊಂಡು ನಾನು ಎಲ್ಲೆಲ್ಲಿಗೆ ಹೋಗುತ್ತಿದ್ದೆನೋ ಅಲ್ಲಲ್ಲಿಯೇ ನಾನು ನನ್ನ ಮುಂದೆ ಕರ್ಣನು ನಿಂತಿರುವುದನ್ನೇ ಕಾಣುತ್ತಿದ್ದೆನು. ಯುದ್ಧದಿಂದ ಪಲಾಯನಮಾಡದ ಆ ವೀರನಿಂದಲೇ ರಥಾಶ್ವಸಹಿತನಾಗಿದ್ದ ನಾನು ಜಯಿಸಲ್ಪಟ್ಟು ಜೀವದೊಡನೆ ಬಿಡಲ್ಪಟ್ಟೆನು. ಆಹವಶೋಭಿಯಾದ ಕರ್ಣನಿಂದ ಶರೀರಾದ್ಯಂತವಾಗಿ ಕ್ಷತ-ವಿಕ್ಷತನಾಗಿರುವ ನನಗೆ ಜೀವಿಸಿರುವುದರಿಂದಾಗಲೀ– ರಾಜ್ಯದಿಂದಾಗಲೀ ಪ್ರಯೋಜನವೇನಿದೆ! ಈ ಹಿಂದಿನ ಯುದ್ಧಗಳಲ್ಲಿ ನನಗೆ ಭೀಷ್ಮನಿಂದಾಗಲೀ, ಕೃಪ-ದ್ರೋಣರಿಂದಾಗಲೀ ಅವಮಾನವೇನೂ ಆಗಿರಲಿಲ್ಲ. ಆದರೆ ಇಂದು ನಡೆದ ಯುದ್ಧದಲ್ಲಿ ಮಹಾರಥನಾದ ಕರ್ಣನಿಂದ ನಾನು ಬಹಳ ಅವಮಾನಿತನಾದೆನು. ಕುಂತೀಪುತ್ರ! ಈ ಕಾರಣಗಳಿಂದ ನಾನು ನಿನ್ನನ್ನೀಗ ಪ್ರಶ್ನಿಸುತ್ತೇನೆ. ನೀನು ಕುಶಲನಾಗಿಯೇ ಇದ್ದು ಸ್ವಲ್ಪವಾದರೂ ಗಾಯಗೊಳ್ಳದೇ ಕರ್ಣನನ್ನು ಹೇಗೆ ಸಂಹರಿಸಿದೆ? ಈ ಎಲ್ಲ ವಿಷಯಗಳನ್ನೂ ನನಗೆ ಸಂಪೂರ್ಣವಾಗಿ ವಿವರಿಸಿ ಹೇಳು.

---

ಣಸವೆಂದು ಯಾಜ್ಞಿಕರು ಪಿತೃಕರ್ಮಗಳಲ್ಲಿ ಹೇಳುತ್ತಾರೆ. ನಿಘಂಟುಕಾರರು: ಖಡ್ಗಮೃಗ–ಘೇಂಡಾಮೃಗ, ಮೂಗಿನ ಮೇಲೆ ಒಂದು ಅಥವಾ ಎರಡು ಕೊಂಬುಗಳುಳ್ಳ ಮತ್ತು ಮಡಿಕೆಯಾದ ದಪ್ಪ ಚರ್ಮದ ರಕ್ಷಾಕವಚವುಳ್ಳ ಭಾರವಾದ ದೊಡ್ಡ ಚತುಷ್ಪಾದಿ. ಮರಣೇ ಉಪಸ್ಥಿತೇ ಸತಿ ಯಾತಃ ಪಲಾಯಿತೋಽಸ್ಮಿ–ಮರಣವು ಸನ್ನಿಹಿತವಾಗಲಾಗಿ ನಾನು ರಣಾಂಗಣದಿಂದ ಪಲಾಯಿತನಾದೆನು ಎಂಬ ವ್ಯಾಖ್ಯಾನಕಾರರ ವ್ಯಾಖ್ಯೆಯನ್ನು ಅನುಸರಿಸಿ ಅರ್ಥಮಾಡಲಾಗಿದೆ. ಮತ್ತೊಂದು ಪಾಠಾಂತರದ ಪ್ರಕಾರ ಈ ಶ್ಲೋಕದ ಉತ್ತರಾರ್ಧವು ಹೀಗಿದೆ: ಆತ್ಮನೋ ಮರಣಂ ಜಾನನ್ವಾಧ್ರೀಣಸ ಇವ ದ್ವಿಪಃ । ತನ್ನ ಮರಣವು ಸನ್ನಿಹಿತವಾಗಿರುವುದೆಂಬುದನ್ನು ತಿಳಿದು ವಾಧ್ರೀಣಸಪ್ರಾಣಿಯು (ಪಕ್ಷಿಯು) ಸಂಕಟಪಡುವಂತೆ ಕರ್ಣನ ಮೇಲಿನ ದ್ವೇಷದಿಂದ ಯುಕ್ತನಾಗಿರುವ ನಾನು ಸರ್ವದಾ ಪರಿತಪಿಸುತ್ತೇನೆ.” ಪ್ರಕೃತ ಸನ್ನಿವೇಶಕ್ಕೆ ಈ ಅರ್ಥವೇ ಹೆಚ್ಚು ಸಮಂಜಸವಾಗಿರುವಂತೆ ಕಾಣುತ್ತದೆ.

**ಶಕ್ರತುಲ್ಯಬಲೋ ಯುದ್ಧೇ ಯಮತುಲ್ಯಃ ಪರಾಕ್ರಮೇ ।**
**ರಾಮತುಲ್ಯಸ್ತಥಾಸ್ತ್ರೇಣ ಸ ಕಥಂ ವೈ ನಿಷೂದಿತಃ ॥೨೪॥**

ಯುದ್ಧದಲ್ಲಿ ಇಂದ್ರಸದೃಶಬಲನಾಗಿದ್ದ, ಪರಾಕ್ರಮದಲ್ಲಿ ಯಮನಿಗೆ ಸಮಾನನಾಗಿದ್ದ, ಅಸ್ತ್ರವಿದ್ಯೆಯಲ್ಲಿ ಪರಶುರಾಮನಿಗೆ ಸಮಾನನಾಗಿದ್ದ ಕರ್ಣನನ್ನು ನೀನು ಹೇಗೆ ಸಂಹರಿಸಿದೆ?

ಕರ್ಣನು ಮಹಾರಥನೆಂಬ ಖ್ಯಾತಿಯನ್ನು ಪಡೆದಿದ್ದನು. ಸಕಲ ವಿಧವಾದ ಯುದ್ಧಗಳಲ್ಲಿಯೂ ನಿಷ್ಣಾತನಾಗಿದ್ದನು. ಧನುರ್ಧಾರಿಗಳಲ್ಲಿ ಶ್ರೇಷ್ಠನಾಗಿದ್ದನು. ನಮ್ಮ ಶತ್ರುಗಳಲ್ಲಿ ಅವನು ಏಕೈಕಪ್ರಧಾನಪುರುಷ ನಾಗಿದ್ದನು. ನಿನ್ನ ಸಲುವಾಗಿಯೇ (ನಿನ್ನನ್ನು ಸಂಹರಿಸುವ ಸಲುವಾಗಿಯೇ) ಪುತ್ರಸಹಿತನಾದ ಧೃತರಾಷ್ಟ್ರನು ಮಹಾಬಲನಾದ ರಾಧೇಯನನ್ನು ಬಹಳವಾಗಿ ಪೂಜಿಸಿ ಗೌರವಿಸುತ್ತಿದ್ದನು. ಅಂತಹವನು ನಿನ್ನಿಂದ ಹೇಗೆ ಹತನಾದನು? ಅರ್ಜುನ! ಸರ್ವಕಾಲದಲ್ಲಿಯೂ ದುರ್ಯೋಧನನು ತನ್ನ ಕಡೆಯ ಎಲ್ಲ ಯೋಧರುಗಳಲ್ಲಿ ಕರ್ಣನೊಬ್ಬನನ್ನೇ ನಿನ್ನ ಮೃತ್ಯುವೆಂದು ಭಾವಿಸುತ್ತಿದ್ದನು. ಪುರುಷವ್ಯಾಘ್ರನೇ! ಕೌಂತೇಯ! ಅಂತಹ ಕರ್ಣನನ್ನು ನೀನು ಯುದ್ಧದಲ್ಲಿ ಹೇಗೆ ವಿನಾಶಗೊಳಿಸಿದೆ? ಕರ್ಣನು ಯಾವ ರೀತಿಯಲ್ಲಿ ನಿನ್ನಿಂದ ಹತನಾದನು?–ಈ ವಿಷಯವನ್ನು ನನಗೆ ವಿಶದವಾಗಿ ಹೇಳು. ಪುರುಷಶಾರ್ದೂಲನೇ! ರುರುವಿನ (ಜಿಂಕೆಯ) ಶಿರಸ್ಸನ್ನು ಸಿಂಹವು ತಿರುಚುವಂತೆ–ಎಲ್ಲ ಸುಹೃದರ ಸಮ್ಮುಖದಲ್ಲಿ ನಿನ್ನೊಡನೆ ಯುದ್ಧ ಮಾಡುತ್ತಿದ್ದ ಕರ್ಣನ ಶಿರಸ್ಸನ್ನು ನೀನು ಹೇಗೆ ತುಂಡರಿಸಿದೆ ಎಂಬುದನ್ನು ಹೇಳು. ಸಮರಾಂಗಣದಲ್ಲಿ ಸೂತಪುತ್ರನಾದ ಕರ್ಣನು ನಿನ್ನನ್ನು ಹುಡುಕುವ ಸಲುವಾಗಿ ದಿಕ್ಕುಗಳಲ್ಲಿಯೂ ಉಪದಿಕ್ಕುಗಳಲ್ಲಿಯೂ ಸುತ್ತಾಡುತ್ತಿದ್ದನು. ನಿನ್ನನ್ನು ಹುಡುಕಿಕೊಟ್ಟವರಿಗೆ ಆನೆಗೆ ಸಮಾನವಾದ ಆರು ಎತ್ತುಗಳನ್ನು ಪಾರಿತೋಷಿಕರೂಪವಾಗಿ ಕೊಡಲಿಚ್ಛಿಸಿದ್ದನು. ಅಂತಹ ದುರಾತ್ಮನಾದ ಕರ್ಣನೀಗ ಸುತೀಕ್ಷ್ಣವಾದ ಹದ್ದಿನ ರೆಕ್ಕೆಗಳಿಂದ ಕೂಡಿದ ಬಾಣಗಳಿಂದ ಹತನಾಗಿ ರಣಭೂಮಿಯಲ್ಲಿ ಬಿದ್ದಿರುವನಲ್ಲವೇ? ಅರ್ಜುನ! ನಿಜವಾಗಿಯೂ ಇಂದು ನೀನು ಸೂತಪುತ್ರನನ್ನು ಸಂಹರಿಸಿ ನನಗೆ ಅತ್ಯಂತಪ್ರಿಯವಾದ ಕಾರ್ಯವನ್ನೇ ಮಾಡಿರುವೆ. ದುರ್ಯೋಧನನಿಂದ ಸದಾ ಸಮ್ಮಾನಿತ

ನಾಗುತ್ತಿದ್ದ ಅತಿಗರ್ವಿತನಾದ ಕರ್ಣನು ನಿನ್ನ ಸಲುವಾಗಿ ನಮ್ಮ ಸೈನ್ಯದ ಮೇಲೆ ಸರ್ವತ್ರ ದಾಳಿಮಾಡುತ್ತಿದ್ದನು. ತಾನೇ ಮಹಾಶೂರನೆಂದು ಭಾವಿಸಿದ್ದ ಕರ್ಣನೊಡನೆ ನೀನು ಯುದ್ಧದಲ್ಲಿ ತೊಡಗಿ ಅವನನ್ನು ಇಂದಿನ ಯುದ್ಧದಲ್ಲಿ ಸಂಹರಿಸಿದೆಯಾ? ನಿನ್ನಿಂದವನು ಇಂದು ನಿಶ್ಚಯವಾಗಿಯೂ ಹತನಾದನೇ? ರಣಕ್ಷೇತ್ರದಲ್ಲಿ ನಿನ್ನನ್ನು ಹುಡುಕಿಕೊಟ್ಟವರಿಗೆ ಆನೆ-ಕುದುರೆ ಗಳಿಂದೊಡಗೂಡಿದ ಸುವರ್ಣಮಯವಾದ ಶ್ರೇಷ್ಠರಥವನ್ನು ಕೊಡಲು ಅವನು ಇಚ್ಛಿಸಿದ್ದನು. ಆ ಪಾಪಿಷ್ಠನು ಯುದ್ಧದಲ್ಲಿ ಯಾವಾಗಲೂ ನಿನ್ನೊಡನೆಯೇ ಸ್ಪರ್ಧಿಸುತ್ತಿದ್ದನು. ಯುದ್ಧದಲ್ಲಿ ಅವನಿಂದು ನಿನ್ನಿಂದ ನಿಜವಾಗಿಯೂ ಹತನಾದನೇ? ಶೌರ್ಯದ ಮದದಿಂದ ಕೊಬ್ಬಿಹೋಗಿದ್ದ ಕರ್ಣನು ಎಲ್ಲ ಸಮಯಗಳಲ್ಲಿಯೂ ಕೌರವರ ಸಭೆಯಲ್ಲಿ ತನ್ನ ಪೌರುಷದ ವಿಷಯವಾಗಿ ಬಡಾಯಿಕೊಚ್ಚಿಕೊಳ್ಳುತ್ತಿದ್ದನು. ದುರ್ಯೋಧನನಿಗೆ ಅವನು ಅತ್ಯಂತಪ್ರಿಯನಾಗಿದ್ದನು. ಅಂತಹ ಪಾಪಿಷ್ಠನು ನಿನ್ನಿಂದ ಇಂದು ಯುದ್ಧದಲ್ಲಿ ಹತನಾದನೇ? ಪಾಪಿಷ್ಠನಾದ ಕರ್ಣನಿಂದು ನಿನ್ನೊಡನೆ ಯುದ್ಧದಲ್ಲಿ ತೊಡಗಿ ನಿನ್ನ ಧನುಸ್ಸಿನಿಂದ ಪ್ರಮುಕ್ತವಾದ, ಕೆಂಪಾದ ಅಂಗಗಳುಳ್ಳ, ಆಕಾಶಚಾರಿಗಳಾದ ಬಾಣಗಳಿಂದ ಛಿನ್ನ-ಭಿನ್ನವಾದ ಶರೀರವುಳ್ಳವನಾಗಿ ಯುದ್ಧಭೂಮಿಯಲ್ಲಿ ಪ್ರಾಣಗಳನ್ನು ತೊರೆದು ಮಲಗಿರುವನೇ? ಕರ್ಣನ ಅವಸಾನದಿಂದಾಗಿ ದುರ್ಯೋಧನನ ತೋಳುಗಳೆರಡೂ ಭಗ್ನವಾದಂತಾ ಯಿತೇ? ದರ್ಪಿಷ್ಠನಾದ ಆ ಕರ್ಣನು ಎಲ್ಲ ಸಮಯಗಳಲ್ಲಿಯೂ ರಾಜರ ಮಧ್ಯದಲ್ಲಿ ದುರ್ಯೋಧನನಿಗೆ ಹರ್ಷವನ್ನುಂಟುಮಾಡುತ್ತಾ ಮೋಹಪರವಶ ನಾಗಿ 'ಅಹಂ ಫಾಲ್ಗುನಸ್ಯ ಹನ್ತಾ' 'ನಾನೇ ಅರ್ಜುನಸಂಹಾರಕನು'– ಎಂದು ತನ್ನನ್ನು ತಾನೇ ಶ್ಲಾಘಿಸಿಕೊಳ್ಳುತ್ತಿದ್ದನು. ಅವನ ಆ ಮಾತು ಅವನು ಹೇಳಿದ ರೀತಿಯಲ್ಲಿ ಆಗಲಿಲ್ಲವಲ್ಲವೇ? ಅವನು ಹೇಳಿದುದಕ್ಕೆ ವಿರುದ್ಧವಾಗಿ ನೀನೇ ಇಂದು ಅವನನ್ನು ಸಂಹರಿಸಿರುವೆಯಲ್ಲವೇ? ಇಂದ್ರಪುತ್ರ! "ಕುಂತಿಯ ಮಗನಾದ ಅರ್ಜುನನು ಜೀವಂತನಾಗಿರುವವರೆಗೆ ನಾನು ಇತರರಿಂದ ಕಾಲುಗಳನ್ನು ತೊಳೆಸಿಕೊಳ್ಳುವುದಿಲ್ಲ"–ಎಂಬುದು ಆ ಮಂದಬುದ್ಧಿ ಯವನಾದ ಕರ್ಣನ ವ್ರತವಾಗಿದ್ದಿತು. ಅಂತಹ ಕರ್ಣನಿಂದು ನಿನ್ನಿಂದ ಹತ ನಾಗಿಹೋದನೇ? (ಅವನು ಮಾಡಿದ್ದ ಪ್ರತಿಜ್ಞೆಯು ನಿಷ್ಫಲವಾಗಿಬಿಟ್ಟಿತೇ?)

ಅರ್ಜುನ! ದುಷ್ಟಬುದ್ಧಿಯವನಾದ ಕರ್ಣನು ತುಂಬಿದ ಸಭೆಯಲ್ಲಿ ಕುರುಪ್ರವೀರರ ಮಧ್ಯದಲ್ಲಿ ದ್ರೌಪದಿಯನ್ನು "ಕಿಂ ಪಾಣ್ಡವಾಂಸ್ತ್ವಂ ನ ಜಹಾಸಿ ಕೃಷ್ಣೇ ಸುದುರ್ಬಲಾನ್ಪತಿತಾನ್ಹೀನಸತ್ತ್ವಾನ್-ಕೃಷ್ಣೇ! ದುರ್ಬಲರಾದ, ಪತಿತರಾದ, ಸತ್ತ್ವಹೀನರಾದ ಪಾಂಡವರನ್ನು ನೀನೇಕೆ ಪರಿತ್ಯಜಿಸುವುದಿಲ್ಲ?" –ಎಂದು ಪ್ರಶ್ನಿಸಿದ್ದನು. (ಅವನಿಗಿಂದು ಸರಿಯಾದ ಉತ್ತರವು ಸಿಕ್ಕಿದಂತಾಯಿತಲ್ಲವೇ?) ಅರ್ಜುನ! ಪಾಪಬುದ್ಧಿಯವನಾದ ಕರ್ಣನು ನಿನ್ನನ್ನು ಸಂಹರಿಸುವ ಸಲುವಾಗಿ ಈ ಪ್ರತಿಜ್ಞೆಯನ್ನು ಮಾಡಿ ಇಂದು ಯುದ್ಧಕ್ಕೆ ಬಂದಿದ್ದನು. 'ನಾಹಂ ಹತ್ವಾ ಸಹ ಕೃಷ್ಣೇನ ಪಾರ್ಥಂ ಇಹೋಪಯಾತಾ। ಕೃಷ್ಣನೊಡನೆ ಪಾರ್ಥನನ್ನು ನಾನಿಂದು ಸಂಹರಿಸದೆ ಹಿಂದಿರುಗುವುದಿಲ್ಲ'–ಎಂಬುದೇ ಅವನ ಪ್ರತಿಜ್ಞೆಯಾಗಿದ್ದಿತು. ವ್ಯರ್ಥ ಪ್ರತಿಜ್ಞನಾದ ಅವನಿಂದು ನಿನ್ನ ಬಾಣಗಳಿಂದ ಭಿನ್ನವಾದ ಶರೀರವುಳ್ಳವನಾಗಿ ಸಮರಾಂಗಣದಲ್ಲಿ ಮಲಗಿರುವನಲ್ಲವೇ? ಅರ್ಜುನ! ಇಂದು ಸೃಂಜಯರಿಗೂ ಮತ್ತು ಕೌರವರಿಗೂ ನಡೆದ ಯುದ್ಧದ ವಿಷಯವು ನಿನಗೆ ತಿಳಿದಿದ್ದಿತೇ? ಸೃಂಜಯ-ಕೌರವರ ಸಂಘರ್ಷದಲ್ಲಿ ನನಗೆ ಈ ದುರವಸ್ಥೆಯುಂಟಾಯಿತು. (ಕರ್ಣನ ಬಾಣಗಳಿಂದ ಕ್ಷತ-ವಿಕ್ಷತನಾಗಿ ಹೋದೆನು.) ನನ್ನನ್ನು ಈ ದುರವಸ್ಥೆಗೆ ಗುರಿಮಾಡಿದ ದುರಾತ್ಮನಾದ ಕರ್ಣನಿಂದು ನಿನ್ನಿಂದ ಹತನಾದನೇ? ಸವ್ಯಸಾಚಿಯೇ! ಗಾಂಡೀವಧನುಸ್ಸಿನಿಂದ ಪ್ರಮುಕ್ತವಾದ ಜಾಜ್ವಲ್ಯಮಾನವಾದ ಬಾಣಗಳಿಂದ ಅತಿಮಂದಬುದ್ಧಿಯವನಾದ ಕರ್ಣನ, ಕುಂಡಲಗಳಿಂದ ಯುಕ್ತವಾದ, ಪ್ರಕಾಶಮಾನವಾದ ಶಿರಸ್ಸು ಇಂದಿನ ಯುದ್ಧದಲ್ಲಿ ಶರೀರದಿಂದ ಕತ್ತರಿಸಲ್ಪಟ್ಟಿತೇ? ಕರ್ಣನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಸಮಯದಲ್ಲಿ ಕರ್ಣನ ವಧೆಯ ಸಲುವಾಗಿ ನಾನು ನಿನ್ನನ್ನೇ ಚಿಂತಿಸುತ್ತಿದ್ದೆನು. ಆಗ ನನ್ನ ಚಿಂತೆಯು (ಅರ್ಜುನನು ಕರ್ಣನನ್ನು ಕೂಡಲೇ ಸಂಹರಿಸುವಂತಾಗಬೇಕೆಂದಿದ್ದ ಆಶಯವು) ಕರ್ಣನನ್ನು ಸಂಹರಿಸಿ ಭೂಮಿಯ ಮೇಲೆ ಕೆಡುಹಿದ ನಿನ್ನಿಂದ ಸಾರ್ಥಕಮಾಡಲ್ಪಟ್ಟಿತೇ? (ಆ ನನ್ನ ಚಿಂತನೆಯನ್ನು ಅವನ ಸಂಹಾರದಿಂದ ನೀನು ಸಫಲಗೊಳಿಸಿದೆಯಾ?)

ಕರ್ಣನ ಆಶ್ರಯದಿಂದಾಗಿ ಸುಯೋಧನನು ನಮ್ಮನ್ನು ದರ್ಪ

ಪೂರ್ಣನಾಗಿ ನೋಡುತ್ತಿದ್ದನು. ದುರ್ಯೋಧನನ ಆ ಆಶಯವನ್ನು ಅತುಲವಾದ ಪರಾಕ್ರಮವನ್ನು ತೋರಿಸಿ ಭಗ್ನಗೊಳಿಸಿದೆಯಲ್ಲವೇ? ಹಿಂದೆ ತುಂಬಿದ ಸಭೆಯಲ್ಲಿ ಸಕಲಕೌರವರ ಸಮಕ್ಷದಲ್ಲಿ ಆ ದುರ್ಮತಿಯಾದ ಕರ್ಣನು ನಮ್ಮನ್ನು, ಎಣ್ಣೆಯನ್ನು ತೆಗೆದ ಎಳ್ಳಿಗೆ ಸಮಾನರೆಂದೂ, ನಪುಂಸಕರೆಂದೂ ಹಳಿದಿದ್ದನು. ಸೂತಪುತ್ರನಾದ, ಅಸಹನಶೀಲನಾದ, ದುಷ್ಟಬುದ್ಧಿಯಾದ ಕರ್ಣನು ನಿನ್ನೊಡನೆ ಯುದ್ಧಮಾಡಲು ಬಂದು ನಿನ್ನಿಂದ ಹತನಾದನೇ? ದುರಾತ್ಮನಾದ ಸೂತಪುತ್ರನು ಗಹಗಹಿಸಿ ನಗುತ್ತಾ ಸಭಾಮಧ್ಯದಲ್ಲಿ ದುಃಶಾಸನನೊಡನೆ ಈ ಮಾತುಗಳನ್ನು ಹೇಳಿದ್ದನು:

**"ಸೌಬಲೇನ ನಿರ್ಜಿತಾಂ ಯಾಜ್ಞಸೇನೀಂ ಸ್ವಯಂ ಪ್ರಸಹ್ಯಾನಯ"**

"ಪಗಡೆಯಾಟದಲ್ಲಿ ಶಕುನಿಯಿಂದ ಜಯಿಸಲ್ಪಟ್ಟ ದ್ರೌಪದಿಯನ್ನು ನೀನೇ ಹೋಗಿ ಬಲಾತ್ಕಾರಪೂರ್ವಕವಾಗಿ ಸಭೆಗೆ ಎಳೆದುಕೊಂಡು ಬಾ."–ಹೀಗೆ ದುರುಕ್ತಿಗಳನ್ನಾಡಿದ ದುರಾತ್ಮನಿಂದು ನಿನ್ನಿಂದ ಹತನಾದನೇ? ಅಲ್ಪ ಬುದ್ಧಿಯವನಾದ ಕರ್ಣನು ಭೂಮಂಡಲದಲ್ಲಿರುವ ಶಸ್ತ್ರಧಾರಿಗಳಲ್ಲಿ ತಾನೇ ಶ್ರೇಷ್ಠನಾದವನೆಂದು ಭಾವಿಸಿಕೊಂಡಿದ್ದನು. ರಥಾತಿರಥರ ಗಣನೆಯಲ್ಲಿ ಭೀಷ್ಮನು ಅವನನ್ನು ಅರ್ಧರಥನೆಂದು ಗಣನೆಮಾಡಿದ್ದನು. ಆ ಕಾರಣ ದಿಂದಾಗಿ ದುಷ್ಟಬುದ್ಧಿಯವನಾದ ಕರ್ಣನು ಪಿತಾಮಹನನ್ನು ಬಹಳವಾಗಿ ನಿಂದಿಸಿದನು. ಮಹಾತ್ಮನೇ! ಭೀಷ್ಮನಿಂದ ಅರ್ಧರಥನೆಂದು ಪರಿಗಣಿತ ನಾದ ಅಧಿರಥನ ಮಗನಾದ ಆ ಕರ್ಣನನ್ನೇ ನೀನಿಂದು ಸಂಹರಿಸಿದೆಯಾ? ಕರ್ಣನ ಭರ್ತ್ಸನವೆಂಬ ವಾಯುವಿನಿಂದ ಪ್ರಚೋದಿತವಾದ ಕೋಪದಿಂದ ಹುಟ್ಟಿದ್ದ ಈ ಅಗ್ನಿಯು ನನ್ನ ಹೃದಯದಲ್ಲಿ ಆಶ್ರಯಮಾಡಿಕೊಂಡಿದೆ.

**"ಹತೋ ಮಯಾ ಸೋಽದ್ಯ ಸಮೇತ್ಯ ಕರ್ಣಃ**-ಆ ಕರ್ಣನು ನನ್ನೊಡನೆ ಯುದ್ಧಮಾಡಲು ಬಂದು ನನ್ನಿಂದ ಹತನಾದನು"–ಎಂದು ಹೇಳುತ್ತಾ ನನ್ನ ಹೃದಯಾಂತರ್ಗತವಾಗಿರುವ ಅಗ್ನಿಯನ್ನು ಉಪಶಮನ ಗೊಳಿಸುವೆಯಾ? ನಿಶ್ಚಯವಾಗಿಯೂ ಕರ್ಣನು ಹತನಾದನೆಂಬ ವಾರ್ತೆಯು ನನಗೆ ಸುದುರ್ಲಭವೇ ಸರಿ. (ಇಂತಹ ವಾರ್ತೆಯನ್ನು ನಾನು ಎಂದಾದರೂ ಕೇಳುವೆನೇ?–ಎಂಬುದೇ ನನ್ನ ಜೀವನದಲ್ಲಿ ಒಂದು ದೊಡ್ಡ ಆತಂಕವಾಗಿದ್ದಿತು.) ಕರ್ಣನು ಹೇಗೆ ಹತನಾದನೆಂಬುದನ್ನು

ಹೇಳು, ಅರ್ಜುನ! ವೃತ್ರಾಸುರನು ಹತನಾದನಂತರ ಭಗವಾನ್ ಇಂದ್ರದೇವನು ಎಲ್ಲ ದೇವತೆಗಳ ಅನುಧ್ಯಾನಕ್ಕೂ ಪಾತ್ರನಾದನು. ಅಂತೆಯೇ ನಾನೂ ಸಹ ನೀನು ಮಾಡಿರುವ ಸಾಹಸಕಾರ್ಯಕ್ಕಾಗಿ ಸರ್ವಕಾಲದಲ್ಲಿಯೂ ನಿನ್ನನ್ನು ಚಿಂತಿಸುತ್ತಿರುತ್ತೇನೆ."

೬೬ನೆಯ ಅಧ್ಯಾಯವು ಮುಗಿಯಿತು.

೬೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನ ಸಂಹಾರವನ್ನು ಇದುವರೆಗೂ ಮಾಡದಿರುವುದಕ್ಕೆ ಕಾರಣವನ್ನು ತಿಳಿಸಿದ ಅರ್ಜುನನು ಕರ್ಣನನ್ನು ಸಂಹರಿಸಲು ಪ್ರತಿಜ್ಞೆಮಾಡಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಧರ್ಮಶೀಲನಾದ, ಕ್ರುದ್ಧನಾಗಿದ್ದ ಯುಧಿಷ್ಠಿರ ರಾಜನ ಮಾತುಗಳನ್ನು ಕೇಳಿ ಅನಂತವೀರ್ಯನಾದ, ಮಹಾತ್ಮನಾದ, ಅತಿರಥನಾದ ಅರ್ಜುನನು–ದುರ್ಧರ್ಷನಾದ, ಮಹಾಸತ್ತ್ವನಾದ ಯುಧಿಷ್ಠಿರನನ್ನು ಕುರಿತು ಹೇಳಿದನು:

"ಮಹಾರಾಜ! ನಾನಿಂದು ಸಂಶಪ್ತಕರೊಡನೆ ಯುದ್ಧಮಾಡು ತ್ತಿದ್ದೆನು. ಆ ಸಮಯದಲ್ಲಿ ಕುರುಸೈನ್ಯದ ನಾಯಕನಾಗಿದ್ದ ಅಶ್ವತ್ಥಾಮನು ಸರ್ಪಸದೃಶವಾಗಿದ್ದ, ಆಕಾಶಗಾಮಿಗಳಾದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ನನ್ನ ಮುಂದೆ ಬಂದುನಿಂತನು. ಪಾರ್ಥಿವಶ್ರೇಷ್ಠನೇ! ಇತ್ತಲಾಗಿ ಮೇಘದ ಶಬ್ದಕ್ಕೆ ಸಮಾನವಾದ ಗಂಭೀರ ಧ್ವನಿಯುಕ್ತವಾಗಿದ್ದ ನನ್ನ ರಥವನ್ನೇ ಎಲ್ಲ ಕೌರವಸೈನಿಕರೂ ಆಕ್ರಮಿಸಿ ನಿಂತರು. ನನ್ನನ್ನು ಆಕ್ರಮಿಸಿದ ಯೋಧರಲ್ಲಿ ಐದು ನೂರು ಯೋಧರನ್ನು ಸಂಹರಿಸಿ, ಕೌರವಸೈನ್ಯವನ್ನು ಭಗ್ನಗೊಳಿಸಿ, ಅನಂತರ ನಾನು ಅಶ್ವತ್ಥಾಮನೊಡನೆ ಯುದ್ಧಕ್ಕೆ ಹೋದೆನು. ಸಲಗವೊಂದು ಸಿಂಹದ ಕಡೆಗೆ ಧಾವಿಸುವಂತೆ–ಅಶ್ವತ್ಥಾಮನು ನನ್ನ ಸಮ್ಮುಖಕ್ಕೆ ಬಂದು ಪ್ರಯತ್ನಪೂರ್ವಕವಾಗಿ ನನ್ನನ್ನು ಆಕ್ರಮಿಸಿದನು. ನನ್ನಿಂದ ವಧಿಸಲ್ಪಡುತ್ತಿದ್ದ ಕೌರವರಥಿಗಳನ್ನು ಸಂರಕ್ಷಿಸಲು ಅವನು ಬಹಳವಾಗಿ ಪ್ರಯತ್ನಪಟ್ಟನು.

ಭಾರತನೇ! ಭಯಗೊಳಿಸಲು ಅಸಾಧ್ಯನಾದ, ಆಚಾರ್ಯಪುತ್ರನಾದ, ಕುರುಪ್ರವರನಾದ ಅಶ್ವತ್ಥಾಮನು ವಿಷ ಮತ್ತು ಅಗ್ನಿಗಳಿಗೆ ಸಮಾನವಾದ ಮತ್ತು ನಿಶಿತವಾದ ಬಾಣಗಳಿಂದ ನನ್ನನ್ನೂ ಮತ್ತು ಶ್ರೀಕೃಷ್ಣನನ್ನೂ ಪೀಡಿಸತೊಡಗಿದನು. ನನ್ನೊಡನೆ ಯುದ್ಧಮಾಡುತ್ತಿದ್ದ ಅಶ್ವತ್ಥಾಮನ ಸಲುವಾಗಿ ಎಂಟೆಂಟು ಎತ್ತುಗಳಿಂದ ಎಳೆಯಲ್ಪಡುತ್ತಿದ್ದ ಎಂಟು ನೂರು ಬಂಡಿಗಳು ಸಾವಿರಾರು ಬಾಣಗಳನ್ನು ತುಂಬಿಕೊಂಡು ಅವನ ಹಿಂದೆಯೇ ಬರುತ್ತಿದ್ದುವು. ಅವನಿಂದ ಬಿಡಲ್ಪಟ್ಟ ಆ ಅಸಂಖ್ಯಾತ ಬಾಣಗಳನ್ನೂ ನಾನು–ಬಿರುಗಾಳಿಯು ಮೋಡಗಳ ಸಮೂಹವನ್ನು ನಾಶಗೊಳಿಸುವಂತೆ–ನನ್ನ ಬಾಣಗಳಿಂದ ನಾಶಗೊಳಿಸಿಬಿಟ್ಟೆನು. ಅನಂತರ ಧನುರ್ವಿದ್ಯೆಯ ಶಿಕ್ಷಣ, ಅಸ್ತ್ರಗಳ ಸಿದ್ಧಿ, ಬಲ ಮತ್ತು ಪ್ರಯತ್ನಗಳ ಮೂಲಕವಾಗಿ ಅಶ್ವತ್ಥಾಮನು–ಕಾಳಮೇಘವು ವರ್ಷಾಕಾಲದಲ್ಲಿ ಸತತವಾಗಿ ಮಳೆಗರೆಯುವಂತೆ–ಕಿವಿಯ ತುದಿಯವರೆಗೂ ಸೆಳೆದುಬಿಟ್ಟ ಅನೇಕ ಬಾಣಗಳ ಸಮೂಹಗಳನ್ನು ನನ್ನ ಮೇಲೆ ಸುರಿಸಿದನು. ದ್ರೋಣಪುತ್ರನು ಧನುಷ್ಪಾಣಿಯಾಗಿ ಸಮರಾಂಗಣದ ಸುತ್ತಲೂ ಸುತ್ತುತ್ತಿದ್ದನು. 'ಅವನು ಬಾಣಗಳನ್ನು ಯಾವಾಗ ಬತ್ತಳಿಕೆಯಿಂದ ತೆಗೆದುಕೊಳ್ಳುತ್ತಾನೆ? ಯಾವಾಗ ಧನುಸ್ಸಿನಲ್ಲಿ ಅನುಸಂಧಾನಮಾಡುತ್ತಾನೆ? ಮತ್ತು ಯಾವಾಗ ಬಿಡುತ್ತಾನೆ?' ಎಂಬುದಾವುದೂ ನಮಗೆ ತಿಳಿಯುತ್ತಲೇ ಇರಲಿಲ್ಲ. ಇದಕ್ಕೂ ಮಿಗಿಲಾಗಿ 'ಅವನು ಬಲಗೈಯಿಂದ ಬಾಣಗಳನ್ನು ಬಿಡುತ್ತಿರುವನೇ? ಎಡಗೈಯಿಂದ ಬಾಣಗಳನ್ನು ನಮ್ಮ ಮೇಲೆ ಬಿಡುತ್ತಿರುವನೇ?'–ಎಂಬುದನ್ನೂ ನಾವು ತಿಳಿಯದವರಾಗಿದ್ದೆವು. ಬಾಣಬಿಡುವುದರಲ್ಲಿ ಅವನ ಕೈಚಳಕವು ಅಸದೃಶವಾಗಿದ್ದಿತು.

ಮುಂದಕ್ಕೆ ಚಾಚಲ್ಪಟ್ಟಿದ್ದ ಜ್ಯಾಸಹಿತವಾದ ಅಶ್ವತ್ಥಾಮನ ಧನುಸ್ಸು ಮಂಡಲಾಕಾರವಾಗಿ ಇರುತ್ತಿದ್ದುದು ಮಾತ್ರವೇ ಕಾಣುತ್ತಿದ್ದಿತು. ಬಳಿಕ ಗುರುಪುತ್ರನು ನನ್ನನ್ನು ನಿಶಿತವಾದ ಐದು ಬಾಣಗಳಿಂದ ಪ್ರಹರಿಸಿದನು. ಅಂತೆಯೇ ವಾಸುದೇವನನ್ನೂ ಐದು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ನಾನು ನಿಮೇಷಮಾತ್ರದಲ್ಲಿ ವಜ್ರಾಯುಧಸದೃಶವಾದ ಮೂವತ್ತು ಬಾಣಗಳಿಂದ ಅಶ್ವತ್ಥಾಮನನ್ನು ಮರ್ದನಮಾಡಿದೆನು.

ನನ್ನಿಂದ ಪ್ರಮುಕ್ತವಾದ ಬಾಣಗಳಿಂದ ಸಮ್ಮರ್ದಿತನಾದ ಅವನು ಕ್ಷಣಮಾತ್ರದಲ್ಲಿ ಮುಳ್ಳುಹಂದಿಯ ಆಕಾರವನ್ನು ತಾಳಿದನು. ಶರೀರದ ಎಲ್ಲ ಭಾಗಗಳಿಂದಲೂ ರಕ್ತವನ್ನು ಸುರಿಸುತ್ತಿದ್ದ ಅಶ್ವತ್ಥಾಮನು, ನನ್ನಿಂದ ಪರಾಸ್ತರಾಗಿ ರಕ್ತದಿಂದ ತೋಯ್ದುಹೋಗಿದ್ದ ಸೈನಿಕಶ್ರೇಷ್ಠರನ್ನು ರಥಮಾರ್ಗದಲ್ಲಿ ನೋಡುತ್ತಾ ಕರ್ಣನ ರಥಸೈನ್ಯದೊಳಗೆ ಸೇರಿಕೊಂಡನು. ಯುದ್ಧದಲ್ಲಿ ಕೌರವಸೈನ್ಯವು ನನ್ನಿಂದ ಪರಾಜಿತವಾದುದನ್ನೂ, ತನ್ನ ಕಡೆಯ ಮಹಾಯೋಧರು ಭಯಗೊಂಡಿರುವುದನ್ನೂ ಮತ್ತು ಗಜಾಶ್ವಸೈನಿಕರು ಪಲಾಯನಮಾಡುತ್ತಿರುವುದನ್ನೂ ಕಂಡು ಶತ್ರುಗಳನ್ನು ಮಥಿಸುವ ಸ್ವಭಾವವುಳ್ಳ ಕರ್ಣನು ಐವತ್ತು ರಥಮುಖ್ಯರ ಸಮೇತನಾಗಿ ಅವಸರದಿಂದ ನನ್ನ ಸಮೀಪಕ್ಕೆ ಬಂದನು. ನಾನು ಕರ್ಣನೊಡನಿದ್ದ ಐವತ್ತು ರಥಮುಖ್ಯರನ್ನೂ ಸಂಹರಿಸಿ ಕರ್ಣನನ್ನು ಅಲ್ಲಿಯೇ ಬಿಟ್ಟು ನಿನ್ನನ್ನು ನೋಡುವ ಸಲುವಾಗಿ ಅವಸರದಿಂದ ನಿನ್ನ ಬಳಿಗೆ ಬಂದೆನು. ಹಸುಗಳು ಸಿಂಹವನ್ನು ನೋಡಿ ಭಯಗೊಳ್ಳುವಂತೆ–ಎಲ್ಲ ಪಾಂಚಾಲಯೋಧರೂ ಕರ್ಣನನ್ನು ಕಂಡು ಉದ್ವೇಜಿತರಾಗಿದ್ದರು. ಮೃತ್ಯುವಿನ ತೆರೆದ ಬಾಯೊಳಗೆ ಪ್ರವೇಶಿಸುವಂತೆ ಪ್ರಭದ್ರಕರು ಕರ್ಣನೊಡನೆ ಯುದ್ಧಮಾಡಲು ಹೋಗಿ ಸಂಕಟಕ್ಕೊಳಗಾದರು. ಯುದ್ಧಸಮುದ್ರದಲ್ಲಿ ಮುಳುಗಿದ್ದ ಏಳುನೂರು ಪ್ರಭದ್ರಕರಥಿಗಳನ್ನು ಕರ್ಣನು ಮೃತ್ಯುವಿನ ಮನೆಗೆ ಕಳುಹಿಸಿದನು. ಅಚಿಂತ್ಯಕರ್ಮನಾದ ನರೇಶ್ವರನೇ! ಸೂತಪುತ್ರನು ಎಷ್ಟು ಹೊತ್ತಿನವರೆಗೆ ನಮ್ಮನ್ನು ಕಾಣಲಿಲ್ಲವೋ ಅಷ್ಟು ಹೊತ್ತಿನವರೆಗೂ ಅವನ ಮನಸ್ಸಿನಲ್ಲಿ ಉದ್ವೇಗವಾಗಲೀ ಖೇದವಾಗಲೀ ಉಂಟಾಗಿರಲಿಲ್ಲ. ಕರ್ಣನ ದೃಷ್ಟಿಯು ನಿನ್ನ ಮೇಲೆ ಬಿದ್ದುದನ್ನೂ, ಅವನು ನಿನ್ನೊಡನೆ ಯುದ್ಧದಲ್ಲಿ ತೊಡಗಿದುದನ್ನೂ ಮತ್ತು ಅದಕ್ಕೂ ಮೊದಲು ನೀನು ಅಶ್ವತ್ಥಾಮನಿಂದ ಕ್ಷತ-ವಿಕ್ಷತನಾದುದನ್ನೂ ಕೇಳಿದೆನು. ನೀನು ಕ್ರೂರಿಯಾದ ಕರ್ಣನಿಂದ ತಪ್ಪಿಸಿಕೊಂಡು ಹೋಗುವ ಸಮಯವು ಅಂತಹುದಾಗಿತ್ತೆಂದು ನಾನು ಭಾವಿಸುತ್ತೇನೆ. ಪಾಂಡುನಂದನನೇ! ಯುಧಿಷ್ಠಿರ! ಯುದ್ಧಸಮಯದಲ್ಲಿ ನನ್ನ ಎದುರಿನಲ್ಲಿಯೇ ನಾನು ಕರ್ಣನ ವಿಚಿತ್ರರೂಪವಾದ ಅಸ್ತ್ರವೊಂದನ್ನು ನೋಡಿದೆನು. ಅವನಲ್ಲಿ ಅಂತಹ ಅಪರೂಪವಾದ ಮಹಾಸ್ತ್ರವಿರುವುದರಿಂದಲೇ

ಮಹಾರಥನಾದ ಕರ್ಣನನ್ನು ಯುದ್ಧದಲ್ಲಿ ಎದುರಿಸಿ ನಿಲ್ಲುವ ಯೋಧನು ಸೃಂಜಯರಲ್ಲಿ ನನ್ನ ಹೊರತಾಗಿ ಬೇರೊಬ್ಬನಿರುವುದಿಲ್ಲ. ಶೈನೇಯ



ಮತ್ತು ಧೃಷ್ಟದ್ಯುಮ್ನರು ನನ್ನ ರಥದ ಚಕ್ರಗಳ ರಕ್ಷಕರಾಗಿರಲಿ. ಶೂರರಾದ, ರಾಜಪುತ್ರರಾದ ಯುಧಾಮನ್ಯೂತ್ತಮೌಜಸರು ನನ್ನ ಹಿಂಭಾಗವನ್ನು ರಕ್ಷಣೆಮಾಡಲಿ. ಮಹಾನುಭಾವನೇ! ಭರತಶ್ರೇಷ್ಠನೇ! ಶತ್ರುಸೈನ್ಯದಲ್ಲಿರುವ ರಥಪ್ರವೀರನಾದ, ದುರ್ಜಯನಾದ ಕರ್ಣನೊಡನೆ, ಅವನೇನಾದರೂ ಈಗ ರಣರಂಗದಲ್ಲಿ ಕಾಣಿಸಿದ್ದೇ ಆದರೆ–ವೃತ್ರಾಸುರನೊಡನೆ ಇಂದ್ರನು ಯುದ್ಧಮಾಡಿದಂತೆ–ನಾನು ಯುದ್ಧಮಾಡುತ್ತೇನೆ. ಯುಧಿಷ್ಠಿರ! ರಣಾಂಗಣಕ್ಕೆ ಆಗಮಿಸು. ಜಯಗಳಿಸುವ ಸಲುವಾಗಿ ಸೂತ

ಪುತ್ರನೊಡನೆ ಯುದ್ಧಮಾಡುವ ನನ್ನನ್ನು ನೋಡು. ಮಹಾಸರ್ಪದ ಬಾಯಲ್ಲಿ ಹೋಗಿ ಬೀಳುವಂತೆ (ಮುಂದೆಬಿದ್ದು ನಾಶವಾಗುವಂತೆ) ಪ್ರಭದ್ರಕರು ಕರ್ಣನ ಮೇಲೆ ದಾಳಿ ನಡೆಸುತ್ತಿದ್ದಾರೆ.

ಭಾರತನೇ! ಆರು ಸಾವಿರ ರಾಜಪುತ್ರರು ಸ್ವರ್ಗಲೋಕಕ್ಕೆ ಹೋಗುವ ಸಲುವಾಗಿ ರಣಸಾಗರದಲ್ಲಿ ಮುಳುಗಿಬಿಟ್ಟಿದ್ದಾರೆ.

**ಕರ್ಣಂ ನ ಚೇದದ್ಯ ನಿಹನ್ಮಿ ರಾಜ-**
**ನ್ಸಬಾನ್ಧವಂ ಯುಧ್ಯಮಾನಂ ಪ್ರಸಹ್ಯ ।**
**ಪ್ರತಿಶ್ರುತ್ಯಾಕುರ್ವತೋ ವೈ ಗತಿರ್ಯಾ**
**ಕಷ್ಟಾ ಯಾತಾ ತಾಮಹಂ ರಾಜಸಿಂಹ ॥೨೧॥**

ಮಹಾರಾಜ! ನನ್ನೊಡನೆ ಯುದ್ಧಮಾಡುವ ಕರ್ಣನನ್ನು ಬಂಧುಗಳ ಸಹಿತವಾಗಿ ಬಲಪೂರ್ವಕವಾಗಿ ಇಂದು ಸಂಹಾರಮಾಡದಿದ್ದರೆ–ಪ್ರತಿಜ್ಞೆಯನ್ನು ಮಾಡಿ ಅದರಂತೆ ನಡೆಯದೇ ಇರುವವನಿಗೆ ಯಾವ ದುಃಖದಾಯಕವಾದ ಗತಿಯು ಪ್ರಾಪ್ತವಾಗುವುದೋ–ಅಂತಹ ಗತಿಯನ್ನೇ ನಾನು ಪಡೆಯುತ್ತೇನೆ.

**ಆಮನ್ತ್ರಯೇ ತ್ವಾಂ ಬ್ರೂಹಿ ಜಯಂ ರಣೇ ಮೇ**
**ಪುರಾ ಭೀಮಂ ಧಾರ್ತರಾಷ್ಟ್ರಾ ಗ್ರಸನ್ತೇ ।**
**ಸೌತಿಂ ಹನಿಷ್ಯಾಮಿ ನರೇನ್ದ್ರಸಿಂಹ**
**ಸೈನ್ಯಂ ತಥಾ ಶತ್ರುಗಣಾಂಶ್ಚ ಸರ್ವಾನ್ ॥೨೨॥**

ನರೇಂದ್ರಸಿಂಹನೇ! ಯುದ್ಧಕ್ಕೆ ಹೋಗಲು ನಿನ್ನ ಅನುಮತಿಯನ್ನು ಬೇಡುತ್ತಿದ್ದೇನೆ. ರಣಭೂಮಿಯಲ್ಲಿ ವಿಜಯವಾಗಲೆಂದು ನನ್ನನ್ನು ಆಶೀರ್ವದಿಸು. ಧೃತರಾಷ್ಟ್ರನ ಮಕ್ಕಳೆಲ್ಲರೂ ಸೇರಿ ಭೀಮಸೇನನನ್ನು ನುಂಗಿಹಾಕಲು ಹವಣಿಸುತ್ತಿದ್ದಾರೆ. ಅದಕ್ಕೆ ಮೊದಲೇ ನಾನು ಸೂತಪುತ್ರನಾದ ಕರ್ಣನನ್ನೂ, ಅವನ ಸೈನ್ಯವನ್ನೂ ಮತ್ತು ಎಲ್ಲ ಶತ್ರುಗಳ ಸಮೂಹಗಳನ್ನೂ ಸಂಹಾರಮಾಡುತ್ತೇನೆ.”

೬೭ನೆಯ ಅಧ್ಯಾಯವು ಮುಗಿಯಿತು.

೬೮ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಕೋಪಾಭಿಭೂತನಾಗಿ ಅರ್ಜುನನೊಡನೆ ಅಪಮಾನಕರವಾದ ಮಾತನಾಡಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಮಹಾವೀರ್ಯನಾದ ಕರ್ಣನು ಸಕುಶಲನಾಗಿರುವನೆಂಬ ಅರ್ಜುನನ ಮಾತನ್ನು ಕೇಳಿ ಕರ್ಣನ ಬಾಣಾಘಾತದಿಂದ ಪರಿತಪಿಸುತ್ತಿದ್ದ, ಮಹಾತೇಜಸ್ವಿಯಾದ ಯುಧಿಷ್ಠಿರನು ಕ್ರುದ್ಧನಾಗಿ ಧನಂಜಯನನ್ನು ಕುರಿತು ಹೇಳಿದನು:

ವಿಪ್ರದ್ರುತಾ ತಾತ ಚಮೂಸ್ತ್ವದೀಯಾ
ತಿರಸ್ಕೃತಾ ಚಾದ್ಯ ಯಥಾ ನ ಸಾಧು ।
ಭೀತೋ ಭೀಮಂ ತ್ಯಜ್ಯ ಚಾಯಾಸ್ತಥಾ ತ್ವಂ
ಯನ್ನಾಶಕಃ ಕರ್ಣಮಥೋ ನಿಹನ್ತುಮ್ ॥೨॥

"ಮಗು! ಅರ್ಜುನ! ನೀನೇ ಹೇಳುತ್ತಿರುವಂತೆ ಕರ್ಣನ ಬಾಣಗಳ ಆಘಾತಕ್ಕೆ ಗುರಿಯಾದ ನಿನ್ನ ಸೈನ್ಯವು ದಿಕ್ಕಾಪಾಲಾಗಿ ಓಡಿಹೋಗುತ್ತಿದೆ. ಅದನ್ನು ಪ್ರತ್ಯಕ್ಷವಾಗಿಯೇ ನೋಡಿದ ನೀನು ನಮ್ಮ ಸೈನ್ಯದ ವಿಷಯದಲ್ಲಿಯೇ ಉಪೇಕ್ಷೆಯನ್ನು ವಹಿಸಿದುದು ನಿನಗೆ ಖಂಡಿತವಾಗಿಯೂ ಉಚಿತವೆನಿಸುವುದಿಲ್ಲ. ಕರ್ಣನೊಬ್ಬನನ್ನು ಜಯಿಸಲು ಅಸಮರ್ಥನಾದ ನೀನು ಭಯಗೊಂಡು ಭೀಮನೊಬ್ಬನನ್ನೇ ಅಲ್ಲಿ ಬಿಟ್ಟು ಇಲ್ಲಿಗೆ ಬಂದಿರುವೆ.

ಸ್ನೇಹಸ್ತ್ವಯಾ ಪಾರ್ಥ ಕೃತಃ ಪೃಥಾಯಾ
ಗರ್ಭಂ ಸಮಾವಿಶ್ಯ ಯಥಾ ನ ಸಾಧು ।
ತ್ಯಕ್ತ್ವಾ ರಣೇ ಯದಪಾಯಾಃ ಸ ಭೀಮಂ
ಯನ್ನಾಶಕಃ ಸೂತಪುತ್ರಂ ನಿಹನ್ತುಮ್ ॥೩॥

ವೀರಮಾತೆಯಾದ ಕುಂತೀದೇವಿಯ ಗರ್ಭವಾಸಮಾಡಿಯೂ ನೀನು–ನಿನ್ನ ಅಣ್ಣನ ವಿಷಯದಲ್ಲಿ ಹೀಗೆ ನಡೆದುಕೊಂಡುದು ಖಂಡಿತವಾಗಿಯೂ ಉಚಿತವಾಗಿ ಕಾಣುವುದಿಲ್ಲ. ಕರ್ಣನನ್ನು ಸಂಹರಿಸಲು ಅಸಮರ್ಥನಾದ

ನೀನು ಭೀಮನೊಬ್ಬನನ್ನೇ ರಣಾಂಗಣದಲ್ಲಿ ಬಿಟ್ಟು ಇಲ್ಲಿಗೆ ಬಂದಿರುವೆಯಲ್ಲವೇ?

ಅರ್ಜುನ! ನೀನು ದ್ವೈತವನದಲ್ಲಿ–'**ಏಕರಥೇನ ಕರ್ಣಂ ಹನ್ತಾಸ್ಮಿ ಸತ್ಯಮ್ ।** ರಥೈಕಸಹಾಯನಾಗಿ ಕರ್ಣನನ್ನು ಸಂಹರಿಸುತ್ತೇನೆ. ಇದು ಸತ್ಯ'–ಎಂಬ ಮಾತನ್ನು ಹೇಳಿದ್ದೆಯಲ್ಲವೇ? ಆದರೆ ಈಗ ಕರ್ಣನಿಂದ ಭಯಗೊಂಡು ಭೀಮಸೇನನೊಬ್ಬನನ್ನೇ ರಣಾಂಗಣದಲ್ಲಿ ಬಿಟ್ಟು ಇಲ್ಲಿಗೆ ಹೇಗೆ ಬಂದೆ? ದ್ವೈತವನದಲ್ಲಿದ್ದಾಗಲೇ ನೀನು–'**ಕರ್ಣಂ ಯೋದ್ಧುಂ ನ ಪ್ರಶಕ್ಯೇ**–ಕರ್ಣನೊಡನೆ ಯುದ್ಧಮಾಡಲು ನಾನು ಸಮರ್ಥನಲ್ಲ'-ಎಂದು ಹೇಳಿಬಿಟ್ಟಿದ್ದರೆ–ಆಗಲೇ ನಾವು ಸಮಯೋಚಿತವಾದ ಕರ್ತವ್ಯವನ್ನು ನಿಶ್ಚಯಿಸಿ ಅದರಂತೆ ಕಾರ್ಯಮಾಡುತ್ತಿದ್ದೆವು. ನನ್ನೊಡನೆ ಕರ್ಣನನ್ನು ಸಂಹರಿಸುವೆನೆಂದು ಪ್ರತಿಜ್ಞೆಮಾಡಿ ಆ ಪ್ರತಿಜ್ಞೆಗೆ ಅನುಸಾರವಾಗಿ ನೀನು ನಡೆದುಕೊಳ್ಳಲಿಲ್ಲ. ಮಾಡಿದ ಪ್ರತಿಜ್ಞೆಯಂತೆ ನಡೆಯಲು ಇಷ್ಟವಿಲ್ಲದಿದ್ದಾಗ ನೀನು ನಮ್ಮನ್ನು ಪ್ರೋತ್ಸಾಹಿಸಿ, ಶತ್ರುಗಳ ಮಧ್ಯಕ್ಕೆ ತಂದು, ಕಠಿನವಾದ ನೆಲದ ಮೇಲೆ ಉರುಳಿಸಿ ಸಮ್ಮರ್ದಿತರಾಗುವಂತೆ ಏಕೆ ಮಾಡಿದೆ? ರಾಜಕುಮಾರ! ಕಲ್ಯಾಣರೂಪವಾದ ಅನೇಕಾಭೀಷ್ಟಗಳನ್ನು ಪಡೆದುಕೊಳ್ಳುವ ಇಚ್ಛೆಯಿಂದಿದ್ದ ನಾವು ನಿನ್ನಿಂದಲೇ ಆ ನಮ್ಮ ಅಭಿಲಾಷೆಗಳೆಲ್ಲವೂ ಕೈಗೂಡುವುದೆಂದು ಆಶಿಸಿದ್ದೆವು. ಆದರೆ ಫಲವನ್ನು ಇಚ್ಛಿಸಿದ ಜನರಿಗೆ ಅಧಿಕವಾದ ಪುಷ್ಪಗಳಿಂದ ಮಾತ್ರ ಕೂಡಿರುವ ವೃಕ್ಷವು ಫಲವನ್ನೇ ಕೊಡದೇ ಹೋಗುವಂತೆ–ನಿನ್ನನ್ನೇ ಅವಲಂಬಿಸಿದ್ದ ನಮ್ಮ ಆಸೆಗಳೆಲ್ಲವೂ ವಿಫಲವಾಗಿ ಹೋದುವು.

**ಪ್ರಚ್ಛಾದಿತಂ ಬಡಿಶಮಿವಾಮಿಷೇಣ**
**ಸಂಛಾದಿತಂ ಗರಲಮಿವಾಶನೇನ ।**
**ಅನರ್ಥಕಂ ಮೇ ದರ್ಶಿತವಾನಸಿ ತ್ವಂ**
**ರಾಜ್ಯಾರ್ಥಿನೋ ರಾಜ್ಯರೂಪಂ ವಿನಾಶನಮ್ ॥೮॥**

ಮೀನನ್ನು ಹಿಡಿಯುವ ಗಾಳವು ಮಾಂಸದಿಂದ ಆಚ್ಛಾದಿತವಾಗಿರುವಂತೆ–ಘೋರವಿಷವು ಅನ್ನದಿಂದ ಮುಚ್ಚಲ್ಪಟ್ಟಿರುವಂತೆ–ರಾಜ್ಯಾರ್ಥಿಯಾದ

ನನಗೆ ರಾಜ್ಯರೂಪದಿಂದ ಆಚ್ಛಾದಿತವಾಗಿರುವ ಅನರ್ಥಕರವಾದ ವಿನಾಶವನ್ನು ನೀನೇ ಈಗ ತೋರಿಸಿಕೊಟ್ಟಿರುವೆ.

ತ್ರಯೋದಶೇಮಾ ಹಿ ಸಮಾಃ ಸದಾ ವಯಂ
ತ್ವಾಮನ್ವಜೀವಿಷ್ಮ ಧನಂಜಯಾಶಯಾ ।
ಕಾಲೇ ವರ್ಷಂ ದೇವಮಿವೋಪ್ತಬೀಜಂ
ತನ್ನಃ ಸರ್ವಾನ್ನರಕೇ ತ್ವಂ ನ್ಯಮಜ್ಜಃ ॥೯॥

ಧನಂಜಯ! ಈ ಹದಿಮೂರು ವರ್ಷಗಳೂ ನಾವು ರಾಜ್ಯವು ಪುನಃ ಲಭಿಸುವುದೆಂಬ ಆಸೆಯಿಂದಲೇ ಇದ್ದೆವು. ಆ ರಾಜ್ಯಪ್ರಾಪ್ತಿಯು ನಿನ್ನ ಮೂಲಕವಾಗಿಯೇ ಆಗುವುದೆಂಬ ಭರವಸೆಯಿಂದ–ಹಾಕಿದ ಬೀಜವು ಮೊಳೆಯಲು ದೈವಿಕವಾದ ಮಳೆಯನ್ನೇ ಅವಲಂಬಿಸಿರುವಂತೆ–ರಾಜ್ಯಪ್ರಾಪ್ತಿಗೆ ನಿನ್ನನ್ನೇ ಅವಲಂಬಿಸಿ ಜೀವಿಸಿದ್ದೆವು. ಆದರೆ ನೀನೀಗ ನಮ್ಮೆಲ್ಲರನ್ನೂ ನರಕದಲ್ಲಿ ಮುಳುಗಿಸಿಬಿಟ್ಟಿರುವೆ. (ಮಹಾಸಂಕಟಕ್ಕೀಡು ಮಾಡಿರುವೆ.)

ಮಂದಬುದ್ಧಿಯಾದ ಅರ್ಜುನನೇ! ನೀನು ಹುಟ್ಟಿದ ಏಳನೆಯ ದಿವಸ ಅಂತರಿಕ್ಷದಲ್ಲಿ ಅಶರೀರವಾಣಿಯೊಂದು ಕುಂತಿಯನ್ನು ಕುರಿತು ಹೀಗೆ ಹೇಳಿತು:

ಜಾತಃ ಪುತ್ರೋ ವಾಸವವಿಕ್ರಮೋಽಯಂ
ಸರ್ವಾಞ್ಛೂರಾಞ್ಶತ್ರವಾಞ್ಜೇಷ್ಯತೀತಿ ॥೧೦॥

"ಇಂದ್ರಸಮಾನಪರಾಕ್ರಮನಾದ ಮಗನು ನಿನಗೆ ಹುಟ್ಟಿದ್ದಾನೆ. ಶೂರರಾದ ನಿಮ್ಮ ಎಲ್ಲ ಶತ್ರುಗಳನ್ನೂ ಇವನು ಜಯಿಸುತ್ತಾನೆ.

ಅಯಂ ಜೇತಾ ಖಾಣ್ಡವೇ ದೇವಸಂಘಾ-
ನ್ಸರ್ವಾಣಿ ಭೂತಾನ್ಯಪಿ ಚೋತ್ತಮೌಜಾಃ ।
ಅಯಂ ಜೇತಾ ಮದ್ರಕಲಿಙ್ಗಕೇಕಯಾ-
ನಯಂ ಕುರೂನ್ರಾಜಮಧ್ಯೇ ನಿಹನ್ತಾ ॥೧೧॥

ಮಹಾಶಕ್ತಿಸಂಪನ್ನನಾದ ಇವನು ಖಾಂಡವವನದಲ್ಲಿ ದೇವತೆಗಳ ಸಮೂಹಗಳನ್ನೂ ಮತ್ತು ಎಲ್ಲ ಪ್ರಾಣಿಗಳನ್ನೂ ಜಯಿಸುತ್ತಾನೆ. ಮದ್ರ-

ಕಲಿಂಗ-ಕೇಕಯರನ್ನೂ ಜಯಿಸುತ್ತಾನೆ ಮತ್ತು ಸಕಲರಾಜರ ಮಧ್ಯದಲ್ಲಿ ಕುರುಗಳನ್ನೂ ಸಂಹರಿಸುತ್ತಾನೆ.

ಅಸ್ಮಾತ್ಪರೋ ನೋ ಭವಿತಾ ಧನುರ್ಧರೋ
ನೈವಂ ಭೂತಂ ಕಿಂಚನ ಜಾತು ಜೇತಾ ।
ಇಚ್ಛನ್ನಯಂ ಸರ್ವಭೂತಾನಿ ಕುರ್ಯಾ-
ದ್ವಶೇ ವಶೀ ಸರ್ವಸಮಾಪ್ತವಿದ್ಯಃ ॥೧೨॥

ಇವನಿಗಿಂತಲೂ ಶ್ರೇಷ್ಠನಾದ ಧನುರ್ಧರನು ಪ್ರಪಂಚದಲ್ಲಿ ಹುಟ್ಟುವುದೇ ಇಲ್ಲ. ಯಾವುದೊಂದು ಪ್ರಾಣಿಯೂ ಇವನನ್ನು ಯಾವುದೇ ಸಮಯದಲ್ಲಿಯೂ ಜಯಿಸಲಾರದು. ಜಿತೇಂದ್ರಿಯನಾದ ಮತ್ತು ಸಕಲ ವಿದ್ಯಾಪಾರಂಗತನಾದ ಇವನು ಇಚ್ಛಿಸಿದ್ದೇ ಆದರೆ ಭೂಮಂಡಲದಲ್ಲಿರುವ ಸಕಲಪ್ರಾಣಿಗಳನ್ನೂ ತನ್ನ ಅಧೀನಮಾಡಿಕೊಳ್ಳಬಲ್ಲನು.

ಕಾನ್ತ್ಯಾ ಶಶಾಙ್ಕಸ್ಯ ಜವೇನ ವಾಯೋಃ
ಸ್ಥೈರ್ಯೇಣ ಮೇರೋಃ ಕ್ಷಮಯಾ ಪೃಥಿವ್ಯಾಃ ।
ಸೂರ್ಯಸ್ಯ ಭಾಸಾ ಧನದಸ್ಯ ಲಕ್ಷ್ಮ್ಯಾ
ಶೌರ್ಯೇಣ ಶಕ್ರಸ್ಯ ಬಲೇನ ವಿಷ್ಣೋಃ ॥೧೩॥

ಇವನು ಚಂದ್ರನ ಕಾಂತಿಯಿಂದ ಕೂಡಿದವನಾಗಿರುತ್ತಾನೆ. ವೇಗದಲ್ಲಿ ವಾಯುವಿಗೆ ಸಮಾನನಾಗಿರುತ್ತಾನೆ. ಸ್ಥೈರ್ಯದಲ್ಲಿ ಮೇರುಪರ್ವತಕ್ಕೆ ಸಮಾನನು. ಕ್ಷಮೆಯಲ್ಲಿ ಪೃಥಿವಿಗೆ ಸಮಾನನಾಗಿರುತ್ತಾನೆ. ಸೂರ್ಯನ ಪ್ರಭೆಯಿಂದ ಕೂಡಿದವನಾಗಿರುತ್ತಾನೆ. ಕುಬೇರನ ಐಶ್ವರ್ಯವೇ ಇವನಲ್ಲಿಯೂ ಇರುತ್ತದೆ. ಶೌರ್ಯದಲ್ಲಿ ಶಕ್ರನಿಗೆ ಸಮಾನನು. ಬಲದಲ್ಲಿ ವಿಷ್ಣುವಿಗೆ ಸಮಾನನಾಗಿರುತ್ತಾನೆ.

ತುಲ್ಯೋ ಮಹಾತ್ಮಾ ತವ ಕುನ್ತಿ ಪುತ್ರೋ
ಜಾತೋಽದಿತೇರ್ವಿಷ್ಣುರಿವಾರಿಹನ್ತಾ ।
ಸ್ವೇಷಾಂ ಜಯಾಯ ದ್ವಿಷತಾಂ ವಧಾಯ
ಖ್ಯಾತೋಽಮಿತೌಜಾಃ ಕುಲತನ್ತುಕರ್ತಾ ॥೧೪॥

ಕುಂತಿ! ಮಹಾತ್ಮನಾದ ಈ ನಿನ್ನ ಮಗನು ಅದಿತಿಯ ಗರ್ಭದಲ್ಲಿ ಹುಟ್ಟಿದ ವಿಷ್ಣುವಿಗೆ ಸಮಾನನಾಗಿದ್ದಾನೆ. ವಿಷ್ಣುವಿನಂತೆಯೇ ಇವನೂ

ಸಹ ಶತ್ರುಗಳನ್ನು ಸಂಹರಿಸುತ್ತಾನೆ. ತಮ್ಮ ಕಡೆಯವರಿಗೆ ವಿಜಯಗಳಿಸಿಕೊಡುವ ಸಲುವಾಗಿಯೂ–ಶತ್ರುಗಳನ್ನು ವಧೆಮಾಡುವ ಸಲುವಾಗಿಯೂ ಇವನು ಹುಟ್ಟಿದ್ದಾನೆ. ಮಹಾಪರಾಕ್ರಮಿಯೆಂದು ವಿಖ್ಯಾತನಾಗುತ್ತಾನೆ ಮತ್ತು ನಿನ್ನ ಕುಲಪರಂಪರೆಯ ಪ್ರವರ್ತಕನೂ ಆಗುತ್ತಾನೆ."

ಅರ್ಜುನ! ಶತಶೃಂಗಪರ್ವತಶಿಖರದ ಮೇಲ್ಭಾಗದ ಅಂತರಿಕ್ಷದಲ್ಲಿ ತಪಸ್ವಿಗಳೆಲ್ಲರೂ ಕೇಳುತ್ತಿದ್ದಂತೆಯೇ ಅಶರೀರವಾಣಿಯು ಈ ಮಾತುಗಳನ್ನು ಹೇಳಿತು. ಆದರೆ ಅಶರೀರವಾಣಿಯು ಹೇಳಿದಂತೆ ನಡೆಯಲಿಲ್ಲ. ಇದರಿಂದ ನಾನು ಭಾವಿಸುವುದೇನೆಂದರೆ–'ದೇವಾಪಿ ನೂನಮನೃತಂ ವದನ್ತಿ–ನಿಶ್ಚಯವಾಗಿಯೂ ದೇವತೆಗಳೂ ಸುಳ್ಳುಹೇಳುತ್ತಾರೆ.' ಇದೇ ರೀತಿಯಲ್ಲಿ ಇತರ ಮಹರ್ಷಿಗಳೂ ನಿನ್ನನ್ನು ಸರ್ವಕಾಲಗಳಲ್ಲಿಯೂ ಪ್ರಶಂಸಿಸುತ್ತಿದ್ದರು. ಅಶರೀರವಾಣಿಯು ಹೇಳಿದುದನ್ನೇ ಅವರೂ ಹೇಳುತ್ತಿದ್ದರು. ಅಶರೀರವಾಣಿಯ ಮಾತುಗಳನ್ನೂ ಮತ್ತು ಪರಮರ್ಷಿಗಳ ಮಾತುಗಳನ್ನೂ ಕೇಳಿದ ನಾನು ದುರ್ಯೋಧನನಿಗೆ ಶರಣಾಗತನಾಗಲಿಲ್ಲ. ನೀನು ಕರ್ಣನ ಭಯದಿಂದ ಪೀಡಿತನಾಗುವೆಯೆಂಬ ವಿಷಯವನ್ನು ನಾನು ಇದುವರೆಗೂ ತಿಳಿದುಕೊಂಡಿರಲಿಲ್ಲ. ಆದರೆ ಯುದ್ಧದಲ್ಲಿ ಮಹಾಬಲನಾದ ಕರ್ಣನ ಮುಂದೆ ಅರ್ಜುನನು ಖಂಡಿತವಾಗಿಯೂ ನಿಲ್ಲುವುದಿಲ್ಲವೆಂದು ದುರ್ಯೋಧನನು ಬಹಳ ಹಿಂದೆಯೇ ಹೇಳಿದ್ದನು. ಅವನು ಈ ಮಾತನ್ನು ಪದೇ-ಪದೇ ಹೇಳುತ್ತಿದ್ದರೂ ಮೂರ್ಖತೆಯಿಂದಾಗಿ ನಾನು ಅವನ ಮಾತಿನಲ್ಲಿ ವಿಶ್ವಾಸವನ್ನಿಡಲಿಲ್ಲ. ಈ ಕಾರಣದಿಂದಲೇ ನಾನೀಗ ಬಹಳ ಪರಿತಾಪಪಡುತ್ತಿದ್ದೇನೆ. ಶತ್ರುಗಳ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡು ಸೀಮಾತೀತವಾದ ನರಕವನ್ನು (ಸಂಕಟವನ್ನು) ಪ್ರವೇಶಿಸಿದ್ದೇನೆ. (ಅನುಭವಿಸುತ್ತಿದ್ದೇನೆ.) 'ಯಾವುದೇ ಕಾರಣದಿಂದಲೂ ನಾನು ಕರ್ಣನೊಡನೆ ಯುದ್ಧಮಾಡುವುದಿಲ್ಲ'–ಎಂದು ಈ ಹಿಂದೆಯೇ ನೀನು ನನಗೆ ಹೇಳಬಾರದಾಗಿದ್ದಿತೇ? ಹಾಗೇನಾದರೂ ಯುದ್ಧಕ್ಕೆ ಮೊದಲೇ ಈ ಮಾತನ್ನು ನನ್ನೊಡನೆ ನೀನು ಹೇಳಿದ್ದರೆ ಸೃಂಜಯ-ಕೇಕಯರನ್ನೂ, ಇತರ ಸುಹೃದರನ್ನೂ ಯುದ್ಧಕ್ಕೆ ಕರೆತರುತ್ತಲೇ ಇರಲಿಲ್ಲ.

ಪರಿಸ್ಥಿತಿಯು ಹೀಗಿರಲಾಗಿ ನನ್ನೊಡನೆ ಯುದ್ಧಮಾಡುವ ಸಲುವಾಗಿ

ಸಂಘಟಿತರಾಗಿರುವ ಕರ್ಣ, ರಾಜನಾದ ದುರ್ಯೋಧನ ಮತ್ತು ಅವನ ಕಡೆಯ ಅನೇಕ ರಾಜರು–ಇವರ ವಿಷಯದಲ್ಲಿ ಈಗ ನಾನೇನು ಮಾಡಲಿ? ಈ ಯುದ್ಧಸಮಯದಲ್ಲಿ ನಾನೇನು ಮಾಡಲು ಶಕ್ಯವಿದೆ?

**ಧಿಗಸ್ತು ಮಜ್ಜೀವಿತಮದ್ಯ ಕೃಷ್ಣ**
**ಯೋಽಹಂ ವಶಂ ಸೂತಪುತ್ರಸ್ಯ ಯಾತಃ ।**
**ಮಧ್ಯೇ ಕುರೂಣಾಂ ಸುಹೃದಾಂ ಚ ಮಧ್ಯೇ**
**ಯೇ ಚಾಪ್ಯನ್ಯೇ ಯೋದ್ಧುಕಾಮಾಃ ಸಮೇತಾಃ ॥೨೦॥**

ಕೃಷ್ಣ! ಪರಸ್ಪರವಾಗಿ ಯುದ್ಧಮಾಡುವ ಇಚ್ಛೆಯಿಂದ ಸಂಘಟಿತರಾಗಿ ನಿಂತಿದ್ದ ಕುರುಗಳ, ಸುಹೃದರ ಮತ್ತು ಯುದ್ಧೇಚ್ಛೆಯಿಂದ ಸೇರಿರುವ ಇತರರ ಮಧ್ಯದಲ್ಲಿ ನಾನು ಸೂತಪುತ್ರನಾದ ಕರ್ಣನಿಗೆ ಅಧೀನನಾಗಿ ಹೋದೆನು. (ಅವನು ನನ್ನನ್ನು ಜಯಿಸಿಬಿಟ್ಟನು.) ನನ್ನ ಈ ಜೀವಿತಕ್ಕೆ ಧಿಕ್ಕಾರವಿರಲಿ.

**ಯದಿ ಸ್ಮ ಜೀವೇತ್ಸ ಭವೇನ್ನಿಹನ್ತಾ**
**ಮಹಾರಥಾನಾಂ ಪ್ರವರೋ ರಥೋತ್ತಮಃ ।**
**ತವಾಭಿಮನ್ಯುಸ್ತನಯೋಽದ್ಯ ಪಾರ್ಥ**
**ನ ಚಾಸ್ಮಿ ಗನ್ತಾ ಸಮರೇ ಪರಾಭವಮ್ ॥೨೧॥**

**ಅಥಾಪಿ ಜೀವೇತ್ಸಮರೇ ಘಟೋತ್ಕಚ-**
**ಸ್ತಥಾಪಿ ನಾಹಂ ಸಮರೇ ಪರಾಙ್ಮುಖಃ ।**
**ಮಮಹ್ಯಭಾಗ್ಯಾನಿ ಪುರಾ ಕೃತಾನಿ**
**ಪಾಪಾನಿ ನೂನಂ ಬಲವನ್ತಿ ಯುದ್ಧೇ ॥೨೨॥**

ಅರ್ಜುನ! ಮಹಾರಥರಲ್ಲಿ ಶ್ರೇಷ್ಠನಾದ ರಥೋತ್ತಮನಾದ ನಿನ್ನ ಮಗ ಅಭಿಮನ್ಯುವಾದರೂ ಜೀವಿಸಿದ್ದರೆ ಅವನು ಖಂಡಿತವಾಗಿಯೂ ಶತ್ರುಗಳನ್ನು ಸಂಹರಿಸುತ್ತಿದ್ದನು. ನಾನು ಯುದ್ಧದಲ್ಲಿ ಇಂತಹ ಪರಾಭವವನ್ನು ಖಂಡಿತವಾಗಿಯೂ ಅನುಭವಿಸುತ್ತಿರಲಿಲ್ಲ. ಒಂದು ವೇಳೆ ಭೀಮನ ಮಗನಾದ ಘಟೋತ್ಕಚನಾದರೂ ಜೀವಿಸಿದ್ದರೆ ಆಗಲೂ ನಾನು ಯುದ್ಧದಿಂದ ಪರಾಙ್ಮುಖನಾಗುತ್ತಿರಲಿಲ್ಲ. ನಿಶ್ಚಯವಾಗಿಯೂ ನನ್ನ ಹಿಂದಿನ ದೌರ್ಭಾಗ್ಯಗಳೂ ಮತ್ತು ಪಾಪಗಳೂ ಈ ಯುದ್ಧಸಮಯದಲ್ಲಿ ಪ್ರಬಲವಾಗುತ್ತಿವೆ.

ಆದುದರಿಂದಲೇ ಅಭಿಮನ್ಯು-ಘಟೋತ್ಕಚರು ಹತರಾದರು. ದುರಾತ್ಮನಾದ ಕರ್ಣನು–ಪರಮಸಾಹಸಿಯೆಂದು ವಿಖ್ಯಾತನಾಗಿರುವ ನಿನ್ನನ್ನೂ ಹುಲ್ಲುಕಡ್ಡಿಯಂತೆ ಭಾವಿಸಿ–ನನ್ನನ್ನು ಅಪಮಾನಗೊಳಿಸಿದನು. ಅಶಕ್ತನಾದವನೊಬ್ಬನ ವಿಷಯದಲ್ಲಿ ನಡೆದುಕೊಳ್ಳುವಂತೆ ಕರ್ಣನು ನನ್ನ ವಿಷಯದಲ್ಲಿ ನಡೆದುಕೊಂಡನು. (ಮಹಾಪರಾಕ್ರಮಿಯೊಬ್ಬನು ಅಶಕ್ತನಾದವನನ್ನೂ, ಬಂಧು-ಮಿತ್ರರಿಂದ ರಹಿತನಾದವನನ್ನೂ ಹೀಯಾಳಿಸುವಂತೆ ನನ್ನನ್ನವನು ಜರೆದು ಮಾತನಾಡಿದನು.)

**ಆಪದ್ಗತಂ ಕಶ್ಚನ ಯೋ ವಿಮೋಕ್ಷೇ-**
**ತ್ಸ ಬಾನ್ಧವಃ ಸ್ನೇಹಯುಕ್ತಃ ಸುಹೃಚ್ಚ ।**
**ಏವಂ ಪುರಾಣಾ ಮುನಯೋ ವದನ್ತಿ**
**ಧರ್ಮಃ ಸದಾ ಸದ್ಭಿರನುಷ್ಠಿತಶ್ಚ ॥೨೪॥**

ಆಪತ್ತಿನಲ್ಲಿರುವವನನ್ನು ಯಾವನು ಉದ್ಧರಿಸುತ್ತಾನೆಯೋ–ಅವನೇ ಬಂಧು; ಅವನೇ ಸ್ನೇಹಯುಕ್ತನಾದ ಸುಹೃತ್-ಎಂಬುದಾಗಿ ಪ್ರಾಚೀನಮುನಿಗಳು ಹೇಳುತ್ತಾರೆ. ಇದು ಸತ್ಪುರುಷರಿಂದ ಪರಿಪಾಲಿಸಲ್ಪಡುವ ಧರ್ಮವಾಗಿದೆ.

**ತ್ವಷ್ಟ್ರಾ ಕೃತಂ ವಾಹಮಕೂಜನಾಕ್ಷಂ**
**ಶುಭಂ ಸಮಾಸ್ಥಾಯ ಕಪಿಧ್ವಜಂ ತಮ್ ।**
**ಖಡ್ಗಂ ಗೃಹೀತ್ವಾ ಹೇಮಪಟ್ಟಾನುಬದ್ಧಂ**
**ಧನುಶ್ಚೇದಂ ಗಾಣ್ಡಿವಂ ತಾಲಮಾತ್ರಮ್ ।**
**ಸ ಕೇಶವೇನೋಹ್ಯಮಾನಃ ಕಥಂ ತ್ವಂ**
**ಕರ್ಣಾದ್ಭೀತೋ ವ್ಯಪಯಾತೋಽಸಿ ಪಾರ್ಥ ॥೨೫॥**

ಪಾರ್ಥ! ನಿನ್ನ ರಥವು ಸಾಕ್ಷಾತ್ ವಿಶ್ವಕರ್ಮನಿಂದಲೇ ನಿರ್ಮಿಸಲ್ಪಟ್ಟಿದೆ. ಈ ಕಾರಣದಿಂದಲೇ ನಿನ್ನ ರಥದ ಚಕ್ರಗಳಲ್ಲಿ ಸ್ವಲ್ಪವಾದರೂ ಶಬ್ದವುಂಟಾಗುವುದಿಲ್ಲ. ಆ ದಿವ್ಯರಥದ ಮೇಲೆ ವಾನರಧ್ವಜವು ಹಾರಾಡುತ್ತಿದೆ. ಇಂತಹ ಶುಭಲಕ್ಷಣಯುಕ್ತವಾದ ರಥದಲ್ಲಿ ಕುಳಿತು, ಸುವರ್ಣಮಯವಾದ ಹಿಡಿಯಿಂದ ಅನುಬದ್ಧವಾದ ಕತ್ತಿಯನ್ನೂ ನಾಲ್ಕು ಮೊಳ

ಗಳಷ್ಟು ಉದ್ದವಿರುವ ಗಾಂಡೀವಧನುಸ್ಸನ್ನೂ ಹಿಡಿದಿರುವ ನಿನ್ನನ್ನು ಸಾರಥಿಯ ಸ್ಥಾನದಲ್ಲಿರುವ ಸರ್ವರಕ್ಷಕನಾದ ಕೇಶವನು ಒಯ್ಯುತ್ತಿರುತ್ತಾನೆ. ಹೀಗೆ ಸಕಲವಿಧವಾದ ಶ್ರೇಷ್ಠವಾದ ಸಲಕರಣೆಗಳಿಂದ ಕೂಡಿದ್ದರೂ ನೀನು ಕರ್ಣನಿಗೆ ಹೆದರಿ ರಣಾಂಗಣದಿಂದ ಹೇಗೆ ಹೊರಟುಬಂದೆ?



ಧನುಶ್ಚ ತತ್ಕೇಶವಾಯ ಪ್ರಯಚ್ಛ
ಯನ್ತಾ ಭವಿಷ್ಯಸ್ತ್ವಂ ರಣೇ ಕೇಶವಸ್ಯ ।
ತದಾ ಹನಿಷ್ಯತ್ಕೇಶವಃ ಕರ್ಣಮುಗ್ರಂ
ಮರುತ್ಪತಿರ್ವೃತ್ರಮಿವಾತ್ತವಜ್ರಃ ॥೨೬॥

ಈಗ ನೀನೊಂದು ಕೆಲಸಮಾಡು, ಅರ್ಜುನ! ನಿನ್ನಲ್ಲಿರುವ ಧನುಸ್ಸನ್ನು ಕೇಶವನಿಗೆ ಕೊಟ್ಟುಬಿಡು. ಕೇಶವನಿಗೆ ನೀನು ಸಾರಥಿಯಾಗು. ಹಾಗೆ

ಮಾಡಿದರೆ–ಮರುತ್ಪತಿಯಾದ ಇಂದ್ರನು ವಜ್ರಾಯುಧವನ್ನು ಹಿಡಿದು ವೃತ್ರಾಸುರನನ್ನು ಸಂಹರಿಸಿದಂತೆ–ಭಯಂಕರನಾದ ಕರ್ಣನನ್ನು ಕೇಶವನು ಸಂಹರಿಸುವನು.

**ರಾಧೇಯಮೇತಂ ಯದಿ ನಾದ್ಯ ಶಕ್ತ-**
**ಶ್ಚರನ್ತಮುಗ್ರಂ ಪ್ರತಿಬಾಧನಾಯ ।**
**ಪ್ರಯಚ್ಛಾನ್ಯಸ್ಮೈ ಗಾಣ್ಡಿವಮೇತದದ್ಯ**
**ತ್ವತ್ತೋ ಯೋಽಸ್ತ್ರೈರಭ್ಯಧಿಕೋ ವಾ ನರೇನ್ದ್ರಃ ॥೨೭॥**

ಅರ್ಜುನ! ರಣಭೂಮಿಯಲ್ಲಿ ನಿರ್ಬಾಧಕನಾಗಿ ಸಂಚರಿಸುತ್ತಿರುವ ಭಯಂಕರಸ್ವರೂಪನಾದ ಕರ್ಣನನ್ನು ಪ್ರತಿರೋಧಿಸಲು ನಿನಗೆ ಸಾಮರ್ಥ್ಯ ವಿಲ್ಲದಿದ್ದರೆ ಅಸ್ತ್ರವಿದ್ಯೆಯಲ್ಲಿ ನಿನಗಿಂತಲೂ ಅಧಿಕನಾದ ನರೇಂದ್ರನಿಗೆ ಈ ಗಾಂಡೀವಧನುಸ್ಸನ್ನು ಈಗಲೇ ಕೊಟ್ಟುಬಿಡು.

ಏಕೆಂದರೆ: ಪುತ್ರ-ಪತ್ನಿಯರಿಂದ ವಿಹೀನರಾದ, ಸುಖದಿಂದಲೂ ರಾಜ್ಯದಿಂದಲೂ ಭ್ರಷ್ಟರಾದ ನಾವು–ಅತ್ಯಂತ ಆಳವಾದ (ಪಾರವೇ ಇಲ್ಲದ), ಪಾಪಿಷ್ಠರಿಂದ ಸಂಸೇವಿತವಾದ ನರಕದಲ್ಲಿ (ಮಹಾಸಂಕಟದಲ್ಲಿ) ಪುನಃ ಬೀಳುವುದನ್ನು ಲೋಕದ ಜನರು ನೋಡದಂತಾಗಲಿ.

**ಮಾಸೇಽಪತಿಷ್ಯಃ ಪಞ್ಚಮೇ ತ್ವಂ ಸುಕೃಚ್ಛ್ರೇ**
**ನ ವಾ ಗರ್ಭೇ ಆಭವಿಷ್ಯಃ ಪೃಥಾಯಾಃ ।**
**ತತ್ತೇ ಶ್ರೇಯೋ ರಾಜಪುತ್ರಾಭವಿಷ್ಯ-**
**ನ್ನ ಚೇತ್ಸಂಗ್ರಾಮಾದಪಯಾನಂ ದುರಾತ್ಮನ್ ॥೨೮॥**

ದುರಾತ್ಮನಾದ ರಾಜಪುತ್ರನೇ! ನೀನು ಐದನೆಯ ಮಾಸದಲ್ಲಿಯೇ ಗರ್ಭಸ್ರಾವದ ಮೂಲಕವಾಗಿ ತಾಯಿಯ ಹೊಟ್ಟೆಯಿಂದ ಬಿದ್ದುಹೋಗ ಬೇಕಾಗಿದ್ದಿತು. ಅಥವಾ ಕುಂತೀದೇವಿಯ ಅತ್ಯಂತಕಷ್ಟದಾಯಕವಾದ ಗರ್ಭದಲ್ಲಾದರೂ ನೀನು ಇರಬಾರದಾಗಿದ್ದಿತು. ಅದರಿಂದ ನಿನಗೆ ಶ್ರೇಯಸ್ಸೇ ಲಭಿಸುತ್ತಿದ್ದಿತು. ಅರ್ಥಾತ್ ನೀನು ಹುಟ್ಟದೆಯೇ ಇದ್ದಿದ್ದರೆ ಯುದ್ಧದಿಂದ ಪಲಾಯನಮಾಡಿದನೆಂಬ ಕಳಂಕದಿಂದ ಪಾರಾಗಬಹು

ದಾಗಿದ್ದಿತು. (ವೀರಮಾತೆಯಾದ ಕುಂತಿಯ ಗರ್ಭದಲ್ಲಿ ಹುಟ್ಟಿಯೂ ನೀನು ರಣಭೂಮಿಯಿಂದ ಪಲಾಯನಮಾಡಿ ಕಳಂಕಿತನಾಗಿರುವೆ.)

ಕರ್ಣನಿಗೆ ಹೆದರಿ ಇಲ್ಲಿಗೆ ಬಂದಿರುವ ನಿನಗೆ ಧಿಕ್ಕಾರವಿರಲಿ! ನಿನ್ನ ಗಾಂಡೀವಧನುಸ್ಸಿಗೆ ಧಿಕ್ಕಾರವಿರಲಿ! ನಿನ್ನ ತೋಳ್ಬಲಕ್ಕೆ ಧಿಕ್ಕಾರವಿರಲಿ! ಅಸಂಖ್ಯೇಯವಾದ ನಿನ್ನ ಬಾಣಗಳ ಸಮೂಹಕ್ಕೆ ಧಿಕ್ಕಾರವಿರಲಿ! ಕೇಸರಿ ಪುತ್ರನಾದ ಹನುಮಂತನಿಂದ ಉಪಲಕ್ಷಿತವಾದ ನಿನ್ನ ಧ್ವಜಕ್ಕೂ ಧಿಕ್ಕಾರವಿರಲಿ! ಯಜ್ಞೇಶ್ವರನಿಂದ ಕೊಡಲ್ಪಟ್ಟ ನಿನ್ನ ರಥಕ್ಕೂ ಧಿಕ್ಕಾರವಿರಲಿ!"

೬೮ನೆಯ ಅಧ್ಯಾಯವು ಮುಗಿಯಿತು.

೬೯ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು–ಯುಧಿಷ್ಠಿರನನ್ನು ಸಂಹರಿಸಲು ಉದ್ಯತನಾದ ಅರ್ಜುನನಿಗೆ ಆಖ್ಯಾನಗಳನ್ನು ಹೇಳಿ ಧರ್ಮೋಪದೇಶಮಾಡಿ ಸಮಾಧಾನಗೊಳಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ:

"ಮಹಾರಾಜ! ಯುಧಿಷ್ಠಿರನ ಅತಿನಿಷ್ಠುರವಾದ ಮಾತುಗಳಿಂದ ಶ್ವೇತವಾಹನನು ಅತಿಕ್ರುದ್ಧನಾಗಿ ಭರತರ್ಷಭನಾದ ಯುಧಿಷ್ಠಿರನನ್ನು ಸಂಹರಿಸುವ ಸಲುವಾಗಿ ಕತ್ತಿಯನ್ನು ಒರೆಯಿಂದ ಹೊರಕ್ಕೆ ತೆಗೆದನು. ಅರ್ಜುನನ ಮನಸ್ಸಿನ ಆಶಯವನ್ನು ಗ್ರಹಿಸಿದ ಕೇಶವನು ಅರ್ಜುನನ ಕೋಪವನ್ನು ವೀಕ್ಷಿಸಿ ಹೇಳಿದನು: "ಅರ್ಜುನ! ಇದೇನು! ಕತ್ತಿಯನ್ನು ಒರೆಯಿಂದ ಹೊರತೆಗೆಯುತ್ತಿರುವೆ? ಇಲ್ಲಿ ನೀನು ಯಾರೊಡನೆಯೂ ಯುದ್ಧಮಾಡಬೇಕಾಗಿರುವ ಪ್ರಸಂಗವೇನೂ ಕಾಣುತ್ತಿಲ್ಲವಲ್ಲ! ಧೃತರಾಷ್ಟ್ರನ ಮಕ್ಕಳು ಧೀಮಂತನಾದ ಭೀಮನಿಂದ ಗ್ರಸ್ತರಾಗಿದ್ದಾರೆ. ರಾಜನನ್ನು ನೋಡಬೇಕೆಂಬ ಆಶಯದಿಂದ ನೀನು ಯುದ್ಧಭೂಮಿಯನ್ನು ಬಿಟ್ಟು ಇಲ್ಲಿಗೆ ಬಂದಿರುವೆ. ರಾಜನನ್ನು ನೀನೀಗ ನೋಡಿದ್ದಾಯಿತು. ಯುಧಿಷ್ಠಿರ ರಾಜನು ಕುಶಲಿಯಾಗಿದ್ದಾನೆ. ಸಿಂಹಸಮಾನಪರಾಕ್ರಮನಾದ ನೃಪ ಶ್ರೇಷ್ಠನಾದ ಯುಧಿಷ್ಠಿರನು ಕುಶಲಿಯಾಗಿರುವುದನ್ನು ಕಂಡು ಆನಂದಪಡ

ಬೇಕಾಗಿರುವ ಈ ಸಮಯದಲ್ಲಿ ಮೋಹದಿಂದ ಮಾಡಲ್ಪಡುವ ಯಾವ ಅಕಾರ್ಯವನ್ನು ನೀನೀಗ ಮಾಡಲು ಹೊರಟಿರುವೆ? ನಿನ್ನಿಂದ ವಧಿಸಲ್ಪಡಬೇಕಾಗಿರುವ ಯಾವನನ್ನೂ ನಾನು ಇಲ್ಲಿ ಕಾಣುತ್ತಿಲ್ಲ. ನೀನು ಯಾವ ಕಾರಣಕ್ಕಾಗಿ–ಯಾರನ್ನು ಸಂಹರಿಸಲು ಹೊರಟಿರುವೆಯೆಂಬುದೂ ನನಗೆ ತಿಳಿಯದಾಗಿದೆ. ನಿನಗೇನಾದರೂ ಬುದ್ಧಿಭ್ರಮಣೆಯಾಗಿದೆಯೇ?



ಪಾರ್ಥ! ನೀನು ಏತಕ್ಕಾಗಿ ಇಷ್ಟು ಅವಸರದಿಂದ ಮಹಾಖಡ್ಗವನ್ನು ಒರೆಯಿಂದ ಹೊರಕ್ಕೆ ತೆಗೆಯುತ್ತಿರುವೆ? ಅದ್ಭುತಪರಾಕ್ರಮಿಯೇ! ನಾನು ನಿನ್ನನ್ನು ಪ್ರಶ್ನಿಸುತ್ತಿದ್ದೇನೆ. ಅಪ್ರಮತ್ತನಾಗಿ ಉತ್ತರಿಸು. ನೀನು ಈ ಸಮಯದಲ್ಲಿ ಖಡ್ಗವನ್ನು ಹೊರತೆಗೆದು ಯಾವ ಕಾರ್ಯವನ್ನು ಮಾಡಲು

ಇಚ್ಛಿಸಿರುವೆ? ಯಾವ ಕಾರಣದಿಂದ ನೀನು ಕ್ರುದ್ಧನಾಗಿ ಖಡ್ಗವನ್ನು ಒರೆಯಿಂದ ಹೊರಕ್ಕೆ ಎಳೆಯುತ್ತಿರುವೆ?"

ಮಹಾರಾಜ! ಶ್ರೀಕೃಷ್ಣನಿಂದ ಹೀಗೆ ಪ್ರಶ್ನಿಸಲ್ಪಟ್ಟ ಅರ್ಜುನನು ಯುಧಿಷ್ಠಿರನನ್ನು ದುರುಗುಟ್ಟಿಕೊಂಡು ನೋಡುತ್ತಾ–ಕ್ರುದ್ಧವಾದ ಸರ್ಪವು ಬುಸುಗುಟ್ಟುವಂತೆ–ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಗೋವಿಂದ ನೊಡನೆ ಹೇಳಿದನು:

**ಅನ್ಯಸ್ಮೈ ದೇಹಿ ಗಾಣ್ಡೀವಮಿತಿ ಮಾಂ ಯೋಽಭಿಚೋದಯೇತ್ ।**
**ಭಿನ್ದ್ಯಾಮಹಂ ತಸ್ಯ ಶಿರ ಇತ್ಯುಪಾಂಶುವ್ರತಂ ಮಮ ॥೧೦॥**

**ತದುಕ್ತಂ ಮಮ ಚಾನೇನ ರಾಜ್ಞಾಮಿತಪರಾಕ್ರಮ ।**
**ಸಮಕ್ಷಂ ತವ ಗೋವಿನ್ದ ನ ತತ್ಕ್ಷನ್ತುಮಿಹೋತ್ಸಹೇ ।**
**ತಸ್ಮಾದೇನಂ ವಧಿಷ್ಯಾಮಿ ರಾಜಾನಂ ಧರ್ಮಭೀರುಕಮ್ ॥೧೧॥**

" 'ನಿನ್ನ ಗಾಂಡೀವಧನುಸ್ಸನ್ನು ಬೇರೆಯವನಿಗೆ ಕೊಟ್ಟುಬಿಡು' ಎಂದು ಯಾವನು ಹೇಳುತ್ತಾನೆಯೋ–ಅವನ ತಲೆಯನ್ನು ನಾನು ಒಡೆದು ಹಾಕುತ್ತೇನೆ. ಇದು ನನ್ನ *ಉಪಾಂಶುವ್ರತವಾಗಿದೆ. ಅಮಿತಪರಾಕ್ರಮನೇ! ಅಂತಹ ಮಾತನ್ನು ಯುಧಿಷ್ಠಿರನು ನಿನ್ನ ಸಮಕ್ಷಮದಲ್ಲಿಯೇ ಹೇಳಿದ್ದಾನೆ. ಇದನ್ನು ಮಾತ್ರ ನಾನು ಕ್ಷಮಿಸಲಾರೆನು. ಆದುದರಿಂದ ಧರ್ಮಭೀರುವಾದ ಈ ರಾಜನನ್ನು ಸಂಹಾರಮಾಡುತ್ತೇನೆ.

**ಪ್ರತಿಜ್ಞಾಂ ಪಾಲಯಿಷ್ಯಾಮಿ ಹತ್ವೈನಂ ನರಸತ್ತಮಮ್ ।**
**ಏತದರ್ಥಂ ಮಯಾ ಖಡ್ಗೋ ಗೃಹೀತೋ ಯದುನನ್ದನ ॥೧೨॥**

ನರಶ್ರೇಷ್ಠನಾದ ಯುಧಿಷ್ಠಿರನನ್ನು ಸಂಹರಿಸಿ ನನ್ನ ಪ್ರತಿಜ್ಞೆಯನ್ನು ಪಾಲನೆಮಾಡುತ್ತೇನೆ. ಯದುನಂದನನೇ! ಈ ಕಾರಣದಿಂದಲೇ ನಾನು ಖಡ್ಗವನ್ನು ಒರೆಯಿಂದ ಸೆಳೆದುಕೊಂಡೆನು.

**ಸೋಽಹಂ ಯುಧಿಷ್ಠಿರಂ ಹತ್ವಾ ಸತ್ಯಸ್ಯಾನೃಣ್ಯತಾಂ ಗತಃ ।**
**ವಿಶೋಕೋ ವಿಜ್ವರಶ್ಚಾಪಿ ಭವಿಷ್ಯಾಮಿ ಜನಾರ್ದನ ॥೧೩॥**

---

*ಉಪಾಂಶುವ್ರತಂ=ಉಪಾಂಶು ಎಂದರೆ ರಹಸ್ಯ, ಅಂತರಂಗ. ಉಪಾಂಶುವ್ರತವೆಂದರೆ ಯಾರೊಡನೆಯೂ ಹೇಳದೇ ಮನಸ್ಸಿನಲ್ಲಿಯೇ ಮಾಡಿಕೊಳ್ಳುವ ಪ್ರತಿಜ್ಞೆ.

ಈಗ ನಾನು ನನ್ನ ಪ್ರತಿಜ್ಞಾನುಸಾರವಾಗಿ ಯುಧಿಷ್ಠಿರನನ್ನು ಸಂಹರಿಸಿ ಸತ್ಯಕ್ಕೆ ಸಲ್ಲಬೇಕಾದ ಋಣವನ್ನು ಪರಿಹರಿಸಿಕೊಂಡು ಶೋಕ ರಹಿತನಾಗುತ್ತೇನೆ ಮತ್ತು ಚಿಂತೆಯಿಂದಲೂ ವಿಮುಕ್ತನಾಗುತ್ತೇನೆ.

ಜನಾರ್ದನ! ಇಂತಹ ಕಾಲವು ಉಪಸ್ಥಿತವಾಗಿರುವಾಗ ಬೇರೇನಾದರೂ ಮಾಡಲು ಸಾಧ್ಯವಿರುವುದೇ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯ ವೇನು? ನೀನು ಈ ಜಗತ್ತಿನಲ್ಲಿ ಹಿಂದೆ ನಡೆದುಹೋದುದು, ಮುಂದೆ ನಡೆಯುವುದು–ಎಲ್ಲವನ್ನೂ ತಿಳಿದವನಾಗಿರುವೆ. ಆದುದರಿಂದ ನೀನು ಈ ಸಂದರ್ಭದಲ್ಲಿ ಏನು ಮಾಡಬೇಕೆಂದು ಸಲಹೆಮಾಡುವೆಯೋ ನಾನು ಹಾಗೆಯೇ ಮಾಡುತ್ತೇನೆ.”

‘ಧಿಕ್ ಪಾರ್ಥ! ನೀನೆಂತಹ ಮಾತನಾಡುತ್ತಿರುವೆ?’ ಎಂದೇ ಪ್ರಾರಂಭಿಸಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳತೊಡಗಿದನು.

**ಇದಾನೀಂ ಪಾರ್ಥ ಜಾನಾಮಿ ನ ವೃದ್ಧಾಃ ಸೇವಿತಸ್ತ್ವಯಾ ।**
**ಕಾಲೇ ನ ಪುರುಷವ್ಯಾಘ್ರ ಸಂರಮ್ಭಂ ಯದ್ಭವಾನಗಾತ್ ॥೧೬॥**

“ನೀನು ವೃದ್ಧರ ಸೇವೆಮಾಡಿಲ್ಲವೆಂಬುದನ್ನು ನಾನು ಈಗ ತಿಳಿದಂತಾಯಿತು. ಪುರುಷಶ್ರೇಷ್ಠನೇ! ಕಾಲವಲ್ಲದ ಕಾಲದಲ್ಲಿ ನೀನು ಕೋಪಿಸಿಕೊಂಡುದೇ ನೀನು ವೃದ್ಧರ ಸೇವೆಮಾಡಿಲ್ಲವೆಂಬುದನ್ನು ಸೂಚಿಸುತ್ತದೆ.

**ನ ಹಿ ಧರ್ಮವಿಭಾಗಜ್ಞಃ ಕುರ್ಯಾದೇವಂ ಧನಂಜಯ ।**
**ಯಥಾ ತ್ವಂ ಪಾಣ್ಡವಾದ್ಯೇಹ ಧರ್ಮಭೀರುರಪಣ್ಡಿತಃ ॥೧೭॥**

ಧನಂಜಯ! ಪಾಂಡವ! ನೀನು ಧರ್ಮಭೀರುವಾಗಿರುವಂತೆ ಬುದ್ಧಿಹೀನನೂ ಆಗಿರುವೆ. ಯಾವ ಕಾಲದಲ್ಲಿ, ಯಾವ ಧರ್ಮವನ್ನು ಯಾವ ರೀತಿಯಲ್ಲಿ ಅನುಷ್ಠಿಸಬೇಕೆಂಬುದನ್ನು ತಿಳಿದಿರತಕ್ಕವನು ನೀನು ಈಗ ಮಾಡಿದಂತೆ ಖಂಡಿತವಾಗಿಯೂ ಮಾಡುವುದಿಲ್ಲ.

**ಅಕಾರ್ಯಾಣಾಂ ಕ್ರಿಯಾಣಾಂ ಚ ಸಂಯೋಗಂ ಯಃ ಕರೋತಿ ವೈ ।**
**ಕಾರ್ಯಾಣಾಮಕ್ರಿಯಾಣಾಂ ಚ ಸ ಪಾರ್ಥಃ ಪುರುಷಾಧಮಃ ॥೧೮॥**

ಅಕಾರ್ಯಗಳನ್ನು ಮಾಡಬಾರದು; ಮಾಡಬೇಕಾದ ಕರ್ತವ್ಯಗಳನ್ನು

ಬಿಡಬಾರದು–ಎಂಬುದು ಸಾಮಾನ್ಯನಿಯಮ. ವಿಶೇಷಸಂದರ್ಭದಲ್ಲಿ ಮಾಡಬಾರದುದನ್ನೂ ಮಾಡಬೇಕಾಗುವುದು; ಮಾಡಬೇಕಾದುದನ್ನೂ ಬಿಡಬೇಕಾಗುವುದು. ಇವುಗಳಲ್ಲಿ ವಿವೇಕವಿಲ್ಲದೇ (ಕಾಲವಿಭಾಗ ಜ್ಞಾನವಿಲ್ಲದೇ) ಎರಡನ್ನೂ ಒಟ್ಟುಗೂಡಿಸುವವನು ಪುರುಷಾಧಮನಾಗುತ್ತಾನೆ. (ಅರ್ಜುನನು ಮಾಡಿಕೊಂಡಿರುವ ಉಪಾಂಶುವ್ರತವನ್ನು ಪರಿಪಾಲಿಸಬೇಕಾದುದು ಧರ್ಮ. ಈ ಧರ್ಮವು ಮತ್ತೊಂದು ಮಹತ್ತಾದ ಅಧರ್ಮಕ್ಕೆ ಹಾದಿಮಾಡುವುದಾದರೆ ಅರ್ಥಾತ್ ಅಣ್ಣನ ವಧೆಗೆ ಕಾರಣವಾಗುವುದಾದರೆ ಆ ಉಪಾಂಶುವ್ರತದ ಅನುಷ್ಠಾನವೇ ನಿಷಿದ್ಧವಾಗುತ್ತದೆ. ಉಪಾಂಶುವ್ರತವನ್ನು ಪರಿಪಾಲಿಸುವ ಸಲುವಾಗಿ ಅಣ್ಣನನ್ನೇ ಕೊಂದುಬಿಟ್ಟರೆ ಅಂತಹವನು ಪುರುಷಾಧಮನಾಗುತ್ತಾನೆ.)

ಧರ್ಮದ ಅನುಸರಣೆಯನ್ನೂ ಮತ್ತು ಆಚರಣೆಯನ್ನೂ ಮಾಡುವ ಶಿಷ್ಯರಿಂದ ಉಪಾಸಿತರಾದ ಆಚಾರ್ಯರು ಧರ್ಮರಹಸ್ಯಗಳನ್ನು ಉಪದೇಶಿಸುತ್ತಾರೆ. ಧರ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಸಂಕ್ಷೇಪರೂಪವಾಗಿಯೂ ಮತ್ತು ಸವಿಸ್ತರವಾಗಿಯೂ ತಿಳಿದುಕೊಂಡಿರುವ ಗುರುಜನರ ಧರ್ಮನಿರ್ಣಯವೇನೆಂಬುದನ್ನು ನೀನು ತಿಳಿದವನಾಗಿಲ್ಲ.

**ಅನಿಶ್ಚಯಜ್ಞೋ ಹಿ ನರಃ ಕಾರ್ಯಾಕಾರ್ಯವಿನಿಶ್ಚಯೇ ।**
**ಅವಶೋ ಮುಹ್ಯತೇ ಪಾರ್ಥ ಯಥಾ ತ್ವಂ ಮೂಢ ಏವ ತು ॥೨೦॥**

ಅರ್ಜುನ! ಕಾರ್ಯವು ಯಾವುದು? ಅಕಾರ್ಯವು ಯಾವುದು?–ಎಂಬುದನ್ನು ನಿರ್ಣಯಿಸುವುದರಲ್ಲಿ ನಿಶ್ಚಯಜ್ಞಾನವಿಲ್ಲದ ಮನುಷ್ಯನು ನಿನ್ನಂತೆಯೇ ವಿವೇಕಶೂನ್ಯನೂ ಸ್ವೇಚ್ಛಾಚಾರಿಯೂ ಆಗಿ ಭ್ರಾಂತನಾಗುತ್ತಾನೆ. (ಕರ್ತವ್ಯಾಕರ್ತವ್ಯವಿವೇಕಶೂನ್ಯನಾಗುತ್ತಾನೆ.)

**ನ ಹಿ ಕಾರ್ಯಮಕಾರ್ಯಂ ವಾ ಸುಖಂ ಜ್ಞಾತುಂ ಕಥಂಚನ ।**
**ಶ್ರುತೇನ ಜ್ಞಾಯತೇ ಸರ್ವಂ ತಚ್ಚ ತ್ವಂ ನಾವಬುಧ್ಯಸೇ ॥೨೧॥**

ಸಮಯಗಳಲ್ಲಿ ಮಾಡಬೇಕಾದ ಕಾರ್ಯವು ಯಾವುದು? ಮಾಡಬಾರದ ಅಕಾರ್ಯವು ಯಾವುದು? ಎಂಬುದನ್ನು ನಿರ್ಧರಿಸುವುದು ಸುಲಭ

ಸಾಧ್ಯವೇನಲ್ಲ. ಈ ಎಲ್ಲ ವಿಷಯಗಳೂ ಶಾಸ್ತ್ರಜ್ಞಾನದಿಂದ ತಿಳಿಯುತ್ತವೆ. ನಿನಗೆ ಈ ಕಾರ್ಯಾಕಾರ್ಯಗಳ ರಹಸ್ಯಗಳು ತಿಳಿದೇ ಇಲ್ಲ.

**ಅವಿಜ್ಞಾನಾದ್ಭವಾನ್ಯಚ್ಚ ಧರ್ಮಂ ರಕ್ಷತಿ ಧರ್ಮವಿತ್ ।**
**ಪ್ರಾಣಿನಾಂ ತ್ವಂ ವಧಂ ಪಾರ್ಥ ಧಾರ್ಮಿಕೋ ನಾವಬುಧ್ಯಸೇ ॥೨೨॥**



ಪಾರ್ಥ! ನೀನು ಅಜ್ಞಾನದಿಂದಾಗಿ, ಧರ್ಮವನ್ನು ತಿಳಿದಿರತಕ್ಕವನೆಂದೂ–ಆ ಧರ್ಮವನ್ನು ರಕ್ಷಿಸತಕ್ಕವನೆಂದೂ ಭಾವಿಸಿಕೊಂಡು ಪ್ರಾಣಿಹಿಂಸಾರೂಪವಾದ ಮಹಾಪಾಪವನ್ನು ಮಾಡಲು ಹೊರಟಿರುವೆ. ನಾನೇ ಮಹಾಧಾರ್ಮಿಕನೆಂದು ಭಾವಿಸಿಕೊಂಡಿರುವ ನೀನು ನಿನ್ನ ಪ್ರಯತ್ನದಿಂದ ಪ್ರಾಣಿಗಳ ವಧೆಯಾಗುವುದೆಂಬುದನ್ನು ತಿಳಿದವನಾಗಿಲ್ಲ.

**ಪ್ರಾಣಿನಾಮವಧಸ್ತಾತ ಸರ್ವಜ್ಯಾಯಾನ್ಮತೋ ಮಮ ।**
**ಅನೃತಾಂ ವಾ ವದೇದ್ವಾಚಂ ನ ತು ಹನ್ಯಾತ್ಕಥಂಚನ ॥೨೩॥**

ಎಲ್ಲ ಧರ್ಮಗಳಿಗಿಂತಲೂ ಪ್ರಾಣಿಗಳನ್ನು ಹಿಂಸೆಮಾಡದಿರುವುದೇ ಶ್ರೇಷ್ಠವಾದ ಧರ್ಮವೆಂದು ನಾನು ಭಾವಿಸಿದ್ದೇನೆ. ಒಬ್ಬನ ಪ್ರಾಣದ ರಕ್ಷಣೆಗಾಗಿ ಸುಳ್ಳನ್ನಾದರೂ ಹೇಳಬಹುದು. ಆದರೆ ಯಾವುದೇ ಕಾರಣದಿಂದಲೂ ಪ್ರಾಣಿಗಳ ವಧೆಯನ್ನು ಮಾತ್ರ ಮಾಡಬಾರದು. ಹೀಗಿರುವಾಗ:

**ಸ ಕಥಂ ಭ್ರಾತರಂ ಜ್ಯೇಷ್ಠಂ ರಾಜಾನಂ ಧರ್ಮಕೋವಿದಮ್ ।**
**ಹನ್ಯಾದ್ಭವಾನ್ನರಶ್ರೇಷ್ಠ ಪ್ರಾಕೃತೋಽನ್ಯಃ ಪುಮಾನಿವ ॥೨೪॥**

ನರಶ್ರೇಷ್ಠನೇ! ಸಾಮಾನ್ಯನಾದೊಬ್ಬ ಮನುಷ್ಯನಂತೆ–ಹಿರಿಯಣ್ಣನಾದ, ಧರ್ಮಕೋವಿದನಾದ, ರಾಜನಾದ ಯುಧಿಷ್ಠಿರನನ್ನು ಹೇಗೆ ಸಂಹರಿಸುವೆ?

**ಅಯುಧ್ಯಮಾನಸ್ಯ ವಧಸ್ತಥಾಶತ್ರೋಶ್ಚ ಮಾನದ ।**
**ಪರಾಙ್ಮುಖಸ್ಯ ದ್ರವತಃ ಶರಣಂ ಚಾಪಿ ಗಚ್ಛತಃ ॥೨೫॥**

**ಕೃತಾಞ್ಜಲೇಃ ಪ್ರಪನ್ನಸ್ಯ ಪ್ರಮತ್ತಸ್ಯ ತಥೈವ ಚ ।**
**ನ ವಧಃ ಪೂಜ್ಯತೇ ಸದ್ಭಿಸ್ತಚ್ಚ ಸರ್ವಂ ಗುರೌ ತವ ॥೨೬॥**

ಮಾನದನೇ! ಯುದ್ಧಮಾಡದೇ ಇರುವವನ, ಶತ್ರುತ್ವವಿಲ್ಲದೇ ಇರುವವನ, ಯುದ್ಧದಲ್ಲಿ ಪರಾಙ್ಮುಖನಾಗಿ ಪಲಾಯನಮಾಡುತ್ತಿರುವವನ, ಶರಣಾಗತನಾದವನ, ಕೈಮುಗಿದುಕೊಂಡು ಆಶ್ರಯವನ್ನು ಪಡೆಯಲು ಬಂದವನ, ಅನವಧಾನತೆಯಿಂದ ಇರುವವನ–ವಧೆಯನ್ನು ಸತ್ಪುರುಷರು ಪುರಸ್ಕರಿಸುವುದಿಲ್ಲ. ನಿನ್ನ ಅಣ್ಣನಲ್ಲಿ ವಧಾರ್ಹನಲ್ಲದವನ ಈ ಎಲ್ಲ ಗುಣಗಳೂ ಇವೆ.

**ತ್ವಯಾ ಚೈವಂ ವ್ರತಂ ಪಾರ್ಥ ಬಾಲೇನೇವ ಕೃತಂ ಪುರಾ ।**
**ತಸ್ಮಾದಧರ್ಮಸಂಯುಕ್ತಂ ಮೌರ್ಖ್ಯಾತ್ಕರ್ಮ ವ್ಯವಸ್ಯಸಿ ॥೨೭॥**

ತಿಳಿವಳಿಕೆಯಿಲ್ಲದ ಹುಡುಗನೊಬ್ಬ ಪ್ರತಿಜ್ಞೆಮಾಡುವಂತೆ–ನೀನಾದರೋ ಹಿಂದೆ 'ಗಾಂಡೀವವನ್ನು ಬೇರೆಯವನಿಗೆ ಕೊಟ್ಟುಬಿಡು' ಎಂದು ಹೇಳುವವನನ್ನು ಸಂಹರಿಸುವೆನೆಂಬ ಉಪಾಂಶುವ್ರತವನ್ನು ಮಾಡಿರುವೆ.

ಈ ಕಾರಣದಿಂದಲೇ ನೀನು ಅಧರ್ಮಯುಕ್ತವಾದ ಪಾಪಕಾರ್ಯವನ್ನು ಮಾಡಲು ಹೊರಟಿರುವೆ.

**ಸ ಗುರುಂ ಪಾರ್ಥ ಕಸ್ಮಾತ್ತ್ವಂ ಹನ್ತುಕಾಮೋಽಭಿಧಾವಸಿ ।**
**ಅಸಮ್ಪ್ರಧಾರ್ಯ ಧರ್ಮಾಣಾಂ ಗತಿಂ ಸೂಕ್ಷ್ಮಾಂ ದುರತ್ಯಯಾಮ್ ॥**

ಪಾರ್ಥ! ಅತಿಸೂಕ್ಷ್ಮವಾದ, ದುರ್ಬೋಧವಾದ, ಸಾಮಾನ್ಯರಿಂದ ತಿಳಿಯಲು ಕಷ್ಟಸಾಧ್ಯವಾದ ಧರ್ಮದ ಸೂಕ್ಷ್ಮಗತಿಯನ್ನು ನಿರ್ಣಯಿಸಲಾರದೇ ಏತಕ್ಕಾಗಿ ಧರ್ಮಿಷ್ಠನಾದ ಅಣ್ಣನನ್ನೇ ಸಂಹರಿಸಲು ಇಚ್ಛಿಸಿ ನುಗ್ಗುತ್ತಿರುವೆ? ನಿನಗೆ ಧರ್ಮದ ರಹಸ್ಯವೇನೆಂಬುದನ್ನು ಹೇಳುತ್ತೇನೆ. ಧರ್ಮದ ವಿಷಯದಲ್ಲಿ ಧರ್ಮಜ್ಞರಾದ ಭೀಷ್ಮ, ಯುಧಿಷ್ಠಿರ, ವಿದುರ, ಯಶಸ್ವಿನಿಯಾದ ಕುಂತೀದೇವಿ–ಇವರು ಏನು ಹೇಳಬಲ್ಲರೋ ಅದನ್ನೇ ನಾನೂ ನಿನಗೆ ಯಥಾವತ್ತಾಗಿ ಹೇಳುತ್ತೇನೆ: ಏಕಾಗ್ರತೆಯಿಂದ ಕೇಳು.

**ಸತ್ಯಸ್ಯ ವಚನಂ ಸಾಧು ನ ಸತ್ಯಾದ್ವಿದ್ಯತೇ ಪರಮ್ ।**
**ತತ್ತ್ವೇನೈವ ಸುದುರ್ಜ್ಞೇಯಂ ಪಶ್ಯ ಸತ್ಯಮನುಷ್ಠಿತಮ್ ॥೩೧॥**

ಸತ್ಯವನ್ನು ಹೇಳುವುದು ಒಳ್ಳೆಯದೇ. ಸತ್ಯನಿಷ್ಠೆಗಿಂತಲೂ ಶ್ರೇಷ್ಠವಾದ ಧರ್ಮವು ಮತ್ತೊಂದಿರುವುದಿಲ್ಲ. ಆದರೆ, ಅರ್ಜುನ! ನೀನು ಈ ವಿಷಯವನ್ನು ಮನಗಾಣಬೇಕಾಗಿದೆ. ಸತ್ಪುರುಷರಿಂದ ಆಚರಿಸಲ್ಪಡುವ ಈ ಸತ್ಯನಿಷ್ಠಾಧರ್ಮದ ಯಥಾರ್ಥಸ್ವರೂಪವು ತಿಳಿಯಲು ಅತ್ಯಂತಕಷ್ಟ ಸಾಧ್ಯವಾದುದು. ಸುಲಭವಾಗಿ ಇದನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಏಕೆಂದರೆ: ಕೆಲವು ಸಮಯಗಳಲ್ಲಿ–

**ಭವೇತ್ಸತ್ಯಮವಕ್ತವ್ಯಂ ವಕ್ತವ್ಯಮನೃತಂ ಭವೇತ್ ।**
**ಯತ್ರಾನೃತಂ ಭವೇತ್ಸತ್ಯಂ ಸತ್ಯಂ ಚಾಪ್ಯನೃತಂ ಭವೇತ್ ॥೩೨॥**

ಯಾವ ಸಮಯದಲ್ಲಿ ಸುಳ್ಳು ಹೇಳುವುದರಿಂದ–ಸಾಮಾನ್ಯವಾಗಿ ಸತ್ಯವನ್ನು ಹೇಳುವುದರಿಂದ ಉಂಟಾಗಬಹುದಾದ ಸತ್ಪರಿಣಾಮವುಂಟಾಗುತ್ತದೆಯೋ–ಅಂತಹ ಸಮಯದಲ್ಲಿ ಸುಳ್ಳನ್ನು ಹೇಳಬೇಕಾಗುತ್ತದೆ. ಯಾವ

ಸಮಯದಲ್ಲಿ ಸತ್ಯವನ್ನು ಹೇಳುವುದರಿಂದ–ಸಾಮಾನ್ಯವಾಗಿ ಸುಳ್ಳನ್ನು ಹೇಳುವುದರಿಂದ ಉಂಟಾಗಬಹುದಾದ ದುಷ್ಪರಿಣಾಮವೇ ಉಂಟಾಗುತ್ತದೆಯೋ–ಅಂತಹ ಸಂದರ್ಭದಲ್ಲಿ ಸತ್ಯವು ಹೇಳಬಾರದಾಗುತ್ತದೆ.

**ವಿವಾಹಕಾಲೇ ರತಿಸಮ್ಪ್ರಯೋಗೇ**
**ಪ್ರಾಣಾತ್ಯಯೇ ಸರ್ವಧನಾಪಹಾರೇ ।**
**ವಿಪ್ರಸ್ಯ ಚಾರ್ಥೇ ಹ್ಯನೃತಂ ವದೇತ**
**ಪಞ್ಚಾನೃತಾನ್ಯಾಹುರಪಾತಕಾನಿ ॥೩೩॥**

ವಿವಾಹಕಾಲದಲ್ಲಿ, ಸ್ತ್ರೀಸಂಗಮಸಮಯದಲ್ಲಿ, ಪ್ರಾಣಾಪಾಯದ ಸಮಯದಲ್ಲಿ, ಸರ್ವೈಶ್ವರ್ಯವೂ ಅಪಹರಣವಾಗುತ್ತಿರುವಾಗ ಮತ್ತು ಬ್ರಾಹ್ಮಣನ ರಕ್ಷಣೆಯ ಸಲುವಾಗಿ ಸುಳ್ಳನ್ನು ಹೇಳಬಹುದು. ಈ ಐದು ಸಂದರ್ಭಗಳಲ್ಲಿ ಸುಳ್ಳುಹೇಳುವುದರಿಂದ ಪಾಪಸಂಘಟನೆಯಾಗುವುದಿಲ್ಲ. (ಇಲ್ಲಿಯೂ ಸಹ ಸುಳ್ಳುಹೇಳಿಯೇ ಕಾರ್ಯಸಾಧನೆಯನ್ನು ಮಾಡಬೇಕೆಂಬ ಅರ್ಥವಲ್ಲ. ಅನಿವಾರ್ಯದ ಸಂದರ್ಭದಲ್ಲಿ ಮಾತ್ರ ಸುಳ್ಳನ್ನು ಹೇಳಬಹುದು.)

**ಸರ್ವಸ್ವಸ್ಯಾಪಹಾರೇ ತು ವಕ್ತವ್ಯಮನೃತಂ ಭವೇತ್ ।**
**ತತ್ರಾನೃತಂ ಭವೇತ್ಸತ್ಯಂ ಸತ್ಯಂ ಚಾಪ್ಯನೃತಂ ಭವೇತ್ ।**
**ತಾದೃಶಂ ಪಶ್ಯತೇ ಬಾಲೋ ಯಸ್ಯ ಸತ್ಯಮನುಷ್ಠಿತಮ್ ॥೩೪॥**

**ಭವೇತ್ಸತ್ಯಮವಕ್ತವ್ಯಂ ನ ವಕ್ತವ್ಯಮನುಷ್ಠಿತಮ್ ।**
**ಸತ್ಯಾನೃತೇ ವಿನಿಶ್ಚಿತ್ಯ ತತೋ ಭವತಿ ಧರ್ಮವಿತ್ ॥೩೫॥**

ಒಬ್ಬನ ಸರ್ವೈಶ್ವರ್ಯವೂ ಅಪಹರಣವಾಗುತ್ತಿರುವಾಗ ಸುಳ್ಳು ಹೇಳುವುದು ಅನಿವಾರ್ಯವಾಗಬಹುದು. (ಕಳ್ಳನೊಬ್ಬನು ಮನೆಯೊಳಗೆ ನುಗ್ಗಿ ಒಡವೆ-ವಸ್ತುಗಳು, ಹಣ ಎಲ್ಲಿದೆಯೆಂದು ಯಜಮಾನನನ್ನು ಕೇಳಿದಾಗ ಸುಳ್ಳುಹೇಳುವುದು ಅನಿವಾರ್ಯವೇ ಆಗುತ್ತದೆ. ಆ ಸಮಯದಲ್ಲಿ ಯಾವ ಮೂಢರೂ ನಿಜಹೇಳಲು ಹೋಗುವುದಿಲ್ಲ.) ಅಂತಹ ಸಂದರ್ಭದಲ್ಲಿ ಹೇಳಿದ ಸುಳ್ಳು ಸತ್ಯವಚನದ ಫಲವನ್ನೇ ಕೊಡುತ್ತದೆ. (ಕಳ್ಳನ ಕಣ್ಣಿಗೆ ಬೀಳದ ಕೆಲವು ಪದಾರ್ಥಗಳಾದರೂ ಉಳಿದುಕೊಳ್ಳುತ್ತವೆ.) ಒಂದು ವೇಳೆ

ಆ ಸಮಯದಲ್ಲಿ ನಿಜವನ್ನೇ ಹೇಳಿಬಿಟ್ಟರೆ–ಅನೃತಭಾಷಣದ ದುಷ್ಫಲವೇ ಲಭಿಸುತ್ತದೆ. ಸರ್ವನಾಶವಾಗುತ್ತದೆ. ಆದರೆ ಸತ್ಯದ ಯಾಥಾರ್ಥ್ಯ ವನ್ನರಿಯದೆ–'ನಿಜವನ್ನೇ ಹೇಳಬೇಕು'–ಎಂದಿಷ್ಟನ್ನೇ ತಿಳಿದು ಅದೇ ಪರಮಧರ್ಮವೆಂದು ಭಾವಿಸಿರುವ ಬಾಲಕನೊಬ್ಬನು (ಧರ್ಮಸೂಕ್ಷ್ಮ ವನ್ನರಿಯದವನು) ಸರ್ವಸ್ವಾಪಹರಣದ ಸಂದರ್ಭದಲ್ಲಿ ಹೇಳಿದ ಸುಳ್ಳನ್ನೂ ಪಾಪಪ್ರದವೆಂದೇ ಭಾವಿಸುತ್ತಾನೆ. ಅದರಿಂದುಂಟಾಗುವ ದುಷ್ಪರಿಣಾಮ ಗಳನ್ನು ಅವನು ಯೋಚಿಸಹೋಗುವುದಿಲ್ಲ. ಸರ್ವಾಪಹಾರಕಾಲದಲ್ಲಿ ಸತ್ಯವನ್ನು ಹೇಳಲೇಬಾರದಂತಹ ಸಂದರ್ಭವೂ ಒದಗುತ್ತದೆ. ಅಂತಹ ಸಂದರ್ಭದಲ್ಲಿ ಸತ್ಯವನ್ನು ಹೇಳಿ ದುಷ್ಪರಿಣಾಮವುಂಟಾದರೂ ಸತ್ಯದ ಅನುಷ್ಠಾನಮಾಡಿದಂತಾಯಿತೆಂದು ಹೇಳಬಾರದು. (ತಿಳಿದುಕೊಳ್ಳ ಬಾರದು.) ಕಾಲಾನುಗುಣವಾಗಿ ಸತ್ಯಾಸತ್ಯಗಳ ಪರಿಣಾಮಗಳನ್ನು ವಿಮರ್ಶಿಸಿ ನಿಶ್ಚಯಿಸಬೇಕು. (ಸತ್ಯವನ್ನೇ ಹೇಳಬೇಕು. ಸುಳ್ಳನ್ನು ಹೇಳಬಾರದು-ಎಂಬುದು ಸಾಧಾರಣಧರ್ಮ. ಆಪತ್ಕಾಲದಲ್ಲಿ ಮಾತ್ರ ಅನಿವಾರ್ಯವಾದಲ್ಲಿ ಸುಳ್ಳುಹೇಳಬಹುದು. ಆದರೆ ಅದನ್ನೇ ದಿನಬಳಕೆಯಲ್ಲಿ ಇಟ್ಟುಕೊಳ್ಳಬಾರದು. ಒಂದು ವೇಳೆ ಹಾಗೆ ಸುಳ್ಳನ್ನು ಹೇಳಬೇಕಾಗಿ ಬಂದರೂ ಸಂಪೂರ್ಣವಾಗಿ ವಿಮರ್ಶಿಸಬೇಕು.) ಇವುಗಳೆಲ್ಲವನ್ನೂ ವಿವೇಚಿಸಿ ಕಾರ್ಯಮಾಡುವವನು ಧರ್ಮವಿದನಾಗುತ್ತಾನೆ.

**ಕಿಮಾಶ್ಚರ್ಯಂ ಕೃತಪ್ರಜ್ಞಃ ಪುರುಷೋಽಪಿ ಸುದಾರುಣಃ ।**
**ಸುಮಹತ್ಪ್ರಾಪ್ನುಯಾತ್ಪುಣ್ಯಂ ಬಲಾಕೋಽನ್ಧವಧಾದಿವ ॥೩೬॥**

ಕರ್ತವ್ಯಾಕರ್ತವ್ಯಪ್ರಜ್ಞೆಯಿರುವವನು ಮಹಾಕ್ರೂರಿಯಾದ ಮನುಷ್ಯನೇ ಆಗಿದ್ದರೂ ಅಂಧಪಶುವನ್ನು ಸಂಹರಿಸಿದ ಬಲಾಕನೆಂಬ ವ್ಯಾಧನಂತೆ ಮಹಾಪುಣ್ಯವನ್ನೇ ಗಳಿಸಬಹುದು. ಇದರಲ್ಲಿ ಆಶ್ಚರ್ಯವೇನಿದೆ? ಪಾರ್ಥ!

**ಕಿಮಾಶ್ಚರ್ಯಂ ಪುನರ್ಮೂಢೋ ಧರ್ಮಕಾಮೋ ಹ್ಯಪಣ್ಡಿತಃ ।**
**ಸುಮಹತ್ಪ್ರಾಪ್ನುಯಾತ್ಪಾಪಮಾಪಗಾಸ್ವಿವ ಕೌಶಿಕಃ ॥೩೭॥**

ಧರ್ಮಿಷ್ಠನಾಗಿರಬೇಕೆಂಬ ಇಚ್ಛೆಯನ್ನು ಮಾತ್ರವೇ ಹೊಂದಿದ್ದು

ಕಾರ್ಯಾಕಾರ್ಯವಿವೇಚನೆಯಿಲ್ಲದೇ ಅಜ್ಞನಾಗಿರತಕ್ಕವನು, ನದಿಗಳ ಸಂಗಮಸ್ಥಾನದಲ್ಲಿ ಕುಳಿತಿದ್ದ ಕೌಶಿಕಮುನಿಯಂತೆಯೇ ಮಹಾಪಾಪವನ್ನೇ ಹೊಂದುವನು. ಇದರಲ್ಲಿ ತಾನೇ ಆಶ್ಚರ್ಯವೇನಿದೆ? ಅರ್ಜುನ!"

ಶ್ರೀಕೃಷ್ಣನ ಮಾತುಗಳನ್ನು ಕೇಳಿ ಅರ್ಜುನನು ಹೇಳುತ್ತಾನೆ:

"ಭಗವನ್! ನನಗೆ ಸ್ಪಷ್ಟವಾಗಿ ತಿಳಿಯುವ ರೀತಿಯಲ್ಲಿ ಬಲಾಕನಿಗೆ ಸಂಬಂಧಿಸಿದ ಕಥೆಯನ್ನೂ–ನದಿಗಳ ಸಂಗಮಸ್ಥಾನದಲ್ಲಿದ್ದ ಕೌಶಿಕನಿಗೆ ಸಂಬಂಧಿಸಿದ ಕಥೆಯನ್ನೂ ಹೇಳು."

"ಅರ್ಜುನ! ಹಿಂದೆ ಬಲಾಕನೆಂಬ ಹೆಸರಿನ ಒಬ್ಬ ವ್ಯಾಧನಿದ್ದನು. ಅವನು ತನ್ನ ಹೆಂಡಿರು-ಮಕ್ಕಳ ಜೀವನಾರ್ಥವಾಗಿ ಮೃಗಗಳನ್ನು ಕೊಲ್ಲುತ್ತಿದ್ದನೇ ಹೊರತು ಅವುಗಳನ್ನು ಕೊಂದು ತಿನ್ನಬೇಕೆನ್ನುವ ಆಸೆಯಿಂದ ಕೊಲ್ಲುತ್ತಿರಲಿಲ್ಲ. ಅವನಿಗೆ ವೃದ್ಧರಾದ ತಂದೆ-ತಾಯಿಗಳು ಇದ್ದರು ಮತ್ತು ಅವನಲ್ಲಿ ಬಂಧು-ಮಿತ್ರರನೇಕರು ಆಶ್ರಯವನ್ನು ಪಡೆದುಕೊಂಡಿದ್ದರು. ಅವರೆಲ್ಲರನ್ನೂ ಬಲಾಕನು ಸಾಕಿ-ಸಲಹುತ್ತಿದ್ದನು. ಅವನು ಸ್ವಧರ್ಮನಿರತನಾಗಿಯೂ, ಸತ್ಯನಿಷ್ಠನಾಗಿಯೂ ಮತ್ತು ಅಸೂಯಾರಹಿತನಾಗಿಯೂ ಇದ್ದನು. ಯಥಾಪೂರ್ವವಾಗಿ ಮೃಗಗಳನ್ನು ಬೇಟೆಯಾಡಲು ಹೋದಾಗ ಒಂದು ದಿನ ಅವನಿಗೆ ಎಲ್ಲಿಯೂ ಯಾವ ಮೃಗವೂ ಸಿಕ್ಕಲಿಲ್ಲ. ವ್ಯಾಧನು ಮೃಗಗಳಿಗಾಗಿ ಅಲೆದಾಡುತ್ತಿದ್ದಾಗ ನೀರು ಕುಡಿಯುತ್ತಿದ್ದ, ಕಣ್ಣಿಲ್ಲದ, ಆಘ್ರಾಣದಿಂದಲೇ (ವಾಸನೆಯಿಂದಲೇ) ವಸ್ತುಗಳನ್ನು ಹುಡುಕಿಕೊಂಡು ಮುನ್ನಡೆಯುತ್ತಿದ್ದ, ಮಾಂಸಾಹಾರಿಯಾದ ಪ್ರಾಣಿಯೊಂದನ್ನು ಕಂಡನು. ಅಂತಹ ಪ್ರಾಣಿಯನ್ನು ಅದುವರೆಗೂ ವ್ಯಾಧನು ನೋಡಿಯೇ ಇರಲಿಲ್ಲ. ಮರುಕ್ಷಣದಲ್ಲಿಯೇ ವ್ಯಾಧನು ಆ ಅಂಧಪ್ರಾಣಿಯನ್ನು ಸಂಹರಿಸಿದನು. ಆ ಕುರುಡುಪ್ರಾಣಿಯನ್ನು ಸಂಹರಿಸಿ ದೊಡನೆಯೇ ಆಕಾಶದಿಂದ ವ್ಯಾಧನ ಮೇಲೆ ಪುಷ್ಪವೃಷ್ಟಿ ಯಾಯಿತು. ಅಪ್ಸರೆಯರ ಗೀತಗಳಿಂದಲೂ ವಾದ್ಯಗಳಿಂದಲೂ ನಿನದಿತವಾಗಿದ್ದ, ಸುಮನೋಹರವಾಗಿದ್ದ ವಿಮಾನವೊಂದು ಮೃಗವನ್ನು ಸಂಹರಿಸಿದ ವ್ಯಾಧನನ್ನು ಸ್ವರ್ಗಕ್ಕೊಯ್ಯಲು ಆಗಮಿಸಿತು.

ಅರ್ಜುನ! ಆ ಮಹಾಮೃಗವು ತಪಸ್ಸುಮಾಡಿ ಭೂಮಂಡಲ

ದಲ್ಲಿರುವ ಎಲ್ಲ ಪ್ರಾಣಿಗಳನ್ನೂ ವಿನಾಶಮಾಡುವ ವರವನ್ನು ಪಡೆದುಕೊಂಡಿದ್ದಿತು. ಆ ಪ್ರಾಣಿಯನ್ನು ಬ್ರಹ್ಮನು ಕುರುಡಾಗಿ ಮಾಡಿದ್ದನು. ಈ ರೀತಿಯಲ್ಲಿ ಎಲ್ಲ ಪ್ರಾಣಿಗಳನ್ನೂ ವಿನಾಶಗೊಳಿಸಬೇಕೆಂದು ನಿಶ್ಚಯಿಸಿದ್ದ ಆ ಮಹಾಮೃಗವನ್ನು ಕೊಂದು ಬಲಾಕನೆಂಬ ವ್ಯಾಧನು ಸ್ವರ್ಗಕ್ಕೆ ಹೋದನು." (ಕ್ರೂರಪ್ರಾಣಿಗಳೇ ಆಗಲಿ–ಅವನ್ನು ಸಂಹರಿಸುವುದು ಧರ್ಮವೇ?–ಎಂಬ ಪ್ರಶ್ನೆಗೆ ಇದು ಉತ್ತರವಾಗಿದೆ. ಪ್ರಾಣಿಹತ್ಯೆಯನ್ನು ಮಾಡಕೂಡದೆಂಬುದು ಸಾಮಾನ್ಯಧರ್ಮ. ಆದರೆ ಯಾವ ಪ್ರಾಣಿಯನ್ನೂ ಯಾವ ಕಾಲದಲ್ಲಿಯೂ ಸಂಹರಿಸಲೇಕೂಡದೆಂಬುದು ಇದರ ಅರ್ಥವಲ್ಲ. ಸಾರ್ವಜನಿಕರಿಗೆ ಹಿಂಸೆಯನ್ನುಂಟುಮಾಡುವ ಪ್ರಾಣಿಗಳನ್ನು ಸಂಹರಿಸುವುದು ಅನಿವಾರ್ಯವಾಗುತ್ತದೆ. ಎಲ್ಲ ಪ್ರಾಣಿಗಳಿಗೂ ಯಮನಂತೆಯೇ ಇದ್ದ ಮಹಾಸತ್ತ್ವವನ್ನು (ಆ ಪ್ರಾಣಿಯನ್ನು) ಆಕಸ್ಮಿಕವಾಗಿ ಕೊಂದಿದ್ದರಿಂದಲೇ ವ್ಯಾಧನಿಗೆ ಸ್ವರ್ಗವು ಲಭಿಸಿತು. ಒಂದು ದುಷ್ಟಪ್ರಾಣಿಯನ್ನು ಕೊಂದುದರಿಂದ ಪುಣ್ಯವೇ ವ್ಯಾಧನಿಗೆ ಲಭಿಸಿತು. ಪ್ರಾಣಿಯನ್ನು ಕೊಂದುದರಿಂದ ಪಾಪಸಂಘಟನೆಯಾಗದಿದ್ದುದು ಮಾತ್ರವಲ್ಲದೇ ಪುಣ್ಯವೂ ಲಭಿಸಿ ಅವನು ಸ್ವರ್ಗಕ್ಕೂ ಹೋದನು. ಇದನ್ನೇ ಶ್ರೀಕೃಷ್ಣನು–'ಧರ್ಮಃ ಸುದುರ್ವಿದಃ–ಧರ್ಮವು ತಿಳಿಯಲು ಬಹಳ ಕಷ್ಟಸಾಧ್ಯವಾದುದು'–ಎಂದು ಹೇಳಿದ್ದಾನೆ.)

ಅನಂತರ ಶ್ರೀಕೃಷ್ಣನು ಕೌಶಿಕನ ಉಪಾಖ್ಯಾನವನ್ನು ಹೇಳತೊಡಗಿದನು:

"ಅರ್ಜುನ! ಕೌಶಿಕನೆಂಬ ಬ್ರಾಹ್ಮಣನೊಬ್ಬನಿದ್ದನು. ಅವನು ಮಹಾತಪಸ್ವೀ. ಆದರೆ ಶಾಸ್ತ್ರಗಳನ್ನು ಹೆಚ್ಚಾಗಿ ಓದಿದವನಲ್ಲ. ಅವನು ಗ್ರಾಮದಿಂದ ಸ್ವಲ್ಪ ದೂರದಲ್ಲಿ ನದಿಗಳ ಸಂಗಮಸ್ಥಾನದಲ್ಲಿ ವಾಸವಾಗಿದ್ದನು. 'ಸತ್ಯಂ ಮಯಾ ಸದಾ ವಾಚ್ಯಮ್'–ನಾನು ಯಾವಾಗಲೂ ಸತ್ಯವನ್ನೇ ಹೇಳಬೇಕು'–ಎಂಬುದು ಅವನ ವ್ರತವಾಗಿದ್ದಿತು. ಅಂತೆಯೇ ಅವನು ಯಾವಾಗಲೂ ಸತ್ಯವನ್ನೇ ಹೇಳುತ್ತಿದ್ದುದರಿಂದ ಕೌಶಿಕನು–'ಸತ್ಯವಾದೀ'–ಎಂದೇ ವಿಖ್ಯಾತನಾದನು. ಒಂದು ದಿನ ಕೆಲವು ಪ್ರಯಾಣಿಕರು ಕಳ್ಳರ ಭಯದಿಂದಾಗಿ ಕೌಶಿಕಮುನಿಯಿದ್ದ ವನದೊಳಕ್ಕೆ ಪ್ರವೇಶಿಸಿ ಒಂದೆಡೆ

ಯಲ್ಲಿ ಅಡಗಿಕೊಂಡರು. ಅಲ್ಲಿಗೂ ಕ್ರುದ್ಧರಾದ ಕಳ್ಳರು ಬಂದು ಆ ದಾರಿಹೋಕರನ್ನು ಪ್ರಯತ್ನಪೂರ್ವಕವಾಗಿ ಹುಡುಕತೊಡಗಿದರು. ಎಷ್ಟು ಹುಡುಕಿದರೂ ದಾರಿಹೋಕರು ಕಳ್ಳರಿಗೆ ಸಿಕ್ಕಲಿಲ್ಲ. ಆಗ ಕಳ್ಳರು ಸಂಗಮಸ್ಥಾನದಲ್ಲಿ ಕುಳಿತಿದ್ದ ಸತ್ಯವಾದಿಯಾದ ಕೌಶಿಕಮುನಿಯ ಸಮೀಪಕ್ಕೆ ಬಂದು "ಭಗವನ್! ಕೆಲವು ಜನರು ಇತ್ತ ಕಡೆಯೇ ಬಂದರು. ಮುಂದೆ ಅವರು ಯಾವ ಮಾರ್ಗವನ್ನು ಹಿಡಿದು ಹೋದರು? ನಾವು ನಿಮ್ಮನ್ನು ಸತ್ಯದ ಕಾರಣದಿಂದ ಕೇಳುತ್ತಿದ್ದೇವೆ. ಅವರೆಲ್ಲಿ ಹೋದರೆಂಬುದು ನಿಮಗೆ ತಿಳಿದಿದ್ದರೆ ದಯಮಾಡಿ ಹೇಳಿರಿ"–ಎಂದು ಕೇಳಿದರು.

ದಸ್ಯುಗಳಿಂದ ಹೀಗೆ ಪ್ರಶ್ನಿಸಲ್ಪಟ್ಟ ಕೌಶಿಕನು ಸತ್ಯವಾದೀ ಎಂಬ ಬಿರುದಿಗೆ ಅನುಸಾರವಾಗಿ ಸತ್ಯವನ್ನೇ ಹೇಳಿದನು:

"ದಸ್ಯುಗಳೇ! ಅನೇಕವೃಕ್ಷಗಳಿಂದಲೂ, ಲತೆಗಳಿಂದಲೂ, ಪೊದರುಗಳಿಂದಲೂ ಕೂಡಿರುವ ಈ ವನವನ್ನೇ ಅವರು ಆಶ್ರಯಿಸಿದ್ದಾರೆ. ಇಲ್ಲಿಯೇ ಅವರು ಅಡಗಿಕೊಂಡಿರುತ್ತಾರೆ"–ಎಂಬುದಾಗಿ ಕೌಶಿಕನು ಯಥಾವತ್ತಾಗಿ ಹೇಳಿದುದಲ್ಲದೇ, ಬಚ್ಚಿಟ್ಟುಕೊಂಡಿದ್ದ ದಾರಿಹೋಕರನ್ನು ದಸ್ಯುಗಳಿಗೆ ತೋರಿಸಿಯೂ ಕೊಟ್ಟನು. ಬಳಿಕ ಕ್ರೂರಿಗಳಾದ ಆ ಕಳ್ಳರು ದಾರಿಹೋಕರನ್ನು ಮುತ್ತಿಗೆಹಾಕಿ ಅವರೆಲ್ಲರನ್ನೂ ಕೊಂದು ಅವರಲ್ಲಿದ್ದ ಐಶ್ವರ್ಯವನ್ನು ದೋಚಿಕೊಂಡು ಹೊರಟುಹೋದರು. ಆ ಸಂದರ್ಭದಲ್ಲಿ ಕೌಶಿಕನು ಯದ್ಯಪಿ ಸತ್ಯವನ್ನೇ ಹೇಳಿದರೂ ಅದು ಧರ್ಮವೆನಿಸಲಿಲ್ಲ. ಅಧರ್ಮವಾಗಿ ಪರಿಣಮಿಸಿತು. ಅವನ ಮಾತು ಸತ್ಯವಚನವಾಗಲಿಲ್ಲ. ದುರುಕ್ತಿಯಾಯಿತು. ಅಧರ್ಮಯುಕ್ತವಾದ ಆ ದುರುಕ್ತಿಯಿಂದಾಗಿ ಧರ್ಮಗಳ ಸೂಕ್ಷ್ಮರಹಸ್ಯವನ್ನು ತಿಳಿಯದಿದ್ದ ಕೌಶಿಕನು ಅವಸಾನಾನಂತರದಲ್ಲಿ ಅತ್ಯಂತ ಕಷ್ಟಕರವಾದ ನರಕದಲ್ಲಿ ಬೀಳಬೇಕಾಯಿತು.

**ಯಥಾ ಚಾಲ್ಪಶ್ರುತೋ ಮೂಢೋ ಧರ್ಮಾಣಾಮವಿಭಾಗವಿತ್ ।**
**ವೃದ್ಧಾನಪೃಷ್ಟ್ವಾ ಸಂದೇಹಂ ಮಹಚ್ಛ್ವಭ್ರಮಿವಾರ್ಹತಿ ॥**

ಹೆಚ್ಚು ಶಾಸ್ತ್ರಜ್ಞಾನವಿಲ್ಲದವನು, ವಿವೇಕಶೂನ್ಯನಾದವನು, ಧರ್ಮಗಳ ವಿಭಾಗವನ್ನು (ಯಾವ ಕಾಲದಲ್ಲಿ ಹೇಗೆ ಧರ್ಮಾಚರಣೆಯನ್ನು ಮಾಡಬೇಕೆಂಬುದನ್ನು) ತಿಳಿಯದೇ ಇರುವವನು–ಧರ್ಮಾಧರ್ಮಗಳ ವಿಷಯ

ದಲ್ಲಿ ಸಂದೇಹವುಂಟಾದಾಗ ವೃದ್ಧರ ಸೇವೆಯನ್ನು ಮಾಡಿ ಅವರಿಂದ ಧರ್ಮ ರಹಸ್ಯವನ್ನು ತಿಳಿದುಕೊಳ್ಳದಿದ್ದರೆ ಮಹಾನರಕಸದೃಶವಾದ ಕಷ್ಟಗಳಿಗೆ ಪಾತ್ರನಾಗುತ್ತಾನೆ. ಧರ್ಮಾಧರ್ಮಗಳ ನಿರ್ಣಯಕ್ಕೆ ಕೆಲವು ಲಕ್ಷಣಗಳನ್ನು ಸಂಕ್ಷೇಪವಾಗಿ ನಿನಗೆ ತಿಳಿಸುತ್ತೇನೆ. ಅವು ಈ ರೀತಿಯಾಗಿವೆ: ಕೆಲವರು ಬಹುದುಷ್ಕರವಾದ ಈ ಜ್ಞಾನವನ್ನು (ಧರ್ಮರಹಸ್ಯವನ್ನು) ತರ್ಕದಿಂದ ಪಡೆಯಲು ಯತ್ನಿಸುತ್ತಾರೆ. ಅನೇಕಜನರು ವೇದೋಕ್ತವಾದುದೇ ಧರ್ಮ; ವೇದಗಳಲ್ಲಿಯೇ ಧರ್ಮವು ನಿರೂಪಿತವಾಗಿದೆ–ಎಂಬ ಅಭಿಪ್ರಾಯವನ್ನು ಹೊಂದಿರುತ್ತಾರೆ. ತರ್ಕದಿಂದ ನಿರ್ಣಯಿಸಬಹುದಾದ ಧರ್ಮಕ್ಕಾಗಲೀ, ವೇದೋಕ್ತವಾದ ಧರ್ಮಕ್ಕಾಗಲೀ–ನನ್ನದು ಯಾವ ಆಕ್ಷೇಪವೂ ಇಲ್ಲ. ಕೇವಲ ವೇದಗಳಿಂದಲೇ ಎಲ್ಲ ರೀತಿಯ ಧರ್ಮಗಳೂ ವಿಧೇಯ ವಾಗುವುದಿಲ್ಲ. (ವೇದೋಪಬ್ರಹ್ಮಗಳಾದ ಸ್ಮೃತಿ-ಪುರಾಣೇತಿಹಾಸಗಳನ್ನೂ ಆಶ್ರಯಿಸಬೇಕಾಗುತ್ತದೆ. 'ಸತ್ಯಂ ವದ' ಎಂದು ವೇದವು ನಿರ್ದೇಶಿಸುತ್ತದೆ. ಈ ಒಂದು ನಿರ್ದೇಶವನ್ನೇ ಗೌರವಿಸಿ ಕಾರ್ಯಮಾಡಿದರೆ ಕೌಶಿಕನು ಮಾಡಿದುದು ಸರಿ ಎಂದೇ ಹೇಳಬೇಕಾಗುತ್ತದೆ. ಆದರೆ ಅವನು ಫಲಿತಾಂಶದ ವಿಷಯವಾಗಿ ಯೋಚಿಸಬೇಕಾಗಿದ್ದಿತು. ವೇದರಹಸ್ಯವನ್ನೇ ಬಿಡಿಸಿ ಹೇಳುವ ಸ್ಮೃತಿ-ಪುರಾಣೇತಿಹಾಸಗಳನ್ನು ಆಶ್ರಯಿಸಬೇಕಾಗಿದ್ದಿತು.) ಆದುದರಿಂದ ಧರ್ಮಜ್ಞರಾದ ಮಹರ್ಷಿಗಳು ಸಮಸ್ತಪ್ರಾಣಿಗಳ ಅಭ್ಯುದಯ ಮತ್ತು ನಿಃಶ್ರೇಯಸಗಳಿಗಾಗಿ ವೇದಮೂಲವಾದ ಈ ಉತ್ತಮಧರ್ಮವನ್ನು ಪ್ರತಿಪಾದನೆಮಾಡಿ ಹೇಳಿದ್ದಾರೆ.

**ಯತ್ಸ್ಯಾದಹಿಂಸಾಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ।**
**ಅಹಿಂಸಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಮ್ ॥೫೭॥**

'ಹಿಂಸೆಯ ಸಂಬಂಧವಿಲ್ಲದ ಯಾವ ಕಾರ್ಯವಿರುವುದೋ–ಅದೇ ಧರ್ಮಕಾರ್ಯ' ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಅಹಿಂಸೆಯೇ ಧರ್ಮ. ಪ್ರಾಣಿಗಳಿಗೆ ಯಾವ ವಿಧವಾದ ಹಿಂಸೆಯೂ ಆಗದಿರಲೆಂದೇ ಮಹರ್ಷಿಗಳು ಧರ್ಮದ ನಿರ್ವಚನವನ್ನು ಮಾಡಿದ್ದಾರೆ.

**ಧಾರಣಾದ್ಧರ್ಮಮಿತ್ಯಾಹುರ್ಧರ್ಮೋ ಧಾರಯತೇ ಪ್ರಜಾಃ ।**
**ಯತ್ಸ್ಯಾದ್ಧಾರಣಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ॥೫೮॥**

ಧರಿಸಿರುವುದರಿಂದಲೇ ಅದಕ್ಕೆ ಧರ್ಮವೆಂದು ಹೆಸರು. ಧರ್ಮವು ಪ್ರಜೆಗಳನ್ನೂ–ಪ್ರಾಣಿಗಳನ್ನೂ ಧರಿಸುತ್ತದೆ. ಯಾವುದು ಧಾರಣಯುಕ್ತ ವಾಗಿರುತ್ತದೆಯೋ–ಅದೇ ಧರ್ಮವೆಂದು ನಿಶ್ಚಿತವಾಗಿದೆ. (ಧರಿಸುವುದು ಎಂದರೆ ಯಾವುದನ್ನು ಧರಿಸುತ್ತದೆ? ಎಂದರೆ: ಪ್ರಪಂಚವನ್ನೇ ಧರಿಸಿದೆ. ಸೂರ್ಯ-ಚಂದ್ರ-ನಕ್ಷತ್ರಗಳನ್ನೂ ಧರಿಸಿದೆ. ಸಕಲಚರಾಚರವಸ್ತುಗಳನ್ನೂ ಧರಿಸಿದೆ. ಈ ಧರ್ಮವು ಸರ್ವತ್ರ ಆವರಿಸಿಕೊಂಡಿದೆ. ಈ ಧರ್ಮದ ಅವಲಂಬನೆಯಿಂದಲೇ ಸೂರ್ಯ-ಚಂದ್ರ-ನಕ್ಷತ್ರ-ಗ್ರಹಗಳ ಗತಿಯು ಯಥಾವತ್ತಾಗಿ ನಡೆಯಲು ಸಾಧ್ಯವಾಗಿದೆ. ಅದೇ ಧರ್ಮವೇ ಪ್ರಜೆಗಳನ್ನೂ ಧಾರಣೆಮಾಡಿಕೊಂಡಿದೆ. ಧಾರಣಯುಕ್ತವಾದುದಕ್ಕೆ ಅರ್ಥಾತ್ ಧಾರಣೆಮಾಡಿಕೊಂಡಿರುವುದಕ್ಕೆ ಧರ್ಮ ಎಂದು ಹೆಸರು. ಈ ಕಾರಣದಿಂದಲೇ ಧರ್ಮ–ಎಂಬ ಪದಕ್ಕೆ ಪರಮಾತ್ಮಾ ಎಂಬ ಅರ್ಥವೂ ಇದೆ.)

**ಯೇಽನ್ಯಾಯೇನ ಜಿಹೀರ್ಷನ್ತೋ ಧರ್ಮಮಿಚ್ಛನ್ತಿ ಕರ್ಹಿಚಿತ್ ।**
**ಅಕೂಜನೇನ ಮೋಕ್ಷಂ ವಾ ನಾನುಕೂಜೇತ್ಕಥಂಚನ ॥೫೯॥**

(ಯೇ–ನ್ಯಾಯೇನ; ಯೇ–ಅನ್ಯಾಯೇನ ಎಂಬ ಎರಡು ಪಾಠಗಳೂ ಇವೆ.) (೧) ಕೆಲವರು ಅನ್ಯಾಯಮಾರ್ಗದಿಂದ ಇತರರ ಧನ-ಕನಕ-ವಸ್ತು-ವಾಹನಗಳನ್ನು ಅಪಹರಿಸುತ್ತಲೇ ಇರುತ್ತಾರೆ. ಆದರೂ ಸಹ ಅವರು ಯಾವುದಾದರೂ ರೂಪದಲ್ಲಿ (ಮಠ-ಛತ್ರ-ದೇವಸ್ಥಾನಗಳನ್ನು ಕಟ್ಟಿಸುವುದು, ಯಜ್ಞ-ಯಾಗಾದಿಗಳನ್ನು ಮಾಡುವುದು–ಇವೇ ಮುಂತಾದ ಧರ್ಮಕಾರ್ಯಗಳನ್ನು ಮಾಡುವುದರ ಮೂಲಕವಾಗಿ) ತಾವು ಧಾರ್ಮಿಕ ರೆಂದು ತೋರಿಸಿಕೊಳ್ಳಲು ಇಚ್ಛೆಪಡುತ್ತಾರೆ. ಇಂತಹವರೊಡನೆ ಮಾತ ನಾಡದೇ ಅವರಿಂದ ಬಿಡುಗಡೆಯನ್ನು ಹೊಂದಬೇಕು. ಯಾವುದೇ ಕಾರಣ ದಿಂದಲೂ ಇಂತಹವರೊಡನೆ ಮಾತನಾಡಲೇಬಾರದು. (೨) ನ್ಯಾಯವಾಗಿ ತೋರುತ್ತಿರುತ್ತದೆ: ಆದರೆ ಅದು ಅನ್ಯಾಯದ ಅಥವಾ ಅಧರ್ಮದ ಪರಮಾವಧಿಯಾಗಿರುತ್ತದೆ. **ಸನ್ತೋಷಂ ಜನಯೇತ್ಪ್ರಾಜ್ಞಃ ತದೇವೇ-ಶ್ವರಪೂಜನಮ್ ।** ಎಂಬ ವಾಕ್ಯವಿದೆ. ಪ್ರಾಜ್ಞನಾದವನು ಎಲ್ಲರಿಗೂ ಸಂತೋಷವಾಗುವಂತೆ ವರ್ತಿಸಬೇಕು. ಅದೇ ಈಶ್ವರನಿಗೆ ಮಾಡುವ

ಪೂಜೆಯಾಗುತ್ತದೆ. ಹೀಗೆ ಮಾಡುವುದರಿಂದ ಈಶ್ವರನೂ ಪ್ರೀತನಾಗುತ್ತಾನೆ–ಎಂಬುದು ನಿಜ. ಪರದಾರಗಮನಮಾಡುವವನೂ ಈ ಶ್ಲೋಕವನ್ನೇ ಆಧಾರವಾಗಿಟ್ಟುಕೊಂಡು ತಾನು ಧಾರ್ಮಿಕನೆಂದು ಹೇಳಿಕೊಳ್ಳಲು ಇಚ್ಛಿಸುತ್ತಾನೆ. ಹೀಗೆ ಹೇಳಿಕೊಂಡು ಧರ್ಮದ ಅಪಹಾರ ಮಾಡಲು ಯತ್ನಿಸುತ್ತಾನೆ. ಇಂತಹವರೊಡನೆ ಸೇರಬಾರದು. ಯಾವುದೇ ಕಾರಣದಿಂದಲೂ ಮಾತನ್ನೂ ಆಡಬಾರದು. ಮೌನಮುದ್ರೆಯನ್ನು ಧರಿಸಿ ಮನಸ್ಸನ್ನು ಅಂತರಾತ್ಮನಲ್ಲಿ ಲೀನಗೊಳಿಸುವವನಿಗೆ ಮೋಕ್ಷದ ಪ್ರಾಪ್ತಿಯಾಗುವುದೇನೋ ನಿಜ. ಇಲ್ಲಿ ಮೌನವೆಂಬುದು ಉಪಲಕ್ಷಣ. ಮನಸ್ಸನ್ನು ಪರಮಾತ್ಮನಲ್ಲಿ ಲೀನಗೊಳಿಸುವುದೆಂಬುದು ಅಗೋಚರವಾದ ವಿಷಯ. ಆದುದರಿಂದ ಕೇವಲ ಮೌನಮುದ್ರೆಯಿಂದಲೇ ಮೋಕ್ಷವು ಲಭಿಸುವುದಾದರೆ ಹೇಗಾದರೂ ಮಾಡಿ ಅನೇಕರು ಮಾತನಾಡದೆಯೇ ಇದ್ದುಬಿಡುತ್ತಾರೆ. ಅರ್ಥಾತ್ ಕೇವಲ ಮೌನಮುದ್ರೆಯಿಂದ ಮೋಕ್ಷಪ್ರಾಪ್ತಿಯು ಹೇಗೆ ಲಭಿಸುವುದಿಲ್ಲವೋ–ಅದರಂತೆಯೇ ಸ್ವಾರ್ಥಕ್ಕೆ ಮಾಡುವ ಧರ್ಮದ ಅನುಷ್ಠಾನದಿಂದಲೂ ಯಾವ ಪ್ರಯೋಜನವೂ ಇಲ್ಲ; ಅದು ಧರ್ಮವೆನಿಸಿಕೊಳ್ಳುವುದೂ ಇಲ್ಲ.

(ವ್ಯಾಖ್ಯಾನಕಾರರ ವಿವರಣೆಯಂತೆ ಈ ಶ್ಲೋಕಕ್ಕೆ ಇಷ್ಟು ವಿವರವಾದ ಅರ್ಥವನ್ನು ಹೇಳಬಹುದಾದರೂ ಈ ಶ್ಲೋಕವು ಕೌಶಿಕನ ಕಥೆಗೆ ಸಂಬಂಧಪಟ್ಟಂತೆ ಇರುವುದರಿಂದಲೂ ಮುಂದಿನ ಶ್ಲೋಕವೂ ನೇರವಾಗಿ ಆ ಕಥೆಗೇ ಸಂಬಂಧಿಸಿರುವುದರಿಂದಲೂ ಈ ಶ್ಲೋಕಕ್ಕೆ ಹೀಗೆ ಅರ್ಥಮಾಡಬಹುದಾಗಿದೆ:

"ನ್ಯಾಯಮಾರ್ಗದಲ್ಲಿ ಧರ್ಮವನ್ನು ಪಡೆದುಕೊಳ್ಳಲು ಇಚ್ಛಿಸುವವರು ಮೌನವ್ರತದಿಂದಲೇ ಇದ್ದು ಮೋಕ್ಷವನ್ನು ಪಡೆದುಕೊಳ್ಳಲು ಇಚ್ಛಿಸುತ್ತಾರೆ. ಅಂತಹವರು ಯಾವುದೇ ಕಾರಣದಿಂದಲೂ ಮಾತನಾಡಲೇ ಬಾರದು. (ಪ್ರಕೃತಸಂದರ್ಭದಲ್ಲಿ ದಸ್ಯುಗಳು ಕೇಳಿದ ಪ್ರಶ್ನೆಗೆ ಕೌಶಿಕನು ತಪಸ್ಸಿಗೆ ಅನುಗುಣವಾಗಿ ಮಾತನಾಡದೇ ಇದ್ದಿದ್ದರೆ ಪ್ರಯಾಣಿಕರು ದಸ್ಯುಗಳಿಂದಲೂ ಬಿಡಿಸಿಕೊಳ್ಳಬಹುದಾಗಿದ್ದಿತು. ತಾನು ಸುಳ್ಳನ್ನೂ

ಹೇಳಿದಂತಾಗುತ್ತಿರಲಿಲ್ಲ. ಸಾಮಾನ್ಯವಾಗಿ ದಸ್ಯುಗಳಿಂದಲೂ ಅನೃತಭಾಷಣದಿಂದಲೂ ಮುಕ್ತಿಯನ್ನು ಅಪೇಕ್ಷಿಸುವ ವಿವೇಕಿಗಳು ಈ ಮೌನದ ಮಾರ್ಗವನ್ನೇ ಅನುಸರಿಸುತ್ತಾರೆ. ಇದೇ ಸಾಧು.)

ಅವಶ್ಯಂ ಕೂಜಿತವ್ಯೇ ವಾ ಶಙ್ಕೇರನ್ನಪ್ಯಕೂಜತಃ ।
ಶ್ರೇಯಸ್ತತ್ರಾನೃತಂ ವಕ್ತುಂ ತತ್ಸತ್ಯಮವಿಚಾರಿತಮ್ ॥೬೦॥

ಮಾತನಾಡುವುದು ಅನಿವಾರ್ಯವಾದರೆ–ಮಾತನಾಡದೆಯೇ ಇದ್ದರೆ (ದಸ್ಯುಗಳು) ಸಂದೇಹಿಸುವರೆಂಬ ಅಭಿಪ್ರಾಯವಿರುವುದಾದರೆ–ಆ ಸಮಯದಲ್ಲಿ ಸುಳ್ಳೇ ಸತ್ಯವಾಗುತ್ತದೆ. ಈ ವಿಷಯದಲ್ಲಿ ವಿಚಾರ ಮಾಡಬೇಕಾದುದೇ ಇಲ್ಲ. ಸುಳ್ಳು ಹೇಳುವುದೇ ಶ್ರೇಯಸ್ಕರ.

ಯಃ ಕಾರ್ಯೇಭ್ಯೋ ವ್ರತಂ ಕೃತ್ವಾ ತಸ್ಯ ನಾನೋಪಪಾದಯೇತ್ ।
ನ ತತ್ಫಲಮವಾಪ್ನೋತಿ ಏವಮಾಹುರ್ಮನೀಷಿಣಃ ॥೬೧॥

ಯಾವನು ಯಾವುದೋ ಕಾರ್ಯಗಳ ವಿಷಯವಾಗಿ ಮನಸ್ಸಿನಲ್ಲಿಯೇ ಪ್ರತಿಜ್ಞೆಮಾಡಿ ಅನಂತರ ಆ ತನ್ನ ಪ್ರತಿಜ್ಞೆಯನ್ನು ನಾನಾರೀತಿಗಳಲ್ಲಿ ಯುಕ್ತಾಯುಕ್ತವಿವೇಚನೆಯಿಲ್ಲದೇ (ತನ್ನ ಪ್ರತಿಜ್ಞಾಪೂರಣದ ಆಗು-ಹೋಗುಗಳನ್ನೂ ಗಮನಿಸದೇ) ಉಪಪಾದನೆಮಾಡಲು ಹೋಗುತ್ತಾನೆಯೋ–ಅಂತಹವನು ಪ್ರತಿಜ್ಞಾಪೂರಣದ ಫಲವನ್ನು ಹೊಂದುವುದಿಲ್ಲವೆಂದು ವಿದ್ವಾಂಸರು ಹೇಳುತ್ತಾರೆ.

ಪ್ರಾಣಾತ್ಯಯೇ ವಿವಾಹೇ ವಾ ಸರ್ವಜ್ಞಾತಿವಧಾತ್ಯಯೇ ।
ನರ್ಮಣ್ಯಭಿಪ್ರವೃತ್ತೇ ವಾ ನ ಚ ಪ್ರೋಕ್ತಂ ಮೃಷಾ ಭವೇತ್ ।
ಅಧರ್ಮಂ ನಾತ್ರ ಪಶ್ಯನ್ತಿ ಧರ್ಮತತ್ತ್ವಾರ್ಥದರ್ಶಿನಃ ॥೬೨॥

ಪ್ರಾಣಹೋಗುವ ಸಮಯದಲ್ಲಿ, ವಿವಾಹಸಮಯದಲ್ಲಿ, ಕುಟುಂಬ ವರ್ಗದವರೆಲ್ಲರೂ ವಿನಾಶವಾಗುವ ಸಂದರ್ಭದಲ್ಲಿ, ಪರಿಹಾಸ-ವಿನೋದಗಳ ಸಮಯದಲ್ಲಿ–ಹೇಳುವ ಮಾತು ಸತ್ಯಕ್ಕೆ ದೂರವಾಗಿದ್ದರೂ 'ಸುಳ್ಳು' ಎಂಬ ಅಭಿಧಾನವನ್ನು ಹೊಂದುವುದಿಲ್ಲ. ಧರ್ಮದ ತತ್ತ್ವಾರ್ಥಗಳನ್ನು

ತಿಳಿದುಕೊಂಡವರು ಇಂತಹ ಸಮಯಗಳಲ್ಲಿ ಹೇಳುವ ಸುಳ್ಳು ಅಧರ್ಮವೆಂದಾಗಲೀ–ಇದರಿಂದ ಪಾಪಸಂಘಟನೆಯಾಗುವುದೆಂದಾಗಲೀ ಭಾವಿಸುವುದಿಲ್ಲ.

**ಯಃ ಸ್ತೇನೈಃ ಸಹ ಸಮ್ಬನ್ಧಾನ್ಮುಚ್ಯತೇ ಶಪಥೈರಪಿ ।**
**ಶ್ರೇಯಸ್ತತ್ರಾನೃತಂ ವಕ್ತುಂ ತತ್ಸತ್ಯಮವಿಚಾರಿತಮ್ ॥೬೩॥**

ಒಬ್ಬನು ನೂರು ಸುಳ್ಳುಶಪಥಗಳನ್ನು ಮಾಡಿಯಾದರೂ ಕಳ್ಳರ ಬಂಧನದಿಂದ ಬಿಡಿಸಿಕೊಳ್ಳಬೇಕು. ಆ ಸಮಯದಲ್ಲಿ ಸುಳ್ಳುಹೇಳುವುದೇ ಶ್ರೇಯಸ್ಸಿಗೆ ಕಾರಣವಾಗುತ್ತದೆ. ಸ್ವಲ್ಪವೂ ವಿಚಾರಮಾಡಲು ಹೋಗದೇ ಅಂತಹ ಆಪತ್ತಿನ ಸಂದರ್ಭಗಳಲ್ಲಿ ತಾನು ಹೇಳುತ್ತಿರುವುದು ಸತ್ಯವೆಂದೇ ಸಾಧಿಸಿ ಹೇಳಬೇಕು.

**ನ ಚ ತೇಭ್ಯೋ ಧನಂ ದೇಯಂ ಶಕ್ಯೇ ಸತಿ ಕಥಂಚನ ।**
**ಪಾಪೇಭ್ಯೋ ಹಿ ಧನಂ ದತ್ತಂ ದಾತಾರಮಪಿ ಪೀಡಯೇತ್ ॥೬೪॥**

ನೂರಾರು ಸುಳ್ಳುಶಪಥಗಳನ್ನಾದರೂ ಮಾಡಿ ಕಳ್ಳರನ್ನು ನಂಬಿಸಿ ಮುಕ್ತಿ ಹೊಂದಬೇಕೇ ಹೊರತು ಅವರಿಗೆ ಯಾವುದೇ ಕಾರಣದಿಂದಲೂ ಹಣಕೊಡುವ ಸಾಧ್ಯತೆಯಿದ್ದರೂ ಹಣವನ್ನು ಕೊಡಬಾರದು. ಏಕೆಂದರೆ: ಪಾಪಿಗಳಾದವರಿಗೆ ಕೊಡುವ ಹಣವು ದಾನಿಯನ್ನೂ ಮತ್ತು ಇತರರನ್ನೂ ಪೀಡಿಸುತ್ತದೆ.

**ತಸ್ಮಾದ್ಧರ್ಮಾರ್ಥಮನೃತಮುಕ್ತ್ವಾ ನಾನೃತಭಾಗ್ಭವೇತ್ ।**
**ಏಷ ತೇ ಲಕ್ಷಣೋದ್ದೇಶೋ ಮಯೋದ್ದಿಷ್ಟೋ ಯಥಾವಿಧಿ ॥೬೫॥**

**ಯಥಾಧರ್ಮಂ ಯಥಾಬುದ್ಧಿ ಮಯಾದ್ಯ ವೈ ಹಿತಾರ್ಥಿನಾ ।**
**ಏತಚ್ಛ್ರುತ್ವಾ ಬ್ರೂಹಿ ಪಾರ್ಥ ಯದಿ ವಧ್ಯೋ ಯುಧಿಷ್ಠಿರಃ ॥೬೬॥**

ಆದುದರಿಂದ ಧರ್ಮದ ಸಲುವಾಗಿ ಸುಳ್ಳು ಹೇಳಿದರೂ ಅದು ಅನೃತ ವಚನವೆಂದು ಪರಿಗಣಿಸಲ್ಪಡುವುದಿಲ್ಲ. ಅರ್ಜುನ! ನಿನ್ನ ಹಿತವನ್ನೇ ಬಯಸುವ ನಾನು ವಿಧಿ-ನಿಯಮಗಳು ಹೇಗಿವೆಯೋ ಹಾಗೆ, ಧರ್ಮದ ಸ್ವರೂಪವು ಹೇಗಿರುವುದೋ ಹಾಗೆ–ಅವುಗಳ ಲಕ್ಷಣ ಮತ್ತು ಉದ್ದೇಶಗಳೊಡನೆ

ಯಥಾಮತಿ ಸಂಕ್ಷೇಪವಾಗಿ ತಿಳಿಸಿದ್ದೇನೆ. ಇದನ್ನು ಕೇಳಿರುವ ನೀನು ಈಗ ಹೇಳು–ಯುಧಿಷ್ಠಿರನು ನಿನ್ನಿಂದ ವಧಿಸಲ್ಪಡತಕ್ಕವನೇ?"

ಅರ್ಜುನನು ಹೇಳುತ್ತಾನೆ:

**ಯಥಾ ಬ್ರೂಯಾನ್ಮಹಾಪ್ರಾಜ್ಞೋ ಯಥಾ ಬ್ರೂಯಾನ್ಮಹಾಮತಿಃ ।**
**ಹಿತಂ ಚೈವ ಯಥಾಸ್ಮಾಕಂ ತಥೈತದ್ವಚನಂ ತವ ॥೬೭॥**

"ಪ್ರಭುವೇ! ಮಹಾಪ್ರಾಜ್ಞನಾದವನು ಹೇಳುವಂತೆ, ಮಹಾಬುದ್ಧಿವಂತನಾದವನು ಹೇಳುವಂತೆ, ನಮ್ಮೆಲ್ಲರಿಗೂ ಹಿತವಾಗುವಂತೆ–ನಿನ್ನಿಂದ ಈ ಮಾತುಗಳು ಹೇಳಲ್ಪಟ್ಟಿವೆ.

**ಭವಾನ್ಮಾತೃಸಮೋಽಸ್ಮಾಕಂ ತಥಾ ಪಿತೃಸಮೋಽಪಿ ಚ ।**
**ಗತಿಶ್ಚ ಪರಮಾ ಕೃಷ್ಣ ತ್ವಮೇವ ಚ ಪರಾಯಣಮ್ ॥೬೮॥**

ಕೃಷ್ಣ! ನೀನು ನಮ್ಮ ಮಾತೃಸಮಾನನೂ ಆಗಿರುವೆ; ಪಿತೃಸಮಾನನೂ ಆಗಿರುವೆ. ನೀನೇ ನಮಗೆ ಗತಿ; ನೀನೇ ನಮಗೆ ಪರಮಾಶ್ರಯನು.

**ನ ಹಿ ತೇ ತ್ರಿಷು ಲೋಕೇಷು ವಿದ್ಯತೇಽವಿದಿತಂ ಕ್ವಚಿತ್ ।**
**ತಸ್ಮಾದ್ಭವಾನ್ಪರಂ ಧರ್ಮಂ ವೇದ ಸರ್ವಂ ಯಥಾತಥಮ್ ॥೬೯॥**

ನಿನಗೆ ಈ ಮೂರು ಲೋಕಗಳಲ್ಲಿಯೂ ತಿಳಿಯದೇ ಇರತಕ್ಕ ವಿಷಯವೇ ಇಲ್ಲ. ಆದುದರಿಂದ ನೀನು ಶ್ರೇಷ್ಠವಾದ ಧರ್ಮಸ್ವರೂಪವನ್ನು ಸಂಪೂರ್ಣವಾಗಿಯೂ–ಯಥಾವತ್ತಾಗಿಯೂ ತಿಳಿದವನಾಗಿರುವೆ.

**ಅವಧ್ಯಂ ಪಾಣ್ಡವಂ ಮನ್ಯೇ ಧರ್ಮರಾಜಂ ಯುಧಿಷ್ಠಿರಮ್ ॥೭೦॥**

**ಅಸ್ಮಿಂಸ್ತು ಮಮ ಸಂಕಲ್ಪೇ ಬ್ರೂಹಿ ಕಿಂಚಿದನುಗ್ರಹಮ್ ।**
**ಇದಂ ವಾ ಪರಮತ್ರೈವ ಶೃಣು ಹೃತ್ಸ್ಥಂ ವಿವಕ್ಷಿತಮ್ ॥೭೧॥**

ಧರ್ಮಮೂರ್ತಿಯಾದ ಯುಧಿಷ್ಠಿರನು ವಧಾರ್ಹನಲ್ಲವೆಂಬುದನ್ನು ನಾನು ತಿಳಿದುಕೊಂಡಿರುತ್ತೇನೆ. ಆದರೆ ಈ ನನ್ನ ಮಾನಸಿಕಪ್ರತಿಜ್ಞೆಯ ವಿಷಯದಲ್ಲಿ ಯತ್ಕಿಂಚಿತ್ ಸಮಾಧಾನವನ್ನು ಹೇಳಿ ಅನುಗ್ರಹಿಸು. (ಅಣ್ಣನ ವಧೆಮಾಡದೆಯೇ ನಾನು ಮಾಡಿರುವ ನನ್ನ ಮಾನಸಪ್ರತಿಜ್ಞೆಯು

ಪೂರ್ಣವಾಗುವ ಉಪಾಯವನ್ನು ಸೂಚಿಸು.) ನಿನ್ನೊಡನೆ ಹೇಳಲು ಯೋಗ್ಯವಾಗಿರುವ ನನ್ನ ಹೃದಯಸ್ಥವಾಗಿರುವ ಈ ಮಾತನ್ನು ಪುನಃ ಅವಧಾರಣೆ ಮಾಡು.

ಜಾನಾಸಿ ದಾಶಾರ್ಹ ಮಮ ವ್ರತಂ ತ್ವಂ
ಯೋ ಮಾಂ ಬ್ರೂಯಾತ್ಕಶ್ಚನ ಮಾನುಷೇಷು ।
ಅನ್ಯಸ್ಮೈ ತ್ವಂ ಗಾಣ್ಡಿವಂ ದೇಹಿ ಪಾರ್ಥ
ತ್ವತ್ತೋಽಸ್ತ್ರೈರ್ವಾ ವೀರ್ಯತೋ ವಾ ವಿಶಿಷ್ಟಃ ॥೭೨॥
ಹನ್ಯಾಮಹಂ ಕೇಶವಂ ತಂ ಪ್ರಸಹ್ಯ
ಭೀಮೋ ಹನ್ಯಾತ್ತೂಬರಕೇತಿ ಚೋಕ್ತಃ ।
ತನ್ಮೇ ರಾಜಾ ಪ್ರೋಕ್ತವಾಂಸ್ತೇ ಸಮಕ್ಷಂ
ಧನುರ್ದೇಹೀತ್ಯಸಕೃದ್ವೃಷ್ಣಿವೀರ ॥೭೩॥

ದಾಶಾರ್ಹಕುಲನಂದನನೇ! ನನ್ನ ಉಪಾಂಶುವ್ರತವನ್ನು ನೀನು ತಿಳಿದಿರುವೆ. ಮನುಷ್ಯರಲ್ಲಿ ಯಾವನೇ ಆಗಲೀ–'ಪಾರ್ಥ! ನಿನಗಿಂತಲೂ ಅಸ್ತ್ರವಿದ್ಯೆಯಲ್ಲಿ ಅಥವಾ ವೀರ್ಯದಲ್ಲಿ ವಿಶಿಷ್ಟನಾಗಿರುವವನಿಗೆ ನಿನ್ನ ಈ ಗಾಂಡೀವಧನುಸ್ಸನ್ನು ಕೊಟ್ಟುಬಿಡು'–ಎಂದು ಹೇಳಿದಲ್ಲಿ ಅಂತಹವನನ್ನು ನಾನು ಬಲಪೂರ್ವಕವಾಗಿ ಸಂಹಾರಮಾಡುತ್ತೇನೆ. ಇದು ನನ್ನ ಉಪಾಂಶುವ್ರತವಾಗಿದೆ. ನನ್ನಂತೆಯೇ ಭೀಮನೂ ಸಹ 'ತೂಬರಕ' ಎಂದು ಯಾರಾದರೂ ಹೀಯಾಳಿಸಿದಲ್ಲಿ ಅಂತಹವರನ್ನು ಒಡನೆಯೇ ಕೊಲ್ಲುವುದಾಗಿ ಪ್ರತಿಜ್ಞೆಮಾಡಿರುತ್ತಾನೆ. 'ಅಸ್ತ್ರವಿದ್ಯೆಯಲ್ಲಿ ನಿನಗಿಂತಲೂ ಅಧಿಕನಾಗಿರ ತಕ್ಕವನಿಗೆ ಗಾಂಡೀವಧನುಸ್ಸನ್ನು ಕೊಟ್ಟುಬಿಡು'–ಎಂದು ನಿನ್ನೆದುರಿನಲ್ಲಿಯೇ ರಾಜನು ಹಲವಾರು ಬಾರಿ ಹೇಳಿದನು.

ತಂ ಹನ್ಯಾಂ ಚೇತ್ಕೇಶವ ಜೀವಲೋಕೇ
ಸ್ಥಾತಾ ನಾಹಂ ಕಾಲಮಪ್ಯಲ್ಪಮಾತ್ರಮ್ ।
ಧ್ಯಾತ್ವಾ ನೂನಂ ಹ್ಯೇನಸಾ ಚಾಪಿ ಯುಕ್ತೋ
ವಧಂ ರಾಜ್ಞೋ ಭ್ರಷ್ಟವೀರ್ಯೋ ವಿಚೇತಾಃ ॥೭೪॥

ಕೃಷ್ಣ! ನಾನೇನಾದರೂ ಯುಧಿಷ್ಠಿರನನ್ನು ಕೊಂದಿದ್ದೇ ಆದರೆ–ಈ ಜೀವಲೋಕದಲ್ಲಿ ಒಂದು ಕ್ಷಣವಾದರೂ ಜೀವಿಸಿರುವುದಿಲ್ಲ. ರಾಜನ ವಧೆ

ಯನ್ನು ಮನಸ್ಸಿನಲ್ಲಿ ಯೋಚಿಸಿದ ಮಾತ್ರದಿಂದಲೇ ನಾನು ನಿಶ್ಚಯವಾಗಿಯೂ ಪಾಪದಿಂದ ಯುಕ್ತನಾದವನೂ, ವೀರ್ಯಹೀನನೂ, ಬುದ್ಧಿಹೀನನೂ ಆಗಿಬಿಟ್ಟಿದ್ದೇನೆ.

**ಯಥಾ ಪ್ರತಿಜ್ಞಾ ಮಮ ಲೋಕಬುದ್ಧೌ**
**ಭವೇತ್ಸತ್ಯಾ ಧರ್ಮಭೃತಾಂ ವರಿಷ್ಠ ।**
**ಯಥಾ ಜೀವೇತ್ಪಾಣ್ಡವೋಽಹಂ ಚ ಕೃಷ್ಣ**
**ತಥಾ ಬುದ್ಧಿಂ ದಾತುಮಪ್ಯರ್ಹಸಿ ತ್ವಮ್ ॥೭೫॥**

ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ! ಲೌಕಿಕವ್ಯವಹಾರದಲ್ಲಿ ನನ್ನ ಪ್ರತಿಜ್ಞೆಯು ಸತ್ಯಪ್ರತಿಜ್ಞೆಯಾದಂತಾಗಬೇಕು. ಪ್ರತಿಜ್ಞೆಯು ಭಂಗವಾದಂತಾಗ ಬಾರದು. ಲೋಕವು ನನ್ನನ್ನು–ಅರ್ಜುನನು ತಾನೇ ಮಾಡಿದ ಪ್ರತಿಜ್ಞೆಯನ್ನು ಮುರಿದನು'–ಎಂದು ಹೇಳಬಾರದು. ನಾನೂ ಮತ್ತು ಯುಧಿಷ್ಠಿರನೂ ಜೀವಿಸಿರಬೇಕು. ಹೀಗಾಗಲು ನನಗೆ ಯಾವುದಾದರೂ ಸಲಹೆಯನ್ನು ನೀಡು. ಆ ರೀತಿಯಲ್ಲಿ ನನಗೆ ಬುದ್ಧಿವಾದವನ್ನು ಹೇಳು. ಅಂತಹ ಬುದ್ಧಿವಾದವನ್ನು ನೀಡಲು ನೀನೇ ಸಮರ್ಥನಾಗಿರುವೆ."

ಶ್ರೀಕೃಷ್ಣನು ಹೇಳುತ್ತಾನೆ:

**ರಾಜಾ ಶ್ರಾನ್ತೋ ವಿಕ್ಷತೋ ದುಃಖಿತಶ್ಚ**
**ಕರ್ಣೇನ ಸಂಖ್ಯೇ ನಿಶಿತೈರ್ಬಾಣಸಂಘೈಃ ।**
**ಯಶ್ಚಾನಿಶಂ ಸೂತಪುತ್ರೇಣ ವೀರ**
**ಶರೈರ್ಭೃಶಂ ತಾಡಿತೋಽಯುಧ್ಯಮಾನಃ ॥೭೬॥**

"ಅರ್ಜುನ! ಯುಧಿಷ್ಠಿರರಾಜನು ಬಹಳವಾಗಿ ಬಳಲಿದ್ದಾನೆ. ಯುದ್ಧದಲ್ಲಿ ಕರ್ಣನು ನಿಶಿತವಾದ ಬಾಣಗಳ ಸಮೂಹಗಳಿಂದ ರಾಜನನ್ನು ಕ್ಷತ-ವಿಕ್ಷತನನ್ನಾಗಿ ಮಾಡಿರುವನು. ಇದರಿಂದವನು ಬಹಳ ದುಃಖಿತನೂ ಆಗಿರುವನು. ಇಷ್ಟೇ ಅಲ್ಲ; ರಾಜನು ಸೂತಪುತ್ರನೊಡನೆ ಯುದ್ಧಮಾಡದೇ ಇದ್ದಾಗಲೂ ಕರ್ಣನು ಯುಧಿಷ್ಠಿರನ ಮೇಲೆ ಬಿದ್ದು ಬಾಣಗಳಿಂದ

ಇವನನ್ನು ಸತತವಾಗಿ ಪೀಡಿಸಿದ್ದಾನೆ. ಈ ಕಾರಣಗಳಿಂದ ಪರಮ ದುಃಖಿತನಾಗಿರುವ ಯುಧಿಷ್ಠಿರನು ರೋಷಾನ್ವಿತನಾಗಿ ಅನುಚಿತವೆನಿಸುವ ಈ ಮಾತನ್ನು ನಿನ್ನೊಡನೆ ಹೇಳಿರುವನು. ಹೀಗೆ ಹೇಳಲು ಬೇರೊಂದು ಕಾರಣವೂ ಇದೆ.

**ಅಕೋಪಿತೋ ಹ್ಯೇಷ ಯದಿ ಸ್ಮ ಸಂಖ್ಯೇ**
**ಕರ್ಣಂ ನ ಹನ್ಯಾದಿತಿ ಚಾಬ್ರವೀತ್ಸಃ ॥೭೭॥**

'ಅರ್ಜುನನನ್ನು ನಿಷ್ಠುರವಾದ ಮಾತುಗಳಿಂದ ಪ್ರಕೋಪಗೊಳಿಸದಿದ್ದರೆ ಯುದ್ಧದಲ್ಲಿ ಇವನು ಕರ್ಣನನ್ನು ಸಂಹರಿಸದೇ ಇರಬಹುದು'–ಎಂಬ ಅಭಿಪ್ರಾಯದಿಂದಲೂ ರಾಜನು ನಿನ್ನೊಡನೆ ಅತಿನಿಷ್ಠುರವಾದ ಈ ಮಾತುಗಳನ್ನು ಹೇಳಿರುವನು.

ಪಾಂಡವ! ಪ್ರಪಂಚದಲ್ಲಿ ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾರಿಂದಲೂ ಪಾಪಿಷ್ಠನಾದ ಕರ್ಣನನ್ನು ಎದುರಿಸಿ ಯುದ್ಧಮಾಡಲು ಸಾಧ್ಯವಾಗುವುದಿಲ್ಲವೆಂಬ ವಿಷಯವನ್ನು ಯುಧಿಷ್ಠಿರನೂ ತಿಳಿದು ಕೊಂಡಿರುತ್ತಾನೆ. ಈ ಕಾರಣದಿಂದಲೇ ಅತ್ಯಂತರುಷ್ಟನಾಗಿದ್ದ ರಾಜನು ನನ್ನೆದುರಿನಲ್ಲಿಯೇ ನಿನ್ನನ್ನು ಕಠಿನವಾದ ಮಾತುಗಳಿಂದ ಅಪಮಾನಗೊಳಿಸಿದನು.

'ಎಲ್ಲ ಕಾಲಗಳಲ್ಲಿಯೂ ಯುದ್ಧದಲ್ಲಿಯೇ ಆಸಕ್ತನಾಗಿರುವ, ಶತ್ರುಗಳಿಂದ ಸಹಿಸಲು ಅಶಕ್ಯನಾದ ಕರ್ಣನನ್ನು ಅವಲಂಬಿಸಿ ರಣಾಂಗಣದಲ್ಲಿ ಜಯಾಪಜಯಗಳನ್ನು ನಿರ್ಧರಿಸುವ ಜೂಜಾಟವು ಏರ್ಪಟ್ಟಿದೆ. ಅವನೊಬ್ಬನನ್ನು ಜಯಿಸಿಬಿಟ್ಟರೆ ಕುರುಗಳೆಲ್ಲರನ್ನೂ ನಾವು ಜಯಿಸಿದಂತೆಯೇ ಆಗುವುದು'–ಹೀಗೆ ಧರ್ಮರಾಜನ ಬುದ್ಧಿಯು ವಿಚಾರಮಾಡುತ್ತಿದ್ದಿತು. ನೀನು ಕರ್ಣನನ್ನು ಸಂಹರಿಸದೇ ರಣರಂಗದಿಂದ ಬಂದೆಯೆಂಬುದನ್ನು ತಿಳಿದೊಡನೆಯೇ ಕುಪಿತನಾದ ಯುಧಿಷ್ಠಿರನು ನಿನ್ನೊಡನೆ ನಿಷ್ಠುರವಾದ ಮಾತುಗಳನ್ನಾಡಿದನು. ಆದುದರಿಂದ ಧರ್ಮರಾಜನು ಖಂಡಿತವಾಗಿಯೂ ವಧಾರ್ಹನಲ್ಲ. ಆದರೆ ನಿನ್ನ ಪ್ರತಿಜ್ಞೆಯನ್ನೂ ನೀನು ಪಾಲನೆಮಾಡಲೇಬೇಕು. ಯದ್ಯಪಿ ಧರ್ಮರಾಜನು ಜೀವಿಸಿದರೂ ಯಾವಾಗ ಮೃತಪ್ರಾಯನಾಗಿ ಆಗುವನೆಂಬುದನ್ನು ನಿನಗೆ ವಿವರಿಸಿ ಹೇಳುವೆನು. ಇವನು

ಮೃತಪ್ರಾಯನೇ ಆಗುವುದಾದರೆ ನೀನು ಇವನನ್ನು ವಧೆಮಾಡಿದಂತೆಯೇ ಆಗುತ್ತದೆ. ಆಗ ನಿನ್ನ ಪ್ರತಿಜ್ಞೆಯ ಪೂರಣವೂ ಆದಂತಾಗುತ್ತದೆ. ಈ ರಹಸ್ಯವನ್ನೇ ನಿನ್ನೊಡನೆ ಹೇಳುವೆನು; ಕೇಳು.

**ಯದಾ ಮಾನಂ ಲಭತೇ ಮಾನನಾರ್ಹ-**
**ಸ್ತದಾ ಸ ವೈ ಜೀವತಿ ಜೀವಲೋಕೇ ।**
**ಯದಾವಮಾನಂ ಲಭತೇ ಮಹಾನ್ತಂ**
**ತದಾ ಜೀವನ್ಮೃತ ಇತ್ಯುಚ್ಯತೇ ಸಃ ॥೮೧॥**

ಈ ಪ್ರಪಂಚದಲ್ಲಿ ಮಾನನೀಯನಾದ ಮನುಷ್ಯನು ಎಲ್ಲಿಯವರೆಗೆ ತನ್ನನ್ನು ಗೌರವಿಸುವ ಜನರಿಂದ ಗೌರವವನ್ನು ಪಡೆಯುತ್ತಿರುತ್ತಾನೆಯೋ– ಅಲ್ಲಿಯವರೆಗೆ ಅವನು ಜೀವಲೋಕದಲ್ಲಿ ಜೀವಂತನಾಗಿರುತ್ತಾನೆ. ಅದೇ ಮಾನನೀಯನಾದ ಮನುಷ್ಯನು ಯಾವಾಗ ತನ್ನವರಿಂದಲೇ ಮಹಾ ಅವಮಾನವನ್ನು ಹೊಂದುತ್ತಾನೆಯೋ–ಆಗ ಅವನು ಬದುಕಿದ್ದರೂ ಸತ್ತಂತೆಯೇ–ಎಂದು ಹೇಳುತ್ತಾರೆ.

ಈ ನಮ್ಮ ರಾಜನು ನಿನ್ನಿಂದಲೂ, ಭೀಮಸೇನ-ನಕುಲ-ಸಹದೇವರಿಂದಲೂ, ವೃದ್ಧರಿಂದಲೂ, ಶೂರರಾದ ಪುರುಷರಿಂದಲೂ ಎಲ್ಲ ಕಾಲಗಳಲ್ಲಿಯೂ ಸಮ್ಮಾನಿಸಲ್ಪಡುತ್ತಿದ್ದಾನೆ. ಈ ಸಮಯದಲ್ಲಿ ನೀನು ಇವನಿಗೆ ಸ್ವಲ್ಪ ಅಪಮಾನಕರವಾದ ಮಾತುಗಳನ್ನು ಹೇಳು.

**ತ್ವಮಿತ್ಯತ್ರಭವನ್ತಂ ಹಿ ಬ್ರೂಹಿ ಪಾರ್ಥ ಯುಧಿಷ್ಠಿರಮ್ ।**
**ತ್ವಮಿತ್ಯುಕ್ತೋ ಹಿ ನಿಹತೋ ಗುರುರ್ಭವತಿ ಭಾರತ ॥೮೩॥**

ನೀನು ಯಾವಾಗಲೂ ಯುಧಿಷ್ಠಿರನೊಡನೆ ಮಾತನಾಡುವಾಗ 'ಭವಾನ್' ಎಂಬುದಾಗಿ ಹೇಳುತ್ತಿದ್ದೆ. ಈಗ ನೀನು ಭವಚ್ಛಬ್ದಕ್ಕೆ ಬದಲಾಗಿ ಯುಷ್ಮಚ್ಛಬ್ದವನ್ನು ಉಪಯೋಗಿಸು. 'ತ್ವಂ–ನೀನು' ಎಂದು ಹೇಳು. ಗುರುಜನರ ವಿಷಯದಲ್ಲಿ ಯುಷ್ಮಚ್ಛಬ್ದವನ್ನು ಉಪಯೋಗಿಸಿದೊಡನೆಯೇ, ಅವರನ್ನು ಕುರಿತು 'ನೀನು' ಎಂದು ಹೇಳಿದೊಡನೆಯೇ ಸಾಧುಪುರುಷರ ದೃಷ್ಟಿಯಿಂದ ಅವರ ವಧೆಯೇ ಆದಂತಾಗುತ್ತದೆ.

ಕೌಂತೇಯ! ಕುರುಶ್ರೇಷ್ಠ! ಈ ಸಮಯದಲ್ಲಿ ನೀನು ಧರ್ಮರಾಜನ

ವಿಷಯದಲ್ಲಿ ಹೀಗೆ ನಡೆದುಕೊ. ಅಧರ್ಮಯುಕ್ತವಾದ ಪದವನ್ನು ಪ್ರಯೋಗಿಸು. ಯುಷ್ಮಚ್ಛಬ್ದದಿಂದ ರಾಜನನ್ನು ನಿರ್ದೇಶಿಸು.

**ಅಥರ್ವಾಙ್ಗಿರಸೀ ಹ್ಯೇಷಾ ಶ್ರುತೀನಾಮುತ್ತಮಾ ಶ್ರುತಿಃ ।**
**ಅವಿಚಾರ್ಯೈವ ಕಾರ್ಯೈಷಾ ಶ್ರೇಯಸ್ಕಾಮೈರ್ನರೈಃ ಸದಾ ॥೮೫॥**

ಅಥರ್ವ ಮತ್ತು ಅಂಗಿರಸರನ್ನು ಋಷಿಗಳನ್ನಾಗಿ ಹೊಂದಿರುವ ಈ ಶ್ರುತಿಯು ಎಲ್ಲ ಶ್ರುತಿಗಳಿಗಿಂತಲೂ ಉತ್ತಮವಾದುದು. ಶ್ರೇಯಸ್ಕಾಮರಾದ ಮನುಷ್ಯರು ಈ ವಿಷಯವನ್ನು ಚರ್ಚಿಸಹೋಗದೇ ಈ ಶ್ರುತಿಯಲ್ಲಿ ಹೇಳಿರುವಂತೆ ಮಾಡಬೇಕು. ಈ ಶ್ರುತಿಯ ಅಭಿಪ್ರಾಯವು ಹೀಗಿದೆ:

**ಅವಧೇನ ವಧಃ ಪ್ರೋಕ್ತೋ ಯದ್ಗುರುಸ್ತ್ವಮಿತಿ ಪ್ರಭುಃ ।**
**ತದ್ಬ್ರೂಹಿ ತ್ವಂ ಯನ್ಮಯೋಕ್ತಂ ಧರ್ಮರಾಜಸ್ಯ ಧರ್ಮವಿತ್ ॥೮೬॥**

ಗುರುಗಳನ್ನು 'ನೀನು' ಎಂದು ಕರೆದರೆ ಅವರನ್ನು ಪ್ರತ್ಯಕ್ಷವಾಗಿ ವಧೆಮಾಡದಿದ್ದರೂ ವಧೆಮಾಡಿದಂತೆಯೇ ಆಗುತ್ತದೆ. ನೀನು ಧರ್ಮವಿದನೇ ಆಗಿದ್ದರೂ ಈ ವಿಷಯದಲ್ಲಿ ಹೆಚ್ಚು ವಿಚಾರಮಾಡಲು ಹೋಗದೇ ನಾನು ಹೇಳಿದಂತೆ ಧರ್ಮರಾಜನನ್ನು 'ನೀನು' ಎಂಬ ಶಬ್ದದೊಡನೆ ಸಂಯೋಜಿಸು. ಯುಷ್ಮಚ್ಛಬ್ದಪೂರ್ವಕವಾದ, ಅಯುಕ್ತವಾದ ನಿನ್ನ ನಿರ್ದೇಶನವನ್ನು ಕೇಳಿದೊಡನೆಯೇ ಧರ್ಮರಾಜನು–'ನನ್ನನ್ನು ಅರ್ಜುನನು ವಧೆ ಮಾಡಿದನು'–ಎಂದೇ ಭಾವಿಸಿಕೊಳ್ಳುತ್ತಾನೆ. ಅನಂತರ ನೀನು ಇವನ ಕಾಲುಗಳನ್ನು ಮುಟ್ಟಿ ಅಭಿವಾದನಪೂರ್ವಕವಾಗಿ ನಮಸ್ಕಾರವನ್ನು ಮಾಡಿ, ಧರ್ಮರಾಜನನ್ನು ಸಂತಯಿಸುತ್ತಾ ನ್ಯಾಯೋಚಿತವಾದ ಗೌರವಯುಕ್ತವಾದ ಮಾತುಗಳನ್ನು ಹೇಳು.

**ಭ್ರಾತಾ ಪ್ರಾಜ್ಞಸ್ತವ ಕೋಪಂ ನ ಜಾತು**
**ಕುರ್ಯಾದ್ರಾಜಾ ಧರ್ಮಮವೇಕ್ಷ್ಯ ಚಾಪಿ ।**
**ಮುಕ್ತೋಽನೃತಾದ್ಭ್ರಾತೃವಧಾಚ್ಚ ಪಾರ್ಥ**
**ಹೃಷ್ಟಃ ಕರ್ಣಂ ತ್ವಂ ಜಹಿ ಸೂತಪುತ್ರಮ್ ॥೮೮॥**

ಅರ್ಜುನ! ನಿಮ್ಮಣ್ಣನಾದ ಯುಧಿಷ್ಠಿರನು ಮಹಾಪ್ರಾಜ್ಞನು.

ಆದುದರಿಂದ ರಾಜನು ನಿನ್ನ ವರ್ತನೆಯನ್ನು ಧರ್ಮದೃಷ್ಟಿಯಿಂದಲೂ ಪರಿಶೀಲಿಸಿ ನಿನ್ನ ಮೇಲೆ ಖಂಡಿತವಾಗಿಯೂ ಯಾವುದೇ ಕಾರಣದಿಂದಲೂ ಕೋಪಗೊಳ್ಳುವುದಿಲ್ಲ. ನಾನು ಹೇಳಿರುವ ಈ ಉಪಾಯದಿಂದ ನೀನು ಪ್ರತಿಜ್ಞಾಋಣದಿಂದಲೂ ಮುಕ್ತನಾಗುವೆ. (ಅಗೌರವವಾದ ಪದಪ್ರಯೋಗ ದಿಂದ) ಅಣ್ಣನ ವಧೆಯಿಂದ ಪ್ರಾಪ್ತವಾಗಬಹುದಾಗಿದ್ದ ಮಹಾಪಾಪ ದಿಂದಲೂ ಮುಕ್ತನಾಗುವೆ. ಅನಂತರ ನೀನು ಪ್ರಹೃಷ್ಟನಾಗಿ, ಉತ್ಸಾಹವಂತನಾಗಿ ಸೂತಪುತ್ರನಾದ ಕರ್ಣನನ್ನು ಸಂಹರಿಸಬಹುದು."

೬೯ನೆಯ ಅಧ್ಯಾಯವು ಮುಗಿಯಿತು.



## ಶ್ರೀಕೃಷ್ಣನು ಅರ್ಜುನನನ್ನು ಪ್ರತಿಜ್ಞಾಭಂಗದ ದೋಷದಿಂದಲೂ ಭ್ರಾತೃವಧೆಯ ದೋಷದಿಂದಲೂ ಮತ್ತು ಆತ್ಮಘಾತದಿಂದಲೂ ವಿಮೋಚನಗೊಳಿಸಿದುದು: ಅರ್ಜುನನು ಯುಧಿಷ್ಠಿರನನ್ನು ಸಂತಯಿಸಿ ಸಂತೋಷಗೊಳಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಶ್ರೀಕೃಷ್ಣನು ಅರ್ಜುನನಿಗೆ ಹೀಗೆಂದು ಹೇಳಲಾಗಿ, ಪಾರ್ಥನು ಪ್ರಿಯಸ್ನೇಹಿತನ ಮಾತನ್ನು ಪ್ರಶಂಸಿಸುತ್ತಾ, ಧರ್ಮರಾಜನನ್ನು ಕುರಿತು, ಹಿಂದೆಂದೂ ಹೇಳದೇ ಇದ್ದ ಅತ್ಯಂತನಿಷ್ಠುರವಾದ ಈ ಮಾತುಗಳನ್ನು ತನಗೆ ಇಷ್ಟವಿಲ್ಲವಿದ್ದರೂ ಬಲವಂತದಿಂದ ಹೇಳಿದನು:

**ಮಾ ತ್ವಂ ರಾಜನ್ವ್ಯಾಹರ ವ್ಯಾಹರಸ್ವ**
**ಯಸ್ತಿಷ್ಠಸೇ ಕ್ರೋಶಮಾತ್ರೇ ರಣಾದ್ವೈ ।**
**ಭೀಮಸ್ತು ಮಾಮರ್ಹತಿ ಗರ್ಹಣಾಯ**
**ಯೋ ಯುಧ್ಯತೇ ಸರ್ವಲೋಕಪ್ರವೀರೈಃ ॥೨॥**

"ಮಹಾರಾಜ! ಹೆಚ್ಚು ಮಾತನಾಡಬೇಡ; ಸುಮ್ಮನಿರು. ನಿನಗೆ ಯುದ್ಧವೆಂದರೆ ಭಯ. ರಣಭೂಮಿಯಿಂದ ಒಂದು ಹರಿದಾರಿಯ ದೂರದಲ್ಲಿ (ಸುಮಾರು ಮೂರು ಮೈಲಿಗಳು) ನೀನು ನಿಂತುಕೊಳ್ಳುವೆ. ಇಂತಹ ಭೀರುವಾಗಿರುವ ನೀನು ನನ್ನ ವಿಷಯವಾಗಿ ಹೇಳುವ ಅಗತ್ಯ

ವೇನಿಲ್ಲ. ಹಾಗೆ ಹೇಳಲು ನಿನಗೆ ಅಧಿಕಾರವೂ ಇಲ್ಲ. ಒಂದು ವೇಳೆ ನನ್ನನ್ನು ನಿಂದಿಸಬೇಕಾದರೆ ನಿಂದಿಸುವ ಅಧಿಕಾರವು ಭೀಮನೊಬ್ಬನಿಗೆ ಮಾತ್ರವಿದೆ. ಅವನಾದರೋ ಲೋಕಪ್ರವೀರರೆಲ್ಲರೊಡನೆಯೂ ಏಕಾಕಿಯಾಗಿಯೇ ಯುದ್ಧಮಾಡುತ್ತಿದ್ದಾನೆ.



ಸಮಯವು ಸಿಕ್ಕಿದಾಗ ಭೀಮಸೇನನು ಶತ್ರುಗಳನ್ನು ಬಹುವಾಗಿ ಪೀಡಿಸುತ್ತಾನೆ. ಶೂರರಾದ ಪೃಥ್ವೀವಲ್ಲಭರನ್ನು ಅಮಿತಸಂಖ್ಯೆಯಲ್ಲಿ ಸಂಹರಿಸುತ್ತಾನೆ. ಪ್ರಧಾನ-ಪ್ರಧಾನರಾದ ರಥಿಗಳನ್ನೂ, ಶ್ರೇಷ್ಠಗಜಗಳನ್ನೂ, ಪ್ರಮುಖರಾದ ಕುದುರೇಸವಾರರನ್ನೂ, ಅಸಂಖ್ಯಾತರಾದ ವೀರರನ್ನೂ ಸಂಹರಿಸುತ್ತಾನೆ. ಸಾವಿರಕ್ಕೂ ಹೆಚ್ಚಿನ ಸಲಗಗಳನ್ನೂ ಸಂಹರಿಸಿ

ಭಯಂಕರವಾಗಿ ಸಿಂಹನಾದಮಾಡುತ್ತಾ–ಸಿಂಹವು ಮೃಗಗಳನ್ನು ಸಂಹರಿಸುವಂತೆ–ಹತ್ತು ಸಾವಿರ ಕಾಂಬೋಜದೇಶದ ಕುದುರೆಗಳನ್ನೂ ಪರ್ವತಪ್ರದೇಶದ ವೀರರನ್ನೂ ಸಂಹರಿಸಿ, ವೀರನಾದ ಭೀಮಸೇನನು ಸುದುಷ್ಕರವಾದ ಸಂಹಾರಕಾರ್ಯವನ್ನು ಮಾಡಿರುತ್ತಾನೆ. ನೀನು ಯಾವಾಗಲೂ ಇಂತಹ ಸಾಹಸಕಾರ್ಯವನ್ನು ಮಾಡಿರುವುದಿಲ್ಲ; ಮಾಡುವ ಯೋಗ್ಯತೆಯೂ ನಿನಗಿಲ್ಲ.

ಅವನು ಮಾಡುವ ಸಾಹಸಕಾರ್ಯವನ್ನು ನೋಡಲಾದರೂ ನಿನಗೆ ಧೈರ್ಯವಿರುವುದೇ? ಭೀಮಸೇನನು ಗದೆಯನ್ನು ಕೈಯಲ್ಲಿ ಹಿಡಿದು, ರಥದಿಂದ ಕೆಳಕ್ಕೆ ಧುಮುಕಿ, ಭಯಂಕರವಾದ ಆ ಗದೆಯಿಂದ ಆನೆ-ಕುದುರೆ-ರಥಗಳನ್ನು ಅಪ್ಪಳಿಸಿ ಧ್ವಂಸಮಾಡಿರುತ್ತಾನೆ. ಕೈಯಲ್ಲಿರುವ ಶ್ರೇಷ್ಠವಾದ ಕತ್ತಿಯಿಂದಲೂ ಭೀಮಸೇನನು ಅಶ್ವ-ಗಜ-ಪದಾತಿಸೈನಿಕರನ್ನು ಕೊಚ್ಚಿಹಾಕುತ್ತಾನೆ. ಅದೇ ರೀತಿಯಲ್ಲಿ ಚಕ್ರಾಯುಧಗಳಿಂದಲೂ ಮತ್ತು ಧನುರ್ಬಾಣಗಳಿಂದಲೂ ಶತ್ರುಗಳನ್ನು ಸುಟ್ಟುಬಿಡುತ್ತಾನೆ. ಇಂದ್ರಸಮಾನ ವಿಕ್ರಮನಾದ ಮಹಾಬಲನಾದ ಭೀಮಸೇನನು ಶತ್ರುಗಳನ್ನು ತನ್ನ ಕಾಲುಗಳಿಂದಲೇ ತುಳಿದು ಹೊಸಕಿ ಸಂಹರಿಸುತ್ತಾನೆ. ಪರಿಘೋಪಮವಾದ ತೋಳುಗಳಿಂದಲೇ ಶತ್ರುಗಳನ್ನು ಸಂಹರಿಸುತ್ತಾನೆ. ಕುಬೇರ ಮತ್ತು ಯಮರಿಗೆ ಸಮಾನನಾದ ಭೀಮಸೇನನು ಬಲಾತ್ಕಾರಪೂರ್ವಕವಾಗಿ ಶತ್ರುಗಳ ಸೈನ್ಯವನ್ನು–ಅವರಿರುವ ಸ್ಥಳದಿಂದ ಹೊರಕ್ಕೆ ಸೆಳೆದು– ಸಂಹರಿಸುತ್ತಾನೆ. ಅಂತಹ ಮಹಾಪರಾಕ್ರಮಿಯಾದ ಭೀಮಸೇನನು ನನ್ನನ್ನು ನಿಂದಿಸಲು ಯೋಗ್ಯನು. ನಿನಗೆ ಅಂತಹ ಯೋಗ್ಯತೆಯೇ ಇಲ್ಲ. ನಿನ್ನ ಭುಜಬಲ- ಪರಾಕ್ರಮಗಳಿಂದ ನಿನ್ನ ಆತ್ಮರಕ್ಷಣೆಯನ್ನೇ ನೀನು ಮಾಡಿಕೊಳ್ಳುತ್ತಿಲ್ಲ. ಸುಹೃದರಿಂದ ಸರ್ವದಾ ರಕ್ಷಿತನಾಗಿದ್ದೀಯೆ.

ಏಕಾಕಿಯಾದ ಭೀಮಸೇನನು ಮಹಾರಥರನ್ನೂ, ಶ್ರೇಷ್ಠವಾದ ಆನೆಗಳನ್ನೂ, ಕುದುರೆಗಳನ್ನೂ, ಪದಾತಿಮುಖ್ಯರನ್ನೂ ಧ್ವಂಸಮಾಡುತ್ತಾ ಕೌರವರ ಸೈನ್ಯದೊಳಗೆ ನುಗ್ಗಿಹೋಗಿದ್ದಾನೆ. ಅಂತಹ ಶತ್ರುಹಂತಕನಾದ ಭೀಮಸೇನನು ಬೇಕಾದರೆ ನನ್ನನ್ನು ನಿಂದಿಸಲಿ.

ಕಳಿಂಗ, ವಂಗ, ಅಂಗ, ನಿಷಾದ ಮತ್ತು ಮಗಧದೇಶದಲ್ಲಿ ಹುಟ್ಟಿದ

ಮದೋನ್ಮತ್ತವಾದ, ಕಾಳಮೇಘಸದೃಶವಾದ ಶತ್ರುಪಕ್ಷದ ಅನೇಕಾನೇಕ ಆನೆಗಳನ್ನು ಯಾವನು ಸಂಹಾರಮಾಡಿರುವನೋ–ಅಂತಹ ಶತ್ರುಮರ್ದನನಾದ ಭೀಮಸೇನನು ನನ್ನನ್ನು ನಿಂದಿಸಲು ಯೋಗ್ಯನೇ ಹೊರತು ಕಿಂಚಿತ್ತಾದರೂ ಪೌರುಷವೇ ಇಲ್ಲದ ನೀನು ನನ್ನನ್ನು ನಿಂದಿಸುವುದು ಸರ್ವಥಾ ಸರಿಯಲ್ಲ. ವೀರನಾದ ಭೀಮಸೇನನು ತಕ್ಕುದಾದ ಸಮಯದಲ್ಲಿ ರಥದಲ್ಲಿ ಕುಳಿತು, ಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ, ಮುಷ್ಟಿಯಲ್ಲಿ ಬಾಣಗಳನ್ನು ಹಿಡಿದು ಧನುಸ್ಸಿನಲ್ಲಿ ಯೋಜಿಸಿ–ಮಹಾಮೇಘವು ಮಳೆಗರೆಯುವಂತೆ–ಬಾಣಗಳ ವೃಷ್ಟಿಯನ್ನೇ ಸೃಷ್ಟಿಸುತ್ತಾನೆ. ಇಂದು ಭೀಮಸೇನನು ರಣರಂಗದಲ್ಲಿ ತನ್ನ ಬಾಣಗಳಿಂದ ಶತ್ರುಪಕ್ಷದ ಎಂಟುನೂರು ಆನೆಗಳನ್ನು ಅವುಗಳ ಕುಂಭಸ್ಥಳ, ಸೊಂಡಿಲು ಮತ್ತು ಸೊಂಡಿಲಿನ ತುದಿಗಳನ್ನು ಕತ್ತರಿಸಿ ಸಂಹರಿಸಿದುದನ್ನು ನಾನೇ ಪ್ರತ್ಯಕ್ಷವಾಗಿ ನೋಡಿದೆನು. ಅಂತಹ ಶತ್ರುಹಂತಕನಾದ ಮಹಾವೀರನಾದ ಭೀಮಸೇನನು ನನ್ನನ್ನು ನಿಷ್ಠುರವಾದ ಮಾತುಗಳಿಂದ ತೆಗಳಲಿ. ನಾನದನ್ನು ಸಹಿಸಿಕೊಳ್ಳುತ್ತೇನೆ.

ಬಲಂ ತು ವಾಚಿ ದ್ವಿಜಸತ್ತಮಾನಾಂ
ಕ್ಷಾತ್ರಂ ಬುಧಾ ಬಾಹುಬಲಂ ವದನ್ತಿ ।
ತ್ವಂ ವಾಗ್ಬಲೋ ಭಾರತ ನಿಷ್ಠುರಶ್ಚ
ತ್ವಮೇವ ಮಾಂ ವೇತ್ಥ ಯಥಾಬಲೋಽಹಮ್ ॥೧೨॥

'ಬ್ರಾಹ್ಮಣಶ್ರೇಷ್ಠರಿಗೆ ಮಾತಿನಲ್ಲಿ ಬಲವಿದೆ. ಕ್ಷತ್ರಿಯರಿಗೆ ಬಾಹುಗಳಲ್ಲಿ ಬಲವಿದೆ'–ಎಂದು ಪಂಡಿತರಾದವರು ಹೇಳುತ್ತಾರೆ. ನೀನು ಕ್ಷತ್ರಿಯನಾದರೂ ಮಾತಿನಲ್ಲಿಯೇ ಬಲವುಳ್ಳವನಾಗಿರುವೆ. ಮೇಲಾಗಿ ನಿನ್ನ ಮಾತೂ ಬಹಳ ನಿಷ್ಠುರವಾದುದು. ನಾನು ಎಂತಹ ಮಹಾಪರಾಕ್ರಮಿಯೆಂಬುದು ನನ್ನನ್ನು ಹೀಯಾಳಿಸುತ್ತಿರುವ ನಿನಗೇ ತಿಳಿದಿದೆ.

ಯತೇ ಹಿ ನಿತ್ಯಂ ತವ ಕರ್ತುಮಿಷ್ಟಂ
ದಾರೈಃ ಸುತೈರ್ಜೀವಿತೇನಾತ್ಮನಾ ಚ ।
ಏವಂ ಯನ್ಮಾಂ ವಾಗ್ವಿಶಿಖೇನ ಹಂಸಿ
ತ್ವತ್ತಃ ಸುಖಂ ನ ವಯಂ ವಿದ್ಮ ಕಿಂಚಿತ್ ॥೧೩॥

ನಾನು ಸರ್ವದಾ ಪತ್ನಿಯರು, ಮಕ್ಕಳು, ಜೀವನ ಮತ್ತು ಶರೀರಗಳ ಮೂಲಕವಾಗಿ ನಿನಗೆ ಇಷ್ಟವಾದುದನ್ನೇ ಮಾಡಲು ಪ್ರಯತ್ನಶೀಲನಾಗಿಯೇ ಇದ್ದೇನೆ. ಹೀಗಿದ್ದರೂ ನೀನು ನನ್ನನ್ನು ವಾಗ್ಬಾಣಗಳಿಂದ ಕೊಲ್ಲುತ್ತಿರುವೆ. ನಿನ್ನಿಂದ ಕಿಂಚಿತ್ತಾದರೂ ಸುಖವಾಗುವುದೆಂಬುದನ್ನೇ ನಾವು ಕಾಣದವರಾಗಿದ್ದೇವೆ.

**ಮಾಂ ಮಾವಮಂಸ್ಥಾ ದ್ರೌಪದೀತಲ್ಪಸಂಸ್ಥೋ-**
**ಮಹಾರಥಾನ್ಪ್ರತಿಹನ್ಮಿ ತ್ವದರ್ಥೇ ।**
**ತೇನಾತಿಶಙ್ಕೇ ಭಾರತ ನಿಷ್ಠುರೋಽಸಿ**
**ತ್ವತ್ತಃ ಸುಖಂ ನಾಭಿಜಾನಾಮಿ ಕಿಂಚಿತ್ ॥೧೪॥**

ದ್ರೌಪದಿಯ ಹಾಸಿಗೆಯ ಮೇಲೆ (ದ್ರೌಪದಿಯೊಡನೆ) ಸುಖವಾಗಿ ಪವಡಿಸುವ ನೀನು ನನ್ನನ್ನು ಕಾರಣವೇ ಇಲ್ಲದೆ ಅವಮಾನಗೊಳಿಸಬೇಡ. ನಿನ್ನ ಸಲುವಾಗಿಯೇ ನಾನು ಅನೇಕಮಹಾರಥರನ್ನು ಸಂಹರಿಸಿದ್ದೇನೆ; ಮುಂದೆಯೂ ಸಂಹರಿಸುತ್ತೇನೆ. ಹೀಗಿದ್ದರೂ ನನ್ನ ವಿಷಯದಲ್ಲಿ ಸಂದೇಹಗೊಂಡು ನಿಷ್ಠುರನಾಗಿ ವರ್ತಿಸುತ್ತಿರುವೆ. ನಿನ್ನಿಂದ ಯತ್ಕಿಂಚಿತ್ ಸುಖವನ್ನು ಪಡೆದ ಸ್ಮರಣೆಯೂ ನನಗಿರುವುದಿಲ್ಲ.

**ಪ್ರೋಕ್ತಃ ಸ್ವಯಂ ಸತ್ಯಸಂಧೇನ ಮೃತ್ಯು-**
**ಸ್ತವ ಪ್ರಿಯಾರ್ಥಂ ನರದೇವ ಯುದ್ಧೇ ।**
**ವೀರಃ ಶಿಖಣ್ಡೀ ದ್ರೌಪದೋಽಸೌ ಮಹಾತ್ಮಾ**
**ಮಯಾಭಿಗುಪ್ತೇನ ಹತಶ್ಚ ತೇನ ॥೧೫॥**

ನರದೇವ! ನಿನ್ನ ಸಲುವಾಗಿ ಯಾರು ಯಾರು ಎಂತೆಂತಹ ತ್ಯಾಗ ಮಾಡಿರುವರೆಂಬುದನ್ನು ಹೇಳುವೆನು; ಕೇಳು. ಯುದ್ಧಸಮಯದಲ್ಲಿ ನಿನಗೆ ಪ್ರೀತಿಯನ್ನುಂಟುಮಾಡುವ ಸಲುವಾಗಿ ಸತ್ಯಸಂಧನಾದ ಮಹಾತ್ಮನಾದ ಭೀಷ್ಮನು ತನ್ನ ಮರಣರಹಸ್ಯವನ್ನು ತಾನಾಗಿಯೇ ಹೇಳಿದನು. ದ್ರುಪದನ ಮಗನಾದ, ವೀರನಾದ ಶಿಖಂಡಿಯು ನನ್ನಿಂದ ಅಭಿರಕ್ಷಿತನಾಗಿ ಮಹಾನುಭಾವನಾದ ಭೀಷ್ಮನನ್ನು ಸಂಹರಿಸಿದನು.

**ನ ಚಾಭಿನನ್ದಾಮಿ ತವಾಧಿರಾಜ್ಯಂ**
**ಯತಸ್ತ್ವಮಕ್ಷೇಷ್ವಹಿತಾಯ ಸಕ್ತಃ ।**
**ಸ್ವಯಂ ಕೃತ್ವಾ ಪಾಪಮನಾರ್ಯಜುಷ್ಟ-**
**ಮಸ್ಮಾಭಿರ್ವಾ ತರ್ತುಮಿಚ್ಛಸ್ಯರೀಂಸ್ತ್ವಮ್ ॥೧೬॥**

ನಿನ್ನ ರಾಜ್ಯಭಾರಕ್ರಮವನ್ನೂ ನಾನು ಪ್ರಶಂಸೆಮಾಡುವುದಿಲ್ಲ. ಏಕೆಂದರೆ: ನೀನು ನಮ್ಮ ಅಹಿತಕ್ಕಾಗಿಯೇ ಪಗಡೆಯಾಟದಲ್ಲಿ ಆಸಕ್ತನಾದೆ. ನೀಚಪುರುಷರಿಂದ ಆಚರಿಸಲ್ಪಡುವ ಪಾಪಕರ್ಮವನ್ನು ನೀನೇ ಮಾಡಿ ಈಗ ಶತ್ರುರೂಪವಾಗಿರುವ ಈ ಮಹಾಸಮುದ್ರವನ್ನು ನಮ್ಮಿಂದ ದಾಟಿಸಲ್ಪಡಲು ಇಚ್ಛಿಸಿರುವೆ.

**ಅಕ್ಷೇಷು ದೋಷಾ ಬಹವೋ ವಿಧರ್ಮಾಃ**
**ಶ್ರುತಾಸ್ತ್ವಯಾ ಸಹದೇವೋಽಬ್ರವೀದ್ಯಾನ್ ।**
**ತಾನ್ನೈಷಿ ತ್ವಂ ತ್ಯಕ್ತುಮಸಾಧುಜುಷ್ಟಾಂ-**
**ಸ್ತೇನ ಸ್ಮ ಸರ್ವೇ ನಿರಯಂ ಪ್ರಪನ್ನಾಃ ॥೧೭॥**

ಜೂಜಾಟದಲ್ಲಿ ಪಾಪಸಂಪಾದಕವಾದ ಅನೇಕವಾದ ದೋಷಗಳಿವೆ. ಸಹದೇವನು ಜೂಜಾಟದಲ್ಲಿರುವ ದೋಷಗಳೆಲ್ಲವನ್ನೂ ನಿನಗೆ ವಿವರಿಸಿ ಹೇಳುತ್ತಿದ್ದನು. ನೀನು ಅವುಗಳನ್ನು ಕೇಳದೇ ನೀಚಪುರುಷರಿಂದ ಸೇವಿತವಾದ ಜೂಜಾಟವನ್ನು ಬಿಡಲು ಇಚ್ಛಿಸಲಿಲ್ಲ. ಆ ಕಾರಣದಿಂದಲೇ ನಾವೆಲ್ಲರೂ ಕಷ್ಟವೆಂಬ ನರಕದಲ್ಲಿ ಬಿದ್ದು ಒದ್ದಾಡುತ್ತಿದ್ದೇವೆ.

**ಸುಖಂ ತ್ವತ್ತೋ ನಾಭಿಜಾನೀಮ ಕಿಂಚಿ-**
**ದ್ಯತಸ್ತ್ವಮಕ್ಷೈರ್ದೇವಿತುಂ ಸಮ್ಪ್ರವೃತ್ತಃ ।**
**ಸ್ವಯಂ ಕೃತ್ವಾ ವ್ಯಸನಂ ಪಾಣ್ಡವ ತ್ವ-**
**ಮಸ್ಮಾಂಸ್ತೀವ್ರಾಃ ಶ್ರಾವಯಸ್ಯದ್ಯ ವಾಚಃ ॥೧೮॥**

ನಿನ್ನಿಂದ ಯತ್ಕಿಂಚಿತ್ ಸುಖವಾದುದನ್ನೂ ನಾವು ತಿಳಿದುಕೊಂಡಿರುವುದಿಲ್ಲ. (ನಿನ್ನಿಂದ ಯಾವುದಾದರೂ ಸಂದರ್ಭದಲ್ಲಿ ಸುಖವುಂಟಾಯಿತೆಂಬ ವಿಷಯವು ನಮ್ಮ ತಿಳಿವಳಿಕೆಗಂತೂ ಬಂದಿರುವುದಿಲ್ಲ.) ನೀನು ಜೂಜಾಟಕ್ಕೆ ಪ್ರಾರಂಭಿಸಿದುದೇ ಇದಕ್ಕೆ ಮುಖ್ಯಕಾರಣ. ನಿನ್ನ ಗಮನವೆಲ್ಲವೂ ಜೂಜಾಟ

ದಲ್ಲಿಯೇ ಇದ್ದಿತೇ ಹೊರತು ನಮ್ಮ ಯೋಗ-ಕ್ಷೇಮಗಳ ವಿಷಯವಾಗಿ ಯೋಚಿಸಲು ಸಹ ನಿನಗೆ ಸಾಧ್ಯವಾಗುತ್ತಿರಲಿಲ್ಲ. ಇಂದಿನ ವ್ಯಸನಕ್ಕೆ ನೀನೇ ಸಂಪೂರ್ಣವಾಗಿ ಕಾರಣನಾಗಿದ್ದರೂ ನಮ್ಮ ವಿಷಯದಲ್ಲಿ ಅತಿತೀಕ್ಷ್ಣವಾದ ಮಾತುಗಳನ್ನಾಡುತ್ತಿರುವೆ.

**ಶೇತೇಽಸ್ಮಾಭಿರ್ನಿಹತಾ ಶತ್ರುಸೇನಾ**
**ಛಿನ್ನೈರ್ಗಾತ್ರೈರ್ಭೂಮಿತಲೇ ನದನ್ತೀ ।**
**ತ್ವಯಾ ಹಿ ತತ್ಕರ್ಮ ಕೃತಂ ನೃಶಂಸಂ**
**ಯಸ್ಮಾದ್ದೋಷಃ ಕೌರವಾಣಾಂ ವಧಶ್ಚ ॥೧೯॥**

ಯುಧಿಷ್ಠಿರ! ನಮ್ಮಿಂದ ಹತವಾದ ಶತ್ರುಸೈನ್ಯವು ಛಿನ್ನ-ಭಿನ್ನವಾದ ಶರೀರಗಳಿಂದ ಕೂಡಿ ಆರ್ತನಾದಮಾಡುತ್ತಾ ಭೂಮಿಯ ಮೇಲೆ ಮಲಗಿದೆ. ಆದರೆ ನೀನು ಜೂಜಾಡುವುದರ ಮೂಲಕವಾಗಿ ಅತ್ಯಂತಕ್ರೂರಕರ್ಮವನ್ನು ಮಾಡಿದೆ. ಅದರಿಂದಾಗಿ ಪಾಪಸಂಘಟನೆಯಾದುದೇ ಅಲ್ಲದೇ–ನೀನು ಆಡಿದ ಆ ಜೂಜಾಟವು ಕೌರವರ ವಿನಾಶಕ್ಕೂ ಕಾರಣವಾಯಿತು.

ಉತ್ತರದಿಕ್ಕಿನ ರಾಜ್ಯಗಳಿಂದ ಬಂದಿದ್ದ ವೀರರೂ ಹತರಾಗಿ ಹೋದರು. ಪಶ್ಚಿಮದಿಕ್ಕಿನ ರಾಜ್ಯಗಳಿಂದ ಬಂದಿದ್ದ ವೀರಯೋಧರೂ ಹತರಾದರು. ಅಂತೆಯೇ ಪ್ರಾಚ್ಯರೂ ನಷ್ಟವಾಗಿ ಹೋದರು. ದಾಕ್ಷಿಣಾತ್ಯರೂ ಸಂಪೂರ್ಣವಾಗಿ ವಿನಾಶಹೊಂದಿದರು. ನಮ್ಮ ಕಡೆಯ ಮಹಾ-ಮಹಾಯೋಧರೂ ಮತ್ತು ಶತ್ರುಗಳ ಕಡೆಯ ವೀರಯೋಧರೂ ಯುದ್ಧದಲ್ಲಿ ಅಪ್ರತಿಮವಾದ ಸಾಹಸವನ್ನು ತೋರಿದರು.

**ತ್ವಂ ದೇವಿತಾ ತ್ವತ್ಕೃತೇ ರಾಜ್ಯನಾಶ-**
**ಸ್ತ್ವತ್ಸಮ್ಭವಂ ನೋ ವ್ಯಸನಂ ನರೇನ್ದ್ರ ।**
**ಮಾಸ್ಮಾನ್ಕ್ರೂರೈರ್ವಾಕ್ಪ್ರತೋದೈಸ್ತುದಂಸ್ತ್ವಂ**
**ಭೂಯೋ ರಾಜನ್ಕೋಪಯೇಸ್ತ್ವಲ್ಪಭಾಗ್ಯಃ ॥೨೦॥**

ನರೇಂದ್ರನೇ! ನೀನು ಜೂಜುಕೋರನಾದೆ. ನಿನಗೋಸ್ಕರವಾಗಿಯೇ ರಾಜ್ಯನಾಶವಾಯಿತು. (ನಾವು ರಾಜ್ಯಭ್ರಷ್ಟರಾದೆವು.) ನಮ್ಮ ಇಂದಿನ ವ್ಯಸನಕ್ಕೆ ನೀನೇ ಮೂಲಕಾರಣನು. ಅಲ್ಪಭಾಗ್ಯನಾದ ನೀನು ಪುನಃ

ನಮ್ಮನ್ನು ಕ್ರೂರವಾದ ಮಾತುಗಳೆಂಬ ಚಾವಟಿಯಿಂದ ಪ್ರಹರಿಸುತ್ತಾ ಕುಪಿತರನ್ನಾಗಿ ಮಾಡಬೇಡ."

"ಮಹಾರಾಜ! ಸ್ಥಿರಪ್ರಜ್ಞನಾದ, ಪ್ರಾಜ್ಞನಾದ, ಧರ್ಮಭೀರುವಾದ ಅರ್ಜುನನು ನಿಷ್ಠುರವಾದ ಮತ್ತು ಕಠಿಣವಾದ ಇಂತಹ ಮಾತುಗಳನ್ನು ಯುಧಿಷ್ಠಿರನ ಕಿವಿಯಲ್ಲಿ ಹಾಕಿ ಸ್ವಲ್ಪಪಾಪಮಾಡಿ–ತಿಳಿದವನು ಸ್ವಲ್ಪವೇ ಪಾಪಮಾಡಿದರೂ ತಳಮಳಗೊಳ್ಳುವಂತೆ–ವಿಹ್ವಲಮನಸ್ಕನಾದನು. ಆ ಸಮಯದಲ್ಲಿ ದೇವರಾಜಕುಮಾರನಾದ ಅರ್ಜುನನು ಅಣ್ಣನನ್ನು ನಿಂದಿಸಿದುದಕ್ಕಾಗಿ ಪಶ್ಚಾತ್ತಾಪಪಟ್ಟನು. ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಒರೆಯಿಂದ ಕತ್ತಿಯನ್ನು ಪುನಃ ಹೊರಸೆಳೆದನು. ಅದನ್ನು ನೋಡಿದ ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳಿದನು.

"ಇದೇನಿದು? ಅರ್ಜುನ! ನೀನು ಆಕಾಶದಂತೆ ನಿರ್ಮಲವಾಗಿರುವ ಈ ಕತ್ತಿಯನ್ನೇಕೆ ಒರೆಯಿಂದ ಪುನಃ ಹೊರತೆಗೆಯುತ್ತಿರುವೆ? ನನ್ನ ಈ ಪ್ರಶ್ನೆಗೆ ಉತ್ತರಿಸು. ನಿನ್ನ ಅಭೀಷ್ಟಸಿದ್ಧಿಗಾಗಿ ಪುನಃ ಯಾವುದಾದರೂ ಉಪಾಯವನ್ನು ಹೇಳುವೆನು."

ಮಹಾರಾಜ! ಪುರುಷೋತ್ತಮನಾದ ಕೇಶವನು ಹೀಗೆ ಹೇಳಲಾಗಿ ಅತ್ಯಂತದುಃಖಿತನಾಗಿದ್ದ ಅರ್ಜುನನು ಕೇಶವನೊಡನೆ ಹೇಳಿದನು:

ಅಹಂ ಹನಿಷ್ಯೇ ಸ್ವಶರೀರಮೇವ
ಪ್ರಸಹ್ಯ ಯೇನಾಹಿತಮಾಚರಂ ವೈ ॥೨೪॥

"ನಾನು ಮನಸ್ಸಿಲ್ಲದಿದ್ದರೂ ಬಲಾತ್ಕಾರಪೂರ್ವಕವಾಗಿ ಅಣ್ಣನಿಗೆ ಅಹಿತವಾದ ಮಾತುಗಳನ್ನು ಆಡಿಬಿಟ್ಟೆನು. ಆದುದರಿಂದ ನನ್ನ ಶರೀರವನ್ನೇ ಕತ್ತರಿಸಿಕೊಳ್ಳುತ್ತೇನೆ."

ಮಹಾರಾಜ! ಅರ್ಜುನನ ಮಾತನ್ನು ಕೇಳಿ ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳಿದನು:

"ಪಾರ್ಥ! ರಾಜನನ್ನು 'ತ್ವಂ' ಎಂಬ ಯುಷ್ಮಚ್ಛಬ್ದದಿಂದ ಸಂಬೋಧಿಸಿದ ಮಾತ್ರದಿಂದಲೇ ನೀನು ಸುಘೋರವಾದ ಸಂಕಟದಲ್ಲಿ

ಮುಳುಗಿರುವೆಯಾ? ಶತ್ರುಸೂದನನೇ! ಈ ಕಾರಣದಿಂದಲೇ ನೀನು ಆತ್ಮಘಾತಮಾಡಿಕೊಳ್ಳಲು ಇಚ್ಛಿಸಿರುವೆಯಾ?

ಕಿರೀಟಿಯೇ! ಸಾಧುಪುರುಷರು ಇಂತಹ ಕಾರ್ಯವನ್ನು ಯಾವಾಗಲೂ ಮಾಡುವುದಿಲ್ಲ.

ಧರ್ಮಾತ್ಮಾನಂ ಭ್ರಾತರಂ ಜ್ಯೇಷ್ಠಮದ್ಯ
ಖಡ್ಗೇನ ಚೈನಂ ಯದಿ ಹನ್ಯಾನ್ನೃವೀರ ।
ಧರ್ಮಾದ್ಭೀತಸ್ತತ್ಕಥಂ ನಾಮ ತೇ ಸ್ಯಾ-
ತ್ಕಿಂಚೋತ್ತರಂ ವಾ ಕರಿಷ್ಯಸ್ತ್ವಮೇವ ॥೨೭॥

ನರಶ್ರೇಷ್ಠನೇ! ಮಾಡಿದ ಪ್ರತಿಜ್ಞೆಗೆ ಭಂಗವಾಗುವುದೆಂದು ಭಯಪಟ್ಟು ನೀನೇನಾದರೂ ಧರ್ಮಾತ್ಮನಾದ, ಜ್ಯೇಷ್ಠನಾದ ನಿನ್ನ ಅಣ್ಣನನ್ನು ಖಡ್ಗದಿಂದಲೇ ಸಂಹರಿಸಿದ್ದರೆ ಆಗ ನಿನ್ನ ಸ್ಥಿತಿಯು ಏನಾಗುತ್ತಿದ್ದಿತು? ಅಣ್ಣನನ್ನು ಸಂಹರಿಸಿದನಂತರ ನೀನೇನು ಮಾಡುತ್ತಿದ್ದೆ?

ಸೂಕ್ಷ್ಮೋ ಧರ್ಮೋ ದುರ್ವಿದಶ್ಚಾಪಿ ಪಾರ್ಥ
ವಿಶೇಷತೋಽಜ್ಞೈಃ ಪ್ರೋಚ್ಯಮಾನಂ ನಿಬೋಧ ।
ಹತ್ವಾಽತ್ಮಾನಮಾತ್ಮನಾ ಪ್ರಾಪ್ನುಯಾಸ್ತ್ವಂ
ವಧಾದ್ಭ್ರಾತುರ್ನರಕಂ ಚಾತಿಘೋರಮ್ ॥೨೮॥

ಅರ್ಜುನ! ಧರ್ಮವು ಬಹಳ ಸೂಕ್ಷ್ಮವಾದುದು. ತಿಳಿಯಲು ಬಹಳ ಕಷ್ಟಸಾಧ್ಯವಾದುದು. ಅದರಲ್ಲಿಯೂ ವಿಶೇಷವಾಗಿ ಅಜ್ಞರಿಗೆ ಧರ್ಮದ ಸ್ವರೂಪವೇನೆಂಬುದನ್ನು ತಿಳಿದುಕೊಳ್ಳಲು ಸಾಧ್ಯವೇ ಇಲ್ಲ. ಈ ವಿಷಯದಲ್ಲಿ ನಾನು ಹೇಳುವುದನ್ನು ಕೇಳು. ಭ್ರಾತೃಹತ್ಯೆಯಿಂದ ಯಾವ ಅತಿಘೋರವಾದ ನರಕವು ಪ್ರಾಪ್ತವಾಗುವುದೋ ಅದಕ್ಕಿಂತಲೂ ಮಹಾಘೋರವಾದ ಮಹಾಭಯಂಕರವಾದ ನರಕವು ತನ್ನನ್ನೇ ತಾನು ಕೊಂದುಕೊಳ್ಳುವುದರಿಂದ ಪ್ರಾಪ್ತವಾಗುತ್ತದೆ. ನಿನ್ನನ್ನೇ ನೀನು ಕೊಂದುಕೊಂಡಂತಾಗಬೇಕು. ಆದರೆ ಕಾರ್ಯರೂಪದಲ್ಲಿ ಹಾಗಾಗಬಾರದು. ಅದಕ್ಕೆ ನಾನೊಂದು ಉಪಾಯವನ್ನು ಸೂಚಿಸುತ್ತೇನೆ. ಅದರಂತೆ ಮಾಡು.

**ಬ್ರವೀಹಿ ವಾಚಾದ್ಯ ಗುಣಾನಿಹಾತ್ಮನ-**
**ಸ್ತಥಾ ಹತಾತ್ಮಾ ಭವಿತಾಸಿ ಪಾರ್ಥ ।**

ನಿನ್ನ ಮಾತುಗಳಿಂದಲೇ ನಿನ್ನ ಗುಣಗಳನ್ನು ನೀನು ಹೊಗಳಿಕೋ. ನಿನ್ನನ್ನೇ ನೀನು ಶ್ಲಾಘನೆಮಾಡಿಕೋ. ಹೀಗೆ ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುವುದರಿಂದ ನಿನ್ನನ್ನೇ ನೀನು ಕೊಂದುಕೊಂಡಂತಾಗುತ್ತದೆ."

"ಕೃಷ್ಣ ! ಹಾಗೆಯೇ ಆಗಲಿ."

ಎಂಬುದಾಗಿ ಅರ್ಜುನನು ಧನುಸ್ಸನ್ನು ಬಗ್ಗಿಸುತ್ತಾ ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನನ್ನು ಕುರಿತು ಹೇಳಿದನು:

"ರಾಜನೇ! ಕೇಳು:

**ನ ಮಾದೃಶೋಽನ್ಯೋ ನರದೇವ ವಿದ್ಯತೇ**
**ಧನುರ್ಧರೋ ದೇವಮೃತೇ ಪಿನಾಕಿನಮ್ ।**
**ಅಹಂ ಹಿ ತೇನಾನುಮತೋ ಮಹಾತ್ಮನಾ**
**ಕ್ಷಣೇನ ಹನ್ಯಾಂ ಸಚರಾಚರಂ ಜಗತ್ ॥೩೦॥**

ಪಿನಾಕಪಾಣಿಯಾದ ಮಹಾದೇವನೊಬ್ಬನನ್ನು ಬಿಟ್ಟು ನನಗೆ ಸರಿದೂಗುವ ಧನುರ್ಧಾರಿಗಳು ತ್ರಿಭುವನಗಳಲ್ಲಿಯೇ ಬೇರೊಬ್ಬನಿಲ್ಲ. ಮಹಾತ್ಮನಾದ ಪರಮೇಶ್ವರನೇ ನನ್ನ ಪರಾಕ್ರಮವನ್ನು ಒಪ್ಪಿಕೊಂಡಿದ್ದಾನೆ. ನಾನು ಪರಶಿವನ ಅನುಮತಿಯನ್ನು ಪಡೆದು ಚರಾಚರಗಳಿಂದ ಯುಕ್ತವಾದ ಈ ಜಗತ್ತನ್ನೇ ಕ್ಷಣಮಾತ್ರದಲ್ಲಿ ನಾಶಮಾಡಿಬಿಡಬಲ್ಲೆನು.

**ಮಯಾ ಹಿ ರಾಜನ್ಸದಿಗೀಶ್ವರಾ ದಿಶೋ**
**ವಿಜಿತ್ಯ ಸರ್ವಾ ಭವತಃ ಕೃತಾ ವಶೇ ।**
**ಸ ರಾಜಸೂಯಶ್ಚ ಸಮಾಪ್ತದಕ್ಷಿಣಃ**
**ಸಭಾ ಚ ದಿವ್ಯಾ ಭವತೋ ಮಮೌಜಸಾ ॥೩೧॥**

ನಾನು ಪ್ರಪಂಚದ ಎಲ್ಲ ದಿಕ್ಕುಗಳನ್ನೂ (ಎಲ್ಲ ದಿಕ್ಕುಗಳಲ್ಲಿಯೂ ಇದ್ದ ರಾಜರನ್ನೂ) ಗೆದ್ದು ವನ-ಪರ್ವತಗಳಿಂದ ಕೂಡಿದ ಅಖಂಡ

ಭೂಮಂಡಲವನ್ನೇ ನಿನ್ನ ವಶಕ್ಕೆ ಒಪ್ಪಿಸಿದೆನು. ಪರ್ಯಾಪ್ತವಾದ ದಕ್ಷಿಣೆಗಳಿಂದ ಯುಕ್ತವಾದ ರಾಜಸೂಯಯಾಗವು ನನ್ನ ಪ್ರಭಾವದಿಂದಲೇ ನಡೆಯಿತು ಮತ್ತು ದಿವ್ಯವಾದ ನಿನ್ನ ಸಭಾಮಂಟಪವು ನನ್ನ ಪರಾಕ್ರಮದಿಂದಲೇ ನಿರ್ಮಿತವಾಯಿತು.

**ಪಾಣೌ ಪೃಷತ್ಕಾ ನಿಶಿತಾ ಮಮೈವ**
**ಧನುಶ್ಚ ಸಜ್ಯಂ ವಿತತಂ ಸಬಾಣಮ್ ।**
**ಪಾದೌ ಚ ಮೇ ಸರಥೌ ಸಧ್ವಜೌ ಚ**
**ನ ಮಾದೃಶಂ ಯುದ್ಧಗತಂ ಜಯನ್ತಿ ॥೩೨॥**

ನಿಶಿತವಾದ ಪೃಷತ್ಕಗಳೂ, ಮೌರ್ವಿಯಿಂದ ಕೂಡಿದ ವಿಶಾಲವಾದ ಬಾಣಸಹಿತವಾದ ಧನುಸ್ಸೂ ನನ್ನ ಕೈಯಲ್ಲಿವೆ. ನನ್ನ ಕಾಲುಗಳಲ್ಲಿ ರಥ ಮತ್ತು ಧ್ವಜಗಳ ಚಿಹ್ನೆಗಳಿವೆ. ಇಂತಹ ಲಕ್ಷಣಗಳನ್ನು ಹೊಂದಿರುವ ನನ್ನಂತಹವನು ಯುದ್ಧಕ್ಕೆ ಹೋದರೆ ಅವನನ್ನು ಶತ್ರುಗಳು ಖಂಡಿತವಾಗಿಯೂ ಜಯಿಸಲಾರರು.

ಔತ್ತರೇಯವೀರರೆಲ್ಲರೂ ನನ್ನಿಂದ ಹತರಾಗಿಹೋದರು. ಮಹಾವೀರ ರಾದ ಪ್ರತೀಚ್ಯರೂ ಮತ್ತು ಸಾಹಸಿಗಳಾದ ಪ್ರಾಚ್ಯರೂ ನಿರಸ್ತರಾದರು. ದಾಕ್ಷಿಣಾತ್ಯಯೋಧರೂ ಕತ್ತರಿಸಲ್ಪಟ್ಟರು. ಸಂಶಪ್ತಕಸೈನಿಕರಲ್ಲಿ ಕಿಂಚಿನ್ಮಾತ್ರವೇ ಶೇಷವು ಉಳಿದಿದೆ. ಕೌರವರ ಹನ್ನೊಂದು ಅಕ್ಷೌಹಿಣೀಸೈನ್ಯದಲ್ಲಿ ಅರ್ಧಭಾಗದಷ್ಟು ಸೈನ್ಯವು ನನ್ನೊಬ್ಬನಿಂದಲೇ ಹತವಾಯಿತು. ದೇವಸೇನೆಯಂತೆ ಪ್ರಕಾಶಮಾನವಾಗಿ ಕಾಣುತ್ತಿದ್ದ ಭಾರತೀಸೈನ್ಯವು ನನ್ನಿಂದ ಹತವಾಗಿ ರಣಾಂಗಣದಲ್ಲಿ ಪ್ರಾಣಗಳನ್ನು ತೊರೆದು ಮಲಗಿದೆ.

ಅಸ್ತ್ರವಿದ್ಯೆಯನ್ನು ತಿಳಿದವರು ಯಾರಿದ್ದಾರೆಯೋ ಅವರೆಲ್ಲರನ್ನೂ ನಾನು ಅಸ್ತ್ರಗಳಿಂದಲೇ ಸಂಹರಿಸುತ್ತೇನೆ. ಈ ಕಾರಣದಿಂದಲೇ ನಾನು ಎಲ್ಲ ಲೋಕಗಳನ್ನೂ ಭಸ್ಮೀಭೂತವನ್ನಾಗಿ ಮಾಡಲು ಇಚ್ಛಿಸುತ್ತಿಲ್ಲ. ಕೃಷ್ಣ! ಈಗಲೇ ನಾವಿಬ್ಬರೂ ವಿಜಯಸಂಪಾದಕವಾದ ಮತ್ತು ಭಯಂಕರ ವಾದ ರಥದಲ್ಲಿ ಕುಳಿತು ಸೂತಪುತ್ರನನ್ನು ಸಂಹರಿಸಲು ರಣಾಂಗಣಕ್ಕೆ

ಹೊರಟುಹೋಗೋಣ. ರಾಜನಿಂದು ಸುಖಿಯಾಗಲಿ, ಸಂತುಷ್ಟನಾಗಲಿ. ನಾನು ರಣಾಂಗಣದಲ್ಲಿ ಬಾಣಗಳಿಂದ ಕರ್ಣನನ್ನು ಖಂಡಿತವಾಗಿಯೂ ಸಂಹಾರಮಾಡುತ್ತೇನೆ."

ಮಹಾರಾಜ! ಹೀಗೆ ಪಾರ್ಥನು ತನ್ನ ಗುಣಗಳನ್ನು ತಾನೇ ಹೊಗಳಿಕೊಳ್ಳುತ್ತಾ, ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನನ್ನು ಕುರಿತು ಪುನಃ ಹೇಳಿದನು:

**ಅದ್ಯಾಽಪುತ್ರಾ ಸೂತಮಾತಾ ಭವಿತ್ರೀ**
**ಕುನ್ತೀ ವಾಥೋ ವಾ ಮಯಾ ತೇನ ವಾಪಿ ।**
**ಸತ್ಯಂ ವದಾಮ್ಯದ್ಯ ನ ಕರ್ಣಮಾಜೌ**
**ಶರೈರಹತ್ವಾ ಕವಚಂ ವಿಮೋಕ್ಷ್ಯೇ ॥೩೭॥**

"ಅಣ್ಣ! ಇಂದು ನನ್ನಿಂದ ಕರ್ಣನ ತಾಯಿಯು ಅಪುತ್ರವತಿಯಾಗುತ್ತಾಳೆ. ಅಥವಾ ಕರ್ಣನಾದರೂ ಕುಂತಿಯನ್ನು ಒಬ್ಬ ಮಗನಿಂದ ವಿಹೀನಳನ್ನಾಗಿ ಮಾಡುತ್ತಾನೆ. ನಾನು ಈ ಮಾತನ್ನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಇಂದಿನ ಯುದ್ಧದಲ್ಲಿ ಕರ್ಣನನ್ನು ನಿಶಿತವಾದ ಬಾಣಗಳಿಂದ ಸಂಹರಿಸದೇ ನನ್ನ ಈ ಕವಚವನ್ನು ಬಿಚ್ಚುವುದಿಲ್ಲ."

ಮಹಾರಾಜ! ಪಾರ್ಥನು ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನೊಡನೆ ಹೀಗೆ ಹೇಳಿ, ಶಸ್ತ್ರಾಸ್ತ್ರಗಳನ್ನೂ ಧನುಸ್ಸನ್ನೂ ಕೆಳಗಿಟ್ಟು ಕತ್ತಿಯನ್ನು ಅತಿಶೀಘ್ರವಾಗಿ ಒರೆಯೊಳಗೆ ಸೇರಿಸಿ, ನಾಚಿಕೆಯಿಂದ ನತಶಿರನಾಗಿ ಬದ್ಧಾಂಜಲಿಯಾಗಿ ಪುನಃ ಹೇಳಿದನು:

**ಪ್ರಸೀದ ರಾಜನ್ ಕ್ಷಮ ಯನ್ಮಯೋಕ್ತಂ ।**
**ಕಾಲೇ ಭವಾನ್ವೇತ್ಸ್ಯತಿ ತನ್ನಮಸ್ತೇ ॥೩೯॥**

"ಮಹಾರಾಜ! ಪ್ರಸನ್ನನಾಗು. ನಾನು ಹೇಳಿದುದೆಲ್ಲವನ್ನೂ ಕ್ಷಮಿಸಿಬಿಡು. ಕಾಲವು ಸನ್ನಿಹಿತವಾದಾಗ ನಿನಗೇ ಎಲ್ಲ ವಿಷಯಗಳೂ ತಿಳಿಯುತ್ತವೆ. ನಿನಗೆ ನಮಸ್ಕಾರವಿರಲಿ."

ಧೃತರಾಷ್ಟ್ರಮಹಾರಾಜ! ಶತ್ರುಗಳನ್ನು ಎದುರಿಸುವುದರಲ್ಲಿ ಸಮರ್ಥನಾದ ಯುಧಿಷ್ಠಿರನನ್ನು ಪ್ರಸನ್ನಗೊಳಿಸುತ್ತಾ ನಿಂತಿದ್ದ ವೀರಶ್ರೇಷ್ಠನಾದ

ಅರ್ಜುನನು ಪುನಃ ಧರ್ಮಪುತ್ರನೊಡನೆ ಹೇಳಿದನು: "ಅಣ್ಣ! ಕರ್ಣನ ವಧೆಗೆ ಹೆಚ್ಚು ಕಾಲ ನಿರೀಕ್ಷಿಸಬೇಕಾಗಿಲ್ಲ. ಬಹಳ ಬೇಗ ಆಗಿಹೋಗುತ್ತದೆ. ಅವನ ಸಂಹಾರಕಾಲವು ಸಮೀಪಿಸುತ್ತಿದೆ. ನಾನು ಈಗಲೇ ಹೋಗಿ ಅವನನ್ನು ಆಕ್ರಮಿಸುತ್ತೇನೆ.

ಯಾಮ್ಯೇಷ ಭೀಮಂ ಸಮರಾತ್ಪ್ರಮೋಕ್ತುಂ
ಸರ್ವಾತ್ಮನಾ ಸೂತಪುತ್ರಂ ಚ ಹನ್ತುಮ್ ।
ತವ ಪ್ರಿಯಾರ್ಥಂ ಮಮ ಜೀವಿತಂ ಹಿ
ಬ್ರವೀಮಿ ಸತ್ಯಂ ತದವೇಹಿ ರಾಜನ್ ॥೪೧॥

ಯುದ್ಧದ ಇಕ್ಕಟ್ಟಿನಿಂದ ಭೀಮಸೇನನನ್ನು ಬಿಡಿಸಲು ಮತ್ತು ಸರ್ವಪ್ರಯತ್ನದಿಂದಲೂ ಕರ್ಣನನ್ನು ಸಂಹರಿಸಲು ನಾನು ಈಗಲೇ ಯುದ್ಧಕ್ಕೆ ಹೋಗುತ್ತೇನೆ. ನನ್ನ ಈ ಜೀವಿತವು ನಿನಗೆ ಪ್ರಿಯವನ್ನುಂಟುಮಾಡುವ ಸಲುವಾಗಿಯೇ ಇದೆ. ನಾನು ಸತ್ಯವಾಗಿ ಈ ಮಾತನ್ನು ಹೇಳುತ್ತಿದ್ದೇನೆ. ಅದನ್ನು ನೀನು ತಿಳಿದುಕೋ."

ಮಹಾರಾಜ! ಹೀಗೆ ಹೇಳಿ ರಣರಂಗಕ್ಕೆ ಹೊರಡುವುದರಲ್ಲಿದ್ದ, ಪ್ರದೀಪ್ತವಾದ ತೇಜಸ್ಸಿನಿಂದ ಕೂಡಿದ್ದ ಅರ್ಜುನನು ಯುಧಿಷ್ಠಿರನ ಎರಡು ಕಾಲುಗಳನ್ನೂ ಮುಟ್ಟಿ ನಮಸ್ಕಾರಮಾಡಿ ಎದ್ದು ನಿಂತನು. ಧರ್ಮರಾಜನು ತಮ್ಮನಾದ ಅರ್ಜುನನಾಡಿದ ಅತಿಕಠೋರವಾದ ಮಾತುಗಳನ್ನು ಕೇಳಿ ದುಃಖದಿಂದ ವ್ಯಾಕುಲಚಿತ್ತನಾಗಿ ಹಾಸಿಗೆಯಿಂದ ಮೇಲೆದ್ದು ಅರ್ಜುನನನ್ನು ಕುರಿತು ಹೇಳಿದನು:

ಕೃತಂ ಮಯಾ ಪಾರ್ಥ ಯಥಾ ನ ಸಾಧು
ಯೇನ ಪ್ರಾಪ್ತಂ ವ್ಯಸನಂ ವಃ ಸುಘೋರಮ್ ।
ತಸ್ಮಾಚ್ಛಿರಶ್ಛಿನ್ಧಿ ಮಮೇದಮದ್ಯ
ಕುಲಾನ್ತಕಸ್ಯಾಧಮಪೂರುಷಸ್ಯ ॥೪೩॥
ಪಾಪಸ್ಯ ಪಾಪವ್ಯಸನಾನ್ವಿತಸ್ಯ
ವಿಮೂಢಬುದ್ಧೇರಲಸಸ್ಯ ಭೀರೋಃ ॥೪೪॥

"ನಿಜ, ಅರ್ಜುನ! ನಾನು ಒಳ್ಳೆಯ ಕಾರ್ಯವನ್ನು ಮಾಡಲಿಲ್ಲ.

ಅದರಿಂದಲೇ ನಿಮಗೆ ಸುಘೋರವಾದ ಈ ವ್ಯಸನವು ಪ್ರಾಪ್ತವಾಗಿದೆ. ಆದುದರಿಂದ ಕುಲಾಂತಕನಾದ, ಅಧಮಾಧಮನಾದ, ಪಾಪಿಷ್ಠನಾದ, ಪಾಪವ್ಯಸನದಲ್ಲಿಯೇ (ಪಾಪಕರವಾದ ಜೂಜಾಟದಲ್ಲಿಯೇ) ಸರ್ವದಾ ಆಸಕ್ತನಾಗಿರುವ, ಅತ್ಯಂತಮೂರ್ಖಬುದ್ಧಿಯವನಾದ, ಅಲಸಿಯಾದ, ಹೇಡಿಯಾದ ನನ್ನ ಶಿರಸ್ಸನ್ನು ಈಗಿಂದೀಗಲೇ ಕತ್ತರಿಸಿಬಿಡು.

ವೃದ್ಧಾವಮನ್ತುಃ ಪರುಷಸ್ಯ ಚೈವ
ಕಿಂ ತೇ ಚಿರಂ ಮೇ ಹ್ಯನುಸೃತ್ಯ ರೂಕ್ಷಮ್ ।
ಗಚ್ಛಾಮ್ಯಹಂ ವನಮೇವಾದ್ಯ ಪಾಪಃ
ಸುಖಂ ಭವಾನ್ವರ್ತತಾಂ ಮದ್ವಿಹೀನಃ ॥೪೫॥

ನಾನು ವೃದ್ಧರನ್ನು ಅನಾದರಣೆಮಾಡತಕ್ಕವನು. ಅತಿಕ್ರೂರಿಯು. ಕಠಿಣಪ್ರವೃತ್ತಿಯವನಾದ ನನ್ನ ಕಠಿಣವಾಕ್ಯಗಳನ್ನು ನಿರಂತರವೂ ಅನುಸರಣೆ ಮಾಡುವುದರಿಂದ ನಿನಗೆ ಆಗಬೇಕಾದ್ದೇನಿದೆ? ಪಾಪಿಷ್ಠನಾದ ನಾನು ಈ ಕೂಡಲೇ ಅರಣ್ಯಕ್ಕೆ ಹೊರಟುಹೋಗುತ್ತೇನೆ. ನನ್ನ ಕಾಟವಿಲ್ಲದೇ ನೀನು ಮುಂದಾದರೂ ಸುಖವಾಗಿ ಬಾಳಿ ಬದುಕಿಕೊಂಡಿರು.

ಯೋಗ್ಯೋ ರಾಜಾ ಭೀಮಸೇನೋ ಮಹಾತ್ಮಾ
ಕ್ಲೀಬಸ್ಯ ವಾ ಮಮ ಕಿಂ ರಾಜ್ಯಕೃತ್ಯಮ್ ।
ನ ಚಾಪಿ ಶಕ್ತಃ ಪರುಷಾಣಿ ಸೋಢುಂ
ಪುನಸ್ತವೇಮಾನಿ ರುಷಾನ್ವಿತಸ್ಯ ॥೪೬॥

ನೀನು ಹೇಳಿದಂತೆಯೇ ಮಹಾತ್ಮನಾದ ಭೀಮಸೇನನು ರಾಜನಾಗಲು ಯೋಗ್ಯನಾಗಿದ್ದಾನೆ. ನಪುಂಸಕನಾದ ನನಗೆ ರಾಜ್ಯಭಾರದ ಗೊಡವೆಯೇಕೆ? ಕೋಪಿಷ್ಠನಾದ ನಿನ್ನ ಇಂತಹ ಕಠೋರವಾದ ಮಾತುಗಳನ್ನು ಪುನಃ ಸಹಿಸಿಕೊಳ್ಳಲೂ ನನಗೆ ಶಕ್ತಿಯಿಲ್ಲ.

ಭೀಮೋಽಸ್ತು ರಾಜಾ ಮಮ ಜೀವಿತೇನ
ನ ಕಾರ್ಯಮದ್ಯಾವಮತಸ್ಯ ವೀರ ॥೪೭॥

ವೀರ ಅರ್ಜುನನೇ! ಭೀಮನೇ ರಾಜನಾಗಲಿ. ಇಷ್ಟು ಅವಮಾನಿತ ನಾದನಂತರವೂ ಜೀವದಿಂದ ಉಳಿದಿರುವ ಅವಶ್ಯಕತೆಯೂ ನನಗಿರುವುದಿಲ್ಲ.”

ಯುಧಿಷ್ಠಿರನು ಹೀಗೆ ಹೇಳುತ್ತಾ ಹಾಸಿಗೆಯನ್ನು ಬಿಟ್ಟು ಕೆಳಕ್ಕೆ ಇಳಿದನು. ಅರಣ್ಯಕ್ಕೆ ಹೋಗಲಿಚ್ಛಿಸಿ ಹೊರಡಲನುವಾದನು. ಯುಧಿಷ್ಠಿರನ ವರ್ತನೆಯಿಂದ ಚಕಿತನಾದ ಶ್ರೀಕೃಷ್ಣನು ಅವನಿಗೆ ನಮಸ್ಕಾರಮಾಡಿ, ಸಮಾಧಾನಗೊಳಿಸುತ್ತಾ ಈ ಮಾತುಗಳನ್ನು ಹೇಳಿದನು:

**ರಾಜಾನ್ವಿದಿತಮೇತದ್ವೈ ಯಥಾ ಗಾಣ್ಡೀವಧನ್ವನಃ ।**
**ಪ್ರತಿಜ್ಞಾ ಸತ್ಯಸಂಧಸ್ಯ ಗಾಣ್ಡೀವಂ ಪ್ರತಿ ವಿಶ್ರುತಾ ॥೬೯॥**

"ಯುಧಿಷ್ಠಿರಮಹಾರಾಜ! ಗಾಂಡೀವಧರನಾದ, ಸತ್ಯಪ್ರತಿಜ್ಞನಾದ ಅರ್ಜುನನು ಗಾಂಡೀವಧನುಸ್ಸಿನ ವಿಷಯದಲ್ಲಿ ಮಾಡಿದ್ದ ಪ್ರತಿಜ್ಞೆಯು ನಿನಗೂ ತಿಳಿದೇ ಇದ್ದಿತು ಮತ್ತು ಇವನ ಆ ಪ್ರತಿಜ್ಞೆಯು ಎಲ್ಲ ಕಡೆಗಳಲ್ಲಿಯೂ ಪ್ರಸಿದ್ಧಿಯನ್ನು ಹೊಂದಿದ್ದಿತು.

'**ಗಾಣ್ಡೀವಮನ್ಯಸ್ಮೈ ದೇಯಂ**–ಗಾಂಡೀವವು ಬೇರೆಯವರಿಗೆ ಕೊಡಲ್ಪಡಬೇಕು. ಅಥವಾ ಗಾಂಡೀವಧನುಸ್ಸನ್ನು ನಿನಗಿಂತಲೂ ವೀರರಾದವರಿಗೆ ಕೊಟ್ಟುಬಿಡು'–ಎಂದು ಯಾರಾದರೂ ಹೇಳಿದರೆ ಅಂತಹವರನ್ನು ವಧಿಸುತ್ತೇನೆಂದು ಅರ್ಜುನನು ಪ್ರತಿಜ್ಞೆಮಾಡಿದ್ದನು. ಅದರಂತೆ ಹೀಗೆ ಹೇಳಿದವನನ್ನು ಅರ್ಜುನನು ವಧಿಸುವುದು ಅನಿವಾರ್ಯವಾಗಿದ್ದಿತು. ನಿನಗೆ ಅರ್ಜುನನು ಮಾಡಿದ ಪ್ರತಿಜ್ಞೆಯು ತಿಳಿದಿದ್ದರೂ ನೀನೇ ಈ ಮಾತನ್ನು ಅವನೊಡನೆ ಹೇಳಿದೆ. ಹಿಂದೆ ಪಾರ್ಥನು ಮಾಡಿದ್ದ ಪ್ರತಿಜ್ಞೆಯನ್ನೂ ಮತ್ತು ಇಂದು ನಿನ್ನ ಪ್ರಾಣವನ್ನೂ ಉಳಿಸುವುದು ನನ್ನ ಕರ್ತವ್ಯವಾಯಿತು. ನಿನ್ನನ್ನು ಸಂಹರಿಸುವ ಬದಲಾಗಿ ನನ್ನ ಇಷ್ಟದಂತೆಯೇ ಅರ್ಜುನನು ನಿನ್ನನ್ನು ಅಪಮಾನಗೊಳಿಸಿದನು.

**ಗುರೂಣಾಮವಮಾನೋ ಹಿ ವಧ ಇತ್ಯಭಿಧೀಯತೇ ॥೭೨॥**

ಗುರುಜನರಿಗೆ ಸಂಭವಿಸುವ ಅವಮಾನವು ಅವರ ವಧೆಯೇ ಆದಂತಾಗುವುದೆಂದು ಹೇಳುತ್ತಾರೆ. ಆದುದರಿಂದ, ಮಹಾಬಾಹುವೇ! ಸತ್ಯದ ಸಂರಕ್ಷಣಾರ್ಥವಾಗಿ ಮಾಡಿದ ನನ್ನ ಮತ್ತು ಅರ್ಜುನನ ಈ ಅಪರಾಧವನ್ನು ಕ್ಷಮಿಸು.

**ಶರಣಂ ತ್ವಾಂ ಮಹಾರಾಜ ಪ್ರಪನ್ನೌ ಸ್ವ ಉಭಾವಪಿ ।**
**ಕ್ಷನ್ತುಮರ್ಹಸಿ ಮೇ ರಾಜನ್ಪ್ರಣತಸ್ಯಾಭಿಯಾಚತಃ ॥೫೩॥**

ನಾವಿಬ್ಬರೂ ನಿನಗೆ ಶರಣಾಗತರಾಗಿದ್ದೇವೆ. ಶರಣಾಗತರಾಗಿ ನಿನ್ನ ಪಾದಗಳನ್ನು ಮುಟ್ಟಿ ಬೇಡಿಕೊಳ್ಳುತ್ತಿರುವ ನಮ್ಮನ್ನು ಕ್ಷಮಿಸುವುದು ನಿನಗೆ ಉಚಿತವಾಗಿದೆ.

ಪಾಪಿಷ್ಠನಾದ ರಾಧೇಯನ ರಕ್ತವನ್ನು ಭೂಮಿಯಿಂದು ಕುಡಿಯುತ್ತದೆ. ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಇಂದು ಕರ್ಣನು ಹತನಾದನೆಂದೇ ಭಾವಿಸು. ನೀನು ಯಾರ ವಧೆಯನ್ನು ಇಚ್ಛಿಸಿರುವೆಯೋ– ಅವನ ಆಯುಷ್ಯವೂ ಈಗಾಗಲೇ ಮುಗಿದು ಹೋಗಿದೆ."

ಧೃತರಾಷ್ಟ್ರಮಹಾರಾಜ! ಶ್ರೀಕೃಷ್ಣನು ಹೇಳಿದ ಈ ಮಾತುಗಳನ್ನು ಕೇಳಿ, ಯುಧಿಷ್ಠಿರನು ಕಾಲುಗಳನ್ನು ಹಿಡಿದುಕೊಂಡಿದ್ದ ಕೇಶವನನ್ನು ಸಂಭ್ರಮದಿಂದ ಹಿಡಿದೆತ್ತಿ, ಬದ್ಧಾಂಜಲಿಯಾಗಿ ಕೃಷ್ಣನೊಡನೆ ಈ ಮಾತುಗಳನ್ನು ಹೇಳಿದನು:

"ಗೋವಿಂದ! ನೀನು ಹೇಳಿದಂತೆಯೇ ಸರಿ. ಪ್ರತಿಜ್ಞೆಯ ವಿಷಯವು ನನಗೆ ತಿಳಿದಿದ್ದರೂ ನಾನೇ ನಿಯಮವನ್ನು ಉಲ್ಲಂಘಿಸಿದೆನು. ಇದು ನನ್ನ ಅಪರಾಧವೇ ಸರಿ. ನಾನು ಸಮಾಧಾನಗೊಂಡಿದ್ದೇನೆ. ಮಾಧವ! ನನ್ನನ್ನು ನೀನಿಂದು ಉದ್ಧರಿಸಿದೆ. ಅಚ್ಯುತನೇ! ನಮ್ಮೆಲ್ಲರನ್ನೂ ನೀನು ಮಹಾವ್ಯಸನದಿಂದ ಪಾರುಮಾಡಿರುವೆ.

**ಭವನ್ತಂ ನಾಥಮಾಸಾದ್ಯ ಹ್ಯಾವಾಂ ವ್ಯಸನಸಾಗರಾತ್ ।**
**ಘೋರಾದದ್ಯ ಸಮುತ್ತೀರ್ಣಾವುಭಾವಜ್ಞಾನಮೋಹಿತೌ ॥೫೯॥**

**ತ್ವದ್ಬುದ್ಧಿಪ್ಲವಮಾಸಾದ್ಯ ದುಃಖಶೋಕಾರ್ಣವಾದ್ವಯಮ್ ।**
**ಸಮುತ್ತೀರ್ಣಾಃ ಸಹಾಮಾತ್ಯಾಃ ಸನಾಥಾಃ ಸ್ಮ ತ್ವಯಾಚ್ಯುತ ॥೬೦॥**

ಅಚ್ಯುತನೇ! ಇಂದು ಅಜ್ಞಾನದಿಂದ ವಿಮೋಹಿತರಾಗಿದ್ದ ನಾವಿಬ್ಬರೂ ನಿನ್ನನ್ನು ನಾಥನನ್ನಾಗಿ ಪಡೆದುಕೊಂಡ ಸುಯೋಗದಿಂದಾಗಿ ಘೋರವಾದ

ವ್ಯಸನಸಾಗರದಿಂದ ಪಾರಾಗಿದ್ದೇವೆ. ದುಃಖ-ಶೋಕರೂಪವಾದ ಸಮುದ್ರವನ್ನು ನಿನ್ನ ಬುದ್ಧಿಯನ್ನೇ ನಾವೆಯನ್ನಾಗಿ ಮಾಡಿಕೊಂಡು ಅಮಾತ್ಯ-



ಬಂಧು-ಮಿತ್ರ-ಕಳತ್ರ-ಪುತ್ರಸಹಿತರಾಗಿ ದಾಟಿದೆವು. ಅಚ್ಯುತ! ನಿಶ್ಚಯವಾಗಿಯೂ ನಾವು ನಿನ್ನಿಂದಲೇ ಸನಾಥರಾದೆವು."

೭೦ನೆಯ ಅಧ್ಯಾಯವು ಮುಗಿಯಿತು.

೭೧ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನಿಗೆ ಶ್ರೀಕೃಷ್ಣನ ಉಪದೇಶ: ಯುಧಿಷ್ಠಿರಾರ್ಜುನರು ಮೊದಲಿನಂತೆ ಸೌಮನಸ್ಯದಿಂದ ವ್ಯವಹರಿಸಿದುದು: ಅರ್ಜುನನು ಕರ್ಣನನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದುದು: ಯುಧಿಷ್ಠಿರನ ಆಶೀರ್ವಾದ

ಸಂಜಯನು ಧೃತರಾಷ್ಟ್ರನೊಡನೆ ಹೇಳುತ್ತಾನೆ:

"ಮಹಾರಾಜ! ಧರ್ಮರಾಜನ ಪ್ರೀತಿಯುಕ್ತವಾದ ಮಾತುಗಳನ್ನು ಕೇಳಿ ಧರ್ಮಾತ್ಮನಾದ ಯದುನಂದನನಾದ ಗೋವಿಂದನು ಅರ್ಜುನನೊಡನೆ ಸಮಾಧಾನದ ಮಾತುಗಳನ್ನು ಹೇಳಿದನು. ಆದರೆ ಶ್ರೀಕೃಷ್ಣನು ಹೇಳಿದ ನೆಂಬ ಕಾರಣದಿಂದ ಯುಧಿಷ್ಠಿರನನ್ನು ಕುರಿತು ತಿರಸ್ಕಾರಪೂರ್ಣವಾದ ಮಾತುಗಳನ್ನು ಹೇಳಿದುದಕ್ಕಾಗಿ ಪಾರ್ಥನು ಸ್ವಲ್ಪ ಪಾಪವನ್ನು ಮಾಡಿಬಿಟ್ಟೆ ನೆಂಬ ಭಾವನೆಯಿಂದ ಖಿನ್ನಮನಸ್ಕನಾಗಿದ್ದನು. ಅದನ್ನು ಕಂಡು ವಾಸು ದೇವನು ನಸುನಗುತ್ತಾ ಹೇಳಿದನು:

"ಅರ್ಜುನ! ನೀನು ಯುಷ್ಮಚ್ಛಬ್ದಪ್ರಯೋಗದಿಂದ ರಾಜನನ್ನು ನಿರ್ದೇಶಿಸಿದುದಕ್ಕಾಗಿಯೇ ('ನೀನು' ಎಂದು ಧರ್ಮರಾಜನನ್ನು ಕುರಿತು ಹೇಳಿದುದಕ್ಕಾಗಿಯೇ) ಇಷ್ಟೊಂದು ದುಃಖತಪ್ತನಾಗಿರುವಾಗ ಧರ್ಮ ದಲ್ಲಿಯೇ ನಿಷ್ಠನಾಗಿರುವ ಧರ್ಮರಾಜನನ್ನು ತೀಕ್ಷ್ಣವಾದ ಅಲುಗಿನಿಂದ ಕೂಡಿದ ಕತ್ತಿಯಿಂದ ಕತ್ತರಿಸಿಯೇ ಬಿಟ್ಟಿದ್ದರೆ–ಆಗ ನಿನ್ನ ಸ್ಥಿತಿಯು ಏನಾಗು ತ್ತಿದ್ದಿತು? ನೀನು ರಾಜನನ್ನು ಸಂಹರಿಸಿದ ಬಳಿಕ ಏನು ಮಾಡುತ್ತಿದ್ದೆ? ಆದುದರಿಂದ ಧರ್ಮದ ಗತಿಯು ತಿಳಿಯಲು ಕಷ್ಟಸಾಧ್ಯವಾದುದು. ಅದ ರಲ್ಲಿಯೂ ವಿಶೇಷವಾಗಿ ಮಂದಬುದ್ಧಿಯವರಿಗೆ ಧರ್ಮದ ರಹಸ್ಯವನ್ನು ತಿಳಿದುಕೊಳ್ಳುವ ಸಾಧ್ಯತೆಯೂ ಇಲ್ಲ. ನೀನು ಧರ್ಮಭೀರುವಾಗಿರುವುದ ರಿಂದ ಹಿರಿಯಣ್ಣನ ವಧೆಯಿಂದಾಗಿ ಘೋರನರಕರೂಪವಾದ ನರಕದಲ್ಲಿಯೂ ಬೀಳುತ್ತಿದ್ದೆ; ಮಹಾವ್ಯಸನವೆಂಬ ಗಾಢಾಂಧಕಾರದಲ್ಲಿಯೂ ಮುಳುಗಿ ಹೋಗುತ್ತಿದ್ದೆ. ಈಗ ನೀನು ಧರ್ಮಾತ್ಮರಲ್ಲಿ ಶ್ರೇಷ್ಠನಾದ, ಧರ್ಮಪರಾ ಯಣನಾದ, ಕುರುಶ್ರೇಷ್ಠನಾದ ಧರ್ಮರಾಜನನ್ನು ಪ್ರಸನ್ನಗೊಳಿಸ

ಬೇಕೆಂಬುದು ನನ್ನ ಅಭಿಪ್ರಾಯವಾಗಿದೆ. ಯುಧಿಷ್ಠಿರನನ್ನು ಭಕ್ತಿಭಾವದಿಂದ ಪ್ರಸನ್ನಗೊಳಿಸಿ ಅವನು ಸುಪ್ರೀತನಾದ ಬಳಿಕ ಕರ್ಣನೊಡನೆ ಯುದ್ಧಮಾಡಲು ಅವನ ರಥದ ಬಳಿಗೆ ತ್ವರೆಯಿಂದ ಹೋಗೋಣ. ಮಾನದನೇ! ಇಂದು ನೀನು ಸೂತಪುತ್ರನನ್ನು ನಿಶಿತವಾದ ಬಾಣಗಳಿಂದ ಸಂಹರಿಸಿ ಧರ್ಮಪುತ್ರನಿಗೆ ಅತೀವಸಂತೋಷವನ್ನುಂಟುಮಾಡು. ನಾನು ಹೇಳಿದಂತೆ ಮಾಡಲು ಇದು ಸಕಾಲವಾಗಿದೆ. ನಾನು ಹೇಳಿದಂತೆ ನೀನು ಮಾಡಿದೆಯಾದರೆ ನಿನ್ನ ಎಲ್ಲ ಕಾರ್ಯಗಳೂ ಸಿದ್ಧಿಸಿದಂತೆಯೇ ಸರಿ."



ಮಹಾರಾಜ! ಶ್ರೀಕೃಷ್ಣನ ಮಾತುಗಳನ್ನು ಕೇಳಿ ಅರ್ಜುನನು ನಾಚಿಕೆಯಿಂದ ಕೂಡಿದವನಾಗಿ ಧರ್ಮರಾಜನ ಕಾಲುಗಳೆರಡನ್ನೂ ಹಿಡಿದು ತಲೆಬಾಗಿ ನಮಸ್ಕರಿಸಿದನು. ಭರತಶ್ರೇಷ್ಠನಾದ ಯುಧಿಷ್ಠಿರನಿಗೆ

"ಪ್ರಸನ್ನನಾಗು ಮಹಾರಾಜ! ನನ್ನನ್ನು ಕ್ಷಮಿಸಿಬಿಡು. ಧರ್ಮವನ್ನು ಪಾಲಿಸುವ ಇಚ್ಛೆಯಿಂದ ಧರ್ಮಭೀರುವಾದ ನಾನು ನಿನ್ನ ವಿಷಯದಲ್ಲಿ ಏನೇನು ಹೇಳಿದೆನೋ ಅವುಗಳೆಲ್ಲವನ್ನೂ ಕ್ಷಮಿಸು"–ಎಂದು ಪುನಃ ಪುನಃ ಹೇಳಿದನು. ತನ್ನ ಕಾಲುಗಳೆರಡನ್ನೂ ಭದ್ರವಾಗಿ ಹಿಡಿದುಕೊಂಡು 'ಕ್ಷಮಿಸಣ್ಣ!' ಎಂದು ದೈನ್ಯದಿಂದ ಪ್ರಾರ್ಥಿಸುತ್ತಾ ಬಿಕ್ಕಿ-ಬಿಕ್ಕಿ ಅಳುತ್ತಿದ್ದ ಶತ್ರುಹಂತಕನಾದ ಧನಂಜಯನನ್ನು ನೋಡಿ, ಮಹೀಪತಿಯಾದ ಯುಧಿಷ್ಠಿರನು ತಮ್ಮನ ತೋಳುಗಳೆರಡನ್ನೂ ಹಿಡಿದು ಮೇಲೆತ್ತಿ ಸ್ನೇಹಪೂರ್ವಕವಾಗಿ ಗಾಢಾಲಿಂಗನ ಮಾಡಿಕೊಂಡು ಗಳ-ಗಳನೆ ಅತ್ತುಬಿಟ್ಟನು. ಬಹಳ ಹೊತ್ತಿನವರೆಗೆ ಧಾರಾಕಾರವಾಗಿ ಕಣ್ಣೀರನ್ನು ಸುರಿಸುತ್ತಲೇ ಇದ್ದ ಮಹಾದ್ಯುತಿಮಂತರಾದ ಪಾಂಡವಸಹೋದರರು ಹೃದಯಕಲ್ಮಷವನ್ನು ತೊಳೆದುಕೊಂಡು ಪರಸ್ಪರ ಪ್ರೀತಿಯುಕ್ತರಾದರು. ಪ್ರೇಮಪೂರ್ಣವಾಗಿ ಅರ್ಜುನನನ್ನು ಆಲಿಂಗಿಸಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಅತ್ಯಂತಪ್ರೀತಿಯಿಂದ ಕೂಡಿದ್ದ ಯುಧಿಷ್ಠಿರನು ನಡೆದುಹೋದ ವಿಷಯವನ್ನು ಸ್ಮರಿಸಿಕೊಂಡು ವಿಸ್ಮಯಪಡುತ್ತಾ ಮಹಾಧನುಷ್ಮಂತನಾದ ಅರ್ಜುನನೊಡನೆ ಹೇಳಿದನು:

"ಮಹಾಬಾಹುವೇ! ಅರ್ಜುನ! ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಕರ್ಣನು ನಿಶಿತವಾದ ಬಾಣಗಳಿಂದ ಪ್ರಯತ್ನಪೂರ್ವಕವಾಗಿ ಯುದ್ಧ ಮಾಡುತ್ತಿದ್ದ ನನ್ನ ಕವಚ, ಧ್ವಜ, ಧನುಸ್ಸು, ಶಕ್ತ್ಯಾಯುಧ, ಕುದುರೆಗಳು, ಬಾಣಗಳು–ಎಲ್ಲವನ್ನೂ ಕತ್ತರಿಸಿಹಾಕಿದನು. ರಣಾಂಗಣದಲ್ಲಿ ಅವನು ಮಾಡಿದ ಸಾಹಸಕರ್ಮವನ್ನು ನೋಡಿ ಮತ್ತು ಅವನಲ್ಲಿರುವ ಅತುಲಪರಾಕ್ರಮವನ್ನು ಮನಗಂಡು ಕೃಶನಾಗುತ್ತಿದ್ದೇನೆ. ಜೀವನವೇ ನನಗಿಂದು ಬೇಕೆನಿಸುತ್ತಿಲ್ಲ. ಬದುಕಿರುವುದೇ ಬೇಡವಾಗಿದೆ. ವೀರನೇ! ನೀನೇನಾದರೂ ಇಂದು ಆ ಕರ್ಣನನ್ನು ಯುದ್ಧದಲ್ಲಿ ಸಂಹರಿಸದಿದ್ದರೆ ನಾನು ನನ್ನ ಪ್ರಾಣಗಳನ್ನೇ ಪರಿತ್ಯಜಿಸುತ್ತೇನೆ. ಮುಂದೆ ನಾನು ಬದುಕಿರುವುದರಿಂದ ಯಾವ ಪ್ರಯೋಜನವಿದೆ?"

ಮಹಾರಾಜ! ಯುಧಿಷ್ಠಿರನು ಹೀಗೆ ಹೇಳಿದನಂತರ ವಿಜಯನು ಪ್ರತ್ಯುತ್ತರಿಸಿದನು:

"ಮಹಾರಾಜ! ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಿನ್ನ

ಅನುಗ್ರಹದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಭೀಮ-ನಕುಲ-ಸಹದೇವರ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಆಯುಧವನ್ನು ಹಿಡಿದು ಪ್ರತಿಜ್ಞೆ ಮಾಡುತ್ತೇನೆ. ಇಂದು ನಾನು ಯುದ್ಧದಲ್ಲಿ ಕರ್ಣನನ್ನು ಸಂಹರಿಸುತ್ತೇನೆ. ಅಥವಾ ಅವನಿಂದ ಹತನಾಗಿ ಭೂಮಿಯ ಮೇಲೆ ಬೀಳುತ್ತೇನೆ.”

ಮಹಾರಾಜ! ಹೀಗೆ ಅರ್ಜುನನು ರಾಜನೊಡನೆ ಹೇಳಿದ ಬಳಿಕ ಮಾಧವನೊಡನೆ ಹೇಳಿದನು:

“ಕೃಷ್ಣ! ಇಂದು ನಾನು ಯುದ್ಧದಲ್ಲಿ ಕರ್ಣನನ್ನು ಸಂಹರಿಸುತ್ತೇನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ನಿನಗೆ ಮಂಗಳವಾಗಲಿ. ದುರಾತ್ಮನಾದ ಕರ್ಣನ ವಧೆಯು ನಿನ್ನ ಬುದ್ಧಿಯಿಂದಲೂ ನಿಶ್ಚಯಮಾಡಲ್ಪಟ್ಟಿದೆ. (ನೀನೂ ಸಹ ಅವನ ವಧೆಯು ಇಂದೇ ಆಗುವುದೆಂದು ನಿಶ್ಚಯಿಸಿರುವೆ. ನಿನ್ನ ಬುದ್ಧಿಯಿಂದಲೇ ಅವನ ವಧೆಯು ಸಾಧ್ಯವಾಗುತ್ತದೆ.”)

ರಾಜಶ್ರೇಷ್ಠನೇ! ಅರ್ಜುನನು ಹೀಗೆ ಹೇಳಿದನಂತರ ಕೇಶವನು ಅರ್ಜುನನಿಗೆ ಹೀಗೆ ಹೇಳಿದನು:

“ಭರತಶ್ರೇಷ್ಠನೇ! ಮಹಾಬಲನಾದ ಕರ್ಣನನ್ನು ಸಂಹರಿಸಲು ನೀನು ಸಮರ್ಥನಾಗಿರುವೆ. ಮಹಾರಥನೇ! ನೀನು ಕರ್ಣನನ್ನು ಸಂಹರಿಸ ಬೇಕೆಂಬುದೇ ನನ್ನ ಅನುದಿನದ ಬಯಕೆಯಾಗಿದೆ. ‘ಅರ್ಜುನನು ಕರ್ಣನನ್ನು ಹೇಗೆ ಸಂಹರಿಸುತ್ತಾನೆ?’–ಎಂಬುದೇ ನನ್ನ ಅನುದಿನದ ಚಿಂತನೆಯೂ ಆಗಿದೆ.”

ಧೃತರಾಷ್ಟ್ರಮಹಾರಾಜ! ಅರ್ಜುನನೊಡನೆ ಹೀಗೆ ಹೇಳಿದ ಮಾಧವನು ಪುನಃ ಯುಧಿಷ್ಠಿರನ ಕಡೆಗೆ ತಿರುಗಿ ಹೇಳಿದನು; “ಯುಧಿಷ್ಠಿರ! ಅರ್ಜುನನನ್ನು ನೀನು ಸಂತಯಿಸು. ದುರಾತ್ಮನಾದ ಕರ್ಣನನ್ನು ಸಂಹರಿಸಲು ಅರ್ಜುನನಿಗೆ ಆಜ್ಞೆಮಾಡು. ನೀನು ಕರ್ಣನ ಬಾಣಗಳಿಂದ ಪೀಡಿತನಾದೆಯೆಂಬುದನ್ನು ನಾನೂ ಮತ್ತು ಅರ್ಜುನನೂ ಕೇಳಿದೆವು. ಶರಪೀಡಿತನಾದ ನಿನ್ನ ಸಮಾಚಾರವನ್ನು ತಿಳಿಯುವ ಸಲುವಾಗಿಯೇ ನಾವು ಇಲ್ಲಿಗೆ ಬಂದೆವು.

**ದಿಷ್ಟ್ಯಾಸಿ ರಾಜನ್ನ ಹತೋ ದಿಷ್ಟ್ಯಾ ನ ಗ್ರಹಣಂ ಗತಃ ।**

**ಪರಿಸಾನ್ತ್ವಯ ಬೀಭತ್ಸುಂ ಜಯಮಾಶಾಧಿ ಚಾನಘ ॥೨೯॥**

ಅದೃಷ್ಟವಶಾತ್ ನೀನು ಕರ್ಣನ ಬಾಣಗಳಿಂದ ಹತನಾಗಲಿಲ್ಲ. ದೈವಯೋಗದಿಂದಲೇ ನೀನು ಅವನ ಬಂದಿಯೂ ಆಗಲಿಲ್ಲ. ಈಗ ನೀನು ಅರ್ಜುನನನ್ನು ಸಂತಯಿಸು. ಜಯಗಳಿಸುವಂತೆ ಆಶೀರ್ವದಿಸು."

ಶ್ರೀಕೃಷ್ಣನ ಸಲಹೆಯಂತೆ ಯುಧಿಷ್ಠಿರನು ಅರ್ಜುನನಿಗೆ ಹೇಳಿದನು:

"ಬಾ, ಅರ್ಜುನ! ನನ್ನ ಬಳಿಗೆ ಬಾ. ನನ್ನನ್ನು ಬಾಚಿ ತಬ್ಬಿಕೊ. ನಿಂದ್ಯವಾದರೂ ಹಿತಕರವಾದ ಮಾತುಗಳನ್ನೇ ನೀನು ನನ್ನೊಡನೆ ಆಡಿರುವೆ. ಈ ಕಾರಣದಿಂದಲೇ ನಿನ್ನನ್ನು ಸಂಪೂರ್ಣವಾಗಿ ಕ್ಷಮಿಸಿದ್ದೇನೆ. ನಾನು ನಿನಗೆ ಆಜ್ಞೆಮಾಡುತ್ತಿದ್ದೇನೆ. ನೀನು ಈಗಲೇ ರಣಭೂಮಿಗೆ ಹೋಗಿ ಕರ್ಣನನ್ನು ಸಂಹರಿಸು. ಮತ್ತೊಂದು ಮಾತೂ ಹೇಳುವುದಿದೆ. ನಾನು ನಿನ್ನ ವಿಷಯದಲ್ಲಿ ಅತಿದಾರುಣವಾದ ಮತ್ತು ನಿಷ್ಠುರವಾದ ಮಾತುಗಳನ್ನಾಡಿದ್ದೇನೆ. ಅದಕ್ಕಾಗಿ ನೀನೂ ಕೋಪಿಸಿಕೊಳ್ಳಬೇಡ."

ಮಹಾರಾಜ! ಅಣ್ಣನು ಹೀಗೆ ಹೇಳಿದನಂತರ ಪಾರ್ಥನು ಹಿರಿಯಣ್ಣನ ಕಾಲುಗಳನ್ನು ತನ್ನೆರಡು ಕೈಗಳಿಂದಲೂ ಹಿಡಿದುಕೊಂಡು ತಲೆಬಾಗಿ ನಮಸ್ಕರಿಸಿದನು. ಯುಧಿಷ್ಠಿರನು ಮನಸ್ಸಿನಲ್ಲಿ ಬಹಳವಾಗಿ ನೊಂದಿದ್ದ ಅರ್ಜುನನ ಎರಡು ಭುಜಗಳನ್ನೂ ಹಿಡಿದು ಮೇಲೆತ್ತಿ ಆಲಿಂಗಿಸಿಕೊಂಡು ಅವನ ತಲೆಯನ್ನು ಆಘ್ರಾಣಿಸಿ ಪುನಃ ಅವನೊಡನೆ ಈ ಮಾತುಗಳನ್ನು ಹೇಳಿದನು:

"ಮಹಾಬಾಹುವೇ! ಧನಂಜಯ! ನೀನು ನನ್ನನ್ನು ಬಹಳವಾಗಿ ಗೌರವಿಸಿರುವೆ. ನಿನ್ನ ಮಹಿಮೆಯು ವೃದ್ಧಿಸಲಿ. ನೀನು ಶಾಶ್ವತಕೀರ್ತಿ ಯುಕ್ತವಾದ ವಿಜಯವನ್ನು ಗಳಿಸು."

"ಮಹಾರಾಜ! ಈಗಲೇ ನಾನು ಮಹಾಗರ್ವಿತನಾಗಿರುವ ರಾಧೇಯನ ಬಳಿಗೆ ಹೋಗಿ ಪಾಪಕರ್ಮನಾದ ಅವನನ್ನು ಅವನ ಅನುಯಾಯಿಗಳೊಡನೆ ನಿಶಿತವಾದ ಬಾಣಗಳಿಂದ ಕಡೆಗಾಣಿಸುತ್ತೇನೆ. ಯಾವನು ತನ್ನ ಧನುಸ್ಸನ್ನು ಸುದೃಢವಾಗಿ ಬಗ್ಗಿಸಿ ಬಾಣಗಳಿಂದ ನಿನ್ನನ್ನು ಬಹಳವಾಗಿ ಪೀಡಿಸಿದನೋ–ಆ ಕರ್ಣನು, ತಾನು ಮಾಡಿದ ಕರ್ಮಕ್ಕೆ

ಸುದಾರುಣವಾದ ಫಲವನ್ನೇ ಪಡೆಯುತ್ತಾನೆ. ಇಂದು ನಾನು ಕರ್ಣನನ್ನು ವಧೆಮಾಡಿದನಂತರವೇ ನಿನ್ನನ್ನು ಸಂದರ್ಶಿಸಲು ಬರುತ್ತೇನೆ. ನಿನ್ನನ್ನು ಅಭಿನಂದಿಸುವ ಸಲುವಾಗಿಯೇ ಯುದ್ಧಸ್ಥಳದಿಂದ ನಾನು ಇಲ್ಲಿಗೆ ಬರುತ್ತೇನೆ. ಕರ್ಣನನ್ನು ವಧಿಸದೇ ಇಂದು ಸಮರಾಂಗಣದಿಂದ ಹಿಂದಿರುಗುವುದಿಲ್ಲ. ಹೀಗೆ ಸತ್ಯಶಪಥಮಾಡಿ ನಿನ್ನ ಕಾಲುಗಳನ್ನು ಮುಟ್ಟುತ್ತಿದ್ದೇನೆ.”



ಧೃತರಾಷ್ಟ್ರಮಹಾರಾಜ! ಹೀಗೆಂದು ಹೇಳಿದ ಕಿರೀಟಿಯನ್ನು ಕುರಿತು ಪ್ರಸನ್ನಮನಸ್ಕನಾದ ಯುಧಿಷ್ಠಿರನು ಮಹತ್ತ್ವಪೂರ್ಣವಾದ ಈ ಮಾತನ್ನು ಹೇಳಿದನು:

**ಯಶೋಽಕ್ಷಯಂ ಜೀವಿತಮೀಪ್ಸಿತಂ ತೇ**
**ಜಯಂ ಸದಾ ವೀರ್ಯಮರಿಕ್ಷಯಂ ತದಾ ॥೬೯॥**

“ವೀರನೇ! ನಿನಗೆ ಶಾಶ್ವತವಾದ ಯಶಸ್ಸು ಲಭಿಸಲಿ. ಪೂರ್ಣಾಯುಷ್ಯವುಂಟಾಗಲಿ. ನಿನ್ನ ಮನಸ್ಸಿನ ಕಾಮನೆಗಳೆಲ್ಲವೂ ಪೂರ್ಣಗೊಳ್ಳಲಿ. ಸರ್ವಕಾಲದಲ್ಲಿಯೂ ನಿನಗೆ ವಿಜಯವು ಲಭಿಸಲಿ. ಶತ್ರುಗಳನ್ನು ನಾಶಗೊಳಿಸುವ ವೀರ್ಯವು ನಿನ್ನಲ್ಲಿ ಪ್ರತಿಷ್ಠಿತವಾಗಲಿ.

ಪ್ರಯಾಹಿ ವೃದ್ಧಿಂ ಚ ದಿಶನ್ತು ದೇವತಾ
ಯಥಾಹಮಿಚ್ಛಾಮಿ ತವಾಸ್ತು ತತ್ತಥಾ ।
ಪ್ರಯಾಹಿ ಶೀಘ್ರಂ ಜಹಿ ಕರ್ಣಮಾಹವೇ
ಪುರಂದರೋ ವೃತ್ರಮಿವಾತ್ಮವೃದ್ಧಯೇ ॥೪೦॥

ಹೊರಡು ಅರ್ಜುನ! ಯುದ್ಧಕ್ಕೆ ಹೋಗಿ ಬಾ. ದೇವತೆಗಳು ನಿನಗೆ ಅಭ್ಯುದಯವನ್ನುಂಟುಮಾಡಲಿ. ನಾನು ನಿನಗೆ ಯಾವ-ಯಾವುದು ಪ್ರಾಪ್ತವಾಗಲೆಂದು ಆಶಿಸುತ್ತಿರುವೆನೋ–ಅವುಗಳೆಲ್ಲವೂ ಯಥಾವತ್ತಾಗಿ ನಿನಗೆ ಲಭಿಸಲಿ. ರಣಭೂಮಿಗೆ ಬೇಗ ಹೋಗು. ಆತ್ಮೋನ್ನತಿಗಾಗಿ ಪುರಂದರನು ವೃತ್ರನನ್ನು ಸಂಹರಿಸಿದಂತೆ–ನೀನು ನನ್ನ ಯಶಸ್ಸಿಗಾಗಿ ಯುದ್ಧದಲ್ಲಿ ಕರ್ಣನನ್ನು ಸಂಹರಿಸು.”

೭೧ನೆಯ ಅಧ್ಯಾಯವು ಮುಗಿಯಿತು.

೭೨ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೃಷ್ಣಾರ್ಜುನರ ರಣಯಾತ್ರೆ: ಹಾದಿಯಲ್ಲಿ ಶುಭಶಕುನಗಳಾದುದು: ಶ್ರೀಕೃಷ್ಣನು ಶುಭಶಕುನಗಳನ್ನು ವಿವರಿಸುತ್ತಾ ಅರ್ಜುನನನ್ನು ಪ್ರೋತ್ಸಾಹಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಈ ರೀತಿಯಲ್ಲಿ ಧರ್ಮರಾಜನನ್ನು ಪ್ರಸನ್ನಗೊಳಿಸಿ, ಅವನಿಂದ ಆಶೀರ್ವಾದವನ್ನು ಪಡೆದು ಪ್ರಹೃಷ್ಟವಾದ ಮನಸ್ಸಿನಿಂದ ಕೂಡಿದ ಅರ್ಜುನನು ಕರ್ಣನ ವಧೆಯಲ್ಲಿ ಉದ್ಯತನಾಗಿ ಗೋವಿಂದನೊಡನೆ ಹೇಳಿದನು: ‘ ‘ಗೋವಿಂದ! ನನ್ನ ರಥವು ಪುನಃ ಸಜ್ಜಾಗಲಿ. ರಥಕ್ಕೆ ಶ್ರೇಷ್ಠವಾದ ಕುದುರೆಗಳು ಹೂಡಲ್ಪಡಲಿ. ಆ ಮಹಾರಥದಲ್ಲಿ ಎಲ್ಲ ವಿಧವಾದ

ಆಯುಧಗಳೂ ಸುಸಜ್ಜಿತವಾಗಿ ಇಡಲ್ಪಡಲಿ. ಕುದುರೆಸವಾರರಿಂದ ಸುಶಿಕ್ಷಿತವಾದ ಮತ್ತು ತಿರುಗಾಡಿ ವಿಶ್ರಾಂತವಾಗಿ ಬಂದಿರುವ ಕುದುರೆಗಳು ರಥೋಪಕರಣಗಳಿಂದ ಸಜ್ಜಾಗಿ ಬಹಳ ಬೇಗ ರಥದ ಬಳಿಗೆ ಬರಲಿ. ಸೂತಪುತ್ರನನ್ನು ಸಂಹರಿಸುವ ಇಚ್ಛೆಯಿಂದ ನೀನೂ ಸಹ ಬೇಗ ಹೊರಡಲು ಸಿದ್ಧನಾಗು."

ಕುರುರಾಜ! ಮಹಾತ್ಮನಾದ ಅರ್ಜುನನು ಹೀಗೆ ಹೇಳಿದೊಡನೆಯೇ ಶ್ರೀಕೃಷ್ಣನು ದಾರುಕನನ್ನು ಕರೆದು ಸರ್ವಧನುಷ್ಮಂತರಲ್ಲಿ ಶ್ರೇಷ್ಠನಾದ, ಭರತಶ್ರೇಷ್ಠನಾದ ಅರ್ಜುನನು ಹೇಳಿದಂತೆಯೇ ಎಲ್ಲವನ್ನೂ ಸಿದ್ಧಗೊಳಿಸು ವಂತೆ ಆಜ್ಞಾಪಿಸಿದನು. ಶ್ರೀಕೃಷ್ಣನಿಂದ ಆಜ್ಞಪ್ತನಾದ ದಾರುಕನು ಕ್ಷಣ ಮಾತ್ರದಲ್ಲಿ ಶತ್ರುಗಳಿಗೆ ತಾಪವನ್ನುಂಟುಮಾಡುವ, ವ್ಯಾಘ್ರಚರ್ಮದಿಂದ ಆಚ್ಛಾದಿತವಾದ ರಥವನ್ನು ಸಿದ್ಧಗೊಳಿಸಿ, ರಥವು ಸಕಲವಿಧವಾದ ಯುದ್ಧ ಸಾಮಗ್ರಿಗಳಿಂದಲೂ ಸಂಪನ್ನವಾಗಿದೆಯೆಂಬ ವಾರ್ತೆಯನ್ನು ಮಹಾತ್ಮನಾದ ಅರ್ಜುನನಿಗೆ ನಿವೇದಿಸಿದನು. ಮಹಾತ್ಮನಾದ ದಾರುಕನು ರಥವನ್ನು ಯಥೋಕ್ತರೀತಿಯಲ್ಲಿ ಸಜ್ಜುಗೊಳಿಸಿ ನಿಲ್ಲಿಸಿದುದನ್ನು ನೋಡಿ ಅರ್ಜುನನು ಧರ್ಮರಾಜನ ಅನುಮತಿಯನ್ನು ಪಡೆದು, ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿಕೊಂಡು ಮಂಗಳಮಯವಾದ, ಕಲ್ಯಾಣಕ್ಕೆ ಆಶ್ರಯಭೂತವಾದ ಶ್ರೇಷ್ಠವಾದ ರಥವನ್ನು ಹತ್ತಿದನು. ಆಗ ಮಹಾಪ್ರಾಜ್ಞನಾದ ಯುಧಿಷ್ಠಿರನು ಅರ್ಜುನನನ್ನು ಆಶೀರ್ವದಿಸಿದನು. ಬಳಿಕ ಅರ್ಜುನನು ಕರ್ಣನ ರಥದ ಕಡೆಗೆ ಪ್ರಯಾಣಮಾಡಿದನು. ಆ ಸಮಯದಲ್ಲಿ ರಥಾರೂಢನಾಗಿ ಆಗಮಿಸುತ್ತಿದ್ದ ಮಹಾಧನುಷ್ಮಂತನಾದ ಅರ್ಜುನನನ್ನು ನೋಡಿ ಎಲ್ಲ ಪ್ರಾಣಿಗಳೂ ಮಹಾತ್ಮನಾದ ಅರ್ಜುನನಿಂದ ಕರ್ಣನು ಹತನಾದನೆಂದೇ ಭಾವಿಸಿದುವು. ಅರ್ಜುನನು ರಣಯಾತ್ರೆಗೆ ಹೋಗುತ್ತಿದ್ದ ಆ ಸಮಯದಲ್ಲಿ ಎಲ್ಲ ದಿಕ್ಕುಗಳೂ ಸ್ವಚ್ಛವಾಗಿದ್ದುವು. ನವಿಲುಗಳೂ, ಸಾರಸಗಳೂ ಮತ್ತು ಕ್ರೌಂಚಪಕ್ಷಿಗಳೂ ಅರ್ಜುನನನ್ನು ತಮ್ಮ ಬಲಭಾಗದಲ್ಲಿ ಬಿಟ್ಟುಕೊಂಡು (ಪ್ರದಕ್ಷಿಣಕ್ರಮದಲ್ಲಿ) ಹಾರಿಹೋಗುತ್ತಿದ್ದುವು. ಗಂಡುಜಾತಿಗೆ ಸೇರಿದ, ಶುಭಕರವಾದ, ಮಂಗಳದಾಯಕವಾದ ಮತ್ತು ಪ್ರಹೃಷ್ಟವಾದ ಅನೇಕ ಪಕ್ಷಿಗಳು ಅರ್ಜುನನನ್ನು ಯುದ್ಧಕ್ಕೆ ತ್ವರೆಗೊಳಿಸುತ್ತಿವೆಯೋ–ಎಂಬಂತೆ

ಧ್ವನಿಮಾಡುತ್ತಿದ್ದುವು. ಭಯಂಕರವಾದ ಹದ್ದುಗಳೂ, ರಣಹದ್ದುಗಳೂ, ಬಕಪಕ್ಷಿಗಳೂ, ಗಿಡಗಗಳೂ ಮತ್ತು ಕಾಗೆಗಳೂ ಮಾಂಸದ ಸಲುವಾಗಿ ಅರ್ಜುನನ ರಥದ ಮುಂದೆ ಹಾರಿಹೋಗುತ್ತಿದ್ದುವು. ಶುಭಸೂಚಕವಾದ ಅನೇಕ ಶಕುನಗಳು–ಪಾಂಡುಪುತ್ರನಾದ ಅರ್ಜುನನ ಶತ್ರುಗಳ ಸೈನ್ಯವು ವಿನಾಶವಾಗುವುದೆಂಬುದನ್ನೂ, ಕರ್ಣನ ವಧೆಯಾಗುವುದೆಂಬುದನ್ನೂ– ಸ್ಪಷ್ಟವಾಗಿ ಸೂಚಿಸುತ್ತಿದ್ದುವು. ಆದರೆ ಯುದ್ಧಕ್ಕಾಗಿ ರಥದಲ್ಲಿ ಕುಳಿತು ಪ್ರಯಾಣಮಾಡುತ್ತಿದ್ದ ಅರ್ಜುನನ ಶರೀರವು ಇದ್ದಕ್ಕಿದ್ದಂತೆಯೇ ಬೆವರಲು ತೊಡಗಿತು. 'ಏಕೆ ಹೀಗಾಗುತ್ತಿದೆ?'–ಎಂದು ಅರ್ಜುನನು ಬಹಳವಾಗಿ ಚಿಂತಿಸತೊಡಗಿದನು. ಬಳಿಕ ಅರ್ಜುನನು ಬೆವರಿಡುತ್ತಿದ್ದುದನ್ನೂ ಅದಕ್ಕೆ ಕಾರಣವನ್ನು ತಿಳಿಯದೇ ಚಿಂತಿಸುತ್ತಿದ್ದುದನ್ನೂ ಗಮನಿಸಿದ ಮಧುಸೂದನನು ಗಾಂಡೀವಿಯನ್ನು ಕುರಿತು ಹೇಳಿದನು:

"ಗಾಂಡೀವಧನುರ್ಧರನೇ! ಅರ್ಜುನ! ನೀನು ನಿನ್ನ ಈ ಧನುಸ್ಸಿನಿಂದ ಇದುವರೆಗೆ ಯಾರು-ಯಾರನ್ನು ಜಯಿಸಿರುವೆಯೋ ಅವರೆಲ್ಲರೂ ನಿನ್ನೊಬ್ಬನಿಂದಲೇ ಜಯಿಸಲ್ಪಡತಕ್ಕವರಾಗಿದ್ದರು. ಈ ಪ್ರಪಂಚದಲ್ಲಿ ನಿನ್ನನ್ನು ಬಿಟ್ಟು ಬೇರೆ ಯಾವ ಮನುಷ್ಯನಿಂದಲೂ ಅವರನ್ನು ಜಯಿಸಲು ಸಾಧ್ಯವಾಗುತ್ತಿರಲಿಲ್ಲ. ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದ ಅನೇಕಶೂರರನ್ನು ನಾನು ನೋಡಿದ್ದೇನೆ. ಅವರೆಲ್ಲರೂ ಯುದ್ಧದಲ್ಲಿ ನಿನ್ನನ್ನೆದುರಿಸಲು ಬಂದೊಡನೆಯೇ ಪರಂಧಾಮವನ್ನೈದಿದರು. ದ್ರೋಣರು, ಭೀಷ್ಮ, ಭಗದತ್ತ, ಅವಂತಿಯ ರಾಜಕುಮಾರರಾದ ವಿಂದಾನುವಿಂದರು, ಕಾಂಬೋಜದೇಶೀಯನಾದ ಸುದಕ್ಷಿಣ, ಶ್ರುತಾಯುಷ, ಮಹಾವೀರ್ಯನಾದ ಅಚ್ಯುತಾಯುಷ–ಇವರೇ ಮೊದಲಾದ ಮಹಾ-ಮಹಾ ಕುರುಯೋಧರನ್ನು ಎದುರಿಸಿಯೂ ಕ್ಷೇಮದಿಂದಿರಲು ನಿನಗಲ್ಲದೇ ಅತುಲ ಪರಾಕ್ರಮಿಯಾದ ಮತ್ತಾರಿಗೆ ಸಾಧ್ಯವಾಗುತ್ತಿತ್ತು? ಅರ್ಜುನ! ನಿನ್ನ ಬಳಿಯಲ್ಲಿ ದಿವ್ಯಾಸ್ತ್ರಗಳಿವೆ. ನಿನಗೆ ಹಸ್ತಲಾಘವವಿದೆ. ಬಲವಿದೆ. ಯುದ್ಧಗಳಲ್ಲಿ ನೀನು ಭ್ರಾಂತಿಗೊಳ್ಳುವುದಿಲ್ಲ. ಅಸ್ತ್ರ-ಶಸ್ತ್ರಗಳಲ್ಲಿ ನಿನಗೆ ವಿಶೇಷವಾದ ಜ್ಞಾನವಿದೆ. ಲಕ್ಷ್ಯಭೇದನ–ಪಾತನಗಳು ನಿನಗೆ ಚೆನ್ನಾಗಿ ತಿಳಿದಿವೆ. ಲಕ್ಷ್ಯಗಳನ್ನು ಭೇದಿಸುವಾಗ ನಿನ್ನ ಚಿತ್ತವೃತ್ತಿಯು ಏಕಾಗ್ರವಾಗಿರುತ್ತದೆ.

ಯುದ್ಧಕಲೆಯಲ್ಲಿ ಅತ್ಯಂತನಿಷ್ಣಾತನಾದ ನೀನು ಚರಾಚರಗಳಿಂದ ಕೂಡಿದ ದೇವ-ಗಂಧರ್ವರನ್ನೂ ಸಂಹಾರಮಾಡಬಲ್ಲೆ. ಈ ಭೂಮಂಡಲದಲ್ಲಿಯೇ ನಿನಗೆ ಸಮಾನನಾದ ಯೋಧಪುರುಷನಿಲ್ಲ. ದೇವಲೋಕಪರ್ಯಂತವಾಗಿ ಧನುಸ್ಸುಗಳನ್ನು ಹಿಡಿದ ಯುದ್ಧದುರ್ಮದರಾದ ಹಲವಾರು ಕ್ಷತ್ರಿಯರೇನೋ ಇದ್ದಾರೆ. ಆದರೆ ಅವರಲ್ಲಿ ನಿನಗೆ ಸಮಾನನಾದ ಒಬ್ಬನನ್ನೂ ನಾನು ನೋಡಿಯೂ ಇಲ್ಲ; ನಿನಗೆ ಸಮಾನನಾಗಿ ಒಬ್ಬನಿರುವನೆಂಬುದನ್ನು ಕೇಳಿಯೂ ಇಲ್ಲ. ಅರ್ಜುನ! ಇದಕ್ಕೆ ಕಾರಣವಿದೆ. ಬ್ರಹ್ಮನು ವಿಶ್ವದ ಪ್ರಜೆಗಳೆಲ್ಲರನ್ನೂ ಸೃಷ್ಟಿಸಿದನು. ಆ ಬ್ರಹ್ಮನೇ ನಿನ್ನಲ್ಲಿರುವ ಗಾಂಡೀವವೆಂಬ ಈ ಮಹಾಧನುಸ್ಸನ್ನೂ ನಿರ್ಮಿಸಿದನು. ಅಂತಹ ಮಹಾಧನುಸ್ಸಿನಿಂದ ನೀನು ಯುದ್ಧಮಾಡುವೆ. ಈ ಕಾರಣದಿಂದಲೇ ಮೂರು ಲೋಕಗಳಲ್ಲಿಯೂ ನಿನಗೆ ಸಮಾನರಾದ ವೀರರಿಲ್ಲ. ಆದರೂ ಅರ್ಜುನ! ನಿನಗೆ ಹಿತಕರವಾದ ಮಾತನ್ನು ಹೇಳಲೇಬೇಕಾಗಿದೆ. ಆಹವಶೋಭಿಯಾದ ಕರ್ಣನನ್ನು ನೀನು ಅವಹೇಳನಮಾಡಬೇಡ. (ಕೀಳಾಗಿ ತಿಳಿಯಬೇಡ.)

**ಕರ್ಣೋ ಹಿ ಬಲವಾನ್ದೃಪ್ತಃ ಕೃತಾಸ್ತ್ರಶ್ಚ ಮಹಾರಥಃ ।**
**ಕೃತೀ ಚ ಚಿತ್ರಯೋಧೀ ಚ ದೇಶಕಾಲಸ್ಯ ಕೋವಿದಃ ॥೨೬॥**

ಕರ್ಣನಾದರೋ ಮಹಾಬಲಿಷ್ಠನು. ಅಭಿಮಾನಿಯು. ಅಸ್ತ್ರವಿದ್ಯಾ ನಿಪುಣನು. ಮಹಾರಥನು. ಯುದ್ಧಕುಶಲನು. ವಿಚಿತ್ರವಾದ ರೀತಿಯಲ್ಲಿ ಯುದ್ಧಮಾಡತಕ್ಕವನು. ದೇಶ-ಕಾಲಗಳ ಪರಿಜ್ಞಾನವುಳ್ಳವನು. ಪಾರ್ಥ! ಕರ್ಣನ ಪರಾಕ್ರಮದ ವಿಷಯದಲ್ಲಿ ಹೆಚ್ಚು ಹೇಳುವುದರಿಂದ ಪ್ರಯೋಜನವೇನಿದೆ? ಎರಡೇ ಮಾತಿನಲ್ಲಿ ಸಂಕ್ಷೇಪವಾಗಿ ಅವನಲ್ಲಿರುವ ಪರಾಕ್ರಮವನ್ನು ತಿಳಿಸಿಬಿಡುತ್ತೇನೆ; ಕೇಳು.

**ತ್ವತ್ಸಮಂ ತ್ವದ್ವಿಶಿಷ್ಟಂ ವಾ ಕರ್ಣಂ ಮನ್ಯೇ ಮಹಾರಥಮ್ ।**
**ಪರಮಂ ಯತ್ನಮಾಸ್ಥಾಯ ತ್ವಯಾ ವಧ್ಯೋ ಮಹಾಹವೇ ॥೨೭॥**

ಕರ್ಣನು ನಿನಗೆ ಸಮಾನನಾಗಿದ್ದಾನೆ. ನಿನ್ನಲ್ಲಿರುವ ಪರಾಕ್ರಮವೇ ಅವನಲ್ಲಿಯೂ ಇದೆ. ನಿನಗಿಂತಲೂ ಸ್ವಲ್ಪ ಹೆಚ್ಚಿನ ಪರಾಕ್ರಮವೂ

ಅವನಲ್ಲಿರಬಹುದು–ಎಂದೇ ನಾನು ಭಾವಿಸಿದ್ದೇನೆ. ಆದುದರಿಂದ ವಿಶೇಷ ಪ್ರಯತ್ನದಿಂದಲೇ ನೀನು ಕರ್ಣನನ್ನು ಸಂಹಾರಮಾಡಬೇಕಾಗಿದೆ.



**ತೇಜಸಾ ವಹ್ನಿಸದೃಶೋ ವಾಯುವೇಗಸಮೋ ಜವೇ ।**
**ಅನ್ತಕಪ್ರತಿಮಃ ಕ್ರೋಧೇ ಸಿಂಹಸಂಹನನೋ ಬಲೀ ॥೨೯॥**

ಕರ್ಣನು ಯಜ್ಞೇಶ್ವರನಿಗೆ ಸಮಾನವಾದ ತೇಜಸ್ಸುಳ್ಳವನು. ವೇಗದಲ್ಲಿ ವಾಯುವಿಗೆ ಸಮಾನನು. ಕ್ರೋಧದಲ್ಲಿ ಯಮಧರ್ಮನಿಗೆ ಸಮಾನನು. ಮಹಾಬಲಿಷ್ಠನಾದ ಕರ್ಣನು ಸಿಂಹದಂತೆ ಸುದೃಢವಾದ ಶರೀರ ದಾರ್ಢ್ಯವನ್ನು ಹೊಂದಿದ್ದಾನೆ.

***ಅಷ್ಟರತ್ನಿರ್ಮಹಾಬಾಹುರ್ವ್ಯೂಢೋರಸ್ಕಃ ಸುದುರ್ಜಯಃ ।**
**ಅಭಿಮಾನೀ ಚ ಶೂರಶ್ಚ ಪ್ರವೀರಃ ಪ್ರಿಯದರ್ಶನಃ ॥೩೦॥**

ಕರ್ಣನು ಎಂಟು ರತ್ನಿಗಳಷ್ಟು ಎತ್ತರವುಳ್ಳವನು. ದೀರ್ಘಬಾಹುವು. ವಿಶಾಲವಾದ ವಕ್ಷಃಸ್ಥಳವುಳ್ಳವನು. ಜಯಿಸಲು ಅಸಾಧ್ಯನಾದವನು. ಅಭಿಮಾನಿಯು. ಮಹಾಶೂರನು. ಶ್ರೇಷ್ಠನಾದ ಮತ್ತು ಪ್ರಮುಖನಾದ ವೀರನು. ಕಡುಚೆಲುವನು.

**ಸರ್ವಯೋಧಗುಣೈರ್ಯುಕ್ತೋ ಮಿತ್ರಾಣಾಮಭಯಂಕರಃ ।**
**ಸತತಂ ಪಾಣ್ಡವದ್ವೇಷೀ ಧಾರ್ತರಾಷ್ಟ್ರಹಿತೇ ರತಃ ॥೩೧॥**

ಕರ್ಣನು ಶ್ರೇಷ್ಠರಾದ ಯೋಧರಿಗೆ ಇರಬೇಕಾದ ಸರ್ವಗುಣಗಳಿಂದಲೂ ಪರಿಪೂರ್ಣನಾಗಿರತಕ್ಕವನು. ಮಿತ್ರರಿಗೆ ಅಭಯದಾಯಕನು. ಪಾಂಡವರನ್ನು ಸರ್ವದಾ ದ್ವೇಷಿಸುತ್ತಲೇ ಇರತಕ್ಕವನು ಮತ್ತು ದುರ್ಯೋಧನನಿಗೆ ಹಿತವನ್ನುಂಟುಮಾಡುವುದರಲ್ಲಿ ಸರ್ವದಾ ನಿರತನಾಗಿರತಕ್ಕವನು.

---

*ಅಷ್ಟರತ್ನಿಃ–ಎಂಬುದರಿಂದಲೇ ದೀರ್ಘಬಾಹುತ್ವವೂ ಮತ್ತು ವಿಶಾಲವಕ್ಷಸ್ತ್ವವೂ ಸಿದ್ಧವಾಗಿವೆಯೆಂದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. ಅಷ್ಟೌ ರತ್ನಿರಿತ್ಯಸ್ಯ ವಿವರಣಂ ಮಹಾಬಾಹುರ್ವ್ಯೂಢೋರಸ್ಕ ಇತಿ. ಮುಂದೆ ಅವರು ಹೀಗೆ ವಿವರಣೆ ನೀಡಿದ್ದಾರೆ: ಸರ್ವಸ್ಯ ಪುರುಷಸ್ಯ ವ್ಯಾಮಮಾತ್ರಂ ದೈರ್ಘ್ಯಂ–ಎಲ್ಲ ಪುರುಷರೂ ಅವರವರ ಮಾರಿನಷ್ಟು ಎತ್ತರವಿರುತ್ತಾರೆ. ತಚ್ಚ ಪಂಚಹಸ್ತಂ ವಿಂಶತ್ಯಧಿಕ ಶತಾಙ್ಗುಲಂ–ಆ ಎತ್ತರವು ಐದು ಹಸ್ತದಷ್ಟು ಅಥವಾ ೧೨೦ ಅಂಗುಲದಷ್ಟು ಇರುತ್ತದೆ. ರತ್ನಿಸ್ತು ಏಕವಿಂಶತ್ಯಙ್ಗುಲಃ–ಒಂದು ರತ್ನಿಗೆ ೨೧ ಅಂಗುಲಗಳು. ಅಷ್ಟಾನಾಂ ರತ್ನೀನಾಂ ಅಷ್ಟಷಷ್ಟ್ಯಧಿಕಂ ಶತಮಙ್ಗುಲಾನಿ ಚ ಭವತಿ–೮ ರತ್ನಿಗಳಿಗೆ ೧೬೮ ಅಂಗುಲಗಳಾಗುತ್ತವೆ. ಆಜಾನುಬಾಹುಪುರುಷಸ್ಯ ವ್ಯಾಮಮಷ್ಟರತ್ನಿಮಿತಂ ಭವತಿ–ಆಜಾನುಬಾಹುವಾದ ಪುರುಷನ ಮಾರು ೮ ರತ್ನಿಗಳ ಅಥವಾ ೧೬೮ ಅಂಗುಲಗಳ ಉದ್ದವಿರುತ್ತದೆ. ಅಷ್ಟಾಚತ್ವಾರಿಂಶದಙ್ಗುಲಾ ತತ್ರ ವೃದ್ಧಿಃ–ಸಾಮಾನ್ಯ ಮನುಷ್ಯನಿಗಿಂತಲೂ ಆಜಾನುಬಾಹುವಾದ (ಕರ್ಣನಂತಹ) ಪುರುಷನ ಮಾರು ನಲವತ್ತೆಂಟು ಅಂಗುಲಗಳು ಹೆಚ್ಚಾಗಿರುತ್ತವೆ. ತತ್ರಾಪಿ ಪಂಚಮಾಂಶೇನ ವಕ್ಷಸಿ ವಿಶಾಲತಾ–ಇದರಲ್ಲಿ ಐದನೆಯ ಒಂದು ಭಾಗ ಎಂದರೆ: ಸುಮಾರು ೩೪ ಅಂಗುಲಗಳು ಎದೆಯ ವಿಸ್ತಾರವಿರುತ್ತದೆ. (ಇದರಿಂದ ಕರ್ಣನ ವಕ್ಷಃಸ್ಥಳವು ಬಹಳ ವಿಶಾಲ

**ಸರ್ವೈರವಧ್ಯೋ ರಾಧೇಯೋ ದೇವೈರಪಿ ಸವಾಸವೈಃ ।**
**ಋತೇ ತ್ವಾಮಿತಿ ಮೇ ಬುದ್ಧಿಸ್ತದದ್ಯ ಜಹಿ ಸೂತಜಮ್ ॥೩೨॥**

ನನ್ನ ಅಭಿಪ್ರಾಯದಲ್ಲಿ; ನಿನ್ನೊಬ್ಬನನ್ನು ಬಿಟ್ಟು ಇಂದ್ರಸಹಿತರಾದ ಎಲ್ಲ ದೇವತೆಗಳಿಗೂ ಅವನನ್ನು ವಧಿಸುವ ಸಾಧ್ಯತೆಯಿಲ್ಲ. ಆದುದರಿಂದ ಈಗಲೇ ನೀನು ಕರ್ಣನನ್ನು ಪ್ರಯತ್ನಪೂರ್ವಕವಾಗಿ ಸಂಹರಿಸು.

**ದೇವೈರಪಿ ಹಿ ಸಂಯತ್ತೈರ್ಬಿಭ್ರದ್ಭಿರ್ಮಾಂಸಶೋಣಿತಮ್ ।**
**ಅಶಕ್ಯಃ ಸ ರಥೋ ಜೇತುಂ ಸರ್ವೈರಪಿ ಯುಯುತ್ಸುಭಿಃ ॥೩೩॥**

ಸಮಸ್ತದೇವತೆಗಳೂ–ರಕ್ತ-ಮಾಂಸಯುಕ್ತವಾದ ಶರೀರಗಳನ್ನು ಧರಿಸಿ ಯುದ್ಧಮಾಡುವ ಇಚ್ಛೆಯಿಂದ ಒಟ್ಟಾಗಿ ರಣರಂಗಕ್ಕೆ ಬಂದರೂ–ರಥ ಯುಕ್ತನಾಗಿರುವ ಕರ್ಣನನ್ನು ಅವರಿಂದ ಜಯಿಸಲು ಸಾಧ್ಯವಾಗುವುದಿಲ್ಲ.

ಆದುದರಿಂದ, ಅರ್ಜುನ! ನೀನಿಂದು ದುರಾತ್ಮನಾದ, ಪಾಪಚಾರಿಯಾದ, ಕ್ರೂರನಾದ, ಪಾಂಡವರನ್ನು ವಿರೋಧಿಸುವ ವಿಷಯದಲ್ಲಿ ಸ್ವಪ್ರಯೋಜನವೇನೂ ಇಲ್ಲದಿದ್ದರೂ ಅವರ ವಿಷಯದಲ್ಲಿ

---

ವಾಗಿದ್ದಿತೆಂದು ಹೇಳಬಹುದಾಗಿದೆ.) ಶೇಷಂ ಅಂಸಾದಾರಭ್ಯ ಬಾಹ್ವೋಃ ವೃದ್ಧಿರಿತಿ ಜ್ಞೇಯಂ–ಉಳಿದ ಪರಿಮಾಣವು ಹೆಗಲಿನಿಂದ ಹಿಡಿದು ವೃದ್ಧಿಸಿದ ಎರಡೂ ತೋಳು ಗಳ ಪರಿಮಾಣವೆಂದು ತಿಳಿಯಬೇಕು. ವಕ್ಷಃಸ್ಥಳದ ಐದನೇ ಒಂದು ಭಾಗವಾದ ೩೪ ಅಂಗುಲಗಳನ್ನು ಕಳೆದರೆ ಎರಡು ತೋಳುಗಳ ಉದ್ದ ೧೩೪ ಅಂಗುಲಗಳು. ಒಂದು ತೋಳಿನ ಉದ್ದ ೬೭ ಅಂಗುಲಗಳು. ಆದುದರಿಂದಲೇ ಕರ್ಣನು ದೀರ್ಘ ಬಾಹು ಮತ್ತು ವಿಶಾಲವಾದ ವಕ್ಷಃಸ್ಥಳವುಳ್ಳವನು–ಇದು ವ್ಯಾಖ್ಯಾನಕಾರರ ವಿವರಣೆ ಯಾಗಿದೆ. ಅಂಗುಲ ಎಂಬುದನ್ನು ಈಗಿನ ಅಳತೆಯ ಅರ್ಥದಲ್ಲಿ ತೆಗೆದುಕೊಂಡರೆ ವ್ಯಾಖ್ಯಾನಕಾರರ ವಿವರಣೆಯು ಸರಿಹೊಂದುವುದಿಲ್ಲ. ಕರ್ಣನು ೧೪ ಅಡಿಗಳಷ್ಟು ಎತ್ತರವಿದ್ದನೆಂದು ಹೇಳಬೇಕಾಗುತ್ತದೆ. ಸಾಮಾನ್ಯಮನುಷ್ಯನೂ ೧೨೦ ಅಂಗುಲ ಅಥವಾ ಹತ್ತು ಅಡಿಗಳಷ್ಟು ಎತ್ತರವಿರುತ್ತಾನೆಂದು ವ್ಯಾಖ್ಯಾನಕಾರರ ವಿವರಣೆಯಾಗಿದೆ. ರತ್ನಿ ಎಂಬ ಪದಕ್ಕೆ ಮುಷ್ಟ್ಯಾ ತು ಬದ್ಧಯಾ । ಸ ರತ್ನಿಃ ಸ್ಯಾತ್–ಮುಷ್ಟಿಯನ್ನು ಹಿಡಿದು ತೋಳಿನಿಂದ ಅಳತೆಮಾಡುವುದಕ್ಕೆ ರತ್ನಿ ಎಂದು ಅಮರಕಾರರು ಹೇಳಿದ್ದಾರೆ. ರತ್ನಿ ಎಂಬುದಕ್ಕೆ ಎಷ್ಟು ಅಂಗುಲಗಳೆಂಬುದನ್ನು ಕಂಡುಹಿಡಿಯಬೇಕಾಗಿದೆ. ಅಙ್ಗುಲೋಽಸ್ತ್ರೀಯವಾ ಅಷ್ಟೌ–ಎಂದು ಮೇದಿನೀಕಾರರು ಹೇಳಿದ್ದಾರೆ. ಅಂಗುಲದ

ಎಲ್ಲ ಕಾಲಗಳಲ್ಲಿಯೂ ದುರ್ಭಾವನೆಯಿಂದಲೇ ಇರುವ ಕರ್ಣನನ್ನು ಸಂಹರಿಸಿ ನಿನ್ನ ಮನೋರಥವನ್ನು ಪೂರೈಸಿಕೋ. ರಥಿಗಳಲ್ಲಿ ಶ್ರೇಷ್ಠನಾದ, ಜಯಿಸುವವರೇ ಇಲ್ಲದವನಾದ ಕರ್ಣನನ್ನು ನೀನೀಗ ಕಾಲವಶನನ್ನಾಗಿ ಮಾಡು. (ಮೃತ್ಯುವಿಗರ್ಪಿಸು.) ಅವನನ್ನು ಸಂಹರಿಸಿ ಧರ್ಮರಾಜನಿಗೆ ಪ್ರೀತಿಯನ್ನುಂಟುಮಾಡು. ಪಾರ್ಥ! ನಿನ್ನ ಪರಾಕ್ರಮವೆಷ್ಟೆಂಬುದನ್ನು ನಾನೂ ಯಥಾವತ್ತಾಗಿ ತಿಳಿದುಕೊಂಡಿರುತ್ತೇನೆ. ನಿನ್ನ ಪರಾಕ್ರಮವು ಸುರಾಸುರರಿಂದಲೂ ತಡೆಯಲು ಅಸಾಧ್ಯವಾದುದು. ಆದರೆ ದುರಾತ್ಮನಾದ ಸೂತನ ಮಗನಾದ ಈ ಕರ್ಣನು ಮಹಾದರ್ಪಿಷ್ಠನಾಗಿ ಪಾಂಡುವಿನ ಮಕ್ಕಳನ್ನು ಎಲ್ಲ ಕಾಲಗಳಲ್ಲಿಯೂ ಅವಮಾನಿಸುತ್ತಲೇ ಇರುತ್ತಾನೆ. ಈ ಕರ್ಣನ ಜೊತೆಯಲ್ಲಿರುವುದರಿಂದಲೇ ಪಾಪಿಷ್ಠನಾದ ದುರ್ಯೋಧನನು ತನ್ನನ್ನೂ ಮಹಾವೀರ್ಯವಂತನೆಂದೇ ಭಾವಿಸಿಕೊಂಡುಬಿಟ್ಟಿದ್ದಾನೆ. ಆದುದರಿಂದ

---

ಪರಿಮಾಣ ಎಂಟು ಯವಧಾನ್ಯದ ಕಾಳುಗಳ ಉದ್ದ. ಈ ಪರಿಮಾಣವು ಈಗಿನ ಅಂಗುಲದ ಪರಿಮಾಣಕ್ಕೇ ಹೊಂದಿಕೊಳ್ಳುತ್ತದೆ. ಅಂಗುಲ ಎಂದರೆ ಬೆರಳು ಎಂದೂ ಅರ್ಥವಾಗುತ್ತದೆ. ಅನಾಮಿಕ ಬೆರಳಿನ ಮೊದಲನೆಯ ಗೆಣ್ಣಿನ ಅಂತರ ಈಗಿನ ಒಂದು ಅಂಗುಲಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತದೆ. ಬದ್ಧಮುಷ್ಟಿಯಲ್ಲಿ ಇದೇ ಬೆರಳಿನಿಂದ ಮೊಣಕೈವರೆಗೆ ಇಂತಹ ಹನ್ನೆರಡು ಅಂಗುಲಗಳು ಇರುತ್ತವೆ. ಅರ್ಥಾತ್ ರತ್ನಿ ಎಂಬುದಕ್ಕೆ ಹನ್ನೆರಡು ಅಂಗುಲಗಳು ಎಂದು ಅರ್ಥಮಾಡಬಹುದಾಗಿದೆ. ಎಂಟು ರತ್ನಿಗಳೆಂದರೆ ಎಂಟು ಅಡಿಗಳು ಅಥವಾ ೯೬ ಅಂಗುಲಗಳು ಆಗುತ್ತವೆ. ಕರ್ಣನು ಎಂಟು ಅಡಿಗಳಷ್ಟು ಎತ್ತರವಿರಲು ಸಾಧ್ಯ. ವ್ಯಾಖ್ಯಾನಕಾರರು ಹೇಳಿರುವಂತೆ ಮಾರಿನಲ್ಲಿ ಐದನೇ ಒಂದು ಭಾಗ ವಕ್ಷಃಸ್ಥಳವಿರುತ್ತದೆ. ಭುಜದಿಂದ ಭುಜಕ್ಕೆ ಅಥವಾ ಕಂಕುಳಿನಿಂದ ಕಂಕುಳಿನವರೆಗೆ ವಿಸ್ತಾರ. ವಕ್ಷಃಸ್ಥಳದ ಸುತ್ತಳತೆಯಲ್ಲಿ ಮುಂಭಾಗದ ಅಳತೆಯು ಮಾತ್ರ. ಇದನ್ನೇ ಕರ್ಣನ ಪರ್ಯಾಯದಲ್ಲಿ ಹೇಳುವುದಾದರೆ ಕರ್ಣನ ಶರೀರವು ಎಂಟು ರತ್ನಿಗಳು ಅಥವಾ ತೊಂಬತ್ತಾರು ಅಂಗುಲಗಳಿದ್ದಂತೆ ಅವನ ಮಾರೂ ಸಹ ತೊಂಬತ್ತಾರು ಅಂಗುಲಗಳಿದ್ದುವು. ಇದರಲ್ಲಿ ಐದನೆಯ ಒಂದು ಭಾಗ ಎಂದರೆ ಸುಮಾರು ೧೯ ಅಂಗುಲಗಳಷ್ಟು ಅವನ ವಕ್ಷಃಸ್ಥಳವಿದ್ದಿತು. **ಷಣ್ಣವತ್ಯಙ್ಗುಲೋ- ತ್ಸೇಧೋ ಯಃ ಪುಮಾನ್ಸದಿವೌಕಸಃ**–೯೬ ಅಂಗುಲ ಎತ್ತರವಿರುವವನು ದೇವಮಾನವ ಅಥವಾ ಮಹಾಪುರುಷನೆಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. ಕರ್ಣನೂ ಮಹಾಪುರುಷನೆಂಬುದರಲ್ಲಿ ಸಂಶಯವಿಲ್ಲ.

ಪಾಪಕರ್ಮಗಳೆಲ್ಲಕ್ಕೂ ಮೂಲಕಾರಣನಾದ ಸೌತಿಯನ್ನು (ಸೂತಪುತ್ರನನ್ನು) ಇಂದು ನೀನು ಸಂಹರಿಸು.

**ಖಡ್ಗಜಿಹ್ವಂ ಧನುರಾಸ್ಯಂ ಶರದಂಷ್ಟ್ರಂ ತರಸ್ವಿನಮ್ ।**
**ದೃಪ್ತಂ ಪುರುಷಶಾರ್ದೂಲಂ ಜಹಿ ಕರ್ಣಂ ಧನಂಜಯ ॥೩೮॥**

ಧನಂಜಯ! ಕತ್ತಿಯೇ ನಾಲಿಗೆಯಾಗಿ ಉಳ್ಳ, ಧನುಸ್ಸೇ ಮುಖವಾಗಿರುವ, ಬಾಣಗಳೇ ಕೋರೆದಾಡೆಗಳ ರೂಪದಲ್ಲಿರುವ, ಮಹಾವೇಗವಂತನಾದ, ಮದದಿಂದ ಕೊಬ್ಬಿರುವ, ಪುರುಷರಲ್ಲಿ ವ್ಯಾಘ್ರಪ್ರಾಯನಾಗಿರುವ ಕರ್ಣನನ್ನು ನೀನಿಂದು ಸಂಹರಿಸು.

ನನ್ನ ಸಂಪೂರ್ಣ ಅನುಮೋದನೆಯನ್ನು ಕೊಡುತ್ತಿದ್ದೇನೆ. ನಿನ್ನ ವೀರ್ಯದಿಂದಲೂ ಮತ್ತು ಬಲದಿಂದಲೂ ನೀನು–ಸಿಂಹವು ಮದಿಸಿದ ಆನೆ ಯನ್ನು ಸಂಹರಿಸುವಂತೆ–ಕರ್ಣನನ್ನು ಸಂಹರಿಸು. ಯಾವನ ವೀರ್ಯ-ಪರಾಕ್ರಮಗಳನ್ನೇ ಅವಲಂಬಿಸಿ ದುರ್ಯೋಧನನು ನಿನ್ನ ಬಲ-ಪರಾಕ್ರಮ ಗಳನ್ನು ತಿರಸ್ಕಾರಭಾವನೆಯಿಂದ ಕಾಣುತ್ತಿರುವನೋ–ಅಂತಹ ಕರ್ಣನನ್ನು ಇಂದಿನ ಯುದ್ಧದಲ್ಲಿ ಸಂಹರಿಸು."

ಎಪನೆಯ ಅಧ್ಯಾಯವು ಮುಗಿಯಿತು.

ಎ೩ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಭೀಷ್ಮ-ದ್ರೋಣರ ಪರಾಕ್ರಮವರ್ಣನೆಯನ್ನು ಮಾಡುವುದರ ಮೂಲಕ ಅರ್ಜುನನ ಬಲದ ಪ್ರಶಂಸೆಯನ್ನು ಮಾಡುತ್ತಾ ದುರ್ಯೋಧನನು ಮಾಡಿದ ಅನ್ಯಾಯಗಳನ್ನು ಸ್ಮರಣೆಗೆ ತಂದುದು: ಕರ್ಣನ ವಧೆಮಾಡಲು ಅರ್ಜುನನನ್ನು ಉತ್ತೇಜಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಕರ್ಣನ ವಧೆಯಲ್ಲಿ ಕೃತಸಂಕಲ್ಪನಾಗಿದ್ದ, ಜೊತೆ

ಯಲ್ಲಿ ಬರುತ್ತಿದ್ದ ಅರ್ಜುನನನ್ನು ಕುರಿತು ಮಹಾತ್ಮನಾದ ಶ್ರೀಕೃಷ್ಣನು ಪುನಃ ಹೇಳಿದನು:

"ಅರ್ಜುನ! ಗಜಾಶ್ವ-ಪದಾತಿಗಳ ಅತಿಘೋರವಿನಾಶದ ಹದಿನೇಳನೆಯ ದಿನವಿದು. ನಿಮ್ಮ ಕಡೆಯಲ್ಲಿಯೂ ಶತ್ರುಗಳ ಕಡೆಯಲ್ಲಿಯೂ ಅಪಾರಸೈನ್ಯವಿದ್ದಿತು. ಆ ಎರಡು ಸೈನ್ಯಗಳೂ ಪರಸ್ಪರವಾಗಿ ಯುದ್ಧ ಮಾಡುತ್ತಾ ಬಹುಭಾಗ ನಷ್ಟವಾಗಿಹೋಗಿವೆ. ಎರಡೂ ಪಕ್ಷಗಳ ಸೈನ್ಯಗಳಲ್ಲಿ ಸ್ವಲ್ಪಭಾಗಮಾತ್ರವೇ ಉಳಿದಿದೆ. ಕೌರವಪಕ್ಷದ ಯೋಧರು ಬಹುಸಂಖ್ಯಾತವಾದ ಗಜಾಶ್ವಗಳಿಂದ ಸಂಪನ್ನರಾಗಿದ್ದರು. ಅವರೆಲ್ಲರೂ ಶತ್ರುವಾದ ನಿನ್ನೊಡನೆ ಯುದ್ಧಮಾಡಲು ಬಂದು ನಾಶಹೊಂದಿದರು. ಶತ್ರುಗಳಿಂದ ಎದುರಿಸಲು ಅಸಾಧ್ಯನಾದ ನಿನ್ನನ್ನೇ ಆಶ್ರಯಿಸಿ ನಿಮ್ಮ ಕಡೆಯ ಅನೇಕ ರಾಜರೂ, ಸೃಂಜಯಯೋಧರೂ ಮತ್ತು ಪಾಂಡವರೂ ಇಲ್ಲಿಗೆ ಬಂದಿದ್ದಾರೆ ಮತ್ತು ಯುದ್ಧಸನ್ನದ್ಧರಾಗಿಯೂ ನಿಂತಿದ್ದಾರೆ. ನಿನ್ನಿಂದ ರಕ್ಷಿತರಾದ ಪಾಂಚಾಲ-ಪಾಂಡವ-ಮತ್ಸ್ಯಯೋಧರೂ, ಕಾರೂಷ-ಚೇದಿಸೈನಿಕರೂ ಒಟ್ಟಾಗಿ ಸೇರಿಕೊಂಡು ಶತ್ರುಗಳ ಸಮೂಹಗಳನ್ನು ನಿರ್ಮೂಲನಮಾಡಿದರು. ನಿನ್ನಿಂದ ಸಂರಕ್ಷಿತರಾದ ಪಾಂಡವಮಹಾರಥರಿಗಲ್ಲದೇ ಬೇರೆಯವರಿಗೆ ಮಹಾಬಲಶಾಲಿಗಳಾದ ಕೌರವರನ್ನು ಜಯಿಸಲು ಹೇಗೆತಾನೇ ಸಾಧ್ಯವಾಗುತ್ತಿದ್ದಿತು? ನೀನಾದರೋ ಸುರಾಸುರ-ಮನುಷ್ಯರಿಂದ ಕೂಡಿರುವ ಮೂರು ಲೋಕಗಳನ್ನೂ, ಆ ಲೋಕಗಳೆಲ್ಲವೂ ಒಟ್ಟಾಗಿಯೇ ಬಂದರೂ ಜಯಿಸಲು ಸಮರ್ಥನಾಗಿರುವೆ. ಅಂತಹ ನೀನು ಕೌರವರ ಸೈನ್ಯವನ್ನು ಜಯಿಸುವುದರಲ್ಲಿ ಅತಿಶಯವೇನಿದೆ? ಭಗದತ್ತನು ಪರಾಕ್ರಮದಲ್ಲಿ ಇಂದ್ರನಿಗೆ ಸಮಾನನಾಗಿದ್ದನು. ಪುರುಷಸಿಂಹನೇ! ಅಂತಹ ಅತುಲಪರಾಕ್ರಮಿಯಾದ ಭಗದತ್ತನನ್ನು ನೀನಲ್ಲದೆ ಮತ್ತಾರು ತಾನೇ ಜಯಿಸುತ್ತಿದ್ದರು? ಪಾಪರಹಿತನೇ! ಅದೇ ರೀತಿಯಲ್ಲಿ ನಿನ್ನಿಂದ ಸಂರಕ್ಷಿತವಾದ ಈ ನಮ್ಮ ಅಪಾರಸೈನ್ಯವನ್ನು ಶತ್ರುಪಕ್ಷದ ರಾಜರು ಕಣ್ಣೆತ್ತಿನೋಡಲೂ ಸಮರ್ಥರಾಗಿರಲಿಲ್ಲ. ಅದೇ ರೀತಿಯಲ್ಲಿ ನಿನ್ನಿಂದ ಸತತವಾಗಿ ರಕ್ಷಿಸಲ್ಪಡುತ್ತಿದ್ದ ಶಿಖಂಡಿ-ಧೃಷ್ಟದ್ಯುಮ್ನರು ಭೀಷ್ಮ-ದ್ರೋಣರನ್ನು ಸಂಹರಿಸಿದರು. ಭರತವಂಶೀಯರ ಸೈನ್ಯದಲ್ಲಿದ್ದ, ಮಹಾರಥರಾದ, ಇಂದ್ರಸದೃಶಪರಾಕ್ರಮರಾದ ಭೀಷ್ಮ-ದ್ರೋಣರನ್ನು

ಯುದ್ಧಸಮಯದಲ್ಲಿ ಜಯಿಸಲು ತಾನೇ ಯಾರು ಸಮರ್ಥರು? ಅಕ್ಷೌಹಿಣೀಸೈನ್ಯಕ್ಕೆ ಅಧಿಪತಿಗಳಾದ, ವೀರರಾದ, ಅಸ್ತ್ರವಿದರಾದ, ಭಯಂಕರಪರಾಕ್ರಮಿಗಳಾದ, ಸುಸಂಘಟಿತರಾದ, ರಣೋನ್ಮತ್ತರಾದ ಮತ್ತು ಯುದ್ಧದಿಂದ ಯಾವಾಗಲೂ ಹಿಂದಿರುಗದಿರುವ ಭೀಷ್ಮ, ದ್ರೋಣ, ಕೃಪ, ವೈಕರ್ತನಕರ್ಣ, ಅಶ್ವತ್ಥಾಮಾ, ಭೂರಿಶ್ರವಸ, ಕೃತವರ್ಮಾ, ಜಯದ್ರಥ, ಶಲ್ಯ, ದುರ್ಯೋಧನ–ಇವರೇ ಮೊದಲಾದ ವೀರಯೋಧರನ್ನು ಜಯಿಸುವ ಸಾಮರ್ಥ್ಯವಿರುವವನು ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾವನಿದ್ದಾನೆ? ಕುಂತೀಪುತ್ರ! ಅಸಹನಶೀಲರಾದ ಕ್ಷತ್ರಿಯರ ಅನೇಕದಳಗಳಿದ್ದುವು. ಆ ಸೈನ್ಯಗಳು ಬಹಳ ಭಯಂಕರವಾಗಿದ್ದುವು. ಪ್ರಪಂಚದ ನಾನಾದೇಶಗಳಿಂದ ಬಂದಿದ್ದುವು. ಆ ಸೈನ್ಯಗಳೆಲ್ಲವೂ ಈಗ ವಿನಾಶವಾಗಿಹೋಗಿವೆ. ಆ ಸೈನ್ಯದ ದಳಗಳಲ್ಲಿದ್ದ ಅಶ್ವ-ರಥ-ಗಜಗಳೂ ವಿಧ್ವಂಸಿತವಾಗಿವೆ.

ಅರ್ಜುನ! ಗೋವಾಸ, ದಾಸಮೀಯ, ವಸಾತಿ, ಪ್ರಾಚ್ಯ, ವಾಟಧಾನ ಮತ್ತು ಭೋಜದೇಶಗಳ ಅಭಿಮಾನಿಗಳಾದ ವೀರರ ಮತ್ತು ಸಂಪೂರ್ಣ ಕ್ಷತ್ರಿಯರ ಉದ್ಧತರಾದ ಅಶ್ವ-ಗಜಸೈನಿಕರು ನಿನ್ನನ್ನೂ ಮತ್ತು ಭೀಮಸೇನನನ್ನೂ ಯುದ್ಧದಲ್ಲಿ ಸಂಧಿಸಿ ನಿಧನವನ್ನೈದಿದರು. ಮಹಾಕೋಪಿಷ್ಠರಾದ, ಯುದ್ಧಕುಶಲರಾದ, ಮಹಾಬಲಿಷ್ಠರಾದ, ದಂಡಪಾಣಿಗಳಾದ, ಉಗ್ರಸ್ವಭಾವದವರಾದ, ಭಯಂಕರಕರ್ಮರಾದ ತುಷಾರರು, ಯವನರು, ಖಶರು, ದಾರ್ವಾಭಿಸಾರರು, ದರದರು, ಶಕರು, ಮಾಠರರು, ತುಂಗಣರು, ಆಂಧ್ರರು, ಪುಲಿಂದರು, ಕಿರಾತರು, ಮ್ಲೇಚ್ಛರು, ಪರ್ವತೀಯರು ಮತ್ತು ಸಮುದ್ರತೀರವಾಸಿಗಳು ದುರ್ಯೋಧನನ ಸಲುವಾಗಿ ಕುರುಗಳೊಡನೆ ಸೇರಿಕೊಂಡು ಯುದ್ಧಮಾಡುತ್ತಿದ್ದರು. ಪರಂತಪನೇ! ಅವರೆಲ್ಲರನ್ನೂ ಜಯಿಸಲು ನಿನ್ನೊಬ್ಬನ ಹೊರತಾಗಿ ಬೇರೆ ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ನೀನು ಪಾಂಡವರ ಸೈನ್ಯದ ರಕ್ಷಕನಾಗಿರದಿದ್ದರೆ ವ್ಯೂಹಕ್ರಮದಲ್ಲಿ ಯುದ್ಧಸನ್ನದ್ಧವಾಗಿರುವ ದುರ್ಯೋಧನನ ಶ್ರೇಷ್ಠವಾದ ಮಹಾಸೈನ್ಯವನ್ನು ಯಾವ ಮನುಷ್ಯನು ತಾನೇ ಎದುರಿಸಲು ಹೋಗುತ್ತಿದ್ದನು? ಧೂಳಿನಿಂದ ಆವೃತವಾಗಿ ಸಮುದ್ರದಂತೆ ಉಕ್ಕಿಬರುತ್ತಿದ್ದ ಆ ಕೌರವ ಮಹಾಸೈನ್ಯವನ್ನು ನಿನ್ನಿಂದ ಸಂರಕ್ಷಿತರಾದ ಕ್ರುದ್ಧರಾದ ಪಾಂಡವಯೋಧರು

ವಿನಾಶಗೊಳಿಸಿದರು. ಇಂದಿಗೆ ಏಳು ದಿನಗಳ ಹಿಂದೆ ಮಗಧರಿಗೆ ಅಧಿಪತಿಯಾದ, ಮಹಾಬಲನಾದ ಜಯತ್ಸೇನನನ್ನು ಯುದ್ಧದಲ್ಲಿ ಅಭಿಮನ್ಯುವು ಸಂಹರಿಸಿದನು. ಅನಂತರ ಭೀಮಸೇನನು ಭಯಂಕರವಾದ ಸಂಹಾರಕಾರ್ಯದಲ್ಲಿ ತೊಡಗಿದ್ದ ಜಯತ್ಸೇನರಾಜನ ಹತ್ತು ಸಾವಿರ ಗಜ ಯೋಧರನ್ನು ಗದೆಯಿಂದ ಸಂಹರಿಸಿದನು. ಬಳಿಕ ಇನ್ನೂ ಅನೇಕ ಆನೆಗಳೂ, ರಥಗಳೂ ನೂರಾರು ಸಂಖ್ಯೆಯಲ್ಲಿ ಭೀಮಸೇನನಿಂದ ಬಲಪೂರ್ವಕವಾಗಿ ವಧಿಸಲ್ಪಟ್ಟುವು. ಅರ್ಜುನ! ಮಹಾಭಯಂಕರವಾದ ಯುದ್ಧವು ಹೀಗೆ ನಡೆಯುತ್ತಿರಲಾಗಿ, ಕೌರವರು ಗಜಾಶ್ವ-ರಥಸೈನ್ಯಗಳ ಸಮೇತರಾಗಿ ನಿನ್ನೊಡನೆಯೂ ಮತ್ತು ಭೀಮಸೇನನೊಡನೆಯೂ ಯುದ್ಧದಲ್ಲಿ ತೊಡಗಿ ಹತರಾಗಿ ಮೃತ್ಯುಲೋಕವನ್ನೈದಿದರು. ಈ ರೀತಿಯಲ್ಲಿ ಪಾಂಡವಯೋಧರು ಕೌರವರ ಪ್ರಮುಖಸೈನ್ಯವನ್ನು ನಾಶಪಡಿಸಿದರು. ಅತ್ತಕಡೆ ಭೀಷ್ಮನು ಭಯಂಕರವಾದ ಬಾಣಗಳ ಸಮೂಹಗಳನ್ನೇ ಸೃಷ್ಟಿಸಿ ನಮ್ಮ ಸೈನ್ಯದ ಮೇಲೆ ಸುರಿಸತೊಡಗಿದನು. ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿದುಕೊಂಡಿದ್ದ ಭೀಷ್ಮನು ಚೇದಿ-ಕಾಶಿ-ಪಾಂಚಾಲ-ಕರೂಷ-ಮತ್ಸ್ಯ-ಕೇಕಯಸೈನಿಕರನ್ನು ಬಾಣಗಳಿಂದ ಆಚ್ಛಾದಿಸಿ ಸಂಹರಿಸಿದನು. ಭೀಷ್ಮನ ಧನುಸ್ಸಿನಿಂದ ಚ್ಯುತವಾದ, ಶತ್ರುಸೈನಿಕರ ದೇಹವನ್ನು ಸೀಳಿಹಾಕುತ್ತಿದ್ದ, ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ನೇರವಾಗಿ ಹೋಗುವ ಬಾಣಗಳಿಂದ ಆಕಾಶವೇ ತುಂಬಿಹೋಯಿತು. ಬಾಣಗಳ ಒಂದೊಂದೇ ಮುಷ್ಟಿಯಿಂದ ರಣಾಂಗಣದಲ್ಲಿ ಸಂಘಟಿತರಾಗಿ ನಿಂತು ಯುದ್ಧಮಾಡುತ್ತಿದ್ದ ಮಹಾಬಲಿಷ್ಠರಾದ ಲಕ್ಷಪದಾತಿಗಳನ್ನೂ ಆನೆಗಳನ್ನೂ ಸಂಹರಿಸಿ, ಸಾವಿರಾರು ರಥಿಗಳನ್ನೂ ಭೀಷ್ಮನು ಧ್ವಂಸಮಾಡಿದ್ದನು. ಭೀಷ್ಮನು ರಣರಂಗದಲ್ಲಿ ಅವಿದ್ಧವೇ ಮೊದಲಾದ ದೋಷಯುಕ್ತವಾದ ಒಂಬತ್ತು ಬಗೆಯ ಬಾಣಪ್ರಯೋಗಗತಿಗಳನ್ನೂ ವರ್ಜಿಸಿ ಹತ್ತನೆಯದಾದ ಕ್ರುಷ್ಟಾಗತಿಯಿಂದಲೇ ಶತ್ರುವಿನ ಮೇಲೆ ಬಾಣಗಳನ್ನು ಸುರಿಸುತ್ತಿದ್ದನು. ಆ ಬಾಣಗಳು ಪಾಂಡವರ ಪಕ್ಷದ ಅಶ್ವ-ರಥ-ಗಜಸೈನಿಕರನ್ನು ಅಪಾರ ಸಂಖ್ಯೆಯಲ್ಲಿ ಸಂಹರಿಸಿದುವು. ಹತ್ತು ದಿವಸಗಳ ಪರ್ಯಂತವಾಗಿ ನಿನ್ನ ಸೈನ್ಯವನ್ನು ಎಡೆಬಿಡದೇ ಸಂಹರಿಸುತ್ತಿದ್ದ ಭೀಷ್ಮನು ಅನೇಕರಥ

ಗಳನ್ನು ರಥಿಗಳಿಂದ ಶೂನ್ಯವನ್ನಾಗಿ ಮಾಡಿದನು ಮತ್ತು ಅನೇಕ ಗಜಾಶ್ವ ಸೈನಿಕರನ್ನೂ ಸಂಹರಿಸಿದನು. ಯುದ್ಧದಲ್ಲಿ ಹರಿ-ಹರರಿಗೆ ಸಮಾನವಾಗಿ ಭಯಂಕರರೂಪವನ್ನು ಪ್ರದರ್ಶಿಸುತ್ತಾ ಭೀಷ್ಮನು ಪಾಂಡವರ ಸೈನ್ಯಗಳನ್ನು ಬಲಪೂರ್ವಕವಾಗಿ ಹಿಡಿದು ವೀರರನ್ನು ಆರಿಸಿ ನಾಶಗೊಳಿಸಿದನು. ಅರ್ಜುನ! ಮೂರ್ಖನಾದ ದುರ್ಯೋಧನನು–ನಾವೆಯಿಂದ ರಹಿತವಾದ ವಿಪತ್ತೆಂಬ ಸಾಗರದಲ್ಲಿ ಮುಳುಗಿಹೋಗುವುದರಲ್ಲಿದ್ದನು. ಅಂತಹವನನ್ನು ಹೇಗಾದರೂ ಮಾಡಿ ಉದ್ಧರಿಸಬೇಕೆಂಬ ಆಶಯದಿಂದ ಭೀಷ್ಮನು ಚೇದಿ-ಪಾಂಚಾಲ-ಕೇಕಯರಾಜರನ್ನು ಧ್ವಂಸಮಾಡುತ್ತಾ, ರಥಾಶ್ವ-ಗಜಗಳಿಂದ ಸಂಪನ್ನವಾಗಿದ್ದ ಪಾಂಡವರ ಸೈನ್ಯವನ್ನು ದಹಿಸಿಬಿಟ್ಟನು. ಶ್ರೇಷ್ಠವಾದ ಆಯುಧಗಳನ್ನು ಧರಿಸಿದ್ದ ಸೃಂಜಯರ ಕಡೆಯ ಸಾವಿರ-ಕೋಟಿ (ಅಸಂಖ್ಯಾತ) ಪದಾತಿಸೈನಿಕರೂ ಮತ್ತು ಇನ್ನೂ ಅನೇಕ ರಾಜರೂ ರಣಾಂಗಣದಲ್ಲಿ ಸಂಚರಿಸುತ್ತಿದ್ದ, ಮಧ್ಯಾಹ್ನಕಾಲದ ಸೂರ್ಯನಂತೆ ಶತ್ರುಗಳಿಗೆ ತಾಪವನ್ನುಂಟುಮಾಡುತ್ತಿದ್ದ ಭೀಷ್ಮನನ್ನು ಕಣ್ಣೆತ್ತಿ ನೋಡಲು ಕೂಡ ಸಮರ್ಥರಾಗಿರಲಿಲ್ಲ. ವಿಜಯದಿಂದ ಪ್ರದೀಪ್ತನಾಗಿದ್ದ, ಅದರಿಂದಲೇ ರಣಾಂಗಣದ ಸುತ್ತಲೂ ದರ್ಪದಿಂದ ಸಂಚರಿಸುತ್ತಿದ್ದ ಭೀಷ್ಮನನ್ನು ಪಾಂಡವಸೈನಿಕರು ಸರ್ವಪ್ರಯತ್ನದಿಂದಲೂ ಆಕ್ರಮಿಸಿದರು. ಆದರೆ ಕ್ಷಣಮಾತ್ರದಲ್ಲಿ ಭೀಷ್ಮನೊಬ್ಬನೇ ಬಾಣಗಳ ಪ್ರಹಾರಗಳಿಂದ ಪಾಂಡವ-ಸೃಂಜಯಯೋಧರನ್ನು ಪಲಾಯನ ಪರಾಯಣರನ್ನಾಗಿ ಮಾಡಿ ರಣಾಂಗಣದಲ್ಲಿ ಅದ್ವಿತೀಯವೀರನಾಗಿ ಪ್ರಕಾಶಿಸಿದನು. ಬಳಿಕ ನಿನ್ನಿಂದ ಸುಗುಪ್ತನಾದ ಶಿಖಂಡಿಯು ಮಹಾವ್ರತನಾದ ಪುರುಷವ್ಯಾಘ್ರನಾದ ಭೀಷ್ಮನನ್ನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಪ್ರಹರಿಸಿದನು. ವೃತ್ರಾಸುರನು ಇಂದ್ರನೊಡನೆ ಯುದ್ಧಮಾಡಲು ಹೋಗಿ ನಾಶವಾದಂತೆ–ಪುರುಷವ್ಯಾಘ್ರನಾದ ನಿನ್ನನ್ನು ಶತ್ರುವನ್ನಾಗಿ ಮಾಡಿಕೊಂಡು ಪಿತಾಮಹನಾದ ಭೀಷ್ಮನು ಬಾಣಗಳಿಂದ ಮಾಡಿರುವ ಹಾಸಿಗೆಯಲ್ಲಿ ಮಲಗಿದ್ದಾನೆ. ಬಳಿಕ ಭಯಂಕರಸ್ವರೂಪರಾದ ಮಹಾರಥರಾದ ದ್ರೋಣರು ಐದು ದಿವಸಗಳ ಪರ್ಯಂತವಾಗಿ ಅಭೇದ್ಯವಾದ ವ್ಯೂಹಗಳನ್ನು ರಚಿಸುತ್ತಾ, ಶತ್ರುಸೈನಿಕರನ್ನು ವಿಧ್ವಂಸನ ಮಾಡುತ್ತಾ, ಸಾವಿರಾರು ಮಹಾರಥರನ್ನು ತೀಕ್ಷ್ಣವಾದ ಬಾಣಗಳ ಪ್ರಹಾರ

ದಿಂದ ರಥದಿಂದ ಕೆಳಕ್ಕೆ ಬೀಳಿಸುತ್ತಾ, ಜಯದ್ರಥನನ್ನು ರಕ್ಷಣೆಮಾಡುತ್ತಾ ರಾತ್ರಿಯ ಯುದ್ಧದಲ್ಲಿ ಯಮಸದೃಶರಾಗಿ ಶತ್ರುಸೈನಿಕರನ್ನು ದಹಿಸಿಬಿಟ್ಟರು.

ಪ್ರತಾಪವಂತರಾದ, ಮಹಾವೀರರಾದ ದ್ರೋಣರು ಸಾವಿರಾರು ಯೋಧರನ್ನು ಬಾಣಗಳಿಂದ ದಹಿಸಿ ಕಟ್ಟಕಡೆಗೆ ಧೃಷ್ಟದ್ಯುಮ್ನನೊಡನೆ ಯುದ್ಧದಲ್ಲಿ ತೊಡಗಿ ಪರಮಪದವನ್ನು ಪಡೆದರು. ಆ ಸಮಯದಲ್ಲಿ ನೀನು ಕರ್ಣನೇ ಮೊದಲಾದ ಮಹಾರಥರನ್ನು ತಡೆಯದೇ ಇದ್ದಿದ್ದರೆ ದ್ರೋಣಾಚಾರ್ಯರನ್ನು ಸಂಹರಿಸಲು ಧೃಷ್ಟದ್ಯುಮ್ನನಿಗೆ ಸಾಧ್ಯವಾಗುತ್ತಲೇ ಇರಲಿಲ್ಲ. ನೀನು ದುರ್ಯೋಧನನ ಎಲ್ಲ ಸೈನ್ಯವನ್ನೂ ದ್ರೋಣರ ಸಹಾಯಕ್ಕೆ ಹೋಗಲಾಗದಂತೆ ತಡೆದು ನಿಲ್ಲಿಸಿದ್ದೆ. ಆ ಸಮಯದಲ್ಲಿಯೇ ಧೃಷ್ಟದ್ಯುಮ್ನನು ಯುದ್ಧದಲ್ಲಿ ದ್ರೋಣರನ್ನು ಸಂಹರಿಸಿದನು. ಪಾರ್ಥ! ನಿಶ್ಚಯವಾಗಿಯೂ ನೀನು ಜಯದ್ರಥನನ್ನು ವಧಿಸುವ ಸಮಯದಲ್ಲಿ ತೋರಿಸಿದ ಅತುಲಸಾಹಸವನ್ನು ಬೇರೆ ಯಾವ ಕ್ಷತ್ರಿಯನು ತಾನೇ ತೋರಿಸಬಲ್ಲನು? ನೀನು ಮಹಾಸ್ತ್ರಗಳ ಬಲದಿಂದಲೂ ಮತ್ತು ತೇಜಸ್ಸಿನಿಂದಲೂ ಕೌರವರ ಮಹಾಸೈನ್ಯವನ್ನು ಮುಂದಕ್ಕೆ ಬರದಂತೆ ತಡೆದು ನಿಲ್ಲಿಸಿ, ಅನೇಕ ಶೂರರಾದ ರಾಜರನ್ನೂ ಸಂಹರಿಸಿ, ಸೈಂಧವರಾಜನನ್ನು ಸಂಹರಿಸಿದೆ. ಸಿಂಧುರಾಜನ ವಧೆಯನ್ನು ಒಂದು ಆಶ್ಚರ್ಯಕರವಾದ ಘಟನೆಯೆಂದೇ ರಾಜರೆಲ್ಲರೂ ಭಾವಿಸಿದ್ದಾರೆ. ಆದರೆ ನಿನ್ನ ವಿಷಯದಲ್ಲಿ ಅದು ಆಶ್ಚರ್ಯಕರವಾದ ಘಟನೆಯೆಂದು ನನಗನಿಸುವುದಿಲ್ಲ. ಏಕೆಂದರೆ: ನೀನು ಅಸಾಧಾರಣ ಮಹಾರಥನಾಗಿರುವೆ. ರಣಭೂಮಿಯಲ್ಲಿ ನಿನ್ನನ್ನು ಎದುರಿಸಲು ಬರುವ ಸಮಸ್ತಕ್ಷತ್ರಿಯಸಮೂಹವೂ ಒಂದೇ ಹಗಲಿನಲ್ಲಿಯೇ ವಿನಾಶಹೊಂದುವುದೆಂದು ಹೇಳುವುದು ಯುಕ್ತವೆಂದು ಭಾವಿಸುತ್ತೇನೆ. ನಿನ್ನ ಪರಾಕ್ರಮದ ವಿಷಯದಲ್ಲಿ ಇದು ನನ್ನ ಅಭಿಪ್ರಾಯವಾಗಿದೆ. ಅರ್ಜುನ! ಯಾವಾಗ ಭೀಷ್ಮ-ದ್ರೋಣರಿಬ್ಬರೂ ಯುದ್ಧದಲ್ಲಿ ಹತರಾಗಿ ಹೋದರೋ–ಆಗಲೇ ಭಯಂಕರವಾಗಿದ್ದ ದುರ್ಯೋಧನನ ಸೈನ್ಯವು ಎಲ್ಲ ಮಹಾವೀರರನ್ನೂ ಕಳೆದುಕೊಂಡು ಬಿಟ್ಟಿದ್ದಿತು. ಪ್ರಧಾನಭೂತರಾದ ಯೋಧರನ್ನು ಕಳೆದುಕೊಂಡಿರುವ, ಸಾವಿರಾರು ಸಂಖ್ಯೆಯಲ್ಲಿ ಹತವಾದ ಗಜಾಶ್ವ-ರಥಗಳುಳ್ಳ ಕೌರವರ ಮಹಾ

ಸೈನ್ಯವಿಂದು ಸೂರ್ಯ-ಚಂದ್ರ-ನಕ್ಷತ್ರಗಳಿಂದ ವಿಹೀನವಾದ ಆಕಾಶದಂತೆಯೇ ಕಾಣುತ್ತಿದೆ. ಭೀಮವಿಕ್ರಮನೇ! ಇಂದ್ರನ ಪರಾಕ್ರಮದಿಂದ ರಾಕ್ಷಸರ ಸೈನ್ಯವು ವಿನಾಶವಾದಂತೆ–ಭಾರತೀಸೇನೆಯು ಈಗಿನ ಯುದ್ಧದಲ್ಲಿ ಸಂಪೂರ್ಣವಾಗಿ ವಿನಾಶಹೊಂದಿದೆ. ಅಳಿದುಳಿದಿರುವ ಶತ್ರುಪಕ್ಷದ ಯೋಧರಲ್ಲಿ ಐವರು ಮಹಾರಥರು ಮಾತ್ರವೇ ಇದ್ದಾರೆ.

**ಅಶ್ವತ್ಥಾಮಾ ಕೃತವರ್ಮಾ ಕರ್ಣೋ ಮದ್ರಾಧಿಪಃ ಕೃಪಃ ॥೫೪॥**

ಆಚಾರ್ಯಪುತ್ರನಾದ ಅಶ್ವತ್ಥಾಮಾ, ಕೃತವರ್ಮಾ, ಕರ್ಣ, ಶಲ್ಯ ಮತ್ತು ಕೃಪ–ಇವರೇ ಆ ಐವರು ಮಹಾರಥರು. ನರಶ್ರೇಷ್ಠನೇ! ಆ ಐವರು ಮಹಾರಥರನ್ನು ನೀನೀಗ ಸಂಹರಿಸಿ ಶತ್ರುರಹಿತನಾಗಿ, ದ್ವೀಪಗಳಿಂದಲೂ, ಪತ್ತನಗಳಿಂದಲೂ ಸಮಲಂಕೃತವಾದ ಈ ಅಖಂಡಭೂಮಂಡಲವನ್ನೇ ಯುಧಿಷ್ಠಿರನಿಗೆ ಒಪ್ಪಿಸು. ಅಮಿತವಾದ ಪರಾಕ್ರಮದಿಂದಲೂ ಮತ್ತು ಕಾಂತಿಯಿಂದಲೂ ಸಂಪನ್ನನಾಗಿರುವ ಕುಂತೀಪುತ್ರನಾದ ಯುಧಿಷ್ಠಿರನು ಇಂದು ಆಕಾಶ-ಜಲ-ಪಾತಾಳ-ಪರ್ವತ ಮತ್ತು ದೊಡ್ಡ-ದೊಡ್ಡ ಅರಣ್ಯಗಳಿಂದ ಕೂಡಿರುವ ಈ ವಸುಂಧರೆಯನ್ನು ಪಡೆದುಕೊಳ್ಳಲಿ. ಹಿಂದೆ ಮಹಾವಿಷ್ಣುವು ದೈತ್ಯರನ್ನೂ ಮತ್ತು ದಾನವರನ್ನೂ ಸಂಹರಿಸಿ ತ್ರೈಲೋಕ್ಯಾಧಿಪತ್ಯವನ್ನು ಇಂದ್ರನಿಗೆ ವಹಿಸಿಕೊಟ್ಟಂತೆ–ನೀನಿಂದು ಆ ಐವರು ಮಹಾರಥರನ್ನೂ ಸಂಹರಿಸಿ ಈ ಭೂಮಂಡಲವನ್ನು ಯುಧಿಷ್ಠಿರನಿಗೆ ಸಮರ್ಪಿಸು.

ಮಹಾವಿಷ್ಣುವು ದಾನವರನ್ನು ಸಂಹರಿಸಿದನಂತರ ದೇವತೆಗಳು ಆನಂದಪಟ್ಟಂತೆ–ನೀನು ಅಳಿದುಳಿದಿರುವ ಶತ್ರುಗಳನ್ನು ಸಂಹರಿಸಿದನಂತರ ಪಾಂಚಾಲರು ಆನಂದಪಡಲಿ.

ಅರ್ಜುನ! ಒಂದು ವೇಳೆ ಮಾನವಶ್ರೇಷ್ಠರಾದ ಮತ್ತು ಆಚಾರ್ಯರಾದ ದ್ರೋಣರ ಮೇಲಿನ ಗೌರವದಿಂದಾಗಿ ಅವರ ಮಗನಾದ ಅಶ್ವತ್ಥಾಮನ ಮೇಲೆ ನಿನಗೆ ದಯಾಭಾವವಿರುವುದಾದರೆ–ಅವನನ್ನು ನೀನು ಸಂಹರಿಸಬೇಡ. ಕೃಪರ ವಿಷಯದಲ್ಲಿ–'ಅವರು ಆಚಾರ್ಯರು, ಅವಧ್ಯರು'–ಎಂಬ ಭಾವನೆಯಿರುವುದಾದರೆ ಅವರನ್ನೂ ಸಂಹರಿಸಬೇಡ. ಅತ್ಯಂತಪೂಜ್ಯರಾದ

ತಾಯಿಯ ಕಡೆಯ ಸಂಬಂಧಿಗಳನ್ನು ಗೌರವಿಸುವ ಇಚ್ಛೆಯಿಂದ ಕೃತವರ್ಮನನ್ನು ಯಮಸದನಕ್ಕೆ ಕಳುಹಿಸುವ ಇಚ್ಛೆಯಿಲ್ಲದಿದ್ದರೂ ಚಿಂತೆಯಿಲ್ಲ. ಅರವಿಂದಾಕ್ಷನೇ! ದಯಾವಂತನೇ! ತಾಯಿಯ ಅಣ್ಣನೊಡನೆ (ಸೋದರಮಾವನಾದ ಶಲ್ಯನೊಡನೆ) ಯುದ್ಧದಲ್ಲಿ ತೊಡಗಿ ಅವನನ್ನು ಸಂಹರಿಸುವುದಿಲ್ಲವೆಂದು ಹೇಳಿದರೂ ನಾನು ಆಕ್ಷೇಪಿಸುವುದಿಲ್ಲ. ಆದರೆ ಪಾಂಡವರ ವಿಷಯದಲ್ಲಿ ಸದಾ ಪಾಪಬುದ್ಧಿಯಿಂದಲೇ ಇರುವ ಕ್ಷುದ್ರನಾದ ಕರ್ಣನನ್ನು ಮಾತ್ರ ನೀನು ಸುನಿಶಿತವಾದ ಬಾಣಗಳಿಂದ ಸಂಹರಿಸು. (ಸಂಹರಿಸಲೇಬೇಕು.)

**ಏತತ್ತೇ ಸುಕೃತಂ ಕರ್ಮ ನಾತ್ರ ಕಿಂಚನ ಯುಜ್ಯತೇ ।**
**ವಯಮಪ್ಯನುಜಾನೀಮೋ ನಾತ್ರ ದೋಷೋಽಸ್ತಿ ಕಶ್ಚನ ॥೬೩॥**

ಇದು ನಿನಗೆ ಮಹಾಪುಣ್ಯಕಾರ್ಯ. ಈ ವಿಷಯದಲ್ಲಿ ವಿಚಾರಮಾಡುವ ಪ್ರಸಕ್ತಿಯೇ ಇಲ್ಲ. ನಾನೂ ಸಹ ಈ ಪುಣ್ಯಕಾರ್ಯವನ್ನು ಮಾಡುವಂತೆ ನಿನಗೆ ಅನುಜ್ಞೆನೀಡುತ್ತೇನೆ. ಕರ್ಣನನ್ನು ನೀನೀಗ ಸಂಹರಿಸುವುದರಲ್ಲಿ ಯಾವ ದೋಷವೂ ಇಲ್ಲ.

**ದಹನೇ ಯತ್ಸಪುತ್ರಾಯ ನಿಶಿ ಮಾತುಸ್ತವಾನಘ ।**
**ದ್ಯೂತಾರ್ಥೇ ಯಚ್ಚ ಯುಷ್ಮಾಸು ಪ್ರಾವರ್ತತ ಸುಯೋಧನಃ ।**
**ಯಸ್ಯ ಸರ್ವಸ್ಯ ದುಷ್ಟಾತ್ಮಾ ಕರ್ಣೋ ವೈ ಮೂಲಮಿತ್ಯುತ ॥೬೪॥**

ಪಾಪರಹಿತನಾದ ಅರ್ಜುನನೇ! ರಾತ್ರಿಯ ವೇಳೆಯಲ್ಲಿ ನಿಮ್ಮ ತಾಯಿಯನ್ನು ಮಕ್ಕಳ ಜೊತೆಯಲ್ಲಿಯೇ ಸುಟ್ಟುಹಾಕಲು ಮತ್ತು ರಾಜ್ಯಾಪಹರಣಕ್ಕಾಗಿ ನಿಮ್ಮೊಡನೆ ಜೂಜಾಡಲು ದುರ್ಯೋಧನನಿಗೆ ಯಾವ ಪ್ರವೃತ್ತಿಯುಂಟಾಯಿತೋ–ಆ ಎಲ್ಲ ದುಷ್ಟಕಾರ್ಯಗಳ ಪ್ರೇರಕನೂ ಮತ್ತು ಮೂಲಕಾರಣನೂ ಈ ದುಷ್ಟಾತ್ಮನಾದ ಕರ್ಣನೇ ಆಗಿದ್ದಾನೆ.

**ಕರ್ಣಾದ್ಧಿ ಮನ್ಯತೇ ತ್ರಾಣಂ ನಿತ್ಯಮೇವ ಸುಯೋಧನಃ ।**
**ತತೋ ಮಾಮಪಿ ಸಂರಬ್ಧೋ ನಿಗ್ರಹೀತುಂ ಪ್ರಚಕ್ರಮೇ ॥೬೫॥**

ದುರ್ಯೋಧನನು ಸರ್ವಕಾಲದಲ್ಲಿಯೂ ತನಗೆ ಕರ್ಣನೇ ರಕ್ಷಕನಾಗಿ

ರುವನೆಂದು ದೃಢವಾಗಿ ನಂಬಿದ್ದಾನೆ. ಈ ಕಾರಣದಿಂದಲೇ ಅವನು ಆವೇಶಪೂರ್ಣನಾಗಿ ತುಂಬಿದ ಸಭೆಯಲ್ಲಿ ನನ್ನನ್ನೂ ಬಂಧಿಸಲು ಪ್ರಯತ್ನಿಸಿದನು. ಅರ್ಜುನ! ಧೃತರಾಷ್ಟ್ರನ ಮಗನಾದ ದುರ್ಯೋಧನ ರಾಜನಿಗೆ ಕರ್ಣನು ಯುದ್ಧದಲ್ಲಿ ಎಲ್ಲ ಪಾಂಡವರನ್ನೂ ನಿಸ್ಸಂಶಯವಾಗಿ ಪರಾಜಯಗೊಳಿಸುತ್ತಾನೆಂಬ ದೃಢಬುದ್ಧಿಯಿದೆ.

ಅರ್ಜುನ! ನಿನ್ನ ಬಲವೆಷ್ಟೆಂಬುದು ತಿಳಿದಿದ್ದರೂ ದುರ್ಯೋಧನನು ಕರ್ಣನನ್ನು ಆಶ್ರಯಿಸಿ ಅವನ ಮೇಲಿನ ಭರವಸೆಯಿಂದಲೇ ನಿನ್ನೊಡನೆ ಯುದ್ಧಮಾಡಲು ನಿಶ್ಚಯಿಸಿದನು. 'ನನ್ನೊಡನೆ ಯುದ್ಧಕ್ಕೆ ಬರುವ ಕುಂತಿಯ ಮಕ್ಕಳನ್ನೂ ಮತ್ತು ದಶಾರ್ಹಕುಲತಿಲಕನಾದ, ಮಹಾರಥನಾದ ವಾಸುದೇವನನ್ನೂ ಜಯಿಸುತ್ತೇನೆ'–ಎಂದು ಅನುದಿನವೂ ಕರ್ಣನು ಹೇಳುತ್ತಲೇ ಇದ್ದಾನೆ. ಕರ್ಣನು ಮಹಾಮೂಢನಾದ, ದುರಾತ್ಮನಾದ ದುರ್ಯೋಧನನನ್ನು ಪ್ರೋತ್ಸಾಹಿಸುತ್ತಾ ರಾಜರ ಸಭೆಯಲ್ಲಿ ಅನುದಿನವೂ ಗರ್ಜಿಸುತ್ತಲೇ ಇರುತ್ತಾನೆ. ಅಂತಹ ಪರಮದುಷ್ಟನಾದ ಕರ್ಣನನ್ನು ನೀನಿಂದು ಸಂಹರಿಸು. ದುರ್ಯೋಧನನು ನಿಮ್ಮೊಡನೆ ಯಾವ-ಯಾವ ದುರ್ವ್ಯವಹಾರಗಳನ್ನು ನಡೆಸಿದ್ದಾನೆಯೋ–ಆ ಎಲ್ಲ ದುರ್ವ್ಯವಹಾರಗಳಿಗೂ ದುಷ್ಟಾತ್ಮನಾದ, ಪಾಪಿಷ್ಠನಾದ ಕರ್ಣನೇ ಮುಖ್ಯಕಾರಣನು. ಪ್ರಾಣ ಸಖನೇ! ಸುಭದ್ರೆಯ ವೀರಪುತ್ರನಾದ, ಗೂಳಿಯ ಕಣ್ಣುಗಳಿಗೆ ಸಮಾನ ವಾದ ಮತ್ತು ವಿಶಾಲವಾದ ಕಣ್ಣುಗಳನ್ನು ಹೊಂದಿದ್ದ, ಕುರುಕುಲ ಮತ್ತು ವೃಷ್ಣಿಕುಲಗಳ ಯಶಸ್ಸನ್ನು ವೃದ್ಧಿಗೊಳಿಸುವವನಾಗಿದ್ದ, ಎತ್ತಿನ ಹೆಗಲಿ ನಂತೆ ಹೆಗಲುಳ್ಳವನಾಗಿದ್ದ ಅಭಿಮನ್ಯುವನ್ನು ಆರು ಮಂದಿ ಮಹಾರಥರೂ ಸೇರಿ ವಧೆಮಾಡಿದುದನ್ನು ನಾನೇ ನೋಡಿದೆನು. ದ್ರೋಣರು, ಅಶ್ವತ್ಥಾಮಾ, ಕೃಪರು–ಇವರೇ ಮೊದಲಾದ ವೀರರನ್ನು ಅಭಿಮನ್ಯುವು ನಿಶಿತವಾದ ಬಾಣ ಗಳಿಂದ ಪೀಡಿಸುತ್ತಿದ್ದನು. ಆನೆಗಳನ್ನು ಯೋಧರಹಿತಗಳನ್ನಾಗಿ ಮಾಡಿದನು. ಅನೇಕಮಹಾರಥರನ್ನು ರಥಹೀನರನ್ನಾಗಿ ಮಾಡಿದನು. ಕುದುರೆಗಳನ್ನು ಸವಾರರಿಂದ ರಹಿತವನ್ನಾಗಿ ಮಾಡಿದನು. ಪದಾತಿಸೈನಿಕರನ್ನು ಆಯುಧಗಳಿಂದ ರಹಿತರನ್ನಾಗಿ ಮಾಡಿದನು. ಕೌರವರ ಕಡೆಯ ಸೈನಿಕರನ್ನು ಅನವರತವಾಗಿ ಧ್ವಂಸಮಾಡುತ್ತಿದ್ದನು. ಮಹಾರಥರನ್ನೂ ನಿಶಿತವಾದ

ಬಾಣಗಳಿಂದ ಬಹಳವಾಗಿ ವ್ಯಥೆಗೊಳಿಸುತ್ತಿದ್ದನು. ಹೀಗೆ ಹೋರಾಡುತ್ತಾ ಅಭಿಮನ್ಯುವು ಗಜಾಶ್ವ-ಪದಾತಿಸೈನಿಕರನ್ನು ಅಪಾರಸಂಖ್ಯೆಯಲ್ಲಿ ಯಮಾಲಯಕ್ಕೆ ಕಳುಹಿಸಿದನು. ಬಾಣಗಳಿಂದ ಕೌರವಸೈನ್ಯವನ್ನು ಸಂಪೂರ್ಣವಾಗಿ ದಹಿಸಿಬಿಡುವವನಂತೆ ರಣಾಂಗಣದಲ್ಲಿ ಸಂಚರಿಸುತ್ತಿದ್ದ ಅಭಿಮನ್ಯುವನ್ನು ಆರು ಮಂದಿ ಮಹಾರಥರು ಒಟ್ಟಾಗಿ ಸೇರಿ ಸಂಹರಿಸಿದರು. ಅರ್ಜುನ! ಸತ್ಯವಾಗಿ ಹೇಳುತ್ತೇನೆ. ಈ ವಿಷಯವು ನನ್ನ ಅಂಗಾಂಗಗಳನ್ನೂ ಬಹಳವಾಗಿ ಸುಡುತ್ತಿದೆ. ಅಲ್ಲಿಯೂ ಸಹ ದುಷ್ಟಾತ್ಮನಾದ ಕರ್ಣನೇ ನಮಗೆ ದ್ರೋಹವನ್ನೆಸಗಿದನು. ಅಭಿಮನ್ಯುವಿನ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದ ಕರ್ಣನು ರಕ್ತದಿಂದ ತೋಯ್ದು ಕ್ಷಣಕಾಲ ಮೂರ್ಛಿತನಾಗಿಯೂ ಬಿದ್ದಿದ್ದನು. ಅಭಿಮನ್ಯುವಿನ ಬಾಣಗಳಿಂದ ಸತತವಾಗಿ ಪೀಡಿಸಲ್ಪಡುತ್ತಿದ್ದ ಕರ್ಣನು ಕೋಪದಿಂದ ಕಿಡಿ-ಕಿಡಿಯಾಗಿದ್ದನು. ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಯುದ್ಧ ಮಾಡುವುದರಲ್ಲಿ ನಿರಾಶನಾಗಿ ಪಲಾಯನಮಾಡುವುದರಲ್ಲಿಯೇ ಹೆಚ್ಚು ಉತ್ಸಾಹವುಳ್ಳವನಾಗಿದ್ದನು. ಅಭಿಮನ್ಯುವಿನ ಬಾಣಗಳ ಪ್ರಹಾರದಿಂದ ಉಂಟಾದ ಶ್ರಮದಿಂದ ಕರ್ಣನು ಅತ್ಯಂತವಿಹ್ವಲನಾಗಿ ರಣರಂಗದಲ್ಲಿದ್ದನು. ಆ ಸಮಯದಲ್ಲಿ ಕರ್ಣನು–ದ್ರೋಣರು ಹೇಳಿದ ತತ್ಕಾಲೋಚಿತವಾದ, ಅತ್ಯಂತಕ್ರೂರವಾದ, ಅಭಿಮನ್ಯುವಿನ ವಧೋಪಾಯವನ್ನು ಕೇಳಿ ಸುಭದ್ರಾಪುತ್ರನ ಧನುಸ್ಸನ್ನು ಕತ್ತರಿಸಿದನು. ಕರ್ಣನು ಧನುಸ್ಸನ್ನು ಕತ್ತರಿಸಿದನಂತರ ಛಿನ್ನಾಯುಧನಾಗಿದ್ದ ಅಭಿಮನ್ಯುವನ್ನು ವಂಚನೆಯ ಬುದ್ಧಿಯಿಂದ ಕೂಡಿದ್ದ ಉಳಿದ ಐವರು ಮಹಾರಥರೂ ಬಾಣಗಳ ವೃಷ್ಟಿಯಿಂದ ಪೀಡಿಸಿದರು. ಆ ಮಹಾವೀರನು ಹತನಾಗಲಾಗಿ ಶತ್ರು-ಮಿತ್ರರೆಂಬ ಭೇದವೇ ಇಲ್ಲದೇ ಶೋಕವು ಎಲ್ಲರನ್ನೂ ಆವರಿಸಿತು. ಆದರೆ ದುಷ್ಟಾತ್ಮನಾದ ಕರ್ಣನೂ ಮತ್ತು ದುರ್ಯೋಧನನೂ ಆನಂದದಿಂದ ಅಟ್ಟಹಾಸಪೂರ್ವಕವಾಗಿ ನಕ್ಕರು.

ಅರ್ಜುನ! ಕರ್ಣನು ಎಷ್ಟು ದುಷ್ಟನೆಂಬುದಕ್ಕೆ ಮತ್ತೊಂದು ನಿದರ್ಶನವನ್ನು ಕೊಡುತ್ತೇನೆ; ಕೇಳು. ಈ ಕರ್ಣನು ಅತ್ಯಂತಕ್ರೂರಿಯಂತೆ ತುಂಬಿದ ಕೌರವರ ಸಭೆಯಲ್ಲಿ ಕುರು-ಪಾಂಡವರಾಜಪುತ್ರರ ಸಮ್ಮುಖದಲ್ಲಿ ದ್ರೌಪದಿಯನ್ನು ಕುರಿತು ಕರ್ಣಕಠೋರವಾದ ಈ ಮಾತುಗಳನ್ನಾಡಿದನು:

ವಿನಷ್ಟಾಃ ಪಾಣ್ಡವಾಃ ಕೃಷ್ಣೇ ಶಾಶ್ವತಂ ನರಕಂ ಗತಾಃ ।
ಪತಿಮನ್ಯಂ ಪೃಥುಶ್ರೋಣಿ ವೃಣೀಷ್ವ ಮೃದುಭಾಷಿಣಿ ।
ಏಷಾ ತ್ವಂ ಧೃತರಾಷ್ಟ್ರಸ್ಯ ದಾಸೀಭೂತಾ ನಿವೇಶನಮ್ ॥೮೪॥

ಪ್ರವಿಶಾರಾಲಪಕ್ಷ್ಮಾಕ್ಷಿ ನ ಸನ್ತಿ ಪತಯಸ್ತವ ।
ನ ಪಾಣ್ಡವಾಃ ಪ್ರಭವನ್ತಿ ತವ ಕೃಷ್ಣೇ ಕಥಂಚನ ॥೮೫॥

"ದ್ರೌಪದಿ! ಪಾಂಡವರು ಹಾಳಾಗಿಹೋದರು. ಶಾಶ್ವತವಾದ ನರಕಕ್ಕೆ ಹೊರಟುಹೋದರು. ಪೃಥುಶ್ರೋಣೆ! ನೀನೀಗ ಬೇರೆಯವನನ್ನು ಪತಿಯನ್ನಾಗಿ ವರಿಸು. ಮೃದುಭಾಷಿಣೆ! ಇಂದಿನಿಂದ ನೀನು ಧೃತರಾಷ್ಟ್ರನ ದಾಸಿಯಾಗಿರುವೆ. ಅಂತಃಪುರಕ್ಕೆ ಹೋಗು. ಡೊಂಕಾದ ಹುಬ್ಬಿನ ಕೂದಲುಗಳಿಂದ ಸಮಲಂಕೃತವಾದ ಕಣ್ಣುಗಳುಳ್ಳವಳೇ! ಇನ್ನು ಪಾಂಡವರು ನಿನ್ನ ಪತಿಗಳಲ್ಲ. ಅವರಿಗೆ ನಿನ್ನ ಮೇಲೆ ಯಾವ ವಿಧವಾದ ಅಧಿಕಾರವೂ ಇಲ್ಲ.

ದಾಸಭಾರ್ಯಾ ಚ ಪಾಞ್ಚಾಲಿ ಸ್ವಯಂ ದಾಸೀ ಚ ಶೋಭನೇ ।
ಅದ್ಯ ದುರ್ಯೋಧನೋ ಹ್ಯೇಕಃ ಪೃಥಿವ್ಯಾಂ ನೃಪತಿಃ ಸ್ಮೃತಃ ॥೮೬॥

ಪಾಂಚಾಲರಾಜಕುಮಾರಿಯೇ! ಸುಂದರಿ! ನೀನು ದಾಸಭಾರ್ಯೆ. ಸ್ವಯಂ ದಾಸಿಯೂ ಆಗಿರುವೆ. ಈಗ ಈ ಅಖಂಡಭೂಮಂಡಲದಲ್ಲಿ ದುರ್ಯೋಧನನೇ ಏಕಮಾತ್ರ ಭೂಪತಿಯಾಗಿದ್ದಾನೆ.

ಭೂಮಂಡಲದ ಎಲ್ಲ ಮಹೀಪಾಲರೂ ಈ ದುರ್ಯೋಧನನ ಯೋಗ-ಕ್ಷೇಮಗಳನ್ನೇ ಉಪಾಸನೆಮಾಡುತ್ತಿದ್ದಾರೆ. (ಅವನ ಅಭ್ಯುದಯ ವನ್ನೇ ಆಶಿಸುತ್ತಿದ್ದಾರೆ.) ಭದ್ರೇ! ದುರ್ಯೋಧನನ ತೇಜಸ್ಸಿನಿಂದಾಗಿ ಈ ಎಲ್ಲ ಪಾಂಡವರೂ ಕಾಂತಿಹೀನರಾಗಿರುವುದನ್ನು ನೀನೇ ನೋಡುತ್ತಿರುವೆ ಯಲ್ಲವೇ? ಇವರೀಗ ಹತಾಶರಾಗಿ ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತಿದ್ದಾರೆ.

ವ್ಯಕ್ತಂ ಷಣ್ಡತಿಲಾ ಹ್ಯೇತೇ ನಿರಯೇ ಚ ನಿಮಜ್ಜಿತಾಃ ।
ಪ್ರೇಷ್ಯವಚ್ಚಾಪಿ ರಾಜಾನಮುಪಸ್ಥಾಸ್ಯನ್ತಿ ಕೌರವಮ್ ॥೮೮॥

ನಿಶ್ಚಯವಾಗಿಯೂ ಇವರೀಗ ಎಣ್ಣೆತೆಗೆದ ಎಳ್ಳಿನಂತೆ ನಪುಂಸಕರಾಗಿ ಅಗಾಧವಾದ ನರಕದಲ್ಲಿ ಬಿದ್ದುಹೋಗಿದ್ದಾರೆ. ಇಂದಿನಿಂದಿವರು ಸೇವಕರಂತೆ ಕೌರವರಾಜರ ಸೇವೆಯಲ್ಲಿ ನಿರತರಾಗುತ್ತಾರೆ.”

ಅರ್ಜುನ! ಅಧರ್ಮಮಾರ್ಗವನ್ನೇ ಸಂಪೂರ್ಣವಾಗಿ ಅನುಸರಿಸುತ್ತಿರುವ (ಧರ್ಮವನ್ನು ತಿಳಿಯದ) ಮತ್ತು ಅಧರ್ಮಮಾರ್ಗದಲ್ಲಿಯೇ ಪ್ರವೃತ್ತಿಯಿರುವ, ಪರಮದುರ್ಬುದ್ಧಿಯಾದ, ಪಾಪಿಷ್ಠನಾದ ಈ ಕರ್ಣನು ನಿನಗೆ ಕೇಳಿಸುವಂತೆಯೇ ಈ ಮಾತುಗಳನ್ನು ಹೇಳಿದ್ದನು. ಈಗ ನಿನ್ನಿಂದ ಬಿಡಲ್ಪಡುವ, ಮಸೆಗಲ್ಲಿನಿಂದ ಸ್ವಚ್ಛಗೊಳಿಸಿದ, ಸುವರ್ಣಮಯವಾದ, ಪ್ರಾಣಾಂತಕರವಾದ ಬಾಣಗಳು ಅಂದು ಅವನಾಡಿದ ಮಾತುಗಳನ್ನು ಉಪಶಮನಗೊಳಿಸಲಿ. ದುಷ್ಟಾತ್ಮನಾದ ಕರ್ಣನು ನಿನ್ನ ವಿಷಯದಲ್ಲಿ ಇನ್ನೂ ಅನೇಕವಾದ ಅವ್ಯವಹಾರಗಳನ್ನು ನಡೆಸಿದ್ದಾನೆ. ನಿನ್ನ ಬಾಣಗಳು, ಅವನು ನಿನ್ನ ವಿಷಯದಲ್ಲಿ ಮಾಡಿದ ಪಾಪಕರ್ಮಗಳನ್ನೂ ಮತ್ತು ಅವನ ಜೀವನವನ್ನೂ ಉಪಶಮನಗೊಳಿಸಲಿ. ಇಂದು ದುಷ್ಟಾತ್ಮನಾದ ಕರ್ಣನು, ಗಾಂಡೀವಧನುಸ್ಸಿನಿಂದ ಹೊರಟು ತನ್ನ ಅಂಗಾಂಗಗಳಲ್ಲಿಯೂ ನಾಟುತ್ತಿರುವ ಭಯಂಕರವಾದ ಬಾಣಗಳ ಪ್ರಹಾರಗಳ ವೇದನೆಯನ್ನು ಅನುಭವಿಸುತ್ತಾ ದ್ರೋಣ-ಭೀಷ್ಮರ ಮಾತುಗಳನ್ನು ಸ್ಮರಿಸಿಕೊಳ್ಳಲಿ. ಶತ್ರುಗಳನ್ನು ಸಂಹರಿಸುವ ಸಾಮರ್ಥ್ಯವನ್ನು ಹೊಂದಿರುವ, ವಿದ್ಯುತ್ತಿನಂತೆ ಪ್ರಕಾಶಮಾನವಾದ, ಸುವರ್ಣಮಯವಾದ ಮೂಲಭಾಗಗಳಿಂದ ಕೂಡಿರುವ, ನಿನ್ನಿಂದ ಬಿಡಲ್ಪಡುವ ಬಾಣಗಳು ಕರ್ಣನ ಮರ್ಮಸ್ಥಳಗಳನ್ನು ಭೇದಿಸಿ ರಕ್ತವನ್ನು ಕುಡಿಯುತ್ತವೆ. ನಿನ್ನ ಭುಜಗಳಿಂದ ನಿರ್ಮುಕ್ತವಾದ, ಭಯಂಕರವಾದ, ಮಹಾವೇಗಯುಕ್ತವಾದ, ಮಹಾಬಾಣಗಳು ಕರ್ಣನ ಮರ್ಮಸ್ಥಳವನ್ನು ಭೇದಿಸಿ ಅವನನ್ನು ಯಮಾಲಯಕ್ಕೆ ಕಳುಹಿಸುತ್ತವೆ. ಇಂದು ನಿನ್ನ ಬಾಣಗಳಿಂದ ಪೀಡಿತರಾಗುವ ಭೂಮಂಡಲದ ರಾಜರು ದೀನರಾಗಿ ಮತ್ತು ವಿಷಣ್ಣರಾಗಿ ಹಾಹಾಕಾರಮಾಡುತ್ತಾ ರಥದಿಂದ ಬೀಳುತ್ತಿರುವ ಕರ್ಣನನ್ನು ನೋಡಲಿ. ರಕ್ತದಿಂದ ತೋಯ್ದುಹೋಗಿ ಆಯುಧರಹಿತನಾಗಿ ಅಸುವನ್ನು ತೊರೆದು ಭೂಮಿಯ ಮೇಲೆ ಬೀಳಲಿರುವ ಕರ್ಣನನ್ನು ಅವನ ಬಂಧುಗಳು

ದುಃಖದಿಂದ ದೀನರಾಗಿ ನೋಡಲಿ. ಆನೆಯ ಹಗ್ಗವನ್ನೇ ಚಿಹ್ನೆಯನ್ನಾಗಿ ಹೊಂದಿರುವ ಕರ್ಣನ ಮಹಾಧ್ವಜವು ನಿನ್ನಿಂದ ಬಿಡಲ್ಪಡುವ ಭಲ್ಲದಿಂದ ಕತ್ತರಿಸಲ್ಪಟ್ಟು ಪ್ರಕಂಪಿಸುತ್ತಾ ಭೂಮಿಯ ಮೇಲೆ ಬೀಳಲಿ. ಕರ್ಣನ ಸಾರಥ್ಯವನ್ನು ವಹಿಸಿರುವ ಶಲ್ಯನು–ನಿನ್ನ ನೂರಾರು ಬಾಣಗಳಿಂದ ಛಿನ್ನ-ಭಿನ್ನವಾದ, ಯೋಧ (ಕರ್ಣ) ನಿಂದಲೂ ಮತ್ತು ಕುದುರೆಗಳಿಂದಲೂ ವಿಹೀನವಾದ, ಸುವರ್ಣಭೂಷಿತವಾದ ರಥವನ್ನು ವಿಸರ್ಜಿಸಿ ಭಯಗೊಂಡು ಪಲಾಯನಮಾಡಲಿ. ಮಾನದನೇ! (ಸತ್ಪುರುಷರನ್ನು ಗೌರವಿಸುವವನೇ!) ನೀನು ಮಾಡಿರುವ ಪ್ರತಿಜ್ಞೆಯನ್ನು ಪೂರ್ಣಗೊಳಿಸುವ ಸಲುವಾಗಿ ಕರ್ಣನು ನೋಡುತ್ತಿರುವಂತೆಯೇ ಅವನ ಮಗನಾದ ವೃಷಸೇನನನ್ನು ಬಾಣಗಳಿಂದ ಸಂಹರಿಸಿದಾಗ ಪ್ರಿಯಪುತ್ರನಾದ, ದುರಾಸದನಾದ ವೃಷಸೇನನು ಹತನಾದುದನ್ನು ಕಂಡು ಕರ್ಣನು ದ್ರೋಣ-ಭೀಷ್ಮ-ವಿದುರರು ಹಿಂದೆ ಹೇಳಿದ್ದ ಮಾತುಗಳನ್ನು ಜ್ಞಾಪಕಕ್ಕೆ ತಂದುಕೊಳ್ಳುವಂತಾಗಲಿ. ನೀನು ಕರ್ಣನನ್ನು ಸಂಹರಿಸಿದುದನ್ನು ಕಂಡು ನಿನ್ನ ಪರಮಶತ್ರುವಾದ ದುರ್ಯೋಧನನು ಜೀವಿತದಲ್ಲಿಯೂ ಮತ್ತು ರಾಜ್ಯದಲ್ಲಿಯೂ ನಿರಾಶೆಯನ್ನು ಹೊಂದಲಿ.

ಅದೋ ನೋಡು, ಪಾರ್ಥ! ಈ ಪಾಂಚಾಲಸೈನಿಕರು ಕರ್ಣನ ನಿಶಿತವಾದ ಬಾಣಗಳಿಂದ ವಧಿಸಲ್ಪಡುತ್ತಿದ್ದರೂ ಪಾಂಡವರನ್ನು ಉದ್ಧರಿಸುವ ಆಶೆಯಿಂದ ಕರ್ಣನಿಗೆ ಅಭಿಮುಖವಾಗಿಯೇ ಹೋಗುತ್ತಿದ್ದಾರೆ.

ಅರ್ಜುನ! ಪಾಂಚಾಲಯೋಧರು, ದ್ರೌಪದಿಯ ಮಕ್ಕಳು, ಧೃಷ್ಟದ್ಯುಮ್ನ, ಶಿಖಂಡೀ, ಧೃಷ್ಟದ್ಯುಮ್ನನ ಮಕ್ಕಳು, ನಕುಲನ ಮಗ ಶತಾನೀಕ, ನಕುಲ-ಸಹದೇವರು, ದುರ್ಮುಖ, ಜನಮೇಜಯ, ಸುಧರ್ಮಾ, ಸಾತ್ಯಕಿ–ಇವರೇ ಮೊದಲಾದ ನಮ್ಮ ಕಡೆಯ ಅನೇಕಯೋಧರು ಕರ್ಣನ ಹಿಡಿತಕ್ಕೆ ಸಿಕ್ಕಿಕೊಂಡಿರುತ್ತಾರೆ. ಶತ್ರುಸಂತಾಪಕನೇ! ಕರ್ಣನ ಬಾಣಗಳಿಂದ ಬಹಳವಾಗಿ ಗಾಯಗೊಂಡ ನಿನ್ನ ಬಂಧುಗಳಾದ ಪಾಂಚಾಲರ ಸುಘೋರವಾದ ಆರ್ತನಾದಗಳು ಬಹಳ ಸ್ಪಷ್ಟವಾಗಿ ಕೇಳಿಸುತ್ತಿವೆ. ಪಾಂಚಾಲಯೋಧರು ಯಾವುದೇ ಕಾರಣದಿಂದಲೂ ಭಯಗೊಂಡು ಯುದ್ಧ

ದಿಂದ ಪರಾಙ್ಮುಖರಾಗತಕ್ಕವರಲ್ಲ. ಮಹಾಧನುಷ್ಮಂತರಾದ ಆ ವೀರಯೋಧರು ಮಹಾಯುದ್ಧದಲ್ಲಿ ಮೃತ್ಯುವನ್ನೂ ಸಹ ಲೆಕ್ಕಿಸುತ್ತಿಲ್ಲ. ಭೀಷ್ಮನು ಏಕಾಕಿಯಾಗಿ ಪಾಂಡವರ ಸಂಪೂರ್ಣಸೈನ್ಯವನ್ನೂ ಬಾಣಗಳ ಸಮೂಹಗಳಿಂದ ಮುಚ್ಚಿಬಿಟ್ಟಿದ್ದನು. ಆಗ ಅವನೊಡನೆ ಯುದ್ಧಮಾಡು ತ್ತಿದ್ದಾಗಲೂ ಪಾಂಚಾಲಸೈನಿಕರು ಪರಾಙ್ಮುಖರಾಗಲಿಲ್ಲ. ಅಂತಹ ಪಾಂಚಾಲಮಹಾರಥರು ಕರ್ಣನೊಡನೆ ಯುದ್ಧಮಾಡುತ್ತಿರುವಾಗ ಹೇಗೆ ತಾನೇ ಪರಾಙ್ಮುಖರಾಗುವರು?

ಮಿತ್ರವತ್ಸಲನೇ! ಶತ್ರುವಿನ ಪಕ್ಷದಲ್ಲಿದ್ದ ಮತ್ತೊಬ್ಬ ಮಹಾವೀರರಾದ, ಪಾಂಚಾಲರ ಪರಮಶತ್ರುಗಳಾದ ದ್ರೋಣರು ಎಲ್ಲ ಪಾಂಚಾಲರನ್ನೂ ಅನುದಿನವೂ ನಾಶಗೊಳಿಸುತ್ತಾ ಪಾಂಚಾಲರ ರಥಸಮೂಹದಲ್ಲಿ ಮಹಾ ಕಾಲನಂತೆಯೇ ಸಂಚರಿಸುತ್ತಿದ್ದರು. ಸರ್ವಧನುಷ್ಮಂತರಿಗೂ ಆಚಾರ್ಯ ರಾದ, ಅಸ್ತ್ರಗಳ ಅಗ್ನಿಯಿಂದ ಜಾಜ್ವಲ್ಯಮಾನರಾಗಿ ಕಾಣುತ್ತಿದ್ದ, ಶತ್ರುಗಳನ್ನು ಎಡೆಬಿಡದೇ ದಹಿಸುತ್ತಿದ್ದ ದುರ್ಧರ್ಷರಾದ ದ್ರೋಣರನ್ನು ಎದುರಿಸಿ ಮಿತ್ರರ ಸಲುವಾಗಿ ಜಯಿಸುವ ಆಸೆಯಿಂದ ಪಾಂಚಾಲಯೋಧರು ಅನುದಿನವೂ ಅವರೊಡನೆ ಯುದ್ಧದಲ್ಲಿ ತೊಡಗುತ್ತಿದ್ದರು. ಅಂತಹ ವೀರಪಾಂಚಾಲರು ಯಾವುದೇ ಕಾರಣದಿಂದಲೂ ಕರ್ಣನಿಗೆ ಭಯಪಟ್ಟು ಯುದ್ಧದಿಂದ ಪರಾಙ್ಮುಖರಾಗುವುದಿಲ್ಲ. ಆದರೆ ಕರ್ಣನು ತನ್ನ ಮೇಲೆ ಸತತವಾಗಿ ಬೀಳುತ್ತಿರುವ ವೇಗವಂತರಾದ ಪಾಂಚಾಲಯೋಧರ ಪ್ರಾಣಗಳನ್ನು–ಪತಂಗದ ಹುಳುಗಳ ಪ್ರಾಣಗಳನ್ನು ಅಗ್ನಿಯು ಸೆಳೆದುಕೊಳ್ಳುವಂತೆ–ಬಾಣಗಳಿಂದ ಸೆಳೆದುಕೊಳ್ಳುತ್ತಿದ್ದಾನೆ. ಅಲ್ಲಿ ನೋಡು, ಅರ್ಜುನ! ಅಂತಹ ವೀರ ಪಾಂಚಾಲರೂ ಈಗ ಪಲಾಯನಮಾಡುತ್ತಿದ್ದಾರೆ. ನಿಜ! ಅವರು ಕರ್ಣ ನಿಂದಲೂ ಮತ್ತು ಇತರ ಯೋಧರಿಂದಲೂ ಓಡಿಸಲ್ಪಡುತ್ತಿದ್ದಾರೆ. ಕರ್ಣನು ಅವರನ್ನು ಅಂತಹ ದುರವಸ್ಥೆಗೆ ಒಳಪಡಿಸಿರುವುದನ್ನಾದರೂ ನೋಡು, ಅರ್ಜುನ! ಇಂತಹ ದುರವಸ್ಥೆಯಲ್ಲಿಯೂ ಪಾಂಚಾಲಯೋಧರು ಕರ್ಣನಿಗೆ ಅಭಿಮುಖವಾಗಿ ಹೋಗುತ್ತಿದ್ದಾರೆ. ಆದರೆ ಮಿತ್ರರ ಸಲುವಾಗಿ ಪ್ರಾಣ

ಗಳ ಮೇಲಿನ ಹಂಗನ್ನೇ ತೊರೆದು ಮುನ್ನುಗ್ಗುತ್ತಿರುವ ನೂರಾರು ಪಾಂಚಾಲಯೋಧರನ್ನು ಕರ್ಣನು ಎಡೆಬಿಡದೇ ಸಂಹರಿಸುತ್ತಿದ್ದಾನೆ.

ಪಾರ್ಥ! ಮಹಾಧನುಷ್ಮಂತರಾದ ಪಾಂಚಾಲಯೋಧರು ನಾವೆಯೇ ಇಲ್ಲದಿರುವ ಕರ್ಣನೆಂಬ ಮಹಾಸಾಗರದಲ್ಲಿ ಮುಳುಗಿಹೋಗುತ್ತಿದ್ದಾರೆ. ಈ ಸಮಯದಲ್ಲಿ ನೀನು ಅವರಿಗೆ ನಾವೆಯಾಗಿ ಮುಳುಗಿಹೋಗುತ್ತಿರುವವರನ್ನು ಉದ್ಧರಿಸುವುದು ನಿನಗೆ ಸೂಕ್ತವಾಗಿ ಕಾಣುತ್ತದೆ. ಋಷಿಸತ್ತಮನಾದ ಭಾರ್ಗವರಾಮನಿಂದ ಪಡೆದುಕೊಂಡ, ಮಹಾಘೋರವಾದ ಭಾರ್ಗವಾಸ್ತ್ರವನ್ನೇ ಕರ್ಣನೀಗ ಪ್ರಯೋಗಿಸಿದ್ದಾನೆ. ಘೋರರೂಪವಾದ, ಸುದಾರುಣವಾದ ಭಾರ್ಗವಾಸ್ತ್ರವು ಪಾಂಡವರ ವಿಶಾಲವಾದ ಸೈನ್ಯವನ್ನೂ ಆವರಿಸಿಕೊಂಡು ತೇಜಸ್ಸಿನಿಂದ ಪ್ರಜ್ವಲಿಸುತ್ತಾ ಎಲ್ಲರನ್ನೂ ಸಂತಾಪಗೊಳಿಸುತ್ತಿದೆ. ಕರ್ಣನ ಅಸ್ತ್ರದಿಂದ ಚ್ಯುತವಾದ ಬಾಣಗಳು ದುಂಬಿಗಳ ಸಮೂಹಗಳೋಪಾದಿಯಲ್ಲಿ ಎಲ್ಲ ಕಡೆಗಳಲ್ಲಿಯೂ ಸಂಚರಿಸುತ್ತಾ ನಿನ್ನ ಕಡೆಯ ಸೈನಿಕರನ್ನು ಸಂತಾಪಗೊಳಿಸುತ್ತಿವೆ. ಜಿತೇಂದ್ರಿಯರಲ್ಲದವರಿಂದ ದುರ್ನಿವಾರ್ಯವಾದ ಕರ್ಣನ ಮಹಾಸ್ತ್ರಕ್ಕೆ ಲಕ್ಷ್ಯರಾಗಿ ಪಾಂಚಾಲಯೋಧರು ಎಲ್ಲ ದಿಕ್ಕುಗಳಲ್ಲಿಯೂ ಓಡಿಹೋಗು ತ್ತಿದ್ದಾರೆ. ಸೃಂಜಯಸೈನಿಕರಿಂದ ಪರಿವೃತನಾದ ದೃಢಕ್ರೋಧನಾದ ಭೀಮಸೇನನು ನಿಶಿತವಾದ ಬಾಣಗಳಿಂದ ಕರ್ಣನನ್ನು ಪೀಡಿಸುತ್ತಿದ್ದಾನೆ. ಚಿಕಿತ್ಸೆಮಾಡಿಕೊಳ್ಳದೇ ಉಪೇಕ್ಷಿಸಿದ್ದೇ ಆದರೆ ರೋಗವು ದೇಹವನ್ನು ವಿನಾಶಗೊಳಿಸುವಂತೆ–ಈ ಸಮಯದಲ್ಲಿ ಕರ್ಣನನ್ನು ಉಪೇಕ್ಷಿಸಿದ್ದೇ ಆದರೆ ಅವನು ಪಾಂಡವ-ಸೃಂಜಯ-ಪಾಂಚಾಲರೆಲ್ಲರನ್ನೂ ಸಂಹರಿಸಿಯೇ ಬಿಡುವನು. ಯುಧಿಷ್ಠಿರನ ಸೈನ್ಯದಲ್ಲಿ ನಿನ್ನೊಬ್ಬನನ್ನು ಬಿಟ್ಟರೆ ಕರ್ಣನೊಡನೆ ಯುದ್ಧಮಾಡಿ ಕುಶಲಿಯಾಗಿ ಮನೆಗೆ ಹಿಂದಿರುಗುವ ಮತ್ತೊಬ್ಬನನ್ನು ನಾನು ಕಾಣೆನು. ಆದುದರಿಂದ, ನರಶ್ರೇಷ್ಠನೇ! ಪಾರ್ಥ! ನೀನು ಮಾಡಿರುವ ಪ್ರತಿಜ್ಞಾನುಸಾರವಾಗಿ ನಿಶಿತವಾದ ಬಾಣಗಳಿಂದ ಕರ್ಣನನ್ನು ಸಂಹರಿಸಿ ಶಾಶ್ವತವಾದ ಕೀರ್ತಿಯನ್ನು ಹೊಂದು. ಅರ್ಜುನ! ಕರ್ಣಸಹಿತರಾದ ಕೌರವರನ್ನು ಜಯಿಸಲು ನೀನೇ ಸಮರ್ಥನು. ಯೋಧರಲ್ಲಿ ಶ್ರೇಷ್ಠನೇ! ಈ ಕಾರ್ಯವು ಬೇರೆಯವರಿಂದ ಸಾಧ್ಯವಾಗುವುದಿಲ್ಲ. ಸತ್ಯವಿಷಯವನ್ನೇ ನಿನಗೆ ಹೇಳುತ್ತಿದ್ದೇನೆ.

**ಏತತ್ಕೃತ್ವಾ ಮಹತ್ಕರ್ಮ ಹತ್ವಾ ಕರ್ಣಂ ಮಹಾರಥಮ್ ।**
**ಕೃತಾರ್ಥಃ ಸಫಲಃ ಪಾರ್ಥ ಸುಖೀ ಭವ ನರೋತ್ತಮ ॥೧೨೫॥**

ಪುರುಷೋತ್ತಮನೇ! ಮಹಾರಥಿಯಾದ ಕರ್ಣನನ್ನು ಸಂಹರಿಸಿ ಮಹಾಕಾರ್ಯವನ್ನು ಮುಗಿಸಿದನಂತರ ನೀನು ಕೃತಕೃತ್ಯನಾಗಿ ಸಫಲಮನೋರಥನಾಗಿ ಸುಖವನ್ನು ಪಡೆಯುವವನಾಗು."

೭೩ನೆಯ ಅಧ್ಯಾಯವು ಮುಗಿಯಿತು.

೭೪ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನ ವೀರೋಚಿತವಾದ ಮಾತುಗಳು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಭಾರತನೇ! ಕೇಶವನು ಹೇಳಿದ ಮಾತುಗಳನ್ನು ಕೇಳಿ ಅರ್ಜುನನು ಕ್ಷಣಮಾತ್ರದಲ್ಲಿ ಶೋಕರಹಿತನೂ, ಹರ್ಷಯುಕ್ತನೂ, ಉತ್ಸಾಹಿಯೂ ಆದನು. ಗಾಂಡೀವಧನುಸ್ಸಿನ ಮೌರ್ವಿಯನ್ನು ಉಜ್ಜಿ, ಧನುಸ್ಸನ್ನು ಎಳೆದು ಟೇಂಕರಿಸಿ, ಕರ್ಣನನ್ನು ಸಂಹರಿಸಿಯೇ ತೀರಬೇಕೆಂದು ದೃಢವಾಗಿ ನಿಶ್ಚಯಿಸಿ ಶ್ರೀಕೃಷ್ಣನೊಡನೆ ಹೇಳಿದನು:

**ತ್ವಯಾ ನಾಥೇನ ಗೋವಿನ್ದ ಧ್ರುವ ಏವ ಜಯೋ ಮಮ ।**
**ಪ್ರಸನ್ನೋ ಯಸ್ಯ ಮೇಽದ್ಯ ತ್ವಂ ಲೋಕೇ ಭೂತಭವಿಷ್ಯಕೃತ್ ॥೩॥**

"ಗೋವಿಂದ! ಲೋಕದಲ್ಲಿ ಭೂತ-ಭವಿಷ್ಯತ್ತುಗಳಿಗೆ ಕಾರಣಭೂತನಾಗಿರುವ ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿರುವಾಗ–ನಿನ್ನನ್ನೇ ನಾಥನನ್ನಾಗಿ ಪಡೆದಿರುವ ನನಗೆ ವಿಜಯವು ನಿಶ್ಚಯವಾಗಿ ಲಭಿಸುತ್ತದೆ.

**ತ್ವತ್ಸಹಾಯೋ ಹ್ಯಹಂ ಕೃಷ್ಣ ತ್ರೀಂಲ್ಲೋಕಾನ್ವೈ ಸಮಾಗತಾನ್ ।**
**ಪ್ರಾಪಯೇಯಂ ಪರಂ ಲೋಕಂ ಕಿಮು ಕರ್ಣಂ ಮಹಾಹವೇ ॥೪॥**

ನಿನ್ನ ಸಹಾಯವನ್ನು ಪಡೆದಿರುವ ನಾನು ಮೂರು ಲೋಕಗಳೇ ಸಂಘಟಿತವಾಗಿ ಬಂದರೂ ಆ ಮೂರು ಲೋಕಗಳ ಯೋಧರನ್ನೂ ಪರಲೋಕಕ್ಕೆ ಕಳುಹಿಸಬಲ್ಲೆನು. ಹೀಗಿರುವಾಗ ಕರ್ಣನ ವಿಷಯವಾಗಿ ಹೇಳುವುದೇನಿದೆ?

ಜನಾರ್ದನ! ಪಾಂಚಾಲರ ಸೈನ್ಯವು ಪಲಾಯನಮಾಡುತ್ತಿರುವುದನ್ನೂ ನೋಡುತ್ತಿದ್ದೇನೆ. ಸ್ವಲ್ಪವಾದರೂ ಭಯವೇ ಇಲ್ಲದವನಂತೆ ಕರ್ಣನು ಈ ರಣಭೂಮಿಯಲ್ಲಿ ಸಂಚರಿಸುತ್ತಿರುವುದನ್ನೂ ನೋಡುತ್ತಿದ್ದೇನೆ; ಇಂದ್ರನಿಂದ ಪ್ರಮುಕ್ತವಾದ ವಜ್ರಾಯುಧದಂತೆ–ಕರ್ಣನಿಂದ ಪ್ರಾದುರ್ಭೂತವಾಗಿ ಸರ್ವತ್ರ ಪ್ರಜ್ವಲಿಸುತ್ತಿರುವ ಭಾರ್ಗವಾಸ್ತ್ರವನ್ನೂ ನಾನು ಈ ರಣರಂಗದಲ್ಲಿ ನೋಡುತ್ತಿದ್ದೇನೆ. ಎಂದಿನವರೆಗೆ ಈ ಭೂಮಿಯಿರುವುದೋ–ಅಂದಿನವರೆಗೂ ಸಕಲಪ್ರಾಣಿಗಳೂ ಅರ್ಜುನನಿಂದ ಕರ್ಣನು ಹತನಾದನೆಂಬ ಕಥೆಯನ್ನು ಹೇಳುತ್ತಲೇ ಇರುತ್ತಾರೆ. ಅಂತಹ ಅದ್ಭುತಸಂಗ್ರಾಮವಿಂದು ನಡೆಯುತ್ತದೆ.

**ಅದ್ಯ ಕೃಷ್ಣ ವಿಕರ್ಣಾ ಮೇ ಕರ್ಣಂ ನೇಷ್ಯನ್ತಿ ಮೃತ್ಯವೇ ।**
**ಗಾಣ್ಡೀವಮುಕ್ತಾಃ ಕ್ಷಿಣ್ವನ್ತೋ ಮಮ ಹಸ್ತಪ್ರಚೋದಿತಾಃ ॥೮॥**

ಕೃಷ್ಣ! ನನ್ನ ಕೈಯಿಂದ ಪ್ರಚೋದಿತವಾಗಿ ಗಾಂಡೀವಧನುಸ್ಸಿನಿಂದ ಬಿಡಲ್ಪಟ್ಟ ವಿಕರ್ಣ ಎಂಬ ಬಾಣಗಳು ಕರ್ಣನನ್ನು ಕ್ಷತ-ವಿಕ್ಷತನನ್ನಾಗಿ ಮಾಡಿ ಮೃತ್ಯುವಿನೆಡೆಗೆ ಕಳುಹಿಸಿಬಿಡುತ್ತವೆ. (ವಿಕರ್ಣವೆಂಬ ಬಾಣಗಳು ತಮ್ಮ ಹೆಸರಿಗೆ ತಕ್ಕಂತೆ ಈ ಪ್ರಪಂಚವನ್ನು ಕರ್ಣನಿಂದ ರಹಿತವನ್ನಾಗಿ ಮಾಡಿಬಿಡುತ್ತವೆ.)

ರಾಜ್ಯಪದವಿಗೆ ಅಯೋಗ್ಯನಾದ ದುರ್ಯೋಧನನನ್ನು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಚಿಸಿದುದಕ್ಕಾಗಿ ಇಂದು ಧೃತರಾಷ್ಟ್ರನು ತನ್ನ ದುರ್ಬುದ್ಧಿಯನ್ನು ಹಳಿದುಕೊಳ್ಳುತ್ತಾನೆ. ಇಂದು ಧೃತರಾಷ್ಟ್ರನು ರಾಜ್ಯದಿಂದಲೂ, ಸುಖದಿಂದಲೂ, ಐಶ್ವರ್ಯದಿಂದಲೂ, ರಾಷ್ಟ್ರದಿಂದಲೂ, ನಗರದಿಂದಲೂ ಮತ್ತು ತನ್ನ ಮಕ್ಕಳಿಂದಲೂ ವಿಮುಕ್ತನಾಗುತ್ತಾನೆ.

**ಗುಣವನ್ತಂ ಹಿ ಯೋ ದ್ವೇಷ್ಟಿ ನಿರ್ಗುಣಂ ಕುರುತೇ ಪ್ರಭುಮ್ ।**
**ಸ ಶೋಚತಿ ನೃಪಃ ಕೃಷ್ಣ ಕ್ಷಿಪ್ರಮೇವಾಗತೇ ಕ್ಷಯೇ ॥೧೧॥**

ಗುಣವಂತನನ್ನು ಯಾವನು ದ್ವೇಷಿಸುತ್ತಾನೆಯೋ, ಗುಣಹೀನನನ್ನು ಸಿಂಹಾಸನದಲ್ಲಿ ಕುಳ್ಳಿರಿಸುತ್ತಾನೆಯೋ (ಅನಧಿಕಾರಿಯನ್ನು ಅಧಿಕಾರಸ್ಥಾನದಲ್ಲಿ ಕುಳ್ಳಿರಿಸುತ್ತಾನೆಯೋ)–ಅವನು ವಿನಾಶಕಾಲವು ಪ್ರಾಪ್ತವಾದಾಗ ಬಹಳವಾಗಿ ದುಃಖಪಡುತ್ತಾನೆ. (ಧೃತರಾಷ್ಟ್ರನು ಧರ್ಮರಾಜನನ್ನು

ದ್ವೇಷಿಸಿದನು; ದುರ್ಯೋಧನನನ್ನು ಅಭಿಷೇಚಿಸಿದನು. ಅದರ ಫಲವೇ ಇಂದಿನ ಸರ್ವನಾಶಕ್ಕೆ ಎಡೆಮಾಡಿಕೊಟ್ಟಿದೆ.)

**ಯಥಾ ಚ ಪುರುಷಃ ಕಶ್ಚಿಚ್ಛಿತ್ವಾ ಚಾಮ್ರವಣಂ ಮಹತ್ ।**
**ಫಲಂ ದೃಷ್ಟ್ವಾ ಭೃಶಂ ದುಃಖೀ ಭವಿಷ್ಯತಿ ಜನಾರ್ದನ ।**
**ಸೂತಪುತ್ರೇ ಹತೇ ತ್ವದ್ಯ ನಿರಾಶೋ ಭವಿತಾ ಪ್ರಭುಃ ॥೧೨॥**

ಒಬ್ಬ ಮನುಷ್ಯನು ನಯನಮನೋಹರವಾದ ಮಾವಿನ ಮರಗಳ ತೋಪನ್ನು ಕಡಿದುಹಾಕಿ (ಮುತ್ತುಗದ ಮರವನ್ನು ಬೆಳೆಸಿದರೆ) ಅದರ ದುಷ್ಪರಿಣಾಮವನ್ನು ತಿಳಿದನಂತರ ಅವನು (ರೈತನು) ಬಹಳ ದುಃಖಪಡುತ್ತಾನೆ. ಕೃಷ್ಣ! ಸೂತಪುತ್ರನು ಹತನಾದನಂತರ ದುರ್ಯೋಧನನು ನಿಶ್ಚಯವಾಗಿಯೂ ನಿರಾಶನಾಗುತ್ತಾನೆ. ಇಂದು ಕರ್ಣನು ಹತನಾಗಲಾಗಿ ದುರ್ಯೋಧನನು  ರಾಜ್ಯದ ಮತ್ತು ಜೀವಿತದ ಆಶೆಯನ್ನೂ ತೊರೆಯುತ್ತಾನೆ. ಸತ್ಯವಾದ ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ. ಇಂದು ನಾನು ಕರ್ಣನನ್ನು ಬಾಣಗಳಿಂದ ಚೂರು-ಚೂರುಗಳಾಗಿ ತುಂಡರಿಸಿದನಂತರ ದುರ್ಯೋಧನನು–ಸಂಧಿಯ ಸಲುವಾಗಿ ನೀನು ಹಸ್ತಿನೆಗೆ ಹೋಗಿದ್ದಾಗ ಹೇಳಿದ್ದ ಮಾತುಗಳನ್ನು–ಸ್ಮರಿಸಿಕೊಳ್ಳುತ್ತಾನೆ. ಜೂಜುಗಾರನಾದ ಸುಬಲಪುತ್ರನು ಅಂದು ಪಂದ್ಯಕ್ಕಾಗಿ ಪಣರೂಪದಲ್ಲಿ ಇಡಲ್ಪಟ್ಟ ವಸ್ತುಗಳೇ ಇಂದು ಬಾಣಗಳಾಗಿವೆಯೆಂಬುದನ್ನು ತಿಳಿದುಕೊಳ್ಳುತ್ತಾನೆ. ಇಂದಿನ ಜೂಜಾಟದಲ್ಲಿ ಗಾಂಡೀವ ಧನುಸ್ಸೇ ಜೂಜುಗಾರ. ರಥವೇ ಜೂಜಾಡುವ ಕಟ್ಟೆ. ಗೋವಿಂದ! ಇಂದು ನಾನು ನಿಶಿತವಾದ ಬಾಣಗಳಿಂದ ಕರ್ಣನನ್ನು ಸಂಹರಿಸಿ ಕುಂತಿಯ ಮಗನಾದ ಯುಧಿಷ್ಠಿರನ ನಿರಂತರಜಾಗರಣೆಯನ್ನು (ಯಾವಾಗಲೂ ನಿದ್ದೆಯಿಲ್ಲದೇ ಇರುವಿಕೆಯನ್ನು) ಹೋಗಲಾಡಿಸುತ್ತೇನೆ. (ಕರ್ಣನ ಭಯದಿಂದಲೇ ಯುಧಿಷ್ಠಿರನು ನಿದ್ರೆಯನ್ನೇ ಮಾಡುತ್ತಿರಲಿಲ್ಲ. ಇದನ್ನು ಯುಧಿಷ್ಠಿರನೇ ಹೇಳಿದ್ದನು.) ಇಂದು ನನ್ನಿಂದ ಸೂತಪುತ್ರನು ಹತನಾಗಲಾಗಿ ಯುಧಿಷ್ಠಿರನು ಸುಪ್ರೀತನಾಗಿ ಮತ್ತು ಪ್ರಸನ್ನಚಿತ್ತನಾಗಿ ಚಿರಸುಖವನ್ನು ಪಡೆಯುತ್ತಾನೆ. ಕೇಶವ! ನಾನಿಂದು ಎದುರಿಸಲು ಅಸಾಧ್ಯವಾದ, ಅಪ್ರತಿಮವಾದ ಬಾಣವನ್ನು ಪ್ರಯೋಗಿಸಿ ಆ ಬಾಣದಿಂದ ಕರ್ಣನನ್ನು  ಜೀವಿತ

ದಿಂದಲೇ ಭ್ರಷ್ಟನನ್ನಾಗಿ ಮಾಡುತ್ತೇನೆ. ದುರಾತ್ಮನಾದ ಕರ್ಣನು ನನ್ನನ್ನು ವಧಿಸುವ ವಿಷಯದಲ್ಲಿ ಈ ವ್ರತವನ್ನು ಕೈಗೊಂಡಿದ್ದಾನೆ. 'ನಾನು ಅರ್ಜುನ ನನ್ನು ಸಂಹರಿಸುವವರೆಗೆ ಬೇರೆಯವರಿಂದ ಕಾಲುಗಳನ್ನು ತೊಳೆಸಿಕೊಳ್ಳುವು ದಿಲ್ಲ'–ಎಂಬುದು ಅವನ ವ್ರತವಾಗಿದೆ. ಮಧುಸೂದನ! ಪಾಪಿಷ್ಠನಾದ ಕರ್ಣನ ಆ ವ್ರತವನ್ನು ಸುಳ್ಳುಮಾಡಿ (ಪೂರ್ಣಗೊಳಿಸಲು ಸಾಧ್ಯವಾಗದಂತೆ ಮಾಡಿ) ಬಗ್ಗಿದ ಗಿಣ್ಣುಗಳಿರುವ ಬಾಣಗಳಿಂದ ಅವನ ಶರೀರವನ್ನು ರಥ ದಿಂದ ಕೆಳಕ್ಕೆ ಬೀಳಿಸುತ್ತೇನೆ. ಯಾವನು ಈ ಭೂಮಂಡಲದಲ್ಲಿ ತನ್ನನ್ನು ಬಿಟ್ಟು ಬೇರೆಯ ಯಾವ ಮಹಾವೀರರನ್ನೂ ತನಗೆ ಸಮಾನರೆಂದು ಭಾವಿ ಸುವುದಿಲ್ಲವೋ–ಅಂತಹ ಮಹಾಮಾನಿಯಾದ ಸೂತಪುತ್ರನ ರಕ್ತವನ್ನು ಭೂಮಿಯಿಂದು ಪಾನಮಾಡುತ್ತದೆ. ಧೃತರಾಷ್ಟ್ರನ ಅಭಿಪ್ರಾಯದಂತೆ ನಡೆ ಯುತ್ತಿದ್ದ ಕರ್ಣನು, ತನ್ನ ವೀರ್ಯ-ಶೌರ್ಯಾದಿ ಗುಣಗಳನ್ನು ಶ್ಲಾಘನೆ ಮಾಡಿಕೊಳ್ಳುತ್ತಾ ದ್ರೌಪದಿಯನ್ನು ಕುರಿತು ಹೇಳಿದ–'ಅಪತಿರ್ಹ್ಯಸಿ ಕೃಷ್ಣೇ–ಕೃಷ್ಣೇ! ನೀನು ಪತಿಹೀನಳಾದೆ'–ಎಂಬ ಮಾತನ್ನು ನಿಶಿತವಾದ ನನ್ನ ಬಾಣಗಳು ಸುಳ್ಳುಮಾಡುತ್ತವೆ. ಕೋಪಗೊಂಡ ಸರ್ಪಗಳಂತಿರುವ ನನ್ನ ನಿಶಿತವಾದ ಬಾಣಗಳು ಇಂದು ಅವನ ರಕ್ತವನ್ನು ಹೀರುತ್ತವೆ. ಬಾಣಪ್ರಯೋಗದಲ್ಲಿ ಸಿದ್ಧಹಸ್ತನಾದ ನನ್ನ ಕೈಯಿಂದ ಬಿಡಲ್ಪಟ್ಟ, ಮಿಂಚಿ ನಂತಹ ಕಾಂತಿಯನ್ನು ಹೊಂದಿರುವ, ಗಾಂಡೀವಧನುಸ್ಸಿನಿಂದ ಹೊರಬರುವ ಬಾಣಗಳು ಕರ್ಣನಿಗೆ ಶ್ರೇಷ್ಠವಾದ ಸದ್ಗತಿಯನ್ನು ದಯಪಾಲಿಸುತ್ತವೆ. ಪಾಂಡವರನ್ನು ಕುರಿತು ತಿರಸ್ಕಾರಪೂರ್ವಕವಾದ ಮಾತುಗಳನ್ನಾಡುತ್ತಾ ತುಂಬಿದ ಸಭೆಯ ಮಧ್ಯದಲ್ಲಿ ಪಾಂಚಾಲಿಯನ್ನು ಸಂಬೋಧಿಸಿ ಕರ್ಣಕಠೋರ ವಾದ ಮಾತುಗಳನ್ನಾಡಿದುದಕ್ಕಾಗಿ ರಾಧೇಯನಿಂದು ಪರಿತಾಪಪಡುತ್ತಾನೆ. ಅಂದು ಎಣ್ಣೆಯನ್ನು ತೆಗೆದ ಎಳ್ಳಿನಂತೆ ನಪುಂಸಕರೆಂದು ತೆಗಳಲ್ಪಟ್ಟಿದ್ದ ಪಾಂಡ ವರು–ದುರಾತ್ಮನಾದ, ಸೂತನ ಮಗನಾದ ಕರ್ಣನು ಹತನಾದನಂತರ– ಎಣ್ಣೆಯಿಂದ ಕೂಡಿರುವ ಎಳ್ಳಿನಂತೆ ವೀರ್ಯವಂತರೆಂಬುದು ಸ್ಪಷ್ಟ ವಾಗುತ್ತದೆ. ತನ್ನ ಗುಣಗಳನ್ನು ತಾನೇ ಹೊಗಳಿಕೊಳ್ಳುತ್ತಾ ಧೃತರಾಷ್ಟ್ರನ ಮಕ್ಕಳೊಡನೆ ಕರ್ಣನು–'ಅಹಂ ವಃ ಪಾಣ್ಡುಪುತ್ರೇಭ್ಯಸ್ತ್ರಾಸ್ಯಾಮಿ–ನಾನು ನಿಮ್ಮನ್ನು ಪಾಂಡುಪುತ್ರರಿಂದ ಸಂರಕ್ಷಿಸುತ್ತೇನೆ'–ಎಂದು ಹೇಳಿದ್ದ ಮಾತು

ಗಳನ್ನು ನನ್ನ ನಿಶಿತವಾದ ಬಾಣಗಳು ಸುಳ್ಳಾಗಿಸುತ್ತವೆ. ಅವನು ಹತನಾದನಂತರ ಪಾಂಡುಪುತ್ರರ ಯುದ್ಧೋದ್ಯೋಗವು ಪರಿಸಮಾಪ್ತಿಯನ್ನು ಹೊಂದುತ್ತದೆ. (ಯುದ್ಧವೂ ನಿಲ್ಲುತ್ತದೆ.)

**ಹನ್ತಾಹಂ ಪಾಣ್ಡವಾನ್ಸರ್ವಾನ್ಸಪುತ್ರಾನಿತಿ ಯೋಽಬ್ರವೀತ್ ।**
**ತಮದ್ಯ ಕರ್ಣಂ ಹನ್ತಾಸ್ಮಿ ಮಿಷತಾಂ ಸರ್ವಧನ್ವಿನಾಮ್ ॥೨೯॥**

'ಪುತ್ರಸಹಿತರಾದ ಎಲ್ಲ ಪಾಂಡವರನ್ನೂ ನಾನೇ ಸಂಹಾರ ಮಾಡುತ್ತೇನೆ'–ಎಂದು ಯಾವನು ಹೇಳಿದ್ದನೋ–ಆ ಕರ್ಣನನ್ನು ಎಲ್ಲ ಧನುಷ್ಮಂತರ ಸಮ್ಮುಖದಲ್ಲಿ ಸಂಹಾರಮಾಡುವವನು ನಾನೇ ಆಗಿದ್ದೇನೆ.

ಮಹಾಮನಸ್ವಿಯಾದ, ದುರ್ಬುದ್ಧಿಯಾದ, ದುರಾತ್ಮನಾದ ದುರ್ಯೋಧನನು ಕರ್ಣನ ಬಲವನ್ನೇ ಅವಲಂಬಿಸಿ ನಮ್ಮನ್ನು ಅವಮಾನಿಸುತ್ತಲೇ ಬಂದನು. ಅಂತಹ ಕರ್ಣನನ್ನು ನಾನಿಂದು ಯುದ್ಧದಲ್ಲಿ ಸಂಹರಿಸಿ ನಮ್ಮಣ್ಣನನ್ನು ಸಂತೋಷಗೊಳಿಸುತ್ತೇನೆ. ನಾನಾವಿಧವಾದ ಬಾಣಗಳನ್ನು ಬಿಟ್ಟು ಶತ್ರುಗಳನ್ನು ಬಾಧೆಪಡಿಸುತ್ತೇನೆ. (ಹೆದರಿಸುತ್ತೇನೆ.) ಕಿವಿಯವರೆಗೂ ಸೆಳೆದುಬಿಡುವ, ಯಮನ ರಾಜ್ಯದ ಪ್ರಜಾಸಂಖ್ಯೆಯನ್ನು ಹೆಚ್ಚಿಸುವ ಬಾಣಗಳಿಂದ ಕೆಳಗುರುಳಿಸಲ್ಪಟ್ಟ ರಥಗಳಿಂದಲೂ ಆನೆಗಳಿಂದಲೂ ಈ ರಣಾಂಗಣವನ್ನು ಶೋಭಾಯಮಾನವನ್ನಾಗಿ ಮಾಡುತ್ತೇನೆ. ಈ ಮಹಾಸಮರದಲ್ಲಿ ಶಕ್ತಿಸಂಪನ್ನನಾದ, ಯುದ್ಧದುರ್ಮದನಾದ, ಭಯಂಕರನಾದ ಕರ್ಣನನ್ನು ಬಾಣಗಳಿಂದ ಧ್ವಂಸಮಾಡಿಬಿಡುತ್ತೇನೆ. ಕೃಷ್ಣ! ಇಂದು ಕರ್ಣನು ಹತನಾಗಲಾಗಿ ರಾಜರಿಂದ ಕೂಡಿದ ಧೃತರಾಷ್ಟ್ರನ ಮಕ್ಕಳು–ಸಿಂಹದಿಂದ ಭಯಗೊಂಡ ಮೃಗಗಳಂತೆ–ದಿಕ್ಕಾಪಾಲಾಗಿ ಓಡಿಹೋಗುತ್ತಾರೆ. ಇಂದು ಯುದ್ಧದಲ್ಲಿ ಪುತ್ರ-ಸುಹೃತ್ಸಮೇತನಾದ ಕರ್ಣನು ನನ್ನಿಂದ ಹತನಾಗಲಾಗಿ ದುರ್ಯೋಧನರಾಜನು ತನ್ನ ವಿಷಯವಾಗಿ ದುಃಖಪಡುತ್ತಾನೆ. ಕರ್ಣನು ಹತನಾದುದನ್ನು ಕಂಡು ಅಸಹನಶೀಲನಾದ ದುರ್ಯೋಧನನು ಸರ್ವಧನುಷ್ಮಂತರಿಗಿಂತಲೂ ಅರ್ಜುನನೇ ಶ್ರೇಷ್ಠನೆಂಬುದನ್ನು ಮನಗಾಣುತ್ತಾನೆ.

ನಾನಿಂದು ಪುತ್ರ-ಪೌತ್ರ-ಮಂತ್ರಿ-ಸೇವಕಸಹಿತನಾದ ಜನೇಶ್ವರನಾದ ಧೃತರಾಷ್ಟ್ರನನ್ನು ರಾಜ್ಯದ ವಿಷಯದಲ್ಲಿ ನಿರಾಶೆಯುಳ್ಳವನನ್ನಾಗಿ

ಮಾಡುತ್ತೇನೆ. ಕೇಶವ! ನನ್ನ ಬಾಣಗಳಿಂದ ಛಿನ್ನ-ಭಿನ್ನವಾದ ಕರ್ಣನ ಶರೀರವನ್ನು ಇಂದು ಹಂಸ ಅಥವಾ ಚಕ್ರವಾಕಗಳೂ ಮತ್ತು ಅನೇಕ ಜಾತಿಯ ಮಾಂಸಾಶಿಗಳಾದ ಪಕ್ಷಿಗಳೂ ಕಿತ್ತುತಿನ್ನುತ್ತವೆ. ಮಧುಸೂದನ! ಇಂದಿನ ಯುದ್ಧದಲ್ಲಿ ನಾನು ರಾಧಾಪುತ್ರನಾದ ಕರ್ಣನ ಶಿರಸ್ಸನ್ನು ಎಲ್ಲ ಧನುಷ್ಮಂತರೂ ನೋಡುತ್ತಿರುವಂತೆಯೇ ಕತ್ತರಿಸುತ್ತೇನೆ. ಕೃಷ್ಣ! ನಾನಿಂದು ತೀಕ್ಷ್ಣವಾದ ವಿಪಾಠಗಳಿಂದಲೂ ಮತ್ತು ಕ್ಷುರಗಳಿಂದಲೂ ದುರಾತ್ಮನಾದ ರಾಧೇಯನ ಅಂಗಾಂಗಗಳನ್ನು ತುಂಡು-ತುಂಡುಮಾಡುತ್ತೇನೆ. ವೀರನಾದ ಯುಧಿಷ್ಠಿರರಾಜನು ಬಹಳ ಕಾಲದಿಂದಲೂ ಮನಸ್ಸಿನಲ್ಲಿಯೇ ಇಟ್ಟು ಕೊಂಡಿದ್ದ ಮಹಾಸಂತಾಪದಿಂದಲೂ ಮತ್ತು ಇದುವರೆಗೂ ಅನುಭವಿಸಿದ ಮಹಾಕಷ್ಟದಿಂದಲೂ ಇಂದು ಪಾರಾಗುತ್ತಾನೆ. ಕೇಶವ! ಇಂದು ನಾನು ಬಂಧು-ಮಿತ್ರಸಹಿತನಾದ ಕರ್ಣನನ್ನು ಸಂಹರಿಸಿ ಧರ್ಮಪುತ್ರನಾದ ಯುಧಿ ಷ್ಠಿರನನ್ನು ಸಂತೋಷಗೊಳಿಸುತ್ತೇನೆ. ಇಂದು ನಾನು ಯುದ್ಧದಲ್ಲಿ ದೀನನಾದ ಕರ್ಣನ ಅನುಯಾಯಿಗಳನ್ನು ಅಗ್ನಿಸದೃಶವಾದ ಮತ್ತು ಸರ್ಪವಿಷೋ ಪಮವಾದ ಬಾಣಗಳಿಂದ ದಹಿಸಿಬಿಡುತ್ತೇನೆ. ಸುವರ್ಣಮಯವಾದ ಕವಚ ಗಳನ್ನು ಧರಿಸಿರುವ, ಮಣಿಮಯಕುಂಡಲಗಳನ್ನು ಧಾರಣೆಮಾಡಿರುವ ರಾಜರ ಶವಗಳಿಂದ ನಾನು ಯುದ್ಧಭೂಮಿಯನ್ನು ಮುಚ್ಚುತ್ತೇನೆ. ಮಧುಸೂದನ! ಇಂದು ಅಭಿಮನ್ಯುವಿನ ಎಲ್ಲ ಶತ್ರುಗಳ ಶರೀರಗಳನ್ನೂ ಶಿರಸ್ಸುಗಳನ್ನೂ ನಿಶಿತವಾದ ಬಾಣಗಳಿಂದ ಅರೆದುಬಿಡುತ್ತೇನೆ. ಇಂದು ನಾನು ಧೃತರಾಷ್ಟ್ರನ ಮಕ್ಕಳಿಂದ ರಹಿತವಾದ ಈ ಭೂಮಂಡಲವನ್ನು ನಮ್ಮಣ್ಣನಿಗೆ ಅರ್ಪಣೆಮಾಡುತ್ತೇನೆ. ಅಥವಾ ಅರ್ಜುನನಿಲ್ಲದ ಈ ಭೂಮಿಯಲ್ಲಿ ನೀನೊಬ್ಬನೇ ಸಂಚಾರಮಾಡುವಂತಾದರೂ ಆಗುತ್ತದೆ. ಇಂದು ನಾನು ಧನುಷ್ಮಂತರ ಋಣದಿಂದಲೂ, ಕೋಪದ ಋಣದಿಂದಲೂ, ಕುರುಗಳ ಋಣ ದಿಂದಲೂ, ಬಾಣಗಳ ಋಣದಿಂದಲೂ, ಗಾಂಡೀವಧನುಸ್ಸಿನ ಋಣದಿಂದಲೂ ವಿಮುಕ್ತನಾಗುತ್ತೇನೆ. ಇಂದ್ರನು ಶಂಬರನನ್ನು ಸಂಹರಿಸಿದಂತೆ–ಇಂದು ನಾನು ಯುದ್ಧದಲ್ಲಿ ಕರ್ಣನನ್ನು ಸಂಹರಿಸಿ ಹದಿಮೂರು ವರ್ಷಗಳಿಂದ ಸಂಚಿತವಾಗಿದ್ದ ದುಃಖವನ್ನು ಪರಿತ್ಯಜಿಸುತ್ತೇನೆ. ಯುದ್ಧದಲ್ಲಿಂದು ಕರ್ಣನು ಹತನಾಗಲಾಗಿ ಮಿತ್ರರ ಹಿತಾಸಕ್ತಿಯಲ್ಲಿಯೇ ತತ್ಪರರಾದ ಸೋಮಕಮಹಾ

ರಥರು ತಮ್ಮನ್ನು ಕೃತಾರ್ಥರಾದಂತೆ ಭಾವಿಸಿಕೊಳ್ಳುತ್ತಾರೆ. ಮಾಧವ! ಕರ್ಣನು ಹತನಾಗಲಾಗಿ, ವಿಜಯದಿಂದ ನನ್ನ ಕೀರ್ತಿ-ಪ್ರತಿಷ್ಠೆಗಳು ಅಧಿಕವಾಗಲಾಗಿ, ಸಾತ್ಯಕಿಗೆ ಅದೆಷ್ಟು ಸಂತೋಷವಾಗುವುದೆಂಬುದನ್ನು ನಾನು ಊಹಿಸಲಾರದವನಾಗಿದ್ದೇನೆ. ನಾನು ಇಂದಿನ ಯುದ್ಧದಲ್ಲಿ ಕರ್ಣನನ್ನೂ ಮಹಾರಥನಾದ ಅವನ ಮಗ ವೃಷಸೇನನನ್ನೂ ಸಂಹರಿಸಿ ಭೀಮ-ನಕುಲ-ಸಹದೇವ-ಸಾತ್ಯಕಿಯರಿಗೆ ಆನಂದವನ್ನುಂಟುಮಾಡುತ್ತೇನೆ. ಇಂದಿನ ಯುದ್ಧದಲ್ಲಿ ನಾನು ಕರ್ಣನನ್ನು ಸಂಹರಿಸಿ ಧೃಷ್ಟದ್ಯುಮ್ನ-ಶಿಖಂಡಿ-ಪಾಂಚಾಲರ ಋಣಗಳಿಂದಲೂ ವಿಮುಕ್ತನಾಗುತ್ತೇನೆ. ಇಂದಿನ ಯುದ್ಧದಲ್ಲಿ ಸೈನಿಕರು, ಕ್ರುದ್ಧನಾದ ಅರ್ಜುನನು ಕೌರವರೊಡನೆ ವೀರಾವೇಶದಿಂದ ಯುದ್ಧಮಾಡುವುದನ್ನೂ, ಕರ್ಣನನ್ನು ಸಂಹರಿಸುವುದನ್ನೂ ನೋಡಲಿ. ಮಾಧವ! ನಿನ್ನೊಡನೆ ಮಾತ್ರ ಆತ್ಮಶ್ಲಾಘನೆಮಾಡಿಕೊಳ್ಳುತ್ತಿದ್ದೇನೆ. (ನನ್ನಲ್ಲಿ ಬಲವೆಷ್ಟಿರುವುದೆಂಬುದನ್ನು ಹೇಳುತ್ತೇನೆ.)

**ಧನುರ್ವೇದೇ ಮತ್ಸಮೋ ನಾಸ್ತಿ ಲೋಕೇ**
**ಪರಾಕ್ರಮೇ ವಾ ಮಮ ಕೋಽಸ್ತಿ ತುಲ್ಯಃ ।**
**ಕೋ ವಾಪ್ಯನ್ಯೋ ಮತ್ಸಮೋಽಸ್ತಿ ಕ್ಷಮಾವಾಂ-**
**ಸ್ತಥಾ ಕ್ರೋಧೇ ಸದೃಶೋಽನ್ಯೋ ನ ಮೇಽಸ್ತಿ ॥೫೪॥**

ಧನುರ್ವಿದ್ಯೆಯಲ್ಲಿ ನನಗೆ ಸಮಾನರಾದವರು ಈ ಲೋಕದಲ್ಲಿಯೇ ಮತ್ತೊಬ್ಬರಿಲ್ಲ. ಕೃಷ್ಣ! ನಿನಗೆ ತಿಳಿದಿರುವಂತೆ ಪರಾಕ್ರಮದಲ್ಲಾದರೂ ನನಗೆ ಸಮಾನರಾದವರು ಈ ಲೋಕದಲ್ಲಿ ಯಾರಿದ್ದಾರೆ? ನನಗೆ ಸಮಾನರಾದ ಕ್ಷಮಾವಂತರು ತಾನೇ ಈ ಲೋಕದಲ್ಲಿ ಯಾರಿದ್ದಾರೆ? ನನ್ನ ಸಮಾನರಾದ ಕ್ಷಮಾವಂತರು ಈ ಪ್ರಪಂಚದಲ್ಲಿಯೇ ಇಲ್ಲದಿರುವಂತೆ ನನ್ನ ಸಮಾನರಾದ ಕೋಪಿಷ್ಠರೂ ಈ ಜಗತ್ತಿನಲ್ಲಿ ಬೇರೊಬ್ಬರಿಲ್ಲ.

**ಅಹಂ ಧನುಷ್ಮಾನ್ಸುರಾಸುರಾಂಶ್ಚ**
**ಸರ್ವಾಣಿ ಭೂತಾನಿ ಚ ಸಙ್ಗತಾನಿ ।**
**ಸ್ವಬಾಹುವೀರ್ಯಾದ್ಗಮಯೇ ಪರಾಭವಂ**
**ಮತ್ಪೌರುಷಂ ವಿದ್ಧಿ ವರಂ ಪರೇಭ್ಯಃ ॥೫೫॥**

ಧನುಷ್ಮಂತನಾದ ನಾನು–ಸಂಘಟಿತರಾಗಿ ಬರುವ ಸುರಾಸುರರನ್ನೂ,

ಸಕಲಪ್ರಾಣಿಗಳನ್ನೂ ನನ್ನ ಬಾಹುಬಲ-ಪರಾಕ್ರಮಗಳಿಂದ ಪರಾಭವಗೊಳಿಸಬಲ್ಲೆನು. ನನ್ನ ಪೌರುಷವು ಎಲ್ಲ ಶ್ರೇಷ್ಠಪುರುಷರ ಪೌರುಷಕ್ಕಿಂತಲೂ ಶ್ರೇಷ್ಠವಾದುದೆಂದು ತಿಳಿ.

ಶರಾರ್ಚಿಷಾ ಗಾಣ್ಡಿವೇನಾಹಮೇಕಃ
ಸರ್ವಾನ್ಕುರೂನ್ಬಾಹ್ಲಿಕಾಂಶ್ಚಾಭಿಹತ್ಯ ।
ಹಿಮಾತ್ಯಯೇ ಕಕ್ಷಗತೋ ಯಥಾಗ್ನಿ-
ಸ್ತಥಾ ದಹೇಯಂ ಸಗಣಾನ್ಪ್ರಸಹ್ಯ ॥೫೬॥

ಬಾಣಗಳ ಜ್ವಾಲೆಗಳಿಂದ ಯುಕ್ತವಾದ ಗಾಂಡೀವಧನುಸ್ಸಿನಿಂದ ನಾನೊಬ್ಬನೇ ಸೈನ್ಯಸಮೇತರಾದ ಕುರು-ಬಾಹ್ಲಿಕಯೋಧರನ್ನು ಸಂಹರಿಸಿ–ಗ್ರೀಷ್ಮರ್ತುವಿನಲ್ಲಿ ಪೊದೆಗೆ ಬಿದ್ದ ಬೆಂಕಿಯು ಪೊದೆಯನ್ನು ಸಂಪೂರ್ಣವಾಗಿ ಭಸ್ಮಮಾಡಿಬಿಡುವಂತೆ–ಬಲಪೂರ್ವಕವಾಗಿ ಎಲ್ಲರನ್ನೂ ಭಸ್ಮಮಾಡಿ ಬಿಡುತ್ತೇನೆ.

ಪಾಣೌ ಪೃಷತ್ಕಾ ಲಿಖಿತಾ ಮಮೈತೇ
ಧನುಶ್ಚ ದಿವ್ಯಂ ವಿತತಂ ಸಬಾಣಮ್ ।
ಪಾದೌ ಚ ಮೇ ಸರಥೌ ಸಧ್ವಜೌ ಚ
ನ ಮಾದೃಶಂ ಯುದ್ಧಗತಂ ಜಯನ್ತಿ ॥೫೭॥

ನನ್ನ ಒಂದು ಕೈಯಲ್ಲಿ ಬಾಣಗಳ ಚಿಹ್ನೆಗಳಿವೆ. ಮತ್ತೊಂದರಲ್ಲಿ ಹೊರಚಾಚಿರುವ ಬಾಣದಿಂದ ಕೂಡಿರುವ ಧನುಸ್ಸಿನ ಚಿಹ್ನೆಯಿದೆ. ನನ್ನ ಎರಡು ಕಾಲುಗಳಲ್ಲಿಯೂ ರಥ-ಧ್ವಜಗಳ ಚಿಹ್ನೆಗಳಿವೆ. ಇಂತಹ ಲಕ್ಷಣಗಳಿಂದ ಕೂಡಿದ, ಯುದ್ಧದಲ್ಲಿ ಉಪಸ್ಥಿತನಾಗುವ ನನ್ನಂತಹವನನ್ನು ಶತ್ರುಗಳೆಂದಿಗೂ ಜಯಿಸಲಾರರು.”

ಮಹಾರಾಜ! ಅದ್ವಿತೀಯನಾದ, ಶತ್ರುಹಂತಕನಾದ, ರಕ್ತಸದೃಶವಾದ ಕಣ್ಣುಗಳನ್ನು ಹೊಂದಿದ್ದ ಅರ್ಜುನನು ಶ್ರೀಕೃಷ್ಣನೊಡನೆ ಹೀಗೆ ಹೇಳಿ ಭೀಮನನ್ನು ಶತ್ರುಗಳ ಹಿಡಿತದಿಂದ ಬಿಡಿಸಿಕೊಳ್ಳುವ ಸಲುವಾಗಿಯೂ ಮತ್ತು ಕರ್ಣನ ಶಿರಸ್ಸನ್ನು ಶರೀರದಿಂದ ಪ್ರತ್ಯೇಕಿಸುವ ಸಲುವಾಗಿಯೂ ರಣರಂಗಕ್ಕೆ ಶೀಘ್ರವಾಗಿ ಪ್ರಯಾಣಮಾಡಿದನು.”

೭೪ನೆಯ ಅಧ್ಯಾಯವು ಮುಗಿಯಿತು.

## ಎರಡೂ ಪಕ್ಷಗಳ ಸೈನ್ಯಗಳ ನಡುವೆ ದ್ವಂದ್ವಯುದ್ಧ: ಸುಷೇಣನ ವಧೆ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ನನ್ನ ಕಡೆಯ ಸೈನಿಕರಿಗೂ ಮತ್ತು ಪಾಂಡವ-ಸೃಂಜಯಸೈನಿಕರಿಗೂ ಅಗಾಧವಾದ ಮತ್ತು ಮಹಾಭಯಂಕರವಾದ ಯುದ್ಧವು ನಡೆಯುತ್ತಿದ್ದಿತು. ಧನಂಜಯನೂ ಕರ್ಣನೊಡನೆ ಯುದ್ಧಮಾಡಲು ರಣರಂಗಕ್ಕೆ ಹೋದನು. ಅನಂತರ ಯುದ್ಧದ ಸ್ವರೂಪವು ಹೇಗಿದ್ದಿತು?"

"ಮಹಾರಾಜ! ಗ್ರೀಷ್ಮರ್ತುವಿನ ಅಂತ್ಯಭಾಗದಲ್ಲಿ ಮೇಘಸಮೂಹ ಗಳು ಗರ್ಜನೆಮಾಡುತ್ತಾ ಆಕಾಶದಲ್ಲಿ ಕಾಣಿಸಿಕೊಳ್ಳುವಂತೆ– ದೊಡ್ಡ-ದೊಡ್ಡ ಧ್ವಜಪಟಗಳಿಂದ ಕೂಡಿದ್ದ, ಸಕಲವಿಧವಾದ ಶಸ್ತ್ರಾಸ್ತ್ರಗಳಿಂದಲೂ ಸಮೃದ್ಧ ವಾಗಿದ್ದ ಎರಡೂ ಪಕ್ಷಗಳ ಸೈನ್ಯಗಳೂ ಏಕತ್ರ ಸೇರಿ ಭೇರೀನಿನಾದಗಳೊಡನೆ ಗರ್ಜನೆಮಾಡುತ್ತಿದ್ದುವು. ಆ ಸೈನ್ಯಗಳಲ್ಲಿದ್ದ ಮಹಾಗಜಗಳೇ ಮೇಘ ಸದೃಶವಾಗಿದ್ದುವು. ಸೈನಿಕರಿಂದ ಸತತವಾಗಿ ಸುರಿಸಲ್ಪಡುತ್ತಿದ್ದ ಅಸ್ತ್ರಗಳೇ ನೀರಿನ ರೂಪದಲ್ಲಿದ್ದುವು. ರಣವಾದ್ಯಗಳ ಮತ್ತು ರಥಚಕ್ರಗಳ ಶಬ್ದಗಳೇ ಮೇಘಗಳ ಗರ್ಜನೆಯ ರೂಪದಲ್ಲಿದ್ದುವು. ಸುವರ್ಣದಿಂದ ಚಿತ್ರಿತವಾದ ಆಯುಧಗಳು ಮಿಂಚಿನಂತಿದ್ದುವು. ಬಾಣ-ಕತ್ತಿ-ನಾರಾಚ-ಮಹಾಸ್ತ್ರಗಳೇ ಜಲಧಾರೆಗಳಾಗಿದ್ದುವು. ಅಕಾಲದಲ್ಲಿ ಬೀಳುವ ಕ್ರೂರವಾದ ಮತ್ತು ಅನಿಷ್ಟವಾದ ಮಳೆಯಂತೆ ಶರಾಸಿ-ನಾರಾಚಗಳಿಂದ ಕೂಡಿದ್ದ, ಘೋರ ವೃಷ್ಟಿಯು ಭಯಂಕರವಾದ ವೇಗವುಳ್ಳ ಕ್ಷತ್ರಿಯರ ಜೀವವನ್ನು ಅಪಹರಿಸು ವುದಾಗಿದ್ದಿತು ಮತ್ತು ಸಕಲಪ್ರಜೆಗಳ (ಸೈನಿಕರ) ಸಂಹಾರಕವಾಗಿದ್ದಿತು. ಅನೇಕ ರಥಿಗಳು ಸಂಘಟಿತರಾಗಿ ಒಬ್ಬ ರಥಿಕನ ಮೇಲೆ ಬಿದ್ದು ಅವನನ್ನು ಮೃತ್ಯುಲೋಕಕ್ಕೆ ಕಳುಹಿಸುತ್ತಿದ್ದರು. ಹಾಗೆಯೇ ಒಬ್ಬನೇ ವೀರನಾದ ರಥಿಕನು ಮತ್ತೊಬ್ಬ ರಥಿಕನನ್ನು ಯಮಾಲಯಕ್ಕೆ ಕಳುಹಿಸುತ್ತಿದ್ದನು.

ಮತ್ತೊಂದು ಕಡೆಯಲ್ಲಿ ಒಬ್ಬನೇ ರಥಿಕನು ರಥಶ್ರೇಷ್ಠರಾದ ಅನೇಕರಥಿಗಳನ್ನು ಯಮಾಲಯಕ್ಕೆ ಕಳುಹಿಸುತ್ತಿದ್ದನು. ಒಬ್ಬ ರಥಿಯು ಅಶ್ವ-ಸೂತರಿಂದ ಸಹಿತನಾದ ಮತ್ತೊಬ್ಬ ರಥಿಯನ್ನು ಮೃತ್ಯುವಿಗೊಪ್ಪಿಸುತ್ತಿದ್ದನು. ಗಜೈಕಸಹಾಯನಾದ ಮತ್ತೊಬ್ಬ ಯೋಧನು ಅನೇಕರಥಿಗಳನ್ನೂ ಅನೇಕ ಅಶ್ವಸೈನಿಕರನ್ನೂ ಮೃತ್ಯುವಶರನ್ನಾಗಿ ಮಾಡುತ್ತಿದ್ದನು. ಅದೇ ರೀತಿಯಲ್ಲಿ ಅರ್ಜುನನು ಸಾರಥಿಗಳಿಂದ ಮತ್ತು ಕುದುರೆಗಳಿಂದ ಯುಕ್ತವಾದ ರಥಗಳನ್ನೂ, ಆನೆಗಳನ್ನೂ, ಅಶ್ವಸೈನಿಕರನ್ನೂ, ಕುದುರೆಗಳನ್ನೂ, ಸವಾರರನ್ನೂ, ಎಲ್ಲ ಶತ್ರುಗಳನ್ನೂ, ಪದಾತಿಸಮೂಹಗಳನ್ನೂ ಬಾಣಗಳ ಸಮೂಹಗಳಿಂದ ಮೃತ್ಯುವಶರನ್ನಾಗಿ ಮಾಡುತ್ತಿದ್ದನು. ರಣಾಂಗಣದ ಒಂದು ಭಾಗದಲ್ಲಿ ಕೃಪರೂ ಮತ್ತು ಶಿಖಂಡಿಯೂ ಯುದ್ಧದಲ್ಲಿ ತೊಡಗಿದ್ದರು. ಮತ್ತೊಂದು ವಿಭಾಗದಲ್ಲಿ ಸಾತ್ಯಕಿಯು ದುರ್ಯೋಧನನನ್ನು ಆಕ್ರಮಿಸಿದ್ದನು. ಶ್ರುತಶ್ರವನು ದ್ರೋಣರ ಮಗನಾದ ಅಶ್ವತ್ಥಾಮನೊಡನೆ ಯುದ್ಧಮಾಡುತ್ತಿದ್ದನು. ಮತ್ತೊಂದು ವಿಭಾಗದಲ್ಲಿ ಯುಧಾಮನ್ಯುವು ಚಿತ್ರಸೇನನೊಡನೆ ಯುದ್ಧದಲ್ಲಿ ತೊಡಗಿದ್ದನು. ಸೃಂಜಯವಂಶೀಯನಾದ ರಥಿಯಾದ ಉತ್ತಮೌಜಸನು ತನ್ನೆದುರಾಗಿ ಬಂದ ಕರ್ಣನ ಮಗನಾದ ಸುಷೇಣನನ್ನು ಆಕ್ರಮಿಸಿದನು. ಹಸಿವಿನಿಂದ ಬಳಲಿರುವ ಸಿಂಹವು ದೊಡ್ಡದಾದ ಎತ್ತನ್ನು ಆಕ್ರಮಿಸುವಂತೆ–ಸಹದೇವನು ಗಾಂಧಾರರಾಜನಾದ ಶಕುನಿಯನ್ನು ಆಕ್ರಮಿಸಿದನು. ಯುವಕನಾದ, ನಕುಲನ ಮಗನಾದ ಶತಾನೀಕನು ಯುವಕನಾದ ಕರ್ಣನ ಮಗನಾದ ವೃಷಸೇನನನ್ನು ಬಾಣಗಳ ಸಮೂಹ ಗಳಿಂದ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಶೂರನಾದ ಕರ್ಣಪುತ್ರನೂ ದ್ರೌಪದೇಯನನ್ನು ಅನೇಕವಾದ ಬಾಣಗಳ ವೃಷ್ಟಿಯಿಂದ ಗಾಯಗೊಳಿಸಿ ದನು. ಚಿತ್ರಯೋಧಿಯಾದ, ಮಾದ್ರಿಯ ಮಗನಾದ, ರಥಶ್ರೇಷ್ಠನಾದ ನಕುಲನು ಕೃತವರ್ಮನನ್ನು ಆಕ್ರಮಿಸಿದನು. ಸೇನಾಪತಿಯಾದ, ದ್ರುಪದನ ಮಗ ನಾದ, ಪಾಂಚಾಲರ ಅಧಿಪತಿಯಾದ ಧೃಷ್ಟದ್ಯುಮ್ನನು ಸೈನ್ಯದಿಂದ ಪರಿವೃತನಾಗಿದ್ದ ಕರ್ಣನನ್ನು ಆಕ್ರಮಿಸಿದನು. ಭಾರತನೇ! ದುಃಶಾ ಸನನೂ, ಕೌರವರ ಮತ್ತು ಸಂಶಪ್ತಕರ ಅಪಾರಸೈನಿಕರೂ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಸಹಿಸಲು ಸಾಧ್ಯವಾಗದಷ್ಟು ವೇಗಶಾಲಿಯಾದ, ಯುದ್ಧದಲ್ಲಿ

ಭಯಂಕರನಾದ ಭೀಮಸೇನನನ್ನು ಆಕ್ರಮಿಸಿದರು. ವೀರನಾದ ಉತ್ತಮೌಜಸನು ಸುಷೇಣನನ್ನು ಬಲಪೂರ್ವಕವಾಗಿ ಆಕ್ರಮಿಸಿ ಅವನ ತಲೆಯನ್ನು



ಕತ್ತರಿಸಿದನು. ಆ ತಲೆಯು ಘೋರವಾದ ಆರ್ತನಾದದಿಂದ ಭೂಮಿಯಲ್ಲಿಯೂ ಮತ್ತು ಅಂತರಿಕ್ಷದಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಭೂಮಿಯ ಮೇಲೆ ಬಿದ್ದಿತು. ತನ್ನ ಮಗನಾದ ಸುಷೇಣನ ತಲೆಯು ಉತ್ತಮೌಜಸನಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದುದನ್ನು ಕಂಡು ಬಹಳ ದುಃಖಿತನಾದ ಕರ್ಣನು ಅತ್ಯಂತಕ್ರುದ್ಧನಾಗಿ ಉತ್ತಮೌಜಸನ ಕುದುರೆಗಳನ್ನೂ, ರಥವನ್ನೂ ಮತ್ತು ಧ್ವಜವನ್ನೂ ಸುಘೋರವಾದ ಮತ್ತು ನಿಶಿತವಾದ ಬಾಣಗಳಿಂದ ಕತ್ತರಿಸಿದನು. ಅದಕ್ಕೆ ಪ್ರತಿಯಾಗಿ ಉತ್ತಮೌಜಸನು ಕರ್ಣನನ್ನು ನಿಶಿತವಾದ ಪೃಷತ್ಕಗಳಿಂದ ಪ್ರಹರಿಸಿದನು. ಬಳಿಕ ಥಳ-

ಥಳಿಸುತ್ತಿದ್ದ ಖಡ್ಗದಿಂದ ಕೃಪರ ಪೃಷ್ಠರಕ್ಷಕರನ್ನೂ ಮತ್ತು ಕುದುರೆಗಳನ್ನೂ ಸಂಹರಿಸಿ ಶಿಖಂಡಿಯ ರಥಕ್ಕೆ ಹತ್ತಿದನು. ಆ ಸಮಯದಲ್ಲಿ ಕೃಪರು ಶಿಖಂಡಿಯೊಡನೆ ಯುದ್ಧದಲ್ಲಿ ತೊಡಗಿದ್ದರು. ರಥಸ್ಥನಾಗಿದ್ದ ಶಿಖಂಡಿಯು ಕೃಪರು ರಥಹೀನರಾಗಿರುವುದನ್ನು ಕಂಡು ಅವರನ್ನು ಬಾಣಗಳಿಂದ ಪ್ರಹರಿಸಲು ಇಚ್ಛಿಸಲಿಲ್ಲ. ಆ ಸಮಯದಲ್ಲಿ ಶ್ರುತಶ್ರವಸನೊಡನೆ ಯುದ್ಧಮಾಡುತ್ತಿದ್ದ ಅಶ್ವತ್ಥಾಮನು ಶಿಖಂಡಿಯನ್ನು ನಿರೋಧಿಸಿ–ಕೆಸರಿನಲ್ಲಿ ಸಿಕ್ಕಿಹಾಕಿಕೊಂಡಿರುವ ಹಸುವನ್ನು ಕಷ್ಟಪಟ್ಟು ಮೇಲಕ್ಕೆತ್ತುವಂತೆ–ಕೃಪರ ರಥವನ್ನು ಉದ್ಧರಿಸಿದನು. (ಕೃಪರಿಗೆ ನೂತನರಥವನ್ನು ಸಜ್ಜುಗೊಳಿಸಿ ಕೊಟ್ಟನು.) ಆಷಾಢಮಾಸದ ಮಧ್ಯಾಹ್ನದ ಸಮಯದಲ್ಲಿ ಅತ್ಯಂತತಾಪದಾಯಕನಾದ ಸೂರ್ಯದೇವನಂತೆ–ಸುವರ್ಣಮಯವಾದ ಕವಚವನ್ನು ಧರಿಸಿದ್ದ ವಾಯುಪುತ್ರನಾದ ಭೀಮಸೇನನು ನಿನ್ನ ಮಕ್ಕಳ ಸೇನಾಸಮೂಹಗಳನ್ನು ನಿಶಿತವಾದ ಬಾಣಗಳ ಸಮೂಹಗಳಿಂದ ಸಂತಾಪಗೊಳಿಸಲು ಉಪಕ್ರಮಿಸಿದನು."

೭೫ನೆಯ ಅಧ್ಯಾಯವು ಮುಗಿಯಿತು.

೭೬ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಭೀಮಸೇನನಿಗೂ ಮತ್ತು ಸಾರಥಿಯಾದ ವಿಶೋಕನಿಗೂ ನಡೆದ ಸಂಭಾಷಣೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! (ಅರ್ಜುನನು ಭೀಮಸೇನನ ಸಲಹೆಯಂತೆ ಧರ್ಮರಾಜನನ್ನು ನೋಡಲು ಹೋದನಂತರ) ಭಯಂಕರವಾದ ಆ ಮಹಾಯುದ್ಧದಲ್ಲಿ ಶತ್ರುಪಕ್ಷದ ಅನೇಕಯೋಧರಿಂದ ಸುತ್ತುವರಿಯಲ್ಪಟ್ಟಿದ್ದ ಏಕಾಕಿಯಾಗಿದ್ದ ಭೀಮಸೇನನು ಧೃತರಾಷ್ಟ್ರನ ಮಕ್ಕಳ ಸೈನ್ಯದ ಬಳಿಗೆ ರಥವನ್ನು ನಡೆಸುವಂತೆ ಸಾರಥಿಯಾದ ವಿಶೋಕನಿಗೆ ಹೇಳಿದನು.

"ಸೂತ! ಬೇಗ ಹೋಗು. ಕುದುರೆಗಳನ್ನು ಶೀಘ್ರವಾಗಿ ಓಡಿಸು. ಧೃತರಾಷ್ಟ್ರನ ಮಕ್ಕಳನ್ನು ಯಮಪುರಿಗೆ ಕಳುಹಿಸಿಬಿಡುತ್ತೇನೆ."

ಭೀಮಸೇನನಿಂದ ಹೀಗೆ ಪ್ರಚೋದಿತನಾದ, ಭಯಂಕರವೇಗದಿಂದ ಕುದುರೆಗಳನ್ನು ನಡೆಸುವ ಸಾಮರ್ಥ್ಯವನ್ನು ಹೊಂದಿದ್ದ ವಿಶೋಕನು, ಭೀಮನು ಹೋಗಬೇಕೆಂದು ಇಚ್ಛಿಸಿದ್ದ ನಿನ್ನ ಮಕ್ಕಳ ಸೈನ್ಯವಿದ್ದೆಡೆಗೆ ಕುದುರೆಗಳನ್ನು ಅವಸರದಿಂದ ಒಯ್ದನು.

ಭೀಮಸೇನನ ರಥವನ್ನು ನೋಡಿದೊಡನೆಯೇ ಕುರುಗಳು ಗಜಾಶ್ವ-ರಥ-ಪದಾತಿಸೈನಿಕರೊಡನೆ ಭೀಮಸೇನನನ್ನು ಆಕ್ರಮಿಸಿದರು. ಅತ್ಯಂತ ವೇಗಯುಕ್ತವಾದ, ಶ್ರೇಷ್ಠವಾದ ಭೀಮಸೇನನ ರಥವನ್ನು ಕುರುಯೋಧರು ನಾಲ್ಕು ಕಡೆಗಳಿಂದಲೂ ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ಮಹಾತ್ಮನಾದ ಭೀಮಸೇನನು ತನ್ನ ಮೇಲೆ ಸತತವಾಗಿ ಬೀಳುತ್ತಿದ್ದ ಬಾಣಗಳನ್ನು ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಬಾಣಗಳಿಂದ ಕತ್ತರಿಸಿಹಾಕಿದನು. ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಕುರುಯೋಧರ ಪ್ರತಿಯೊಂದು ಬಾಣವೂ ಭೀಮನ ಬಾಣಗಳಿಂದ ಎರಡು-ಮೂರು ತುಂಡುಗಳಂತೆ ಕತ್ತರಿಸಲ್ಪಟ್ಟು ಕೆಳಕ್ಕೆ ಬೀಳುತ್ತಿದ್ದುವು. ಬಳಿಕ ಭೀಮಸೇನನಿಂದ ಹತರಾದ ಗಜಾಶ್ವ-ರಥ-ಪದಾತಿಸೈನಿಕರ ಘೋರವಾದ ಆರ್ತನಾದಗಳುಂಟಾದುವು. ರಣರಂಗದ ಮಧ್ಯದಲ್ಲಿ ಭೀಮನ ಪ್ರಹಾರಕ್ಕೆ ಸಿಕ್ಕಿದ ಗಜಾಶ್ವ-ರಥ-ಪದಾತಿಸೈನ್ಯಗಳ ಭಯಂಕರಧ್ವನಿಯು ವಜ್ರಾಯುಧದಿಂದ ಪ್ರಹೃತವಾಗಿ ಕೆಳಕ್ಕೆ ಬಿದ್ದ ಪರ್ವತಗಳ ಶಬ್ದದಂತಿದ್ದಿತು. ಭೀಮಸೇನನ ಶ್ರೇಷ್ಠವಾದ ಬಾಣಗಳಿಂದ ಪ್ರಹೃತರಾದ ಮತ್ತು ಕ್ಷತ-ವಿಕ್ಷತರಾದ ರಾಜಪ್ರಮುಖರು–ರೆಕ್ಕೆಗಳು ಹುಟ್ಟಿದನಂತರ ಪಕ್ಷಿಗಳು ವೃಕ್ಷವನ್ನು ಮುತ್ತಿಕೊಳ್ಳುವಂತೆ ಭೀಮಸೇನನನ್ನು ಎಲ್ಲ ಕಡೆಗಳಿಂದಲೂ ಮುತ್ತಿಗೆಹಾಕಿದರು. ಈ ರೀತಿಯಲ್ಲಿ ನಿನ್ನ ಕಡೆಯ ಸೈನಿಕರು ಭೀಮಸೇನನ ಮೇಲೆ ಆಕ್ರಮಣ ನಡೆಸುತ್ತಿರಲಾಗಿ–ಪ್ರಳಯಕಾಲದಲ್ಲಿ ಸಮಸ್ತಪ್ರಾಣಿಗಳನ್ನೂ ಸಂಹಾರ ಮಾಡುವ ದಂಡಧರನಾದ ಕಾಲನು ಪ್ರಪಂಚವನ್ನೇ ದಹಿಸುವ ಇಚ್ಛೆಯಿಂದ ವೇಗವಾಗಿ ಕಾರ್ಯದಲ್ಲಿ ಪ್ರವೃತ್ತನಾಗುವಂತೆ–ಮಹಾವೇಗಶಾಲಿಯಾದ ಭೀಮಸೇನನು ಸಂಹಾರಕಾರ್ಯದಲ್ಲಿ ಅತಿಯಾದ ವೇಗವನ್ನು ಪ್ರಕಟಿಸಿದನು. ಪ್ರಳಯಕಾಲದಲ್ಲಿ ಪ್ರಾಣಿಗಳನ್ನು ಆಕ್ರಮಿಸುವ, ಪ್ರಜೆಗಳ ಸಂಹಾರಶೀಲ

ನಾದ ಕಾಲನನ್ನು ಯಾರಿಂದಲೂ ತಡೆಯಲು ಸಾಧ್ಯವಾಗ ದಂತೆ–ಅತಿವೇಗಶಾಲಿಯಾದ ಭೀಮಸೇನನ ರಭಸವನ್ನು ತಡೆಯಲು ನಿನ್ನ ಕಡೆಯ ಸೈನಿಕರು ಶಕ್ತರಾಗಲಿಲ್ಲ. ಮಹಾತ್ಮನಾದ ಭೀಮಸೇನನಿಂದ ಅವ್ಯಾಹತವಾಗಿ ದಹಿಸಲ್ಪಡುತ್ತಿದ್ದ ಕೌರವರ ಸೈನ್ಯವು ಭಯಗೊಂಡು– ಚಂಡಮಾರುತದಿಂದ ಮೋಡಗಳ ಸಮೂಹಗಳು ಚದುರಿಹೋಗುವಂತೆ ದಿಕ್ಕಾಪಾಲಾಗಿ ಓಡಿಹೋಯಿತು. ಅನಂತರ ಪ್ರಹೃಷ್ಟನಾದ, ಮಹಾಬಲಿಷ್ಠನಾದ, ಧೀಮಂತನಾದ ಭೀಮಸೇನನು ಸಾರಥಿಯೊಡನೆ ಹೇಳಿದನು: "ಸೂತ! ಈಗ ಒಟ್ಟಾಗಿ ಮತ್ತೆ ಬರುತ್ತಿರುವ ಆ ರಥ-ಧ್ವಜಗಳು ಶತ್ರುಗಳದ್ದೋ ಅಥವಾ ನಮ್ಮ ಕಡೆಯವೇ–ಎಂಬುದನ್ನು ಕೂಡಲೇ ತಿಳಿದು ಹೇಳು. ಏಕೆಂದರೆ: ಯುದ್ಧದಲ್ಲಿ ತೊಡಗಿರುವಾಗ ನಮಗೆ ಎದುರಿನಲ್ಲಿರುವ ಸೈನಿಕರು ನಮ್ಮವರೇ ಅಥವಾ ಶತ್ರುಪಕ್ಷದವರೇ ಎಂಬುದೊಂದೂ ಗೊತ್ತಾಗುವುದೇ ಇಲ್ಲ. ನಮ್ಮ ಸೈನ್ಯವನ್ನು ನಾನೇ ಬಾಣಗಳಿಂದ ಸಂಹರಿಸುವಂತಾಗಕೂಡದು. ವಿಶೋಕ! ಎಲ್ಲ ದಿಕ್ಕುಗಳಲ್ಲಿಯೂ ನಾನು ಶತ್ರುಗಳನ್ನೇ ನೋಡುತ್ತಿದ್ದೇನೆ. ಇದರಿಂದ ನನ್ನ ಮನಸ್ಸಿನಲ್ಲಿ ಚಿಂತೆಯುಂಟಾಗಿ ಆ ಚಿಂತೆಯೇ ನನ್ನನ್ನು ಬಹಳವಾಗಿ ಪರಿತಾಪಗೊಳ್ಳುವಂತೆ ಮಾಡಿದೆ. ಯುಧಿಷ್ಠಿರರಾಜನು ಬಾಣಗಳಿಂದ ಕ್ಷತ-ವಿಕ್ಷತನಾಗಿ ಬಹಳ ವೇದನೆಯನ್ನು ಅನುಭವಿಸುತ್ತಿದ್ದಾನೆ. ರಾಜನನ್ನು ನೋಡಲು ಹೋಗಿದ್ದ ಕಿರೀಟಿಯೂ ಅವನ ಸಮಾಚಾರವನ್ನು ತಿಳಿದು ರಣರಂಗಕ್ಕೆ ಹಿಂದಿರುಗಲಿಲ್ಲ.

ಈ ಕಾರಣದಿಂದ ನನಗೆ ಬಹಳವಾದ ದುಃಖವುಂಟಾಗಿದೆ. ಹಿಂದೆ ಧರ್ಮರಾಜನು ನನ್ನನ್ನು ಬಿಟ್ಟು ಶತ್ರುಗಳ ಮಧ್ಯಕ್ಕೆ ಹೋದುದರಿಂದಲೇ ನನಗೆ ಬಹಳ ದುಃಖವಾಗಿದ್ದಿತು. ಈಗ ಅವನು ಬದುಕಿರುವನೋ ಅಥವಾ ಇಲ್ಲವೋ–ಎಂಬುದೂ ನನಗೆ ತಿಳಿಯದಾಗಿದೆ. ರಾಜನನ್ನು ನೋಡಲು ಹೋದ ಅರ್ಜುನನ ಸಮಾಚಾರವೂ ತಿಳಿಯಲಿಲ್ಲ. ಇದರಿಂದಾಗಿ ನನಗೆ ಅತೀವದುಃಖವಾಗಿದೆ. ಹೇಗಾದರೂ ಆಗಲಿ. ನನ್ನ ಕರ್ತವ್ಯವನ್ನು ನಾನು ನಿರ್ವಹಿಸುತ್ತೇನೆ. ಪರಮಹರ್ಷಿತನಾದ ನಾನು ಪ್ರಚಂಡವಾದ ಈ ಶತ್ರು ಸೈನ್ಯವನ್ನು ವಿನಾಶಗೊಳಿಸುತ್ತೇನೆ. ರಣಾಂಗಣದ ಮಧ್ಯದಲ್ಲಿ ಸಂಘಟಿತ

ವಾಗಿ ನಿಂತಿರುವ ಸೈನ್ಯವನ್ನು ಸಂಪೂರ್ಣವಾಗಿ ವಿನಾಶಮಾಡಿ ಶತ್ರುವಿನಾಶದಿಂದುಂಟಾಗುವ ಆನಂದವನ್ನು ನಿನ್ನೊಡನೆ ಕೂಡಿಕೊಂಡೇ ಅನುಭವಿಸುತ್ತೇನೆ.



ವಿಶೋಕ! ನನ್ನ ರಥದಲ್ಲಿರುವ ಬಾಣಗಳು ತುಂಬಿರುವ ಬತ್ತಳಿಕೆಗಳನ್ನೆಲ್ಲಾ ನೋಡಿ ಎಷ್ಟು ಬಾಣಗಳು ಆ ಬತ್ತಳಿಕೆಗಳಲ್ಲಿ ಉಳಿದಿವೆಯೆಂಬುದನ್ನೂ, ಅವು ಯಾವ ಜಾತಿಗೆ ಸೇರಿದುವೆಂಬುದನ್ನೂ ಮತ್ತು ಅವುಗಳ ಪ್ರಮಾಣವೆಷ್ಟೆಂಬುದನ್ನೂ ತಿಳಿದುಕೊಂಡು ಬಾಣಗಳಿಗೆ ಸಂಬಂಧಿಸಿದಂತೆ ಎಲ್ಲ ವಿಷಯಗಳನ್ನೂ ನನಗೆ ತಿಳಿಸು."

ಭೀಮಸೇನನು ಹೀಗೆಂದು ಹೇಳಿದೊಡನೆಯೇ ವಿಶೋಕನು ಎಲ್ಲವನ್ನೂ ಪರಿಶೀಲಿಸಿ ವೃಕೋದರನಿಗೆ ವರದಿಮಾಡಿದನು:

**ಷಣ್ಮಾರ್ಗಣಾನಾಮಯುತಾನಿ ವೀರ**
**ಕ್ಷುರಾಶ್ಚ ಭಲ್ಲಾಶ್ಚ ತಥಾಯುತಾಖ್ಯಾಃ ।**
**ನಾರಾಚಾನಾಂ ದ್ವೇ ಸಹಸ್ರೇ ಚ ವೀರ**
**ತ್ರೀಣ್ಯೇವ ಚ ಪ್ರದರಾಣಾಂ ಸ್ಮ ಪಾರ್ಥ ॥೧೬॥**

"ಭೀಮಸೇನ! ಈಗಲೂ ನಿನ್ನ ಬಳಿಯಲ್ಲಿ ಅರುವತ್ತು ಸಾವಿರ* ಮಾರ್ಗಣಗಳಿವೆ. ಹತ್ತು ಸಾವಿರ ಕ್ಷುರಗಳೂ ಹತ್ತು ಸಾವಿರ ಭಲ್ಲಗಳೂ ಇವೆ. ಎರಡು ಸಾವಿರ ನಾರಾಚಗಳು ಉಳಿದಿವೆ. ಮೂರು ಸಾವಿರ ಪ್ರದರಗಳಿವೆ.

**ಅಸ್ತ್ಯಾಯುಧಂ ಪಾಣ್ಡವೇಯಾವಶಿಷ್ಟಂ**
**ನ ಯದ್ವಹೇಚ್ಛಕಟಂ ಷಡ್ಗವೀಯಮ್ ।**
**ಏತದ್ವಿದ್ವನ್ಮುಂಚ ಸಹಸ್ರಶೋಽಪಿ**
**ಗದಾಸಿಬಾಹುದ್ರವಿಣಂ ಚ ತೇಽಸ್ತಿ ।**
**ಪ್ರಾಸಾಶ್ಚ ಮುದ್ಗರಾಃ ಶಕ್ತಯಸ್ತೋಮರಾಶ್ಚ**
**ಮಾ ಭೈಷೀಸ್ತ್ವಂ ಸಂಕ್ಷಯಾದಾಯುಧಾನಾಮ್ ॥**

ಭೀಮಸೇನ! ನಿನ್ನ ಬಳಿಯಲ್ಲಿ ಆಯುಧಗಳು ಇನ್ನೂ ಎಷ್ಟು ಉಳಿದಿವೆಯೆಂದರೆ ನಿನ್ನಲ್ಲಿರುವ ಆಯುಧಗಳನ್ನು ಒಂದು ಗಾಡಿಯಲ್ಲಿ ತುಂಬಿದರೆ, ಆರು ಎತ್ತುಗಳನ್ನು ಹೂಡಿದರೂ ಆಯುಧಗಳಿಂದ ತುಂಬಿದ ಆ ಗಾಡಿಯನ್ನು ಎಳೆಯುವುದಕ್ಕಾಗುವುದಿಲ್ಲ. ಅಷ್ಟೊಂದು ದೊಡ್ಡದಾದ ಆಯುಧಗಳ ರಾಶಿಯೇ ನಿನ್ನಲ್ಲಿದೆ. ಆದುದರಿಂದ ನೀನು ನಿನ್ನಲ್ಲಿರುವ ಆಯುಧಗಳನ್ನು ಸಾವಿರಾರು ಸಂಖ್ಯೆಯಲ್ಲಿ ಶತ್ರುವಿನ ಮೇಲೆ ಪ್ರಯೋಗಿಸಬಹುದು. ಇಷ್ಟು ಮಾತ್ರವಲ್ಲದೇ, ನಿನ್ನಲ್ಲಿ ಅನೇಕ ಗದೆಗಳಿವೆ; ಕತ್ತಿಗಳಿವೆ. ಈ ಆಯುಧ

---

* ಮಾರ್ಗಣ, ಕ್ಷುರ, ಭಲ್ಲ, ನಾರಾಚ, ಪ್ರದರ–ಈ ಎಲ್ಲವನ್ನೂ ಬಾಣಗಳ ಪರ್ಯಾಯದಲ್ಲಿಯೇ ವಿಶೋಕನು ಹೇಳುತ್ತಾನೆ. ಒಂದೊಂದಕ್ಕೂ ಕಿಂಚಿದ್ಭೇದವಿರುತ್ತದೆಂದು ತೋರುತ್ತದೆ.

ಗಳಿಗಿಂತಲೂ ಮಿಗಿಲಾಗಿ ನಿನ್ನ ಬಾಹುಗಳಲ್ಲಿ ಅತುಲವಾದ ಬಲವಿದೆ. ಪ್ರಾಸ-ಮುದ್ಗರ-ಶಕ್ತಿ-ತೋಮರಗಳೂ ಅಪಾರಸಂಖ್ಯೆಯಲ್ಲಿವೆ. ಆದುದರಿಂದ ನೀನು ಆಯುಧಗಳು ಮುಗಿದುಹೋಗುವುದೆಂದು ಸ್ವಲ್ಪವೂ ಭಯಪಡುವ ಕಾರಣವಿಲ್ಲ."

"ಸೂತ! ನೀನಿಂದು ಭೀಮಸೇನನಿಂದ ಪ್ರಯೋಗಿಸಲ್ಪಡುವ, ವೇಗಯುಕ್ತವಾದ, ಪಾರ್ಥಿವರನ್ನು ಛಿನ್ನ-ಭಿನ್ನಗೊಳಿಸುವ ಬಾಣಗಳಿಂದ ಮುಚ್ಚಲ್ಪಟ್ಟು ಸೂರ್ಯನೂ ಕಾಣದಂತಾಗುವ, ಮೃತ್ಯುಲೋಕಸದೃಶವಾಗಿ ಭಯಂಕರವಾಗಿ ಕಾಣುವ ರಣಭೂಮಿಯನ್ನು ನೋಡುವೆ.

ಅದ್ಯೈತದ್ವೈ ವಿದಿತಂ ಪಾರ್ಥಿವಾನಾಂ
ಭವಿಷ್ಯತಿ ಹ್ಯಾಕುಮಾರಂ ಚ ಸೂತ ।
ನಿಮಗ್ನೋ ವಾ ಸಮರೇ ಭೀಮಸೇನ
ಏಕಃ ಕುರೂನ್ವಾ ಸಮರೇ ವ್ಯಜೈಷೀತ್ ॥೨೦॥

ಸೂತ! ಬಾಲಕರಿಂದ ಹಿಡಿದು ವೃದ್ಧರವರೆಗಿನ ಎಲ್ಲ ರಾಜರಿಗೂ ಈ ವಿಷಯವು ಇಂದು ತಿಳಿದುಹೋಗುತ್ತದೆ. ಭೀಮಸೇನನು ಯುದ್ಧಸಾಗರದಲ್ಲಿ ಮುಳುಗಿಹೋದನೆಂಬ ವಾರ್ತೆಯಾದರೂ ತಿಳಿಯುತ್ತದೆ. ಅಥವಾ ಭೀಮಸೇನನೊಬ್ಬನೇ ಇಂದು ಎಲ್ಲ ಕುರುಗಳನ್ನೂ ಜಯಿಸಿದನು–ಎಂಬ ಸಮಾಚಾರವಾದರೂ ತಿಳಿಯುತ್ತದೆ.

ಸರ್ವೇ ಸಂಖ್ಯೇ ಕುರವೋ ನಿಷ್ಪತನ್ತು
ಮಾಂ ವಾ ಲೋಕಾಃ ಕೀರ್ತಯನ್ತ್ವಾಕುಮಾರಮ್ ।
ಸರ್ವಾನೇಕಸ್ತಾನಹಂ ಪಾತಯಿಷ್ಯೇ
ತೇ ವಾ ಸರ್ವೇ ಭೀಮಸೇನಂ ತುದನ್ತು ॥೨೧॥

ಇಂದಿನ ಯುದ್ಧದಲ್ಲಿ ಎಲ್ಲ ಕೌರವರೂ ಅಸುನೀಗಿ ಭೂಮಿಯಲ್ಲಿ ಬೀಳುವಂತಾಗಲಿ; ಅಥವಾ ಬಾಲಕರಿಂದ ಹಿಡಿದು ವೃದ್ಧರವರೆಗಿನ ಎಲ್ಲ ಜನರೂ ಭೀಮಸೇನನು ರಣಭೂಮಿಯಲ್ಲಿ ಹತನಾದನೆಂದಾದರೂ ಹೇಳಲಿ. ಏಕಾಕಿಯಾದ ನಾನೊಬ್ಬನೇ ಇಂದು ಅವರೆಲ್ಲರನ್ನೂ ಯುದ್ಧದಲ್ಲಿ ಸಂಹರಿಸು

ತ್ತೇನೆ. ಅಥವಾ ಅವರಾದರೂ ಸಂಘಟಿತರಾಗಿ ಭೀಮಸೇನನನ್ನು (ನನ್ನನ್ನು) ಪೀಡಿಸಲಿ.

ಆಶಾಸ್ತಾರಃ ಕರ್ಮ ಚಾಪ್ಯುತ್ತಮಂ ಯೇ
ತನ್ಮೇ ದೇವಾಃ ಕೇವಲಂ ಸಾಧಯನ್ತು ।
ಆಯಾತ್ವಿಹಾದ್ಯಾರ್ಜುನಃ ಶತ್ರುಘಾತೀ
ಶಕ್ರಸ್ತೂರ್ಣಂ ಯಜ್ಞ ಇವೋಪಹೂತಃ ॥೨೩॥

ಉತ್ತಮವಾದ ಕರ್ಮಗಳನ್ನು ಇಚ್ಛಿಸುವ (ಯಜ್ಞಾದಿಕರ್ಮಗಳಾಗಲೆಂದು ಹಾರೈಸುವ) ದೇವತೆಗಳು ನನ್ನ ಒಂದೇ ಒಂದು ಕರ್ಮವನ್ನು ಸಾಧಿಸಿಕೊಡಲಿ. ಯಜ್ಞದಲ್ಲಿ ಆಹ್ವಾನಿಸಲ್ಪಟ್ಟೊಡನೆಯೇ ಇಂದ್ರನು ಬಹಳ ಬೇಗ ಬಂದುಬಿಡುವಂತೆ–ಶತ್ರುಹಂತಕನಾದ ಅರ್ಜುನನು ಈಗಲೇ ಆಗಮಿಸಲಿ.

ಅಲ್ಲಿ ಆ ಕೌರವಸೈನ್ಯವನ್ನು ನೋಡು, ವಿಶೋಕ! ಸಂಘಟಿತವಾಗಿದ್ದ ಸೈನ್ಯವು ಒಡೆದು ನಾನಾಭಾಗಗಳಾಗುತ್ತಿದೆ. ಈ ರಾಜರೇಕೆ ಓಡಿಹೋಗುತ್ತಿದ್ದಾರೆ? ಧೀಮಂತನಾದ, ನರಶ್ರೇಷ್ಠನಾದ ಸವ್ಯಸಾಚಿಯು ಕೌರವಸೈನ್ಯವನ್ನು ಬಾಣಗಳಿಂದ ಮುಚ್ಚುತ್ತಿರುವನೆಂಬುದು ಆ ರಾಜರು ದಿಕ್ಕಾಪಾಲಾಗಿ ಹೋಗುತ್ತಿರುವುದರಿಂದಲೇ ವ್ಯಕ್ತವಾಗುತ್ತಿದೆ. ಅಲ್ಲಿ ನೋಡು, ವಿಶೋಕ! ಓಡಿಹೋಗುತ್ತಿರುವ ರಥಗಳ ಮೇಲಿನ ಧ್ವಜಗಳೂ ಓಡಿಹೋಗುತ್ತಿರುವಂತೆ ಕಾಣುತ್ತಿವೆ. ಆನೆಗಳೂ, ಕುದುರೆಗಳೂ, ಪದಾತಿಸಮೂಹಗಳೂ ಹಿಂದೆ ನೋಡದೆಯೇ ಬಹಳ ವೇಗವಾಗಿ ಪಲಾಯನಮಾಡುತ್ತಿವೆ. ಬಾಣಗಳಿಂದಲೂ ಶಕ್ತ್ಯಾಯುಧಗಳಿಂದಲೂ ಪ್ರಹರಿಸಲ್ಪಟ್ಟು ರಣಾಂಗಣದ ಸುತ್ತಲೂ ಚದುರಿಹೋಗುತ್ತಿರುವ ರಥಗಳನ್ನೂ–ರಥಿಗಳನ್ನೂ ನೋಡು, ಸೂತ! ವಜ್ರಾಯುಧಕ್ಕೆ ಸಮಾನವಾದ ವೇಗದಿಂದ ಕೂಡಿರುವ, ಸುವರ್ಣಮಯವಾದ ಮತ್ತು ನವಿಲಿನ ರೆಕ್ಕೆಗಳನ್ನು ಹೊಂದಿರುವ ಧನಂಜಯನ ಬಾಣಗಳಿಂದ ಆಕ್ರಾಂತವಾಗಿರುವ ಕೌರವಸೈನ್ಯವು–ಬಾಣಗಳ ಪ್ರಹಾರಗಳಿಂದ ಬಹಳವಾಗಿ ಗಾಯಗೊಂಡು, ಬಾರಿ-ಬಾರಿಗೂ ಆರ್ತನಾದಗಳನ್ನು ಮಾಡುತ್ತಿದೆ. ಈ ಗಜಾಶ್ವ-ರಥಗಳು ಅರ್ಜುನನ ಬಾಣಗಳ ಭಯದಿಂದಾಗಿ

ಎದುರಿಗೆ ಸಿಕ್ಕಿದ ತಮ್ಮ ಕಡೆಯ ಪದಾತಿಸೈನಿಕಸಮೂಹಗಳನ್ನೇ ಕಾಲುಗಳಿಂದ ತುಳಿದು ಧ್ವಂಸಮಾಡುತ್ತಾ ಪಲಾಯನಮಾಡುತ್ತಿವೆ. ಸಾಮಾನ್ಯವಾಗಿ ಎಲ್ಲ ಕೌರವರೂ ಬುದ್ಧಿಗೆಟ್ಟವರಾಗಿ–ಅರಣ್ಯದಲ್ಲಿ ದಾವಾಗ್ನಿಯಿಂದ ಭಯಗೊಂಡ ಕಾಡಾನೆಗಳು ದಿಕ್ಕಾಪಾಲಾಗಿ ಓಡಿಹೋಗುವಂತೆ–ಓಡಿಹೋಗುತ್ತಿದ್ದಾರೆ. ರಣಾಂಗಣವು ಹಾಹಾಕಾರಗಳಿಂದ ತುಂಬಿಹೋಗಿದೆ. ಶ್ರೇಷ್ಠವಾದ ಆನೆಗಳೂ ಗಟ್ಟಿಯಾಗಿ ಚೀತ್ಕಾರಮಾಡುತ್ತಿವೆ.”

“ಇದೇನು ಭೀಮಸೇನ! ಕೌರವರೊಡನೆ ಯುದ್ಧಮಾಡುತ್ತಿರುವವನು ಅರ್ಜುನನೆಂಬುದರಲ್ಲಿ ಇನ್ನೂ ನಿನಗೆ ಸಂದೇಹವೇ? ಕ್ರುದ್ಧನಾದ ಪಾರ್ಥನು ಸೆಳೆಯುತ್ತಿರುವ ಗಾಂಡೀವಧನುಸ್ಸಿನ ಭಯಂಕರವಾದ ಟೇಂಕಾರಶಬ್ದವನ್ನು ನೀನು ಕೇಳುತ್ತಿಲ್ಲವೇ? ನಿನ್ನ ಕಿವಿಗಳೇನಾದರೂ ಕಿವುಡಾಗಿರುವುವೇ? ಭೀಮಸೇನ! ಕ್ಷಣಕಾಲದ ಹಿಂದೆ ನೀನು ಅಭಿಲಷಿಸಿದ್ದ ಸಕಲಕಾಮನೆಗಳೂ ಪೂರ್ಣವಾದುವು. ಕೌರವರ ಗಜಸೈನ್ಯದ ಮಧ್ಯದಲ್ಲಿ ಅರ್ಜುನನ ಧ್ವಜದಲ್ಲಿ ಅಧಿಷ್ಠಿತನಾಗಿರುವ ಆಂಜನೇಯನು ಕಾಣುತ್ತಿದ್ದಾನೆ. ಕಾಳಮೇಘದಿಂದ ಹೊರಸೂಸುವ ಮಿಂಚಿನಂತೆ ಥಳ-ಥಳಿಸುತ್ತಿರುವ ಅರ್ಜುನನ ಧನುಸ್ಸಿನ ಮೌರ್ವಿಯನ್ನು ನೋಡು, ಭೀಮಸೇನ! ಅರ್ಜುನನ ಧ್ವಜದ ಅಗ್ರಭಾಗದಲ್ಲಿರುವ ಆಂಜನೇಯನು ಶತ್ರುಗಳ ಸಮೂಹಗಳನ್ನು ಯುದ್ಧದಲ್ಲಿ ಭಯಪಡಿಸುತ್ತಾ ಸುತ್ತಲೂ ನೋಡುತ್ತಿದ್ದಾನೆ. ನಾನೂ ಸಹ ಆ ಮಹಾಕಪಿಯನ್ನು ನೋಡಿ ಭಯಪಡುತ್ತಿದ್ದೇನೆ. ಧನಂಜಯನ ವಿಚಿತ್ರವಾದ ಕಿರೀಟವು ಬಹಳವಾಗಿ ಪ್ರಕಾಶಿಸುತ್ತಿದೆ. ಅದರಲ್ಲಿಯೂ ವಿಶೇಷವಾಗಿ ಆ ಕಿರೀಟದಲ್ಲಿರುವ ದಿವ್ಯವಾದ ರತ್ನವು ಸಾಕ್ಷಾತ್ ಸೂರ್ಯದೇವನಂತೆಯೇ ದೇದೀಪ್ಯಮಾನವಾಗಿ ಬೆಳಗುತ್ತಿದೆ.

ಭೀಮಸೇನ! ಅರ್ಜುನನ ಪಕ್ಕದಲ್ಲಿ ಬಿಳಿಯ ಮೋಡದ ಪ್ರಕಾಶಕ್ಕೆ ಸಮಾನವಾದ ಪ್ರಕಾಶದಿಂದ ಕೂಡಿರುವ, ಗಂಭೀರವಾದ ಮತ್ತು ಮಂಗಳಕರವಾದ ಘೋಷವುಳ್ಳ, ದೊಡ್ಡದಾದ, ಶತ್ರುಭಯಂಕರವಾದ ದೇವದತ್ತಶಂಖವಿರುವುದನ್ನು ನೋಡು. ಶತ್ರುಗಳ ಸೈನ್ಯದೊಳಗೆ ನುಗ್ಗಿ ಹೋಗುವ ಕುದುರೆಗಳ ಲಗಾಮನ್ನು ಹಿಡಿದಿರುವ ಕೇಶವನ ಪಕ್ಕದಲ್ಲಿ ಸೂರ್ಯನಂತೆ ಪ್ರಕಾಶಮಾನವಾದ, ವಜ್ರವನ್ನೇ ನಾಭಿಯಲ್ಲಿ (ಮಧ್ಯ

ಭಾಗದಲ್ಲಿ) ಹೊಂದಿರುವ, ತುದಿಯಲ್ಲಿ ಬಹಳ ಹರಿತವಾದ ಕತ್ತಿಯ ಅಲುಗಿನಂತಿರುವ ಅಲುಗುಗಳಿಂದ ಕೂಡಿರುವ, ಕೇಶವನ ಯಶೋ ವರ್ಧಕವಾದ, ಸರ್ವಕಾಲಗಳಲ್ಲಿಯೂ ಯಾದವರಿಂದ ಅರ್ಚಿಸಲ್ಪಡುವ ಸುದರ್ಶನಮಹಾಚಕ್ರವನ್ನು ನೋಡು, ಭೀಮಸೇನ!

ದೇವದಾರುವೃಕ್ಷಕ್ಕೆ ಸಮಾನವಾದ ಮಹಾಗಜಗಳ ಸೊಂಡಿಲುಗಳು ಅರ್ಜುನನ ಕ್ಷುರವೆಂಬ ಹೆಸರಿನ ಬಾಣಗಳಿಂದ ಕತ್ತರಿಸಲ್ಪಟ್ಟು, ರಣಾಂಗಣದ ಸುತ್ತಲೂ ಬೀಳುತ್ತಿವೆ. ಪುನಃ ಪುನಃ ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟ ಸವಾರರಿಂದ ಕೂಡಿದ ಮಹಾಗಜಗಳು– ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತಗಳೋಪಾದಿಯಲ್ಲಿ– ರಣಭೂಮಿಯ ಸುತ್ತಲೂ ಬೀಳುತ್ತಿವೆ.

ಭೀಮಸೇನ! ನಕ್ಷತ್ರಗಳ ರಾಜನಾದ ಚಂದ್ರನ ಬಣ್ಣಕ್ಕೆ ಸಮಾನವಾದ ಶ್ವೇತವರ್ಣದಿಂದ ಕೂಡಿರುವ, ಬಹುಮೂಲ್ಯವಾದ ಶ್ರೀಕೃಷ್ಣನ ಪಾಂಚಜನ್ಯಶಂಖವನ್ನು ನೋಡು. ಜಾಜ್ಜ್ವಲ್ಯಮಾನವಾಗಿ ಕಾಣುವ ಶ್ರೀಕೃಷ್ಣನ ವಕ್ಷಃಸ್ಥಳದಲ್ಲಿರುವ ಕೌಸ್ತುಭಮಣಿಯನ್ನೂ, ವಿಜಯಾ ಎಂಬ ಹೆಸರಿನ ವೈಜಯಂತೀಮಾಲೆಯನ್ನೂ ನೋಡು. ನಿಶ್ಚಯವಾಗಿಯೂ ರಥಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಶತ್ರುಗಳ ಸೈನ್ಯವನ್ನು ಪಲಾಯನಗೊಳಿಸುತ್ತಾ ಬಿಳಿಯ ಮೋಡದ ಬಣ್ಣಕ್ಕೆ ಸಮಾನವಾದ ಬಣ್ಣದಿಂದ ಕೂಡಿರುವ, ಬಹುಮೂಲ್ಯವಾದ, ಮೇಘಶ್ಯಾಮನಾದ ಶ್ರೀಕೃಷ್ಣನಿಂದ ನಡೆಸಲ್ಪಡುವ ಕುದುರೆಗಳ ಮೂಲಕವಾಗಿ ಇತ್ತಕಡೆಯೇ ಬರುತ್ತಿದ್ದಾನೆ. ದೇವತೆಗಳ ರಾಜನಾದ ಇಂದ್ರನ ತೇಜಸ್ಸಿಗೆ ಸಮಾನವಾದ ತೇಜಸ್ಸನ್ನು ಹೊಂದಿರುವ, ನಿನ್ನ ತಮ್ಮನಾದ ಅರ್ಜುನನ ಬಾಣಗಳಿಂದ ಸೀಳಿಹಾಕಲ್ಪಟ್ಟ ರಥಾಶ್ವ-ಪದಾತಿಗಳ ಸಮೂಹಗಳನ್ನು ನೋಡು. ಗರುಡನ ರೆಕ್ಕೆಗಳಿಂದ ಸಮುದ್ಭೂತವಾದ ಚಂಡಮಾರುತದಿಂದ ಅರಣ್ಯಗಳೇ (ವೃಕ್ಷಗಳೇ) ಬುಡಮೇಲಾಗಿ ಭೂಮಿಯ ಮೇಲೆ ಬೀಳುವಂತೆ–ಅರ್ಜುನನ ಬಾಣಗಳಿಂದ ಹತರಾದ ಸೈನಿಕರು ರಣರಂಗದಲ್ಲಿ ತಂಡ-ತಂಡವಾಗಿ ಬೀಳುತ್ತಿದ್ದಾರೆ. ಅಲ್ಲಿ ನೋಡು; ಭೀಮಸೇನ! ಅರ್ಜುನನು ಕುದುರೆಗಳಿಂದಲೂ ಮತ್ತು ಸೂತರಿಂದಲೂ ಕೂಡಿದ ನೂರಾರು ರಥಗಳನ್ನು ಸಂಹರಿಸಿದ್ದಾನೆ. ದೊಡ್ಡ-ದೊಡ್ಡ ಬಾಣ

ಗಳಿಂದ ಏಳುನೂರು ಆನೆಗಳನ್ನು ಸಂಹರಿಸಿದ್ದಾನೆ. ಬಹುಸಂಖ್ಯಾತರಾದ ಪದಾತಿಗಳನ್ನೂ, ಕುದುರೇಸವಾರರನ್ನೂ ಮತ್ತು ಅನೇಕರಥಿಗಳನ್ನೂ ಅರ್ಜುನನು ಸಂಹರಿಸಿದ್ದಾನೆ. ವಿಚಿತ್ರವಾದ ಗ್ರಹದೋಪಾದಿಯಲ್ಲಿ ಬಲಿಷ್ಠನಾದ ಅರ್ಜುನನು ಕೌರವರನ್ನು ಸಂಹಾರಮಾಡುತ್ತಾ ನಿನ್ನ ಸಮೀಪಕ್ಕೇ ಬರುತ್ತಿದ್ದಾನೆ. ಭೀಮಸೇನ! ನಿನ್ನ ಕಾಮನೆಗಳೆಲ್ಲವೂ ಇಂದು ಸಫಲವಾದುವು. ನಿನ್ನ ಶತ್ರುಗಳು ಹತರಾದರು. ನಿನ್ನ ಬಲ ಮತ್ತು ಆಯುಷ್ಯಗಳು ಅನಂತಕಾಲದವರೆಗೂ ವರ್ಧಿಸುತ್ತಲೇ ಇರಲಿ."

**ದದಾಮಿ ತೇ ಗ್ರಾಮವರಾಂಶ್ಚತುರ್ದಶ**
**ಪ್ರಿಯಾಖ್ಯಾನೇ ಸಾರಥೇ ಸುಪ್ರಸನ್ನಃ ।**
**ದಾಸೀಶತಂ ಚಾಪಿ ರಥಾಂಶ್ಚ ವಿಂಶತಿಂ**
**ಯದರ್ಜುನಂ ವೇದಯಸೇ ವಿಶೋಕ ॥೪೦॥**

"ವಿಶೋಕನೇ! ನೀನು, ಅರ್ಜುನನ ಆಗಮನದ ಶುಭಸಮಾಚಾರವನ್ನು ಹೇಳಿರುವೆ. ಅತ್ಯಂತಪ್ರಿಯವಾದ ಈ ನಿನ್ನ ಆಖ್ಯಾನದಿಂದ ನಾನು ಪ್ರಸನ್ನನಾಗಿದ್ದೇನೆ. ಆದುದರಿಂದ ನಿನಗೆ ಸಮೃದ್ಧವಾದ ಹದಿನಾಲ್ಕು ಗ್ರಾಮಗಳನ್ನು ಬಹುಮಾನವಾಗಿ ಕೊಡುತ್ತೇನೆ. ಆ ಗ್ರಾಮಗಳ ಜೊತೆಯಲ್ಲಿಯೇ ನೂರು ಮಂದಿ ದಾಸಿಯರನ್ನೂ ಮತ್ತು ಇಪ್ಪತ್ತು ರಥಗಳನ್ನೂ ಕೊಡುತ್ತೇನೆ."

೭೬ನೆಯ ಅಧ್ಯಾಯವು ಮುಗಿಯಿತು.

೭೭ನೆಯ ಅಧ್ಯಾಯ — ಕರ್ಣಪರ್ವ (ಮುಂದುವರಿದಿದೆ.)

## ಭೀಮಾರ್ಜುನರಿಬ್ಬರೂ ಕೌರವರ ಸೈನ್ಯವನ್ನು ಸಂಹರಿಸಿದುದು: ಭೀಮನು ಶಕುನಿಯನ್ನು ಪರಾಜಯ ಗೊಳಿಸಿದುದು: ದುರ್ಯೋಧನನೇ ಮೊದಲಾದ ಧೃತರಾಷ್ಟ್ರನ ಮಕ್ಕಳು ಸೇನಾಸಹಿತರಾಗಿ ಪಲಾಯನಮಾಡಿ ಕರ್ಣನ ಆಶ್ರಯವನ್ನು ಪಡೆದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ರಥಗಳ ಗಡ-ಗಡಾ ಶಬ್ದಗಳನ್ನೂ ಮತ್ತು ವೀರರ ಸಿಂಹನಾದಗಳನ್ನೂ ಕೇಳುತ್ತಿದ್ದ ಅರ್ಜುನನು ಕುದುರೆಗಳನ್ನು ಶೀಘ್ರವಾಗಿ ನಡೆಸುವಂತೆ ಗೋವಿಂದನಿಗೆ ಹೇಳಿದನು.

ಅರ್ಜುನನ ಮಾತನ್ನು ಕೇಳಿ ಗೋವಿಂದನು–'ಈಗಲೇ ಭೀಮನಿರುವೆಡೆಗೆ ಬಹಳ ಬೇಗ ಕುದುರೆಗಳನ್ನು ನಡೆಸಿಕೊಂಡು ಹೋಗುತ್ತೇನೆ'–ಎಂದನು.

ವಜ್ರಪಾಣಿಯಾದ ದೇವೇಂದ್ರನು ಅತ್ಯಂತಕ್ರುದ್ಧನಾಗಿ ಜಂಭಾಸುರನನ್ನು ಸಂಹರಿಸುವ ಸಲುವಾಗಿ ಹೋದಂತೆ–ಅರ್ಜುನನೂ ಸಹ ಕೋಪಾವಿಷ್ಟನಾಗಿ ಶತ್ರುಗಳನ್ನು ಜಯಿಸುವ ಸಲುವಾಗಿ ಸುವರ್ಣಮಯವಾದ ಮತ್ತು ಮುತ್ತುಗಳಿಂದ ಕೂಡಿದ ಬಲೆಗಳಿಂದ ಆಚ್ಛಾದಿತವಾಗಿದ್ದ, ಹಿಮ ಮತ್ತು ಶಂಖಗಳ ಬಣ್ಣಕ್ಕೆ ಸಮಾನವಾದ ಬಣ್ಣದಿಂದ ಕೂಡಿದ್ದ ಕುದುರೆಗಳ ಮೂಲಕವಾಗಿ ರಣರಂಗಕ್ಕೆ ಹೋದನು. ಕೌರವರ ಕಡೆಯ ರಥಾಶ್ವ-ಗಜ-ಪದಾತಿಸಮೂಹಗಳೂ ಮತ್ತು ಕ್ರುದ್ಧರಾದ ರಾಜರೂ ಬಾಣಗಳ 'ಸೊಯ್' ಎಂಬ ಶಬ್ದಗಳಿಂದಲೂ, ರಥಚಕ್ರಗಳ ಗಡ-ಗಡಾ ಶಬ್ದಗಳಿಂದಲೂ, ಗೊರಸುಗಳ ಟಪ-ಟಪಾ ಶಬ್ದಗಳಿಂದಲೂ ಭೂಮಂಡಲದಲ್ಲಿಯೂ ಮತ್ತು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಅರ್ಜುನನನ್ನು ಎದುರಿಸಿದರು. ವಿಜಯಿಗಳಲ್ಲಿ ಶ್ರೇಷ್ಠನಾದ ದೇವದೇವನಾದ ವಿಷ್ಣುವಿಗೂ ಮತ್ತು ಅಸುರರಿಗೂ ಮೂರು ಲೋಕಗಳ ಆಧಿಪತ್ಯದ ಸಲುವಾಗಿ ಯುದ್ಧವು ನಡೆದಂತೆ–ಪಾರ್ಥನಿಗೂ ಮತ್ತು ನಿನ್ನ ಕಡೆಯ ವೀರಯೋಧರಿಗೂ ದೇಹ-ಪ್ರಾಣ-ಪಾಪಗಳ ವಿನಾಶಕವಾದ ಯುದ್ಧವು ನಡೆಯಿತು. ನಿನ್ನ ಕಡೆಯ ವೀರಯೋಧರಿಂದ ಸತತವಾಗಿ ಬಿಡಲ್ಪಡುತ್ತಿದ್ದ ಅಸಂಖ್ಯಾತವಾದ ಬಗೆ-ಬಗೆಯ ಚಿಕ್ಕ ಮತ್ತು ದೊಡ್ಡ ಆಯುಧಗಳನ್ನು ಕಿರೀಟಮಾಲಿಯಾದ ಅರ್ಜುನನೊಬ್ಬನೇ ಕತ್ತರಿಸಿದನು. ಪುನಃ ಅರ್ಜುನನು ನಿಶಿತವಾದ ಕ್ಷುರಗಳಿಂದಲೂ, ಅರ್ಧಚಂದ್ರಗಳಿಂದಲೂ ಮತ್ತು ಭಲ್ಲಗಳಿಂದಲೂ ಕೌರವಯೋಧರ ಕತ್ತುಗಳನ್ನೂ, ತೋಳುಗಳನ್ನೂ, ಛತ್ರ-ಚಾಮರಗಳನ್ನೂ, ವಾಲವ್ಯಜನಗಳನ್ನೂ, ಧ್ವಜಗಳನ್ನೂ, ಕುದುರೆಗಳನ್ನೂ, ರಥಗಳನ್ನೂ, ಕಾಲಾಳುಗಳ ಸಮೂಹಗಳನ್ನೂ, ಆನೆಗಳನ್ನೂ ಕತ್ತರಿಸಿದನು.

ಚಂಡಮಾರುತದಿಂದ ಬುಡಮೇಲಾದ ಅಥವಾ ವಿಧ್ವಸ್ತವಾದ ಅರಣ್ಯಗಳಂತೆ–ಕೌರವರ ಕಡೆಯ ಚತುರಂಗಬಲಗಳು ವಿರೂಪವನ್ನು ಹೊಂದಿ ಭೂಮಿಯ ಮೇಲೆ ಗುಂಪು-ಗುಂಪಾಗಿ ಬಿದ್ದುವು. ಸುವರ್ಣಮಯವಾದ ಬಲೆಗಳಿಂದ ಆಚ್ಛಾದಿತವಾಗಿದ್ದ, ವೈಜಯಂತೀಧ್ವಜದಿಂದ ಸುಶೋಭಿತವಾಗಿದ್ದ, ಯೋಧರಿಂದ ಸಜ್ಜುಗೊಳಿಸಲ್ಪಟ್ಟ ದೊಡ್ಡ-ದೊಡ್ಡ ಆನೆಗಳು–ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಅರ್ಜುನನು ಬಿಡುತ್ತಿದ್ದ ಬಾಣಗಳಿಂದ ಚುಚ್ಚಲ್ಪಟ್ಟುವುಗಳಾಗಿ–ಪ್ರಜ್ವಲಿಸುತ್ತಿರುವ ಪರ್ವತಗಳಂತೆಯೇ ಕಾಣುತ್ತಿದ್ದುವು. ಧನಂಜಯನು ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಶ್ರೇಷ್ಠವಾದ ಬಾಣಗಳಿಂದ ಆನೆ-ಕುದುರೆ-ರಥಸೈನಿಕರನ್ನು ಸೀಳಿಕೊಂಡು ಬಲಾಸುರನ ಸಂಹಾರಕ್ಕಾಗಿ ಇಂದ್ರನು ಬಹಳ ವೇಗವಾಗಿ ಹೋದಂತೆ–ಕರ್ಣನನ್ನು ಸಂಹರಿಸುವ ಸಲುವಾಗಿ ಬಹಳ ಬೇಗ ಅವನ ಬಳಿಗೆ ಹೋದನು. ಮಹಾಬಾಹುವಾದ, ಪುರುಷಸಿಂಹನಾದ, ಅರಿಂದಮನಾದ ಅರ್ಜುನನು–ಮೊಸಳೆಯು ಸಮುದ್ರವನ್ನು ಹೊಗುವಂತೆ–ಅಗಾಧವಾದ ಕೌರವಸೈನ್ಯವನ್ನು ಪ್ರವೇಶಿಸಿದನು. ಆ ಸಮಯದಲ್ಲಿ ಆನಂದತುಂದಿಲರಾಗಿದ್ದ, ರಥ-ಪದಾತಿ ಸೈನಿಕರಿಂದ ಕೂಡಿದ್ದ, ಬಹುಸಂಖ್ಯಾತರಾದ ಅಶ್ವ-ಗಜಸೈನಿಕರು ಅರ್ಜುನನನ್ನು ಆಕ್ರಮಿಸಿದರು. ಅಲ್ಲೋಲ-ಕಲ್ಲೋಲವಾಗಿರುವ ಸಮುದ್ರದ ನೀರಿನ ಭೋರ್ಗರೆಯುವ ಶಬ್ದದಂತೆ–ಪಾರ್ಥನ ಮೇಲೆ ಬೀಳಲು ಬಂದ ಕೌರವಸೈನಿಕರ ಕೋಲಾಹಲಶಬ್ದವು ಸರ್ವತ್ರ ವ್ಯಾಪ್ತವಾಯಿತು. (ಬಹಳ ಗಟ್ಟಿಯಾಗಿ ಕೇಳಿಬರುತ್ತಿದ್ದು ಭಯಾವಹವಾಗಿದ್ದಿತು.) ಆ ಕೌರವಮಹಾರಥರು ಯುದ್ಧದಲ್ಲಿ ಪ್ರಾಣಭಯವನ್ನು ಸಂಪೂರ್ಣವಾಗಿ ತ್ಯಜಿಸಿ ವ್ಯಾಘ್ರಗಳೋಪಾದಿಯಲ್ಲಿ ಪುರುಷವ್ಯಾಘ್ರನಾದ ಅರ್ಜುನನನ್ನು ಆಕ್ರಮಿಸಿದರು. ಬಾಣಗಳ ಮಳೆಗರೆಯುತ್ತಾ ತನ್ನ ಮೇಲೆ ಬೀಳಲು ಬರುತ್ತಿದ್ದ ಕೌರವ ಸೈನ್ಯವನ್ನು ಪಾರ್ಥನು–ಚಂಡಮಾರುತವು ಕಾರ್ಮುಗಿಲನ್ನು ಚದುರಿಸಿ ಧ್ವಂಸಮಾಡುವಂತೆ–ಧ್ವಂಸಮಾಡಿದನು. ಅದಕ್ಕೆ ಪ್ರತಿಯಾಗಿ ಮಹಾಧನುಷ್ಮಂತರಾದ, ಪ್ರಹಾರಕುಶಲರಾದ ಕೌರವಯೋಧರೂ ರಥಸಮೂಹಗಳೊಡನೆ ಸಂಘಟಿತರಾಗಿ ನಿಶಿತವಾದ ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದರು. ಬಳಿಕ ಅರ್ಜುನನು ರಥಾಶ್ವ-ಗಜಸೈನಿಕರನ್ನು ಸಾವಿರಾರು ಸಂಖ್ಯೆ

ಯಲ್ಲಿ ನಿಶಿತವಾದ ಬಾಣಗಳಿಂದ ಯಮಾಲಯಕ್ಕೆ ಕಳುಹಿಸಿದನು. ಅರ್ಜುನನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ವಧಿಸಲ್ಪಡುತ್ತಿದ್ದ ಆ ಕೌರವಮಹಾರಥರು ಪ್ರಾಣಭಯದಿಂದ ಅಲ್ಲಲ್ಲಿಯೇ ಅಡಗಿಕೊಳ್ಳು ತ್ತಿದ್ದರು. ಅರ್ಜುನನು, ವಿಜಯಕ್ಕಾಗಿ ಪ್ರಯತ್ನಿಸುತ್ತಿದ್ದ ಕೌರವಮಹಾ ರಥರಲ್ಲಿ ನಾಲ್ಕು ನೂರು ಮಹಾರಥರನ್ನು ನಿಶಿತವಾದ ಬಾಣಗಳಿಂದ ಯಮಾಲಯಕ್ಕೆ ಕಳುಹಿಸಿದನು. ನಾನಾಜಾತಿಗಳ, ನಿಶಿತವಾದ ಬಾಣಗಳಿಂದ ಪ್ರಹರಿಸಲ್ಪಡುತ್ತಿದ್ದ ಅಳಿದುಳಿದ ಮಹಾರಥರು ಅರ್ಜುನನನ್ನು ಅಲ್ಲಿಯೇ ಬಿಟ್ಟು ದಿಕ್ಕಾಪಾಲಾಗಿ ಓಡಿಹೋದರು. ದೊಡ್ಡದಾದೊಂದು ಜಲಪ್ರವಾಹವು ಪರ್ವತದ ಬಳಿಗೆ ಬಂದು ಮುಂದೆ ಹೋಗಲಾಗದೇ ಒಡೆದು ಭಾಗಗಳಾದಾಗ ಉಂಟಾಗುವ ಮಹಾ ಶಬ್ದದಂತೆ–ಸಮರಾಂಗಣದಲ್ಲಿ ಅರ್ಜುನನ ಬಾಣಗಳಿಂದ ತಪ್ಪಿಸಿಕೊಳ್ಳಲು ಕೌರವಸೈನಿಕರು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದಾಗ ಭಯಂಕರವಾದ ಕೋಲಾಹಲಶಬ್ದವುಂಟಾಯಿತು. ಪಾರ್ಥನು ತನ್ನನ್ನು ಎದುರಿಸಿದ ಕೌರವರ ಆ ಮಹಾಸೈನ್ಯವನ್ನು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿ, ಅನೇಕರನ್ನು ಸಂಹರಿಸಿ, ಉಳಿದವರನ್ನು ಪಲಾಯಿತರನ್ನಾಗಿ ಮಾಡಿ, ಕರ್ಣನ ಸೈನ್ಯಕ್ಕೆ ಅಭಿಮುಖವಾಗಿ ತೆರಳಿದನು. ಗರುಡನು ಸರ್ಪವನ್ನು ಹಿಡಿಯಲು ರಭಸದಿಂದ ಕೆಳಕ್ಕೆ ಹಾರಿಬಂದಾಗ ಉಂಟಾಗುವ ಮಹಾಶಬ್ದದಂತೆ– ಶತ್ರುಗಳಿಗೆ ಅಭಿಮುಖವಾಗಿ ಅರ್ಜುನನು ಹೋಗುತ್ತಿದ್ದಾಗ ಅವನ ರಥದ ಘೋಷವು ಬಹಳ ಗಟ್ಟಿಯಾಗಿ ಕೇಳಿಸುತ್ತಿದ್ದಿತು. ಪಾರ್ಥನ ರಥದ ಆಗಮನಸೂಚಕವಾದ ಆ ಮಹಾಶಬ್ದವನ್ನು ಕೇಳಿದೊಡನೆಯೇ ಮಹಾಬಲನಾದ ಅರ್ಜುನನನ್ನು ನೋಡಬೇಕೆಂಬ ತವಕದಿಂದಿದ್ದ ಭೀಮಸೇನನು ಪರಮಪ್ರೀತನಾದನು. ಅರ್ಜುನನು ಬರುತ್ತಿರುವನೆಂಬ ವಾರ್ತೆಯನ್ನು ಕೇಳುತ್ತಲೇ ಪ್ರತಾಪವಂತನಾದ ಭೀಮಸೇನನು ತನ್ನ ಪ್ರಾಣಗಳ ಮೇಲಿನ ಮೋಹವನ್ನೂ ತೊರೆದು ನಿನ್ನ ಕಡೆಯ ಸೈನಿಕರನ್ನು ಧ್ವಂಸಮಾಡಲು ಉಪಕ್ರಮಿಸಿದನು.

ಸ ವಾಯುವೀರ್ಯಪ್ರತಿಮೋ ವಾಯುವೇಗಸಮೋ ಜವೇ ।
ವಾಯುವದ್ವ್ಯಚರದ್ಭೀಮೋ ವಾಯುಪುತ್ರಃ ಪ್ರತಾಪವಾನ್ ॥

ವಾಯುವಿನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದ, ವೇಗದಲ್ಲಿ ವಾಯುವಿನ ವೇಗಕ್ಕೆ ಸಮಾನವಾದ ವೇಗವನ್ನು ಹೊಂದಿದ್ದ, ಪ್ರತಾಪವಂತನಾದ, ವಾಯುಪುತ್ರನಾದ ಭೀಮಸೇನನು ವಾಯುದೇವನಂತೆಯೇ ರಣಾಂಗಣದಲ್ಲಿ ಸಂಚರಿಸುತ್ತಿದ್ದನು. ಭೀಮಸೇನ ನಿಂದ ಮರ್ದಿಸಲ್ಪಡುತ್ತಿದ್ದ ನಿನ್ನ ಸೈನ್ಯವು ಸಾಗರಮಧ್ಯದಲ್ಲಿ ಭಿನ್ನವಾಗಿ ಹೋದ ನೌಕೆಯಂತೆ ನಾಶಹೊಂದಿತು. ಭೀಮಸೇನನು ಬಾಣಬಿಡುವಿಕೆಯಲ್ಲಿ ತನಗಿದ್ದ ಕೈಚಳಕವನ್ನು ತೋರಿಸುತ್ತಾ ಕೌರವಸೈನಿಕರನ್ನು ಯಮಾಲಯಕ್ಕೆ ಕಳುಹಿಸುತ್ತಾ, ಭಯಂಕರವಾದ ಬಾಣಗಳಿಂದ ಅವರೆಲ್ಲ ರನ್ನೂ ಕತ್ತರಿಸುತ್ತಿದ್ದನು. ಆ ಸಮಯದಲ್ಲಿ ಪ್ರಳಯಕಾಲದಲ್ಲಿ ಕಾಲಪುರುಷನಿಗಿರುವ ಅಲೌಕಿಕವಾದ ಬಲದಂತೆ–ಭೀಮನಲ್ಲಿದ್ದ ಅತಿಮಾನುಷವಾದ ಬಲವನ್ನು ಕಂಡು ಕೌರವಯೋಧರು ಅತ್ತಲಿತ್ತ ಧಾವಿಸತೊಡಗಿದರು. ಭಯಂಕರ ಬಲಶಾಲಿಗಳಾದ ತನ್ನ ಕಡೆಯ ಯೋಧರನ್ನು ಭೀಮಸೇನನು ಸಮ್ಮರ್ದಿಸುತ್ತಿರುವುದನ್ನು ಕಂಡು ದುರ್ಯೋಧನರಾಜನು ಮಹಾ ಧನುಷ್ಮಂತರಾದ ಸಮಸ್ತಸೈನಿಕರನ್ನೂ ಮತ್ತು ವೀರಯೋಧರನ್ನೂ ಆಹ್ವಾನಿಸುತ್ತಾ, 'ಹತ ಭೀಮಂ–ನೀವೆಲ್ಲರೂ ಸಂಘಟಿತರಾಗಿ ಭೀಮನನ್ನು ಸಂಹರಿಸಿರಿ. ತಸ್ಮಿನ್ಹತೇ ಹತಂ ಮನ್ಯೇ ಪಾಣ್ಡುಸೈನ್ಯಮ ಶೇಷತಃ–ಅವನೊಬ್ಬನು ಹತನಾದರೆ ಸಮಸ್ತವಾದ ಪಾಂಡವರ ಸೈನ್ಯವೂ ಹತವಾದಂತಾಗುವುದೆಂಬುದು ನನ್ನ ಅಭಿಪ್ರಾಯವಾಗಿದೆ. ಆದುದರಿಂದ ಅವನನ್ನು ಈ ಕೂಡಲೇ ಸಂಹರಿಸಿರಿ'–ಎಂದು ಆದೇಶವಿತ್ತನು. ನಿನ್ನ ಕಡೆಯ ರಾಜರೆಲ್ಲರೂ ನಿನ್ನ ಮಗನ ಆಜ್ಞೆಯನ್ನು ಶಿರಸಾವಹಿಸಿ ಎಲ್ಲ ಕಡೆಗಳಿಂದಲೂ ಭೀಮಸೇನನನ್ನು ಬಾಣಗಳಿಂದ ಆಚ್ಛಾದಿಸಿದರು.

ಅಸಂಖ್ಯಾತವಾದ ಆನೆಗಳೂ, ವಿಜಯೇಚ್ಛುಗಳಾದ ಪದಾತಿಸೈನಿಕರೂ ಮತ್ತು ರಥಿಗಳೂ ಭೀಮಸೇನನನ್ನು ಸುತ್ತುವರಿದು ನಿಂತರು. ಶೂರರಾದ ಆ ಯೋಧರಿಂದ ಸುತ್ತಲೂ ಪರಿವೃತನಾಗಿದ್ದ , ಶೂರನಾದ ಭೀಮಸೇನನು ನಕ್ಷತ್ರಗಳಿಂದ ಪರಿವೃತನಾದ ಚಂದ್ರನಂತೆಯೇ ಪ್ರಕಾಶಿಸಿದನು. ಹುಣ್ಣಿಮೆಯ ಚಂದ್ರನು ವರ್ತುಲಾಕಾರದ ಪ್ರಭೆಯಿಂದ ವಿರಾಜಮಾನನಾಗಿ ಕಾಣುವಂತೆ–ರಣರಂಗದಲ್ಲಿ ಕುರುವೀರರಿಂದ ಪರಿವೃತನಾಗಿದ್ದ, ದರ್ಶನೀಯ

ನಾದ, ನರಶ್ರೇಷ್ಠನಾದ ಭೀಮಸೇನನು ಪ್ರಕಾಶಿಸುತ್ತಿದ್ದನು. ಆ ಸಮಯದಲ್ಲವನು ಅರ್ಜುನನಂತೆಯೇ ಕಾಣುತ್ತಿದ್ದನು. ಅರ್ಜುನನಿಗೂ–ಭೀಮಸೇನನಿಗೂ ಯಾವ ವಿಧವಾದ ಅಂತರವೇ ಕಾಣುತ್ತಿರಲಿಲ್ಲ. ಕೋಪದಿಂದ ರಕ್ತಾಕ್ಷರಾಗಿದ್ದ, ಶೂರರಾದ ದುರ್ಯೋಧನನ ಕಡೆಯ ರಾಜರು ಭೀಮಸೇನನನ್ನು ಸಂಹಾರಮಾಡುವ ಇಚ್ಛೆಯಿಂದ ಬಾಣಗಳ ಮಳೆಯನ್ನೇ ಅವನ ಮೇಲೆ ಸುರಿಸಿದರು. ಅದಕ್ಕೆ ಪ್ರತಿಯಾಗಿ ಭೀಮಸೇನನು–ನೀರಿನಲ್ಲಿರುವ ಮೀನು, ಮೀನುಗಾರರು ಹಾಕಿದ ಬಲೆಯಿಂದ ಹೊರಬರುವಂತೆ–ತನ್ನನ್ನು ಸುತ್ತುವರಿದು ನಿಂತಿದ್ದ ಕೌರವಮಹಾಸೈನ್ಯವನ್ನು ಬಗ್ಗಿದ ಗಿಣ್ಣುಗಳಿದ್ದ ಬಾಣಪ್ರಹಾರಗಳಿಂದ ಭೇದಿಸಿಕೊಂಡು ಹೊರಬಂದನು. ಆಗಿನ ಯುದ್ಧದಲ್ಲಿ ಭೀಮಸೇನನು ಯುದ್ಧದಿಂದ ಹಿಂದಿರುಗದಿದ್ದ ಹತ್ತು ಸಾವಿರ ಆನೆಗಳನ್ನೂ, ಎರಡು ಲಕ್ಷದ ಎರಡು ನೂರು ಪದಾತಿಗಳನ್ನೂ, ಐದು ಸಾವಿರ ಕುದುರೆಗಳನ್ನೂ ಮತ್ತು ಒಂದು ನೂರು ರಥಿಗಳನ್ನೂ ಸಂಹರಿಸಿ ರಕ್ತದ ನದಿಯನ್ನೇ ಆ ರಣಾಂಗಣದಲ್ಲಿ ಹರಿಸಿದನು. ಭೀಮನು ಹರಿಸಿದ ಆ ನದಿಯಲ್ಲಿ ರಕ್ತವೇ ನೀರಿನ ರೂಪದಲ್ಲಿದ್ದಿತು. ರಥಗಳು ನದಿಯಲ್ಲಿನ ಸುಳಿಗಳ ರೂಪದಲ್ಲಿದ್ದುವು. ಆನೆಗಳು ದೊಡ್ಡ ಮೊಸಳೆಗಳಂತಿದ್ದುವು. ಪದಾತಿಗಳು ಮೀನಿನ ರೂಪದಲ್ಲಿದ್ದರು. ಕುದುರೆಗಳೇ ನಕ್ರಪ್ರಾಯವಾಗಿದ್ದುವು. ಯೋಧರ ಕೇಶರಾಶಿಗಳು ನದಿಯಲ್ಲಿನ ಪಾಚಿಯಂತಿದ್ದುವು. ಕತ್ತರಿಸಲ್ಪಟ್ಟಿದ್ದ ಯೋಧರ ತೋಳುಗಳೇ ನದಿಯಲ್ಲಿರುವ ಸರ್ಪಗಳಂತಿದ್ದುವು. ಯೋಧರ ಮೇಲಿದ್ದ ಅನೇಕರತ್ನಾಭರಣಗಳನ್ನು ಆ ನದಿಯು ಕೊಚ್ಚಿಕೊಂಡು ಹೋಗುತ್ತಿದ್ದಿತು. ಯೋಧರ ತೊಡೆಗಳು ಮೊಸಳೆಗಳ ರೂಪದಲ್ಲಿದ್ದುವು. ಮಜ್ಜೆಯು ಕೆಸರಿನ ರೂಪದಲ್ಲಿದ್ದಿತು. ಯೋಧರ ಶಿರಸ್ಸುಗಳು ಕಲ್ಲುಗಳ ರೂಪದಲ್ಲಿದ್ದುವು. ಧನುಸ್ಸುಗಳು ಆ ರಕ್ತನದಿಯ ಜೊಂಡುಹುಲ್ಲಿನ ರೂಪದಲ್ಲಿದ್ದುವು. ಬಾಣಗಳು ಜೊಂಡುಹುಲ್ಲಿನ ಅಂಕುರರೂಪದಲ್ಲಿದ್ದುವು. ಗದಾ-ಪರಿಘಗಳು ನಾಗರಹಾವುಗಳಂತಿದ್ದುವು. ಛತ್ರ ಮತ್ತು ಧ್ವಜಗಳು ನದಿಯಲ್ಲಿರುವ ಹಂಸಪಕ್ಷಿಗಳಂತಿದ್ದುವು. ಶಿರಸ್ತ್ರಾಣಗಳು ನೊರೆಯಂತೆ ಕಾಣುತ್ತಿದ್ದುವು. ರಕ್ತನದಿಯಲ್ಲಿ ಬಿದ್ದಿರುತ್ತಿದ್ದ ಸುವರ್ಣಮಯವಾದ ಹಾರಗಳು ಕಮಲಗಳ ಸಮೂಹಗಳಂತೆ ಕಾಣುತ್ತಿದ್ದುವು. ರಣಭೂಮಿಯಲ್ಲಿ ಎದ್ದ

ಧೂಳು ಸುತ್ತಲೂ ಕವಿದಿದ್ದು ರಕ್ತನದಿಯ ಅಲೆಗಳೋ ಎಂಬಂತೆ ಕಾಣುತ್ತಿದ್ದಿತು. ಯೋಧರ ಶರೀರಗಳು ಮೊಸಳೆಯೇ ಮೊದಲಾದ ಜಲಜಂತುಗಳಂತೆ ಕಾಣುತ್ತಿದ್ದುವು. ಆ ರಕ್ತನದಿಯು ಯಮನ ಪಟ್ಟಣದ ಕಡೆಗೆ ಹರಿಯುತ್ತಿದ್ದಿತು. ಸಚ್ಚಾರಿತ್ರ್ಯವುಳ್ಳವರು (ವೀರರು) ಆ ನದಿಯನ್ನು ಸುಲಭವಾಗಿ ದಾಟುತ್ತಿದ್ದರು. ಹೇಡಿಗಳಿಗೆ ಅದು ದುಸ್ತರವಾಗಿದ್ದಿತು. ಪುರುಷವ್ಯಾಘ್ರನಾದ ಭೀಮಸೇನನು ಸ್ವಲ್ಪಹೊತ್ತಿನಲ್ಲಿಯೇ ವೈತರಣೀನದಿಗೆ ಸಮಾನವಾದ, ಜಿತೇಂದ್ರಿಯ ರಲ್ಲದವರಿಗೆ ದಾಟಲು ಅಸಾಧ್ಯವಾದ, ಹೇಡಿಗಳಿಗೆ ಭಯವರ್ಧಕವಾದ ಮತ್ತು ದಾಟಲು ದುಃಸಾಧ್ಯವಾದ, ಮಹಾಭಯಂಕರವಾದ ನದಿಯನ್ನು ನಿರ್ಮಿಸಿದನು. ರಥಶ್ರೇಷ್ಠನಾದ ಭೀಮಸೇನನು ಯಾವ-ಯಾವ ದಿಕ್ಕಿನಲ್ಲಿ ನುಗ್ಗಿಹೋಗುತ್ತಿದ್ದನೋ ಆಯಾ ದಿಕ್ಕಿನಲ್ಲಿರುತ್ತಿದ್ದ ಶತ್ರುಪಕ್ಷದ ನೂರಾರು-ಸಾವಿರಾರು ಯೋಧರನ್ನು ಸಂಹರಿಸುತ್ತಿದ್ದನು.

ಯುದ್ಧಸ್ಥಳದಲ್ಲಿ ಭೀಮಸೇನನು ಮಾಡುತ್ತಿದ್ದ ಇಂತಹ ಸಂಹಾರ ಕಾರ್ಯವನ್ನು ನೋಡಿ ದುರ್ಯೋಧನರಾಜನು ಶಕುನಿಯೊಡನೆ ಈ ಮಾತುಗಳನ್ನು ಹೇಳಿದನು:

**ಜಹಿ ಮಾತುಲ ಸಂಗ್ರಾಮೇ ಭೀಮಸೇನಂ ಮಹಾಬಲಮ್ ।**
**ಅಸ್ಮಿಞ್ಜಿತೇ ಜಿತಂ ಮನ್ಯೇ ಪಾಣ್ಡವೇಯಂ ಮಹಾಬಲಮ್ ॥೪೮॥**

"ಮಾತುಲ! ಮಹಾಬಲನಾದ ಭೀಮಸೇನನನ್ನು ಸಂಹರಿಸು. ಇವನೇನಾದರೂ ನಮ್ಮಿಂದ ಜಯಿಸಲ್ಪಟ್ಟರೆ–ಪಾಂಡವರ ಮಹಾಸೈನ್ಯವೇ ಜಯಿಸಲ್ಪಟ್ಟಂತಾಯಿತೆಂದು ನಾನು ಭಾವಿಸುತ್ತೇನೆ.

ಕೌರವೇಶ್ವರ! ಪ್ರತಾಪವಂತನಾದ ಶಕುನಿಯು ದುರ್ಯೋಧನನ ಆಜ್ಞೆಯನ್ನು ಶಿರಸಾವಹಿಸಿ ಅನುಜರಿಂದ ಪರಿವೃತನಾಗಿ ಮಹಾಯುದ್ಧಕ್ಕೆ ಹೊರಟನು. ವೀರನಾದ ಶಕುನಿಯು ಭಯಂಕರಪರಾಕ್ರಮನಾದ ಭೀಮ ಸೇನನ ಸಮೀಪಕ್ಕೆ ಹೋಗಿ–ತೀರಪ್ರದೇಶವು ಸಮುದ್ರವನ್ನು ಎಲ್ಲೆಮೀರದ ರೀತಿಯಲ್ಲಿ ತಡೆದು ನಿಲ್ಲಿಸುವಂತೆ–ಅವನನ್ನು ತಡೆದು ನಿಲ್ಲಿಸಿದನು. ನಿಶಿತವಾದ ಬಾಣಗಳಿಂದ ತಡೆಯಲ್ಪಟ್ಟ ಭೀಮಸೇನನು ಶಕುನಿಗೆ ಎದುರಾಗಿ

ಹೋದನು. ಶಕುನಿಯು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಸುವರ್ಣದ ಮೂಲಭಾಗವನ್ನು ಹೊಂದಿದ್ದ ನಾರಾಚಗಳನ್ನು ಭೀಮಸೇನನ ವಕ್ಷಃಸ್ಥಳದ ಎಡಪಾರ್ಶ್ವದಲ್ಲಿ ಪ್ರಹರಿಸಿದನು. ರಣಹದ್ದಿನ ಮತ್ತು ನವಿಲಿನ ರೆಕ್ಕೆಗಳನ್ನು ಹೊಂದಿದ್ದ ಮಹಾಭಯಂಕರವಾದ ಆ ಬಾಣಗಳು, ಮಹಾತ್ಮನಾದ ಪಾಂಡವನ ಕವಚವನ್ನು ಭೇದಿಸಿಕೊಂಡು ಶರೀರದೊಳಗೆ ನಾಟಿಕೊಂಡುವು. ಶಕುನಿಯ ಆ ಪ್ರಹಾರದಿಂದ ಬಹಳವಾಗಿ ಗಾಯಗೊಂಡ ಭೀಮಸೇನನು ಅತ್ಯಂತಕ್ರೋಧದಿಂದ ಸುವರ್ಣಭೂಷಿತವಾದ ಬಾಣವನ್ನು ಶಕುನಿಯ ಮೇಲೆ ಪ್ರಯೋಗಿಸಿದನು. ಶತ್ರುಸಂತಾಪಕನಾದ, ಸಿದ್ಧಹಸ್ತನಾದ, ಮಹಾಬಲನಾದ ಶಕುನಿಯು ತನ್ನ ಕಡೆಗೆ ರಭಸದಿಂದ ಬರುತ್ತಿದ್ದ ಮಹಾಘೋರವಾದ ಆ ಬಾಣವನ್ನು ಏಳು ತುಂಡುಗಳಾಗಿ ಕತ್ತರಿಸಿಬಿಟ್ಟನು. ತಾನು ಬಿಟ್ಟ ಬಾಣವು ಶಕುನಿಯಿಂದ ಕತ್ತರಿಸಲ್ಪಟ್ಟು ತುಂಡು-ತುಂಡುಗಳಾಗಿ ಭೂಮಿಯ ಮೇಲೆ ಬಿದ್ದುದನ್ನು ನೋಡಿ ಕ್ರುದ್ಧನಾದ ಭೀಮಸೇನನು ನಗು-ನಗುತ್ತಲೇ ಶಕುನಿಯ ಧನುಸ್ಸನ್ನು ಭಲ್ಲದಿಂದ ಕತ್ತರಿಸಿದನು. ಪ್ರತಾಪವಂತನಾದ ಶಕುನಿಯು ಭೀಮನಿಂದ ಕತ್ತರಿಸಲ್ಪಟ್ಟ ಧನುಸ್ಸನ್ನು ಕೆಳಕ್ಕೆ ಹಾಕಿ ಶೀಘ್ರಾತಿಶೀಘ್ರವಾಗಿ ಮತ್ತೊಂದು ಧನುಸ್ಸನ್ನೂ ಮತ್ತು ಹದಿನಾರು ಭಲ್ಲಗಳನ್ನೂ ಕೈಗೆತ್ತಿಕೊಂಡನು. ಶಕುನಿಯು ಬಗ್ಗಿದ ಗಿಣ್ಣುಗಳಿದ್ದ ಆ ಹದಿನಾರು ಭಲ್ಲಗಳಲ್ಲಿ, ಎರಡು ಭಲ್ಲಗಳಿಂದ ಭೀಮನ ಸಾರಥಿಯನ್ನೂ–ಏಳು ಭಲ್ಲಗಳಿಂದ ಭೀಮಸೇನನನ್ನೂ ಪ್ರಹರಿಸಿದನು. ಪುನಃ ಒಂದು ಭಲ್ಲದಿಂದ ಧ್ವಜವನ್ನು ಕತ್ತರಿಸಿ, ಎರಡು ಭಲ್ಲಗಳಿಂದ ಛತ್ರವನ್ನೂ ಕತ್ತರಿಸಿದನು. ಉಳಿದ ನಾಲ್ಕು ಭಲ್ಲಗಳಿಂದ ಭೀಮಸೇನನ ಕುದುರೆಗಳನ್ನೂ ಪ್ರಹರಿಸಿದನು.

ಅದರಿಂದ ಕ್ರುದ್ಧನಾದ, ಪ್ರತಾಪವಂತನಾದ ಭೀಮಸೇನನು ಸುವರ್ಣಮಯವಾದ ದಂಡವನ್ನು ಹೊಂದಿದ್ದ, ಲೋಹಮಯವಾಗಿದ್ದ ಶಕ್ತ್ಯಾಯುಧವನ್ನು ಶಕುನಿಯ ಮೇಲೆ ರಭಸದಿಂದ ಎಸೆದನು. ಭೀಮನ ಹಸ್ತದಿಂದ ಎಸೆಯಲ್ಪಟ್ಟ, ನಾಗರಹಾವಿನ ನಾಲಿಗೆಯಂತೆ ಚಂಚಲವಾಗಿದ್ದ ಆ ಶಕ್ತ್ಯಾಯುಧವು ಬಹಳ ಬೇಗ ಮಹಾತ್ಮನಾದ ಶಕುನಿಯ ಮೇಲೆ ಬಿದ್ದಿತು. ಶಕುನಿಯು ತನ್ನ ಮೇಲೆ ರಭಸದಿಂದ ಬೀಳುತ್ತಿದ್ದ ಸುವರ್ಣ

ಭೂಷಿತವಾದ ಶಕ್ತಿಯನ್ನು ಬಲಪೂರ್ವಕವಾಗಿ ಕೈಯಲ್ಲಿ ಹಿಡಿದು ಕ್ರೂರರೂಪವಾದ ಅದೇ ಶಕ್ತ್ಯಾಯುಧದಿಂದಲೇ ಭೀಮನನ್ನು ಪ್ರಹರಿಸಿದನು. ಶಕುನಿಯಿಂದ ಪ್ರಮುಕ್ತವಾದ ಆ ಶಕ್ತ್ಯಾಯುಧವು ಮಹಾತ್ಮನಾದ ಪಾಂಡವನ ಎಡಭುಜವನ್ನು ಭೇದಿಸಿಕೊಂಡು– ಅಂತರಿಕ್ಷದಿಂದ ಮಿಂಚು ಕೆಳಗೆ ಬೀಳುವಂತೆ–ಕೆಳಕ್ಕೆ ಬಿದ್ದಿತು. ಅದನ್ನು ನೋಡಿ ನಿನ್ನ ಮಕ್ಕಳು ಗಟ್ಟಿಯಾಗಿ ಸಿಂಹನಾದಗಳನ್ನು ಮಾಡಿದರು. ಆದರೆ ವೇಗವಂತರಾದ ಆ ನಿನ್ನ ಮಕ್ಕಳ ಸಿಂಹನಾದಗಳನ್ನು ಭೀಮಸೇನನು ಸಹಿಸಿಕೊಳ್ಳಲಿಲ್ಲ. ಮಹಾಬಲನಾದ ಭೀಮಸೇನನು ಮೌರ್ವಿಯಿಂದ ಕೂಡಿದ ಮತ್ತೊಂದು ಧನುಸ್ಸನ್ನು ಅತಿತ್ವರೆಯಿಂದ ಎತ್ತಿಕೊಂಡು, ಪ್ರಾಣದ ಮೇಲಿನ ಹಂಗನ್ನೇ ತೊರೆದು, ಮುಹೂರ್ತಮಾತ್ರದಲ್ಲಿ ಶಕುನಿಯ ಸೈನ್ಯವನ್ನು ಬಾಣಗಳಿಂದ ಮುಚ್ಚಿಬಿಟ್ಟನು. ಪರಾಕ್ರಮಿಯಾದ ಭೀಮಸೇನನು ತ್ವರೆಮಾಡುತ್ತಾ ಶಕುನಿಯ ನಾಲ್ಕು ಕುದುರೆಗಳನ್ನೂ ಮತ್ತು ಸೂತನನ್ನೂ ಸಂಹರಿಸಿ, ಭಲ್ಲದಿಂದ ಶಕುನಿಯ ರಥದ ಧ್ವಜವನ್ನೂ ಕತ್ತರಿಸಿದನು. ಕ್ರೋಧದಿಂದ ರಕ್ತಾಕ್ಷನಾಗಿದ್ದ ಶಕುನಿಯು, ಕುದುರೆಗಳಿಂದ ವಿಹೀನವಾಗಿದ್ದ ರಥವನ್ನು ಬಿಟ್ಟು ಅವಸರದಿಂದ ಕೆಳಗಿಳಿದು ನಿಟ್ಟುಸಿರುಬಿಡುತ್ತಾ, ಧನುಸ್ಸನ್ನು ಟೇಂಕರಿಸುತ್ತಾ, ರಣಭೂಮಿಯಲ್ಲಿ ನಿಂತುಕೊಂಡೇ ನಿಶಿತವಾದ ಬಾಣಗಳಿಂದ ಭೀಮಸೇನನನ್ನು ಸುತ್ತಲೂ ಪ್ರಹರಿಸಿದನು. ಪ್ರತಾಪವಂತನಾದ, ಕ್ರುದ್ಧನಾದ ಭೀಮಸೇನನು ಶಕುನಿಯು ಬಿಟ್ಟ ಬಾಣಗಳೆಲ್ಲವನ್ನೂ ತುಂಡರಿಸಿ, ಅವನ ಧನುಸ್ಸನ್ನೂ ಕತ್ತರಿಸಿ, ನಿಶಿತವಾದ ಬಾಣಗಳಿಂದ, ನಿರಾಯುಧನಾದ ಶಕುನಿಯನ್ನೂ ಪ್ರಹರಿಸತೊಡಗಿದನು. ಶತ್ರುತಾಪಕನಾದ ಶಕುನಿಯು ಮಹಾಬಲಿಷ್ಠನಾದ ಶತ್ರುವಿನಿಂದ (ಶತ್ರುವಿನ ಬಾಣಗಳ ಪ್ರಹಾರದಿಂದ) ಬಹಳವಾಗಿ ಗಾಯಗೊಂಡು ಅಲ್ಪಪ್ರಾಣನಾಗಿ ಭೂಮಿಯ ಮೇಲೆ ಬಿದ್ದನು. ಅದನ್ನು ನೋಡಿದ ನಿನ್ನ ಮಗ ದುರ್ಯೋಧನನು, ಶಕುನಿಯು ಅತ್ಯಂತ ವಿಹ್ವಲನಾಗಿರುವನೆಂಬುದನ್ನು ತಿಳಿದು ಭೀಮಸೇನನು ನೋಡುತ್ತಿದ್ದಂತೆಯೇ ಶಕುನಿಯನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋದನು.

ನರಶ್ರೇಷ್ಠನಾದ ಭೀಮಸೇನನು ರಥದಲ್ಲಿಯೇ ಕುಳಿತಿರಲಾಗಿ ಭೀಮನಿಂದ ಉಂಟಾದ ಮಹಾಭಯದಿಂದ ಹೆದರಿದ ನಿನ್ನ ಮಕ್ಕಳು ಯುದ್ಧದಿಂದ

ವಿಮುಖರಾದರಲ್ಲದೇ ದಿಕ್ಕಾಪಾಲಾಗಿ ಓಡಿಯೂ ಹೋದರು. ಧನುಷ್ಮಂತನಾದ ಭೀಮಸೇನನಿಂದ ಶಕುನಿಯು ನಿರ್ಜಿತನಾಗಲಾಗಿ ನಿನ್ನ ಮಗನಾದ ದುರ್ಯೋಧನನಿಗೆ ಮಹಾಭಯವುಂಟಾಯಿತು. ಸೋದರಮಾವನ ರಕ್ಷಣೆಯನ್ನು ಮಾಡಬೇಕೆಂಬ ಅಪೇಕ್ಷೆಯಿಂದ ದುರ್ಯೋಧನನು ವೇಗವಾಗಿ



ಹೋಗುವ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ಆ ಸ್ಥಳದಿಂದ ಹೊರಟುಹೋದನು. ರಾಜನಾದ ದುರ್ಯೋಧನನು ಯುದ್ಧದಿಂದ ಪರಾಙ್ಮುಖನಾದುದನ್ನು ಕಂಡು ಎಲ್ಲ ಸೈನಿಕರೂ ದ್ವೈರಥಯುದ್ಧವನ್ನು ಪರಿತ್ಯಜಿಸಿ ಪಲಾಯನಮಾಡಿದರು.

ದುರ್ಯೋಧನನ ಸೈನಿಕರು ಯುದ್ಧದಿಂದ ಪರಾಙ್ಮುಖರಾಗಿ ಪಲಾಯನಮಾಡುತ್ತಿರುವುದನ್ನು ಕಂಡು ಭೀಮಸೇನನು ನೂರಾರು ಬಾಣಗಳನ್ನು ಅವರ ಮೇಲೆ ಸುರಿಸುತ್ತಾ ಅವರನ್ನು ಹಿಂಬಾಲಿಸಿ ಹೋದನು. ಯುದ್ಧದಿಂದ ಹಿಮ್ಮೆಟ್ಟಿದ ದುರ್ಯೋಧನನ ಸೈನಿಕರು ಭೀಮಸೇನನ ಬಾಣಗಳಿಂದ ಪ್ರಹೃತರಾಗುತ್ತಿದ್ದರೂ ಅವನೊಡನೆ ಯುದ್ಧಮಾಡಲು ಹಿಂದಿರುಗದೇ ಕರ್ಣನಿದ್ದ ಸ್ಥಳಕ್ಕೆ ಓಡಿಹೋಗಿ ಅವನ ಆಶ್ರಯವನ್ನು ಪಡೆದು ಸುತ್ತಲೂ ನಿಂತುಕೊಂಡರು.

ಆ ಸಮಯದಲ್ಲಿ ಮಹಾವೀರ್ಯನಾದ, ಮಹಾಬಲನಾದ ಕರ್ಣನೇ ಭೀಮನ ಭಯದಿಂದ ಓಡಿಬಂದ ಕೌರವಸೈನಿಕರಿಗೆ ದ್ವೀಪಪ್ರಾಯನಾದನು. ಮಧ್ಯಸಮುದ್ರದಲ್ಲಿ ಒಡೆದುಹೋದ ನೌಕೆಯಲ್ಲಿದ್ದ ನಾವಿಕರು ಸ್ವಲ್ಪ ಕಾಲಾನಂತರ ಯಾವುದಾದರೂ ದ್ವೀಪವನ್ನು ಸೇರಿ ಸಂತುಷ್ಟ ರಾಗುವಂತೆ–ನಿನ್ನ ಸೈನಿಕರು ಕರ್ಣನ ಸಮೀಪಕ್ಕೆ ಹೋಗಿ ಪರಸ್ಪರವಾಗಿ ಆಶ್ವಾಸನೆಯನ್ನು ಪಡೆದು ಭಯವನ್ನು ತೊರೆದು ಹರ್ಷಯುಕ್ತರಾದರು. ಮೃತ್ಯುವನ್ನೇ ಹಿಂದಿರುಗುವ ಸ್ಥಾನವನ್ನಾಗಿ ಮಾಡಿಕೊಂಡು ಪುನಃ ಅವರು ಯುದ್ಧಕ್ಕೆ ಮುಂದಾದರು.

೭೭ನೆಯ ಅಧ್ಯಾಯವು ಮುಗಿಯಿತು.

೭೮ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನು ಪಾಂಡವರ ಸೈನ್ಯವನ್ನು ಸಂಹಾರಮಾಡಿದುದು: ಅಳಿದುಳಿದವರ ಪಲಾಯನ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

“ಸಂಜಯ! ಭೀಮಸೇನನು ನಮ್ಮ ಸೈನ್ಯವನ್ನು ಭಗ್ನಗೊಳಿಸಲಾಗಿ ದುರ್ಯೋಧನನು ಏನು ಹೇಳಿದನು? ಶಕುನಿಯೇನು ಹೇಳಿದನು? ವಿಜಯಿಗಳಲ್ಲಿ ಶ್ರೇಷ್ಠನಾದ ಕರ್ಣನೇನು ಹೇಳಿದನು? ನಮ್ಮ ಕಡೆಯ ಯೋಧರೇನು ಹೇಳಿದರು? ಅಶ್ವತ್ಥಾಮಾ-ಕೃಪ-ಕೃತವರ್ಮ-ದುಃಶಾಸನರು ಏನೆಂದರು?

ಸೂತ! ಭೀಮಸೇನನ ಪರಾಕ್ರಮವು ಪರಮಾದ್ಭುತವಾದುದೆಂದು ನಾನು ಭಾವಿಸುತ್ತೇನೆ. ಭೀಮಸೇನನು ಏಕಾಕಿಯಾಗಿಯೇ ನಮ್ಮ ಕಡೆಯ ಯೋಧರೆಲ್ಲರನ್ನೂ ಎದುರಿಸಿ ಯುದ್ಧಮಾಡಿದನಲ್ಲವೇ! ಪ್ರತಿಜ್ಞೆ ಮಾಡಿದಂತೆ ಕರ್ಣನೇನೋ ಯುದ್ಧಮಾಡುತ್ತಿದ್ದನು. ಶತ್ರುಸೂದನನಾದ ಕರ್ಣನು ಎಲ್ಲ ಕುರುಗಳಿಗೂ ಸುಖದಾಯಕನಾಗಿದ್ದನು. ಕವಚದಂತೆ ರಕ್ಷಕನಾಗಿದ್ದನು. ನಮ್ಮ ಪಕ್ಷದಲ್ಲಿಯೇ ಅವನೊಬ್ಬ ಪ್ರತಿಷ್ಠಿತನಾದ ವ್ಯಕ್ತಿಯಾಗಿದ್ದನು. ನಮ್ಮ ಜೀವಿತಕ್ಕೆ ಆಶಾದಾಯಕನಾಗಿದ್ದನು. ಅಮಿತತೇಜಸ್ವಿಯಾದ ಭೀಮಸೇನನಿಂದ ಭಗ್ನವಾದ ನಮ್ಮ ಸೈನ್ಯವನ್ನು ನೋಡಿ ರಾಧಾಪುತ್ರನಾದ, ಅಧಿರಥನ ಮಗನಾದ ಕರ್ಣನೇನು ಮಾಡಿದನು? ದುರ್ಧರ್ಷರಾದ ನನ್ನ ಮಕ್ಕಳೇನು ಮಾಡಿದರು? ಮಹಾರಥರಾದ ನಮ್ಮ ಕಡೆಯ ರಾಜರೇನು ಮಾಡಿದರು? ಸಂಜಯ! ನೀನು ವೃತ್ತಾಂತಕಥನದಲ್ಲಿ ಬಹಳ ಕುಶಲನಾಗಿರುವೆ. ಆದುದರಿಂದ ಈ ಎಲ್ಲ ವಿಷಯಗಳನ್ನೂ ನನ್ನೊಡನೆ ಹೇಳು."

"ಮಹಾರಾಜ! ಪ್ರತಾಪವಂತನಾದ ಕರ್ಣನು ಅಪರಾಹ್ಣದಲ್ಲಿ ಭೀಮ ಸೇನನು ನೋಡುತ್ತಿದ್ದಂತೆಯೇ ಎಲ್ಲ ಸೋಮಕರನ್ನೂ ಸಂಹರಿಸಿದನು. ಭೀಮಸೇನನೂ ಸಹ ಮಹಾಬಲಿಷ್ಠರಾಗಿದ್ದ ದುರ್ಯೋಧನನ ಸೈನಿಕರನ್ನು ಧ್ವಂಸಮಾಡುತ್ತಿದ್ದನು. ಅನೇಕಸೋಮಕಸೈನಿಕರನ್ನು ಸಂಹರಿಸಿದನಂತರ ಕರ್ಣನು ಪಾಂಚಾಲಸೈನಿಕರ ಬಳಿಗೆ ಕುದುರೆಗಳನ್ನು ನಡೆಸುವಂತೆ ಶಲ್ಯನಿಗೆ ಹೇಳಿದನು. ಧೀಮಂತನಾದ ಭೀಮನು ಕೌರವಸೈನ್ಯವನ್ನು ಪಲಾಯಿತ ರನ್ನಾಗಿ ಮಾಡುತ್ತಿರುವುದನ್ನು ಕಂಡು ಕರ್ಣನು ಪುನಃ ಶಲ್ಯನೊಡನೆ 'ಪಾಞ್ಚಾಲಾನೇವ ಮಾಂ ವಹ–ಪಾಂಚಾಲಸೈನಿಕರಿರುವ ರಣರಂಗದ ವಿಭಾಗಕ್ಕೇ ನನ್ನ ರಥವನ್ನು ನಡೆಸು'–ಎಂದು ಆದೇಶನೀಡಿದನು. ಕರ್ಣನ ಆದೇಶದಂತೆ ಮದ್ರರಾಜನಾದ, ಮಹಾಬಲನಾದ ಶಲ್ಯನು ಮಹಾವೇಗ ಯುಕ್ತವಾಗಿದ್ದ ಶ್ವೇತಾಶ್ವಗಳನ್ನು ಚೇದಿ-ಪಾಂಚಾಲ-ಕರೂಷಸೈನಿಕರಿದ್ದೆಡೆಗೆ ವೇಗದಿಂದ ನಡೆಸಿಕೊಂಡುಹೋದನು. ಶತ್ರುಬಲಮರ್ದನನಾದ, ಹೃಷ್ಟನಾದ ಶಲ್ಯನು ಮಹಾಸೈನ್ಯವನ್ನು ಪ್ರವೇಶಿಸಿ, ಸೇನಾಪತಿಯಾದ ಕರ್ಣನು ರಥ ವನ್ನು ಎಲ್ಲೆಲ್ಲಿ ನಿಲ್ಲಿಸಬೇಕೆಂದು ಇಚ್ಛಿಸುತ್ತಿದ್ದನೋ ಆಯಾ ಜಾಗಗಳಲ್ಲಿಯೇ ಕುದುರೆಗಳ ಕಡಿವಾಣಗಳನ್ನೆಳೆದು ನಿಲ್ಲಿಸುತ್ತಿದ್ದನು. ಮೇಘಸದೃಶವಾಗಿದ್ದ,

ವ್ಯಾಘ್ರಚರ್ಮದಿಂದ ಆಚ್ಛಾದಿತವಾಗಿದ್ದ ಕರ್ಣನ ಆ ರಥವನ್ನು ನೋಡಿ ದೊಡನೆಯೇ ಪಾಂಡು-ಪಾಂಚಾಲಸೈನಿಕರು ಭಯಗೊಂಡರು. ಆ ಮಹಾ ಸಂಗ್ರಾಮದಲ್ಲಿ–ಸೀಳುತ್ತಿರುವ ಪರ್ವತದ ಶಬ್ದದಂತೆಯೂ ಮತ್ತು ಗರ್ಜಿಸು



ತ್ತಿರುವ ಮೇಘದ ಧ್ವನಿಯಂತೆಯೂ ಕರ್ಣನ ರಥದ ಗಂಭೀರನಿನಾದವು ಸರ್ವತ್ರ ಕೇಳಿಸಿತು. ಬಳಿಕ ಕರ್ಣನು ಕಿವಿಯವರೆಗೂ ಸೆಳೆದುಬಿಡುತ್ತಿದ್ದ ತೀಕ್ಷ್ಣವಾದ ನೂರಾರು ಬಾಣಗಳಿಂದ ನೂರಾರು-ಸಾವಿರಾರು ಪಾಂಡವರ ಸೈನಿಕರನ್ನು ಸಂಹರಿಸಿದನು. ಆ ರೀತಿಯಲ್ಲಿ ಭಯಂಕರವಾದ ಸಂಹಾರ

ಕಾರ್ಯವನ್ನು ಮಾಡುತ್ತಿದ್ದ ಅಪರಾಜಿತನಾದ ಕರ್ಣನನ್ನು ಮಹಾಧನುಷ್ಮಂತರಾದ ಪಾಂಡವರ ಕಡೆಯ ಮಹಾರಥರು ಸಂಘಟಿತರಾಗಿ ಮುತ್ತಿಗೆಹಾಕಿದರು. ಶಿಖಂಡೀ, ಭೀಮಸೇನ, ದ್ರುಪದನ ಮಗನಾದ ಧೃಷ್ಟದ್ಯುಮ್ನ, ನಕುಲ-ಸಹದೇವರು, ದ್ರೌಪದಿಯ ಐವರು ಮಕ್ಕಳು ಮತ್ತು ಸಾತ್ಯಕಿ–ಇವರೆಲ್ಲರೂ ಕರ್ಣನನ್ನು ಸಂಹರಿಸಬೇಕೆನ್ನುವ ಇಚ್ಛೆಯಿಂದ ಬಾಣಗಳ ಮಳೆಗರೆಯುತ್ತಾ ಕರ್ಣನನ್ನು ಸುತ್ತುಗಟ್ಟಿದರು. ಶೂರನಾದ, ನರಶ್ರೇಷ್ಠನಾದ ಸಾತ್ಯಕಿಯು ನಿಶಿತವಾದ ಇಪ್ಪತ್ತು ಬಾಣಗಳಿಂದ ಕರ್ಣನ ಜತ್ರುಪ್ರದೇಶದಲ್ಲಿ ಪ್ರಹರಿಸಿದನು. ಶಿಖಂಡಿಯು ಇಪ್ಪತ್ತೈದು ಬಾಣ ಗಳಿಂದಲೂ, ಧೃಷ್ಟದ್ಯುಮ್ನನು ಏಳು ಬಾಣಗಳಿಂದಲೂ, ದ್ರೌಪದಿಯ ಮಕ್ಕಳು ಅರುವತ್ತು ನಾಲ್ಕು ಬಾಣಗಳಿಂದಲೂ, ಸಹದೇವನು ಏಳು ಬಾಣಗಳಿಂದಲೂ, ನಕುಲನು ನೂರು ಸಾಯಕಗಳಿಂದಲೂ ಕರ್ಣನನ್ನು ಪ್ರಹರಿಸಿದರು.

ಕ್ರುದ್ಧನಾದ, ಮಹಾಬಲನಾದ ಭೀಮಸೇನನು ಬಗ್ಗಿದ ಗಿಣ್ಣುಗಳಿದ್ದ ತೊಂಬತ್ತು ಬಾಣಗಳಿಂದ ಕರ್ಣನ ಕುತ್ತಿಗೆಯ ಎಲುಬಿನ ಪ್ರದೇಶದಲ್ಲಿ ಪ್ರಹರಿಸಿದನು. ಮಹಾಬಲಿಷ್ಠನಾದ ಕರ್ಣನೊಮ್ಮೆ ಗಹ-ಗಹಿಸಿ ನಕ್ಕು ಶ್ರೇಷ್ಠವಾದ ಧನುಸ್ಸನ್ನು ಟೇಂಕರಿಸಿ, ಸುತ್ತಲೂ ನಿಂತಿದ್ದ ಪಾಂಡವಯೋಧರನ್ನು ಪೀಡಿಸುತ್ತಾ, ನಿಶಿತವಾದ ಅನೇಕ ಬಾಣಗಳನ್ನು ಅವರ ಮೇಲೆ ಪ್ರಯೋಗಿಸಿದನು. ಕರ್ಣನು, ಪಾಂಡವಯೋಧರು ತನ್ನ ಮೇಲೆ ಬಾಣಗಳನ್ನು ಪ್ರಯೋಗಿಸಿದುದಕ್ಕೆ ಪ್ರತಿಯಾಗಿ ಅವರೆಲ್ಲರನ್ನೂ ಐದೈದು ಬಾಣಗಳಿಂದ ಪ್ರಹರಿಸಿದನು. ಬಳಿಕ ಸಾತ್ಯಕಿಯ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿ ಒಂಬತ್ತು ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಬಳಿಕ ಕ್ರುದ್ಧನಾದ ಕರ್ಣನು ಭೀಮಸೇನನನ್ನು ಮೂವತ್ತು ಬಾಣಗಳಿಂದ ಪ್ರಹರಿಸಿ, ಸಹದೇವನ ಧ್ವಜವನ್ನು ಭಲ್ಲದಿಂದ ಕತ್ತರಿಸಿದನು.

ಪರಂತಪನಾದ ಕರ್ಣನು ಅನಂತರ ಸಹದೇವನ ಸಾರಥಿಯನ್ನು ಮೂರು ಬಾಣಗಳಿಂದ ಪ್ರಹರಿಸಿದನು. ದ್ರೌಪದಿಯ ಐವರು ಮಕ್ಕಳನ್ನು ರಥಹೀನರನ್ನಾಗಿಯೂ ಮಾಡಿದನು. ಕರ್ಣನು ಇವಿಷ್ಟನ್ನೂ ರೆಪ್ಪೆಯನ್ನು

ಮುಚ್ಚಿ ತೆಗೆಯುವುದರೊಳಗಾಗಿಯೇ ಮಾಡಿಮುಗಿಸಿದನು. ಕರ್ಣನ ಅಂತಹ ಹಸ್ತಲಾಘವವು ನಮ್ಮೆಲ್ಲರಿಗೂ ಪರಮಾದ್ಭುತವಾಗಿ ಕಂಡಿತು. ಕರ್ಣನು ಆ ಎಲ್ಲ ಯೋಧರನ್ನೂ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಪರಾಙ್ಮುಖರನ್ನಾಗಿಸಿ ಪಾಂಚಾಲ-ಚೇದಿಸೈನಿಕರನ್ನು ಪುನಃ ಸಂಹರಿಸತೊಡಗಿದನು.

ಮಹಾರಾಜ! ಕರ್ಣನಿಂದ ಸತತವಾಗಿ ಪ್ರಹೃತರಾಗುತ್ತಿದ್ದ ಚೇದಿ-ಮತ್ಸ್ಯಯೋಧರು ಕರ್ಣನೊಬ್ಬನನ್ನೇ ಲಕ್ಷ್ಯವನ್ನಾಗಿಟ್ಟುಕೊಂಡು ಅವನನ್ನು ಬಾಣಗಳ ಸಮೂಹಗಳಿಂದ ಬಹಳವಾಗಿ ಪೀಡಿಸಿದರು. ಅದಕ್ಕೆ ಪ್ರತಿಯಾಗಿ ಮಹಾರಥನಾದ ಸೌತಿಯು ನಿಶಿತವಾದ ಬಾಣಗಳಿಂದ ಅವರೆಲ್ಲರನ್ನೂ ತಂಡ-ತಂಡವಾಗಿ ಸಂಹರಿಸಿದನು. ಹೀಗೆ ಕರ್ಣನೊಡನೆ ಮಾಡುತ್ತಿದ್ದ ಯುದ್ಧದಲ್ಲಿ ವಧಿಸಲ್ಪಡುತ್ತಿದ್ದ ಚೇದಿ-ಮತ್ಸ್ಯಯೋಧರು–ಸಿಂಹದಿಂದ ಭಯಗೊಂಡ-ಮೃಗಗಳಂತೆ–ಭಯಗೊಂಡವರಾಗಿ ಓಡಿಹೋದರು. ಭಾರತನೇ! ನಿಶ್ಚಯವಾಗಿಯೂ ನಾನು ಆ ಸಮಯದಲ್ಲಿ ಕರ್ಣನ ಪರಮಾದ್ಭುತವಾದ ಸಾಹಸಕಾರ್ಯವನ್ನು ನೋಡಿದೆನು. ಪ್ರತಾಪವಂತನಾದ ಕರ್ಣನೊಬ್ಬನೇ ಪ್ರಯತ್ನಶೀಲರಾಗಿದ್ದ, ತಮ್ಮ ಸಂಪೂರ್ಣಶಕ್ತಿಯನ್ನೂ ಯೋಜಿಸಿ ಯುದ್ಧಮಾಡುತ್ತಿದ್ದ, ಮಹಾಶೂರರಾಗಿದ್ದ, ಧನುಷ್ಮಂತರಾದ ಪಾಂಡವಯೋಧರನ್ನು ನಿಶಿತವಾದ ಬಾಣಗಳಿಂದ ಅವರಾರೂ ಮುಂದಕ್ಕೆ ಬಾರದಂತೆ ತಡೆದು ನಿಲ್ಲಿಸಿದನು. ಮಹಾತ್ಮನಾದ ಕರ್ಣನ ಹಸ್ತಲಾಘವವನ್ನು ಕಂಡು ಎಲ್ಲ ದೇವತೆಗಳೂ, ಸಿದ್ಧ-ಚಾರಣರೂ ಪರಮಹೃಷ್ಟರಾದರು. ನರಶ್ರೇಷ್ಠರಾದ ಮಹಾಧನುಷ್ಮಂತರಾದ ನಿನ್ನ ಮಕ್ಕಳು, ಶ್ರೇಷ್ಠರಾದ ರಥಿಗಳಲ್ಲಿ ಶ್ರೇಷ್ಠತಮನಾದ, ಪ್ರಪಂಚದಲ್ಲಿರುವ ಎಲ್ಲ ಧನುಷ್ಮಂತರಿಗೂ ಶ್ರೇಷ್ಠನಾದ ಕರ್ಣನನ್ನು ಬಹಳವಾಗಿ ಪ್ರಶಂಸಿಸಿ ಗೌರವಿಸಿದರು. ಬೇಸಿಗೆಯ ಕಾಲದಲ್ಲಿ ಹುಲ್ಲುಮೆದೆಗೆ (ಪೊದೆಗೆ) ಹೊತ್ತಿಕೊಂಡ ಬೆಂಕಿಯು ಯಾವ ರೀತಿಯಲ್ಲಿ ಕ್ಷಣಮಾತ್ರದಲ್ಲಿ ಪ್ರಜ್ಜ್ವಲಿಸಿ ಧಗ-ಧಗಿಸಿ ಪೊದೆಯನ್ನು ಹೇಗೆ ಸುಟ್ಟುಹಾಕುತ್ತದೆಯೋ–ಅದೇ ರೀತಿಯಲ್ಲಿ ಕರ್ಣನು ಶತ್ರುಗಳ ಸೈನ್ಯವನ್ನು ಭಸ್ಮಮಾಡಿಬಿಟ್ಟನು. ಕರ್ಣನಿಂದ ವಧಿಸಲ್ಪಡುತ್ತಿದ್ದ ಪಾಂಡವಸೈನಿಕರು ಮಹಾರಥನಾದ ಕರ್ಣನನ್ನು ನೋಡಿ ದೊಡನೆಯೇ ಭಯಗೊಂಡವರಾಗಿ ಎಲ್ಲೆಡೆಗಳಿಗೂ ಪಲಾಯನಮಾಡಿ

ದರು. ಕರ್ಣನ ಶ್ರೇಷ್ಠವಾದ ಧನುಸ್ಸಿನಿಂದ ಚ್ಯುತವಾದ, ತೀಕ್ಷ್ಣವಾದ ಬಾಣಗಳಿಂದ ವಧಿಸಲ್ಪಡುತ್ತಿದ್ದ ಪಾಂಚಾಲಸೈನಿಕರ ಮಧ್ಯದಲ್ಲಿ ದೊಡ್ಡದಾದ ಆರ್ತನಾದವು ಕೇಳಿಬಂದಿತು. ಪಾಂಡವರ ಮಹಾಸೈನ್ಯವು ಆ ಆರ್ತನಾದದಿಂದ ಬಹಳವಾಗಿ ಭಯಗೊಂಡಿತು. ಶತ್ರುಪಕ್ಷದವರು ಕರ್ಣನೊಬ್ಬನನ್ನೇ ಶ್ರೇಷ್ಠನಾದ ಮಹಾಯೋಧನೆಂದು ಭಾವಿಸಿದರು. ಮಹಾರಾಜ! ಶತ್ರುಸೂದನನಾದ ರಾಧೇಯನು ಆ ಸಮಯದಲ್ಲಿ ಪುನಃ ಪರಮಾದ್ಭುತವಾದ ತನ್ನ ಸಾಹಸಕಾರ್ಯವನ್ನು ತೋರಿಸಿದನು. ಆ ಸಮಯದಲ್ಲಿ ಎಲ್ಲ ಪಾಂಡವಯೋಧರೂ ಅವನನ್ನು ತಲೆಯೆತ್ತಿ ನೋಡಲೂ ಕೂಡ ಸಮರ್ಥರಾಗಲಿಲ್ಲ. ನೀರಿನ ದೊಡ್ಡ ಪ್ರವಾಹವು ಪರ್ವತದ ಬಳಿಗೆ ಬಂದು ಅದರಿಂದ ತಡೆಯಲ್ಪಟ್ಟು ನಾನಾಶಾಖೆಗಳಾಗಿ ಹೇಗೆ ಒಡೆದುಹೋಗುತ್ತದೆಯೋ–ಅದೇ ರೀತಿಯಲ್ಲಿ ಪಾಂಡವರ ಅಪಾರಸೈನ್ಯವೂ ಕರ್ಣನ ಬಳಿಗೆ ಬಂದು ಚದುರಿಹೋಯಿತು. ಮಹಾಬಾಹುವಾದ ಕರ್ಣನು ರಣರಂಗದಲ್ಲಿ ಧೂಮರಹಿತನಾದ ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಾ ಪಾಂಡವರ ಮಹಾಸೈನ್ಯವನ್ನು ದಹಿಸುತ್ತಾ ನಿಂತಿದ್ದನು. ವೀರನಾದ ಕರ್ಣನು ಪಾಂಡವವೀರರ ಶಿರಸ್ಸುಗಳನ್ನೂ, ಕುಂಡಲಗಳಿಂದ ಯುಕ್ತವಾದ ಕಿವಿಗಳನ್ನೂ, ತೋಳುಗಳನ್ನೂ ಬಾಣಗಳಿಂದ ಬಹಳ ಬೇಗ ಕತ್ತರಿಸಿಹಾಕುತ್ತಿದ್ದನು.

ಯೋಧವ್ರತದಲ್ಲಿಯೇ ಸುಪ್ರತಿಷ್ಠಿತನಾಗಿದ್ದ ಕರ್ಣನು ಆನೆಯ ದಂತ ದಿಂದ ಮಾಡಿದ್ದ ಹಿಡಿಗಳನ್ನು ಹೊಂದಿದ್ದ ಶತ್ರುಪಕ್ಷದ ಯೋಧರ ಕತ್ತಿ ಗಳನ್ನೂ, ಧ್ವಜಗಳನ್ನೂ, ಶಕ್ತ್ಯಾಯುಧಗಳನ್ನೂ, ಕುದುರೆಗಳನ್ನೂ, ಆನೆಗಳನ್ನೂ, ರಥಗಳನ್ನೂ, ವಿಧ-ವಿಧವಾದ ಪತಾಕೆಗಳನ್ನೂ, ವ್ಯಜನ ಗಳನ್ನೂ, ಅಚ್ಚುಮರಗಳನ್ನೂ, ರಥದ ಮೂಕಿಗಳನ್ನೂ, ನೊಗಗಳನ್ನೂ, ನೊಗಪಟ್ಟಿಗಳನ್ನೂ, ಅನೇಕವಿಧವಾದ ಚಕ್ರಗಳನ್ನೂ–ನಿಶಿತವಾದ ಬಾಣ ಗಳಿಂದ ಕತ್ತರಿಸುತ್ತಿದ್ದನು. ಕರ್ಣನಿಂದ ಹತವಾದ ಆನೆ-ಕುದುರೆಗಳಿಂದ ತುಂಬಿಹೋಗಿದ್ದ ಆ ರಣಾಂಗಣವು ಸಂಚಾರಕ್ಕೆ ಅಗಮ್ಯವಾಗಿದ್ದಿತು. ರಣಾಂಗಣದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸಲೂ ಸಾಧ್ಯವಾಗುತ್ತಿರಲಿಲ್ಲ. ಮೇಲಾಗಿ ರಕ್ತ ಮತ್ತು ಮಾಂಸಗಳಿಂದ ಸಮ್ಮಿಶ್ರವಾದ

ಕೆಸರಿನಿಂದಲೂ ಆ ರಣಭೂಮಿಯು ರಾಡಿಯಾಗಿ ಹೋಗಿದ್ದಿತು. ಸತ್ತು ಹೋಗಿದ್ದ ಗಜಾಶ್ವ-ಪದಾತಿಗಳಿಂದಲೂ ಮತ್ತು ಮುರಿದುಹೋಗಿದ್ದ ರಥ ಗಳಿಂದಲೂ ತುಂಬಿಹೋಗಿದ್ದ ಆ ರಣಭೂಮಿಯಲ್ಲಿ ಹಳ್ಳ-ತಿಟ್ಟುಗಳೊಂದೂ ಕಾಣುತ್ತಲೇ ಇರಲಿಲ್ಲ. ಕರ್ಣನ ಮಹಾಸ್ತ್ರವು ರಣರಂಗದಲ್ಲಿ ಸರ್ವತ್ರ ವಿಜೃಂಭಿಸುತ್ತಿರಲಾಗಿ, ಮಹಾಸ್ತ್ರದಿಂದ ಹೊರಟ ಬಾಣಗಳಿಂದ ರಣ ಭೂಮಿಯಲ್ಲಿ ಅಂಧಕಾರವು ಕವಿದು–'ಇವರು ನಮ್ಮ ಕಡೆಯ ಯೋಧರೇ? ಶತ್ರುಗಳ ಕಡೆಯ ಯೋಧರೇ?–ಎಂಬುದು ಎರಡು ಪಕ್ಷಗಳ ಯೋಧರಿಗೂ ತಿಳಿಯುತ್ತಿರಲಿಲ್ಲ. ಕರ್ಣನ ಧನುಸ್ಸಿನಿಂದ ಚ್ಯುತವಾದ ಸುವರ್ಣಭೂಷಿತವಾದ ಬಾಣಗಳಿಂದ ಪಾಂಡವರ ಕಡೆಯ ಎಲ್ಲ ಮಹಾ ರಥರೂ ಆಚ್ಛಾದಿತರಾದರು. ಯುದ್ಧದಲ್ಲಿ ಜಯಗಳಿಸಬೇಕೆಂದು ಸತತವಾಗಿ ಪ್ರಯತ್ನಿಸುತ್ತಿದ್ದ ಪಾಂಡವರ ಕಡೆಯ ಮಹಾರಥರನ್ನು (ಮಹಾರಥರ ಪ್ರಯತ್ನವನ್ನು) ಕರ್ಣನು ಪುನಃ ಪುನಃ ಭಗ್ನಗೊಳಿಸುತ್ತಿದ್ದನು. ಕೋಪಗೊಂಡ ಸಿಂಹವು ಯಾವ ರೀತಿಯಲ್ಲಿ ಮೃಗಗಳ ಸಮೂಹಗಳನ್ನು ಪಲಾಯನಗೊಳಿಸುತ್ತದೆಯೋ–ಅದೇ ರೀತಿಯಲ್ಲಿ ಕರ್ಣನು ಶತ್ರುಗಳಾದ ಪಾಂಚಾಲರಥಶ್ರೇಷ್ಠರನ್ನು ಪಲಾಯನಪರಾಯಣರನ್ನಾಗಿ ಮಾಡಿದನು. ಯಶೋವಂತನಾದ ಕರ್ಣನು ಯುದ್ಧದಲ್ಲಿ ಪಾಂಡವರ ಕಡೆಯ ಯೋಧ ರನ್ನು ಭಯಗೊಳಿಸುತ್ತಾ–ತೋಳವು ಪಶುಗಳ ಸಮೂಹವನ್ನು (ಕುರಿಗಳ ಮಂದೆಯನ್ನು) ಚದುರಿಸಿಬಿಡುವಂತೆ–ಪಾಂಡವರ ಸೈನ್ಯವನ್ನು ಕದಡಿ ಬಿಟ್ಟನು. ಪಾಂಡವರ ಸೈನ್ಯವು ಕರ್ಣನನ್ನು ಎದುರಿಸಿ ಯುದ್ಧಮಾಡಲು ಸಾಧ್ಯವಾಗದೇ ಪರಾಙ್ಮುಖವಾಗುತ್ತಿರುವುದನ್ನು ಕಂಡು ಮಹಾಧನುಷ್ಮಂತ ರಾದ ನಿನ್ನ ಮಕ್ಕಳು ಭಯಂಕರವಾಗಿ ಗರ್ಜನೆಮಾಡುತ್ತಾ ಕರ್ಣನಿದ್ದೆಡೆಗೆ ಆಗಮಿಸಿದರು. ರಾಜೇಂದ್ರ! ದುರ್ಯೋಧನನು ಕರ್ಣನ ವಿಜಯದಿಂದ ಅತಿಯಾದ ಸಂತೋಷದಿಂದ ಕೂಡಿದವನಾಗಿ (ಪರಮಸಂತುಷ್ಟನಾಗಿ) ನಾನಾವಿಧವಾದ ರಣವಾದ್ಯಗಳು ಮೊಳಗುವಂತೆ ಆದೇಶವಿತ್ತನು. ಶತ್ರು ಪಕ್ಷದಲ್ಲಿ ವಿಜಯಸೂಚಕವಾದ ರಣವಾದ್ಯಗಳ ಧ್ವನಿಯಾಗುತ್ತಿರು ವುದನ್ನು ಕೇಳಿ ಭಗ್ನರಾಗಿ ಹೋಗಿದ್ದ ಮಹಾಧನುಷ್ಮಂತರಾದ ಪಾಂಚಾಲ ನರಶ್ರೇಷ್ಠರು ಮೃತ್ಯುವನ್ನೇ ತಮ್ಮ ಹಿಂದಿರುಗುವ ಸ್ಥಾನವೆಂದು ನಿಶ್ಚಯಿಸಿ

ಕೊಂಡು ‘ವಿಜಯವನ್ನಾದರೂ ಗಳಿಸಬೇಕು. ಅಥವಾ ಸಾವನ್ನಾದರೂ ಅಪ್ಪಬೇಕು’–ಎಂಬ ದೃಢನಿಶ್ಚಯದಿಂದ ಪುನಃ ಕರ್ಣನೊಡನೆ ಯುದ್ಧಮಾಡಲು ಹಿಂದಿರುಗಿ ಬಂದರು. ಶತ್ರುಗಳಿಗೆ ಸಂತಾಪದಾಯಕನಾದ, ಪುರುಷಶ್ರೇಷ್ಠನಾದ ರಾಧಾಪುತ್ರನು ಹಿಂದಿರುಗಿ ಬಂದ ಶೂರರನ್ನು ಹಲವು ಬಾರಿ ಭೇದಿಸಿದನು. ಅವರಲ್ಲಿ ಇಪ್ಪತ್ತು ಮಂದಿ ಪಾಂಚಾಲಮಹಾರಥರನ್ನೂ, ನೂರಕ್ಕೂ ಹೆಚ್ಚಿನ ಚೇದಿಯೋಧರನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿದನು. ರಥಗಳ ಆಸನಗಳನ್ನು ರಥಿಗಳಿಂದ ಶೂನ್ಯವನ್ನಾಗಿಯೂ, ಕುದುರೆಗಳ ಬೆನ್ನುಗಳನ್ನು ಸವಾರರಿಂದ ಶೂನ್ಯವನ್ನಾಗಿಯೂ, ಆನೆಗಳ ಅಂಬಾರಿ (ಸ್ಕಂಧಸ್ಥಳ)ಗಳನ್ನು ಮನುಷ್ಯರಹಿತವನ್ನಾಗಿಯೂ ಮಾಡಿ ಕಾಲಾಳುಗಳನ್ನೂ ಪಲಾಯಿತರನ್ನಾಗಿ ಮಾಡಿದನು. ಶತ್ರುತಾಪಕನಾದ ಕರ್ಣನು ಮಧ್ಯಾಹ್ನದ ಸೂರ್ಯನಂತೆ ದಿಟ್ಟಿಸಿನೋಡಲು ಅಸಾಧ್ಯನಾಗಿದ್ದನು. ಶೂರನಾದ ರಾಧೇಯನು ಕಾಲ ಮತ್ತು ಅಂತಕರ (ಪ್ರಳಯಕಾಲದ ಯಮನ) ಶರೀರದಂತಹ ಭಯಂಕರವಾದ ಶರೀರವನ್ನು ಹೊಂದಿ ರಣರಂಗದಲ್ಲಿ ರಾರಾಜಿಸುತ್ತಿದ್ದನು. ಶತ್ರುಸಮೂಹವಿಧ್ವಂಸಕನಾದ ಮಹಾಧನುಷ್ಮಂತನಾದ ಕರ್ಣನು ಹೀಗೆ ಗಜಾಶ್ವ-ರಥ-ಪದಾತಿಸೈನಿಕರನ್ನು ಸಂಹರಿಸಿ ರಣರಂಗದಲ್ಲಿ ಅವಿಚಲನಾಗಿ ನಿಂತಿದ್ದನು. ಯಾವ ರೀತಿಯಲ್ಲಿ ಮಹಾಬಲನಾದ ಕಾಲನು ಪ್ರಳಯಕಾಲದಲ್ಲಿ ಪ್ರಾಣಿಗಳ ಸಮೂಹಗಳೆಲ್ಲವನ್ನೂ ಸಂಹರಿಸಿ ನಿಲ್ಲುತ್ತಾನೆಯೋ–ಅದೇ ರೀತಿಯಲ್ಲಿ ಒಬ್ಬನೇ ಒಬ್ಬ ಮಹಾರಥನಾದ ಕರ್ಣನು ಸೋಮಕಯೋಧರನ್ನು ಸಂಹರಿಸಿ ರಣರಂಗದಲ್ಲಿ ಸ್ಥಿರನಾಗಿ ನಿಂತಿದ್ದನು. ಧೃತರಾಷ್ಟ್ರಮಹಾರಾಜ! ಆ ಸಮಯದಲ್ಲಿ ನಾವು ಪಾಂಚಾಲಯೋಧರ ಅದ್ಭುತಪರಾಕ್ರಮವನ್ನೂ ನೋಡಿದೆವು. ಕರ್ಣನಿಂದ ವಧಿಸಲ್ಪಡುತ್ತಿದ್ದರೂ ಅವರಲ್ಲಿ ಯಾರೂ ರಣರಂಗವನ್ನು ಮಾತ್ರ ಬಿಟ್ಟುಹೋಗುತ್ತಲೇ ಇರಲಿಲ್ಲ. ಪ್ರಾಣಗಳನ್ನಾದರೂ ಬಿಡುತ್ತಿದ್ದರೇ ಹೊರತು ಪಲಾಯನಮಾಡುತ್ತಿರಲಿಲ್ಲ. ದುರ್ಯೋಧನ, ದುಃಶಾಸನ, ಶರದ್ವಂತರ ಮಕ್ಕಳಾದ ಕೃಪರು, ಅಶ್ವತ್ಥಾಮಾ, ಕೃತವರ್ಮಾ, ಮಹಾಬಲನಾದ ಶಕುನಿ–ಇವರೂ ಸಹ ಪಾಂಡವರ ಸೈನ್ಯವನ್ನು ನೂರಾರು–ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಿದರು. ಸತ್ಯವಿಕ್ರಮರಾದ, ಸಹೋದರರಾದ ಕ್ರುದ್ಧ

ರಾಗಿದ್ದ ಕರ್ಣನ ಇಬ್ಬರು ಮಕ್ಕಳೂ ಅಲ್ಲಲ್ಲಿ ಸಿಕ್ಕಿದ ಪಾಂಡವಯೋಧರನ್ನು ಸಂಹಾರಮಾಡುತ್ತಿದ್ದರು. ಅನಂತರ ಆ ರಣರಂಗದಲ್ಲಿ ಅತಿಕ್ರೂರವಾದ ವೀರಸಂಹಾರಕವಾದ ಭಯಂಕರಯುದ್ಧವು ನಡೆಯಿತು. ಶೂರರಾದ ಪಾಂಡವರೂ, ಧೃಷ್ಟದ್ಯುಮ್ನ-ಶಿಖಂಡಿಗಳೂ, ದ್ರೌಪದಿಯ ಮಕ್ಕಳೂ ಪರಮಕ್ರುದ್ಧರಾಗಿ ನಿನ್ನ ಕಡೆಯ ಸೈನಿಕರನ್ನು ಧ್ವಂಸಮಾಡಲು ಉಪಕ್ರಮಿಸಿದರು. ಮಹಾರಾಜ! ಹೀಗೆ ಕರ್ಣಪ್ರಮುಖರಾದ ನಿನ್ನ ಕಡೆಯ ಯೋಧರು ಪಾಂಡವಸೈನಿಕರನ್ನು ಕ್ಷಯಗೊಳಿಸಿದರು. ಮಹಾಬಲನಾದ ಭೀಮಸೇನನನ್ನು ಮುಂದಿಟ್ಟುಕೊಂಡು ಪಾಂಡವರೂ ನಿನ್ನ ಕಡೆಯ ಸೈನಿಕರನ್ನು ಕ್ಷಯಗೊಳಿಸಿದರು.”

೭೮ನೆಯ ಅಧ್ಯಾಯವು ಮುಗಿಯಿತು.

೭೯ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನು ಕೌರವಸೈನಿಕರನ್ನು ಸಂಹರಿಸಿ ರಕ್ತದ ನದಿಯನ್ನೇ ಹರಿಸಿದುದು: ರಥವನ್ನು ಕರ್ಣನ ಬಳಿಗೆ ಒಯ್ಯುವಂತೆ ಶ್ರೀಕೃಷ್ಣನಿಗೆ ಹೇಳಿದುದು: ಕೃಷ್ಣಾರ್ಜುನರು ತಮ್ಮ ಸಮೀಪಕ್ಕೆ ಬರುತ್ತಿರುವುದನ್ನು ನೋಡಿದ ಕರ್ಣ-ಶಲ್ಯರ ಸಂಭಾಷಣೆ: ಅರ್ಜುನನು ಕೌರವರ ಸೈನ್ಯವನ್ನು ಧ್ವಂಸಮಾಡಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

(೭೭ನೆಯ ಅಧ್ಯಾಯದ **ತಾಂ ತು ಸೇನಾಂ ಭೃಶಂ ವಿದ್ಧ್ವಾ ದ್ರಾವಯಿತ್ವಾರ್ಜುನಃ ಶರೈಃ । ಪ್ರಾಯಾದಭಿಮುಖಃ ಪಾರ್ಥಃ ಸೂತಾನೀಕಂ ಹಿ ಮಾರಿಷ ॥೨೧॥** ಅರ್ಜುನನು ಆ ಕೌರವಸೈನ್ಯವನ್ನು ಬಹಳವಾಗಿ ಗಾಯಗೊಳಿಸಿ, ಪಲಾಯನಮಾಡುವಂತೆ ಮಾಡಿ, ಕರ್ಣನ ಸೈನ್ಯದ ಕಡೆಗೆ ಧಾವಿಸಿದನು–ಎಂಬ ಶ್ಲೋಕದಿಂದ ಮುಂದಕ್ಕೆ ಈ ಅಧ್ಯಾಯದಲ್ಲಿ ಕಥೆಯು ಅನುವರ್ತಿತವಾಗಿದೆ.)

“ಮಹಾರಾಜ! ಮಹಾಯುದ್ಧದಲ್ಲಿ ಅರ್ಜುನನು ನಮ್ಮ ಕಡೆಯ ಚತುರಂಗಬಲವನ್ನೂ ಸಂಹಾರಮಾಡಿ ಅತಿಕ್ರುದ್ಧನಾದ, ಸೂತಪುತ್ರನಾದ

ಕರ್ಣನನ್ನು ನೋಡಿದನು. ಆ ಸಂದರ್ಭದಲ್ಲಿ ಅರ್ಜುನನು ನೀರಿಗೆ ಬದಲಾಗಿ ರಕ್ತದ ನದಿಯನ್ನೇ ಹರಿಸಿದನು. ಆ ರಕ್ತದ ನದಿಯಲ್ಲಿ ಸಮ್ಮಿಶ್ರವಾದ ಮಾಂಸ, ವಸೆ ಮತ್ತು ಅಸ್ಥಿಗಳೇ ನದಿಯ ಕೆಸರಾಗಿದ್ದಿತು. ಮನುಷ್ಯರ ತಲೆಬುರುಡೆಗಳೇ ಕಲ್ಲುಗಳಂತಿದ್ದುವು. ಸತ್ತುಹೋಗಿದ್ದ ಆನೆ-ಕುದುರೆಗಳ ಶರೀರಗಳೇ ನದಿಯ ತೀರಗಳಾಗಿದ್ದುವು. ಶೂರರ ಮೂಳೆಗಳ ರಾಶಿಯಿಂದ ಆ ನದಿಯು ವ್ಯಾಪ್ತವಾಗಿದ್ದಿತು. ಆ ನದಿಯ ತೀರದಲ್ಲಿ ಕಾಗೆ ಮತ್ತು ರಣಹದ್ದುಗಳು ಧ್ವನಿಮಾಡುತ್ತಿದ್ದುವು. ಶ್ವೇತಛತ್ರಗಳೇ ರಾಜಹಂಸಗಳಂತೆ ಆ ರಕ್ತನದಿಯಲ್ಲಿ ತೇಲಾಡುತ್ತಿದ್ದುವು. ವೃಕ್ಷರೂಪರಾದ ವೀರರನ್ನು ಆ ನದಿಯು ಕೊಚ್ಚಿಸಿಕೊಂಡು ಹೋಗುತ್ತಿದ್ದಿತು. ವೀರಯೋಧರ ಹಾರಗಳು ಆ ರಕ್ತನದಿಯ ಕಮಲವನದಂತೆ ಕಾಣುತ್ತಿದ್ದಿತು. ವೀರರ ಶಿರಸ್ತ್ರಾಣಗಳೇ ಬಿಳುಪಾದ ನೊರೆಯಂತೆ ಕಾಣುತ್ತಿದ್ದುವು. ಆ ರಕ್ತನದಿಯು ವೀರರ ಧನುಸ್ಸು, ಬಾಣ ಮತ್ತು ಧ್ವಜಗಳಿಂದ ತುಂಬಿಹೋಗಿದ್ದಿತು. ಮನುಷ್ಯರ ಒಡೆದುಹೋದ ಕಪಾಲಗಳೂ ಆ ನದಿಯಲ್ಲಿ ಹೇರಳವಾಗಿದ್ದುವು. ಗುರಾಣಿ ಮತ್ತು ಕವಚಗಳು ಆ ನದಿಯ ಸುಳಿಗಳಂತೆ ಕಾಣುತ್ತಿದ್ದುವು. ಅನೇಕರಥಗಳು ಆ ನದಿಯಲ್ಲಿ ಬಿದ್ದಿದ್ದು, ನೌಕೆಗಳಂತೆ ಕಾಣುತ್ತಿದ್ದುವು. ವಿಜಯೇಚ್ಛುಗಳಾದ ವೀರರು ಆ ನದಿಯನ್ನು ಸುಲಭವಾಗಿ ದಾಟುತ್ತಿದ್ದರು. ಭೀರುಗಳಿಗೆ ಅದು ದುಸ್ತರವಾಗಿದ್ದಿತು. ಶತ್ರುವೀರಹಂತಕನಾದ ಪುರುಷರ್ಷಭನಾದ ಅರ್ಜುನನು ಅಂತಹ ಭಯಂಕರವಾದ ನದಿಯೊಂದನ್ನು ರಣಭೂಮಿಯಲ್ಲಿ ಹರಿಸಿ ವಾಸುದೇವನೊಡನೆ ಹೇಳಿದನು:

“ಅದೋ ನೋಡು, ಕೃಷ್ಣ! ಕರ್ಣನ ರಥದ ಬಾವುಟವು ಕಾಣಿಸುತ್ತಿದೆ. ನಮ್ಮ ಭೀಮಾದಿಗಳು ಅವನೊಡನೆ ಯುದ್ಧಮಾಡುತ್ತಿದ್ದಾರೆ. ಕರ್ಣನಿಂದ ಭಯಗೊಂಡ ಪಾಂಚಾಲರು ಓಡಿಹೋಗುತ್ತಿದ್ದಾರೆ. ಶ್ವೇತಛತ್ರವನ್ನು ಧರಿಸಿರುವ ದುರ್ಯೋಧನನು ಕರ್ಣನಿಂದ ಭಗ್ನರಾದ ಪಾಂಚಾಲರನ್ನು ಓಡಿಸುತ್ತಾ ರಣರಂಗದಲ್ಲಿ ಬಹಳವಾಗಿ ಶೋಭಿಸುತ್ತಿದ್ದಾನೆ. ಕರ್ಣನಿಂದ ರಕ್ಷಿತರಾದ ಕೃಪರು, ಕೃತವರ್ಮಾ, ಮಹಾರಥನಾದ ಅಶ್ವತ್ಥಾಮಾ–ಇವರೇ ಮೊದಲಾದ ಯೋಧರು ದುರ್ಯೋಧನನನ್ನು ರಕ್ಷಿಸುತ್ತಿದ್ದಾರೆ. ನಾವೇನಾದರೂ ಇವರನ್ನು ಈ ಸಮಯದಲ್ಲಿ ಸಂಹರಿ

ಸದೇ ಹೋದರೆ ಇವರು ಸೋಮಕರನ್ನು ಸಂಪೂರ್ಣವಾಗಿಯೇ ನಾಶ ಮಾಡುತ್ತಾರೆ. ಕಡಿವಾಣಗಳ ಸಂಚಾಲನದಲ್ಲಿ (ಅಶ್ವನಯನದಲ್ಲಿ) ನಿಷ್ಣಾತನಾದ, ರಥದ ಮುಂಭಾಗದಲ್ಲಿ ಕುಳಿತಿರುವ ಶಲ್ಯನು ಕರ್ಣನ ರಥವನ್ನು ನಡೆಸುತ್ತಾ ಬಹಳವಾಗಿ ಶೋಭಿಸುತ್ತಿದ್ದಾನೆ. ನಾನೀಗ ಅಲ್ಲಿಗೆ ಹೋಗಲು ನಿಶ್ಚಯಿಸಿದ್ದೇನೆ. ಮಹಾರಥನಾದ ಕರ್ಣನ ರಥದ ಸಮೀಪಕ್ಕೆ ನಮ್ಮ ರಥವನ್ನು ನಡೆಸು. ಇಂದಿನ ಯುದ್ಧದಲ್ಲಿ ನಾನು ಕರ್ಣನನ್ನು ಸಂಹರಿಸದೇ ಯಾವುದೇ ಕಾರಣದಿಂದಲೂ ಹಿಂದಿರುಗುವುದಿಲ್ಲ. ಹಾಗೇನಾದರೂ ನಾನಿಂದು ಇವನನ್ನು ಸಂಹರಿಸದೆಯೇ ಹೋದರೆ ನಾವು ನೋಡುತ್ತಿರುವಂತೆಯೇ ಈ ರಾಧೇಯನು ಪಾಂಡವರನ್ನೂ, ಸೃಂಜಯಮಹಾರಥರನ್ನೂ, ನಿಶ್ಶೇಷಮಾಡಿಬಿಡುತ್ತಾನೆ. (ಯಾರೊಬ್ಬರನ್ನೂ ಉಳಿಸುವುದಿಲ್ಲ.")

ಮಹಾರಾಜ! ಅರ್ಜುನನು ಹೀಗೆ ಹೇಳಿದೊಡನೆಯೇ ರಥದಲ್ಲಿ ಕುಳಿತಿದ್ದ ಕೇಶವನು ಮಹಾಧನುಷ್ಮಂತನಾದ ಕರ್ಣನ ಬಳಿಗೆ ದ್ವೈರಥಯುದ್ಧದ ಸಲುವಾಗಿ ಅರ್ಜುನನೊಡನೆ ತೆರಳಿದನು. ಮಹಾಬಾಹುವಾದ ಹರಿಯು ಅರ್ಜುನನ ಸಲಹೆಯಂತೆ ಕರ್ಣನ ರಥದ ಬಳಿಗೆ ರಥದಲ್ಲಿ ಕುಳಿತು ಹೋಗುತ್ತಿದ್ದಾಗ ಸುತ್ತಲೂ ಇದ್ದ ಪಾಂಡವಸೈನಿಕರಿಗೆ ರಥದಿಂದಲೇ ಆಶ್ವಾಸನೆಯನ್ನು ನೀಡುತ್ತಿದ್ದನು. (ಅರ್ಜುನನ ರಥವು ಬಂದುದೇ ಅವರಿಗೆ ಆಶ್ವಾಸನೆಯಾಯಿತು.) ಆ ಸಮಯದಲ್ಲಿ ಪಾಂಡುಕುಮಾರನ ರಥದ ಮಹಾಧ್ವನಿಯು ಇಂದ್ರನ ವಜ್ರಾಯುಧದ ಧ್ವನಿಗೆ ಸಮಾನವಾಗಿದ್ದಿತು ಮತ್ತು ಮೇಘಗಳ ಗರ್ಜನೆಯನ್ನೂ ಅನುಕರಿಸುತ್ತಿದ್ದಿತು. ಸತ್ಯವಿಕ್ರಮನಾದ, ಮಹಾತ್ಮನಾದ ಪಾಂಡವನು ಮಹತ್ತಾದ ರಥಘೋಷದೊಡನೆ ನಿನ್ನ ಸೈನ್ಯವನ್ನು ಪರಾಜಯಗೊಳಿಸುತ್ತಾ ಮುನ್ನಡೆಯುತ್ತಿದ್ದನು. ಶ್ವೇತಾಶ್ವನಾದ, ಕೃಷ್ಣಸಾರಥಿಯಾದ ಅರ್ಜುನನು ಬರುತ್ತಿರುವುದನ್ನು ರಥಘೋಷದಿಂದಲೇ ಗಮನಿಸಿ ಅವನ ಧ್ವಜವನ್ನೂ ನೋಡಿ ಮದ್ರರಾಜನಾದ ಶಲ್ಯನು ಕರ್ಣನೊಡನೆ ಹೇಳಿದನು:

"ಕರ್ಣ! ನೀನು ಇದುವರೆಗೂ ಯಾವನ ವಿಷಯವಾಗಿ ತವಕದಿಂದ ಪ್ರಶ್ನಿಸುತ್ತಿದ್ದೆಯೋ–ಕೃಷ್ಣಸಾರಥಿಯಾದ, ಶ್ವೇತಾಶ್ವನಾದ ಆ ಅರ್ಜುನನೇ ಶತ್ರುಸೈನಿಕರನ್ನು ವಿನಾಶಗೊಳಿಸುತ್ತಾ ಇತ್ತ ಕಡೆಯೇ ಬರುತ್ತಿದ್ದಾನೆ.

ಅರ್ಜುನನು ಗಾಂಡೀವಧನುಸ್ಸನ್ನು ಕೈಯಲ್ಲಿ ಹಿಡಿದು ನಿಂತಿದ್ದಾನೆ. ಈಗೇನಾದರೂ ನೀನು ಇವನನ್ನು ಸಂಹರಿಸಿದೆಯಾದರೆ ನಮಗೆ ಖಂಡಿತವಾಗಿಯೂ ಶ್ರೇಯಸ್ಸು ಲಭಿಸುತ್ತದೆ. ಕರ್ಣ! ಅದೋ ಅದೇ ಅರ್ಜುನನ ದಿವ್ಯವಾದ ಗಾಂಡೀವಧನುಸ್ಸು; ಅದೇ ಆ ಧನುಸ್ಸಿನ ಮೌರ್ವೀ; ಚಂದ್ರ-ನಕ್ಷತ್ರಗಳ ಚಿಹ್ನೆಗಳಿಂದ ಪರಿಶೋಭಿಸುತ್ತಿರುವ ಮತ್ತು ಸಣ್ಣ-ಸಣ್ಣ ಗಂಟೆ



ಗಳಿಂದ ಕೂಡಿರುವ ಅದೇ ಅವನ ಧ್ವಜಪಟ. ರಥದ ಮೇಲೆ ಹಾರಾಡುತ್ತಿರುವ ಆ ಧ್ವಜಪಟವು ಅಂತರಿಕ್ಷದಲ್ಲಿರುವ ಮಿಂಚಿನಂತೆಯೇ ಕಾಣುತ್ತಿದೆ. ಪಾರ್ಥನ ಆ ಧ್ವಜದ ತುದಿಯಲ್ಲಿ ವೀರರಿಗೂ ಭಯವನ್ನು ಹೆಚ್ಚಿಸುವ

ಭಯಂಕರನಾದ ವಾನರನು ಸುತ್ತಲೂ ನೋಡುತ್ತಾ ಕುಳಿತಿರುವುದೂ ಕಾಣುತ್ತಿದೆ.

**ಏತಚ್ಚಕ್ರಂ ಗದಾ ಶಙ್ಖಃ ಶಾರ್ಙ್ಗಂ ಕೃಷ್ಣಸ್ಯ ಚ ಪ್ರಭೋ ।**
**ದೃಶ್ಯತೇ ಪಾಣ್ಡವರಥೇ ವಾಹಯಾನಸ್ಯ ವಾಜಿನಃ ॥೧೩॥**

ಅರ್ಜುನನ ರಥದಲ್ಲಿ ಕುಳಿತು ಕುದುರೆಗಳನ್ನು ನಡೆಸುತ್ತಿರುವ ಶ್ರೀಕೃಷ್ಣನ ಸುದರ್ಶನಚಕ್ರ, ಗದೆ, ಶಂಖ ಮತ್ತು ಶಾರ್ಙ್ಗಧನುಸ್ಸುಗಳೂ ಸಹ ಕಾಣಿಸುತ್ತಿವೆ.

ಸವ್ಯಸಾಚಿಯಿಂದ ಸೆಳೆದುಬಿಡಲ್ಪಟ್ಟ ಗಾಂಡೀವಧನುಸ್ಸು ಟೇಂಕರಿಸುತ್ತಿದೆ. ಸಿದ್ಧಹಸ್ತನಾದ ಅರ್ಜುನನಿಂದ ಬಿಡಲ್ಪಟ್ಟ ನಿಶಿತವಾದ ಬಾಣಗಳು ಶತ್ರುಗಳನ್ನು ಸಂಹರಿಸುತ್ತಿವೆ. ಯುದ್ಧದಿಂದ ಹಿಂದಿರುಗದೇ ಇರುವ ರಾಜರ ವಿಶಾಲವಾದ ಮತ್ತು ತೀಕ್ಷ್ಣವಾದ ಕೆಂಗಣ್ಣುಗಳಿಂದಲೂ–ಪೂರ್ಣಚಂದ್ರಸದೃಶವಾದ ಮುಖಗಳಿಂದಲೂ ಕೂಡಿರುವ ಶಿರಸ್ಸುಗಳಿಂದ ಈ ರಣಾಂಗಣವು ವ್ಯಾಪ್ತವಾಗುತ್ತಿದೆ. ಪರಿಘಾಯುಧಸದೃಶವಾದ, ಪುಣ್ಯಗಂಧದಿಂದ ಅನುಲೇಪಿತವಾದ, ಆಯುಧಗಳಿಂದ ಕೂಡಿರುವ ಮತ್ತು ಮೇಲಕ್ಕೆತ್ತಲ್ಪಟ್ಟಿರುವ ರಣಧೀರರ ತೋಳುಗಳು ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟು ಕ್ಷತ-ವಿಕ್ಷತವಾಗಿ ಕೆಳಕ್ಕೆ ಬೀಳುತ್ತಿವೆ. ಸವಾರರಿಂದ ಸಹಿತವಾದ ಕೌರವರ ಪಕ್ಷದ ಕುದುರೆಗಳು ಅರ್ಜುನನ ಬಾಣಗಳಿಂದ ನಾಲಿಗೆ ಮತ್ತು ಕಣ್ಣುಗಳನ್ನು ಹೊರಚಾಚಿ ಭೂಮಿಯ ಮೇಲೆ ಬೀಳುತ್ತಿವೆ. ಕೆಲವು ಕುದುರೆಗಳು ಶಕ್ತಿಗುಂದಿ ಕೆಳಕ್ಕೆ ಬೀಳುವುದರಲ್ಲಿವೆ.

ಹಿಮಾಲಯಪ್ರದೇಶದಲ್ಲಿ ಹುಟ್ಟಿದ ಪರ್ವತಶಿಖರಸದೃಶವಾದ ಈ ಆನೆಗಳು ಅರ್ಜುನನ ಬಾಣಗಳ ಪ್ರಹಾರಗಳಿಂದ ಭಿನ್ನವಾದ ಕುಂಭಸ್ಥಳಗಳಿಂದ ಕೂಡಿದುವುಗಳಾಗಿ ಪರ್ವತಗಳೋಪಾದಿಯಲ್ಲಿ ನೆಲದ ಮೇಲೆ ಬಿದ್ದಿವೆ.

ಈ ರಥಗಳು ಗಂಧರ್ವನಗರಕ್ಕೆ ಸಮಾನವಾಗಿವೆ. ಇವುಗಳಲ್ಲಿರುವ ರಾಜರು–ಸ್ವರ್ಗದಲ್ಲಿರುವವರು ಪುಣ್ಯವು ಕಳೆದನಂತರ ವಿಮಾನಗಳಿಂದ ಕೆಳಕ್ಕೆ ಬೀಳುವಂತೆ–ಅರ್ಜುನನ ಬಾಣಗಳಿಂದ ಛಿನ್ನ-ಭಿನ್ನರಾಗಿ ತಮ್ಮ

ಸುಂದರವಾದ ಮತ್ತು ವಿಶಾಲವಾದ ರಥಗಳಿಂದ ಕೆಳಕ್ಕೆ ಬೀಳುತ್ತಿದ್ದಾರೆ. ನಾನಾವಿಧವಾದ ಸಾವಿರಾರು ಮೃಗಗಳ ಸಮೂಹವು ಸಿಂಹದಿಂದ (ಸಿಂಹವನ್ನು ನೋಡಿ) ವ್ಯಾಕುಲಗೊಳ್ಳುವಂತೆ–ನಮ್ಮ ಸೈನ್ಯವು ಅರ್ಜುನನಿಂದ ಹೆಚ್ಚು ವ್ಯಾಕುಲಗೊಳ್ಳುತ್ತಿದೆ. ರಾಧಾಪುತ್ರ! ಸಾಮಾನ್ಯರಿಂದ ಸಹಿಸಲು ಅಸಾಧ್ಯನಾದ ಅರ್ಜುನನು ನಮ್ಮ ಪಕ್ಷದ ಶ್ರೇಷ್ಠರಾದ ರಥಿಗಳನ್ನು ಸಂಹರಿಸುತ್ತಾ ನಿನ್ನನ್ನು ಎದುರಿಸುವ ಇಚ್ಛೆಯಿಂದಲೇ ಇತ್ತ ಕಡೆಗೆ ಬರುತ್ತಿದ್ದಾನೆ. ಅವನನ್ನು ಎದುರಿಸುವ ಸಲುವಾಗಿ ನೀನೂ ಸಹ ಮುಂದೆ ಹೋಗು. ಅನೇಕ ಶತ್ರುಯೋಧರನ್ನು ಸಂಹರಿಸುತ್ತಿರುವ ಅರ್ಜುನನ ಭಯದಿಂದಾಗಿ ದುರ್ಯೋಧನನ ಸೈನ್ಯವು ಭಗ್ನವಾಗಿ ಪಲಾಯನಮಾಡುತ್ತಿದೆ. ಅರ್ಜುನನ ಶರೀರವು ಉತ್ಸಾಹದಿಂದ ಉಬ್ಬಿರುವುದನ್ನು ನೋಡಿದರೆ ಧನಂಜಯನು ಎಲ್ಲ ಸೈನಿಕರನ್ನೂ ಬಿಟ್ಟು ನಿನ್ನ ಸಮೀಪಕ್ಕೆ ಬರುವ ಸಲುವಾಗಿಯೇ ಅವಸರಪಡುತ್ತಿರುವಂತೆ ಕಾಣುತ್ತಿದೆ. ಭೀಮಸೇನನು ನಿನ್ನಿಂದ ಪೀಡಿತನಾಗುತ್ತಿರಲಾಗಿ ಕೋಪದಿಂದ ಉದ್ದೀಪ್ತನಾಗಿರುವ ಅರ್ಜುನನು ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾರೊಡನೆಯೂ ಯುದ್ಧಮಾಡಲು ಮಧ್ಯದಲ್ಲಿ ನಿಲ್ಲುವುದಿಲ್ಲ. ರಥಹೀನನೂ ಮತ್ತು ಬಹಳವಾಗಿ ಕ್ಷತ-ವಿಕ್ಷತನೂ ಆಗಿರುವ ಧರ್ಮರಾಜನನ್ನೂ, ನಿನ್ನಿಂದ ಬಹಳವಾಗಿ ಗಾಯಗೊಂಡಿರುವ ಶಿಖಂಡೀ, ಸಾತ್ಯಕಿ, ದ್ರುಪದನ ಮಗನಾದ ಧೃಷ್ಟದ್ಯುಮ್ನ, ದ್ರೌಪದಿಯ ಮಕ್ಕಳು, ಯುಧಾಮನ್ಯು, ಉತ್ತಮೌಜಸ, ಅನುಜರಾದ ನಕುಲ-ಸಹದೇವರು–ಇವರನ್ನೂ ನೋಡಿ ಪರಮಕ್ರುದ್ಧನಾಗಿರುವ, ಇದರಿಂದಲೇ ರಕ್ತಾಕ್ಷನೂ ಆಗಿರುವ, ಶತ್ರುತಾಪಕನಾಗಿರುವ ಪಾರ್ಥನು ರಥೈಕಸಹಾಯನಾಗಿ ಎಲ್ಲ ಶತ್ರುರಾಜರನ್ನೂ ಸಂಹರಿಸಲಿಚ್ಛಿಸಿ ನಿನ್ನ ಕಡೆಗೇ ಬರುತ್ತಿದ್ದಾನೆ. ಅವನು ಶತ್ರುಪಕ್ಷದ ಎಲ್ಲ ಸೈನಿಕರನ್ನೂ ಪರಿತ್ಯಜಿಸಿ ಅತ್ಯಂತ ವೇಗವಾಗಿ ಬಂದು ನಮ್ಮ ಮೇಲೆಯೇ ಬೀಳುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ. ಕರ್ಣ! ನೀನೀಗಲೇ ಅರ್ಜುನನನ್ನು ಎದುರಿಸು. ಅರ್ಜುನನನ್ನು ಎದುರಿಸಲು ಸಮರ್ಥರಾದ ಧನುರ್ಧಾರಿಗಳು ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾರೂ ಇರುವುದಿಲ್ಲ. ಉಕ್ಕಿಬರುವ ಸಮುದ್ರವನ್ನು ತಡೆದು ನಿಲ್ಲಿಸುವ ತೀರ ಪ್ರದೇಶದಂತೆ–ಕ್ರುದ್ಧನಾದ ಅರ್ಜುನನನ್ನು ಯುದ್ಧದಲ್ಲಿ ತಡೆದು ನಿಲ್ಲಿಸಲು

ಸಾಮರ್ಥ್ಯವಿರುವ ಧನುರ್ಧರನನ್ನು ಈ ಲೋಕದಲ್ಲಿ ನಿನ್ನೊಬ್ಬನ ಹೊರತಾಗಿ ನಾನು ಮತ್ತಾರನ್ನೂ ಕಾಣುತ್ತಿಲ್ಲ. ಕರ್ಣ! ಅರ್ಜುನನ ಪಾರ್ಶ್ವರಕ್ಷಕರನ್ನಾಗಲೀ, ಪೃಷ್ಠರಕ್ಷಕರನ್ನಾಗಲೀ ನಾನು ಕಾಣುತ್ತಿಲ್ಲ. ಅರ್ಜುನನು ಏಕಾಕಿಯಾಗಿಯೇ ನಿನ್ನ ಸಮೀಪಕ್ಕೆ ಬರುತ್ತಿದ್ದಾನೆ. ನೋಡು ಕರ್ಣ! ನಿನ್ನ ಆತ್ಮಸಾಫಲ್ಯಕ್ಕೆ ಎಂತಹ ಸದವಕಾಶವು ಸಿಕ್ಕಿದೆ? ರಾಧಾಪುತ್ರ! ನೀನು ನಿಶ್ಚಯವಾಗಿಯೂ ಕೃಷ್ಣಾರ್ಜುನರನ್ನು ಪರಾಜಯಗೊಳಿಸುವ ಸಾಮರ್ಥ್ಯವನ್ನು ಹೊಂದಿರುವೆ. ದುರ್ಯೋಧನನಿಗೆ ವಿಜಯವನ್ನು ಗಳಿಸಿಕೊಡುವ ಭಾರವು ಈಗ ಸಂಪೂರ್ಣವಾಗಿ ನಿನ್ನ ಮೇಲೆಯೇ ಬಿದ್ದಿದೆ. ಆದುದರಿಂದ ಅರ್ಜುನನನ್ನೆದುರಿಸಲು ಸಿದ್ಧನಾಗು. ಕರ್ಣ! ನೀನು ಭೀಷ್ಮ-ದ್ರೋಣ-ಕೃಪರಿಗೆ ಸಮಾನಬಲನಾಗಿರುವೆ. ಆದುದರಿಂದ ನಿನ್ನೊಡನೆ ಯುದ್ಧಮಾಡಲು ಬರುತ್ತಿರುವ ಅರ್ಜುನನನ್ನು ಪ್ರತಿರೋಧಿಸು. ಕಟವಾಯಿಗಳನ್ನು ನೆಕ್ಕಿಕೊಳ್ಳುತ್ತಿರುವ ಕ್ರುದ್ಧವಾದ ಸರ್ಪದಂತಿರುವ, ಗರ್ಜಿಸುತ್ತಿರುವ ಗೂಳಿಯಂತಿರುವ, ಅರಣ್ಯದಲ್ಲಿರುವ ವ್ಯಾಘ್ರದಂತಿರುವ ಧನಂಜಯನನ್ನು ಸಂಹರಿಸು. ದುರ್ಯೋಧನನ ಕಡೆಯ ಜನಾಧಿಪರಾದ ಮಹಾರಥರು ಅರ್ಜುನನ ಭಯದಿಂದ ವಿಜಯದಲ್ಲಿ ಅಪೇಕ್ಷೆಯನ್ನು ಬಿಟ್ಟು ಬಹಳ ಬೇಗ ರಣರಂಗದಿಂದ ಓಡಿಹೋಗುತ್ತಿದ್ದಾರೆ. ಕರ್ಣ! ಹೀಗೆ ಓಡಿಹೋಗುತ್ತಿರುವ ದುರ್ಯೋಧನನ ಕಡೆಯ ಮಹಾರಥರ ಭಯವನ್ನು ಹೋಗಲಾಡಿಸತಕ್ಕ ಧೀರನು ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾವನಿದ್ದಾನೆ? ಸಮುದ್ರಸದೃಶವಾಗಿರುವ ಈ ಮಹಾಸಮರದಲ್ಲಿ ಕುರುಗಳಿಗೆ ನೀನು ದ್ವೀಪಪ್ರಾಯನಾಗಿರುವೆ. ಈ ಕುರುಗಳು ದ್ವೀಪರೂಪನಾದ ನಿನ್ನ ಆಶ್ರಯವನ್ನು ಪಡೆಯುವ ಅಭಿಲಾಷೆಯಿಂದ ನಿಂತಿದ್ದಾರೆ. ರಾಧಾನಂದನ! ನೀನು ಈ ಮೊದಲು ಯಾವ ಧೈರ್ಯವನ್ನಾಶ್ರಯಿಸಿ ಅತ್ಯಂತ ದುರ್ಜಯರಾದ ವಿದೇಹ, ಅಂಬಷ್ಠ, ಕಾಂಬೋಜ, ನಗ್ನಜಿತ ಮತ್ತು ಗಾಂಧಾರರನ್ನು ಪರಾಜಯಗೊಳಿಸಿದೆಯೋ ಅದೇ ಧೈರ್ಯವನ್ನೇ ಆಶ್ರಯಿಸಿ ಈ ಪಾಂಡವನನ್ನೂ ಆಕ್ರಮಿಸು. ಕಿರೀಟಿಯ ಪ್ರೀತ್ಯಾದರಗಳಿಗೆ ಪಾತ್ರನಾದ, ವೃಷ್ಣಿವಂಶಪ್ರದೀಪನಾದ ವಾಸುದೇವನನ್ನೂ ಮಹಾಪೌರುಷವನ್ನವಲಂಬಿಸಿ ಎದುರಿಸು.”

(ಕರ್ಣನು ಶಲ್ಯನ ಬಾಯಿಂದ ಇಂತಹ ಉತ್ತೇಜಕವಾದ ಮಾತನ್ನು ಕೇಳಿಯೇ ಇರಲಿಲ್ಲ. ಸುಪ್ರೀತನಾದ ಕರ್ಣನು ಶಲ್ಯನೊಡನೆ ಹೇಳುತ್ತಾನೆ.)

**ಪ್ರಕೃತಿಸ್ಥೋಽಸಿ ಮೇ ಶಲ್ಯ ಇದಾನೀಂ ಸಮ್ಮತಸ್ತಥಾ ।**
**ಪ್ರತಿಭಾಸಿ ಮಹಾಬಾಹೋ ಮಾ ಭೈಷೀಸ್ತ್ವಂ ಧನಂಜಯಾತ್ ॥**

"ಶಲ್ಯ! ಈಗ ನೀನು ನಿನ್ನ ಸ್ವಭಾವಕ್ಕೆ ಅನುಗುಣವಾಗಿರುವಂತೆ ಕಾಣುತ್ತಿರುವೆ. ಈಗ ನೀನು ನನಗೆ ಸಮ್ಮತನೂ ಆಗಿರುವೆ. ನೀನು ಅರ್ಜುನನ ದೆಸೆಯಿಂದ ಭಯಪಡುವ ಕಾರಣವಿಲ್ಲ.

ಶಲ್ಯ! ಈಗ ನನ್ನ ತೋಳಬಲವನ್ನು ನೋಡು; ನಾನು ಪಡೆದಿರುವ ಧನುರ್ವಿದ್ಯಾಶಿಕ್ಷಣದ ಶಕ್ತಿಯನ್ನಾದರೂ ನೋಡು. ಪಾಂಡವರ ಮಹಾಸೈನ್ಯವನ್ನು ನಾನೊಬ್ಬನೇ ವಿನಾಶಗೊಳಿಸುತ್ತೇನೆ. ವೀರರಾದ ಕೃಷ್ಣಾರ್ಜುನರನ್ನೂ ಸಂಹರಿಸುತ್ತೇನೆ. ಸತ್ಯವನ್ನೇ ಹೇಳುತ್ತಿದ್ದೇನೆ. ಪುರುಷವ್ಯಾಘ್ರನೇ! ಆ ಇಬ್ಬರನ್ನೂ ಸಂಹರಿಸದೇ ಯಾವುದೇ ಕಾರಣದಿಂದಲೂ ನಾನು ಹಿಂದಕ್ಕೆ ಸರಿಯುವುದಿಲ್ಲ.

**ಸ್ವಪ್ಸ್ಯೇ ವಾ ನಿಹತಸ್ತಾಭ್ಯಾಮನಿತ್ಯೋ ಹಿ ರಣೇ ಜಯಃ ।**
**ಕೃತಾರ್ಥೋಽದ್ಯ ಭವಿಷ್ಯಾಮಿ ಹತ್ವಾ ವಾಪ್ಯಥವಾ ಹತಃ ॥೫೨॥**

ಮದ್ರರಾಜ! ಅಥವಾ ನಾನು ಅವರಿಬ್ಬರಿಂದಲೂ ಹತನಾಗಿ ರಣಾಂಗಣದಲ್ಲಾದರೂ ಮಲಗುತ್ತೇನೆ. ಯುದ್ಧದಲ್ಲಿ ಜಯವೆಂಬುದು ಅನಿತ್ಯವಾದುದು ಮತ್ತು ಅನಿಶ್ಚಿತವಾದುದು. ನಾನೇ ಕೃಷ್ಣಾರ್ಜುನರನ್ನು ಸಂಹರಿಸಲಿ ಅಥವಾ ಅವರಿಂದಲೇ ನಾನು ಹತನಾಗಲಿ–ಎರಡು ಪ್ರಕಾರಗಳಿಂದಲೂ ನಾನು ಕೃತಾರ್ಥನಂತೂ ಆಗುತ್ತೇನೆ."

**ಅಜಯ್ಯಮೇನಂ ಪ್ರವದನ್ತಿ ಯುದ್ಧೇ**
**ಮಹಾರಥಾಃ ಕರ್ಣ ರಥಪ್ರವೀರಮ್**
**ಏಕಾಕಿನಂ ಕಿಮು ಕೃಷ್ಣಾಭಿಗುಪ್ತಂ**
**ವಿಜೇತುಮೇನಂ ಕ ಇಹೋತ್ಸಹೇತ ॥೫೩॥**

"ಕರ್ಣ! ಏಕಾಕಿಯಾದ ಅರ್ಜುನನೇ ಯುದ್ಧದಲ್ಲಿ ಅಜಯ್ಯನೆಂಬುದಾಗಿ ಮಹಾರಥರು ಹೇಳುತ್ತಾರೆ. ಹೀಗಿರುವಾಗ ಕೃಷ್ಣನಿಂದಲೂ ರಕ್ಷಿಸ

ಲ್ಪಡುತ್ತಿರುವ ಅರ್ಜುನನನ್ನು ಜಯಿಸಲು ಯಾವನು ತಾನೇ ಉತ್ಸಾಹಿಯಾಗುವನು?"

**ನೈತಾದೃಶೋ ಜಾತು ಬಭೂವ ಲೋಕೇ**
**ರಥೋತ್ತಮೋ ಯಾವದುಪಶ್ರುತಂ ನಃ ।**
**ತಮೀದೃಶಂ ಪ್ರತಿಯೋತ್ಸ್ಯಾಮಿ ಪಾರ್ಥಂ**
**ಮಹಾಹವೇ ಪಶ್ಯ ಚ ಪೌರುಷಂ ಮೇ ॥೫೪॥**

"ಮದ್ರರಾಜ! ನೀನು ಹೇಳುವುದೂ ನಿಜವೇ. ಅರ್ಜುನನಂತಹ ರಥಶ್ರೇಷ್ಠನು, ಮಹಾವೀರನು ಲೋಕದಲ್ಲಿ ಯಾವಾಗಲೂ ಹುಟ್ಟಿಯೇ ಇಲ್ಲ. ಅಂತಹ ಒಬ್ಬ ವೀರನು ಹುಟ್ಟಿದ್ದನೆಂಬುದನ್ನು ನಾವು ಇದುವರೆಗೂ ಕೇಳಿಯೂ ಇಲ್ಲ. ಇಂತಹ ಅಸಾಧಾರಣಪರಾಕ್ರಮನಾದ ಪಾರ್ಥನನ್ನು ಎದುರಿಸಿ ನಾನಿಂದು ಯುದ್ಧಮಾಡುತ್ತೇನೆ. ಯುದ್ಧಸಮಯದಲ್ಲಿ ನನ್ನ ಪೌರುಷವನ್ನಾದರೂ ನೋಡು.

ರಥಪ್ರವೀರನಾದ, ಕೌರವರಾಜಪುತ್ರನಾದ ಅರ್ಜುನನು ಬಿಳಿಯ ಕುದುರೆಗಳಿಂದ ಕೂಡಿದ ರಥದಲ್ಲಿ ಕುಳಿತು ಇಂದು ರಣಾಂಗಣದಲ್ಲಿ ಸಂಚರಿಸುತ್ತಾನೆ. ನಾನಾದರೂ ಅವನನ್ನು ಮೃತ್ಯುಸಂಕಟಕ್ಕೊಳಪಡಿಸುತ್ತೇನೆ; ಅವನಾದರೂ ನನ್ನನ್ನು ಮೃತ್ಯುಸಂಕಟಕ್ಕೊಳಪಡಿಸುತ್ತಾನೆ. ಆದರೆ– **ಕರ್ಣಸ್ಯಾನ್ತಾದೇತದನ್ತಾಸ್ತು ಸರ್ವೇ**–ಕರ್ಣನ ಅಂತ್ಯವಾಯಿತೆಂದರೆ ಕೌರವಪಕ್ಷದ ಉಳಿದೆಲ್ಲ ಯೋಧರ ಅಂತ್ಯವಾದಂತೆಯೇ ಸರಿ.

**ಅಸ್ವೇದಿನೌ ರಾಜಪುತ್ರಸ್ಯ ಹಸ್ತಾ-**
**ವವೇಪಮಾನೌ ಜಾತಕಿಣೌ ಬೃಹನ್ತೌ ।**
**ದೃಢಾಯುಧಃ ಕೃತಿಮಾನ್ಕ್ಷಿಪ್ರಹಸ್ತೋ**
**ನ ಪಾಣ್ಡವೇಯೇನ ಸಮೋಽಸ್ತಿ ಯೋಧಃ ॥೫೬॥**

ರಾಜಪುತ್ರನಾದ ಅರ್ಜುನನ ಕೈಗಳೆಂದಿಗೂ ಬೆವರುವುದಿಲ್ಲ. ಯಾವುದೇ ಸಂದರ್ಭದಲ್ಲಿಯೂ ನಡುಗುವುದಿಲ್ಲ. ಅವನ ತೋಳುಗಳು ಸುದೀರ್ಘವಾಗಿಯೂ–ಮಾಂಸಲವಾಗಿಯೂ ಇವೆ. ಶಿಂಜಿನಿಯ ಸೆಳೆಯುವಿಕೆ ಯಿಂದಾಗಿ ಅವನ ಕೈಗಳು ಜಡ್ಡುಕಟ್ಟಿಹೋಗಿವೆ. ಅರ್ಜುನನು ದೃಢವಾಗಿ

ಆಯುಧವನ್ನು ಹಿಡಿಯುವವನು. ಅಸ್ತ್ರಶಾಸ್ತ್ರದಲ್ಲಿ ನಿಪುಣನು. ಅತಿಶೀಘ್ರತಾಪೂರ್ವಕವಾಗಿ ಕೈಗಳನ್ನಾಡಿಸತಕ್ಕವನು. ಒಂದೇ ಮಾತಿನಲ್ಲಿ ಹೇಳುವುದಾದರೆ ಅರ್ಜುನನಿಗೆ ಸಮಾನನಾದ ಮತ್ತೊಬ್ಬ ಯೋಧನೇ ಇಲ್ಲ.

**ಗೃಹ್ಣಾತ್ಯನೇಕಾನಪಿ ಕಙ್ಕಪತ್ರಾ-**
**ನೇಕಂ ಯಥಾ ತಾನ್ಪ್ರತಿಯೋಜ್ಯ ಚಾಶು ।**
**ತೇ ಕ್ರೋಶಮಾತ್ರೇ ನಿಪತನ್ತ್ಯಮೋಘಾಃ**
**ಕಸ್ತೇನ ಯೋಧೋಽಸ್ತಿ ಸಮಃ ಪೃಥಿವ್ಯಾಮ್ ॥೫೭॥**

ಮಹಾರಾಜ! ಅರ್ಜುನನು ರಣಹದ್ದಿನ ರೆಕ್ಕೆಗಳುಳ್ಳ ಅನೇಕ ಬಾಣಗಳನ್ನು ಬತ್ತಳಿಕೆಯಿಂದ ತೆಗೆದುಕೊಳ್ಳುತ್ತಾನೆ. ಒಂದೇ ಬಾಣವನ್ನು ಧನುಸ್ಸಿಗೆ ಜೋಡಿಸುವ ರೀತಿಯಲ್ಲಿಯೇ ಆ ಎಲ್ಲ ಬಾಣಗಳೂ ಧನುಸ್ಸಿನಲ್ಲಿ ಒಂದರ ಹಿಂದೆ ಮತ್ತೊಂದು ಬರುವಂತೆ ಬಹಳ ಬೇಗ ಜೋಡಿಸುತ್ತಾನೆ. ಆ ದಿವ್ಯಧನುಸ್ಸಿನಿಂದ ಚ್ಯುತವಾದ ಬಾಣಗಳು ಒಂದು ಕ್ರೋಶದವರೆಗೂ (ಮೂರು ಮೈಲಿಗಳು) ಹೋಗುತ್ತವೆ. ಅಷ್ಟು ದೂರ ಹೋದರೂ ಅವು ವಿಫಲವಾಗುವುದಿಲ್ಲ. ಅಷ್ಟು ದೂರಕ್ಕೂ ಹೋಗಿ ಲಕ್ಷ್ಯವನ್ನು ಭೇದಿಸುತ್ತವೆ. ಇಂತಹ ಅದ್ಭುತಪರಾಕ್ರಮನಾದ ಅರ್ಜುನನಿಗೆ ಸಮಾನನಾದ ಯೋಧನು ಈ ಭೂಮಿಯಲ್ಲಿ ಯಾವನಿದ್ದಾನೆ?

ಅತಿರಥನಾದ, ವೇಗಶಾಲಿಯಾದ ಅರ್ಜುನನು ಶ್ರೀಕೃಷ್ಣನನ್ನು ಸಹಾಯಕನನ್ನಾಗಿ ಪಡೆದು ಖಾಂಡವವನದಲ್ಲಿ ಯಜ್ಞೇಶ್ವರನನ್ನು ತೃಪ್ತಿಪಡಿಸಿದನು. ತುಷ್ಟನಾದ ಯಜ್ಞೇಶ್ವರನಿಂದ ಅಲ್ಲಿಯೇ ಶ್ರೀಕೃಷ್ಣನು ಚಕ್ರವನ್ನೂ–ಸವ್ಯಸಾಚಿಯಾದ ಅರ್ಜುನನು ಗಾಂಡೀವಧನುಸ್ಸನ್ನೂ ಪಡೆದುಕೊಂಡರು. ಇಷ್ಟು ಮಾತ್ರವಲ್ಲ;

**ಶ್ವೇತಾಶ್ವಯುಕ್ತಂ ಚ ಸುಘೋಷಮುಗ್ರಂ**
**ರಥಂ ಮಹಾಬಾಹುರದೀನಸತ್ತ್ವಃ ।**
**ಮಹೇಷುಧೀ ಚಾಕ್ಷಯೇ ದಿವ್ಯರೂಪೇ**
**ಶಸ್ತ್ರಾಣಿ ದಿವ್ಯಾನಿ ಚ ಹವ್ಯವಾಹಾತ್ ॥೫೯॥**

ಮಹಾಬಲನಾದ, ಧೀರನಾದ ಅರ್ಜುನನು ಬಿಳಿಯ ಕುದುರೆಗಳಿಂದ ಕೂಡಿರುವ, ಒಳ್ಳೆಯ ಧ್ವನಿಯನ್ನುಂಟುಮಾಡುವ, ಶತ್ರುಭಯಂಕರವಾದ

ರಥವನ್ನೂ, ದಿವ್ಯವಾದ ಮತ್ತು ಅಕ್ಷಯವಾದ ಎರಡು ಬತ್ತಳಿಕೆಗಳನ್ನೂ, ದಿವ್ಯವಾದ ಅಸ್ತ್ರ-ಶಸ್ತ್ರಗಳನ್ನೂ ಅಗ್ನಿದೇವನಿಂದಲೇ ಪಡೆದುಕೊಂಡನು.

ತಥೇನ್ದ್ರಲೋಕೇ ನಿಜಘಾನ ದೈತ್ಯಾ-
ನಸಂಖ್ಯೇಯಾನ್ಕಾಲಕೇಯಾಂಶ್ಚ ಸರ್ವಾನ್ ।
ಲೇಭೇ ಶಙ್ಖಂ ದೇವದತ್ತಂ ಸ್ಮ ತತ್ರ
ಕೋ ನಾಮ ತೇನಾಭ್ಯಧಿಕಃ ಪೃಥಿವ್ಯಾಮ್ ॥೬೦॥

ಅರ್ಜುನನು ಇಂದ್ರನ ಲೋಕಕ್ಕೂ ಹೋಗಿ ಅಲ್ಲಿ ಬಹುಸಂಖ್ಯಾತರಾದ ಕಾಲಕೇಯರೆಂಬ ದೈತ್ಯರನ್ನು ಸಂಹರಿಸಿದನು. ಅಲ್ಲಿಯೇ ಅವನು ದೇವದತ್ತವೆಂಬ ಶಂಖವನ್ನು ಪಡೆದುಕೊಂಡನು. ಇಂತಹ ಮಹಾಪರಾಕ್ರಮಿಯಾದ ಅರ್ಜುನನಿಗಿಂತಲೂ ಪರಾಕ್ರಮದಲ್ಲಿ ಹೆಚ್ಚು ಅಧಿಕರಾದವರು ಈ ವಿಶ್ವದಲ್ಲಿ ಯಾರಿದ್ದಾರೆ?

ಮಹಾದೇವಂ ತೋಷಯಾಮಾಸ ಯೋऽಸ್ತ್ರೈಃ
ಸಾಕ್ಷಾತ್ಸುಯುದ್ಧೇನ ಮಹಾನುಭಾವಃ ।
ಲೇಭೇ ತತಃ ಪಾಶುಪತಂ ಸುಘೋರಂ
ತ್ರೈಲೋಕ್ಯಸಂಹಾರಕರಂ ಮಹಾಸ್ತ್ರಮ್ ॥೬೧॥

ಮಹಾನುಭಾವನಾದ ಅರ್ಜುನನು ಧರ್ಮಮೂಲವಾದ ಯುದ್ಧದಿಂದ ಸಾಕ್ಷಾತ್ ಮಹಾದೇವನನ್ನೇ ತೃಪ್ತಿಗೊಳಿಸಿದನು. ಸಂತೃಪ್ತನಾದ ಮಹಾದೇವನಿಂದಲೇ ಅರ್ಜುನನು ಮೂರು ಲೋಕಗಳನ್ನೂ ಸಂಹಾರಮಾಡಲು ಸಮರ್ಥವಾದ ಸುಘೋರವಾದ, ಪಾಶುಪತಮಹಾಸ್ತ್ರವನ್ನೂ ಪಡೆದುಕೊಂಡನು.

ಜೊತೆಯಲ್ಲಿಯೇ ಆಗಮಿಸಿದ್ದ ಲೋಕಪಾಲಕರು ಒಬ್ಬೊಬ್ಬರಾಗಿ ಅರ್ಜುನನ ಬಳಿಗೆ ಬಂದು ಅಪ್ರಮೇಯವಾದ (ಅಸಾಧಾರಣಶಕ್ತಿಯುಳ್ಳ) ಮಹಾಸ್ತ್ರಗಳನ್ನು ದಯಪಾಲಿಸಿದರು. ನರಸಿಂಹನಾದ ಅರ್ಜುನನು, ಲೋಕಪಾಲರು ಕೊಟ್ಟ ಮಹಾಸ್ತ್ರಗಳಿಂದಲೇ ಸಂಘಟಿತರಾಗಿ ಬಂದ ಕಾಲಕೇಯರೆಂಬ ಹೆಸರಿನ ಅಸುರರನ್ನು ಬಹಳ ಶೀಘ್ರವಾಗಿ ಸಂಹರಿಸಿದನು. ಇದೂ ಅಲ್ಲದೇ–ಅರ್ಜುನನು ವಿರಾಟನ ಪಟ್ಟಣದಲ್ಲಿ ಗೋಗ್ರಹಣಕ್ಕಾಗಿ

ಸಂಘಟಿತರಾಗಿ ಹೋಗಿದ್ದ ನಮ್ಮೆಲ್ಲರನ್ನೂ ರಥೈಕಸಹಾಯನಾಗಿಯೇ ಜಯಿಸಿದನು. ನಾವು ಹಿಡಿದಿದ್ದ ಗೋವುಗಳನ್ನು ಬಿಡಿಸಿಕೊಂಡು ಹೋದುದು ಮಾತ್ರವಲ್ಲದೇ–ಮಹಾರಥರ ಶರೀರಗಳಲ್ಲಿದ್ದ ಅಮೂಲ್ಯವಾದ ವಸ್ತ್ರಾಭರಣಗಳನ್ನೂ (ಉತ್ತರೆಗಾಗಿ) ತೆಗೆದುಕೊಂಡು ಹೋದನು.

**ತಮೀದೃಶಂ ವೀರ್ಯಗುಣೋಪಪನ್ನಂ**
**ಕೃಷ್ಣದ್ವಿತೀಯಂ ಪರಮಂ ನೃಪಾಣಾಮ್ ।**
**ತಮಾಹ್ವಯನ್ಸಾಹಸಮುತ್ತಮಂ ವೈ**
**ಜಾನೇ ಸ್ವಯಂ ಸರ್ವಲೋಕಸ್ಯ ಶಲ್ಯ ॥೬೪॥**

ಶಲ್ಯ! ಇಂತಹ ವೀರ್ಯದಿಂದಲೂ–ಗುಣದಿಂದಲೂ ಸಂಪನ್ನನಾದ, ಶ್ರೀಕೃಷ್ಣಸಹಾಯನಾದ, ಕ್ಷತ್ರಿಯರಲ್ಲಿ ಸರ್ವಶ್ರೇಷ್ಠನಾದ ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುವ ಈ ಕಾರ್ಯವು ಸಂಪೂರ್ಣಜಗತ್ತಿನಲ್ಲಿಯೇ ಪರಮಸಾಹಸದ ಕಾರ್ಯವಾಗಿದೆಯೆಂಬುದನ್ನು ನಾನು ಸಂಪೂರ್ಣವಾಗಿ ಮನಗಂಡಿದ್ದೇನೆ.

**ಅನನ್ತವೀರ್ಯೇಣ ಚ ಕೇಶವೇನ**
**ನಾರಾಯಣೇನಾಪ್ರತಿಮೇನ ಗುಪ್ತಃ ।**
**ವರ್ಷಾಯುತೈರ್ಯಸ್ಯ ಗುಣಾ ನ ಶಕ್ಯಾ**
**ವಕ್ತುಂ ಸಮೇತೈರಪಿ ಸರ್ವಲೋಕೈಃ ।**
**ಮಹಾತ್ಮನಃ ಶಙ್ಖಚಕ್ರಾಸಿಪಾಣೇ-**
**ರ್ವಿಷ್ಣೋರ್ಜಿಷ್ಣೋರ್ವಸುದೇವಾತ್ಮಜಸ್ಯ ॥೬೫॥**

ಹತ್ತುಸಾವಿರ ವರ್ಷಗಳ ಪರ್ಯಂತವಾಗಿ ಎಲ್ಲ ಲೋಕಗಳ ಎಲ್ಲ ಜನರೂ ಒಟ್ಟಾಗಿ ಸೇರಿಕೊಂಡು ಹೇಳಿದರೂ ಯಾವನ ಅನಂತ ಕಲ್ಯಾಣ ಗುಣಗಳನ್ನು ಪೂರ್ಣವಾಗಿ ಹೇಳಿ ಮುಗಿಸಲು ಸಾಧ್ಯವಾಗುವುದಿಲ್ಲವೋ– ಅಂತಹ ಅಪ್ರಮೇಯನಾದ, ಅನಂತವೀರ್ಯ ನಾದ, ವಿಷ್ಣುಸ್ವರೂಪನಾದ, ವಿಜಯಶೀಲನಾದ, ವಸುದೇವನ ಮಗನಾದ, ಮಹಾತ್ಮನಾದ, ಶಂಖ-ಚಕ್ರ-ಖಡ್ಗಧರನಾದ ಕೇಶವನಿಂದ ಅರ್ಜುನನು ಸತತವಾಗಿ ರಕ್ಷಿಸಲ್ಪಡುತ್ತಿದ್ದಾನೆ.

**ಭಯಂ ಮೇ ವೈ ಜಾಯತೇ ಸಾಧ್ವಸಂ ಚ**
**ದೃಷ್ಟ್ವಾ ಕೃಷ್ಣಾವೇಕರಥೇ ಸಮೇತೌ ।**
**ಅತೀವ ಪಾರ್ಥೋ ಯುಧಿ ಕಾರ್ಮುಕಿಭ್ಯೋ**
**ನಾರಾಯಣಶ್ಚಾಪ್ರತಿ ಚಕ್ರಯುದ್ಧೇ ।**
**ಏವಂ ವಿಧೌ ಪಾಣ್ಡವವಾಸುದೇವೌ**
**ಚಲೇತ್ಸ್ವದೇಶಾದ್ಧಿಮವಾನ್ನ ಕೃಷ್ಣೌ ॥೬೬॥**

ಸಂಘಟಿತರಾದ ಕೃಷ್ಣಾರ್ಜುನರಿಬ್ಬರೂ ಒಂದೇ ರಥದಲ್ಲಿ ಕುಳಿತಿರುವುದನ್ನು ನೋಡಿದೊಡನೆಯೇ ನನಗೆ ಭಯವುಂಟಾಗುತ್ತದೆ. ಎದೆಯು ಡವ-ಡವಗುಟ್ಟುತ್ತದೆ. ಅರ್ಜುನನು ಎಲ್ಲ ಧನುರ್ಧಾರಿಗಳಿಗಿಂತಲೂ ಅಧಿಕನಾದವನು. ಅಂತೆಯೇ ನಾರಾಯಣಸ್ವರೂಪನಾದ ಶ್ರೀಕೃಷ್ಣನಾದರೋ ಚಕ್ರಯುದ್ಧದಲ್ಲಿ ಅಪ್ರತಿಮನಾದವನು. ಹಿಮವಂತನಾದರೂ ತಾನಿರುವ ಸ್ಥಳದಿಂದ ವಿಚಲಿತನಾಗಬಹುದು. ಆದರೆ ಅದ್ಭುತಪರಾಕ್ರಮಿಗಳಾದ ಕೃಷ್ಣಾರ್ಜುನರೆಂದಿಗೂ ತಮ್ಮ ಮರ್ಯಾದೆಗಳಿಂದ ವಿಚಲಿತರಾಗತಕ್ಕವರಲ್ಲ.

ಶಲ್ಯ! ಫಾಲ್ಗುನ-ವಾಸುದೇವರು ಮಹಾಶೂರರು; ಬಲಿಷ್ಠರು; ದೃಢಾಯುಧರು; ಮಹಾರಥರು; ಒಳ್ಳೆಯ ಮೈಕಟ್ಟುಳ್ಳವರು. ಇಂತಹವರನ್ನು ನನ್ನೊಬ್ಬನನ್ನು ಬಿಟ್ಟು ಬೇರೆ ಯಾರು ತಾನೇ ಎದುರಿಸಬಲ್ಲರು? ಅರ್ಜುನನೊಡನೆ ಯುದ್ಧಮಾಡಬೇಕೆಂದು ನನಗೆ ಯಾವ ಅಭಿಲಾಷೆಯಿದ್ದಿತೋ–ಆ ಅಭಿಲಾಷೆಯು ಬಹಳ ಬೇಗ ಪೂರ್ಣವಾಗುತ್ತದೆ; ಸಾವಕಾಶವಾಗುವುದಿಲ್ಲ. ಈಗ ನಡೆಯಲಿರುವ ನಮ್ಮಿಬ್ಬರ ಯುದ್ಧವು ಪರಮಾದ್ಭುತವೂ, ವಿಚಿತ್ರವೂ ಮತ್ತು ಅಸದೃಶವೂ ಆಗಿರುತ್ತದೆ. ಇಂದಿನ ಯುದ್ಧದಲ್ಲಿ ನಾನು ಕೃಷ್ಣಾರ್ಜುನರಿಬ್ಬರನ್ನೂ ಸಂಹರಿಸಿ ಕೆಳಕ್ಕೆ ಕೆಡಹುತ್ತೇನೆ ಅಥವಾ ಅವರಾದರೂ ಇಂದು ನನ್ನನ್ನು ಸಂಹರಿಸುತ್ತಾರೆ."

ಶತ್ರುಹಂತಕನಾದ ಕರ್ಣನು ಶಲ್ಯನೊಡನೆ ಹೀಗೆ ಹೇಳುತ್ತಾ ಮೇಘದಂತೆಯೇ ಗರ್ಜಿಸಿದನು. ಆ ಸಮಯದಲ್ಲಿ ನಿನ್ನ ಮಗನಾದ ದುರ್ಯೋಧನನು ಕರ್ಣನ ಸಮೀಪಕ್ಕೆ ಬಂದು ಅವನನ್ನು ಅಭಿನಂದಿಸಿದನು. ದುರ್ಯೋಧನನೊಡನಿದ್ದ ಕರ್ಣನು ಮಹಾಭುಜರಾದ ಕೃಪ-ಕೃತವರ್ಮ

ರನ್ನೂ, ಗಾಂಧಾರಾಧಿಪತಿಯಾದ, ಸಹೋದರರಿಂದ ಕೂಡಿದ್ದ ಶಕುನಿಯನ್ನೂ, ಅಶ್ವತ್ಥಾಮನನ್ನೂ, ತನ್ನ ತಮ್ಮನನ್ನೂ, ಪದಾತಿಸೈನಿಕರನ್ನೂ, ಗಜಾಶ್ವಸೈನಿಕರನ್ನೂ ಕುರಿತು ಹೇಳಿದನು:

ನಿರುಧ್ಯತಾಭಿದ್ರವತಾಚ್ಯುತಾರ್ಜುನೌ
ಶ್ರಮೇಣ ಸಂಯೋಜಯತಾಶು ಸರ್ವಶಃ ।
ಯಥಾ ಭವದ್ಭಿರ್ಭೃಶವಿಕ್ಷಿತಾವುಭೌ
ಸುಖೇನ ಹನ್ಯಾಮಹಮದ್ಯ ಭೂಮಿಪಾಃ ॥೭೨॥

"ಭೂಮಿಪಾಲರೇ! ಕೃಷ್ಣಾರ್ಜುನರನ್ನು ತಡೆದು ನಿಲ್ಲಿಸಿರಿ. ಅವರ ಮೇಲೆ ದಾಳಿಮಾಡಿರಿ. ಎಲ್ಲ ಕಡೆಗಳಿಂದಲೂ ಬಾಣಗಳ ಮಳೆಗರೆಯುತ್ತಾ ಬಹಳ ಬೇಗ ಅವರನ್ನು ಆಯಾಸಗೊಳಿಸಿರಿ. ನಿಮ್ಮಿಂದ ಕ್ಷತ-ವಿಕ್ಷತರಾಗುವ ಅವರಿಬ್ಬರನ್ನೂ ಬಹಳ ಸುಲಭವಾಗಿ ಈಗಲೇ ಸಂಹರಿಸುತ್ತೇನೆ."

ಮಹಾರಾಜ! ಮಹಾವೀರರಾದ ಕೌರವಮಹಾರಥರು–'ಹಾಗೆಯೇ ಆಗಲಿ'–ಎಂದು ಪ್ರತ್ಯುತ್ತರವನ್ನಿತ್ತು, ಅರ್ಜುನನನ್ನು ಸಂಹರಿಸುವ ಇಚ್ಛೆಯುಳ್ಳವರಾಗಿ ತ್ವರೆಯಿಂದ ಅರ್ಜುನನ ಕಡೆಗೆ ಹೊರಟುಬಿಟ್ಟರು. ಸೇನಾಪತಿಯಾದ ಕರ್ಣನ ನಿರ್ದೇಶದಂತೆ ನಡೆಯುವ ಕುರುವೀರರು ಅರ್ಜುನನನ್ನು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದರು. ಅಪಾರವಾದ ಜಲರಾಶಿಯುಳ್ಳ ಸಮುದ್ರವು ಬಹುಸಂಖ್ಯಾತವಾದ ನದೀ-ನದಗಳನ್ನೂ ನುಂಗಿಹಾಕುವಂತೆ–ಅರ್ಜುನನು ತನ್ನನ್ನು ಎದುರಿಸಿ ಯುದ್ಧಮಾಡಲು ಬಂದ ಎಲ್ಲ ಕೌರವಯೋಧರನ್ನೂ ನುಂಗಿಬಿಟ್ಟನು. ಅರ್ಜುನನು ಶ್ರೇಷ್ಠವಾದ ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನ ಮಾಡುವುದನ್ನಾಗಲೀ, ಬಿಡುತ್ತಿದ್ದುದನ್ನಾಗಲೀ ಶತ್ರುಪಕ್ಷದವರು ಕಾಣುತ್ತಲೇ ಇರಲಿಲ್ಲ. ಆದರೆ ಅಶ್ವ-ಗಜ-ಪದಾತಿಸೈನಿಕರು ಅರ್ಜುನನ ಧನುಸ್ಸಿನಿಂದ ವಿಮುಕ್ತವಾದ ಬಾಣಗಳಿಂದ ಸೀಳಲ್ಪಟ್ಟು ಹತರಾಗಿ ತೊಪ-ತೊಪನೆ ಕೆಳಕ್ಕೆ ಬೀಳುತ್ತಿದ್ದರು. (ಹೀಗೆ ಬೀಳುತ್ತಿದ್ದುದು ಮಾತ್ರವೇ ಶತ್ರುಗಳಿಗೆ ಕಾಣುತ್ತಿದ್ದಿತು.)

ಶರಾರ್ಚಿಷಂ ಗಾಣ್ಡಿವಚಾರುಮಣ್ಡಲಂ
ಯುಗಾನ್ತಸೂರ್ಯಪ್ರತಿಮಾನತೇಜಸಮ್ ।

ನ ಕೌರವಾಃ ಶೇಕುರುದೀಕ್ಷಿತುಂ ಜಯಂ
ಯಥಾ ರವಿಂ ವ್ಯಾಧಿತಚಕ್ಷುಷೋ ಜನಾಃ ॥೭೬॥

ಆ ಸಮಯದಲ್ಲಿ ಅರ್ಜುನನು ಪ್ರಳಯಕಾಲದ ಸೂರ್ಯನಂತೆಯೇ ಪ್ರಖರವಾದ ತೇಜಸ್ಸಿನಿಂದ ವಿರಾಜಿಸುತ್ತಿದ್ದನು. ಅವನು ಬಿಡುತ್ತಿದ್ದ ಬಾಣ



ಗಳು ಸೂರ್ಯನ ಕಿರಣಗಳಂತೆ ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿದ್ದುವು. ಅನವರತವಾಗಿ ಸೆಳೆಯಲ್ಪಡುತ್ತಿದ್ದ ಗಾಂಡೀವಧನುಸ್ಸು ಸರ್ವದಾ ಮಂಡಲಾಕಾರವಾಗಿಯೇ ಇರುತ್ತಿದ್ದು ಸೂರ್ಯನ ಮಂಡಲದಂತೆಯೇ ಕಾಣುತ್ತಿದ್ದಿತು. ಕಣ್ಣುಬೇನೆಯಿಂದ ನರಳುತ್ತಿರುವ ಜನರಿಗೆ ಸೂರ್ಯನನ್ನು ನೋಡಲು ಶಕ್ಯ

ವಾಗದಂತೆ–ಕೌರವರಿಗೆ ಸೂರ್ಯಸದೃಶನಾದ ಅರ್ಜುನನನ್ನು ಕಣ್ಣೆತ್ತಿನೋಡಲೂ ಸಾಧ್ಯವಾಗಲಿಲ್ಲ.

ಸತತವಾದ ಸೆಳೆಯುವಿಕೆಯಿಂದ ಪೂರ್ಣಮಂಡಲಾಕಾರವಾಗಿ ಮಾಡಲ್ಪಟ್ಟ ಗಾಂಡೀವವನ್ನು ಧರಿಸಿದ್ದ ಪಾರ್ಥನು ಅಟ್ಟಹಾಸದಿಂದ ನಗುತ್ತಾ, ಕೌರವಮಹಾರಥರಿಂದ ಬಿಡಲ್ಪಡುತ್ತಿದ್ದ ಶ್ರೇಷ್ಠವಾದ ಬಾಣಗಳನ್ನು ಕತ್ತರಿಸುತ್ತಾ, ಬಾಣಗಳ ಸಮೂಹಗಳಿಂದ ಶತ್ರುಗಳನ್ನು ಎಡೆಬಿಡದೆ ಪ್ರಹರಿಸುತ್ತಿದ್ದನು.

**ಯಥೋಗ್ರರಶ್ಮಿಃ ಶುಚಿಶಕ್ರಮಧ್ಯಗಃ**
**ಸುಖಂ ವಿವಸ್ವಾನ್ಹರತೇ ಜಲೌಘಾನ್ ।**
**ತಥಾರ್ಜುನೋ ಬಾಣಗಣಾನ್ನಿರಸ್ಯ**
**ದದಾಹ ಸೇನಾಂ ತವ ಪಾರ್ಥಿವೇನ್ದ್ರ ॥೭೮॥**

ಪಾರ್ಥಿವೇಂದ್ರನೇ! ಯಾವ ರೀತಿಯಲ್ಲಿ ಜ್ಯೇಷ್ಠ ಮತ್ತು ಆಷಾಢ ಮಾಸಗಳ ಮಧ್ಯಭಾಗದಲ್ಲಿರುವ ಸೂರ್ಯನು ತನ್ನ ಪ್ರಖರವಾದ ಕಿರಣ ಗಳಿಂದ ಭೂಮಿಯ ಮೇಲಿರುವ ನೀರಿನ ರಾಶಿಯನ್ನು ಅನಾಯಾಸವಾಗಿ ಹೀರಿಕೊಳ್ಳುತ್ತಾನೆಯೋ–ಅದೇ ರೀತಿಯಲ್ಲಿ ಅರ್ಜುನನು ಬಾಣಗಳ ಸಮೂಹಗಳನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಾ ನಿನ್ನ ವಿಶಾಲ ಸೈನ್ಯವನ್ನೂ ದಹಿಸಿಬಿಟ್ಟನು. ಆ ಸಮಯದಲ್ಲಿ ಮಹಾರಥರಾದ ಕೃಪರು ಬಾಣಗಳನ್ನು ಸುರಿಸುತ್ತಾ ಅರ್ಜುನನನ್ನು ಆಕ್ರಮಿಸಿದರು. ಅದೇ ರೀತಿ ಯಲ್ಲಿ ಭೋಜವಂಶೀಯನಾದ ಕೃತವರ್ಮನೂ, ನಿನ್ನ ಮಗನಾದ ದುರ್ಯೋಧನನೂ, ಮಹಾರಥನಾದ ಅಶ್ವತ್ಥಾಮನೂ–ನೀರಿನ ಧಾರೆಗಳು ಪರ್ವತವನ್ನು ಮುಚ್ಚಿಬಿಡುವಂತೆ–ಬಾಣಗಳ ಸಮೂಹಗಳಿಂದ ಅರ್ಜುನ ನನ್ನು ಮುಚ್ಚಿಬಿಟ್ಟರು. ಸಂಹರಿಸುವ ಇಚ್ಛೆಯುಳ್ಳ ಶತ್ರುವೀರರಿಂದ ಪ್ರಯತ್ನಪೂರ್ವಕವಾಗಿ ಬಿಡಲ್ಪಟ್ಟಿದ್ದ ಶ್ರೇಷ್ಠವಾದ ಬಾಣಗಳೆಲ್ಲವನ್ನೂ ಯುದ್ಧಕುಶಲನಾದ ಪಾಂಡವನು ನಿಶಿತವಾದ ಬಾಣಗಳಿಂದ ತುಂಡು-ತುಂಡು ಗಳಾಗಿ ಕತ್ತರಿಸಿದನು. ಅನಂತರ ತನ್ನ ಪ್ರತಿಕಕ್ಷಿಗಳೆಲ್ಲರನ್ನೂ ಮೂರು-ಮೂರು ಬಾಣಗಳಿಂದ ವಕ್ಷಃಸ್ಥಳಗಳಲ್ಲಿ ಪ್ರಹರಿಸಿದನು. ಸತತವಾಗಿ

ಗಾಂಡೀವಧನುಸ್ಸಿನ ಸೆಳೆಯುವಿಕೆಯಿಂದ ಪೂರ್ಣಮಂಡಲ (ಪರಿವೇಷ) ವನ್ನು ಹೊಂದಿದವನಂತೆ ಕಾಣುತ್ತಿದ್ದ ಭಾಸ್ಕರರೂಪಿಯಾದ ಅರ್ಜುನನು ಶತ್ರುಗಳನ್ನು ಬಾಣರೂಪವಾದ ಪ್ರಖರಕಿರಣಗಳಿಂದ ಬಹಳವಾಗಿ ಸಂತಾಪಗೊಳಿಸುತ್ತಾ, ಜ್ಯೇಷ್ಠಾಷಾಢಮಾಸಗಳ ಮಧ್ಯಭಾಗದಲ್ಲಿ ವರ್ತುಲಾಕಾರದ ಪ್ರಭೆಯಿಂದ ಕೂಡಿರುವ ಸೂರ್ಯನಂತೆಯೇ ಪ್ರಕಾಶಿಸಿದನು.

ಅನಂತರ ಅಶ್ವತ್ಥಾಮನು ಶ್ರೇಷ್ಠವಾದ ಹತ್ತು ಬಾಣಗಳಿಂದ ಧನಂಜಯನನ್ನು ಪ್ರಹರಿಸಿದನು. ಮೂರು ಬಾಣಗಳಿಂದ ಶ್ರೀಕೃಷ್ಣನನ್ನೂ, ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನೂ ಪ್ರಹರಿಸಿ, ಧ್ವಜಪಟದ ಮೇಲಿದ್ದ ವಾನರನನ್ನು ಬಾಣಗಳಿಂದಲೂ–ಶ್ರೇಷ್ಠವಾದ ನಾರಾಚ ಗಳಿಂದಲೂ ಮುಚ್ಚಿದನು. ಅದಕ್ಕೆ ಪ್ರತಿಯಾಗಿ ಅರ್ಜುನನು ಮೂರು ಬಾಣಗಳಿಂದ ಅಶ್ವತ್ಥಾಮನು ಹಿಡಿದಿದ್ದ, ಥಳ-ಥಳಿಸುತ್ತಿದ್ದ ಧನುಸ್ಸನ್ನು ಕತ್ತರಿಸಿ ಕ್ಷುರವೆಂಬ ಬಾಣಗಳಿಂದ ಅಶ್ವತ್ಥಾಮನ ಸಾರಥಿಯ ತಲೆಯನ್ನೂ ಕತ್ತರಿಸಿದನು. ನಾಲ್ಕು ಬಾಣಗಳಿಂದ ರಥದ ನಾಲ್ಕು ಕುದುರೆಗಳನ್ನೂ ಸಂಹರಿಸಿ ಪುನಃ ಮೂರು ಬಾಣಗಳಿಂದ ರಥದ ಮೇಲಿದ್ದ ಧ್ವಜವನ್ನೂ ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಅದರಿಂದ ರೋಷಪೂರ್ಣನಾದ ಅಶ್ವತ್ಥಾಮನು ಮಣಿ-ವಜ್ರ-ಸುವರ್ಣಗಳಿಂದ ಸಮಲಂಕೃತವಾದ, ತಕ್ಷಕನೆಂಬ ಸರ್ಪದ ಹೆಡೆಯಂತೆ ಪ್ರಕಾಶಮಾನವಾಗಿ ಕಾಣುತ್ತಿದ್ದ, ಬಹುಮೂಲ್ಯವಾದ ಮತ್ತೊಂದು ಧನುಸ್ಸನ್ನು–ಪರ್ವತದ ತಪ್ಪಲಿನಿಂದ ಮಹಾಸರ್ಪವನ್ನು ಕೈಗೆತ್ತಿಕೊಳ್ಳುವಂತೆ–ಕೈಗೆತ್ತಿಕೊಂಡನು. ಅಧಿಕವಾದ ಗುಣಗಳಿಂದ ಯುಕ್ತನಾಗಿದ್ದ ಅಶ್ವತ್ಥಾಮನು ಅರ್ಜುನನಿಂದ ಕತ್ತರಿಸಲ್ಪಟ್ಟಿದ್ದ ಧನುಸ್ಸನ್ನು ನೆಲದಮೇಲೆ ಬಿಸುಟು, ನೂತನ ಧನುಸ್ಸಿಗೆ ಶಿಂಜಿನಿಯನ್ನು ಜೋಡಿಸಿ ಅಪರಾಜಿತರಾದ, ನರಶ್ರೇಷ್ಠರಾದ ಕೃಷ್ಣಾರ್ಜುನರನ್ನು ಶ್ರೇಷ್ಠವಾದ ಬಾಣಗಳಿಂದ ಬಹಳ ಹತ್ತಿರದಿಂದಲೇ ಮರ್ದನಮಾಡಲು ಉಪಕ್ರಮಿಸಿದನು. ಮಹಾರಥರಾದ, ರಣಮುಖದಲ್ಲಿದ್ದ ಕೃಪ-ಕೃತವರ್ಮ-ದುರ್ಯೋಧನರು, ಅಶ್ವತ್ಥಾಮನನ್ನು ಬೆಂಬಲಿಸುತ್ತಾ–ಸೂರ್ಯದೇವನನ್ನು ಮೇಘಗಳು ಆಕ್ರಮಿಸುವಂತೆ– ಅನೇಕವಾದ ಬಾಣಗಳ ಮೂಲಕವಾಗಿ ಅರ್ಜುನನನ್ನು ಆಕ್ರಮಿಸಿದರು.

ಪರಾಕ್ರಮದಲ್ಲಿ ಸಾವಿರ ತೋಳುಗಳ ಕಾರ್ತವೀರ್ಯಾರ್ಜುನನಿಗೆ ಸಮಾನನಾದ ಅರ್ಜುನನು ನಿಶಿತವಾದ ಬಾಣಗಳಿಂದ, ಬಾಣಗಳಿಂದ ಕೂಡಿದ ಕೃಪರ ಧನುಸ್ಸನ್ನೂ, ಕುದುರೆಗಳನ್ನೂ, ಧ್ವಜವನ್ನೂ ಸಾರಥಿಯನ್ನೂ–ಹಿಂದೆ ವಜ್ರಧರನಾದ ಇಂದ್ರನು ಬಲಿಚಕ್ರವರ್ತಿಯ ಧನುರ್ಬಾಣಾಶ್ವ-ಧ್ವಜ-ಸಾರಥಿಗಳನ್ನು ಧ್ವಂಸಮಾಡಿದಂತೆ–ಧ್ವಂಸಮಾಡಿದನು. ಕೃಪರ ಆಯುಧಗಳೆಲ್ಲವೂ ಪಾರ್ಥನ ನಿಶಿತವಾದ ಬಾಣಗಳಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುವು. ಕೃಪರ ರಥದ ಮೇಲಿದ್ದ ಧ್ವಜವೂ ತುಂಡಾಗಿ ಕೆಳಕ್ಕೆ ಬಿದ್ದಿತು. ಅರ್ಜುನನು ಹಿಂದೆ ಭೀಷ್ಮನನ್ನು ಅಸಂಖ್ಯಾತವಾದ ಬಾಣಗಳಿಂದ ಆಚ್ಛಾದಿಸಿದಂತೆ–ಈಗ ಕೃಪರನ್ನೂ ಸಾವಿರಾರು ಬಾಣಗಳಿಂದ ಬಂಧಿಸಿಬಿಟ್ಟನು. ಬಳಿಕ ಅರ್ಜುನನು ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದ ನಿನ್ನ ಮಗನ ಧ್ವಜ-ಧನುಸ್ಸುಗಳನ್ನು ಕತ್ತರಿಸಿದನು. ಕೃತವರ್ಮನ ಸುಂದರವಾಗಿದ್ದ ಕುದುರೆಗಳನ್ನು ಸಂಹರಿಸಿದನು. ಅನಂತರ ಪ್ರತಾಪವಂತನಾದ ಅರ್ಜುನನು ಕೃತವರ್ಮನ ರಥದ ಮೇಲಿದ್ದ ಧ್ವಜವನ್ನೂ ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಮೂವರು ಮಹಾವೀರರನ್ನೂ ಬಾಣಗಳ ಪ್ರಹಾರಗಳಿಂದ ಹಿಂದಕ್ಕೆ ಸರಿಸಿದನಂತರ ಅರ್ಜುನನು ಬಹಳ ತ್ವರೆಯಿಂದ ಸಾರಥ್ಯಶ್ವಧನುರ್ಧ್ವಜಗಳಿಂದ ಕೂಡಿದ ರಥಗಳನ್ನೂ ಗಜಾಶ್ವಸೈನಿಕರನ್ನೂ ಸಂಹರಿಸಲು ಉಪಕ್ರಮಿಸಿದನು. ಪ್ರವಾಹದ ವೇಗದಿಂದ ಒಡೆದು ಹೋದ ಅಣೆಕಟ್ಟೆಯೋಪಾದಿಯಲ್ಲಿ–ನಿನ್ನ ವಿಶಾಲವಾದ ಸೈನ್ಯವು ಸರ್ವತ್ರ ಚೆಲ್ಲಾಪಿಲ್ಲಿಯಾಯಿತು.

ಅನಂತರ ಶ್ರೀಕೃಷ್ಣನು ವ್ಯಾಕುಲಗೊಂಡಿದ್ದ ಶತ್ರುಯೋಧರನ್ನು ತನ್ನ ರಥದ ಬಲಭಾಗಕ್ಕೆ ಬಿಟ್ಟುಕೊಂಡನು. ವೃತ್ರಾಸುರನನ್ನು ಸಂಹರಿಸುವ ಸಲುವಾಗಿ ಮುನ್ನುಗ್ಗಿದ ಇಂದ್ರನನ್ನು ವೃತ್ರಾಸುರನ ಅನುಯಾಯಿಗಳು ತಡೆದು ನಿಲ್ಲಿಸಿದಂತೆ–ಕೌರವಸೈನ್ಯವನ್ನು ಬಲಕ್ಕೆ ಬಿಟ್ಟುಕೊಂಡು ಕರ್ಣನನ್ನು ಸಂಹರಿಸುವ ಇಚ್ಛೆಯಿಂದ ಮುನ್ನುಗ್ಗುತ್ತಿದ್ದ ಅರ್ಜುನನನ್ನು ಯುದ್ಧಾಕಾಂಕ್ಷಿಗಳಾದ ಇತರ ಯೋಧರು, ಏರಿಸಲ್ಪಟ್ಟಿದ್ದ ಧ್ವಜಗಳಿಂದ ಕೂಡಿದ್ದ ಸುಸಜ್ಜಿತವಾಗಿದ್ದ ರಥಗಳಲ್ಲಿ ಕುಳಿತು ಪುನಃ ಆಕ್ರಮಿಸಿದರು. ಧನಂಜಯನನ್ನು ಪುನಃ ಎದುರಿಸಲು ಹೋಗುತ್ತಿದ್ದ ಶತ್ರುಪಕ್ಷದ ಯೋಧ

ರನ್ನು ಮಹಾರಥರಾದ ಶಿಖಂಡಿ-ಸಾತ್ಯಕಿ-ನಕುಲ-ಸಹದೇವರು ಮುಂದೆ ಹೋಗಿ ತಡೆದು ನಿಲ್ಲಿಸಿ, ನಿಶಿತವಾದ ಬಾಣಗಳಿಂದ ಅವರೆಲ್ಲರನ್ನೂ ಕ್ಷತ-ವಿಕ್ಷತಗೊಳಿಸುತ್ತಾ, ಭಯಂಕರವಾಗಿ ಗರ್ಜನೆಮಾಡಿದರು. ಅನಂತರ ಯುದ್ಧದಲ್ಲಿ ತೊಡಗಿದ್ದ ಕ್ರುದ್ಧರಾಗಿದ್ದ ಕೌರವಯೋಧರು ಶೀಘ್ರವಾಗಿ ಹೋಗುವ ಮತ್ತು ಹರಿತವಾಗಿದ್ದ ಬಾಣಗಳ ಮೂಲಕವಾಗಿ–ಹಿಂದೆ ದೇವತೆಗಳೊಡನೆ ಅಸುರರು ಯುದ್ಧಮಾಡಿದಂತೆ ಸೃಂಜಯರೊಡನೆ ಪರಸ್ಪರವಾಗಿ ಬಡಿದಾಡುತ್ತಿದ್ದರು. ಪರಂತಪನೇ! ವಿಜಯೇಚ್ಛುಗಳಾಗಿದ್ದ ಅಥವಾ ಸ್ವರ್ಗಕ್ಕೆ ಹೋಗಲು ಉತ್ಸಾಹವುಳ್ಳವರಾಗಿದ್ದ ಗಜಾಶ್ವ-ರಥಯೋಧರು ಒಬ್ಬರು ಮತ್ತೊಬ್ಬರ ಮೇಲೆ ರಭಸದಿಂದ ಬೀಳುತ್ತಿದ್ದರು. ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದರು. ಸುಪ್ರಮುಕ್ತವಾದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಬಲವಾಗಿ ಪ್ರಹರಿಸುತ್ತಿದ್ದರು. ಮಹಾತ್ಮರಾದ ಯೋಧಶ್ರೇಷ್ಠರು ಪರಸ್ಪರವಾಗಿ ಬಿಡುತ್ತಿದ್ದ ಬಾಣಗಳಿಂದ ರಣಾಂಗಣದ ಸುತ್ತಲೂ ಅಂಧಕಾರವು ಕವಿಯಿತು. ದಿಕ್ಕುಗಳೂ, ಉಪದಿಕ್ಕುಗಳೂ ಮತ್ತು ಸೂರ್ಯನ ಪ್ರಭೆಯೂ ಶರಾಂಧಕಾರದಿಂದ ಮುಚ್ಚಿಹೋದುವು.”

೭೯ನೆಯ ಅಧ್ಯಾಯವು ಮುಗಿಯಿತು.

೮೦ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನು ಕೌರವರ ಸೈನ್ಯವನ್ನು ನಾಶಗೊಳಿಸಿ ಮುನ್ನುಗ್ಗಿದುದು

ಸಂಜಯನು ಮುಂದುವರಿದು ಹೇಳುತ್ತಾನೆ:

“ಮಹಾರಾಜ! ಮಹಾಬಲಿಷ್ಠರಾದ ಕುರುಯೋಧರು ಭೀಮಸೇನನನ್ನು ಆಕ್ರಮಿಸಿದ್ದರು. ಆ ಸಮಯದಲ್ಲಿ ಏಕಾಕಿಯಾಗಿದ್ದ ಭೀಮಸೇನನು ಆ ಸೈನ್ಯಸಾಗರದಲ್ಲಿ ಮುಳುಗಿಯೇಹೋಗುತ್ತಾನೆಯೋ ಎಂಬಂತೆ ಕಾಣುತ್ತಿದ್ದನು. ಅವನನ್ನು ಶತ್ರುಸೈನ್ಯಸಾಗರದಿಂದ ಉದ್ಧರಿಸುವ ಇಚ್ಛೆಯಿಂದ ಧನಂಜಯನು ಕರ್ಣನ ಸೈನ್ಯವನ್ನು ಬಿಟ್ಟು ಭೀಮನನ್ನು ಆಕ್ರಮಿಸಿದ್ದವರನ್ನು ನಿಶಿತವಾದ ಬಾಣಗಳಿಂದ ಯಮಲೋಕಕ್ಕೆ ಕಳುಹಿಸಿದನು. ಅರ್ಜುನನು ಬಿಟ್ಟ ಬಾಣಗಳ ಸಮೂಹಗಳಲ್ಲಿ ಕೆಲವು ಬಾಣಗಳು

ಆಕಾಶವನ್ನು ಆಶ್ರಯಿಸಿ ಕಾಣಿಸಿಕೊಂಡುವು. ಉಳಿದ ಬಾಣಗಳು ನಿನ್ನ ಸೈನ್ಯವನ್ನು ಧ್ವಂಸಮಾಡುತ್ತಿದ್ದುವು. ಮಹಾಬಾಹುವಾದ ಧನಂಜಯನು–ಪಕ್ಷಿಗಳ ಸಮೂಹಗಳು ಸಾಲು-ಸಾಲಾಗಿ ಹೋಗುವಂತೆ–ಆಕಾಶವನ್ನು ಬಾಣಗಳಿಂದಲೇ ತುಂಬುತ್ತಾ ಕುರುಯೋಧರಿಗೆ ಯಮಪ್ರಾಯನಾದನು. ಪಾರ್ಥನು ಭಲ್ಲಗಳಿಂದಲೂ, ಕ್ಷುರಪ್ರಗಳಿಂದಲೂ, ವಿಶುದ್ಧವಾದ ನಾರಾಚಗಳಿಂದಲೂ ಕುರುಯೋಧರ ಅಂಗಾಂಗಗಳನ್ನು ಛಿನ್ನ-ಭಿನ್ನ ಮಾಡುತ್ತಾ ಅವರ ಶಿರಸ್ಸುಗಳನ್ನೂ ಕತ್ತರಿಸುತ್ತಿದ್ದನು. ಅರ್ಜುನನ ನಿಶಿತವಾದ ಬಾಣಗಳಿಂದ ಅನೇಕಯೋಧರು ಭಿನ್ನವಾದ ಶರೀರವುಳ್ಳವರಾದರು. ಅನೇಕಯೋಧರ ಕವಚಗಳು ಕಡಿದುಹೋಗುತ್ತಿದ್ದುವು. ಹಲವಾರು ಯೋಧರ ಶಿರಸ್ಸುಗಳೂ ಕತ್ತರಿಸಲ್ಪಟ್ಟಿದ್ದುವು. ಕೆಲವು ಯೋಧರು ಅಸುನೀಗಿ ರಣಾಂಗಣದಲ್ಲಿ ಬಿದ್ದುಹೋಗಿದ್ದರು; ಮತ್ತೆ ಕೆಲವರು ಬೀಳುವುದರಲ್ಲಿದ್ದರು. (ತತ್ತರಿಸುತ್ತಿದ್ದರು.) ಇಂತಹ ಯೋಧರ ಶವಗಳಿಂದ ರಣಾಂಗಣವು ತುಂಬಿಹೋಗಿದ್ದಿತು. ಪುನರಾವರ್ತಿತವಾದ ಧನಂಜಯನ ಬಾಣಗಳಿಂದ ಭಿನ್ನವಾದ ಮತ್ತು ವಿಧ್ವಸ್ತವಾದ ಅಂಗಾಂಗಗಳಿಂದಲೂ ಮತ್ತು ಅಂಗಾವಯವಗಳಿಂದಲೂ ಕೂಡಿದ್ದ ರಥಾಶ್ವ-ಗಜಗಳಿಂದ ಆ ರಣಾಂಗಣವು ಆಚ್ಛಾದಿತವಾಯಿತು.

ದಾಟಲು ಅಸಾಧ್ಯವಾದ ಮಹಾವೈತರಣೀನದಿಯಂತೆ ರಣ ಭೂಮಿಯು ದಾಟಲು ಅಸಾಧ್ಯವಾಗಿದ್ದಿತು. ಹಳ್ಳ-ತಿಟ್ಟುಗಳಿಂದ ಕೂಡಿದ್ದಿತು. ಮಹಾಘೋರವಾಗಿದ್ದಿತು. ಅದನ್ನು ನೋಡುವುದೂ ಕಷ್ಟಸಾಧ್ಯವಾಗಿದ್ದಿತು. ಅನೇಕ ಯೋಧರ ರಥಗಳ ಈಷಾದಂಡಗಳೂ, ಚಕ್ರಗಳೂ, ಅಚ್ಚುಮರಗಳೂ ಮುರಿದುಹೋಗಿದ್ದುವು. ಕೆಲವು ರಥಗಳಲ್ಲಿ ಕುದುರೆಗಳೇ ಇರಲಿಲ್ಲ. ಕೆಲವು ರಥಗಳಲ್ಲಿ ಸೂತರಿದ್ದರು. ಇಂತಹ ಅನೇಕ ರಥಗಳಿಂದ ರಣಭೂಮಿಯು ವ್ಯಾಪ್ತವಾಗಿದ್ದಿತು. ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದ್ದ ಗಜಸೈನ್ಯವು ಶ್ರೇಷ್ಠದರ್ಜೆಯದಾಗಿದ್ದಿತು. ಆ ಆನೆಗಳು ನಿತ್ಯವೂ ಮದಿಸಿಯೇ ಇರುತ್ತಿದ್ದುವು. ಕವಚಗಳನ್ನು ಧರಿಸಿದ್ದುವು. ಮಂಗಳಮಯವಾದ ಲಕ್ಷಣಗಳಿಂದ ಕೂಡಿದ್ದುವು. ಅವುಗಳ ಮೇಲೆ ಕುಳಿತಿದ್ದ

ಯೋಧರೂ ಸುವರ್ಣಮಯವಾದ ಕವಚಗಳನ್ನೂ ಮತ್ತು ಆಭರಣಗಳನ್ನೂ ತೊಟ್ಟಿದ್ದರು. ಕ್ರೂರಸ್ವಭಾವದ ಮಾವಟಿಗರು ಆ ಆನೆಗಳನ್ನು ತಮ್ಮ ಹಿಮ್ಮಡಿಗಳಿಂದಲೂ–ಅಂಗುಷ್ಠಗಳಿಂದಲೂ ತಿವಿದು ಅರ್ಜುನನ ಮೇಲೆ ಬೀಳಿಸುತ್ತಿದ್ದರು. ಇಂತಹ ನಾಲ್ಕು ನೂರು ಆನೆಗಳನ್ನು ಅರ್ಜುನನು ಸಂಹರಿಸಿದನು. ಗಜಯೋಧರೊಡನೆ ಕೆಳಕ್ಕೆ ಬಿದ್ದ ಆ ಆನೆಗಳು–ಜೀವಜಂತು ಗಳೊಡನೆ ಕೆಳಕ್ಕೆ ಬಿದ್ದಿರುವ ಪರ್ವತಶಿಖರಗಳಂತೆಯೇ ಕಾಣುತ್ತಿದ್ದುವು. ಇಂತಹ ಆನೆಗಳಿಂದ ರಣಾಂಗಣವು ವ್ಯಾಪ್ತವಾಗಿದ್ದಿತು. ಸೂರ್ಯನು ತನ್ನನ್ನು ಕವಿದಿರುವ ಮೋಡಗಳನ್ನು ಚದುರಿಸುತ್ತಾ ಅವುಗಳಿಂದ ಹೊರಬರು ವಂತೆ–ಮೇಘಗಳಂತೆಯೇ ಇದ್ದ, ಮದೋದಕವನ್ನು ಸುರಿಸುತ್ತಿದ್ದ, ಶ್ರೇಷ್ಠ ವಾದ ಆನೆಗಳ ಸೈನ್ಯವನ್ನು ಭೇದಿಸಿಕೊಂಡು ಅರ್ಜುನನು ಮುನ್ನಡೆದನು. ಹತರಾದ ನರಾಶ್ವ-ಗಜಸೈನಿಕರಿಂದಲೂ, ಭಿನ್ನವಾದ ರಥಗಳಿಂದಲೂ ಶಸ್ತ್ರ-ಕವಚ-ಯಂತ್ರಗಳಿಂದಲೂ ವಿಹೀನರಾಗಿ ಅಸುವನ್ನು ತೊರೆದ ರಣಧೀರ ರಿಂದಲೂ, ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಆಯುಧಗಳಿಂದಲೂ ಮಾರ್ಗವು ಮುಚ್ಚಿಹೋಯಿತು. ಮೇಘವು ಘೋರವಾದ ಸಿಡಿಲನ್ನು ಚಿಡಿ-ಪಡಿ ಗುಟ್ಟಿಸುವಂತೆ ಅರ್ಜುನನು ಭಯಂಕರವಾದ ಧ್ವನಿಯಿಂದ ಕೂಡಿದ್ದ, ವಿಶಾಲವಾದ ಗಾಂಡೀವಧನುಸ್ಸನ್ನು ಟೇಂಕರಿಸಿದನು. ಚಂಡಮಾರುತದಿಂದ ಭಗ್ನವಾಗಿಹೋದ ಮಹಾಸಾಗರದ ಮಧ್ಯದಲ್ಲಿರುವ ಮಹಾನೌಕೆಯಂತೆ–ಅರ್ಜುನನ ಬಾಣಗಳಿಂದ ಪ್ರಹೃತವಾದ ಕೌರವರ ಸೈನ್ಯವು ಭಿನ್ನವಾಗಿ ಹೋಯಿತು. ಅರ್ಜುನನ ಗಾಂಡೀವಧನುಸ್ಸಿನಿಂದ ಚ್ಯುತವಾದ, ಪ್ರಾಣಾಪ ಹಾರಿಗಳಾದ–ಕೊಳ್ಳಿ, ಬಾಲಚುಕ್ಕಿ, ಮತ್ತು ಮಿಂಚುಗಳಿಗೆ ಸಮಾನವಾಗಿ ಪ್ರಕಾಶಿಸುತ್ತಿದ್ದ ಅನೇಕ ಬಗೆಯ ಬಾಣಗಳು ನಿನ್ನ ಸೈನ್ಯವನ್ನು ದಹಿಸಿ ಬಿಟ್ಟುವು. ದೊಡ್ಡದಾದೊಂದು ಪರ್ವತದಲ್ಲಿರುವ ಬಿದುರಿನ ವನವು ರಾತ್ರಿಯ ಕಾಲದಲ್ಲಿ ಉರಿಯುತ್ತಿರುವಂತೆ–ಅರ್ಜುನನ ಬಾಣಗಳಿಂದ ಪೀಡಿತವಾದ ನಿನ್ನ ವಿಶಾಲಸೈನ್ಯವು ಉರಿದುಹೋಗುತ್ತಿದ್ದಿತು. ಕಿರೀಟಧರನಾದ ಅರ್ಜುನನು ನಿನ್ನ ಸೈನ್ಯವನ್ನು ಸಮ್ಮರ್ದಿಸಿದನು, ದಹಿಸಿದನು ಮತ್ತು ಧ್ವಂಸಮಾಡಿದನು. ಅಳಿದುಳಿದಿದ್ದ ನಿನ್ನ ಸೈನ್ಯವು ಅರ್ಜುನನ ಬಾಣ ಗಳಿಂದ ಪ್ರಹೃತವಾಗಿ ದಿಕ್ಕಾಪಾಲಾಗಿ ಓಡಿಹೋಯಿತು. ಮಹಾವನ

ದಲ್ಲಿ ದಾವಾಗ್ನಿಯಿಂದ ಭಯಗೊಂಡ ಮೃಗಗಳ ಸಮೂಹಗಳು ಅತ್ತಲಿತ್ತ ಓಡಾಡುವಂತೆ–ಸವ್ಯಸಾಚಿಯಿಂದ, ಬಾಣಾಗ್ನಿಯ ಮೂಲಕವಾಗಿ ದಹಿಸಲ್ಪಡುತ್ತಿದ್ದ ನಿನ್ನ ಸೈನಿಕರು ದಿಕ್ಕುಗಾಣದೇ ಓಡಾಡುತ್ತಿದ್ದರು. ಅರ್ಜುನನ ಬಾಣಪ್ರಹಾರಗಳಿಂದ ಉದ್ವಿಗ್ನವಾದ ಕುರುಸೈನ್ಯವು ಮಹಾಬಾಹುವಾದ ಭೀಮಸೇನನನ್ನು ಅಲ್ಲಿಯೇ ಬಿಟ್ಟು ಯುದ್ಧದಿಂದ ಪರಾಙ್ಮುಖವಾಯಿತು. ಮಹಾರಾಜ! ಹೀಗೆ ಕುರುಸೈನ್ಯವು ಭಗ್ನವಾಗಲಾಗಿ, ಅಪರಾಜಿತನಾದ ಅರ್ಜುನನು ಭೀಮಸೇನನ ಬಳಿಗೆ ಹೋಗಿ ಸ್ವಲ್ಪ ಹೊತ್ತು ಅಲ್ಲಿಯೇ ಇದ್ದನು. ಫಾಲ್ಗುನನು ಭೀಮಸೇನನನ್ನು ಸಂಧಿಸಿ, ಯುದ್ಧದ ಸಂಬಂಧವಾಗಿ ಸಮಾಲೋಚನೆಯನ್ನು ನಡೆಸಿ, ಯುಧಿಷ್ಠಿರನ ಶರೀರದಿಂದ ಬಾಣಗಳನ್ನು ತೆಗೆದಿರುವ ಮತ್ತು ಅವನು ಕುಶಲನಾಗಿರುವನೆಂಬ ಸಮಾಚಾರವನ್ನೂ ಭೀಮನಿಗೆ ತಿಳಿಸಿ, ಭೀಮಸೇನನ ಅನುಜ್ಞೆಯನ್ನು ಪಡೆದು, ರಥಘೋಷದಿಂದ ಭೂಮ್ಯಂತರಿಕ್ಷಗಳಲ್ಲಿ ಪ್ರತಿಧ್ವನಿಯನ್ನುಂಟುಮಾಡುತ್ತಾ ಮುನ್ನಡೆದನು. ಆ ಸಮಯದಲ್ಲಿ ದುಃಶಾಸನನ ಅನುಜರಾದ, ವೀರರಾದ, ಯೋಧಶ್ರೇಷ್ಠರಾದ ನಿನ್ನ ಹತ್ತು ಮಕ್ಕಳು ಅರ್ಜುನನನ್ನು ಆಕ್ರಮಿಸಿದರು. ಅರಣ್ಯದಲ್ಲಿರುವ ಆನೆಯನ್ನು ಪಂಜುಗಳಿಂದ ಪೀಡಿಸುವಂತೆ–ಶೂರರಾದ ನಿನ್ನ ಮಕ್ಕಳು ನೃತ್ಯಮಾಡುತ್ತಿರುವರೋ ಎಂಬಂತೆ ಧನುಸ್ಸಿನ ಶಿಂಜಿನಿಯನ್ನು ಕಿವಿಯವರೆಗೂ ಸೆಳೆದುಬಿಟ್ಟ ಬಾಣಗಳಿಂದ ಅರ್ಜುನನನ್ನು ಬಹಳವಾಗಿ ಪೀಡಿಸಿದರು. ಕಿರೀಟಿಯು ಅವರನ್ನು ಸಂಹರಿಸುವುದು ಯುಕ್ತವಲ್ಲವೆಂದು ನಿಶ್ಚಯಿಸಿದ ಮಧುಸೂದನನು, ಆ ಕುರುರಾಜಕುಮಾರರನ್ನು ಬಲಕ್ಕೆ ಬಿಟ್ಟುಕೊಂಡು ಮುಂದಕ್ಕೆ ಹೋದನು. ಅರ್ಜುನನು ಅನ್ಯಮಾರ್ಗವನ್ನು ಹಿಡಿದು ಹೋಗುತ್ತಿರಲಾಗಿ ಮೂಢರಾದ ಇತರ ಕೌರವಯೋಧರು ಅವನ ಮೇಲೆರಗಿಬಿದ್ದರು. ಆ ಸಮಯದಲ್ಲಿ ಕುಂತೀಪುತ್ರನಾದ ಅರ್ಜುನನು ಆಕ್ರಮಣಕಾರರ ಧ್ವಜಗಳನ್ನೂ, ಕುದುರೆಗಳನ್ನೂ, ಧನುಸ್ಸುಗಳನ್ನೂ, ಬಾಣಗಳನ್ನೂ–ನಾರಾಚಗಳಿಂದಲೂ, ಅರ್ಧಚಂದ್ರಗಳಿಂದಲೂ ಬಹಳ ಬೇಗ ಕತ್ತರಿಸಿದನು. ಇನ್ನೂ ಅನೇಕ ಭಲ್ಲಗಳಿಂದ ಆ ಆಕ್ರಮಣಕಾರರ ತಲೆಗಳನ್ನೂ ಕೆಳಕ್ಕೆ ಕೆಡವಿದನು. ಕೋಪದಿಂದ ಕೆಂಪಾಗಿದ್ದ ಕಣ್ಣುಗಳನ್ನು

ಹೊಂದಿದ್ದ, ಅವುಡುಗಳನ್ನು ಕಚ್ಚಿ ಭೂಮಿಯಲ್ಲಿ ಬಿದ್ದಿದ್ದ ಆ ಯೋಧರ ಮುಖಗಳು ಕಮಲಪುಷ್ಪಗಳಂತೆಯೇ ಬಹಳವಾಗಿ ಪ್ರಕಾಶಿಸಿದುವು. ಹೀಗೆ ಶತ್ರುಹಂತಕನಾದ ಅರ್ಜುನನು ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಮಹಾವೇಗ ಯುಕ್ತವಾದ ಭಲ್ಲಗಳಿಂದ ಸುವರ್ಣಮಯವಾದ ಅಂಗಗಳನ್ನು ಧರಿಸಿದ್ದ ಹತ್ತು ಮಂದಿ ಕುರುರಾಜಕುಮಾರರನ್ನೂ ಗಾಯಗೊಳಿಸಿ ಮುನ್ನಡೆದನು."

೮೦ನೆಯ ಅಧ್ಯಾಯವು ಮುಗಿಯಿತು.

——

೮೧ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಭೀಮಾರ್ಜುನರು ಕೌರವಸೈನಿಕರನ್ನು ಸಂಹರಿಸಿದುದು: ಕರ್ಣನ ಪರಾಕ್ರಮ

ಸಂಜಯನು ಅರ್ಜುನನ ಪರಾಕ್ರಮವನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಮಹಾವೇಗಯುಕ್ತವಾದ ಕುದುರೆಗಳಿಂದ ಎಳೆಯಲ್ಪಡುತ್ತಿದ್ದ ರಥದಲ್ಲಿ ಕುಳಿತು ಹೋಗುತ್ತಿದ್ದ ಕಪಿಧ್ವಜನಾದ ಅರ್ಜುನನನ್ನು ಕೌರವರ ಪಕ್ಷದ ತೊಂಬತ್ತು ರಥಿಕರು ಯುದ್ಧಮಾಡುವ ಅಪೇಕ್ಷೆಯಿಂದ ಆಕ್ರಮಿಸಿದರು. ನರವ್ಯಾಘ್ರರಾದ ಆ ಸಂಶಪ್ತಕವೀರರು ಪಾರಲೌಕಿಕವಾದ ಘೋರಪ್ರತಿಜ್ಞೆಯನ್ನು ಮಾಡಿ ನರವ್ಯಾಘ್ರನಾದ ಅರ್ಜುನನನ್ನು ನಾಲ್ಕು ಕಡೆಗಳಿಂದಲೂ ಸುತ್ತುವರಿದರು. ಶ್ರೀಕೃಷ್ಣನು ಮಹಾವೇಗಯುಕ್ತವಾದ, ಸುವರ್ಣಾಭರಣಗಳಿಂದ ಭೂಷಿತವಾದ, ಮುತ್ತಿನ ಬಲೆಗಳಿಂದ ಆಚ್ಛಾದಿತವಾಗಿದ್ದ, ಬಿಳುಪಾದ ಕುದುರೆಗಳನ್ನು ಕರ್ಣನ ರಥದ ಸಮೀಪಕ್ಕೆ ಓಡಿಸಿಕೊಂಡು ಹೋದನು. ಕರ್ಣನ ರಥದ ಕಡೆಗೆ ಹೋಗುತ್ತಿದ್ದ ಶತ್ರುಹಂತಕನಾದ ಅರ್ಜುನನನ್ನು ಸಂಶಪ್ತಕರಥಯೋಧರು ಬಾಣಗಳ ವೃಷ್ಟಿಯಿಂದ ಪ್ರಹರಿಸುತ್ತಾ ಆಕ್ರಮಿಸಿದರು. ತ್ವರೆಯಿಂದ ತನ್ನ ಮೇಲೆ ದಾಳಿನಡೆಸುತ್ತಿದ್ದ, ಸಾರಥಿ, ಧನುಸ್ಸು ಮತ್ತು ಧ್ವಜಗಳಿಂದ ಯುಕ್ತರಾಗಿದ್ದ ತೊಂಬತ್ತು ಮಂದಿ ಸಂಶಪ್ತಕವೀರಯೋಧರನ್ನೂ ಅರ್ಜುನನು ನಿಶಿತವಾದ ಬಾಣಗಳಿಂದ ಸಂಹರಿ

ಸಿದನು. ಕಿರೀಟಿಯು ಪ್ರಯೋಗಿಸಿದ ನಾನಾವಿಧವಾದ ಬಾಣಗಳ ಪ್ರಹಾರಗಳಿಂದ ಹತರಾದ ಸಂಶಪ್ತಕಯೋಧರು–ಪುಣ್ಯವು ಕ್ಷಯಿಸಿದನಂತರ ವಿಮಾನ ಸಮೇತರಾಗಿ ಸ್ವರ್ಗದಿಂದ ಚ್ಯುತರಾಗುವ ಸಿದ್ಧಪುರುಷರಂತೆ–ರಥಗಳಿಂದ ಕೆಳಗುರುಳಿದರು. ಬಳಿಕ ಗಜಾಶ್ವ-ರಥಗಳಿಂದ ಕೂಡಿದ ಭಯರಹಿತರಾದ ಕುರುಯೋಧರು–ಕುರುಸತ್ತಮನಾದ, ಭರತಶ್ರೇಷ್ಠನಾದ ಫಾಲ್ಗುನನನ್ನು ಪುನಃ ಆಕ್ರಮಿಸಿದರು. ಬಹಳವಾಗಿ ಆಯಾಸಗೊಂಡಿದ್ದ ಅಶ್ವ-ಪದಾತಿ ಸೈನಿಕರಿಂದಲೂ–ಕೊಬ್ಬಿದ ಆನೆಗಳಿಂದಲೂ ಯುಕ್ತವಾಗಿದ್ದ ನಿನ್ನ ಮಕ್ಕಳ ಮಹಾಸೈನ್ಯವು ಧನಂಜಯನನ್ನು ತಡೆದು ನಿಲ್ಲಿಸಿತು. ಮಹಾಧನುಷ್ಮಂತರಾದ ಕುರುಗಳು ಕುರುನಂದನನಾದ ಅರ್ಜುನನನ್ನು ಶಕ್ತಿ-ಋಷ್ಟಿ-ತೋಮರ-ಪ್ರಾಸಾಯುಧಗಳಿಂದಲೂ, ಗದಾ-ಖಡ್ಗ-ಸಾಯಕಗಳಿಂದಲೂ ಮುಚ್ಚಿಬಿಟ್ಟರು. ಸೂರ್ಯನು ತನ್ನ ಕಿರಣಗಳಿಂದ ಅಂಧಕಾರವನ್ನು ನಷ್ಟಗೊಳಿಸುವಂತೆ–ಪಾಂಡುಪುತ್ರನಾದ ಅರ್ಜುನನು ಆಕಾಶದ ಎಲ್ಲ ಕಡೆಗಳಲ್ಲಿಯೂ ಪ್ರಸರಿಸಿದ್ದ ಆಯುಧಗಳ ವೃಷ್ಟಿಯನ್ನು ಧ್ವಂಸಮಾಡಿದನು. ಅನಂತರ ನಿನ್ನ ಮಗನಾದ ದುರ್ಯೋಧನನ ಆಜ್ಞೆಯಂತೆ ಮ್ಲೇಚ್ಛಸೈನಿಕರು ಹದಿಮೂರು ನೂರು ಮದಗಜಗಳ ಸಮೇತರಾಗಿ ಅರ್ಜುನನ ಪಾರ್ಶ್ವದಲ್ಲಿ ನಿಂತು ಅವನನ್ನು ಪ್ರಹರಿಸತೊಡಗಿದರು. ಆ ಮ್ಲೇಚ್ಛಸೈನಿಕರು ರಥಸ್ಥನಾಗಿದ್ದ ಅರ್ಜುನನನ್ನು ಕರ್ಣೀ, ನಾಲೀಕ, ನಾರಾಚ, ತೋಮರ, ಪ್ರಾಸ, ಶಕ್ತ್ಯಾಯುಧ, ಮುಸಲ, ಭಿಂದಿಪಾಲ–ಇವೇ ಮೊದಲಾದ ಆಯುಧಗಳಿಂದ ಬಹಳವಾಗಿ ಗಾಯಗೊಳಿಸಿದರು. ಅರ್ಜುನನು ಆನೆಗಳ ಸೊಂಡಿಲುಗಳಿಂದ ಎಸೆಯಲ್ಪಡುತ್ತಿದ್ದ ಅನುಪಮವಾದ ಆಯುಧಗಳ ವೃಷ್ಟಿಯನ್ನು ನಿಶಿತವಾದ ಭಲ್ಲಗಳಿಂದಲೂ ಮತ್ತು ಅರ್ಧಚಂದ್ರಗಳಿಂದಲೂ ಕತ್ತರಿಸಿದನು. ಬಳಿಕ ಅರ್ಜುನನು–ಇಂದ್ರನು ಪರ್ವತಗಳನ್ನು ವಜ್ರಾಯುಧದಿಂದ ಪ್ರಹರಿಸಿದಂತೆ–ಪತಾಕ-ಧ್ವಜ-ಯೋಧರಿಂದ ಯುಕ್ತವಾಗಿದ್ದ ಆ ಎಲ್ಲ ಮದಗಜಗಳನ್ನೂ ನಾನಾವಿಧವಾದ ಶ್ರೇಷ್ಠವಾದ ಬಾಣಗಳಿಂದ ಸಂಹರಿಸಿದನು. ಸುವರ್ಣಮಯವಾದ ಮಾಲೆಗಳನ್ನು ಹೊಂದಿದ್ದ ಮಹಾಗಜಗಳು ಸುವರ್ಣಪುಂಖಯುಕ್ತವಾದ ಬಾಣಗಳಿಂದ ಪೀಡಿತವಾಗಿ ಅಗ್ನಿಜ್ವಾಲೆಗಳಿಂದ ಕೂಡಿದ ಪರ್ವತಗಳೋಪಾದಿ

ಯಲ್ಲಿ–ಪ್ರಾಣಗಳನ್ನು ತೊರೆದು ಭೂಮಿಯ ಮೇಲೆ ಬಿದ್ದುವು. ಅನಂತರ ಗಾಂಡೀವಧನುಸ್ಸಿನ ಟೇಂಕಾರಶಬ್ದವು ಬಹಳ ಗಟ್ಟಿಯಾಗಿ ಕೇಳಿಬರುತ್ತಿದ್ದಿತು. ಆ ಟೇಂಕಾರಧ್ವನಿಯ ಜೊತೆಯಲ್ಲಿಯೇ ಮನುಷ್ಯ–ಗಜಾಶ್ವಗಳ ಆರ್ತನಾದಗಳೂ, ಚೀತ್ಕಾರಗಳೂ ಕೇಳಿಬರುತ್ತಿದ್ದುವು. ಗಾಯಗೊಂಡ ಆನೆಗಳು ರಣಾಂಗಣದ ಸುತ್ತಲೂ ಸುತ್ತಾಡುತ್ತಿದ್ದುವು. ಸವಾರರಿಂದ ವಿಹೀನವಾಗಿದ್ದ ಕುದುರೆಗಳೂ ದಿಕ್ಕು-ದಿಕ್ಕುಗಳಲ್ಲಿಯೂ ಭ್ರಮಿಸುತ್ತಿದ್ದುವು. ಮಹಾರಾಜ! ರಥಿಗಳಿಂದಲೂ ಮತ್ತು ಕುದುರೆಗಳಿಂದಲೂ ವಿಹೀನವಾಗಿದ್ದ ಗಂಧರ್ವನಗರಗಳೋಪಾದಿಯಲ್ಲಿದ್ದ ರಥಗಳು ಸಾವಿರಾರು ಸಂಖ್ಯೆಯಲ್ಲಿ ಆ ರಣಾಂಗಣದಲ್ಲಿದ್ದುದು ಕಂಡುಬಂದಿತು. ಅಶ್ವಾರೋಹಿಗಳು ಇಲ್ಲಿಂದಲ್ಲಿಗೂ–ಅಲ್ಲಿಂದಿಲ್ಲಿಗೂ ನೆರವು ಕಾಣದೇ ಓಡಾಡುತ್ತಿದ್ದು ಅಲ್ಲಲ್ಲಿಯೇ ಪಾರ್ಥನ ಬಾಣಗಳಿಂದ ಹತರಾಗುತ್ತಿದ್ದುದನ್ನೂ ನಾವು ನೋಡುತ್ತಲೇ ಇದ್ದೆವು. ಆ ಸಮಯದಲ್ಲಿ ಪಾರ್ಥನ ಭುಜಗಳಲ್ಲಿ ಬಲವೆಷ್ಟಿದೆಯೆಂಬುದು ಕಂಡುಬಂದಿತು. ಪಾರ್ಥನು ಏಕಾಕಿಯಾಗಿಯೇ ತನ್ನ ಭುಜಬಲದಿಂದ ಅಶ್ವಾರೋಹಿಗಳನ್ನೂ, ಮದಿಸಿದ ಆನೆಗಳನ್ನೂ, ರಥಗಳನ್ನೂ ಸಾವಿರಾರು ಸಂಖ್ಯೆಯಲ್ಲಿ ಧ್ವಂಸ ಮಾಡಿದನು. ಭರತಶ್ರೇಷ್ಠನೇ! ಅನಂತರ ತ್ರ್ಯಂಗಗಳಿಂದಲೂ (ಗಜಾಶ್ವ–ಸೈನಿಕರಿಂದ) ಸುತ್ತುವರಿಯಲ್ಪಟ್ಟಿರುವ ಅರ್ಜುನನನ್ನು ನೋಡಿದ ಭೀಮಸೇನನು ನಿನ್ನ ಕಡೆಯ ಅಳಿದುಳಿದ ಕೆಲವು ರಥಿಗಳನ್ನು ಪರಿತ್ಯಜಿಸಿ ಧನಂಜಯನ ರಥದ ಬಳಿಗೆ ಬಹಳ ಅವಸರದಿಂದ ಆಗಮಿಸಿದನು. ಭೀಮಸೇನನು ತ್ರ್ಯಂಗಸೈನಿಕರೂ ಅರ್ಜುನನನ್ನು ಸುತ್ತುವರಿದಿರುವುದನ್ನು ನೋಡಿ ಅವನಿಗೆ ಸಹಾಯಮಾಡುವ ಆಶಯದಿಂದ ಯುದ್ಧವನ್ನು ನಿಲ್ಲಿಸಿ ಅರ್ಜುನನ ಸಮೀಪಕ್ಕೆ ಬಂದಾಗ ನಿನ್ನ ಕಡೆಯ ಅನೇಕ ಸೈನಿಕರು ಅವಸಾನಹೊಂದಿದರು. ಉಳಿದವರು ಬಹಳವಾಗಿ ಗಾಯಗೊಂಡು ಆರ್ತರಾಗಿದ್ದರು. ಮತ್ತೆ ಕೆಲವರು ಪಲಾಯನಮಾಡಿದ್ದರು. ಆಯಾಸವೆಂಬುದನ್ನೇ ಕಾಣದಿದ್ದ ಭೀಮಸೇನನು ಗದಾಪಾಣಿಯಾಗಿ, ಅರ್ಜುನನು ಸಂಹರಿಸಿದನಂತರ ಉಳಿದಿದ್ದ ಮಹಾಬಲಿಷ್ಠರಾದ ಅಲ್ಪ-ಸ್ವಲ್ಪ ಅಶ್ವಸೈನಿಕರನ್ನೂ ಧ್ವಂಸಮಾಡಿದನು. ಕಾಳರಾತ್ರಿಯಂತೆಯೇ ಬಹುಭಯಂಕರವಾಗಿದ್ದ, ಗಜಾಶ್ವ-ಪದಾತಿಗಳನ್ನೇ ಆಹುತಿಯನ್ನಾಗಿ ಪಡೆದುಕೊಳ್ಳುತ್ತಿದ್ದ, ಪ್ರಾಕಾರಗಳನ್ನೂ ಉಪ್ಪರಿಗೆಮನೆಗಳನ್ನೂ,

ಪಟ್ಟಣದ ಮಹಾದ್ವಾರಗಳನ್ನೂ ಭೇದಿಸಲು ಸಮರ್ಥವಾದ, ಅತಿದಾರುಣವಾದ ಗದೆಯನ್ನು ಭೀಮಸೇನನು ಕೌರವರ ಪಕ್ಷದ ಗಜಾಶ್ವ-ಪದಾತಿಸೈನಿಕರ ಮೇಲೆ ರಭಸದಿಂದ ಪ್ರಯೋಗಿಸಿದನು. ಭೀಮನಿಂದ ಪ್ರಮುಕ್ತವಾದ ಆ ಗದೆಯು ಹಲವಾರು ಕುದುರೆಗಳನ್ನೂ ಕುದುರೇಸವಾರರನ್ನೂ ಸಂಹರಿಸಿತು. ಭೀಮಸೇನನು ಕಪ್ಪುಲೋಹದಿಂದ (ಕಬ್ಬಿಣದಿಂದ) ಮಾಡಲ್ಪಟ್ಟ ಕವಚಗಳನ್ನು ಹೊಂದಿದ್ದ ಪದಾತಿಗಳನ್ನೂ ಮತ್ತು ಕುದುರೆಗಳನ್ನೂ ಗದೆಯಿಂದ ಧ್ವಂಸಮಾಡಿದನು. ಅನೇಕಸೈನಿಕರು ಆರ್ತನಾದಗಳನ್ನು ಮಾಡುತ್ತಾ ಅಸುನೀಗಿ ಕೆಳಕ್ಕೆಬಿದ್ದರು. ಗಾಯಗೊಂಡ ಕೆಲವು ಸೈನಿಕರು ರಕ್ತದಿಂದ ತೋಯ್ದುಹೋಗಿ ಹಲ್ಲುಗಳಿಂದ ಭೂಮಿಯನ್ನು ಕಚ್ಚಿಕೊಂಡೇ ಅಡಿಮುಖವಾಗಿ ಮಲಗಿದ್ದರು. ಮತ್ತೆ ಕೆಲವರಿಗೆ ತಲೆಗಳೇ ಒಡೆದುಹೋಗಿದ್ದುವು. ಕೆಲವರಿಗೆ ಮೂಳೆಗಳು ಮುರಿದಿದ್ದುವು. ಕೆಲವರು ಕಾಲುಗಳನ್ನೂ ಮುರಿದುಕೊಂಡು ರಣಾಂಗಣದಲ್ಲಿ ಬಿದ್ದಿದ್ದರು. ಹೀಗೆ ಬಿದ್ದಿದ್ದ ಸೈನಿಕರೆಲ್ಲರೂ ಮಾಂಸಾಶಿಗಳಾದ ಪ್ರಾಣಿಗಳಿಗೆ ರುಚಿ-ರುಚಿಯಾದ ಆಹಾರವಾದರು. ಸೈನಿಕರ ರಕ್ತ, ಮಾಂಸ ಮತ್ತು ವಸೆಗಳಿಂದ ತೃಪ್ತಿಹೊಂದಿದ್ದ ಭೀಮಸೇನನ ಕೈಯಲ್ಲಿದ್ದ ಭಯಂಕರವಾದ ಗದೆಯು ಮೂಳೆಗಳನ್ನೂ ಅಗಿದು ತಿನ್ನುತ್ತಾ ಕಾಳರಾತ್ರಿಯಂತೆ ನೋಡಲು ಭಯಂಕರವಾಗಿ ಕಾಣುತ್ತಿದ್ದಿತು. ಕ್ರುದ್ಧನಾಗಿದ್ದ ಭೀಮಸೇನನು ಹತ್ತು ಸಾವಿರ ಕುದುರೆಗಳನ್ನೂ ಬಹುಸಂಖ್ಯಾತವಾದ ಕಾಲಾಳುಗಳನ್ನೂ ಸಂಹರಿಸಿ ಗದಾಪಾಣಿಯಾಗಿ ರಣಾಂಗಣದಲ್ಲಿ ಅತ್ತಲಿತ್ತ ಸಂಚರಿಸುತ್ತಿದ್ದನು. ಗದಾಪಾಣಿಯಾದ ಭೀಮಸೇನನನ್ನು ನೋಡಿ ನಿನ್ನ ಕಡೆಯ ಸೈನಿಕರು ಕಾಲದಂಡವನ್ನು ಹಿಡಿದು ಯಮನೇ ಬಂದಿರಬಹುದೆಂದು ಭಾವಿಸಿದರು. ಕ್ರುದ್ಧನಾಗಿದ್ದ ಭೀಮ ಸೇನನು ಮದಿಸಿದ ಆನೆಯೋಪಾದಿಯಲ್ಲಿ–ಮೊಸಳೆಯು ಸಮುದ್ರವನ್ನು ಪ್ರವೇಶಿಸುವಂತೆ–ಗಜಸೈನ್ಯವನ್ನು ಪ್ರವೇಶಿಸಿದನು.

ಕ್ರುದ್ಧನಾದ ಭೀಮಸೇನನು ಮಹಾಗದೆಯನ್ನು ಹಿಡಿದು ಗಜಸೈನ್ಯ ದೊಳಗೆ ನುಗ್ಗಿ ಕ್ಷಣಮಾತ್ರದಲ್ಲಿ ಮಹಾಗಜಗಳನ್ನು ಯಮಾಲಯಕ್ಕೆ ಕಳು ಹಿಸಿದನು. ರೆಕ್ಕೆಗಳಿಂದ ಕೂಡಿದ ಪರ್ವತಗಳೋಪಾದಿಯಲ್ಲಿ ಕವಚ

ಗಳಿಂದಲೂ, ಮಾವಟಿಗರಿಂದಲೂ ಮತ್ತು ಧ್ವಜಗಳಿಂದಲೂ ಕೂಡಿದ್ದ ಮದಿಸಿದ ಆನೆಗಳು ಭೀಮನ ಗದೆಯಿಂದ ಪ್ರಹೃತವಾಗಿ ಬೀಳುತ್ತಿದ್ದುದನ್ನು ನಾವು ನೋಡಿದೆವು. ಮಹಾಬಲನಾದ ಭೀಮಸೇನನು ಆ ಗಜಸೈನ್ಯವನ್ನೂ ಸಂಹರಿಸಿ ಮತ್ತೆ ತನ್ನ ರಥವನ್ನು ಹತ್ತಿ ಅರ್ಜುನನ ಹಿಂದೆ ಹೋಗುತ್ತಿದ್ದನು. ಮಹಾರಾಜ! ಆಗ ಭೀಮಾರ್ಜುನರ ಶಸ್ತ್ರಾಸ್ತ್ರಗಳಿಂದ ಅವ್ಯಾಹತವಾಗಿ ಪ್ರಹರಿಸಲ್ಪಡುತ್ತಿದ್ದ ನಿನ್ನ ಸೈನ್ಯವು ಪ್ರಾಯಶಃ ಯುದ್ಧದಿಂದ ಹಿಮ್ಮೆಟ್ಟಿದ ರೀತಿಯಲ್ಲಿಯೇ ಕಾಣುತ್ತಿದ್ದಿತು; ನಿರುತ್ಸಾಹಗೊಂಡಿದ್ದಿತು; ಜಡವಾಗಿದ್ದಿತು. ಕೌರವಸೈನ್ಯವು ಜಡವಾಗಿದ್ದುದನ್ನೂ ಉದ್ಯೋಗಶೂನ್ಯವಾಗಿದ್ದುದನ್ನೂ ಕಂಡು ಅರ್ಜುನನು ಪ್ರಾಣಗಳನ್ನು ಸಂತಾಪಗೊಳಿಸುವ ಬಾಣಗಳಿಂದ ಕೌರವಸೈನ್ಯವನ್ನು ಆಚ್ಛಾದಿಸಿದನು. ಗಾಂಡೀವಧನ್ವನಾದ ಅರ್ಜುನನ ಬಾಣಗಳಿಂದ ಚುಚ್ಚಲ್ಪಡುತ್ತಿದ್ದ ಗಜಾಶ್ವ-ರಥ-ಪದಾತಿಸೈನಿಕರು ಕೇಸರಗಳಿಂದ ಕೂಡಿದ ಕದಂಬಕುಸುಮಗಳಂತೆಯೇ ಕಾಣುತ್ತಿದ್ದರು. ಗಜಾಶ್ವ-ಪದಾತಿಗಳ ಪ್ರಾಣಾಪಹಾರಿಗಳಾದ ಅರ್ಜುನನ ಬಾಣಗಳಿಂದ ವಧಿಸಲ್ಪಡುತ್ತಿದ್ದ ಕುರುಸೈನಿಕರಲ್ಲಿ ದೊಡ್ಡ ಹಾಹಾಕಾರವೆದ್ದಿತು. ಆ ಸಮಯದಲ್ಲಿ ನಿನ್ನ ಸೈನಿಕರು 'ಅಯ್ಯೋ! ಅಯ್ಯೋ!'–ಎಂದು ಕೂಗಿಕೊಳ್ಳುತ್ತಿದ್ದರು. ಬಹಳವಾಗಿ ಭಯಗೊಂಡಿದ್ದರು. ತಮ್ಮ-ತಮ್ಮಲ್ಲಿಯೇ ಅಡಗಿಕೊಳ್ಳುತ್ತಿದ್ದರು. ಕೊಳ್ಳಿಯ ಚಕ್ರದೋಪಾದಿಯಲ್ಲಿ ನಿನ್ನ ಸೈನ್ಯವು ರಣಾಂಗಣದ ಸುತ್ತಲೂ ಪರಿಭ್ರಮಿಸುತ್ತಿತ್ತು. ಪುನಃ ಕೌರವಸೈನಿಕರಿಗೂ–ಅರ್ಜುನನಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಕೌರವರ ಸೈನ್ಯದಲ್ಲಿ ಅರ್ಜುನನ ಬಾಣಗಳಿಂದ ಗಾಯಗೊಳ್ಳದಿರುವ ಒಬ್ಬ ರಥಿಕನಾಗಲೀ, ಒಬ್ಬ ಕುದುರೇಸವಾರನಾಗಲೀ, ಒಂದು ಕುದುರೆಯಾಗಲೀ, ಒಂದು ಆನೆಯಾಗಲೀ–ಇರಲೇ ಇಲ್ಲ. ಬಾಣಗಳಿಂದ ಛಿದ್ರಿತವಾದ ಕವಚಗಳನ್ನು ಹೊಂದಿದ್ದ ಆ ಸೈನ್ಯವು ಹೊತ್ತಿಕೊಂಡು ಉರಿಯುತ್ತಿರುವಂತೆ ಕಾಣುತ್ತಿದ್ದಿತು. ರಕ್ತದಿಂದ ತೋಯ್ದುಹೋಗಿದ್ದು ಕುಸುಮಿತವಾದ ಅಶೋಕ ವೃಕ್ಷಗಳಿರುವ ಅರಣ್ಯದಂತೆಯೇ ಕಾಣುತ್ತಿದ್ದಿತು. ಕುರುಗಳು ಸವ್ಯಸಾಚಿಯ ಆ ಅದ್ಭುತವಾದ ಪರಾಕ್ರಮವನ್ನು ನೋಡಿ, ಅರ್ಜುನನೊಡನೆ ಯುದ್ಧಮಾಡಿ ಕರ್ಣನು ಜೀವಂತವಾಗಿ ಉಳಿಯುವನೆಂಬ ವಿಷಯದಲ್ಲಿ

ನಿರಾಶೆಯನ್ನು ಹೊಂದಿದರು. ಪರಾಜಿತರಾದ ಕೌರವಯೋಧರು ಪಾರ್ಥನ ಶರಪ್ರಹಾರವನ್ನು ಸಹಿಸಲು ಅಸಾಧ್ಯವಾದುದನ್ನಾಗಿ ತಿಳಿದು ಯುದ್ಧದಿಂದ ಹಿಮ್ಮೆಟ್ಟಿದರು. ಅರ್ಜುನನ ಬಾಣಗಳಿಂದ ಹಿಂಸಿಸಲ್ಪಡುತ್ತಿದ್ದ ಕೌರವಯೋಧರು ರಣಾಂಗಣದಲ್ಲಿ ಕರ್ಣನೊಬ್ಬನನ್ನೇ ಬಿಟ್ಟು ದಿಕ್ಕಾಪಾಲಾಗಿ ಓಡಿಹೋದರು. ಅರ್ಜುನನ ವಿಷಯದಲ್ಲಿ ಬಹಳ ಭಯಗೊಂಡಿದ್ದ ಕುರುಯೋಧರು ಓಡಿಹೋಗುವಾಗಲೂ ರಕ್ಷಣೆಗಾಗಿ ಕರ್ಣನನ್ನೇ ಕೂಗುತ್ತಿದ್ದರು. ಪಾರ್ಥನು ನೂರಾರು ಬಾಣಗಳನ್ನು ಶತ್ರುಸೈನಿಕರ ಮೇಲೆ ಸುರಿಸುತ್ತಾ, ಭೀಮಸೇನಪ್ರಮುಖರಾದ ಪಾಂಡವಯೋಧರನ್ನು ಸಂತೋಷಗೊಳಿಸುತ್ತಾ, ನಿನ್ನ ಕಡೆಯ ಸೈನಿಕರನ್ನು ಆಕ್ರಮಿಸುತ್ತಲೇ ಇದ್ದನು. ನಿನ್ನ ಮಕ್ಕಳು ರಕ್ಷಣೆಯನ್ನು ಪಡೆಯುವ ಸಲುವಾಗಿ ಕರ್ಣನ ರಥದ ಬಳಿಗೆ ಹೋದರು. ಅಗಾಧವಾದ ದುಃಖಸಾಗರದಲ್ಲಿ ಮುಳುಗಿಹೋಗುತ್ತಿದ್ದ ನಿನ್ನ ಮಕ್ಕಳಿಗೆ ಕರ್ಣನು ದ್ವೀಪಪ್ರಾಯನಾದನು.

ವಿಷರಹಿತವಾದ ಸರ್ಪಗಳೋಪಾದಿಯಲ್ಲಿದ್ದ ಕುರುಯೋಧರು ಅರ್ಜುನನ ಭಯದ ಕಾರಣದಿಂದ ಕರ್ಣನನ್ನೇ ಆಶ್ರಯಿಸಿಕೊಂಡು ನಿಂತಿದ್ದರು.

**ಯಥಾ ಸರ್ವಾಣಿ ಭೂತಾನಿ ಮೃತ್ಯೋರ್ಭೀತಾನಿ ಮಾರಿಷ ।**
**ಧರ್ಮಮೇವೋಪಲೀಯನ್ತೇ ಕರ್ಮವನ್ತಿ ಹಿ ಯಾನಿ ಚ ॥೪೯॥**

**ತಥಾ ಕರ್ಣಂ ಮಹೇಷ್ವಾಸಂ ಪುತ್ರಾಸ್ತವ ನರಾಧಿಪ ।**
**ಉಪಾಲೀಯನ್ತ ಸಂತ್ರಾಸಾತ್ಪಾಣ್ಡವಸ್ಯ ಮಹಾತ್ಮನಃ ॥೫೦॥**

ಕರ್ಮಾಧೀನಗಳಾದ ಎಲ್ಲ ಪ್ರಾಣಿಗಳೂ ಮೃತ್ಯುವಿನ ಭಯದಿಂದಾಗಿ ಧರ್ಮವನ್ನೇ ಆಶ್ರಯಿಸಿಕೊಂಡಿರುವಂತೆ–ನಿನ್ನ ಮಕ್ಕಳು ಮಹಾತ್ಮನಾದ ಅರ್ಜುನನ ಭಯದಿಂದಾಗಿ ಮಹಾಧನುಷ್ಮಂತನಾದ ಕರ್ಣನನ್ನೇ ಮರೆಮಾಡಿಕೊಂಡು ನಿಂತುಕೊಂಡರು. (ಕರ್ಣನನ್ನೇ ಆಶ್ರಯಿಸಿದರು.)

ರಕ್ತದಿಂದ ತೋಯ್ದುಹೋಗಿದ್ದ, ಬಾಣಗಳಿಂದ ಬಹಳವಾಗಿ ಗಾಯಗೊಂಡು ಸಂಕಟಪಡುತ್ತಿದ್ದ ಕುರುಪ್ರವೀರರನ್ನು ನೋಡಿ ಭಯರಹಿತನಾದ

ಕರ್ಣನು–‘ಭಯಪಡಬೇಡಿರಿ; ಇತ್ತಲಾಗಿ ನನ್ನ ಕಡೆಗೆ ಬನ್ನಿರಿ’–ಎಂದು ಹೇಳುತ್ತಾ ಕುರುಯೋಧರನ್ನು ಸಮಾಧಾನಪಡಿಸಿದನು. ಪಾರ್ಥನ ಭುಜಬಲದಿಂದ ನಿನ್ನ ಕಡೆಯ ಸೈನ್ಯವು ಭಗ್ನವಾದುದನ್ನು ಗಮನಿಸಿದ ಕರ್ಣನು ಶತ್ರುಗಳನ್ನು ಸಂಹರಿಸುವ ಇಚ್ಛೆಯಿಂದ ಧನುಸ್ಸನ್ನು ಟೇಂಕರಿಸುತ್ತಾ ಯುದ್ಧಸನ್ನದ್ಧನಾಗಿ ನಿಂತುಕೊಂಡನು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಕರ್ಣನು–ಅರ್ಜುನನಿಂದ ಭಯಗೊಂಡು ಓಡಿಬಂದ ಕುರುಗಳನ್ನು ನೋಡಿ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಸ್ವಲ್ಪಹೊತ್ತು ಯೋಚಿಸುತ್ತಿದ್ದು, ಪಾರ್ಥನನ್ನು ಸಂಹರಿಸಿಯೇ ತೀರಬೇಕೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡನು. ಧರ್ಮಾತ್ಮನಾದ, ಅಧಿರಥನ ಮಗನಾದ ಕರ್ಣನು ಮಹಾಧನುಸ್ಸನ್ನು ಟೇಂಕರಿಸುತ್ತಾ ಅರ್ಜುನನು ನೋಡುತ್ತಿರುವಂತೆಯೇ ಪುನಃ ಪಾಂಚಾಲರ ಮೇಲೆ ದಾಳಿಮಾಡಿದನು. ಮರುಕ್ಷಣದಲ್ಲಿಯೇ ರಕ್ತದಂತೆ ಕೆಂಪಾದ ಕಣ್ಣುಳ್ಳವರಾಗಿದ್ದ ಪಾಂಚಾಲರಾಜರು–ಮೇಘಗಳು ಪರ್ವತವನ್ನು ಜಲಧಾರೆಗಳಿಂದ ಮುಚ್ಚುವಂತೆ–ಕರ್ಣನನ್ನು ಬಾಣಗಳ ಸಮೂಹಗಳಿಂದ ಮುಚ್ಚಿದರು. ಅದಕ್ಕೆ ಪ್ರತಿಯಾಗಿ ಕರ್ಣ ಪ್ರಮುಕ್ತವಾದ ಸಾವಿರಾರು ಬಾಣಗಳು ಪಾಂಚಾಲಯೋಧರನ್ನು ಪ್ರಾಣಗಳಿಂದ ಪ್ರತ್ಯೇಕಿಸಿದುವು. ಮಿತ್ರಪ್ರಿಯನಾದ ಕರ್ಣನಿಂದ ಮಿತ್ರನ ಸಲುವಾಗಿ ವಧಿಸಲ್ಪಡುತ್ತಿದ್ದ ಪಾಂಚಾಲಸೈನಿಕರಲ್ಲಿ ದೊಡ್ಡದಾದ ಆರ್ತಧ್ವನಿಯುಂಟಾಯಿತು.”

ರಿ೮ನೆಯ ಅಧ್ಯಾಯವು ಮುಗಿಯಿತು.

ರಿ೯ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಸಾತ್ಯಕಿಯು ಕರ್ಣನ ಮಗನಾದ ಪ್ರಸೇನನನ್ನು ವಧಿಸಿದುದು: ಕರ್ಣನ ಪರಾಕ್ರಮ: ಭೀಮ-ದುಃಶಾಸನರ ಯುದ್ಧ

ಸಂಜಯನು ಕರ್ಣನ ಪರಾಕ್ರಮವನ್ನು ವರ್ಣಿಸುತ್ತಾನೆ:

“ಮಹಾರಾಜ! ಕೌರವಸೈನಿಕರು ಪಲಾಯನಮಾಡುತ್ತಿರಲಾಗಿ, ಸೂತಪುತ್ರನಾದ ಕರ್ಣನು ಬಿಳಿಯ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ದೊಡ್ಡದಾದ ಬಾಣಗಳಿಂದ–ಚಂಡಮಾರುತವು ಮೋಡಗಳ ಸಮೂಹ

ಗಳನ್ನು ಚೆಲ್ಲಾಪಿಲ್ಲಿಯಾಗಿ ಮಾಡುವಂತೆ–ಪಾಂಚಾಲಪುತ್ರರನ್ನು (ಧೃಷ್ಟ ದ್ಯುಮ್ನ-ಶಿಖಂಡಿಯೇ ಮೊದಲಾದ ಪಾಂಚಾಲಯೋಧರನ್ನು) ಧ್ವಂಸ ಮಾಡಿದನು. ಕರ್ಣನು ಅಂಜಲಿಕಗಳೆಂಬ ಬಾಣಗಳಿಂದ ಜನಮೇಜಯನ ಸಾರಥಿಯನ್ನು ರಥದಿಂದ ಕೆಳಕ್ಕೆ ಕೆಡವಿ ಕುದುರೆಗಳನ್ನೂ ಸಂಹರಿಸಿದನು. ಶತಾನೀಕನನ್ನೂ, ಸುತಸೋಮನನ್ನೂ ಭಲ್ಲಗಳಿಂದ ಮುಚ್ಚಿ ಅವರ ಧನುಸ್ಸುಗಳನ್ನೂ ಕತ್ತರಿಸಿದನು. ಬಳಿಕ ರಾಧೇಯನು ಧೃಷ್ಟದ್ಯುಮ್ನನನ್ನು ಆರು ಬಾಣಗಳಿಂದ ಪ್ರಹರಿಸಿ ಅತಿತ್ವರೆಯಿಂದ ಅವನ ಕುದುರೆಗಳನ್ನೂ ಸಂಹರಿಸಿದನು. ಸಾತ್ಯಕಿಯ ಕುದುರೆಗಳನ್ನೂ ಸಂಹರಿಸಿ ಕೇಕಯರಾಜ ಕುಮಾರನಾದ ವಿಶೋಕನನ್ನೂ ಸಂಹರಿಸಿದನು. ಕೇಕಯರಾಜಕುಮಾರನು ಹತನಾಗಲಾಗಿ, ಕೇಕಯಸೇನಾಪತಿಯಾದ ಉಗ್ರಕರ್ಮನು ಕರ್ಣನ ಮೇಲೆ ದಾಳಿಮಾಡಿದನು. ಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಸಂಚಲಿಸುತ್ತಾ ಭಯಂಕರವಾದ ವೇಗದಿಂದ ಕೂಡಿದ್ದ ಬಾಣಗಳಿಂದ ಕರ್ಣನ ಮಗನಾದ ಪ್ರಸೇನನನ್ನೂ ಪೀಡಿಸಿದನು. ಕರ್ಣನು ಗಹಗಹಿಸಿ ನಗುತ್ತಾ ಅರ್ಧಚಂದ್ರ ವೆಂಬ ಮೂರು ಬಾಣಗಳಿಂದ ಕೇಕಯಸೇನಾಪತಿಯಾದ ಉಗ್ರಕರ್ಮನ ಎರಡು ತೋಳುಗಳನ್ನೂ ಮತ್ತು ಶಿರಸ್ಸನ್ನೂ ಕತ್ತರಿಸಿದನು. ಗಂಡುಗೊಡಲಿ ಗಳಿಂದ ಕತ್ತರಿಸಲ್ಪಟ್ಟ ಶಾಲವೃಕ್ಷವು ಕೆಳಗೆ ಬೀಳುವಂತೆ–ಉಗ್ರಕರ್ಮನು ಪ್ರಾಣಗಳನ್ನು ತೊರೆದು ರಥದಿಂದ ಭೂಮಿಯಲ್ಲಿ ಬಿದ್ದನು. ಕರ್ಣನ ಮಗ ನಾದ ಪ್ರಸೇನನು ಕುದುರೆಗಳಿಂದ ವಿಹೀನನಾಗಿದ್ದ ಸಾತ್ಯಕಿಯನ್ನು ಶೀಘ್ರ ವಾಗಿ ಹೋಗುವ ಬಾಣಗಳಿಂದ ಮುಚ್ಚಿ ರಣಾಂಗಣದಲ್ಲಿ ನೃತ್ಯಮಾಡುತ್ತಿ ರುವನೋ ಎಂಬಂತೆ ಕಾಣುತ್ತಿದ್ದನು. ಆದರೆ ಮರುಕ್ಷಣದಲ್ಲಿ ಪ್ರಸೇನನು ಸಾತ್ಯಕಿಯ ಬಾಣಗಳಿಂದ ಹತನಾಗಿ ಕೆಳಕ್ಕೆ ಬಿದ್ದನು. ತನ್ನ ಕಣ್ಣೆದುರಿ ನಲ್ಲಿಯೇ ಮಗನು ಹತನಾಗಲಾಗಿ ಕ್ರೋಧದಿಂದ ವ್ಯಾಕುಲಿತವಾದ ಮನ ಸ್ಸುಳ್ಳವನಾಗಿದ್ದ ಕರ್ಣನು ಶಿನಿಪ್ರವೀರನನ್ನು ಸಂಹಾರಮಾಡುವ ಇಚ್ಛೆ ಯಿಂದ–**'ಹತೋಽಸಿ ಶೈನೇಯ!'**–'ಶೈನೇಯನೇ! ನೀನೀಗ ಹತ ನಾದೆ'–ಎಂದು ಹೇಳುತ್ತಾ ಶತ್ರುನಾಶಕವಾದ ಬಾಣವನ್ನು ಸಾತ್ಯಕಿಯ ಮೇಲೆ ಪ್ರಯೋಗಿಸಿದನು. ಕರ್ಣನು ಸಾತ್ಯಕಿಯ ಮೇಲೆ ಬಿಟ್ಟ ಬಾಣವನ್ನು ಶಿಖಂಡಿಯು ಮೂರು ಬಾಣಗಳಿಂದ ಕತ್ತರಿಸಿದನು. ಮತ್ತೆ ಮೂರು ಬಾಣ

ಗಳಿಂದ ಕರ್ಣನನ್ನೂ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಕರ್ಣನು ಶಿಖಂಡಿಯ ಧನುಸ್ಸನ್ನೂ ಮತ್ತು ಧ್ವಜವನ್ನೂ ಎರಡು ಕ್ಷುರಗಳಿಂದ ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಭಯಂಕರಪರಾಕ್ರಮನಾದ ಕರ್ಣನು ಶಿಖಂಡಿಯನ್ನು ಆರು ಬಾಣಗಳಿಂದ ಪುನಃ ಗಾಯಗೊಳಿಸಿ, ಧೃಷ್ಟದ್ಯುಮ್ನನ ಮಗನ ತಲೆಯನ್ನು ಕತ್ತರಿಸಿದನು. ಮಹಾತ್ಮನಾದ ಅಧಿರಥನ ಮಗನಾದ ಕರ್ಣನು ಬಹಳ ತೀಕ್ಷ್ಣವಾದ ಬಾಣದಿಂದ ಸುತಸೋಮನನ್ನು ಗಾಯಗೊಳಿಸಿದನು. ರಾಜಸಿಂಹನೇ! ಧೃತರಾಷ್ಟ್ರರಾಜ! ಹೀಗೆ ಭಯಂಕರವಾದ ಯುದ್ಧವು ನಡೆಯುತ್ತಿರಲಾಗಿ, ಧೃಷ್ಟದ್ಯುಮ್ನನ ಮಗನು ಕರ್ಣನಿಂದ ಹತನಾಗಲಾಗಿ, ಕೃಷ್ಣನು ಅರ್ಜುನನಿಗೆ–"**ಅಪಾಞ್ಚಾಲ್ಯಂ ಕ್ರಿಯತೇ । ಯಾಹಿ ಪಾರ್ಥ ಕರ್ಣಂ ಜಹಿ**–ಪಾರ್ಥ! ಕರ್ಣನು ರಣರಂಗವನ್ನು ಪಾಂಚಾಲರಿಂದ ರಹಿತವನ್ನಾಗಿಯೇ ಮಾಡಿಬಿಡುತ್ತಾನೆ. ಬೇಗ ಹೋಗು; ಕರ್ಣನನ್ನು ಸಂಹರಿಸು"–ಎಂದು ಹೇಳಿದನು. ಅನಂತರ ಸುಂದರವಾದ ಭುಜಗಳನ್ನು ಹೊಂದಿದ್ದ ನರಶ್ರೇಷ್ಠನಾದ ಅರ್ಜುನನು ನಸುನಗುತ್ತಾ ಮಹಾಭಯದಲ್ಲಿರುವ, ರಥಿಕರ ಸಮೂಹದಲ್ಲಿ ಶ್ರೇಷ್ಠನಾದ ಕರ್ಣನಿಂದ ಪ್ರಹರಿಸಲ್ಪಟ್ಟು ಗಾಯಗೊಂಡಿದ್ದ ತನ್ನ ಕಡೆಯ ಸೈನಿಕರಿಗೆ ರಕ್ಷಣೆಯನ್ನು ಕೊಡುವ ಇಚ್ಛೆಯಿಂದ ಅಮೋಘವಾದ ರಥದ ಮೂಲಕವಾಗಿ ಕರ್ಣನ ರಥವನ್ನು ಎದುರಿಸಿದನು. ಭಯಂಕರವಾದ ಟೇಂಕಾರಶಬ್ದಮಾಡುವ ಗಾಂಡೀವಧನುಸ್ಸನ್ನು ಕೈಯಲ್ಲಿ ಹಿಡಿದು, ಮೌರ್ವಿ ಯಿಂದ ಸೆಳೆದು ಟೇಂಕರಿಸಿ, ಬಹಳ ಬೇಗ ಬಾಣಾಂಧಕಾರವನ್ನು ಕಲ್ಪಿಸಿ, ಶತ್ರುಗಳ ಗಜಾಶ್ವ-ರಥ-ಧ್ವಜಗಳನ್ನು ಧ್ವಂಸಮಾಡಿದನು. ಆ ಭಯಂಕರ ಮುಹೂರ್ತದಲ್ಲಿ ಅರ್ಜುನನು ಮೌರ್ವಿಯನ್ನು ಮಂಡಲಾಕಾರವಾಗಿಯೇ ಮಾಡಿಕೊಂಡು ರಣಾಂಗಣದಲ್ಲಿ ವಿಜೃಂಭಿಸುತ್ತಾ ಶತ್ರುಗಳ ಮೇಲೆ ಬಿದ್ದನು. ಆ ಸಮಯದಲ್ಲಿ ಅರ್ಜುನನ ಧನುಷ್ಟೇಂಕಾರಶಬ್ದದ ಪ್ರತಿಧ್ವನಿಯು ಅಂತರಿಕ್ಷದಲ್ಲೆಲ್ಲಾ ವ್ಯಾಪಿಸಿತು. ಅದರಿಂದ ಭಯಗೊಂಡ ಪಕ್ಷಿಗಳು ಪರ್ವತಗಳ ಗುಹೆಯೊಳಗೆ ಅಡಗಿಕೊಂಡುವು. ಪಾಂಡವರ ಕಡೆಯ ಪ್ರಮುಖವೀರನಾದ ಭೀಮಸೇನನು ಅರ್ಜುನನ ರಥದ ಹಿಂಭಾಗವನ್ನು ರಕ್ಷಿಸುತ್ತಾ, ರಥದಲ್ಲಿ ಕುಳಿತು ಅವನ

ರಥವನ್ನೇ ಅನುಸರಿಸಿ ಹೋದನು. ಪಾಂಡವರಾಜಪುತ್ರರಿಬ್ಬರೂ ಎರಡು ರಥಗಳ ಮೂಲಕವಾಗಿ ಅತ್ಯಂತತ್ವರೆಯಿಂದ ಶತ್ರುಪಕ್ಷದ ಯೋಧರೊಡನೆ ಯುದ್ಧಮಾಡುತ್ತಾ ಕರ್ಣನ ಕಡೆಗೆ ಧಾವಿಸಿದರು. ಆ ಮಧ್ಯದಲ್ಲಿ ಸೂತಪುತ್ರನಾದ ಕರ್ಣನು ಸೋಮಕಸೈನಿಕರನ್ನು ಕಂಡ-ಕಂಡ ಕಡೆಗಳಲ್ಲಿ ಧ್ವಂಸಮಾಡುತ್ತಾ ಅವರೊಡನೆ ಸುಘೋರವಾದ ಯುದ್ಧಮಾಡುತ್ತಿದ್ದನು. ಸೋಮಕರ ಸೈನ್ಯದಲ್ಲಿದ್ದ ಗಜಾಶ್ವ-ರಥಗಳ ಸಮೂಹಗಳನ್ನೂ ಧ್ವಂಸ ಮಾಡಿದನು. ಎಲ್ಲ ದಿಕ್ಕುಗಳನ್ನೂ ಬಾಣಗಳಿಂದ ಮುಚ್ಚಿದನು. ಅದಕ್ಕೆ ಪ್ರತಿಯಾಗಿ ಉತ್ತಮೌಜಸ, ಜನಮೇಜಯ, ಕ್ರುದ್ಧರಾಗಿದ್ದ ಯುಧಾಮನ್ಯು-ಶಿಖಂಡಿಗಳು, ಧೃಷ್ಟದ್ಯುಮ್ನ–ಇವರೆಲ್ಲರೂ ಒಟ್ಟಾಗಿ ಸೇರಿ ಗರ್ಜನೆ ಮಾಡುತ್ತಾ ಕರ್ಣನನ್ನು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದರು. ಐದು ಇಂದ್ರಿಯಾರ್ಥಗಳು (ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು) ಜಿತೇಂದ್ರಿಯನಾದವನನ್ನು ಸ್ಥೈರ್ಯದಿಂದ ಕದಲಿಸಲು ಅಸಮರ್ಥ ವಾಗುವಂತೆ–ಐವರು ಪಾಂಚಾಲಪ್ರಮುಖರೂ ಒಟ್ಟಾಗಿ ಸೇರಿ ಕರ್ಣನ ಮೇಲೆ ದಾಳಿನಡೆಸಿದರೂ ಕರ್ಣನನ್ನು ರಥದಿಂದ ಕೆಳಕ್ಕೆ ಬೀಳಿಸಲು (ಸಂಹರಿಸಲು) ಸಮರ್ಥರಾಗಲಿಲ್ಲ. ಕರ್ಣನು ತನ್ನ ಬಾಣಗಳಿಂದ ಬಹಳ ಶೀಘ್ರವಾಗಿ ಐವರು ಪಾಂಚಾಲಯೋಧರ ಧನುಸ್ಸುಗಳನ್ನೂ, ಧ್ವಜಗಳನ್ನೂ, ಕುದುರೆಗಳನ್ನೂ, ಸೂತರನ್ನೂ, ಪತಾಕೆಗಳನ್ನೂ ಕತ್ತರಿಸಿ ಮತ್ತೆ ಐದು ಪೃಷತ್ಕಗಳಿಂದ ಆ ಐವರು ಪಾಂಚಾಲಯೋಧರನ್ನೂ ಪ್ರಹರಿಸಿದನು ಮತ್ತು ಸಿಂಹದೋಪಾದಿಯಲ್ಲಿ ಗಟ್ಟಿಯಾಗಿ ಗರ್ಜಿಸಿದನು.

ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿದ್ದ, ಸತತವಾಗಿ ಶತ್ರುಗಳನ್ನು ಸಂಹರಿಸುತ್ತಿದ್ದ, ಮೌರ್ವೀ-ಬಾಣಹಸ್ತನಾಗಿದ್ದ (ಮೌರ್ವಿ ಯನ್ನೂ ಬಾಣಗಳನ್ನೂ ಸದಾಕಾಲದಲ್ಲಿಯೂ ಕೈಯಲ್ಲಿ ಹಿಡಿದಿರುವಂತೆಯೇ ಕಾಣುತ್ತಿದ್ದ.) ಕರ್ಣನ ಧನುಸ್ಸಿನ ಟೇಂಕಾರಶಬ್ದದಿಂದ ಜನರಲ್ಲಿ ಪರ್ವತ-ವೃಕ್ಷಗಳಿಂದ ಕೂಡಿದ ಭೂಮಂಡಲವೇನಾದರೂ ಸೀಳಿಹೋಗುತ್ತಿರುವುದೋ ಎಂಬ ಭಾವನೆಯುಂಟಾಗಿ ಎಲ್ಲರೂ ಬಹಳ ಖಿನ್ನರಾದರು. ಕರ್ಣನು ಇಂದ್ರನ ಧನುಸ್ಸಿಗೆ ಸಮಾನವಾದ, ಸುದೀರ್ಘವಾಗಿ ಸೆಳೆದ ಧನುಸ್ಸಿನಿಂದ ಬಾಣಗಳನ್ನು ಸೃಷ್ಟಿಸುತ್ತಾ, ಪರಿವೇಶದಿಂದ ಕೂಡಿದ, ಜಾಜ್ವಲ್ಯ

ಮಾನವಾದ ಕಿರಣಮಂಡಲದಿಂದ ಯುಕ್ತನಾದ, ಅಂಶುಮಾಲಿಯಾದ ಸೂರ್ಯನಂತೆಯೇ ಪ್ರಕಾಶಿಸಿದನು. ಕರ್ಣನು ಶಿಖಂಡಿಯನ್ನು ಹನ್ನೆರಡು ಬಾಣಗಳಿಂದಲೂ, ಉತ್ತಮೌಜಸನನ್ನು ನಿಶಿತವಾದ ಆರು ಬಾಣಗಳಿಂದಲೂ, ಯುಧಾಮನ್ಯುವನ್ನು ಶೀಘ್ರವಾಗಿ ಹೋಗುವ ಮೂರು ಬಾಣಗಳಿಂದಲೂ, ಜನಮೇಜಯ-ಧೃಷ್ಟದ್ಯುಮ್ನರನ್ನು ಮೂರು-ಮೂರು ಬಾಣಗಳಿಂದಲೂ ಪ್ರಹರಿಸಿದನು.

ಮಾರಿಷ! ಜಿತೇಂದ್ರಿಯನಾದ ಪುರುಷನಿಂದ ಪರಾಜಿತವಾದ ಇಂದ್ರಿಯಾರ್ಥಗಳಂತೆ–ಕರ್ಣನಿಂದ ಪರಾಜಿತರಾದ ಜನಮೇಜಯ, ಉತ್ತಮೌಜಸ, ಯುಧಾಮನ್ಯು, ಶಿಖಂಡಿ, ಧೃಷ್ಟದ್ಯುಮ್ನ ಈ ಐವರು ಶತ್ರುಗಳಿಗೆ ಸಂತೋಷವನ್ನುಂಟುಮಾಡುತ್ತಾ ನಿಶ್ಚೇಷ್ಟರಾಗಿ ನಿಂತಿದ್ದರು. ಸಮುದ್ರಮಧ್ಯದಲ್ಲಿ ಭಿನ್ನವಾದ ಹಡಗಿನಲ್ಲಿರುವ ವ್ಯಾಪಾರಿಗಳಂತೆ–ಕರ್ಣನೆಂಬ ಮಹಾಸಾಗರದಲ್ಲಿ ಮುಳುಗಿಹೋಗುವುದರಲ್ಲಿದ್ದ ತಮ್ಮ ಸೋದರಮಾವಂದಿರನ್ನು ದ್ರೌಪದಿಯ ಐವರು ಮಕ್ಕಳು ಮುಳುಗಿ ಹೋಗುತ್ತಿರುವ ವ್ಯಾಪಾರಿಗಳನ್ನು ನೂತನ ನೌಕೆಗಳ ಮೂಲಕ ಉದ್ಧರಿಸುವಂತೆ–ಸುಸಜ್ಜಿತವಾದ ರಥಗಳಿಂದ ಉದ್ಧರಿಸಿದರು. (ದ್ರೌಪದಿಯ ಐವರು ಮಕ್ಕಳೂ ಐವರು ಪಾಂಚಾಲಯೋಧರನ್ನೂ ತಮ್ಮ ರಥಗಳಲ್ಲಿ ಹತ್ತಿಸಿಕೊಂಡರು.)

ಅನಂತರ ಶಿನಿಪ್ರವೀರನಾದ ಸಾತ್ಯಕಿಯು ನಿಶಿತವಾದ ಬಾಣಗಳಿಂದ ಕರ್ಣಪ್ರಮುಕ್ತವಾದ, ಬಹುಸಂಖ್ಯಾತವಾದ ಬಾಣಗಳನ್ನು ಕತ್ತರಿಸಿ ಲೋಹಮಯವಾದ, ನಿಶಿತವಾದ ಬಾಣಗಳಿಂದ ಕರ್ಣನನ್ನು ಬಹಳವಾಗಿ ಗಾಯಗೊಳಿಸಿ, ನಿನ್ನ ಹಿರಿಯಮಗನನ್ನು ಎಂಟು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಕೃಪಾಚಾರ್ಯರು, ಕೃತವರ್ಮಾ, ದುರ್ಯೋಧನ ಮತ್ತು ಕರ್ಣರು ನಿಶಿತವಾದ ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿದರು. ಹಿಂದೆ ದೈತ್ಯರಾಜನಾದ ಹಿರಣ್ಯಕಶಿಪುವು ನಾಲ್ವರು ದಿಕ್ಪಾಲಕರೊಡನೆ ಯುದ್ಧಮಾಡಿದಂತೆ–ಯದೂತ್ತಮನಾದ ಸಾತ್ಯಕಿಯು ನಿನ್ನ ಕಡೆಯ ನಾಲ್ವರು ಯೋಧರೊಡನೆಯೂ ಯುದ್ಧಮಾಡುತ್ತಿದ್ದನು. ಸುದೀರ್ಘವಾಗಿ ಸೆಳೆದ, ಬಹುಬಾಣವರ್ಷಿಯಾದ ಟೇಂಕರಿಸುತ್ತಿರುವ ಮುಂಚಾಚಿದ ಧನುಸ್ಸಿನಿಂದ ಸಾತ್ಯಕಿಯು–ಶರತ್ಕಾಲದಲ್ಲಿ ಆಕಾಶದ

ಮಧ್ಯಭಾಗಕ್ಕೆ ಬಂದ ಸೂರ್ಯನಂತೆ–ಶತ್ರುಗಳಿಂದ ದುರ್ಧರ್ಷನಾದನು. (ಲೋಕದ ಜನಗಳಿಗೆ ಶರತ್ಕಾಲದ ಮಧ್ಯಾಹ್ನದ ಸೂರ್ಯನನ್ನು ನೋಡಲಾಗದಂತೆ–ಧನುಷ್ಪಾಣಿಯಾದ ಸಾತ್ಯಕಿಯನ್ನು ಶತ್ರುಗಳಿಂದ ನೋಡಲು ಶಕ್ಯವಾಗಲಿಲ್ಲ.)

ಶತ್ರುಗಳ ಸಂಹಾರದ ಸಮಯದಲ್ಲಿ ದೇವತೆಗಳೆಲ್ಲರೂ ಒಟ್ಟಾಗಿ ಇಂದ್ರನನ್ನು ರಕ್ಷಿಸುತ್ತಿದ್ದಂತೆ–ಶತ್ರುತಾಪಕರಾದ ಪಾಂಚಾಲಮಹಾರಥ ರೆಲ್ಲರೂ ಪುನಃ ರಥಗಳಲ್ಲಿ ಕುಳಿತು ಕವಚಗಳನ್ನು ಧರಿಸಿ ಐಕಮತ್ಯದಿಂದ ಸಾತ್ಯಕಿಯನ್ನು ರಕ್ಷಿಸುತ್ತಿದ್ದರು. ಹಿಂದೆ ಅಸುರರಿಗೂ-ಸುರರಿಗೂ ಭಯಂಕರವಾದ ಯುದ್ಧವು ನಡೆಯುತ್ತಿದ್ದಂತೆ–ನಿನ್ನ ಶತ್ರುಗಳಿಗೂ ಮತ್ತು ನಿನ್ನ ಕಡೆಯ ಸೈನಿಕರಿಗೂ ಗಜಾಶ್ವ-ರಥಗಳ ವಿನಾಶಕವಾದ ಅತಿದಾರುಣವಾದ ಯುದ್ಧವು ನಡೆಯಿತು. ಬಹುಸಂಖ್ಯಾತರಾದ ರಥ-ಗಜಾಶ್ವ- ಪದಾತಿಸೈನಿಕರು ನಾನಾವಿಧವಾದ ಶಸ್ತ್ರಾಸ್ತ್ರಗಳಿಂದ ಮುಚ್ಚಿಹೋಗಿದ್ದರು. ಎರಡೂ ಪಕ್ಷಗಳ ಸೈನಿಕರೂ ಪರಸ್ಪರವಾಗಿ ಬಡಿದಾಡುತ್ತಾ ಯುದ್ಧಮಾಡುತ್ತಿದ್ದರು. ಅವರಲ್ಲಿ ಹಲವರು ತತ್ತರಿಸಿದರು; ಗಾಯಗೊಂಡಿದ್ದ ಕೆಲವು ಯೋಧರು ಆರ್ತರಾಗಿ ಕೂಗಿಕೊಳ್ಳುತ್ತಿದ್ದರು ಕೆಲವು ಯೋಧರು ಪ್ರಾಣತೊರೆದು ಕೆಳಕ್ಕೆ ಬೀಳುತ್ತಿದ್ದರು.

ಭಯಂಕರವಾದ ಯುದ್ಧವು ಹೀಗೆ ನಡೆಯುತ್ತಿರಲಾಗಿ, ದುರ್ಯೋಧನನ ತಮ್ಮನಾದ ನಿನ್ನ ಮಗ ದುಃಶಾಸನನು ಭಯರಹಿತನಾಗಿ ಬಾಣಗಳನ್ನು ಸುರಿಸುತ್ತಾ ಭೀಮಸೇನನನ್ನು ಸಮೀಪಿಸಿದನು. ಸಿಂಹವು ಮಹಾರುರುವೆಂಬ ಜಿಂಕೆಯನ್ನು ಆಕ್ರಮಿಸುವಂತೆ–ವೃಕೋದರನು ಅತ್ಯಂತ ತ್ವರೆಯಿಂದ ದುಃಶಾಸನನನ್ನು ಆಕ್ರಮಿಸಿದನು.

ಅವರಿಬ್ಬರ ಮನಸ್ಸುಗಳಲ್ಲಿಯೂ ರೋಷವು ತುಂಬಿಹೋಗಿದ್ದಿತು. ಇಬ್ಬರೂ ತಮ್ಮ ಪ್ರಾಣಗಳನ್ನೇ ಪಣವನ್ನಾಗಿಟ್ಟು ಯುದ್ಧವೆಂಬ ಭಯಂಕರ ವಾದ ಜೂಜನ್ನಾಡುತ್ತಿದ್ದರು. ಪ್ರಚಂಡರಾದ ಭೀಮಸೇನ-ದುಃಶಾಸನರ ಸಂಗ್ರಾಮವು ಆ ಸಮಯದಲ್ಲಿ ಹಿಂದೆ ಶಕ್ರ-ಶಂಬರಾಸುರರ ನಡುವೆ ನಡೆದ ಮಹಾಸಂಗ್ರಾಮದಂತೆಯೇ ಇದ್ದಿತು. ಕಾಮಾಸಕ್ತವಾದ ಮನಸ್ಸಿನಿಂದ ಕೂಡಿರುವ, ಮದೋದಕವನ್ನು ಸುರಿಸುತ್ತಿರುವ ಎರಡು ಮದಿಸಿದ ಆನೆಗಳು

ರತಿಸುಖವನ್ನಪೇಕ್ಷಿಸಿ ನಿಂತಿರುವ ಹೆಣ್ಣಾನೆಯ ಸಮೀಪದಲ್ಲಿ ಹೋರಾಡುವಂತೆ–ಭೀಮ-ದುಃಶಾಸನರು ಹರಿತವಾಗಿದ್ದ, ಶರೀರಕ್ಕೆ ನೋವನ್ನುಂಟು ಮಾಡುವ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಬಹಳವಾಗಿ ಗಾಯಗೊಳಿಸುತ್ತಿದ್ದರು. ಹೀಗೆ ಭಯಂಕರವಾದ ಯುದ್ಧದಲ್ಲಿ ಇಬ್ಬರೂ ತೊಡಗಿದ್ದಾಗ ವೃಕೋದರನು ಬಹಳ ವೇಗದಿಂದ ನಿನ್ನ ಮಗನ ಧನುಸ್ಸನ್ನೂ ಧ್ವಜ



ವನ್ನೂ ಎರಡು ಕ್ಷುರಗಳಿಂದ ಕತ್ತರಿಸಿದನು. ಮತ್ತೊಂದು ಬಾಣದಿಂದ ಭೀಮನು ದುಃಶಾಸನನ ಹಣೆಯಲ್ಲಿ ಪ್ರಹರಿಸಿ ಬೇರೊಂದು ಬಾಣದಿಂದ ದುಃಶಾಸನನ ಸಾರಥಿಯ ತಲೆಯನ್ನು ಹಾರಿಸಿದನು. ರಾಜಪುತ್ರನಾದ ದುಃಶಾಸನನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಭೀಮಸೇನನನ್ನು ಹನ್ನೆರಡು ಬಾಣಗಳಿಂದ ಪ್ರಹರಿಸಿದನು. ಕುದುರೆಗಳನ್ನೂ ತಾನೇ ನಿಯಂತ್ರಿ

ಸುತ್ತಾ ನೇರವಾಗಿ ಹೋಗುವ ಬಾಣಗಳನ್ನು ಭೀಮಸೇನನ ಮೇಲೆ ಪುನಃ ಸುರಿಸಿದನು. ಬಳಿಕ ದುಃಶಾಸನನು ಸೂರ್ಯನ ಕಿರಣಗಳ ಪ್ರಭೆಗೆ ಸಮಾನವಾದ ಪ್ರಭೆಯನ್ನು ಹೊಂದಿದ್ದ, ಚಿನ್ನದಿಂದಲೂ, ಶ್ರೇಷ್ಠವಾದ ವಜ್ರಗಳಿಂದಲೂ, ಒಳ್ಳೆಯ ಜಾತಿಯ ರತ್ನಗಳಿಂದಲೂ ಸಮಲಂಕೃತ ವಾಗಿದ್ದ, ಮಹೇಂದ್ರನ ವಜ್ರಾಯುಧ ಮತ್ತು ಸಿಡಿಲುಗಳಂತೆ ದುಃಸಹ ವಾಗಿದ್ದ, ಭೀಮನ ಶರೀರಭೇದನಸಾಮರ್ಥ್ಯವನ್ನು ಹೊಂದಿದ್ದ ಬಾಣವನ್ನು ಭೀಮಸೇನನ ಮೇಲೆ ಪ್ರಯೋಗಿಸಿದನು. ಕ್ರೂರವಾದ ಆ ಬಾಣದಿಂದ ಪ್ರಹೃತನಾದ ವೃಕೋದರನು ಶಿಥಿಲಗಾತ್ರನಾಗಿ ಪ್ರಾಣಹೋದವನಂತೆಯೇ ಕೈಗಳೆರಡನ್ನೂ ಚಾಚಿಕೊಂಡು ಶ್ರೇಷ್ಠವಾದ ರಥವನ್ನಾಶ್ರಯಿಸಿ ಬಿದ್ದುಬಿಟ್ಟನು. (ರಥದಲ್ಲಿ ಕುಳಿತಿದ್ದಂತೆಯೇ ಕುಸಿದುಬಿದ್ದನು.) ಸ್ವಲ್ಪ ಹೊತ್ತಿನಲ್ಲಿಯೇ ಸಂಜ್ಞೆಯನ್ನು ಪಡೆದುಕೊಂಡು ಗಟ್ಟಿಯಾಗಿ ಗರ್ಜನೆಮಾಡಿದನು."

೮೨ನೆಯ ಅಧ್ಯಾಯವು ಮುಗಿಯಿತು.

೮೩ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಭೀಮಸೇನನು ದುಃಶಾಸನನ ಎದೆಯನ್ನು ಬಗೆದು ರಕ್ತಪಾನಮಾಡಿ ಸಂಹರಿಸಿದುದು: ಯುಧಾಮನ್ಯುವು ಚಿತ್ರಸೇನನನ್ನು ಸಂಹರಿಸಿದುದು: ಭೀಮನ ಹರ್ಷೋದ್ಗಾರ

ಸಂಜಯನು ಭೀಮ-ದುಃಶಾಸನರ ಯುದ್ಧವನ್ನು ವರ್ಣಿಸುತ್ತಾ ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ರಾಜಪುತ್ರನಾದ ದುಃಶಾಸನನು ಭೀಮಸೇನನೊಡನೆ ಭಯಂಕರವಾಗಿ ಯುದ್ಧಮಾಡುತ್ತಾ ಅತ್ಯಂತದುಷ್ಕರವಾದ ಸಾಹಸಕರ್ಮ ವನ್ನು ಮಾಡಿದನು. ಸಂಜ್ಞೆಯನ್ನು ಪಡೆದು ಪುನಃ ಯುದ್ಧದಲ್ಲಿ ತೊಡಗಿದ ಭೀಮಸೇನನ ಧನುಸ್ಸನ್ನು ಬಾಣದಿಂದ ಕತ್ತರಿಸಿದನು ಮತ್ತು ಅರುವತ್ತು ಬಾಣಗಳಿಂದ ಭೀಮನ ಸಾರಥಿಯನ್ನೂ ಪ್ರಹರಿಸಿದನು. ವೇಗವಂತನಾದ ದುಃಶಾಸನನು ಸಾರಥಿಯನ್ನು ಪ್ರಹರಿಸಿದನಂತರ ಒಂಬತ್ತು ಪೃಷತ್ಕಗಳಿಂದ ಭೀಮನನ್ನೂ ಪ್ರಹರಿಸಿದನು. ಮಹಾತ್ಮನಾದ ದುಃಶಾಸನನು ಬಹಳ ಬೇಗ

ಶ್ರೇಷ್ಠವಾದ ಅನೇಕಬಾಣಗಳಿಂದ ಭೀಮಸೇನನನ್ನು ಪುನಃ ಗಾಯಗೊಳಿಸಿದನು. ಅದರಿಂದ ಬಹಳ ಕ್ರುದ್ಧನಾದ, ವೇಗವಂತನಾದ ಭೀಮಸೇನನು ಉಗ್ರವಾದ ಶಕ್ತ್ಯಾಯುಧವನ್ನು ನಿನ್ನ ಮಗನ ಮೇಲೆ ಪ್ರಯೋಗಿಸಿದನು. ಪ್ರಜ್ಜ್ವಲಿಸುವ ಉಲ್ಕೆಯೋಪಾದಿಯಲ್ಲಿ ಮೇಲೆ ಬೀಳಲು ರಭಸದಿಂದ ಬರುತ್ತಿದ್ದ, ಅತಿಘೋರವಾದ, ಭೀಮಪ್ರಮುಕ್ತವಾದ ಶಕ್ತ್ಯಾಯುಧವನ್ನು ಮಹಾತ್ಮನಾದ ದುಃಶಾಸನನು ಕಿವಿಯ ತುದಿಯವರೆಗೂ ಎಳೆದು ಬಿಡಲ್ಪಟ್ಟ ಹತ್ತು ಬಾಣಗಳಿಂದ ಕತ್ತರಿಸಿದನು. ನಿನ್ನ ಮಗನ ಸುದುಷ್ಕರವಾದ ಆ ಸಾಹಸಕರ್ಮವನ್ನು ನೋಡಿ ಎಲ್ಲ ಯೋಧರೂ ಪ್ರಹೃಷ್ಟರಾಗಿ ದುಃಶಾಸನನನ್ನು ಶ್ಲಾಘಿಸಿದರು. ಅನಂತರ ನಿನ್ನ ಮಗನು ಪುನಃ ಬಹಳ ಬೇಗ ಉಗ್ರವಾದ ಬಾಣವೊಂದನ್ನು ಪ್ರಯೋಗಿಸಿ ಭೀಮನನ್ನು ಬಹಳ ತೀವ್ರವಾಗಿ ಗಾಯಗೊಳಿಸಿದನು. ಅದರಿಂದ ಭೀಮಸೇನನು ಬಹಳವಾಗಿ ಖತಿಗೊಂಡನು. ದುಃಶಾಸನನ ಮುಖವನ್ನು ನೋಡಿ ದೊಡನೆಯೇ ಭೀಮಸೇನನು ಕೋಪದಿಂದ ಉರಿದುಹೋದನು. ಗಟ್ಟಿಯಾಗಿ ಕೂಗಿ ಹೇಳಿದನು:

**ವಿದ್ಧೋಽಸ್ಮಿ ವೀರಾಶು ಭೃಶಂ ತ್ವಯಾದ್ಯ**
**ಸಹಸ್ವ ಭೂಯೋಽಪಿ ಗದಾಪ್ರಹಾರಮ್ ।**

"ವೀರನೇ! ನಾನು ನಿನ್ನಿಂದ ಬಹಳವಾಗಿ ಗಾಯಗೊಂಡವನಾಗಿದ್ದೇನೆ. ಈಗ ನಾನು ಮಾಡಲಿರುವ ಗದಾಪ್ರಹಾರವನ್ನು ಸಹಿಸಿಕೊ."

ಹೀಗೆಂದು ಗಟ್ಟಿಯಾಗಿ ಹೇಳಿ ಅತ್ಯಂತಕುಪಿತನಾಗಿದ್ದ ಭೀಮಸೇನನು ಭಯಂಕರವಾಗಿದ್ದ ಗದೆಯನ್ನು ದುಃಶಾಸನನ ವಧೆಗಾಗಿ ಕೈಯಲ್ಲೆತ್ತಿಕೊಳ್ಳುತ್ತಾ, ದುಃಶಾಸನನನ್ನು ಕುರಿತು ಹೇಳಿದನು:

**ಅದ್ಯಾಹಮಹಂ ದುರಾತ್ಮನ್ನಾಪ್ಸ್ಯಾಮಿ ತೇ ಶೋಣಿತಮಾಜಿಮಧ್ಯೇ ॥**

"ದುರಾತ್ಮನೇ! ಈ ರಣರಂಗದ ಮಧ್ಯದಲ್ಲಿ ಈಗಲೇ ನಾನು ನಿನ್ನ ರಕ್ತವನ್ನು ಕುಡಿಯುತ್ತೇನೆ."

ಭೀಮಸೇನನು ಹೀಗೆ ಹೇಳುತ್ತಿದ್ದಾಗಲೇ ನಿನ್ನ ಮಗನು ಭೀಮ ಸೇನನ ಮೇಲೆ ಮೃತ್ಯುರೂಪವಾದ ಉಗ್ರವಾದ ಶಕ್ತ್ಯಾಯುಧವನ್ನು

ಅತ್ಯಂತವೇಗವಾಗಿ ಪ್ರಯೋಗಿಸಿದನು. ರೋಷಾಭಿಭೂತನಾಗಿದ್ದ ಭೀಮಸೇನನೂ ಸುಘೋರವಾದ ಗದೆಯನ್ನು ತಿರುಗಿಸಿ ದುಃಶಾಸನನ ಕಡೆಗೆ ರಭಸದಿಂದ ಎಸೆದನು. ಆ ಗದೆಯು ತನ್ನೆದುರಾಗಿ ಬಂದ ದುಃಶಾಸನ ಪ್ರಮುಕ್ತವಾಗಿದ್ದ ಶಕ್ತ್ಯಾಯುಧವನ್ನು ನುಚ್ಚುನೂರುಮಾಡಿ ನಿನ್ನ ಮಗನ ತಲೆಯನ್ನು ಅಪ್ಪಳಿಸಿತು.

**ಸ ವಿಕ್ಷರನ್ನಾಗ ಇವ ಪ್ರಭಿನ್ನೋ**
**ಗದಾಮಸ್ಮೈ ತುಮುಲೇ ಪ್ರಾಹಿಣೋದ್ವೈ।**
**ತಯಾಹರದ್ದಶ ಧನ್ವನ್ತರಾಣಿ**
**ದುಃಶಾಸನಂ ಭೀಮಸೇನಃ ಪ್ರಸಹ್ಯ ॥೯॥**

ದುಃಶಾಸನನ ಬಾಣಗಳಿಂದ ಪ್ರಹೃತನಾದ ಭೀಮಸೇನನು ಮದೋದಕವನ್ನು ಸುರಿಸುವ ಮದಗಜದಂತೆ ರಕ್ತವನ್ನು ಸುರಿಸುತ್ತಾ, ಭಯಂಕರವಾದ ಆ ಯುದ್ಧದಲ್ಲಿ ಬಲಪೂರ್ವಕವಾಗಿ ದುಃಶಾಸನನ ಮೇಲೆ ಗದೆಯನ್ನೆಸೆದನು. ಆ ಗದೆಯಿಂದ ಭೀಮಸೇನನು ದುಃಶಾಸನನನ್ನು ಹತ್ತು ಧನುಸ್ಸುಗಳಷ್ಟು ದೂರಕ್ಕೆ ತಳ್ಳಿಬಿಟ್ಟನು. (ಭೀಮಸೇನನ ಗದೆಯು ದುಃಶಾಸನನು ಪ್ರಯೋಗಿಸಿದ ಶಕ್ತ್ಯಾಯುಧವನ್ನು ಧ್ವಂಸಮಾಡಿತಲ್ಲದೇ ದುಃಶಾಸನನ ತಲೆಯನ್ನು ಅಪ್ಪಳಿಸಿ ಅವನನ್ನು ಹತ್ತು ಧನುಸ್ಸುಗಳಷ್ಟು ದೂರಕ್ಕೂ ತಳ್ಳಿಬಿಟ್ಟಿತು.)

ಭೀಮಸೇನನ ವೇಗವಾದ ಗದೆಯಿಂದ ಪ್ರಹೃತನಾದ ದುಃಶಾಸನನ ವಸ್ತ್ರ-ಕವಚಾಭರಣ-ಮಾಲೆಗಳು ಹಾಳಾಗಿಹೋದುವು. ಅವನು ಮಹಾ ವೇದನೆಯಿಂದ ಸಂಕಟಪಡುತ್ತಿದ್ದನು. ನಡುಗುತ್ತಿದ್ದನು. ನೆಲದ ಮೇಲೆ ಬಿದ್ದು ಹೊರಳಾಡುತ್ತಿದ್ದನು. ಭೀಮಸೇನನ ಗದಾಪಾತದಿಂದ ದುಃಶಾಸನನ ಸೂತನು ಹತನಾದನು. ಕುದುರೆಗಳೂ ಪ್ರಾಣತೊರೆದುವು. ರಥವೂ ಚೂರ್ಣೀಕೃತವಾಯಿತು. ಎಲ್ಲ ಪಾಂಡವರೂ ಮತ್ತು ಪಾಂಚಾಲರೂ ದುಃಶಾಸನನ ದುರವಸ್ಥೆಯನ್ನು ನೋಡಿ ಪರಮಹೃಷ್ಟರಾಗಿ ಸಿಂಹನಾದಗಳನ್ನು ಮಾಡಿದರು. ದುಃಶಾಸನನನ್ನು ಗದಾಪ್ರಹಾರದಿಂದ ಕೆಳಕ್ಕೆ ಕೆಡವಿದ ವೃಕೋದರನು ಹರ್ಷದಿಂದ ನಾಲ್ಕು ದಿಕ್ಕುಗಳನ್ನೂ ಶಬ್ದದಿಂದ ತುಂಬುತ್ತಾ

ಗರ್ಜಿಸಿದನು. ಆ ಘೋರಗರ್ಜನೆಯಿಂದಾಗಿ ಅವನ ಪಕ್ಕದಲ್ಲಿದ್ದ ಎಲ್ಲರೂ ಮೂರ್ಛಾಕ್ರಾಂತರಾಗಿ ಕೆಳಕ್ಕೆ ಬಿದ್ದರು.

ಬಳಿಕ ವೇಗವಂತನಾದ ಭೀಮಸೇನನು ಬಹಳ ಬೇಗ ರಥದಿಂದಿಳಿದು ದುಃಶಾಸನನ ಬಳಿಗೆ ಹೋದನು. ಆ ಸಮಯದಲ್ಲಿ ಭೀಮಸೇನನಿಗೆ ಹಿಂದೆ ನಿನ್ನ ಮಕ್ಕಳಾಡಿದ್ದ ಶತ್ರುತ್ವದ ಮಾತುಗಳು ಸ್ಮರಣೆಗೆ ಬಂದುವು. ರಣರಂಗದ ನಾಲ್ಕು ದಿಕ್ಕುಗಳಲ್ಲಿಯೂ ಪ್ರಧಾನಭೂತರಾದ ವೀರರ ನಡುವೆ ಭಯಂಕರವಾದ ಮತ್ತು ಸುಘೋರವಾದ ಯುದ್ಧವು ನಡೆಯುತ್ತಿರಲಾಗಿ ಇತರರ ಯೋಚನೆಗೂ ನಿಲುಕದಿರುವಂತಹ ಸಾಹಸಕರ್ಮಗಳನ್ನು ಮಾಡುವ ಮಹಾಬಾಹುವಾದ ಭೀಮಸೇನನು–ನಿರಪರಾಧಿನಿಯಾದ ದ್ರೌಪದೀದೇವಿಯ ಕೇಶಗ್ರಹಣವನ್ನೂ, ರಜಸ್ವಲೆಯಾಗಿದ್ದ ಅವಳ ವಸ್ತ್ರಾಪಹರಣವನ್ನೂ, ಆ ಸಮಯದಲ್ಲಿ ಅವಳ ಪತಿಗಳು ನಿಃಸಹಾಯಕರಾಗಿ ಅಧೋಮುಖರಾಗಿ ಕುಳಿತಿದ್ದುದನ್ನೂ, ಕೌರವರು ಕೊಟ್ಟಿದ್ದ ಇನ್ನೂ ಅನೇಕ ದುಃಖಗಳನ್ನೂ ಸ್ಮರಿಸುತ್ತಾ– ಆಜ್ಯಾಹುತಿಗಳಿಂದ ಪ್ರಜ್ವಲಿತನಾದ ಯಜ್ಞೇಶ್ವರನಂತೆ– ಕೋಪದಿಂದ ಧಗ-ಧಗನೆ ಉರಿಯತೊಡಗಿದನು. ಆ ಸಮಯದಲ್ಲವನು ಕರ್ಣನನ್ನೂ, ದುರ್ಯೋಧನನನ್ನೂ, ಕೃಪರನ್ನೂ, ಅಶ್ವತ್ಥಾಮನನ್ನೂ ಮತ್ತು ಕೃತವರ್ಮನನ್ನೂ ಉದ್ದೇಶಿಸಿ–'ನಿಹನ್ಮಿ **ದುಃಶಾಸನಮದ್ಯ ಪಾಪಂ ಸಂರಕ್ಷ್ಯತಾಮದ್ಯ ಸಮಸ್ತಯೋಧಾಃ ॥** ಪಾಪಿಷ್ಠನಾದ ದುಃಶಾಸನನನ್ನು ನಾನೀಗಲೇ ಸಂಹಾರಮಾಡುತ್ತೇನೆ. ಸಮಸ್ತಯೋಧರೂ ಸೇರಿ ಇವನನ್ನು ರಕ್ಷಿಸಿಕೊಳ್ಳುವ ಸಾಮರ್ಥ್ಯವಿದ್ದರೆ ರಕ್ಷಿಸಿಕೊಳ್ಳಿರಿ'–ಎಂದು ಗರ್ಜಿಸಿ ಹೇಳಿದನು.

ಅತಿಬಲನಾದ, ವೇಗಶಾಲಿಯಾದ ಭೀಮಸೇನನು ಹೀಗೆ ಹೇಳಿ ದುಃಶಾಸನನನ್ನು ಸಂಹಾರಮಾಡುವ ಇಚ್ಛೆಯಿಂದ ರಥದಿಂದ ಕೆಳಕ್ಕೆ ಧುಮುಕಿ ಬಹಳ ಬೇಗ ಅವನ ಸಮೀಪಕ್ಕೆ ಹೋದನು. ಅರಣ್ಯದಲ್ಲಿನ ಸಿಂಹವು ಮದಿಸಿದ ಆನೆಯನ್ನು ಹಿಡಿಯುವಂತೆ–ಏಕೈಕವೀರನಾದ ಭೀಮ ಸೇನನು ದುರ್ಯೋಧನ-ಕರ್ಣರ ಸಮಕ್ಷದಲ್ಲಿಯೇ ಬಲಾತ್ಕಾರಪೂರ್ವಕ ವಾಗಿ ದುಃಶಾಸನನನ್ನು ಹಿಡಿದುಕೊಂಡು ಪ್ರಯತ್ನಪೂರ್ವಕವಾಗಿ ಅವನ

ಮೇಲೆ ದೃಷ್ಟಿಯಿಟ್ಟು (ಅವನನ್ನೇ ದುರುಗುಟ್ಟಿಕೊಂಡು ನೋಡುತ್ತಾ) ಸುನಿಶಿತವಾದ ಅಲುಗಿನಿಂದ ಕೂಡಿದ್ದ, ಶುದ್ಧವಾಗಿದ್ದ ಕತ್ತಿಯನ್ನು ಮೇಲೆತ್ತಿ, ನಡುಗುತ್ತಿದ್ದ ದುಃಶಾಸನನ ಕುತ್ತಿಗೆಯನ್ನು ಕಾಲಿನಿಂದ ಮೆಟ್ಟಿ ಹೇಳಿದನು:



ಉವಾಚ ತದ್ಗೌರಿತಿ ಯದ್ಬ್ರುವಾಣೋ
    ಹೃಷ್ಟೋ ವದೇಃ ಕರ್ಣಸುಯೋಧನಾಭ್ಯಾಮ್ ।
ಯೇ ರಾಜಸೂಯಾವಭೃಥೇ ಪವಿತ್ರಾ
    ಜಾತಾಃ ಕಚಾ ಯಾಜ್ಞಸೇನ್ಯಾ ದುರಾತ್ಮನ್ ।
ತೇ ಪಾಣಿನಾ ಕತರೇಣಾವಕೃಷ್ಟಾ-
    ಸ್ತದ್ಬ್ರೂಹಿ ತ್ವಾಂ ಪೃಚ್ಛತಿ ಭೀಮಸೇನಃ ॥೨೧॥

“ದುರಾತ್ಮನೇ! ನೀನು ಕರ್ಣ-ದುರ್ಯೋಧನರೊಡನೆ ಸೇರಿಕೊಂಡು ಪರಮಹೃಷ್ಟನಾಗಿ ದ್ರೌಪದಿಯನ್ನು ‘ಗೌಃ ಗೌಃ’–ಎಂದು ಹೇಳಿದೆಯಲ್ಲವೇ? ರಾಜಸೂಯಯಾಗದ ಅವಭೃತಸ್ನಾನದಿಂದ ಪವಿತ್ರವಾಗಿ ಮಾಡಲ್ಪಟ್ಟಿದ್ದ ಯಾಜ್ಞಸೇನಿಯ ತಲೆಗೂದಲುಗಳನ್ನು ನೀನು ಯಾವ ಕೈಯಿಂದ ಹಿಡಿದೆಳೆದೆ? ಹೇಳು. ಭೀಮಸೇನನು ನಿನ್ನನ್ನೀಗ ಪ್ರಶ್ನಿಸುತ್ತಿದ್ದಾನೆ. ಈ ಕೂಡಲೇ ಉತ್ತರಿಸು.”

ಸುಘೋರವಾದ ಭೀಮಸೇನನ ಆ ಮಾತನ್ನು ಕೇಳಿ ದುಃಶಾಸನನು ಭೀಮಸೇನನನ್ನು ದಿಟ್ಟಿಸಿನೋಡಿ ರೋಷದಿಂದ ಜ್ವಲಿಸಿದನು. ದುಃಶಾಸನನ ಕಣ್ಣುಗಳು ತಿರುಗುತ್ತಿದ್ದುವು. ಆ ರಣಾಂಗಣದಲ್ಲಿ ವಿಸ್ಮಯದಿಂದ ಕೌರವ-ಸೋಮಕಯೋಧರೆಲ್ಲರೂ ಕೇಳುತ್ತಿರುವಂತೆಯೇ ದುಃಶಾಸನನು ಭೀಮಸೇನನನ್ನು ಕುರಿತು (ತನ್ನ ಕೈಯನ್ನು ತೋರಿಸುತ್ತಾ) ರೋಷಪೂರ್ವಕವಾಗಿ ಹೇಳಿದನು:

**ಅಯಂ ಕರಿಕರಾಕಾರಃ ಪೀನಸ್ತನವಿಮರ್ದನಃ ।**
**ಗೋಸಹಸ್ರಪ್ರದಾತಾ ಚ ಕ್ಷತ್ರಿಯಾನ್ತಕರಃ ಕರಃ ॥೨೩॥**

**ಅನೇನ ಯಾಜ್ಞಸೇನ್ಯಾ ಮೇ ಭೀಮ ಕೇಶಾ ವಿಕರ್ಷಿತಾಃ ।**
**ಪಶ್ಯತಾಂ ಕುರುಮುಖ್ಯಾನಾಂ ಯುಷ್ಮಾಕಂ ಚ ಸಭಾಸದಾಮ್ ॥೨೪॥**

“ಭೀಮಸೇನ! ಆನೆಯ ಸೊಂಡಿಲಿನ ಆಕಾರದಲ್ಲಿರುವ, ರಮಣಿಯರ ಪೀನಸ್ತನಗಳನ್ನು ಮರ್ದಿಸುವ, ಸಾವಿರಾರು ಗೋವುಗಳನ್ನು ದಾನಮಾಡಿರುವ, ಕ್ಷತ್ರಿಯರನ್ನು ವಿನಾಶಗೊಳಿಸಿರುವ ನೀನು ಪ್ರಶ್ನಿಸುತ್ತಿರುವ ಹಸ್ತವು ಇದೇ ಆಗಿದೆ. ಭೀಮ! ಈ ಕೈಯಿಂದಲೇ ನಾನು–ಕುರುಮುಖ್ಯರೂ, ನೀವೂ ಮತ್ತು ಸಭಾಸದರೂ ನೋಡುತ್ತಿರುವಂತೆಯೇ ಯಾಜ್ಞಸೇನಿಯ ತಲೆಗೂದಲುಗಳನ್ನು ಹಿಡಿದು ತುಂಬಿದ ಸಭೆಗೆ ಅವಳನ್ನು ಸೆಳೆದುತಂದೆನು. ತಿಳಿಯಿತೇ?”

ರಾಜಕುಮಾರನಾದ ದುಃಶಾಸನನು ನಸುನಗುತ್ತಾ ರಣಾಂಗಣದಲ್ಲಿ ಹೇಳಿದ ಮಾತನ್ನು ಕೇಳಿ ಕೋಪದ ಮೂರ್ತಿಯೇ ಆಗಿ ಪರಿವರ್ತಿತನಾದ ಭೀಮಸೇನನು–ಅವನ ವಕ್ಷಃಸ್ಥಳವನ್ನು ಬಲವಾಗಿ ಗುದ್ದಿ, ಎರಡು

ತೋಳುಗಳಿಂದಲೂ ಅವನನ್ನು ಬಾಚಿ ತಬ್ಬಿಕೊಂಡು, ಉಚ್ಚಸ್ವರದಲ್ಲಿ ಸಿಂಹನಾದಮಾಡುತ್ತಾ, ಅಲ್ಲಿದ್ದ ಸಮಸ್ತಯೋಧರನ್ನೂ ಸಂಬೋಧಿಸಿ ಹೇಳಿದನು:

"ಕುರುಯೋಧರೇ ! ಈ ಕ್ಷಣದಲ್ಲಿ ದುಃಶಾಸನನು ತನ್ನ ತೋಳನ್ನು ಕಳೆದುಕೊಳ್ಳುತ್ತಾನೆ. ತೋಳನ್ನು ಮಾತ್ರವಲ್ಲದೇ ಪ್ರಾಣಗಳನ್ನೂ ತ್ಯಾಗ ಮಾಡಲಿರುವ ಈ ದುಃಶಾಸನನನ್ನು ರಕ್ಷಿಸಲು ಯಾರಿಗೆ ಸಾಮರ್ಥ್ಯ ವಿರುವುದೋ ಅವನು ಇವನನ್ನು ರಕ್ಷಿಸಲು ಮುಂದೆ ಬರಲಿ!"– ಹೀಗೆಂಬುದಾಗಿ ಕುರುಯೋಧರನ್ನು ಆಹ್ವಾನಿಸುತ್ತಾ ಕ್ರುದ್ಧನಾಗಿದ್ದ, ಮಹಾಬಲನಾದ, ಮಹಾತ್ಮನಾದ ಭೀಮಸೇನನು ತನ್ನ ಕೈಯಿಂದ ದುಃಶಾಸನನ ಭುಜವನ್ನು ಕಿತ್ತೆಸೆದನು. ಸಮಸ್ತವೀರರ ಮಧ್ಯದಲ್ಲಿ ವಜ್ರಾಯುಧಕ್ಕೆ ಸಮಾನವಾಗಿದ್ದ ಅದೇ ಕೈಯಿಂದಲೇ ದುಃಶಾಸನನನ್ನು ಪ್ರಹರಿಸಿದನು.

ಅನಂತರ ಭೂಮಿಯ ಮೇಲೆ ಬಿದ್ದಿದ್ದ ದುಃಶಾಸನನ ಎದೆಯನ್ನು ಬಗೆದು ಬಿಸಿ-ಬಿಸಿಯಾಗಿದ್ದ ರಕ್ತವನ್ನು ಕುಡಿಯಲು ಉಪಕ್ರಮಿಸಿದನು. ಅರ್ಧಂಬರ್ಧ ಜೀವಹೋಗಿದ್ದ ದುಃಶಾಸನನ ಶರೀರವು ವಿಲಿ-ವಿಲಿ ಗುಟ್ಟುತ್ತಿದ್ದಿತು. ಮೇಲೇಳಲು ಪ್ರಯತ್ನಿಸುತ್ತಿದ್ದಿತು. ಅದನ್ನೂ ಸಹಿಸದಿದ್ದ ಭೀಮಸೇನನು ಕತ್ತಿಯನ್ನು ಹೊರತೆಗೆದು ನಿನ್ನ ಮಗನ ತಲೆಯನ್ನು ಕತ್ತರಿಸಿ ಶರೀರವು ಪುನಃ ಮೇಲೇಳಲಾಗದಂತೆ ಕೆಳಕ್ಕೆ ಕೆಡವಿದನು. ಬುದ್ಧಿವಂತನಾದ ಭೀಮಸೇನನು ತನ್ನ ಪ್ರತಿಜ್ಞೆಯನ್ನು ಸತ್ಯಪ್ರತಿಜ್ಞೆಯನ್ನಾಗಿ ಮಾಡುವ ಅಭಿಲಾಷೆಯಿಂದ ದುಃಶಾಸನನ ಬಿಸಿರಕ್ತವನ್ನು ಪುನಃ ಕುಡಿದನು. ರಕ್ತದ ರುಚಿಯನ್ನು ಪುನಃ ಪುನಃ ಆಸ್ವಾದಿಸುತ್ತಾ ದುಃಶಾಸನನ ಕಡೆಗೆ ನೋಡುತ್ತಾ ಪರಮಕ್ರುದ್ಧನಾಗಿ ಹೇಳಿದನು:

ಸ್ತನಸ್ಯ ಮಾತುರ್ಮಧುಸರ್ಪಿಷೋರ್ವಾ
ಮಾಧ್ವೀಕಪಾನಸ್ಯ ಚ ಸತ್ಕೃತಸ್ಯ ।
ದಿವ್ಯಸ್ಯ ವಾ ತೋಯರಸಸ್ಯ ಪಾನಾ-
ತ್ಪಯೋದಧಿಭ್ಯಾಂ ಮಥಿತಾಚ್ಚ ಮುಖ್ಯಾತ್ ॥೩೦॥

ಅನ್ಯಾನಿ ಪಾನಾನಿ ಚ ಯಾನಿ ಲೋಕೇ
ಸುಧಾಮೃತಸ್ವಾದುರಸಾನಿ ತೇಭ್ಯಃ ।
ಸರ್ವೇಭ್ಯ ಏವಾಭ್ಯಧಿಕೋ ರಸೋಽಯಂ
ಮಮಾದ್ಯ ಚಾಸ್ಯಾಹಿತಲೋಹಿತಸ್ಯ ॥೩೧॥



"ತಾಯಿಯ ಮೊಲೆಹಾಲಿಗಿಂತಲೂ, ತುಪ್ಪ-ಜೇನುತುಪ್ಪಗಳ ಮಿಶ್ರಣಕ್ಕಿಂತಲೂ, ಸಂಸ್ಕೃತವಾದ ದ್ರಾಕ್ಷಾರಸದಿಂದ ಸಿದ್ಧವಾದ ಪಾನೀಯಕ್ಕಿಂತಲೂ, ದಿವ್ಯವಾದ ತೋಯರಸದ ಪಾನಕ್ಕಿಂತಲೂ, ಹಾಲು-ಮೊಸರುಗಳಿಂದ ಕಡೆದು ಬರುವ ಮಜ್ಜಿಗೆಯ ಪಾನಕ್ಕಿಂತಲೂ, ಲೋಕದಲ್ಲಿರುವ

ಸುಧಾಮೃತ-ಸ್ವಾದುರಸಗಳುಳ್ಳ ಇನ್ನೂ ಅನೇಕಪಾನಗಳಿಗಿಂತಲೂ ಶತ್ರುವಿನ ಈ ರಕ್ತರಸವೇ ನನಗೆ ಅತ್ಯಂತರುಚಿಯಾಗಿ ಕಾಣುತ್ತಿದೆ."

ಕ್ರೋಧಾಭಿಭೂತವಾದ ಬುದ್ಧಿಯಿಂದ ಕೂಡಿದ್ದ, ಭಯಂಕರಕರ್ಮನಾದ ಭೀಮಸೇನನು ಪ್ರಾಣರಹಿತನಾಗಿದ್ದ ದುಃಶಾಸನನನ್ನು ನೋಡಿ ಅಟ್ಟಹಾಸಪೂರ್ವಕವಾಗಿ ಗಟ್ಟಿಯಾಗಿ ನಗುತ್ತಾ ಹೇಳಿದನು:



**ಕಿಂ ವಾ ಕುರ್ಯಾಂ ಮೃತ್ಯುನಾ ರಕ್ಷಿತೋಽಸಿ ॥೩೨॥**

"ಏನು ಮಾಡಲಿ? ಮೃತ್ಯುವೇ ನಿನ್ನನ್ನು ರಕ್ಷಿಸಿಬಿಟ್ಟಿತು. (ನಿನ್ನಲ್ಲಿ ಪ್ರಾಣವಾದರೂ ಇದ್ದಿದ್ದರೆ ನನ್ನ ಅಳಲನ್ನು ಮತ್ತಷ್ಟು ತೀರಿಸಿಕೊಳ್ಳಬಹು

ದಾಗಿದ್ದಿತು. ಮೃತ್ಯುವು ನಿನ್ನ ಪ್ರಾಣಗಳನ್ನು ಅಪಹರಿಸಿಬಿಟ್ಟಿತು. ನನ್ನ ಅಳಲನ್ನು ಹೇಗೆ ತಾನೇ ತೀರಿಸಿಕೊಳ್ಳಲಿ? ನೀನಿಂದು ಸತ್ತುಬದುಕಿದೆ. ಮೃತ್ಯುವೇ ನಿನಗೆ ಆಶ್ರಯವನ್ನಿತ್ತಿತು.)"

ಹೀಗೆ ಹೇಳುತ್ತಿದ್ದ, ಅತಿಹೃಷ್ಟನಾಗಿದ್ದ, ದುಃಶಾಸನನ ರಕ್ತವನ್ನು ಕುಡಿದು ಕುಣಿದು-ಕುಪ್ಪಳಿಸುತ್ತಿದ್ದ ಭೀಮಸೇನನನ್ನು ಆ ಸಮಯದಲ್ಲಿ ನೋಡುತ್ತಿದ್ದವರೆಲ್ಲರೂ ಭಯದಿಂದ ವ್ಯಥಿತರಾಗಿ ಕುಸಿದುಬಿದ್ದರು. ಭಯದಿಂದ ವ್ಯಾಕುಲಗೊಳ್ಳದಿದ್ದವರ ಕೈಗಳಿಂದ ಅಸ್ತ್ರಗಳು ಕೆಳಕ್ಕೆ ಬಿದ್ದುವು. ಕೆಲವರು ಭಯಗೊಂಡು ವಿಕಾರಸ್ವರದಿಂದ ಸಹಾಯಕ್ಕಾಗಿ ಕೂಗಿಕೊಳ್ಳುತ್ತಿದ್ದರು. ಕೆಲವರು ಆ ಘೋರದೃಶ್ಯವನ್ನು ನೋಡಲಾಗದೇ ಕಣ್ಣುಗಳನ್ನೇ ಮುಚ್ಚಿಕೊಂಡರು. ಕೆಲವರು ಸಹಾಯಕ್ಕಾಗಿ ಸುತ್ತಲೂ ನೋಡುತ್ತಿದ್ದರು. ದುಃಶಾಸನನ ರಕ್ತವನ್ನು ಕುಡಿಯುತ್ತಿದ್ದ ಭೀಮಸೇನನ ಸುತ್ತಲೂ ನಿಂತು ನೋಡುತ್ತಿದ್ದವರು–'ನ ವೈ ಮನುಷ್ಯೋಽಯಂ–ಇವನು ಖಂಡಿತವಾಗಿಯೂ ಮನುಷ್ಯನಲ್ಲ!'–ಎಂದು ಹೇಳುತ್ತಾ ಭಯಗ್ರಸ್ತರಾಗಿ ಓಡಿಹೋದರು.

ಮಹಾರಾಜ! ಭೀಮಸೇನನು ಅಂತಹ ಭಯಂಕರರೂಪವನ್ನು ತಾಳಿ ರಕ್ತಪಾನಮಾಡುತ್ತಿರುವುದನ್ನು ನೋಡುತ್ತಿದ್ದ ಭಯಾರ್ತರಾದ ಜನರು 'ನಿಶ್ಚಯವಾಗಿಯೂ ಇವನೊಬ್ಬ ರಾಕ್ಷಸನೇ ಸರಿ'–ಎಂದು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾ ಚಿತ್ರಸೇನನೊಡನೆ ಪಲಾಯನಮಾಡಿದರು. ಚಿತ್ರಸೇನನು ಸೈನಿಕರೊಡನೆ ಪಲಾಯನಮಾಡುತ್ತಿರುವುದನ್ನು ನೋಡಿ ಪಾಂಚಾಲ ರಾಜಕುಮಾರನಾದ ಯುಧಾಮನ್ಯುವು ಭಯರಹಿತನಾಗಿ ತನ್ನ ಸೈನ್ಯದೊಡನೆ ಚಿತ್ರಸೇನನನ್ನು ಹಿಂಬಾಲಿಸಿ ಹೋಗಿ ಶೀಘ್ರವಾಗಿ ಪ್ರಯೋಗಿಸಿದ ನಿಶಿತವಾದ ಬಾಣಗಳಿಂದ ಅವನನ್ನು ಗಾಯಗೊಳಿಸಿದನು. ಕಾಲಿನಿಂದ ತುಳಿಯಲ್ಪಟ್ಟು ಕ್ರೋಧವಿಷವನ್ನು ವಮನಮಾಡುತ್ತಾ ನಾಲಿಗೆಯನ್ನು ಹೊರಚಾಚಿರುವ ಸರ್ಪದಂತೆ–ಚಿತ್ರಸೇನನು ಹಿಂದಿರುಗಿ ಬಂದು ಪಾಂಚಾಲ ರಾಜನಾದ ಯುಧಾಮನ್ಯುವನ್ನು ಮೂರು ಬಾಣಗಳಿಂದ ಪ್ರಹರಿಸಿ, ಆರು ಬಾಣಗಳಿಂದ ಅವನ ಸಾರಥಿಯನ್ನೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಯುಧಾಮನ್ಯುವು ಕಿವಿಯ ತುದಿಯವರೆಗೂ ಸೆಳೆದು ಬಿಡಲ್ಪಟ್ಟ, ಸುಂದರ

ವಾದ ಮೂಲಭಾಗದಿಂದ ಕೂಡಿದ್ದ, ತೀಕ್ಷ್ಣವಾದ ಅಗ್ರಭಾಗವನ್ನು ಹೊಂದಿದ್ದ, ನೇರವಾಗಿ ಗುರಿಯನ್ನು ತಲುಪುವ, ಸುನಿಯಂತ್ರಿತವಾದ ಬಾಣದಿಂದ ಕರ್ಣನ ತಮ್ಮನಾದ ಚಿತ್ರಸೇನನ ತಲೆಯನ್ನು ಹಾರಿಸಿದನು.

ತಮ್ಮನಾದ ಚಿತ್ರಸೇನನು ಹತನಾಗಲಾಗಿ ಪರಮಕ್ರುದ್ಧನಾದ ಕರ್ಣನು ಪೌರುಷವನ್ನು ತೋರ್ಪಡಿಸಿಕೊಳ್ಳುತ್ತಾ ಬಾಣಗಳ ಪ್ರಹಾರಗಳಿಂದ ಪಾಂಡವರ ಸೈನ್ಯವನ್ನು ಚೆದುರಿಸಿದನು. ಅನಂತರ ಅಮಿತತೇಜಸ್ವಿಯಾದ ಕರ್ಣನು ನಕುಲನನ್ನು ಎದುರಿಸಿ ಯುದ್ಧಮಾಡಲು ಉಪಕ್ರಮಿಸಿದನು.

ಇತ್ತಲಾಗಿ ಭೀಮಸೇನನಾದರೋ ಅಸಹನಶೀಲನಾದ ದುಃಶಾಸನನನ್ನು ಸಂಹರಿಸಿ, ಬೊಗಸೆಯಲ್ಲಿ ಅವನ ರಕ್ತವನ್ನು ತುಂಬಿಕೊಂಡು ಘೋರವಾಗಿ ಗರ್ಜನೆಮಾಡುತ್ತಾ ಲೋಕವೀರರು ಕೇಳುತ್ತಿರುವಂತೆಯೇ ಈ ಮಾತುಗಳನ್ನು ಹೇಳಿದನು:

**ಏಷ ತೇ ರುಧಿರಂ ಕಣ್ಠಾತ್ಪಿಬಾಮಿ ಪುರುಷಾಧಮ ।**
**ಬ್ರೂಹೀದಾನೀಂ ತು ಸಂಹೃಷ್ಟಃ ಪುನರ್ಗೌರಿತಿ ಗೌರಿತಿ ॥೪೨॥**

“ಪುರುಷಾಧಮನೇ! ನಾನು ಈ ನಿನ್ನ ರಕ್ತವನ್ನು ಕುತ್ತಿಗೆಯ ಮೂಲಕವಾಗಿ ಕುಡಿಯುತ್ತಿದ್ದೇನೆ. ಈಗ ನೀನು ಸಂಹೃಷ್ಟನಾಗಿ ದ್ರೌಪದಿಯನ್ನು ಕುರಿತು ‘ಗೌಃ ಗೌಃ–ಪಶು-ಪಶು’–ಎಂದು ಪುನಃ ಮೂದಲಿಸು ನೋಡೋಣ?

**ಯೇ ತದಾಸ್ಮಾನ್ಪ್ರನೃತ್ಯನ್ತಿ ಪುನರ್ಗೌರಿತಿ ಗೌರಿತಿ ।**
**ತಾನ್ವಯಂ ಪ್ರತಿನೃತ್ಯಾಮಃ ಪುನರ್ಗೌರಿತಿ ಗೌರಿತಿ ॥೪೩॥**

ಆ ದಿನ ಕೌರವಸಭೆಯಲ್ಲಿ ಯಾರು ನಮ್ಮನ್ನು ಹಾಸ್ಯಮಾಡುತ್ತಾ ‘ಗೌಃ ಗೌಃ’–ಎಂದು ಹೇಳಿಕೊಂಡು ಕುಣಿದಾಡುತ್ತಿದ್ದರೋ–ಅವರನ್ನು ನಾವೀಗ ಹಾಸ್ಯಮಾಡುತ್ತಾ ‘ಗೌಃ ಗೌಃ’–ಎಂದು ಹೇಳಿಕೊಂಡು ಕುಣಿದಾಡುತ್ತೇವೆ.

**ಪ್ರಮಾಣಕೋಟ್ಯಾಂ ಶಯನಂ ಕಾಲಕೂಟಸ್ಯ ಭೋಜನಮ್ ।**
**ದಂಶನಂ ಚಾಹಿಭಿಃ ಕೃಷ್ಣೈರ್ದಾಹಂ ಚ ಜತುವೇಶ್ಮನಿ ॥೪೪॥**

**ದ್ಯೂತೇನ ರಾಜ್ಯಹರಣಮರಣ್ಯೇ ವಸತಿಶ್ಚ ಯಾ ।**
**ದ್ರೌಪದ್ಯಾಃ ಕೇಶಪಕ್ಷಸ್ಯ ಗ್ರಹಣಂ ಚ ಸುದಾರುಣಮ್ ॥೪೫॥**

**ಇಷ್ವಸ್ತ್ರಾಣಿ ಚ ಸಂಗ್ರಾಮೇಷ್ವಸುಖಾನಿ ಚ ವೇಶ್ಮನಿ ।**
**ವಿರಾಟಭವನೇ ಯಶ್ಚ ಕ್ಲೇಶೋಽಸ್ಮಾಕಂ ಪೃಥಗ್ವಿಧಃ ॥೪೬॥**

**ಶಕುನೇರ್ಧಾರ್ತರಾಷ್ಟ್ರಸ್ಯ ರಾಧೇಯಸ್ಯ ಚ ಮನ್ತ್ರಿತೇ ।**
**ಅನುಭೂತಾನಿ ದುಃಖಾನಿ ತೇಷಾಂ ಹೇತುಸ್ತ್ವಮೇವ ಹಿ ॥೪೭॥**

**ದುಃಖನ್ಯೇತಾನಿ ಜಾನೀಮೋ ನ ಸುಖಾನಿ ಕದಾಚನ ।**
**ಧೃತರಾಷ್ಟ್ರಸ್ಯ ದೌರಾತ್ಮ್ಯಾತ್ಸಪುತ್ರಸ್ಯ ಸದಾ ವಯಮ್ ॥೪೮॥**

ಪ್ರಮಾಣಕೋಟಿತೀರ್ಥದಲ್ಲಿ ವಿಷಯುಕ್ತವಾದ ಭೋಜನಮಾಡಿಸಿ ನನ್ನನ್ನು ನದಿಯಲ್ಲಿ ಹಾಕಿದುದು; ಕೃಷ್ಣಸರ್ಪಗಳಿಂದ ಕಚ್ಚಿಸಿದುದು; ಲಾಕ್ಷಾಗೃಹದಲ್ಲಿ ನಮ್ಮನ್ನು ದಹಿಸಲು ಸಂಚುಮಾಡಿದುದು; ದ್ಯೂತದ ಮೂಲಕವಾಗಿ ನಮ್ಮ ರಾಜ್ಯವನ್ನು ಕಸಿದುಕೊಂಡುದು; ನಮ್ಮೆಲ್ಲರನ್ನೂ ಅರಣ್ಯಕ್ಕಟ್ಟಿದುದು; ಸುದಾರುಣವಾದ ರೀತಿಯಲ್ಲಿ ದ್ರೌಪದಿಯ ಕೇಶಗ್ರಹಣ; ನಮ್ಮ ಮೇಲೆ ಮಾರಕವಾದ ಅಸ್ತ್ರ-ಶಸ್ತ್ರಗಳನ್ನು ಪ್ರಯೋಗಿಸಿದುದು; ಮನೆಯಲ್ಲಿಯೂ ಸುಖವಾಗಿರಲು ಅವಕಾಶ ಕೊಡದಿದ್ದುದು; ಬೇರೆ-ಬೇರೆಯ ಪ್ರಕಾರವಾದ ಕ್ಲೇಶಗಳನ್ನು ನಾವು ವಿರಾಟನಗರದಲ್ಲಿ ಅನುಭವಿಸಿದುದು–ಇಂತಹ, ಶಕುನಿ-ದುರ್ಯೋಧನ ಮತ್ತು ಕರ್ಣರ ದುರ್ಮಂತ್ರಿತ್ವದ ಫಲವಾಗಿ ನಾವು ಯಾವ-ಯಾವ ಕ್ಲೇಶಗಳನ್ನು ಅನುಭವಿಸಿದೆವೋ–ಆ ಎಲ್ಲ ನಮ್ಮ ದುಃಖಗಳಿಗೂ ಮೂಲಕಾರಣನು ನೀನೇ ಆಗಿರುವೆ. ಪುತ್ರಸಹಿತನಾದ ಧೃತರಾಷ್ಟ್ರನ ದುರ್ಭಾವನೆಯ ಕಾರಣದಿಂದಾಗಿ ನಾವು ಸರ್ವಕಾಲದಲ್ಲಿಯೂ ಕಷ್ಟವೆಂದರೇನೆಂಬುದನ್ನು ತಿಳಿದಿರುತ್ತೇವೆಯೇ ಹೊರತು ಸುಖದ ಸ್ಮರಣೆಯೇ ನಮಗೆ ಇಲ್ಲವಾಗಿದೆ.” ಹೀಗೆ ಹೇಳಿ ಭೀಮಸೇನನು ಅರ್ಜುನನ ರಥದ ಸಮೀಪಕ್ಕೆ ಹೋಗಿ ತನ್ನ ಸಾಹಸಕಾರ್ಯವನ್ನು ನೋಡಿ ನಸುನಗುತ್ತಿದ್ದ ಕೇಶವಾರ್ಜುನರನ್ನು ಕುರಿತು ಪುನಃ ಹೇಳಿದನು:

ಆ ಸಮಯದಲ್ಲಿ ಭೀಮಸೇನನು ರಕ್ತದಿಂದ ತೋಯ್ದುಹೋಗಿದ್ದನು.

ಅವನ ಮುಖದಿಂದ ರಕ್ತವು ಪ್ರವಿಸುತ್ತಿದ್ದಿತು. ವೇಗವಂತನಾದ ಭೀಮಸೇನನು ಆ ಸಮಯದಲ್ಲಿ ಅತಿಕ್ರುದ್ಧನಾಗಿದ್ದನು.

**ದುಃಶಾಸನೇ ಯದ್ರಣೇ ಸಂಶ್ರುತಂ ಮೇ**
**ತದ್ವೈ ಸತ್ಯಂ ಕೃತಮದ್ಯೇಹ ವೀರೌ ॥೫೦॥**

"ವೀರರೇ! ದುಃಶಾಸನನ ವಿಷಯದಲ್ಲಿ ನಾನು ಯಾವ ಪ್ರತಿಜ್ಞೆಯನ್ನು ಮಾಡಿದ್ದೆನೋ–ಆ ಪ್ರತಿಜ್ಞೆಯನ್ನು ರಣಭೂಮಿಯಲ್ಲಿ ನಾನಿಂದು ಸತ್ಯಪ್ರತಿಜ್ಞೆಯನ್ನಾಗಿ ಮಾಡಿದ್ದೇನೆ.



**ಅತ್ರೈವ ದಾಸ್ಯಾಮ್ಯಪರಂ ದ್ವಿತೀಯಂ**
**ದುರ್ಯೋಧನಂ ಯಜ್ಞಪಶುಂ ವಿಶಸ್ಯ ।**

**ಶಿರೋ ಮೃದಿತ್ವಾ ಚ ಪದಾ ದುರಾತ್ಮನಃ**
**ಶಾನ್ತಿಂ ಲಪ್ಸ್ಯೇ ಕೌರವಾಣಾಂ ಸಮಕ್ಷಮ್ ॥೫೧॥**

ಎರಡನೆಯ ಯಜ್ಞಪಶುವಾದ ದುರ್ಯೋಧನನನ್ನೂ ಇಲ್ಲಿಯೇ ಹಿಸುಕಿ ಬಲಿಯನ್ನು ಕೊಡುತ್ತೇನೆ. ಎಲ್ಲ ಕೌರವರ ಸಮಕ್ಷದಲ್ಲಿಯೂ ದುರಾತ್ಮನಾದ ಅವನ ತಲೆಯನ್ನು ನನ್ನ ಈ ಕಾಲುಗಳಿಂದ ಮೆಟ್ಟಿ ಅನಂತರ ಶಾಂತಿಯನ್ನು ಪಡೆಯುತ್ತೇನೆ."

ಮಹಾರಾಜ! ರಕ್ತದಿಂದ ತೋಯ್ದುಹೋಗಿದ್ದ ಭೀಮಸೇನನು ಇಷ್ಟು ಮಾತನ್ನು ಹೇಳಿ ಆನಂದತುಂದಿಲನಾಗಿ ಗಟ್ಟಿಯಾಗಿ ಗರ್ಜನೆಯನ್ನು ಮಾಡಿದನು. ವೃತ್ರನನ್ನು ಸಂಹರಿಸಿದನಂತರ ಸಹಸ್ರಾಕ್ಷನು ಸಿಂಹನಾದ ಮಾಡಿದಂತೆ–ಮಹಾತ್ಮನಾದ, ಬಲಿಷ್ಠನಾದ ಭೀಮಸೇನನು ಸಿಂಹನಾದ ವನ್ನು ಮಾಡಿದನು."

ಳ೩ನೆಯ ಅಧ್ಯಾಯವು ಮುಗಿಯಿತು.

ಳ೪ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಹತ್ತು ಮಕ್ಕಳ ವಧೆ: ಕರ್ಣನ ಭಯ: ಶಲ್ಯನು ಸಮಾಧಾನ ಹೇಳಿದುದು: ನಕುಲ-ವೃಷಸೇನರ ಯುದ್ಧ

ಸಂಜಯನು ದುಃಶಾಸನನ ವಧೆಯಾದನಂತರದ ವೃತ್ತಾಂತವನ್ನು ಹೇಳುತ್ತಾನೆ:

"ಮಹಾರಾಜ! ದುಃಶಾಸನನು ಹತನಾದನಂತರ–ಮಹಾರಥರಾದ, ಮಹಾವೀರ್ಯರಾದ, ಯುದ್ಧದಲ್ಲಿ ಪಲಾಯಿತರಾಗದ, ಕ್ರೋಧರೂಪವಾದ ವಿಷವನ್ನೇ ತುಂಬಿಕೊಂಡಿದ್ದ ನಿನ್ನ ಹತ್ತು ಮಂದಿ ಮಕ್ಕಳು ಭೀಮಸೇನನನ್ನು ಬಾಣಗಳಿಂದ ಮುಚ್ಚಿದರು.

**ನಿಷಙ್ಗೀ ಕವಚೀ ಪಾಶೀ ದಣ್ಡಧಾರೋ ಧನುರ್ಗ್ರಹಃ ।**
**ಅಲೋಲುಪಃ ಶಲಃ ಸನ್ಧೋ ವಾತವೇಗಸುವರ್ಚಸೌ ॥೨॥**

**ಏತೇ ಸಮೇತ್ಯ ಸಹಿತಾ ಭ್ರಾತೃವ್ಯಸನಕರ್ಶಿತಾಃ ।**
**ಭೀಮಸೇನಂ ಮಹಾಬಾಹುಂ ಮಾರ್ಗಣೈಃ ಸಮವಾರಯನ್ ॥೩॥**

ಅಣ್ಣನ ನಿಧನದಿಂದ ಬಹಳ ದುಃಖಿತರಾಗಿದ್ದ ನಿಷಂಗೀ, ಕವಚೀ, ಪಾಶೀ, ದಂಡಧಾರ, ಧನುರ್ಗ್ರಹ, ಅಲೋಲುಪ, ಶಲ, ಸಂಧ, ವಾತವೇಗ ಮತ್ತು ಸುವರ್ಚಸ–ಈ ಹತ್ತು ಮಂದಿ ನಿನ್ನ ಮಕ್ಕಳು ಒಟ್ಟಾಗಿ ಸೇರಿ ಮಹಾಬಾಹುವಾದ ಭೀಮಸೇನನನ್ನು ಬಾಣಗಳಿಂದ ತಡೆದು ನಿಲ್ಲಿಸಿದರು. ಮಹಾರಥರ ಬಾಣಗಳಿಂದ ಎಲ್ಲ ಕಡೆಗಳಿಂದಲೂ ತಡೆಯಲ್ಪಡುತ್ತಿದ್ದ ಭೀಮಸೇನನು ಕ್ರೋಧದಿಂದ ಕೆಂಗಣ್ಣನಾಗಿ ಕ್ರುದ್ಧನಾದ ಯಮನಂತೆಯೇ ಪ್ರಕಾಶಿಸಿದನು. ಕುಂತಿಯ ಮಗನಾದ ಭೀಮಸೇನನು ಚಿನ್ನದ ಅಂಗದಗಳನ್ನು ತೊಟ್ಟಿದ್ದ ಹತ್ತು ಮಂದಿ ಕೌರವರಾಜಕುಮಾರರನ್ನೂ ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಮಹಾವೇಗಯುಕ್ತವಾದ ಹತ್ತು ಭಲ್ಲಗಳಿಂದ ಯಮಲೋಕಕ್ಕೆ ಕಳುಹಿಸಿದನು. ಆ ಹತ್ತು ಮಂದಿ ವೀರರೂ ಭೀಮಸೇನನಿಂದ ಹತರಾಗಲಾಗಿ, ಪಾಂಡವನ ಭಯದಿಂದ ಪೀಡಿತವಾದ ನಿನ್ನ ಸೈನ್ಯವು ಕರ್ಣನ ಸಮ್ಮುಖದಲ್ಲಿಯೇ ಪಲಾಯನಮಾಡಿತು. ಪ್ರಜೆಗಳಲ್ಲಿ ಅಂತಕನ ಪರಾಕ್ರಮವಿರುವಂತೆ–ಕುರುಸೇನೆಯ ಮಧ್ಯದಲ್ಲಿರುವ ಭೀಮನ ಪರಾಕ್ರಮವನ್ನು ನೋಡಿ ಕರ್ಣನು ಮಹಾಭಯವನ್ನು ಪ್ರವೇಶಿಸಿದನು. (ಕರ್ಣನ ಮನಸ್ಸನ್ನು ಮಹಾಭಯವು ಆವರಿಸಿತು.) ಕರ್ಣನ ಮುಖಭಾವದಿಂದಲೇ ಅವನ ಮನಸ್ಸಿನಲ್ಲಿ ಏನಿರುವುದೆಂಬುದನ್ನು ತಿಳಿಯಲು ಸಮರ್ಥನಾಗಿದ್ದ ಸಮಿತಿಶೋಭನನಾದ ಶಲ್ಯನು ಸಮಯೋಚಿತವಾದ ಮಾತುಗಳನ್ನು ಕರ್ಣನೊಡನೆ ಹೇಳಿದನು:

“ರಾಧೇಯ! ವ್ಯಥಿತನಾಗಬೇಡ. ಈ ಸಮಯದಲ್ಲಿ ವ್ಯಥೆಪಡುವುದು ನಿನ್ನಂತಹವನಿಗೆ ಯೋಗ್ಯವಾಗಿ ಕಾಣುವುದಿಲ್ಲ. ಭೀಮಸೇನನ ಭಯದಿಂದ ಪೀಡಿತರಾದ ಈ ರಾಜರು ಪಲಾಯನಮಾಡುತ್ತಿದ್ದಾರೆ. ಸಹೋದರರ ನಿಧನ ದಿಂದಾಗಿ ದುರ್ಯೋಧನನು ಕಿಂಕರ್ತವ್ಯತಾಮೂಢನಾಗಿದ್ದಾನೆ. ಮಹಾತ್ಮ ನಾದ ಭೀಮಸೇನನು ದುಃಶಾಸನನ ರಕ್ತವನ್ನು ಪಾನಮಾಡಲಾಗಿ, ಕೃಪರೇ ಮೊದಲಾದ ಮಹಾಯೋಧರೂ–ಹತಶೇಷರಾದ ದುರ್ಯೋಧನನ ಸಹೋದರರೂ ಆಪತ್ತಿನಲ್ಲಿ ಸಿಕ್ಕಿಕೊಂಡು ಶೋಕದಿಂದ ಬುದ್ಧಿಗೆಟ್ಟವ ರಾಗಿ ದುರ್ಯೋಧನನನ್ನು ಸುತ್ತುವರಿದು ನಿಂತಿದ್ದಾರೆ. ಅರ್ಜುನಪ್ರಮುಖ ರಾದ ಶೂರರಾದ ಪಾಂಡವರು ದುಃಶಾಸನವಧೆಯೆಂಬ ತಮ್ಮ ಗುರಿಯನ್ನು

ಮುಟ್ಟಿದವರಾಗಿ ನಿನಗೆ ಅಭಿಮುಖರಾಗಿ ಯುದ್ಧಕ್ಕೆ ನಿಂತಿದ್ದಾರೆ. ಪುರುಷ ಶಾರ್ದೂಲನೇ! ಕ್ಷತ್ರಧರ್ಮವನ್ನು ಪುರಸ್ಕರಿಸಿ, ಪೌರುಷವನ್ನು ಆಶ್ರಯಿಸಿ ನೀನೀಗ ಧನಂಜಯನನ್ನು ಎದುರಿಸು.

**ಭಾರೋ ಹಿ ಧಾರ್ತರಾಷ್ಟ್ರೇಣ ತ್ವಯಿ ಸರ್ವಃ ಸಮಾಹಿತಃ ।**
**ತಮುದ್ವಹ ಮಹಾಬಾಹೋ ಯಥಾಶಕ್ತಿ ಯಥಾಬಲಮ್ ॥೧೫॥**

ಮಹಾಬಾಹುವೇ! ಕರ್ಣ! ದುರ್ಯೋಧನನು ಯುದ್ಧಸಂಬಂಧವಾದ ಎಲ್ಲ ಹೊರೆಯನ್ನೂ ನಿನ್ನ ಮೇಲೆಯೇ ಹಾಕಿರುತ್ತಾನೆ. ಆ ಹೊರೆಯನ್ನು ನೀನು ನಿನ್ನ ಶಕ್ತಿ ಮತ್ತು ಬಲಗಳಿಗೆ ಅನುಸಾರವಾಗಿ ವಹಿಸು.

**ಜಯೇ ಸ್ಯಾದ್ವಿಪುಲಾ ಕೀರ್ತಿರ್ಧ್ರುವಃ ಸ್ವರ್ಗಃ ಪರಾಜಯೇ ॥೧೬॥**

ಕರ್ಣ! ಅರ್ಜುನನೊಡನೆ ಮಾಡುವ ಯುದ್ಧದಲ್ಲಿ ನೀನು ಜಯಗಳಿಸಿದರೆ ಅಪಾರವಾದ ಕೀರ್ತಿಯು ಲಭಿಸುತ್ತದೆ. ಒಂದು ವೇಳೆ ಪರಾಜಿತನಾಗಿ ಪ್ರಾಣತೊರೆದರೆ ಶಾಶ್ವತವಾದ ಸ್ವರ್ಗಪ್ರಾಪ್ತಿಯಾದರೂ ಆಗುತ್ತದೆ.

ರಾಧೇಯ! ನೀನು ಮೋಹಪರವಶನಾಗಲಾಗಿ ನಿನ್ನ ಮಗ ವೃಷಸೇನನು ಪರಮಕ್ರುದ್ಧನಾಗಿ ಪಾಂಡವರನ್ನು ಎದುರಿಸಿ ಯುದ್ಧಮಾಡುತ್ತಿದ್ದಾನೆ."

ಮಹಾರಾಜ! ಮಹಾತೇಜಸ್ವಿಯಾದ ಶಲ್ಯನ ಮಾತನ್ನು ಕೇಳಿ ಕರ್ಣನು ಹೃದಯದಲ್ಲಿ ಯುದ್ಧದ ಸಲುವಾಗಿ ಅವಶ್ಯವಾದ ಮತ್ತು ಸುಸ್ಥಿರವಾದ ಭಾವವನ್ನು ತಾಳಿದನು. (ಅರ್ಜುನನನ್ನು ಎದುರಿಸಿ ಯುದ್ಧ ಮಾಡಬೇಕೆಂದು ದೃಢವಾಗಿ ನಿಶ್ಚಯಿಸಿ ವಿಜಯದ ವಿಷಯದಲ್ಲಿ ಉತ್ಸಾಹಿಯಾದನು.)

ಆ ವೇಳೆಗೆ ಕ್ರುದ್ಧನಾದ ವೃಷಸೇನನು–ಪಾಂಡವರ ಸೈನ್ಯದ ಅಗ್ರ ಭಾಗದಲ್ಲಿದ್ದ, ಯಮದಂಡವನ್ನು ಹಿಡಿದಿರುವ ಕಾಲನೋಪಾದಿಯಲ್ಲಿ ಗದಾಪಾಣಿಯಾಗಿದ್ದ, ನಿನ್ನ ಕಡೆಯ ಯೋಧರೊಡನೆ ಯುದ್ಧಮಾಡುತ್ತಿದ್ದ ಭೀಮಸೇನನನ್ನು ಆಕ್ರಮಿಸಿದನು. ಅದನ್ನು ಕಂಡ ಪಾಂಡವರ ಕಡೆಯ ಶ್ರೇಷ್ಠವೀರನಾದ ನಕುಲನು ಕೋಪಾವಿಷ್ಟನಾಗಿ ಕರ್ಣನ ಮಗ

ನಾದ, ಪ್ರಹೃಷ್ಟನಾಗಿದ್ದ, ಶತ್ರುವಾದ ವೃಷಸೇನನನ್ನು ಬಾಣಗಳಿಂದ ಪೀಡಿಸುತ್ತಾ–ಹಿಂದೆ ಇಂದ್ರನು 'ಜಂಭ' ಎಂಬ ಹೆಸರಿನ ರಾಕ್ಷಸನನ್ನು ಆಕ್ರಮಿಸಿದಂತೆ–ಆಕ್ರಮಿಸಿದನು. ನಕುಲನು ಕ್ಷುರದಿಂದ ಸ್ಫಟಿಕದ ಮಣಿಯಿಂದ ಚಿತ್ರಿತವಾಗಿ ಮಾಡಲ್ಪಟ್ಟಿದ್ದ ಕಂಚುಕವನ್ನು ಹೊಂದಿದ್ದ ಕರ್ಣನ ಮಗನ ಧ್ವಜವನ್ನು ಕತ್ತರಿಸಿದನು. ಚಿನ್ನದ ರೇಕುಗಳಿಂದ ಚಿತ್ರಿತವಾಗಿದ್ದ ಚಿತ್ರಧನುಸ್ಸನ್ನೂ ಭಲ್ಲದಿಂದ ಕತ್ತರಿಸಿದನು. ಮರುಕ್ಷಣದಲ್ಲಿಯೇ ಅಸ್ತ್ರವಿದ್ಯಾಪಾರಂಗತನಾದ ವೃಷಸೇನನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ನಕುಲನನ್ನು ಆಕ್ರಮಿಸಿದನು. ಅಸ್ತ್ರವಿದ್ಯಾಪಾರಂಗತನಾದ ಕರ್ಣಪುತ್ರನು ನಕುಲನ ಮೇಲೆ ದಿವ್ಯಾಸ್ತ್ರಗಳ ಮಳೆಗರೆದನು.

ಆಜ್ಯಾಹುತಿಯಿಂದ ಜಾಜ್ವಲ್ಯಮಾನನಾಗುವ ಯಜ್ಞೇಶ್ವರನೋಪಾದಿಯಲ್ಲಿ–ಕರ್ಣಪುತ್ರನು ಬಾಣಗಳ ಪ್ರಹಾರದಿಂದಲೂ, ಕೋಪದಿಂದಲೂ, ಕಾಂತಿಯಿಂದಲೂ, ಅಸ್ತ್ರಗಳ ಪ್ರಯೋಗದಿಂದಲೂ ಜಾಜ್ವಲ್ಯಮಾನನಾಗಿ ಪ್ರಕಾಶಿಸಿದನು. ವೃಷಸೇನನು ಉತ್ತಮಾಸ್ತ್ರಗಳಿಂದ ನಕುಲನ ರಥದಲ್ಲಿದ್ದ, ವನಾಯುದೇಶದಲ್ಲಿ ಹುಟ್ಟಿದ, ಶುಭ್ರವಾದ ಮತ್ತು ಶ್ರೇಷ್ಠವಾದ, ಸುವರ್ಣದ ಬಲೆಗಳಿಂದ ಆಚ್ಛಾದಿತವಾಗಿದ್ದ ಎಲ್ಲ ಕುದುರೆಗಳನ್ನೂ ಸಂಹಾರಮಾಡಿದನು. ಬಳಿಕ ನಕುಲನು ಕುದುರೆಗಳಿಂದ ರಹಿತವಾಗಿದ್ದ ರಥದಿಂದಿಳಿದು, ಕಲ್ಮಷರಹಿತವಾಗಿದ್ದ, ಸುವರ್ಣಮಯವಾದ, ಚಂದ್ರಬಿಂಬದ ಚಿಹ್ನೆಯಿಂದ ಕೂಡಿದ್ದ ಗುರಾಣಿಯನ್ನೂ–ಆಕಾಶಸದೃಶವಾಗಿದ್ದ (ಸ್ವಚ್ಛವಾದ) ಕತ್ತಿಯನ್ನೂ ತೆಗೆದುಕೊಂಡು ವರಸೆ-ವರಸೆಯಾಗಿ ತಿರುಗಿಸುತ್ತಾ ಪಕ್ಷಿಯೋಪಾದಿಯಲ್ಲಿ ರಣರಂಗದಲ್ಲಿ ಸಂಚರಿಸುತ್ತಿದ್ದನು. ಚಿತ್ರಯೋಧಿಯಾದ ನಕುಲನು ಕತ್ತಿಯನ್ನು ಅಂತರಿಕ್ಷದಲ್ಲಿ ಬೀಸುತ್ತಾ ರಣಾಂಗಣದ ಸುತ್ತಲೂ ಸಂಚರಿಸುತ್ತಾ ಬಹಳ ಬೇಗ ಅನೇಕ ಗಜಾಶ್ವ-ರಥಸೈನಿಕರನ್ನು ಸಂಹರಿಸಿದನು. ಅಶ್ವಮೇಧಯಾಗದಲ್ಲಿ ಶಾಮಿತ್ರಕರ್ಮವನ್ನು ಮಾಡುವ ಪುರುಷನಿಂದ ಹತವಾಗುವ ಪಶುಗಳು ಕೆಳಗೆ ಬೀಳುವಂತೆ–ನಕುಲನ ಕತ್ತಿಯಿಂದ ಕತ್ತರಿಸಲ್ಪಟ್ಟ ಗಜಾಶ್ವ-ರಥಸೈನಿಕರು ತಂಡ-ತಂಡವಾಗಿ ನೆಲದ ಮೇಲೆ ಬಿದ್ದರು. ವಿಜಯೇಚ್ಛುಗಳಾದ, ಯುದ್ಧಕುಶಲರಾದ, ಚೆನ್ನಾಗಿ ಪೋಷಿತರಾಗಿದ್ದ, ಸತ್ಯಸಂಧರಾದ, ಉತ್ತಮವಾದ ಚಂದನವನ್ನು ಅಂಗಾಂಗ

ಗಳಿಗೂ ಪೂಸಿಕೊಂಡಿದ್ದ ನಾನಾದೇಶಗಳ ಎರಡು ಸಾವಿರ ಯೋಧರು ವಿಜಯೇಚ್ಛುವಾದ ನಕುಲನೊಬ್ಬನಿಂದಲೇ ಹತರಾಗಿ ಭೂಮಿಯ ಮೇಲೆ ಬಿದ್ದರು. ಖಡ್ಗದಿಂದಲೇ ಎರಡು ಸಾವಿರ ಯೋಧರನ್ನು ಸಂಹರಿಸಿ ತನ್ನ ಸೈನ್ಯದ ಮೇಲೆ ಆಕ್ರಮಣವನ್ನು ನಡೆಸುತ್ತಿದ್ದ ನಕುಲನ ಬಳಿಗೆ ವೃಷಸೇನನು ಹೋಗಿ ನಕುಲನನ್ನು ಎಲ್ಲ ಕಡೆಗಳಿಂದಲೂ ಬಾಣಗಳಿಂದ ಪ್ರಹರಿಸಿದನು. ವೃಷಸೇನನ ಬಾಣಗಳಿಂದ ಪೀಡಿತನಾದ ನಕುಲನು ಅತ್ಯಂತಕ್ರುದ್ಧನಾಗಿ ವೃಷಸೇನನನ್ನೂ ಗಾಯಗೊಳಿಸಿದನು. ಮಹಾಭಯಂಕರವಾದ ಯುದ್ಧವು ನಡೆಯುತ್ತಿದ್ದ ಆ ಸಮಯದಲ್ಲಿ ಅಣ್ಣನಾದ ಭೀಮಸೇನನಿಂದ ರಕ್ಷಿಸಲ್ಪಡುತ್ತಿದ್ದ ನಕುಲನು ಭಯಂಕರವಾದ ಸಂಹಾರಕಾರ್ಯವನ್ನು ಮಾಡುತ್ತಿದ್ದನು. ರಣಾಂಗಣದಲ್ಲಿ ಆಟವಾಡುತ್ತಾ ಬಹುಸಂಖ್ಯಾತರಾದ ಗಜಾಶ್ವ-ಪದಾತಿಸೈನಿಕರನ್ನು ಸಂಹರಿಸುತ್ತಿದ್ದ ಏಕೈಕವೀರನಾದ ನಕುಲನನ್ನು ಕರ್ಣನ ಮಗನಾದ ವೃಷಸೇನನು ಕುಪಿತನಾಗಿ ಹದಿನೆಂಟು ಬಾಣಗಳಿಂದ ಪ್ರಹರಿಸಿದನು. ವೃಷಸೇನನ ಆ ಬಾಣಗಳ ಪ್ರಹಾರಗಳಿಂದ ಬಹಳವಾಗಿ ಗಾಯಗೊಂಡ ವೇಗವಂತನಾದ, ಪಾಂಡುವಿನ ಮಗನಾದ, ನರಶ್ರೇಷ್ಠನಾದ ನಕುಲನು ಕರ್ಣನ ಮಗನನ್ನು ಸಂಹರಿಸುವ ಇಚ್ಛೆಯಿಂದ ಖಡ್ಗಪಾಣಿಯಾಗಿ ಅವನ ಕಡೆಗೆ ರಭಸದಿಂದ ನುಗ್ಗಿದನು. ಮಾಂಸವನ್ನು ಪಡೆದು ಕೊಳ್ಳಬೇಕೆಂಬ ಲೋಭದಿಂದ ಎರಡು ರೆಕ್ಕೆಗಳನ್ನೂ ಪ್ರಸರಿಸಿಕೊಂಡು ಬಹಳ ವೇಗವಾಗಿ ಬೀಳುತ್ತಿರುವ ಗಿಡಗಹಕ್ಕಿಯಂತೆ–ತನ್ನ ಮೇಲೆ ಬೀಳಲು ಬರುತ್ತಿದ್ದ ಉದಾರವೀರ್ಯನಾದ ನಕುಲನನ್ನು ವೃಷಸೇನನು ನಿಶಿತವಾದ ಬಾಣಗಳಿಂದ ಮುಚ್ಚಿದನು.

ನಕುಲನು ವೃಷಸೇನನು ಬಿಟ್ಟ ಬಾಣಗಳೆಲ್ಲವನ್ನೂ ವ್ಯರ್ಥಗೊಳಿ ಸುತ್ತಾ ವಿಚಿತ್ರರೀತಿಯ ಪಾದಗಳ ವಿನ್ಯಾಸಗಳಿಂದ ರಣರಂಗದಲ್ಲಿ ಸಂಚರಿಸತೊಡಗಿದನು. ಖಡ್ಗಪಾಣಿಯಾಗಿ ರಣಾಂಗಣದಲ್ಲಿ ಸಂಚರಿಸುತ್ತಿದ್ದ ನಕುಲನ ಸಾವಿರ ನಕ್ಷತ್ರಗಳ ಚಿಹ್ನೆಯಿದ್ದ ಗುರಾಣಿಯನ್ನು ಕರ್ಣಪುತ್ರನು ದೊಡ್ಡ-ದೊಡ್ಡ ಬಾಣಗಳಿಂದ ಧ್ವಂಸಮಾಡಿದನು. ಮರುಕ್ಷಣದಲ್ಲಿಯೇ ಶತ್ರುಗಳನ್ನು ಎದುರಿಸಲು ಸಮರ್ಥನಾದ ವೃಷಸೇನನು ವೇಗಯುಕ್ತವಾದ ಮತ್ತು ನಿಶಿತವಾದ ಆರು ಬಾಣಗಳಿಂದ ವರಸೆ-ವರಸೆಯಾಗಿ ತಿರುಗಿಸುತ್ತಿದ್ದ

ಲೋಹಮಯವಾದ, ನಿಶಿತವಾದ, ತೀಕ್ಷ್ಣವಾದ ಅಲುಗಿನಿಂದ ಕೂಡಿದ್ದ, ಒರೆಯಿಂದ ಹೊರತೆಗೆದಿದ್ದ, ಉಗ್ರವಾಗಿದ್ದ, ಅತ್ಯಂತಭಾರವನ್ನು ಸಹಿಸಲು ಸಮರ್ಥವಾಗಿದ್ದ (ಎದುರಾಳಿಯು ಬಿಡುತ್ತಿದ್ದ ರಭಸವಾದ ಬಾಣಗಳನ್ನಾಗಲೀ ಕತ್ತಿಯನ್ನಾಗಲೀ ತಡೆಯುವಷ್ಟು ಗಟ್ಟಿಯಾಗಿದ್ದ.), ಶತ್ರುಗಳ ಶರೀರವನ್ನು ವಿನಾಶಗೊಳಿಸುವುದಾಗಿದ್ದ, ಬಹಳ ಘೋರವಾಗಿದ್ದ, ಸರ್ಪದಂತೆ ಉಗ್ರವಾದ ಆಕಾರದಿಂದ ಕೂಡಿದ್ದ ನಕುಲನ ಕತ್ತಿಯನ್ನೂ ಕತ್ತರಿಸಿದನು. ಬಳಿಕ ವೃಷಸೇನನು ಪ್ರದೀಪ್ತವಾದ, ನಿಶಿತವಾದ ಬಾಣಗಳಿಂದ ನಕುಲನ ವಕ್ಷಃಸ್ಥಳದ ಮಧ್ಯಭಾಗದಲ್ಲಿ ಪ್ರಹರಿಸಿದನು. ಮಹಾರಾಜ! ಮಹಾತ್ಮನಾದ ನಕುಲನು, ರಣಭೂಮಿಯಲ್ಲಿ ಅನ್ಯರಿಂದ ಮಾಡಲು ದುಷ್ಕರವಾದ ಸಜ್ಜನಸಂಸೇವಿತವಾದ (ಸಜ್ಜನಮಾನ್ಯವಾದ) ಸಾಹಸಕರ್ಮವನ್ನು ಮಾಡಿ ವೃಷಸೇನನಿಂದ ಪೀಡಿತನಾಗಿ ಬಹಳ ಬೇಗ ಭೀಮಸೇನನ ರಥದ ಬಳಿಗೆ ಹೋದನು. ಕುದುರೆಗಳನ್ನು ಕಳೆದುಕೊಂಡು ಕರ್ಣನ ಮಗನ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದ ಮಾದ್ರಿಯ ಮಗನಾದ ನಕುಲನು–ಸಿಂಹವು ಪರ್ವತದ ಶಿಖರವನ್ನು ಹತ್ತಿಹೋಗುವಂತೆ–ಧನಂಜಯನು ನೋಡುತ್ತಿದ್ದಂತೆಯೇ ಭೀಮಸೇನನ ರಥವನ್ನು ಹತ್ತಿ ಕುಳಿತನು. ಆ ಸಮಯದಲ್ಲಿ ಮಹಾತ್ಮನಾದ ವೀರನಾದ ವೃಷಸೇನನು ಬಹಳ ಕ್ರುದ್ಧನಾಗಿ ಒಂದೇ ರಥದಲ್ಲಿ ಜೊತೆಗೂಡಿ ಕುಳಿತಿದ್ದ ಭೀಮ-ನಕುಲರನ್ನು ಭೇದಿಸಿಬಿಡುವನೋ ಎಂಬಷ್ಟು ರಭಸದಿಂದ ಬಾಣಗಳ ಸಮೂಹಗಳಿಂದ ಮುಚ್ಚಿದನು. ವೃಷಸೇನನು ಪಾಂಡುಪುತ್ರನಾದ ನಕುಲನ ರಥವನ್ನು ಧ್ವಂಸಮಾಡಿದನು. ನಿಶಿತವಾದ ಬಾಣಗಳಿಂದ ಅವನ ಖಡ್ಗವನ್ನೂ ಕತ್ತರಿಸಿದನು. ಆ ಸಮಯದಲ್ಲಿ ಇತರ ಕುರುಪ್ರವೀರರೂ ಸಂಘಟಿತರಾಗಿ ವೃಷಸೇನನನ್ನು ಬೆಂಬಲಿಸುತ್ತಾ ಬಾಣಗಳ ಸುರಿಸುವಿಕೆಯಿಂದ ಭೀಮ-ನಕುಲರಿಬ್ಬರನ್ನೂ ಬಹಳವಾಗಿ ಗಾಯಗೊಳಿಸಿದರು. ಆಜ್ಯಾಹುತಿಯಿಂದ ಜಾಜ್ವಲ್ಯಮಾನವಾಗಿ ಉರಿಯುವ ಎರಡು ಅಗ್ನಿಗಳೋಪಾದಿಯಲ್ಲಿ ಭೀಮಾರ್ಜುನರು ವೃಷಸೇನನ ವಿಷಯದಲ್ಲಿ ಕುಪಿತರಾಗಿ ಪ್ರಜ್ಜ್ವಲಿಸುತ್ತಾ, ತಮ್ಮ ಸುತ್ತಲೂ ಸಂಘಟಿತರಾಗಿ ತಮ್ಮ ಮೇಲೆ ಬಾಣಗಳ ಮಳೆಗರೆಯುತ್ತಿದ್ದ ಕೌರವವೀರರ ಮೇಲೆ

ಸುಘೋರವಾದ ಬಾಣಗಳ ಮಳೆಗರೆದರು. ಅನಂತರ ಭೀಮಸೇನನು ಅರ್ಜುನನೊಡನೆ “ಅರ್ಜುನ! ನೋಡು; ಈ ವೃಷಸೇನನು ನಮ್ಮ ನಕುಲನನ್ನು ಬಹಳವಾಗಿ ಗಾಯಗೊಳಿಸಿದ್ದಾನೆ. ಕರ್ಣಪುತ್ರನು ನಮ್ಮನ್ನೂ ಬಹಳವಾಗಿ ಪೀಡಿಸುತ್ತಿದ್ದಾನೆ. ಆದುದರಿಂದ ವೃಷಸೇನನನ್ನು ನೀನೇ ಎದುರಿಸಿ ಯುದ್ಧಮಾಡು”–ಎಂದು ಹೇಳಿದನು.

ಮಹಾರಾಜ! ಅರ್ಜುನನು ಭೀಮಸೇನನ ರಥದ ಬಳಿಗೆ ಬಂದು ಅವನು ಹೇಳಿದ ಮಾತುಗಳನ್ನು ಕೇಳಿ ಹೊರಡುವುದರಲ್ಲಿದ್ದಾಗ ಅವನನ್ನು ನೋಡಿ ನಕುಲನೂ ವೃಷಸೇನನನ್ನು ಶೀಘ್ರವಾಗಿ ಸಂಹರಿಸುವಂತೆ ಅರ್ಜುನನಿಗೆ ಹೇಳಿದನು.

ತಮ್ಮನಾದ ನಕುಲನಿಂದ ಭೀಮಸೇನನೆದುರಿನಲ್ಲಿ ಹೀಗೆ ಹೇಳಲ್ಪಟ್ಟ ಕಿರೀಟಿಯು ಉಗ್ರನಾಗಿ ಕಪಿಧ್ವಜದಿಂದ ಯುಕ್ತವಾಗಿದ್ದ, ಕೇಶವನಿಂದ ನಿಯಂತ್ರಿಸಲ್ಪಡುತ್ತಿದ್ದ ರಥದಲ್ಲಿ ಕುಳಿತು ವೃಷಸೇನನ ಕಡೆಗೆ ಬಹಳ ವೇಗವಾಗಿ ಹೋದನು.”

೬೪ನೆಯ ಅಧ್ಯಾಯವು ಮುಗಿಯಿತು.

೬೫ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವಯೋಧರು ಕುಲಿಂದರಾಜನ ಮಕ್ಕಳನ್ನು ಸಂಹರಿಸಿದುದು: ಅರ್ಜುನನು ವೃಷಸೇನನನ್ನು ಸಂಹರಿಸಿದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

“ಮಹಾರಾಜ! ಈ ಹಿಂದೆ ಹೇಳಿದಂತೆ ನಕುಲನ ಧನುಸ್ಸು ಮತ್ತು ಕತ್ತಿಗಳು ವೃಷಸೇನನಿಂದ ಕತ್ತರಿಸಲ್ಪಟ್ಟಿದ್ದುವು. ನಕುಲನು ರಥಹೀನ ನಾಗಿದ್ದನು. ಶತ್ರುಗಳ ಬಾಣಗಳಿಂದ ಗಾಯಗೊಂಡಿದ್ದನು. ವೃಷಸೇನನು ತನ್ನ ಅಸ್ತ್ರಗಳಿಂದ ನಕುಲನ ಸರ್ವಸ್ವವನ್ನೂ ಭಗ್ನಗೊಳಿಸಿದನು. ನಕುಲ ನಿಗೆ ವೃಷಸೇನನಿಂದಾದ ಈ ದುಃಸ್ಥಿತಿಯು ದ್ರುಪದನ ಐವರು ಶ್ರೇಷ್ಠ

ಪುತ್ರರಿಗೂ, ಶೈನೇಯನಿಗೂ, ಶತ್ರುಗಳನ್ನು ಎದುರಿಸಲು ಸಮರ್ಥರಾದ ದ್ರೌಪದಿಯ ಮಕ್ಕಳಿಗೂ ತಿಳಿಯಿತು. ಭೀಮಸೇನನೂ ಸಹ ಶತ್ರುಗಳೊಡನೆ ಯುದ್ಧಕ್ಕೆ ಹೋಗುವಂತೆ ಅವರಿಗೆ ನಿರ್ದೇಶವಿತ್ತನು. ಶ್ರೇಷ್ಠಪುರುಷನಾದ ಭೀಮಸೇನನ ನಿರ್ದೇಶಾನುಸಾರವಾಗಿ ಆಯುಧಗಳನ್ನು ಧರಿಸಿ ಆ ಹನ್ನೊಂದು ಮಂದಿ ಪಾಂಡವರಥಿಗಳೂ ನಿನ್ನ ಕಡೆಯ ಗಜಾಶ್ವ-ರಥ-ಪದಾತಿಸೈನಿಕರನ್ನು ಸರ್ಪರಾಜಸದೃಶವಾದ ಬಾಣಗಳಿಂದ ಸಂಹಾರ ಮಾಡುತ್ತಾ, ಗಾಳಿಯಿಂದ ಹಾರಿಸಲ್ಪಡುತ್ತಿದ್ದ ಪತಾಕೆಗಳಿಂದಲೂ ವೇಗಯುಕ್ತವಾದ ಕುದುರೆಗಳಿಂದಲೂ ಕೂಡಿ, ಸಂತೋಷಭರಿತರಾಗಿ ರಣಭೂಮಿಗೆ ಶೀಘ್ರವಾಗಿ ತೆರಳಿದರು.

ಅನಂತರ ನಿನ್ನ ಕಡೆಯ ರಥಮುಖ್ಯರಾದ ಕೃಪರು, ಕೃತವರ್ಮಾ, ಅಶ್ವತ್ಥಾಮಾ, ದುರ್ಯೋಧನ, ಶಕುನಿಯ ಮಗನಾದ ಉಲೂಕ, ವೃಕ, ಕ್ರಾಥ, ದೇವಾವೃಧರು ಧನುಸ್ಸುಗಳನ್ನು ಹಿಡಿದು ಆನೆ ಮತ್ತು ಮೇಘಗಳ ಗರ್ಜನೆಗಳಿಗೆ ಸಮಾನವಾದ ಶಬ್ದವುಳ್ಳವುಗಳಾಗಿದ್ದ ರಥಗಳ ಮೂಲಕವಾಗಿ ಪಾಂಡವಯೋಧರನ್ನು ತ್ವರೆಯಿಂದ ಎದುರಿಸಿದರು. ಕೃಪರೇ ಮೊದಲಾದ ನಿನ್ನ ಕಡೆಯ ಮಹಾರಥರು ಶ್ರೇಷ್ಠವಾದ ಬಾಣಗಳ ಮೂಲಕವಾಗಿ ಪಾಂಡವರ ಕಡೆಯ ಹನ್ನೊಂದು ಮಂದಿ ಯೋಧರನ್ನೂ ಪ್ರಹರಿಸುತ್ತಾ ಅವನ ಗಮನವನ್ನು ಪ್ರತಿರೋಧಿಸಿದರು. ಈ ವೇಳೆಗೆ ಸರಿಯಾಗಿ ಕುಲಿಂದ ದೇಶದ ಯೋಧರು ನೂತನಮೇಘದ ವರ್ಣಕ್ಕೆ (ಕಪ್ಪುಬಣ್ಣಕ್ಕೆ) ಸಮಾನ ವಾದ ಬಣ್ಣದಿಂದ ಕೂಡಿದ್ದ, ಪರ್ವತಶಿಖರಸದೃಶವಾಗಿದ್ದ, ಭಯಂಕರವಾದ ವೇಗವುಳ್ಳ ಆನೆಗಳಿಂದ ಕೂಡಿದವರಾಗಿ ಕೌರವಯೋಧರನ್ನು ಆಕ್ರಮಿಸಿದರು. ಹಿಮಾಚಲಪ್ರದೇಶದಲ್ಲಿ ಹುಟ್ಟಿದ್ದ, ಮದೋದಕವನ್ನು ಸುರಿಸುತ್ತಿದ್ದ ಆ ಆನೆ ಗಳು ಸರ್ವಪ್ರಕಾರದಿಂದಲೂ ಯುದ್ಧಕ್ಕೆ ಸಜ್ಜಾಗಿದ್ದುವು. ಸುವರ್ಣಮಯ ವಾದ ಬಲೆಗಳಿಂದ ಆಚ್ಛಾದಿತವಾಗಿದ್ದುವು. ರಣೋತ್ಸಾಹಿಗಳಾಗಿದ್ದ, ರಣ ಕುಶಲರಾದ ಯೋಧರು ಆ ಆನೆಗಳ ಮೇಲೆ ಕುಳಿತಿದ್ದರು. ಇಂತಹ ಆನೆಗಳು ಆಕಾಶದಲ್ಲಿ ಮಿಂಚಿನಿಂದ ಕೂಡಿರುವ ಮೇಘಗಳಂತೆಯೇ ಪ್ರಕಾಶಿಸುತ್ತಿದ್ದುವು. ಕುಲಿಂದರಾಜಪುತ್ರನು ಲೋಹಮಯವಾದ ಹತ್ತು ಬಾಣಗಳಿಂದ ಸೂತಾಶ್ವ ಸಹಿತರಾದ ಕೃಪರನ್ನು ಗಾಯಗೊಳಿಸಿದನು. ಮರುಕ್ಷಣದಲ್ಲಿಯೇ ಅವನು

ಕೃಪರ ಬಾಣಗಳಿಂದ ಹತನಾಗಿ, ಕುಳಿತಿದ್ದ ಆನೆಯ ಸಮೇತನಾಗಿಯೇ ಭೂಮಿಯ ಮೇಲೆ ಬಿದ್ದನು. ಕುಲಿಂದರಾಜಪುತ್ರನ ಮೊದಲನೆಯ ತಮ್ಮನು ಲೋಹಮಯವಾಗಿದ್ದ, ಸೂರ್ಯಕಿರಣಸದೃಶವಾಗಿದ್ದ ತೋಮರಗಳಿಂದ ಶಕುನಿಯ ರಥವನ್ನು ಅಲ್ಲೋಲ-ಕಲ್ಲೋಲಗೊಳಿಸಿ ಗಟ್ಟಿಯಾಗಿ ಗರ್ಜನೆಮಾಡಿದನು. ಹಾಗೆ ಗರ್ಜನೆಮಾಡುತ್ತಿದ್ದ ಕುಲಿಂದಪುತ್ರಾವರಜನ ತಲೆಯನ್ನು ಶಕುನಿಯು ಕತ್ತರಿಸಿದನು. ಕುಲಿಂದರಾಜಪುತ್ರರೂ ಮತ್ತು ಅವರ ಕಡೆಯ ಸೈನಿಕರೂ ಹತರಾಗಲಾಗಿ, ಆನಂದತುಂದಿಲರಾದ ನಿನ್ನ ಕಡೆಯ ಮಹಾರಥರು ಸಮುದ್ರದಲ್ಲಿ ಹುಟ್ಟಿದ ಶಂಖಗಳನ್ನು ಗಟ್ಟಿಯಾಗಿ ಊದಿದರು. ಧನುರ್ಬಾಣಗಳನ್ನು ಹಿಡಿದು ಶತ್ರುಗಳನ್ನು ಪುನಃ ಆಕ್ರಮಿಸಲು ಧಾವಿಸಿದರು.

ಮಹಾರಾಜ! ಕೌರವರಿಗೂ–ಪಾಂಡವ-ಸೃಂಜಯರಿಗೂ ಬಾಣ, ಕತ್ತಿ, ಋಷ್ಟಿ, ಗದೆ, ಗಂಡುಗೊಡಲಿ–ಇವೇ ಮುಂತಾದ ಆಯುಧಗಳ ಮೂಲಕವಾಗಿ ಗಜಾಶ್ವ-ಪದಾತಿಗಳ ಪ್ರಾಣಹಾರಿಯೂ, ಅತಿಘೋರವೂ ಮತ್ತು ಅತಿದಾರುಣವೂ ಆದ ಯುದ್ಧವು ಪುನಃ ಪ್ರಾರಂಭವಾಯಿತು. ಮಿಂಚಿನಿಂದಲೂ–ಗರ್ಜನೆಯಿಂದಲೂ ಕೂಡಿದ ಕಾರ್ಮುಗಿಲುಗಳು ಚಂಡಮಾರುತಗಳಿಂದ ಹಾರಿಸಲ್ಪಟ್ಟು ದಿಕ್ಕು-ದಿಕ್ಕುಗಳಿಗೂ ಚದುರಿ ಹೋಗುವಂತೆ–ರಥಾಶ್ವ-ಗಜ-ಪದಾತಿಗಳಿಂದ ಪರಸ್ಪರವಾಗಿ ಪ್ರಹರಿಸಲ್ಪಡು ತ್ತಿದ್ದ ಕೌರವ-ಪಾಂಡವಯೋಧರು ಅಸುಗಳನ್ನು ತೊರೆದು ತಂಡ-ತಂಡವಾಗಿ ರಣಭೂಮಿಯಲ್ಲಿ ಬೀಳುತ್ತಿದ್ದರು. ಕೃತವರ್ಮನು ಶತಾನೀಕನಿಂದ ಪುರಸ್ಕೃತ ವಾದ ಮಹಾಗಜಗಳನ್ನೂ, ರಥಗಳನ್ನೂ ಅನೇಕಾನೇಕ ಪದಾತಿ ಸಮೂಹಗಳನ್ನೂ–ಕುದುರೆಗಳನ್ನೂ ಸಂಹರಿಸಿದನು. ಕ್ಷಣ ಮಾತ್ರದಲ್ಲಿ ಕೃತವರ್ಮನ ಬಾಣಗಳಿಂದ ಹತರಾದ ಗಜಾಶ್ವ-ರಥ-ಪದಾತಿಸೈನಿಕರು ರಣಾಂಗಣದಲ್ಲಿ ಬಿದ್ದುಹೋದರು.

ಬಳಿಕ ಅಶ್ವತ್ಥಾಮನು ಆಯುಧಗಳಿಂದಲೂ ಯೋಧರಿಂದಲೂ ಸಂಪನ್ನವಾಗಿದ್ದ ಮೂರು ಮಹಾಗಜಗಳನ್ನು ಸಂಹಾರಮಾಡಿದನು. ವಜ್ರಾಯುಧದಿಂದ ಪ್ರತಿಹತವಾದ ಮಹಾಪರ್ವತಗಳಂತೆ ಅಶ್ವತ್ಥಾಮನಿಂದ ಹತವಾದ ಆ ಮಹಾಗಜಗಳು ಪ್ರಾಣಗಳನ್ನು ತೊರೆದು ಕೆಳಗುರುಳಿದುವು.

ಕುಲಿಂದರಾಜನ ಎರಡನೆಯ ತಮ್ಮನು ಶ್ರೇಷ್ಠವಾದ ಬಾಣಗಳಿಂದ ನಿನ್ನ ಮಗನನ್ನು ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ನಿನ್ನ ಮಗನು ಕುಲಿಂದರಾಜನ ಎರಡನೆಯ ತಮ್ಮನ ಶರೀರವನ್ನೂ ಮತ್ತು ಅವನ ಆನೆಯನ್ನೂ ನಿಶಿತವಾದ ಬಾಣಗಳಿಂದ ಗಾಯಗೊಳಿಸಿದನು. ವರ್ಷಾಕಾಲ ದಲ್ಲಿ ಇಂದ್ರನ ವಜ್ರಾಯುಧದಿಂದ (ಸಿಡಿಲಿನಿಂದ) ಪ್ರಹೃತವಾದ (ಸಿಡಿಲು ಬಡಿದ) ಗೈರಿಕಪರ್ವತವು ಕೆಂಪುಬಣ್ಣದ ನೀರನ್ನು ಸುರಿಸುವಂತೆ–ಕುಲಿಂದ ರಾಜನ ತಮ್ಮನು ಕುಳಿತಿದ್ದ ಆ ಮದಗಜವು ಶರೀರದ ಎಲ್ಲ ಕಡೆ ಗಳಿಂದಲೂ ರಕ್ತವನ್ನು ಸುರಿಸುತ್ತಾ ರಾಜಕುಮಾರನೊಡನೆ ಕೆಳಕ್ಕೆ ಬಿದ್ದಿತು. ಕುಲಿಂದರಾಜಪುತ್ರನಿಂದ ಕಳುಹಿಸಲ್ಪಟ್ಟ ಮತ್ತೊಂದು ಮದಗಜವು ಕ್ರಾಥನ ರಥವನ್ನು ಸೂತ ಮತ್ತು ಕುದುರೆಗಳ ಸಹಿತವಾಗಿ ಧ್ವಂಸಮಾಡಿತು. ಅದಕ್ಕೆ ಪ್ರತಿಯಾಗಿ ಕ್ರಾಥನ ಬಾಣಗಳಿಂದ ಪ್ರಹೃತವಾದ ಆ ಮದಗಜವು–ವಜ್ರಾಯುಧಪ್ರಹಾರದಿಂದ ಕೆಳಕ್ಕೆ ಬಿದ್ದ ಪರ್ವತದಂತೆ–ಯೋಧಸಹಿತವಾಗಿ ಬಿದ್ದಿತು. ಆದರೆ ಕ್ರಾಥನೂ ಹೆಚ್ಚು ಕಾಲ ಉಳಿಯಲಿಲ್ಲ. ಪರ್ವತಪ್ರದೇಶದಿಂದ ಬಂದಿದ್ದ ಆನೆಯ ಮೇಲೆ ಕುಳಿತಿದ್ದ ಯೋಧನೊಬ್ಬನು ಬಾಣಗಳಿಂದ ಸೂತ-ಅಶ್ವ-ಧನುಸ್ಸು-ಧ್ವಜಗಳಿಂದ ಸಹಿತನಾದ ಕ್ರಾಥಾಧಿ ಪತಿಯನ್ನು ಬಾಣಗಳಿಂದ ಕೆಳಕ್ಕುರುಳಿಸಿದನು. ಚಂಡಮಾರುತದ ವೇಗದಿಂದ ವೃಕ್ಷವು ಬುಡಮೇಲಾಗಿ ಬೀಳುವಂತೆ–ಕ್ರಾಥನು ರಥದಿಂದ ಕೆಳ ಗುರುಳಿದನು. ವೃಕರಾಜನು ಪರ್ವತಪ್ರದೇಶನಿವಾಸಿಯಾದ ಆನೆಯ ಮೇಲೆ ಕುಳಿತು ಯುದ್ಧಮಾಡುತ್ತಿದ್ದ ಯೋಧನನ್ನು ಹನ್ನೆರಡು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಆ ಮಹಾಗಜವು ಬಹಳ ಬೇಗ ನಾಲ್ಕು ಕಾಲುಗಳಿಂದಲೂ ವೃಕನನ್ನು ತುಳಿದು ರಥಾಶ್ವ ಗಳೊಡನೆ ಧ್ವಂಸಮಾಡಿಬಿಟ್ಟಿತು. ಆ ಮಹಾಗಜವನ್ನು ಬಭ್ರುವಿನ ಮಗನು ಬಹಳ ಬೇಗ ಬಾಣಗಳಿಂದ ಸಂಹರಿಸಿದನು. ಅದು ಯೋಧಸಹಿತವಾಗಿ ಕೆಳಕ್ಕೆ ಬಿದ್ದಿತು. ದೇವಾವೃಧನ ಮಗನು ಸಹದೇವನ ಮಗನಿಂದ ಪ್ರಹೃತನಾಗಿ ಗಾಯಗೊಂಡು ಪ್ರಾಣತೊರೆದು ಕೆಳಕ್ಕೆ ಬಿದ್ದನು. ಮತ್ತೊಬ್ಬ ಕುಲಿಂದರಾಜಕುಮಾರನು ಆನೆಯ ಮೇಲೆ ಕುಳಿತು ಶಕುನಿಯನ್ನು ಸಂಹರಿಸುವ ಇಚ್ಛೆಯಿಂದ ಧಾವಿಸಿದನು. ಆ ಆನೆಯು ದಂತಗಳಿಂದಲೇ

ಶ್ರೇಷ್ಠರಾದ ಯೋಧರನ್ನು ಸಂಹಾರಮಾಡುವ ಸಾಮರ್ಥ್ಯವನ್ನು ಹೊಂದಿದ್ದಿತು. ಅಂತಹ ಮಹಾಗಜದ ಮೇಲೆ ಕುಳಿತಿದ್ದ ಕುಲಿಂದರಾಜನು ಬಾಣಗಳಿಂದ ಶಕುನಿಯನ್ನು ಬಹಳವಾಗಿ ಪೀಡಿಸಿದನು. ಅದಕ್ಕೆ ಪ್ರತಿಯಾಗಿ ಗಾಂಧಾರಪತಿಯು ಕುಲಿಂದರಾಜನ ಶಿರಸ್ಸನ್ನೇ ಹಾರಿಸಿದನು.

ಇತ್ತಲಾಗಿ ಶತಾನೀಕನಿಂದ ಪ್ರಹೃತವಾದ ನಿನ್ನ ಕಡೆಯ ಮಹಾಗಜಗಳೂ, ಕುದುರೆಗಳೂ, ರಥಗಳೂ, ಕಾಲಾಳುಗಳ ಸಮೂಹಗಳೂ–ಗರುಡನ ರೆಕ್ಕೆಗಳ ಗಾಳಿಯಿಂದ ಪ್ರಹೃತವಾದ ಮಹಾಸರ್ಪಗಳೋಪಾದಿಯಲ್ಲಿ–ಪ್ರಾಣಗಳನ್ನು ತೊರೆದು ತುಂಡು-ತುಂಡುಗಳಾಗಿ ನೆಲದ ಮೇಲೆ ಬೀಳುತ್ತಿದ್ದುವು.

ಶತಾನೀಕನ ಆ ಮಹಾಸಾಹಸವನ್ನು ಸಹಿಸದೇ ಇದ್ದ ಕಲಿಂಗಪುತ್ರನು ನಸುನಗುತ್ತಾ ನಿಶಿತವಾದ ಅನೇಕಬಾಣಗಳಿಂದ ಶತಾನೀಕನನ್ನು ಗಾಯಗೊಳಿಸಿದನು. ಅದರಿಂದ ಕ್ರುದ್ಧನಾದ ನಾಕುಲಿಯು ಕಮಲಕ್ಕೆ ಸಮಾನವಾದ ಮುಖವನ್ನು ಹೊಂದಿದ್ದ ಕಲಿಂಗಪುತ್ರನ ಶಿರಸ್ಸನ್ನು ಕ್ಷುರದಿಂದ ಕತ್ತರಿಸಿದನು. ಬಳಿಕ ಕರ್ಣನ ಮಗನಾದ ವೃಷಸೇನನು ಶತಾನೀಕನನ್ನು ಲೋಹಮಯವಾದ ಮೂರು ಬಾಣಗಳಿಂದಲೂ, ಅರ್ಜುನನನ್ನು ಮೂರು ಬಾಣಗಳಿಂದಲೂ, ಭೀಮನನ್ನು ಮೂರು ಬಾಣಗಳಿಂದಲೂ, ನಕುಲನನ್ನು ಏಳು ಬಾಣಗಳಿಂದಲೂ, ಜನಾರ್ದನನನ್ನು ಹನ್ನೆರಡು ಬಾಣಗಳಿಂದಲೂ ಪ್ರಹರಿಸಿದನು. ಅತಿಮಾನುಷವಾದ ವೃಷಸೇನನ ಆ ಸಾಹಸಕರ್ಮವನ್ನು ನೋಡಿ ಕೌರವರು ಪರಮಹೃಷ್ಟರಾಗಿ ವೃಷಸೇನನನ್ನು ಬಹಳವಾಗಿ ಶ್ಲಾಘಿಸಿದರು. ಆದರೆ ಧನಂಜಯನ ಪರಾಕ್ರಮವನ್ನು ತಿಳಿದಿದ್ದವರು ಮಾತ್ರ ವೃಷಸೇನನು ಯಜ್ಞೇಶ್ವರನಲ್ಲಿ ಹುತನಾಗಿಹೋದನೆಂದೇ ಭಾವಿಸಿದರು. ಬಳಿಕ ನರಶ್ರೇಷ್ಠನಾದ ಶತ್ರುವೀರಹಂತಕನಾದ ಅರ್ಜುನನು, ವೃಷಸೇನನು ನಕುಲನ ಕುದುರೆಗಳನ್ನು ಸಂಹರಿಸಿದುದನ್ನೂ, ಎಲ್ಲ ಜನರ ಮಧ್ಯದಲ್ಲಿ ಶ್ರೀಕೃಷ್ಣನನ್ನೂ ಹನ್ನೆರಡು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದುದನ್ನೂ ಕಂಡು ವೃಷಸೇನನನ್ನು ಆಕ್ರಮಿಸಲು ಹೋದನು. ಆ ಸಮಯದಲ್ಲಿ ವೃಷಸೇನನು ತನ್ನ ತಂದೆಯಾದ ಕರ್ಣನ ಮುಂಭಾಗ

ದಲ್ಲಿಯೇ ನಿಂತಿದ್ದನು. ಆ ಮಹಾಯುದ್ಧದಲ್ಲಿ ವೃಷಸೇನನು ನರಶ್ರೇಷ್ಠನಾದ, ಉಗ್ರನಾದ, ಸಾವಿರಾರು ಬಾಣಗಳನ್ನು ಹೊಂದಿದ್ದ, ತನ್ನ ಮೇಲೆ ಬೀಳಲು ಬರುತ್ತಿದ್ದ, ಮಹಾರಥನಾದ ಅರ್ಜುನನನ್ನು–ಹಿಂದೆ ನಮುಚಿಯು ಮಹೇಂದ್ರನನ್ನು ಎದುರಿಸಿದಂತೆ–ಎದುರಿಸಿದನು. ಬಳಿಕ ಮಹಾನುಭಾವ ನಾದ, ವೀರನಾದ ಕರ್ಣಪುತ್ರನು ನಿಶಿತವಾಗಿದ್ದ ಒಂದು ಬಾಣದಿಂದ ಪಾರ್ಥನನ್ನು ಪ್ರಹರಿಸಿ–ಇಂದ್ರನನ್ನು ಪ್ರಹರಿಸಿದ ನಮುಚಿಯೋಪಾದಿ ಯಲ್ಲಿ–ಆ ವೀರನು ಗಟ್ಟಿಯಾಗಿ ಗರ್ಜಿಸಿದನು. ಪುನಃ ವೃಷಸೇನನು ಪಾರ್ಥನನ್ನು ಅವನ ಎಡಭುಜದ ಬುಡದಲ್ಲಿ ನಿಶಿತವಾದ ಮತ್ತು ಉಗ್ರವಾದ ಬಾಣಗಳಿಂದ ಪ್ರಹರಿಸಿದನು. ಅದೇ ರೀತಿಯಲ್ಲಿ ಶ್ರೀಕೃಷ್ಣನನ್ನೂ ಒಂಬತ್ತು ಬಾಣಗಳಿಂದ ಪ್ರಹರಿಸಿದನಲ್ಲದೇ ಪುನಃ ಅರ್ಜುನನನ್ನೂ ಹತ್ತು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದನು. ಹಿಂದಿನಂತೆಯೇ ವೃಷಸೇನಪ್ರಮುಕ್ತವಾದ ಬಾಣಗಳಿಂದ ಗಾಯಗೊಂಡ ಶ್ವೇತಹಯನು (ಅರ್ಜುನನು) ಸ್ವಲ್ಪ ಕೋಪಗೊಂಡವನಾಗಿ ಕರ್ಣಪುತ್ರನನ್ನು ಸಂಹರಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು. ವೃಷಸೇನನನ್ನು ಸಂಹಾರಮಾಡಬೇಕೆಂದು ದೃಢವಾಗಿ ನಿಶ್ಚಯಿಸಿದ್ದ ಮಹಾತ್ಮನಾದ ಅರ್ಜುನನು ಕೋಪದಿಂದ ಹುಬ್ಬನ್ನು ಗಂಟಿಕ್ಕಿ ಹಣೆಯಲ್ಲಿ ತ್ರಿವಳಿಗಳನ್ನು ಹೊಂದಿದವನಾಗಿ ಬಹಳ ಶೀಘ್ರವಾಗಿ ಅನೇಕ ಬಾಣಗಳನ್ನು ವೃಷಸೇನನ ಮೇಲೆ ಪ್ರಯೋಗಿಸಿದನು. ಆ ಸಮಯದಲ್ಲಿ ಕೋಪದಿಂದ ರಕ್ತಾಕ್ಷನಾಗಿದ್ದ– ಯಮರಾಜನೇ ಶತ್ರುವಾಗಿ ಬಂದರೂ ಅವನನ್ನೂ ಸಂಹರಿಸುವ ಸಾಮರ್ಥ್ಯ ವನ್ನು ಹೊಂದಿದ್ದ–ಅರ್ಜುನನು ಗಹ-ಗಹಿಸಿ ನಗುತ್ತಾ ಕರ್ಣನನ್ನೂ, ದುರ್ಯೋಧನನನ್ನೂ, ಅಶ್ವತ್ಥಾಮನೇ ಮೊದಲಾದ ಕೌರವಮಹಾಯೋಧರನ್ನೂ ಅನುಲಕ್ಷಿಸಿ ಕರ್ಣನೊಡನೆ ಈ ಮಾತನ್ನು ಹೇಳಿದನು:

“ಕರ್ಣ! ನೀನು ನೋಡುತ್ತಿರುವಂತೆಯೇ ನಿನ್ನ ಮಗನಾದ, ಶತ್ರು ಭಯಂಕರನಾದ ವೃಷಸೇನನನ್ನು ನಿಶಿತವಾದ ಬಾಣಗಳಿಂದ ಯಮಲೋಕಕ್ಕೆ ಕಳುಹಿಸುತ್ತೇನೆ.

ಊನಂ ಚ ತಾವದ್ಧಿ ಜನಾ ವದನ್ತಿ
ಸರ್ವೈರ್ಭವದ್ಭಿರ್ಮಮ ಸೂನುರ್ಹತೋಽಸೌ ।
ಏಕೋ ರಥೋ ಮದ್ವಿಹೀನಸ್ತರಸ್ವೀ
ಅಹಂ ಹನಿಷ್ಯೇ ಭವತಾಂ ಸಮಕ್ಷಮ್ ॥೩೨॥
ಸಂರಕ್ಷ್ಯತಾಂ ರಥಸಂಸ್ಥಾಃ ಸುತೋಽಯ-
ಮಹಂ ಹನಿಷ್ಯೇ ವೃಷಸೇನಮುಗ್ರಮ್ ।
ಪಶ್ಚಾದ್ವಧಿಷ್ಯೇ ತ್ವಾಮಪಿ ಸಮ್ಪ್ರಮೂಢ-
ಮಹಂ ಹನಿಷ್ಯೇಽರ್ಜುನ ಆಜಿಮಧ್ಯೇ ॥೩೩॥

ವೇಗಶಾಲಿಯಾದ ಮಹಾರಥನಾದ ನನ್ನ ಮಗನು ಏಕಾಕಿಯಾಗಿ ಯುದ್ಧಮಾಡುತ್ತಿದ್ದನು. ಆ ಸಮಯದಲ್ಲಿ ನಾನಲ್ಲಿರಲಿಲ್ಲ. ನೀವೆಲ್ಲರೂ ಸೇರಿ ಅವನನ್ನು ಸಂಹರಿಸಿದಿರಿ. ಇಂದೂ ಸಹ ಜನರು ನಿಮ್ಮ ಬಗೆಗೆ ಅದೊಂದು ದೊಡ್ಡ ನ್ಯೂನತೆಯೆಂದೇ ಹೇಳುತ್ತಾರೆ. ಇಂದು ನಿಮ್ಮೆಲ್ಲರ ಎದುರಿನಲ್ಲಿಯೇ ನಾನು ಇವನನ್ನು ಸಂಹರಿಸುತ್ತೇನೆ. ರಥಸ್ಥರಾಗಿರುವ ನೀವೆಲ್ಲರೂ ಸೇರಿ ಕರ್ಣನ ಈ ಪುತ್ರನನ್ನು ಸಂರಕ್ಷಿಸಿರಿ. ಕರ್ಣ! ಉಗ್ರನಾದ ಈ ನಿನ್ನ ಮಗ ವೃಷಸೇನನನ್ನು ಸಂಹರಿಸುತ್ತೇನೆ. ಅನಂತರ 'ಅರ್ಜುನ' ಎಂದು ಪ್ರಸಿದ್ಧನಾಗಿರುವ ನಾನು ರಣರಂಗದ ಮಧ್ಯದಲ್ಲಿ ಪುತ್ರವ್ಯಸನದಿಂದ ಕಿಂಕರ್ತವ್ಯತಾಮೂಢನಾದ ನಿನ್ನನ್ನೂ ಸಂಹರಿಸುತ್ತೇನೆ.

ಕರ್ಣ! ಈ ನಮ್ಮ ಕಲಹಕ್ಕೆ ನೀನೇ ಮೂಲಪುರುಷನಾಗಿರುವೆ. ರಾಜನಾದ ದುರ್ಯೋಧನನ ಆಶ್ರಯವನ್ನು ಪಡೆದು ಅತ್ಯಂತದರ್ಪಿಷ್ಠನಾಗಿರುವೆ. ನಾನಿಂದು ನಿನ್ನನ್ನು ಬಲಪೂರ್ವಕವಾಗಿ ಸಂಹಾರಮಾಡುವವನಾಗಿದ್ದೇನೆ. ಯಾವನ ಅನೀತಿಯಿಂದಾಗಿ ಅಪಾರವಾದ ಜನಕ್ಷಯವಾಗುತ್ತಿರುವುದೋ–ಅಂತಹ ಅಧಮಪುರುಷನಾದ ದುರ್ಯೋಧನನನ್ನು ಯುದ್ಧದಲ್ಲಿ ಭೀಮಸೇನನು ಸಂಹರಿಸುತ್ತಾನೆ." ಮಹಾರಾಜ! ಮಹಾತ್ಮನಾದ ಅರ್ಜುನನು ಹೀಗೆ ಹೇಳಿ ಧನುಸ್ಸನ್ನು ಚೆನ್ನಾಗಿ ತೀಡಿ ಕರ್ಣನ ಮಗನಾದ ವೃಷಸೇನನನ್ನು ಸಂಹರಿಸುವ ಸಲುವಾಗಿ ಅವನನ್ನು ಲಕ್ಷ್ಯೀಕರಿಸಿ ಅವನ ಮೇಲೆ ನೂರಾರು ಬಾಣಗಳನ್ನು ಸುರಿಸಿದನು. ಕಿರೀಟಧರನಾದ ಅರ್ಜುನನು

ನಗು-ನಗುತ್ತಲೇ ಯಾವ ವಿಧವಾದ ಶಂಕೆಯೂ ಇಲ್ಲದೇ ಹತ್ತು ಬಾಣಗಳಿಂದ ವೃಷಸೇನನ ಮರ್ಮಸ್ಥಳಗಳಲ್ಲಿ ಪ್ರಹರಿಸಿದನು. ಪುನಃ ನಿಶಿತವಾದ ನಾಲ್ಕು ಬಾಣಗಳಿಂದ ವೃಷಸೇನನ ಧನುಸ್ಸನ್ನೂ, ಎರಡೂ ತೋಳುಗಳನ್ನೂ ಮತ್ತು ಶಿರಸ್ಸನ್ನೂ ಕತ್ತರಿಸಿದನು. ಪಾರ್ಥನ ಬಾಣಗಳಿಂದ ಆಹತನಾದ ವೃಷಸೇನನು–ಸುಪುಷ್ಪಿತವಾದ, ದೊಡ್ಡದಾದ, ವಿಶಾಲವಾದ



ಶಾಲವೃಕ್ಷವು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಪರ್ವತಶಿಖರದಿಂದ ಕೆಳಕ್ಕೆ ಬೀಳುವಂತೆ–ಬಾಹು ಮತ್ತು ಶಿರಸ್ಸುಗಳಿಂದ ವಿಹೀನನಾಗಿ ರಥದಿಂದ ಕೆಳಕ್ಕೆ ಬಿದ್ದನು. ಕಾರ್ಯಗಳನ್ನು ಬಹಳ ಕ್ಷಿಪ್ರವಾಗಿ ಮಾಡುವ ಕರ್ಣನು ವೃಷಸೇನನು ಅರ್ಜುನನ ಬಾಣಗಳಿಂದ ಹತನಾಗಿ ರಥದಿಂದ ಬೀಳುತ್ತಿರುವು

ದನ್ನು ನೋಡಿ ಪುತ್ರನ ಮರಣದಿಂದ ಪರಿತಪಿಸುತ್ತಾ ರೋಷಾವಿಷ್ಟನಾಗಿ ರಥದ ಮೂಲಕವಾಗಿ ಅರ್ಜುನನ ರಥದ ಸಮೀಪಕ್ಕೆ ಧಾವಿಸಿದನು.

ತನ್ನ ಕಣ್ಣೆದುರಿನಲ್ಲಿಯೇ ಮಗನು ಅರ್ಜುನನಿಂದ ಹತನಾದುದನ್ನು ನೋಡಿದ ಮಹಾತ್ಮನಾದ ಕರ್ಣನು ರೋಷಾವಿಷ್ಟನಾಗಿ ಬಹಳ ಬೇಗ ಕೃಷ್ಣಾರ್ಜುನರನ್ನು ಆಕ್ರಮಿಸಿದನು.”

೬೫ನೆಯ ಅಧ್ಯಾಯವು ಮುಗಿಯಿತು.

೬೬ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನೊಡನೆ ಯುದ್ಧಮಾಡುವ ವಿಷಯವಾಗಿ ಕೃಷ್ಣಾರ್ಜುನರ ಸಮಾಲೋಚನೆ: ಅರ್ಜುನನು ಕರ್ಣನನ್ನು ಎದುರಿಸಿದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

“ಮಹಾರಾಜ! ತೀರವನ್ನು ಉಲ್ಲಂಘಿಸಿಕೊಂಡು ಮುನ್ನುಗ್ಗಿ ಹರಿದುಬರುವ ಸಮುದ್ರದೋಪಾದಿಯಲ್ಲಿ–ಗರ್ಜನೆಮಾಡುತ್ತಾ ಬರುತ್ತಿದ್ದ, ಮಹಾಕಾಯನಾದ, ದೇವತೆಗಳಿಂದಲೂ ತಡೆದು ನಿಲ್ಲಿಸಲು ಅಸಾಧ್ಯನಾದ ಕರ್ಣನನ್ನು ನೋಡಿ ಪುರುಷರ್ಷಭನಾದ ದಶಾರ್ಹಕುಲತಿಲಕನಾದ ಶ್ರೀಕೃಷ್ಣನು ನಗುತ್ತಾ ಅರ್ಜುನನೊಡನೆ ಹೇಳಿದನು:

“ಅರ್ಜುನ! ಶ್ವೇತಾಶ್ವನಾದ, ಶಲ್ಯಸಾರಥಿಯಾದ ಕರ್ಣನು ರಥದಲ್ಲಿ ಕುಳಿತು ಇತ್ತಕಡೆಗೇ ಬರುತ್ತಿದ್ದಾನೆ. ನೀನು ಯಾರೊಡನೆ ಯುದ್ಧ ಮಾಡಬೇಕಾಗಿರುವುದೋ ಆ ಕರ್ಣನೇ ಈಗ ಇತ್ತಕಡೆ ಬರುತ್ತಿದ್ದಾನೆ. ಸುಸ್ಥಿರನಾಗಿರು. ಪಾಂಡವ! ಶ್ವೇತಾಶ್ವಗಳಿಂದ ಯುಕ್ತವಾದ, ರಾಧೆಯ ನಿಂದ ಸುಶೋಭಿಸುತ್ತಿರುವ, ಸಕಲಯುದ್ಧಸಾಮಗ್ರಿಗಳಿಂದಲೂ ಸಮೃದ್ಧ ವಾಗಿರುವ ರಥವನ್ನು ನೋಡು. ಈ ರಥವು ನಾನಾವಿಧವಾದ ಪತಾಕೆಗಳಿಂದ ಸಮಾವೃತವಾಗಿದೆ. ಚಿಕ್ಕ-ಚಿಕ್ಕ ಗಂಟೆಗಳ ಜಾಲಗಳಿಂದ ಸಮಲಂಕೃತ ವಾಗಿದೆ. ಶ್ವೇತಾಶ್ವಗಳಿಂದ ಎಳೆಯಲ್ಪಡುತ್ತಿರುವ ಈ ರಥವು ಆಕಾಶದಲ್ಲಿ ಸಂಚರಿಸುವ ವಿಮಾನದಂತೆಯೇ ಕಾಣುತ್ತಿದೆ. ಆನೆಯ ಹಗ್ಗವೇ ಚಿಹ್ನೆ

ಯಾಗಿರುವ ಮಹಾತ್ಮನಾದ ಕರ್ಣನ ಧ್ವಜವನ್ನು ನೋಡು, ಪಾರ್ಥ! ಈ ಧ್ವಜವು ಇಂದ್ರನ ಧನುಸ್ಸಿಗೆ ಸಮಾನವಾಗಿ ಪ್ರಕಾಶಿಸುತ್ತಿದ್ದು, ಆಕಾಶದಲ್ಲಿ ಗೆರೆಯನ್ನೆಳೆದುಕೊಂಡು ಬರುತ್ತಿರುವಂತೆಯೇ ಕಾಣುತ್ತಿದೆ. ದುರ್ಯೋಧನನಿಗೆ ಪ್ರಿಯವನ್ನುಂಟುಮಾಡುವ ಇಚ್ಛೆಯುಳ್ಳ, ಜಲಧಾರೆಯನ್ನು ಸುರಿಸುವ ಮೇಘದೋಪಾದಿಯಲ್ಲಿ ಬಾಣಗಳ ವೃಷ್ಟಿಯನ್ನೇ ಸುರಿಸುತ್ತಾ ಬರುತ್ತಿರುವ ಕರ್ಣನನ್ನು ನೋಡು, ಅರ್ಜುನ! ಮದ್ರರಾಜನಾದ ಈ ಶಲ್ಯನು ಮಹಾತೇಜಸ್ವಿಯಾದ ಕರ್ಣನ ರಥದ ಮುಂಭಾಗದಲ್ಲಿ ಕುಳಿತು ಕುದುರೆಗಳನ್ನು ನಿಯಂತ್ರಿಸುತ್ತಿದ್ದಾನೆ. ಕರ್ಣನು ನಿನ್ನೊಡನೆ ಯುದ್ಧಮಾಡುವ ಇಚ್ಛೆಯಿಂದ ಬರುತ್ತಿರುವ ಈ ಸಮಯದಲ್ಲಿ ಎಲ್ಲ ಕಡೆಗಳಲ್ಲಿಯೂ ಆಗುತ್ತಿರುವ ದುಂದುಭಿಗಳ ಧ್ವನಿಗಳನ್ನೂ, ದಾರುಣವಾದ ಶಂಖಗಳ ನಿನಾದಗಳನ್ನೂ ಮತ್ತು ವಿಧ-ವಿಧವಾದ ಸಿಂಹನಾದಗಳನ್ನೂ ಆಲಿಸು. ಮಹಾತೇಜಸ್ವಿಯಾದ ಕರ್ಣನು ಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಟೇಂಕರಿಸುತ್ತಿದ್ದಾನೆ. ಈ ಮಹಾಶಬ್ದಗಳ ಮಧ್ಯದಲ್ಲಿ ಕರ್ಣನ ಧನುಷ್ಟೇಂಕಾರಶಬ್ದವೇ ಸ್ಪಷ್ಟವಾಗಿ ಕೇಳಿಸುತ್ತಿದೆ. ಶಂಖ-ದುಂದುಭಿನಿನಾದಗಳು ಘೋರವಾದ ಟೇಂಕಾರಶಬ್ದದಲ್ಲಿ ಉಡುಗಿಹೋಗಿವೆ.

ಮಹಾರಣ್ಯದಲ್ಲಿ ಜಿಂಕೆಗಳು ಕೋಪಗೊಂಡ ಸಿಂಹವನ್ನು ನೋಡಿ ಓಡಿಹೋಗುವಂತೆ–ಪಾಂಚಾಲಮಹಾರಥರು ತಮ್ಮ ಚತುರಂಗಬಲದೊಡನೆ ಪಲಾಯನಮಾಡುತ್ತಿದ್ದಾರೆ. ಕೌಂತೇಯ! ಸರ್ವಪ್ರಯತ್ನದಿಂದಲೂ ನೀನು ಕರ್ಣನನ್ನು ವಧಿಸುವುದು ಯುಕ್ತವಾಗಿದೆ. ನಿನ್ನನ್ನು ಬಿಟ್ಟು ಬೇರೆ ಯಾರಿಗೂ ಕರ್ಣನ ಬಾಣಗಳ ಪ್ರಹಾರವನ್ನು ಸಹಿಸುವ ಸಾಮರ್ಥ್ಯವಿಲ್ಲ. ದೇವಾಸುರ-ಗಂಧರ್ವರಿಂದಲೂ ಚರಾಚರಪ್ರಾಣಿಗಳಿಂದಲೂ ಕೂಡಿರುವ ಮೂರು ಲೋಕಗಳನ್ನೇ ನೀನು ಯುದ್ಧದಲ್ಲಿ ಜಯಿಸಲು ಸಮರ್ಥನಾಗಿರುವೆ. ಈ ವಿಷಯವು ನನಗೆ ಚೆನ್ನಾಗಿ ತಿಳಿದಿದೆ.

ಭೀಮಮುಗ್ರಂ ಮಹಾತ್ಮಾನಂ ತ್ರ್ಯಕ್ಷಂ ಶರ್ವಂ ಕಪರ್ದಿನಮ್ ।
ನ ಶಕ್ತಾ ದ್ರಷ್ಟುಮೀಶಾನಂ ಕಿಂ ಪುನರ್ಯೋಧಿತುಂ ಪ್ರಭುಮ್ ॥
ತ್ವಯಾ ಸಾಕ್ಷಾನ್ಮಹಾದೇವಃ ಸರ್ವಭೂತಶಿವಃ ಶಿವಃ ।
ಯುದ್ಧೇನಾರಾಧಿತಃ ಸ್ಥಾಣುರ್ದೇವಾಶ್ಚ ವರದಾಸ್ತವ ॥೧೪॥

**ತಸ್ಯ ಪಾರ್ಥ ಪ್ರಸಾದೇನ ದೇವದೇವಸ್ಯ ಶೂಲಿನಃ ।**
**ಜಹಿ ಕರ್ಣಂ ಮಹಾಬಾಹೋ ನಮುಚಿಂ ವೃತ್ರಹಾ ಯಥಾ ।**
**ಶ್ರೇಯಸ್ತೇಽಸ್ತು ಸದಾ ಪಾರ್ಥ ಯುದ್ಧೇ ಜಯಮವಾಪ್ನುಹಿ ॥**



ಅರ್ಜುನ! ಭಯಂಕರನಾದ, ಉಗ್ರನಾದ, ಮಹಾತ್ಮನಾದ, ಮುಕ್ಕಣ್ಣನಾದ, ಶರ್ವನಾದ, ಕಪರ್ದಿಯಾದ ಪ್ರಭುವನ್ನು ಬೇರೆಯವರು ನೋಡಲೂ ಕೂಡ ಶಕ್ತರಲ್ಲ. ಹೀಗಿರುವಾಗ ಆ ಮಹಾದೇವನೊಡನೆ ಯುದ್ಧ ಮಾಡುವ ಸಾಧ್ಯತೆಯೆಲ್ಲಿದೆ? ಸರ್ವಪ್ರಾಣಿಗಳಿಗೂ ಮಂಗಳದಾಯಕನಾದ, ಮಂಗಳಸ್ವರೂಪನಾದ, ಸ್ಥಾಣುವಾದ, ಸಾಕ್ಷಾತ್ ಮಹಾದೇವನನ್ನು ಯುದ್ಧದ ಮೂಲಕವಾಗಿಯೇ ನೀನು ಆರಾಧಿಸಿರುವೆ. (ಸುಪ್ರೀತಿಗೊಳಿ

ಸಿರುವೆ.) ಎಲ್ಲ ದೇವತೆಗಳೂ ನಿನಗೆ ವರಗಳನ್ನಿತ್ತಿದ್ದಾರೆ. ಪಾರ್ಥ! ಮಹಾಬಾಹುವೇ! ದೇವದೇವನಾದ ಶೂಲಿಯ ಪ್ರಸಾದದಿಂದ–ಇಂದ್ರನು ನಮುಚಿಯನ್ನು ಸಂಹರಿಸಿದಂತೆ–ಕರ್ಣನನ್ನು ನೀನು ಸಂಹರಿಸು. ನಿನಗೆ ಸರ್ವದಾ ಶ್ರೇಯಸ್ಸುಂಟಾಗಲಿ. ನೀನು ಕರ್ಣನೊಡನೆ ಮಾಡುವ ಯುದ್ಧದಲ್ಲಿ ಜಯವನ್ನು ಹೊಂದು."

**ಧ್ರುವ ಏವ ಜಯಃ ಕೃಷ್ಣ ಮಮ ನಾಸ್ತ್ಯತ್ರ ಸಂಶಯಃ ।**
**ಸರ್ವಲೋಕಗುರುರ್ಯಸ್ತ್ವಂ ತುಷ್ಟೋಽಸಿ ಮಧುಸೂದನ ॥೧೭॥**

"ಕೃಷ್ಣ! ನಿಶ್ಚಯವಾಗಿಯೂ ನನಗೆ ಜಯವು ಲಭಿಸಿಯೇ ತೀರುವುದು. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಮಧುಸೂದನ! ಸರ್ವಲೋಕಗಳಿಗೂ ಗುರುವಾದ ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿರುವುದರಿಂದ ನಾನು ಖಂಡಿತವಾಗಿಯೂ ಜಯಗಳಿಸುತ್ತೇನೆ.

ಹೃಷೀಕೇಶ! ಕುದುರೆಗಳನ್ನು ಮುನ್ನಡೆಸು. ನಮ್ಮ ರಥವು ಮುಂದೆ ಹೋಗಲಿ. ಕರ್ಣನನ್ನು ಸಂಹರಿಸದೇ ಅರ್ಜುನನು ಖಂಡಿತವಾಗಿಯೂ ಇಂದು ರಣರಂಗದಿಂದ ಹಿಂದಿರುಗುವುದಿಲ್ಲ. ಕರ್ಣನು ನನ್ನ ಬಾಣಗಳಿಂದ ಹತನಾಗಿ ತುಂಡು-ತುಂಡಾಗುವುದನ್ನು ನೀನಿಂದು ಕಾಣುವೆ. ಅಥವಾ ಕರ್ಣನ ಬಾಣಗಳಿಂದ ಹತನಾದ ನನ್ನನ್ನಾದರೂ ಕಾಣುವೆ. ಮೂರು ಲೋಕಗಳನ್ನೂ ವಿಮೋಹಗೊಳಿಸುವ ಘೋರಯುದ್ಧವಿಂದು ಸನ್ನಿಹಿತವಾಗಿದೆ. ಭೂಮಂಡಲವು ಇರುವವರೆಗೂ ಜನರು ಈ ಯುದ್ಧದ ವಿಷಯವಾಗಿ ಮಾತನಾಡಿಕೊಳ್ಳುತ್ತಲೇ ಇರುತ್ತಾರೆ."

ಮಹಾರಾಜ! ಅರ್ಜುನನು ಅನಾಯಾಸವಾಗಿ ಮಹಾಕಾರ್ಯಗಳನ್ನು ಮಾಡಿ ಮುಗಿಸುವ ಶ್ರೀಕೃಷ್ಣನೊಡನೆ ಹೀಗೆ ಹೇಳುತ್ತಾ–ಒಂದು ಮದಗಜವನ್ನು ಮತ್ತೊಂದು ಮದಗಜವು ಎದುರಿಸುವಂತೆ–ಕರ್ಣನನ್ನು ಎದುರಿಸಿದನು. ತೇಜಸ್ವಿಯಾದ ಪಾರ್ಥನು ಅರಿಂದಮನಾದ ಶ್ರೀಕೃಷ್ಣನನ್ನು ಕುರಿತು ಪುನಃ ಹೇಳಿದನು: "ಹೃಷೀಕೇಶ! ಶೀಘ್ರವಾಗಿ ಹೋಗುವಂತೆ ಕುದುರೆಗಳನ್ನು ಪ್ರಚೋದಿಸು. ಕಾಲವು ಕಳೆದುಹೋಗುತ್ತಿದೆ."

ಮಹಾತ್ಮನಾದ ಪಾಂಡವನು ಹೀಗೆ ಹೇಳಿದನಂತರ ಶ್ರೀಕೃಷ್ಣನು ವಿಜಯಸೂಚಕವಾದ ಉಕ್ತಿಗಳಿಂದ ಅರ್ಜುನನನ್ನು ಹುರಿದುಂಬಿಸಿ, ಮನೋವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಕುದುರೆಗಳನ್ನು ಮುಂದೆ ನಡೆಯುವಂತೆ ಚಪ್ಪರಿಸಿದನು. ಮನೋವೇಗದಿಂದ ಕೂಡಿದ್ದ ಪಾಂಡುಪುತ್ರನ ಆ ರಥವು ಕ್ಷಣಮಾತ್ರದಲ್ಲಿ ಕರ್ಣನ ರಥದ ಮುಂದೆ ಹೋಗಿ ನಿಂತಿತು."

ಲ೬ನೆಯ ಅಧ್ಯಾಯವು ಮುಗಿಯಿತು.

——

ಲ೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣಾರ್ಜುನರು ದ್ವೈರಥಯುದ್ಧಕ್ಕೆ ಸಜ್ಜಾಗಿ ನಿಂತುದು: ಅವರ ಜಯಾಪಜಯಗಳ ವಿಷಯದಲ್ಲಿ ಪ್ರಾಣಿಮಾತ್ರಕ್ಕೇ ಸಂಶಯವುಂಟಾದುದು: ಬ್ರಹ್ಮ ಮತ್ತು ಮಹೇಶ್ವರರಿಂದ ಅರ್ಜುನನ ವಿಜಯಘೋಷಣೆ: ಕರ್ಣ-ಶಲ್ಯರ ಮತ್ತು ಕೃಷ್ಣಾರ್ಜುನರ ಸಂಭಾಷಣೆ

(ಈ ಅಧ್ಯಾಯವು ಲ೫ನೆಯ ಅಧ್ಯಾಯದಿಂದ ಅನುವರ್ತಿತವಾಗಿದೆ.)

ಸಂಜಯನು ವೃಷಸೇನನ ವಧೆಯಾದನಂತರದ ಕರ್ಣನ ಪ್ರತಿಕ್ರಿಯೆಯನ್ನು ವರ್ಣಿಸುತ್ತಾನೆ:

"ಮಹಾರಾಜ! ತನ್ನ ಸಮಕ್ಷದಲ್ಲಿಯೇ ವೃಷಸೇನನು ಹತನಾದುದನ್ನು ಕಂಡು ಕೋಪ-ಶೋಕಗಳಿಂದ ಪರೀತನಾದ ಕರ್ಣನು ಪುತ್ರಶೋಕದಿಂದ ಉಂಟಾದ ಕಣ್ಣೀರನ್ನು ಎರಡು ಕಣ್ಣುಗಳಿಂದಲೂ ಧಾರಾಕಾರವಾಗಿ ಸುರಿಸಿದನು. ತೇಜಸ್ವಿಯಾದ ಕರ್ಣನು ಕ್ರೋಧದಿಂದ ರಕ್ತಾಕ್ಷನಾದ ಧನಂಜಯನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ರಥದಲ್ಲಿ ಕುಳಿತು ಶತ್ರುವಿಗೆ ಅಭಿಮುಖವಾಗಿ ತೆರಳಿದನು. ಕರ್ಣಾರ್ಜುನರ ಆ ಎರಡು ರಥಗಳೂ ಸೂರ್ಯಸದೃಶವಾಗಿದ್ದುವು. ವ್ಯಾಘ್ರಚರ್ಮದಿಂದ ಆಚ್ಛಾದಿತವಾಗಿದ್ದುವು. ಎರಡು ರಥಗಳೂ ಒಂದೆಡೆಯಲ್ಲಿ ಸೇರಿ ಆಗತಾನೇ ಮೇಲಕ್ಕೆ

ಬಂದಿರುವ ಇಬ್ಬರು ಸೂರ್ಯರಂತೆಯೇ ಕಾಣುತ್ತಿದ್ದುವು. ಎರಡೂ ರಥಗಳ ಕುದುರೆಗಳು ಬಿಳಿಯ ಬಣ್ಣದುವುಗಳೇ ಆಗಿದ್ದುವು. ಇಬ್ಬರೂ ದಿವ್ಯಪುರುಷರೇ ಆಗಿದ್ದರು ಮತ್ತು ಶತ್ರುಗಳ ಮರ್ದನದಲ್ಲಿ ಸಮರ್ಥರಾಗಿದ್ದರು. ಇಂತಹ ಪ್ರಭಾವಶಾಲಿಗಳಾದ ಕರ್ಣಾರ್ಜುನರು, ಆ ಸಮಯದಲ್ಲಿ ಆಕಾಶದಲ್ಲಿರುವ



ಚಂದ್ರ-ಸೂರ್ಯರಂತೆಯೇ ಪ್ರಕಾಶಿಸುತ್ತಿದ್ದರು. ಮೂರು ಲೋಕಗಳನ್ನೂ ಜಯಿಸುವುದರಲ್ಲಿ ಪ್ರಯತ್ನಶೀಲರಾಗಿದ್ದ ಇಂದ್ರ ಮತ್ತು ಬಲಿಗಳೋಪಾದಿಯಲ್ಲಿ ಯುದ್ಧಸನ್ನದ್ಧರಾಗಿ ನಿಂತಿದ್ದ ಕರ್ಣಾರ್ಜುನರನ್ನು ನೋಡಿ ಎಲ್ಲ ಸೈನಿಕರೂ ವಿಸ್ಮಿತರಾದರು. ರಥಗಳ ಘೋಷಗಳಿಂದಲೂ, ಮೌರ್ವಿಗಳ ಟೇಂಕಾರಗಳಿಂದಲೂ, ಚಪ್ಪಾಳೆಗಳ ಶಬ್ದಗಳಿಂದಲೂ, ಬಾಣ

ಗಳ ಸೀತ್ಕಾರಶಬ್ದಗಳಿಂದಲೂ, ಸಿಂಹನಾದಗಳಿಂದಲೂ ಆ ಇಬ್ಬರು ಮಹಾರಥರೂ ಎದುರು-ಬದುರಾಗಿ ಧಾವಿಸಿದ್ದುದನ್ನೂ ಮತ್ತು ಅವರ ಎರಡು ಧ್ವಜಗಳೂ ಸಂಸಕ್ತವಾದುದನ್ನೂ ನೋಡಿ ರಣಾಂಗಣದಲ್ಲಿದ್ದ ರಾಜರಿಗೆ ವಿಸ್ಮಯವುಂಟಾಯಿತು. ಕರ್ಣನ ಧ್ವಜವು ಆನೆಯ ಹಗ್ಗದ ಚಿಹ್ನೆಯನ್ನು ಹೊಂದಿದ್ದಿತು. ಅರ್ಜುನನ ಧ್ವಜವು ಕಪೀಶ್ವರನ ಚಿಹ್ನೆಯನ್ನು ಹೊಂದಿದ್ದಿತು. ಎರಡು ರಥಗಳೂ ಒಂದೆಡೆಯಲ್ಲಿ ಯುದ್ಧಮಾಡಲು ಸಂಸಕ್ತವಾದುದನ್ನು ಕಂಡು ಎಲ್ಲ ರಾಜರೂ ಸಿಂಹನಾದಗಳನ್ನು ಮಾಡಿದರು ಮತ್ತು–'ಸಾಧು ಪಾರ್ಥ!' 'ಸಾಧು ಕರ್ಣ!' 'ಪಾರ್ಥನಿಗೆ ಜಯವಾಗಲಿ! ಕರ್ಣನಿಗೆ ಜಯವಾಗಲಿ!'–ಇವೇ ಮುಂತಾದ ಘೋಷಣೆಗಳನ್ನು ಮಾಡಿದರು. ಕರ್ಣಾರ್ಜುನರ ಆ ಎರಡು ರಥಗಳನ್ನೂ ನೋಡಿದ ಸಾವಿರಾರು ಯೋಧರು ಭುಜಗಳನ್ನು ತಟ್ಟಿಕೊಳ್ಳುತ್ತಾ ಅಂಗವಸ್ತ್ರಗಳನ್ನು ಮೇಲಕ್ಕೆತ್ತಿ ಹಾರಾಡಿಸುತ್ತಾ ದೊಡ್ಡ ಗದ್ದಲವನ್ನೇ ಮಾಡಿದರು. ಕೌರವ ಸೈನಿಕರು ಕರ್ಣನಿಗೆ ಹರ್ಷವನ್ನುಂಟುಮಾಡುವ ಸಲುವಾಗಿ ರಣಾಂಗಣದ ಸುತ್ತಲೂ ರಣವಾದ್ಯಗಳನ್ನು ಬಾರಿಸತೊಡಗಿದರು. ಎಲ್ಲ ಕಡೆಗಳಲ್ಲಿಯೂ ಶಂಖಗಳನ್ನು ಊದುತ್ತಿದ್ದರು. ಅದೇ ರೀತಿಯಲ್ಲಿ ಪಾಂಡವರೂ ಸಹ ಧನಂಜಯನನ್ನು ಹರ್ಷಗೊಳಿಸುತ್ತಾ ರಣವಾದ್ಯಗಳ ಮತ್ತು ಶಂಖಗಳ ನಿನಾದಗಳಿಂದ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡಿದರು. ಕರ್ಣಾರ್ಜುನರ ಆ ಮಹಾಸಂಘರ್ಷಸಮಯದಲ್ಲಿ ಎರಡೂ ಪಕ್ಷಗಳ ಶೂರಯೋಧರ ಸಿಂಹಗರ್ಜನೆಗಳಿಂದಲೂ, ಚಪ್ಪಾಳೆಗಳಿಂದಲೂ, ಕೂಗಾಟಗಳಿಂದಲೂ, ಇನ್ನೂ ಅನೇಕವಾದ ಶಬ್ದಗಳಿಂದಲೂ ಸರ್ವತ್ರ ಕೋಲಾಹಲವುಂಟಾಯಿತು.

ತೌ ದೃಷ್ಟ್ವಾ ಪುರುಷವ್ಯಾಘ್ರೌ ರಥಸ್ಥೌ ರಥಿನಾಂ ವರೌ ।
ಪ್ರಗೃಹೀತಮಹಾಚಾಪೌ ಶರಶಕ್ತಿಧ್ವಜಾಯುತೌ ॥೧೩॥

ವರ್ಮಿಣೌ ಬದ್ಧನಿಸ್ತ್ರಿಂಶೌ ಶ್ವೇತಾಶ್ವೌ ಶಙ್ಖಶೋಭಿತೌ ।
ತೂಣೀರವರಸಮ್ಪನ್ನೌ ದ್ವಾವಪ್ಯೇತೌ ಸುದರ್ಶನೌ ॥೧೪॥

ರಕ್ತಚನ್ದನದಿಗ್ಧಾಙ್ಗೌ ಸಮದೌ ಗೋವೃಷಾವಿವ ।
ಚಾಪವಿದ್ಯುಧ್ವಜೋಪೇತೌ ಶಸ್ತ್ರಸಮ್ಪತ್ತಿಯೋಧಿನೌ ॥೧೫॥

ಚಾಮರವ್ಯಜನೋಪೇತೌ ಶ್ವೇತಚ್ಛತ್ರೋಪಶೋಭಿತೌ ।
ಕೃಷ್ಣಶಲ್ಯರಥೋಪೇತೌ ತುಲ್ಯರೂಪೌ ಮಹಾರಥೌ ॥೧೬॥

ಸಿಂಹಸ್ಕನ್ಧೌ ದೀರ್ಘಭುಜೌ ರಕ್ತಾಕ್ಷೌ ಹೇಮಮಾಲಿನೌ ।
ಸಿಂಹಸ್ಕನ್ಧಪ್ರತೀಕಾಶೌ ವ್ಯೂಢೋರಸ್ಕೌ ಮಹಾಬಲೌ ॥೧೭॥

ಅನ್ಯೋನ್ಯವಧಮಿಚ್ಛನ್ತಾವನ್ಯೋನ್ಯಜಯಕಾಂಕ್ಷಿಣೌ ।
ಪ್ರಭಿನ್ನಾವಿವ ಮಾತಙ್ಗೌ ಸುಸಂರಬ್ಧಾವಿವಾಚಲೌ ॥೧೮॥

ಆಶೀವಿಷಶಿಶುಪ್ರಖ್ಯೌ ಯಮಕಾಲಾನ್ತಕೋಪಮೌ ।
ಇನ್ದ್ರವೃತ್ರಾವಿವ ಕ್ರುದ್ಧೌ ಸೂರ್ಯಾಚನ್ದ್ರಮಸಪ್ರಭೌ ॥೧೯॥

ಮಹಾಗ್ರಹಾವಿವ ಕ್ರುದ್ಧೌ ಯುಗಾನ್ತಾಯ ಸಮುತ್ಥಿತೌ ।
ದೇವಗರ್ಭೌ ದೇವಬಲೌ ದೇವತುಲ್ಯೌ ಚ ರೂಪತಃ ॥೨೦॥

ಯದೃಚ್ಛಯಾ ಸಮಾಯಾತೌ ಸೂರ್ಯಾಚನ್ದ್ರಮಸೌ ಯಥಾ ।
ಬಲಿನೌ ಸಮರೇ ದೃಪ್ತೌ ನಾನಾಶಸ್ತ್ರಧರೌ ಯುಧಿ ॥೨೧॥

ತೌ ದೃಷ್ಟ್ವಾ ಪುರುಷವ್ಯಾಘ್ರೌ ಶಾರ್ದೂಲಾವಿವ ಧಿಷ್ಠಿತೌ ।
ಬಭೂವ ಪರಮೋ ಹರ್ಷಸ್ತಾವಕಾನಾಂ ವಿಶಾಮ್ಪತೇ ॥೨೨॥

ಮಹಾರಾಜ! ಕರ್ಣಾರ್ಜುನರಿಬ್ಬರೂ ತಮ್ಮ-ತಮ್ಮ ದಿವ್ಯರಥಗಳಲ್ಲಿ ಕುಳಿತಿದ್ದರು. ಇಬ್ಬರೂ ರಥಶ್ರೇಷ್ಠರಾಗಿದ್ದರು. ಮಹಾಧನುಸ್ಸುಗಳನ್ನು ಹಿಡಿದಿದ್ದರು. ಶರ-ಶಕ್ತಿ-ಧ್ವಜಗಳಿಂದ ಸಂಪನ್ನರಾಗಿದ್ದರು. ಕವಚಗಳನ್ನು ಧರಿಸಿದ್ದರು. ಸೊಂಟಕ್ಕೆ ಕತ್ತಿಯನ್ನು ಬಿಗಿದುಕೊಂಡಿದ್ದರು. ಇಬ್ಬರ ರಥಗಳಲ್ಲಿಯೂ ಬಿಳಿಯ ಕುದುರೆಗಳೇ ಇದ್ದುವು. ಇಬ್ಬರೂ ಶ್ವೇತಾಶ್ವರೆಂಬ ಅಭಿಧಾನವನ್ನೇ ಪಡೆದಿದ್ದರು. ಶಂಖಗಳಿಂದ ಸುಶೋಭಿತರಾಗಿದ್ದರು. ಇಬ್ಬರೂ ಶ್ರೇಷ್ಠವಾದ ಬತ್ತಳಿಕೆಗಳನ್ನು ಹೊಂದಿದ್ದರು. ಸುಂದರಕಾಯ ರಾಗಿದ್ದರು. ಅಂಗಾಂಗಗಳಿಗೂ ರಕ್ತಚಂದನವನ್ನು ಲೇಪಿಸಿಕೊಂಡಿದ್ದರು. ಗೂಳಿಗಳಂತೆ ಮದಯುಕ್ತರಾಗಿದ್ದರು. ಶ್ರೇಷ್ಠವಾದ ಧನುಸ್ಸುಗಳನ್ನೂ

ಮಿಂಚಿನಂತೆ ಥಳ-ಥಳಿಸುವ ಧ್ವಜಗಳನ್ನೂ ಹೊಂದಿದ್ದರು. ಅಪಾರವಾದ ಶಸ್ತ್ರಸಂಪತ್ತಿನ ಮೂಲಕವಾಗಿ ಯುದ್ಧಮಾಡಬಲ್ಲವರಾಗಿದ್ದರು. ಇಬ್ಬರೂ ಚಾಮರ-ವ್ಯಜನಗಳನ್ನು ಹೊಂದಿದ್ದರು. ಶ್ವೇತಚ್ಛತ್ರಗಳಿಂದ ಶೋಭಿಸುತ್ತಿದ್ದರು. ಒಬ್ಬನಿಗೆ ಮಹಾಮಹಿಮನಾದ ಕೃಷ್ಣನೇ ಸಾರಥಿಯಾಗಿದ್ದನು. ಮತ್ತೊಬ್ಬನಿಗೆ ಮಹಾರಾಜನಾದ ಶಲ್ಯನು ಸಾರಥಿಯಾಗಿದ್ದನು. ಮಹಾರಥರಾದ ಅವರಿಬ್ಬರೂ ರೂಪದಲ್ಲಿಯೂ ಸಾಮ್ಯವನ್ನು ಹೊಂದಿದ್ದರು. ಸಿಂಹದ ಹೆಗಲಿನಂತೆ ಹೆಗಲುಳ್ಳವರಾಗಿದ್ದರು. ದೀರ್ಘಬಾಹುಗಳಾಗಿದ್ದರು. ರಕ್ತಾಕ್ಷರಾಗಿದ್ದರು. ಚಿನ್ನದ ಮಾಲೆಗಳನ್ನು ಇಬ್ಬರೂ ಧರಿಸಿಕೊಂಡಿದ್ದರು. ಉನ್ನತವಾದ ಹೆಗಲಿನಿಂದ ಕೂಡಿದ ಸಿಂಹಗಳಂತಿದ್ದರು. ಮಹಾಬಲರಾದ ಅವರಿಗೆ ವಿಶಾಲವಾದ ವಕ್ಷಃಸ್ಥಳವಿದ್ದಿತು. ಒಬ್ಬರು ಮತ್ತೊಬ್ಬರನ್ನು ಜಯಿಸಬೇಕೆಂಬ ಅಭಿಲಾಷೆಯುಳ್ಳವರಾಗಿದ್ದರು. ಗೋಶಾಲೆಯಲ್ಲಿರುವ ಹೋರಿಗಳೋಪಾದಿಯಲ್ಲಿ ಒಬ್ಬರು ಮತ್ತೊಬ್ಬರನ್ನು ಆಕ್ರಮಿಸಲು ಧಾವಿಸುತ್ತಿದ್ದರು. ಇಬ್ಬರೂ ಮದೋದಕವನ್ನು ಸುರಿಸುತ್ತಿರುವ ಸಲಗಗಳಂತಿದ್ದರು. ಇಬ್ಬರೂ ಕುಪಿತರಾಗಿದ್ದರು. ಪರ್ವತದಂತೆ ಅವಿಚಲರಾಗಿದ್ದರು. ಎಳೆನಾಗರಮರಿಗಳಂತಿದ್ದರು. ಯಮ ಮತ್ತು ಪ್ರಳಯಕಾಲದ ಅಂತಕರಿಗೆ ಸಮಾನರಾಗಿದ್ದರು. ಇಂದ್ರ ಮತ್ತು ವೃತ್ರಾಸುರರಂತೆ ಪರಮಕ್ರುದ್ಧರಾಗಿದ್ದರು. ಸೂರ್ಯ-ಚಂದ್ರರಂತೆ ಪ್ರಭಾಯುಕ್ತರಾಗಿದ್ದರು. ಯುಗವನ್ನು ಅಂತ್ಯಗೊಳಿಸುವುದಕ್ಕೋಸ್ಕರ ಉದಯಿಸಿದ ಬಹಳ ಕ್ರುದ್ಧವಾದ ಎರಡು ಮಹಾಗ್ರಹಗಳಂತೆಯೇ ಇದ್ದರು. ಇಬ್ಬರೂ ದೇವಾಂಶಸಂಭೂತರಾಗಿದ್ದರು. ದೇವತೆಗಳ ಬಲವನ್ನೇ ಹೊಂದಿದ್ದರು. ರೂಪದಲ್ಲಿ ದೇವತೆಗಳನ್ನೇ ಹೋಲುತ್ತಿದ್ದರು. ಸ್ವೇಚ್ಛೆಯಿಂದ ಆಕಸ್ಮಿಕವಾಗಿ ಭೂಲೋಕಕ್ಕೆ ಆಗಮಿಸಿದ ಸೂರ್ಯ-ಚಂದ್ರರಂತೆಯೇ ಕಾಣುತ್ತಿದ್ದರು. ಯುದ್ಧದಲ್ಲಿ ಇಬ್ಬರೂ ಮಹಾಬಲಿಷ್ಠರಾಗಿದ್ದರು. ಆದುದರಿಂದಲೇ ದೃಪ್ತರಾಗಿದ್ದರು. ಯುದ್ಧದಲ್ಲಿ ನಾನಾವಿಧವಾದ ಶಸ್ತ್ರಗಳನ್ನು ಪ್ರಯೋಗಿಸುತ್ತಿದ್ದರು. ಎರಡು ಶಾರ್ದೂಲಗಳಂತೆ ಎದುರು-ಬದುರಾಗಿ ನಿಂತಿದ್ದ ಪುರುಷವ್ಯಾಘ್ರರಾದ ಕರ್ಣಾರ್ಜುನರನ್ನು ನೋಡಿ ನಿನ್ನವರಾದ ಕೌರವ-ಪಾಂಡವಸೈನಿಕರಿಗೆ ಅಪಾರವಾದ ಹರ್ಷ

ವುಂಟಾಯಿತು. ಯುದ್ಧಕ್ಕಾಗಿ ಸಂಘಟಿಸಿದ್ದ ಪುರುಷಸಿಂಹರಾದ ಕರ್ಣ-ಧನಂಜಯರನ್ನು ನೋಡಿ ಇಬ್ಬರಲ್ಲಿ ಯಾರು ಜಯಗಳಿಸುತ್ತಾರೆಂಬ ವಿಷಯದಲ್ಲಿ ವಿಶ್ವದ ಸಕಲಪ್ರಾಣಿಗಳಿಗೂ ಸಂದೇಹವುಂಟಾಯಿತು. ಇಬ್ಬರೂ ಶ್ರೇಷ್ಠವಾದ ಆಯುಧಗಳನ್ನೇ ಧರಿಸಿರುತ್ತಾರೆ. ಇಬ್ಬರೂ ಯುದ್ಧಕಲೆಯಲ್ಲಿ ಸಂಪೂರ್ಣವಾಗಿ ನುರಿತಿದ್ದಾರೆ. ಇಬ್ಬರೂ ತಮ್ಮ ಭುಜಾಸ್ಫಾಲನಶಬ್ದಗಳಿಂದ ಆಕಾಶವನ್ನೇ ಪ್ರತಿಧ್ವನಿಸುತ್ತಾರೆ. ಪೌರುಷದಿಂದಲೂ ಮತ್ತು ಬಲದಿಂದಲೂ ಇಬ್ಬರೂ ವಿಶ್ವವಿಖ್ಯಾತವಾದ ಅನೇಕ ಸಾಹಸಕರ್ಮಗಳನ್ನು ಮಾಡಿರುತ್ತಾರೆ. ಶಂಬರಾಸುರ ಮತ್ತು ಅಮರರಾಜನಾದ ಇಂದ್ರರಂತೆ ಯುದ್ಧದಲ್ಲಿ ಇಬ್ಬರೂ ಒಬ್ಬರಿಗೆ ಮತ್ತೊಬ್ಬರು ಸಮಾನರಾಗಿದ್ದಾರೆ.

**ಕಾರ್ತವೀರ್ಯಸಮೌ ಚೋಭೌ ತಥಾ ದಾಶರಥೇಃ ಸಮೌ ।**
**ವಿಷ್ಣುವೀರ್ಯಸಮೌ ಚೋಭೌ ತಥಾ ಭವಸಮೌ ಯುಧಿ ॥೨೬॥**

ಇಬ್ಬರೂ ಯುದ್ಧದಲ್ಲಿ ಕಾರ್ತವೀರ್ಯಾರ್ಜುನ, ದಶರಥನ ಮಗನಾದ ಶ್ರೀರಾಮ ಮತ್ತು ಶಂಕರರಿಗೆ ಸಮಾನರಾಗಿದ್ದಾರೆ. ವೀರ್ಯದಲ್ಲಿ ಇಬ್ಬರೂ ವಿಷ್ಣುವಿಗೆ ಸಮಾನರು. ಇಬ್ಬರೂ ಶ್ವೇತಹಯರು. ಇಬ್ಬರೂ ಶ್ರೇಷ್ಠವಾದ ರಥಗಳಲ್ಲಿ ಕುಳಿತು ಹೋಗತಕ್ಕವರು. ಇಬ್ಬರಿಗೂ ಶ್ರೇಷ್ಠಸಾರಥಿಗಳೇ ಇದ್ದಾರೆ. ಯುದ್ಧಮಾಡಲು ತಮ್ಮ-ತಮ್ಮ ರಥಗಳಲ್ಲಿ ವಿರಾಜಮಾನರಾಗಿ ಕುಳಿತಿದ್ದ ಮಹಾರಥರನ್ನು ನೋಡಿ ಗುಂಪು-ಗುಂಪಾಗಿದ್ದ ಸಿದ್ಧ-ಚಾರಣರಿಗೆ ಅಚ್ಚರಿಯುಂಟಾಯಿತು.

ಸೈನ್ಯಸಮೇತರಾದ ನಿನ್ನ ಮಕ್ಕಳು ಆಹವಶೋಭಿಯಾದ ಮಹಾತ್ಮನಾದ ಕರ್ಣನನ್ನು ಸುತ್ತುವರಿದು ನಿಂತರು. ಅದೇ ರೀತಿಯಲ್ಲಿ ಪ್ರಹೃಷ್ಟರಾದ ಧೃಷ್ಟದ್ಯುಮ್ನನೇ ಮೊದಲಾದ ಪಾಂಡವಯೋಧರು ಯುದ್ಧದಲ್ಲಿ ಅಪ್ರತಿಮನಾದ, ಮಹಾತ್ಮನಾದ ಪಾರ್ಥನನ್ನು ಸುತ್ತುವರಿದು ನಿಂತರು.

ನಿನ್ನ ಕಡೆಯವರೆಲ್ಲರಿಗೂ ಅಂದಿನ ಯುದ್ಧರೂಪವಾದ ಜೂಜಿನಲ್ಲಿ ಕರ್ಣನು ಪಣದ ವಸ್ತುವಾದನು. ಅಂತೆಯೇ ಪಾಂಡವೇಯರಿಗೆ ಪಾರ್ಥನು ಪಣದ ವಸ್ತುವಾದನು. ಹಿಂದೆ ಪಗಡೆಯಾಟದ ಸಮಯದಲ್ಲಿ ಯಾರು ಸಭಾಸದರಾಗಿದ್ದರೋ–ಅವರೇ ಇಂದಿನ ಯುದ್ಧದ ಕ್ರೀಡೆಯಲ್ಲಿಯೂ

ಪ್ರೇಕ್ಷಕರಾಗಿದ್ದರು. ಯುದ್ಧರೂಪವಾದ ಜೂಜಾಟವನ್ನಾಡುತ್ತಿದ್ದ ವೀರರಲ್ಲಿ ಒಬ್ಬನಿಗೆ ವಿಜಯ, ಮತ್ತೊಬ್ಬನಿಗೆ ಪರಾಜಯ–ಎಂಬುದು ನಿಶ್ಚಿತ ವಾಗಿದ್ದಿತು. ರಣಭೂಮಿಯ ಅಗ್ರಭಾಗದಲ್ಲಿದ್ದ ನಮ್ಮ ಮತ್ತು ಪಾಂಡವರ ವಿಜಯದ ಅಥವಾ ಪರಾಜಯದ ನಿರ್ಧಾರಕ್ಕಾಗಿ ಕರ್ಣಾರ್ಜುನರಿಬ್ಬರಿಗೂ ರಣದ್ಯೂತವು ಪ್ರಾರಂಭವಾಯಿತು. ಆಹವಶೋಭಿಗಳಾದ ಅವರಿಬ್ಬರೂ ಕುಪಿತರಾಗಿ, ಒಬ್ಬರು ಮತ್ತೊಬ್ಬರನ್ನು ಸಂಹಾರಮಾಡುವ ಇಚ್ಛೆಯುಳ್ಳವ ರಾಗಿ, ಸಮರಾಂಗಣದಲ್ಲಿ ಯುದ್ಧ ಸನ್ನದ್ಧರಾಗಿ ನಿಂತಿದ್ದರು. ಇಂದ್ರ ಮತ್ತು ವೃತ್ರಾಸುರರಂತೆ ಇಬ್ಬರೂ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುವ ಇಚ್ಛೆಯುಳ್ಳವರಾಗಿದ್ದರು. ಎರಡು ಮಹಾಧೂಮಗ್ರಹಗಳಂತೆ (ಕೇತುಗ್ರಹ ದಂತೆ) ಆ ಸಮಯದಲ್ಲಿ ಇಬ್ಬರೂ ಭಯಂಕರವಾದ ಆಕಾರಗಳನ್ನು ತಳೆದಿದ್ದರು.

ಆ ಸಮಯದಲ್ಲಿ ಅಂತರಿಕ್ಷದಲ್ಲಿದ್ದ ಭೂತಗಳ ನಡುವೆ ಕರ್ಣಾರ್ಜುನ ರಲ್ಲಿ ಯಾರು ಜಯಗಳಿಸುವರೆಂಬ ವಿಷಯವಾಗಿ ಆಕ್ಷೇಪಯುಕ್ತವಾದ ವಿವಾದವೂ ಮತ್ತು ಪರಸ್ಪರವಾಗಿ ಭಿನ್ನಾಭಿಪ್ರಾಯಗಳೂ ತಲೆದೋರಿದುವು.

ಎಲ್ಲರೂ ಪರಸ್ಪರವಾಗಿ ಭಿನ್ನ-ಭಿನ್ನವಾದ ಅಭಿಪ್ರಾಯಗಳನ್ನು ಹೊಂದಿರುವುದು ಅವರ ಮಾತುಗಳಿಂದಲೇ ತಿಳಿದುಬರುತ್ತಿದ್ದಿತು. ಕರ್ಣಾ ರ್ಜುನರ ಸಂಘರ್ಷದ ಸಮಯದಲ್ಲಿ ದೇವ-ದಾನವ-ಗಂಧರ್ವ-ಪಿಶಾಚೋರಗ-ರಾಕ್ಷಸರು ಒಂದೊಂದು ಪಕ್ಷವನ್ನು ಹಿಡಿದರು. (ಅವರಲ್ಲಿ ಕೆಲವರು ಅರ್ಜುನನ ಪಕ್ಷವನ್ನೂ ಮತ್ತೆ ಕೆಲವರು ಕರ್ಣನ ಪಕ್ಷವನ್ನೂ ಹಿಡಿದರು.)

**ದ್ಯೌರಾಸೀತ್ಸೂತಪುತ್ರಸ್ಯ ಪಕ್ಷೇ ಮಾತೇವ ಧಿಷ್ಠಿತಾ ।**
**ಭೂಮಿರ್ಧನಂಜಯಸ್ಯಾಸೀನ್ಮಾತೇವ ಜಯಕಾಂಕ್ಷಿಣೀ ॥೩೮॥**

ಅಂತರಿಕ್ಷದ ಅಧಿದೇವತೆಯು ತಾಯಿಯೋಪಾದಿಯಲ್ಲಿ ಕರ್ಣನ ಪಕ್ಷವನ್ನು ವಹಿಸಿದಳು. ಭೂದೇವಿಯು ತಾಯಿಯೋಪಾದಿಯಲ್ಲಿ ಧನಂಜಯನ ವಿಜಯವನ್ನು ಬಯಸುತ್ತಿದ್ದಳು.

**ಗಿರಯಃ ಸಾಗರಾಶ್ಚೈವ ನದ್ಯಶ್ಚ ಸಜಲಾಸ್ತಥಾ ।**
**ವೃಕ್ಷಾಶ್ಚೌಷಧಯಶ್ಚೈವ ವ್ಯಾಶ್ರಯನ್ತ ಕಿರೀಟಿನಮ್ ॥೩೯॥**

ಪರ್ವತಗಳೂ, ಸಮುದ್ರಗಳೂ, ನೀರಿನಿಂದ ಕೂಡಿದ ನದಿಗಳೂ, ವೃಕ್ಷಗಳೂ, ಓಷಧಿಗಳೂ–ಅರ್ಜುನನ ಪಕ್ಷವನ್ನು ಆಶ್ರಯಿಸಿದುವು.

**ಅಸುರಾ ಯಾತುಧಾನಾಶ್ಚ ಗುಹ್ಯಕಾಶ್ಚ ಪರಂತಪ ।**
**ತೇ ಕರ್ಣಂ ಸಮುಪದ್ಯನ್ತ ಹೃಷ್ಟರೂಪಾಃ ಸಮನ್ತತಃ ॥೪೦॥**

ಪರಂತಪನೇ! ಅಸುರರೂ, ಯಾತುಧಾನರೂ ಮತ್ತು ಗುಹ್ಯಕರೂ ಪ್ರಸನ್ನಚಿತ್ತರಾಗಿ ಕರ್ಣನ ಪಕ್ಷವನ್ನು ಸೇರಿದರು.

**ಮುನಯಶ್ಚಾರಣಾಃ ಸಿದ್ಧಾ ವೈನತೇಯಾ ವಯಾಂಸಿ ಚ ।**
**ರತ್ನಾನಿ ನಿಧಯಃ ಸರ್ವೇ ವೇದಾಶ್ಚಾಖ್ಯಾನಪಞ್ಚಮಾಃ ॥೪೧॥**

**ಸೋಪವೇದೋಪನಿಷದಃ ಸರಹಸ್ಯಾಃ ಸಸಂಗ್ರಹಾಃ ।**
**ವಾಸುಕಿಶ್ಚಿತ್ರಸೇನಶ್ಚ ತಕ್ಷಕೋ ಮಣಿಕಸ್ತಥಾ ॥೪೨॥**

**ಸರ್ಪಾಶ್ಚೈವ ತಥಾ ಸರ್ವೇ ಕಾದ್ರವೇಯಾಶ್ಚ ಸಾನ್ವಯಾಃ ।**
**ವಿಷವನ್ತೋ ಮಹಾರಾಜ ನಾಗಾಶ್ಚಾರ್ಜುನತೋಽಭವನ್ ॥೪೩॥**

ಮುನಿಗಳು, ಚಾರಣರು, ಸಿದ್ಧರು, ವೈನತೇಯರು, ಪಕ್ಷಿಗಳು, ರತ್ನಗಳು, ನಿಧಿಗಳು, ರಹಸ್ಯಗಳಿಂದಲೂ- ಸಂಗ್ರಹಗಳಿಂದಲೂ- ಉಪವೇದಗಳಿಂದಲೂ -ಉಪನಿಷತ್ತುಗಳಿಂದಲೂ- ಇತಿಹಾಸ- ಪುರಾಣ ಗಳಿಂದಲೂ ಯುಕ್ತವಾದ ನಾಲ್ಕು ವೇದಗಳು, ವಾಸುಕಿ ಚಿತ್ರಸೇನ-ತಕ್ಷಕ-ಮಣಿಕರು, ಎಲ್ಲ ಜಾತಿಯ ಸರ್ಪಗಳು, ಕದ್ರುವಿನ ಪೀಳಿಗೆಯವರು, ವಿಷಯುಕ್ತವಾದ ನಾಗಗಳು–ಇವರೆಲ್ಲರೂ ಅರ್ಜುನನ ಪಕ್ಷವನ್ನು ಸೇರಿದರು.

**ಐರಾವತಾಃ ಸೌರಭೇಯಾ ವೈಶಾಲೇಯಾಶ್ಚ ಭೋಗಿನಃ ।**
**ಏತೇಽಭವನ್ನರ್ಜುನತಃ ಕ್ಷುದ್ರಸರ್ಪಾಶ್ಚ ಕರ್ಣತಃ ॥೪೪॥**

ಐರಾವತಗಳು, ಸೌರಭೇಯರು, ಹೆಡೆಗಳಿಂದ ಕೂಡಿರುವ ವೈಶಾಲೇಯರು–ಅರ್ಜುನನ ಪಕ್ಷದವರಾದರು. ಕ್ಷುದ್ರಸರ್ಪಗಳು ಕರ್ಣನ ಪಕ್ಷಕ್ಕೆ ಸೇರಿದುವು.

**ಈಹಾಮೃಗಾ ವ್ಯಾಲಮೃಗಾ ಮಾಙ್ಗಲ್ಯಾಶ್ಚ ಮೃಗದ್ವಿಜಾಃ ।**
**ಪಾರ್ಥಸ್ಯ ವಿಜಯೇ ರಾಜನ್ಸರ್ವ ಏವಾಭಿಸಂಸ್ಥಿತಾಃ ॥೪೫॥**

ಈಹಾಮೃಗಗಳು, ವ್ಯಾಲಮೃಗಗಳು, ಮಂಗಳಸೂಚಕವಾದ ಮೃಗಗಳು, ಪಶು-ಪಕ್ಷಿಗಳು, ಸಿಂಹ-ವ್ಯಾಘ್ರಗಳು ಪಾರ್ಥನ ವಿಜಯವನ್ನು ಬಯಸುತ್ತಿದ್ದುವು.

**ವಸವೋ ಮರುತಃ ಸಾಧ್ಯಾ ರುದ್ರಾ ವಿಶ್ವೇಶ್ವಿನೌ ತಥಾ ॥೪೬॥**

**ಅಗ್ನಿರಿನ್ದ್ರಶ್ಚ ಸೋಮಶ್ಚ ಪವನೋಽಥ ದಿಶೋ ದಶ ।**
**ಧನಂಜಯಸ್ಯ ತೇ ಪಕ್ಷೇ ಆದಿತ್ಯಾಃ ಕರ್ಣತೋಽಭವನ್ ॥೪೭॥**

**ವಿಶಃ ಶೂದ್ರಾಶ್ಚ ಸೂತಾಶ್ಚ ಯೇ ಚ ಸಂಕರಜಾತಯಃ ।**
**ಸರ್ವಶಸ್ತೇ ಮಹಾರಾಜ ರಾಧೇಯಮಭಜಂಸ್ತದಾ ॥೪೮॥**

ವಸುಗಳು, ಮರುದ್ಗಣಗಳು, ಸಾಧ್ಯರು, ರುದ್ರರು, ವಿಶ್ವೇದೇವತೆ ಗಳು, ಅಶ್ವಿನೀಕುಮಾರರು, ಅಗ್ನೀಂದ್ರ-ಸೋಮ- ವಾಯುಗಳು, ಹತ್ತು ದಿಕ್ಕುಗಳು (ದಿಕ್ಕುಗಳ ಅಧಿದೇವತೆಗಳು) ಅರ್ಜುನನ ಪಕ್ಷವನ್ನು ಸೇರಿದರು. ದ್ವಾದಶಾದಿತ್ಯರು, ವೈಶ್ಯ-ಶೂದ್ರ-ಸೂತರು, ಸಂಕರಜಾತಿಯವರು– ಇವರೆಲ್ಲರೂ ಕರ್ಣನನ್ನೇ ಸೇವಿಸತೊಡಗಿದರು.

**ದೇವಾಸ್ತು ಪಿತೃಭಿಃ ಸಾರ್ಧಂ ಸಗಣಾಃ ಸಪದಾನುಗಾಃ ।**
**ಯಮೋ ವೈಶ್ರವಣಶ್ಚೈವ ವರುಣಶ್ಚ ಯತೋಽರ್ಜುನಃ ।**
**ಬ್ರಹ್ಮ ಕ್ಷತ್ರಂ ಚ ಯಜ್ಞಾಶ್ಚ ದಕ್ಷಿಣಾಶ್ಚಾರ್ಜುನಂ ಶ್ರಿತಾಃ ॥೪೯॥**

ಗಣಗಳಿಂದಲೂ-ಸೇವಕರಿಂದಲೂ ಯುಕ್ತರಾದ ದೇವತೆಗಳು, ಪಿತೃಗಳು, ಯಮ-ಕುಬೇರ-ವರುಣರು ಅರ್ಜುನನಿದ್ದ ಪಕ್ಷಕ್ಕೆ ಸೇರಿದರು. ಬ್ರಾಹ್ಮಣ-ಕ್ಷತ್ರಿಯರೂ, ಯಜ್ಞಗಳೂ ಮತ್ತು ದಕ್ಷಿಣೆಗಳೂ ಅರ್ಜುನನನ್ನೇ ಆಶ್ರಯಿಸಿದ್ದುವು.

**ಪ್ರೇತಾಶ್ಚೈವ ಪಿಶಾಚಾಶ್ಚ ಕ್ರವ್ಯಾದಾಶ್ಚ ಮೃಗಾಣ್ಡಜಾಃ ।**
**ರಾಕ್ಷಸಾಃ ಸಹ ಯಾದೋಭಿಃ ಶ್ವಸೃಗಾಲಾಶ್ಚ ಕರ್ಣತಃ ॥೫೦॥**

ಪ್ರೇತ-ಪಿಶಾಚಿಗಳು, ಮಾಂಸಾಶಿಗಳಾದ ಪಶು-ಪಕ್ಷಿಗಳು, ರಾಕ್ಷಸರು, ಜಲಜಂತುಗಳು, ನಾಯಿಗಳು ಮತ್ತು ಗುಳ್ಳೇನರಿಗಳು ಕರ್ಣನನ್ನು ಆಶ್ರಯಿಸಿದ್ದುವು.

**ದೇವಬ್ರಹ್ಮನೃಪರ್ಷೀಣಾಂ ಗಣಾಃ ಪಾಣ್ಡವತೋಽಭವನ್ ।**
**ತುಮ್ಬುರುಪ್ರಮುಖಾ ರಾಜನ್ಗನ್ಧರ್ವಾಶ್ಚ ಯತೋಽರ್ಜುನಃ ।**
**ಪ್ರಾಧೇಯಾಃ ಸಹಮೌನೇಯಾ ಗನ್ಧರ್ವಾಪ್ಸರಸಾಂ ಗಣಾಃ ॥೫೨॥**

ದೇವರ್ಷಿ-ಬ್ರಹ್ಮರ್ಷಿ-ರಾಜರ್ಷಿಗಳ ಸಮೂಹಗಳು ಅರ್ಜುನನ ಕಡೆಗಿದ್ದುವು. ತುಂಬುರುಪ್ರಮುಖರಾದ ಗಂಧರ್ವರೂ ಅರ್ಜುನನಿದ್ದ ಪಕ್ಷದಲ್ಲೇ ಇದ್ದರು. ಪ್ರಾಧೇಯರೂ ಮೌನೇಯರೂ ಆದ ಗಂಧರ್ವಾಪ್ಸರೆಯರ ಸಮೂಹಗಳು ಅರ್ಜುನನಿಗೇ ವಿಜಯವನ್ನಾಶಿಸುತ್ತಿದ್ದುವು.

ತೋಳಗಳು ಹುಲಿಯೇ ಮೊದಲಾದ ದುಷ್ಟಪ್ರಾಣಿಗಳೊಡನೆಯೂ ಆನೆಗಳು ರಥ-ಪದಾತಿಗಳೊಡನೆಯೂ ಯುದ್ಧವನ್ನು ನೋಡಲು ನಿಂತಿದ್ದುವು. ಜಿತೇಂದ್ರಿಯರಾದ ದಿವ್ಯಪುರುಷರು ವಾಯುವನ್ನೂ ಮೇಘಗಳನ್ನೂ ವಾಹನಗಳನ್ನಾಗಿ ಮಾಡಿಕೊಂಡು ಕರ್ಣಾರ್ಜುನರ ಸಂಘರ್ಷವನ್ನು ನೋಡುವ ಇಚ್ಛೆಯಿಂದ ಆಗಮಿಸಿದರು. ಮಹಾರಾಜ! ದೇವ-ದಾನವ-ಗಂಧರ್ವರು, ನಾಗ-ಯಕ್ಷ-ಪಕ್ಷಿಗಳು, ವೇದಜ್ಞರಾದ ಮಹರ್ಷಿಗಳು, ಸ್ವಧಾಭುಜರಾದ ಪಿತೃಗಳು, ತಪಸ್ಸು, ವಿದ್ಯೆ, ನಾನಾರೂಪದಲ್ಲಿರುವ ಬಲಿಷ್ಠವಾದ ಓಷಧಿಗಳು (ತಪೋವಿದ್ಯೌಷಧಿಗಳ ಅಧಿದೇವತೆಗಳು)—ಇವರೆಲ್ಲರೂ ಜಯ-ಜಯಧ್ವನಿಮಾಡುತ್ತಾ ಅಂತರಿಕ್ಷದಲ್ಲಿ ನಿಂತಿದ್ದರು. ಬ್ರಹ್ಮ-ರುದ್ರರು ಬ್ರಹ್ಮರ್ಷಿಗಳೊಡನೆ ಮತ್ತು ಪ್ರಜಾಪತಿಗಳೊಡನೆ ದಿವ್ಯವಾದ ವಿಮಾನಗಳಲ್ಲಿ ಕುಳಿತು ಕರ್ಣಾರ್ಜುನರ ಯುದ್ಧವು ನಡೆಯುತ್ತಿದ್ದ ಪ್ರದೇಶಕ್ಕೆ ಆಗಮಿಸಿದರು. ಮಹಾತ್ಮರಾದ ಕರ್ಣ-ಧನಂಜಯರಿಬ್ಬರೂ ಯುದ್ಧಸನ್ನದ್ಧರಾಗಿ ನಿಂತಿರುವುದನ್ನು ನೋಡಿ ಶಕ್ರನು—'ಅರ್ಜುನೋ ಜಯತಾಂ ಕರ್ಣಂ—ಅರ್ಜುನನು ಕರ್ಣನನ್ನು ಜಯಿಸಲಿ'—ಎಂದು ಹೇಳಿದನು. ಅದಕ್ಕೆ ಪ್ರತಿಯಾಗಿ ಅಲ್ಲಿಯೇ ಉಪಸ್ಥಿತನಾಗಿದ್ದ ಸೂರ್ಯನು—'ಜಯತಾಮರ್ಜುನಂ ಕರ್ಣಃ—ಕರ್ಣನು ಅರ್ಜುನನನ್ನು ಜಯಿಸಲಿ'—ಎಂದು ಘೋಷಿಸಿದನು.

**ಹತ್ವಾರ್ಜುನಂ ಮಮ ಸುತಃ ಕರ್ಣೋ ಜಯತು ಸಂಯುಗೇ ।**

'ನನ್ನ ಮಗನಾದ ಕರ್ಣನು ಅರ್ಜುನನನ್ನು ಸಂಹರಿಸಿ ವಿಜಯಿಯಾಗಲಿ'–ಎಂದು ಸೂರ್ಯನು ಘೋಷಿಸಿದುದಕ್ಕೆ ಪ್ರತಿಯಾಗಿ

**ಹತ್ವಾ ಕರ್ಣಂ ಜಯತ್ವದ್ಯ ಮಮ ಪುತ್ರೋ ಧನಂಜಯಃ ।।೫೯।।**

'ನನ್ನ ಮಗನಾದ ಧನಂಜಯನೇ ಇಂದು ಕರ್ಣನನ್ನು ಸಂಹರಿಸಿ ವಿಜಯಿಯಾಗಲಿ'–ಎಂದು ಇಂದ್ರನು ಹೇಳಿದನು.

ಹೀಗೆ ಪಕ್ಷ-ಪ್ರತಿಪಕ್ಷಗಳನ್ನು ಪ್ರೋತ್ಸಾಹಿಸುತ್ತಿದ್ದ ವಿಬುಧಶ್ರೇಷ್ಠರಾದ ಸೂರ್ಯ-ವಾಸವರ ನಡುವೆ ದೊಡ್ಡ ವಿವಾದವೇ ಹುಟ್ಟಿಕೊಂಡಿತು. ದೇವತೆಗಳಲ್ಲಿಯೂ ಮತ್ತು ಅಸುರರಲ್ಲಿಯೂ ಪಕ್ಷ-ಪ್ರತಿಪಕ್ಷಗಳು ಹುಟ್ಟಿಕೊಂಡುವು.

ಮಹಾತ್ಮರಾದ ಕರ್ಣಾರ್ಜುನರು ಯುದ್ಧಸನ್ನದ್ಧರಾಗಿ ನಿಂತಿರುವುದನ್ನು ನೋಡಿ ದೇವರ್ಷಿ-ಚಾರಣರಿಂದ ಕೂಡಿದ ಮೂರು ಲೋಕಗಳೂ ನಡುಗಿದುವು. ಸರ್ವದೇವಗಣಗಳೂ ಸರ್ವಪ್ರಾಣಿಗಳೂ ಭಯಗೊಂಡುವು. ಅರ್ಜುನನಿದ್ದ ಕಡೆಯಲ್ಲಿ ದೇವತೆಗಳೂ–ಕರ್ಣನಿದ್ದ ಕಡೆಯಲ್ಲಿ ಅಸುರರೂ ನಿಂತಿದ್ದರು. ರಥಿಗಳ ಸಮೂಹಕ್ಕೆ ಅಧಿಪತಿಗಳಾದ, ಕುರು-ಪಾಂಡವರಲ್ಲಿ ಪ್ರಧಾನವೀರರಾದ ಕರ್ಣಾರ್ಜುನರ ಪಕ್ಷ- ಪ್ರತಿಪಕ್ಷಗಳನ್ನು ನೋಡಿ ದೇವತೆಗಳು ಸ್ವಯಂಭೂಪ್ರಜಾಪತಿಯನ್ನು ಪ್ರಶ್ನಿಸಿದರು:

**ಕೋಽನಯೋರ್ವಿಜಯೀ ದೇವ ಕುರುಪಾಣ್ಡವಯೋಧಯೋಃ ।**
**ಸಮೋಽಸ್ತು ವಿಜಯೋ ದೇವ ಏತಯೋರ್ನರಸಿಂಹಯೋಃ ।।೬೪।।**

"ದೇವ! ಕುರು-ಪಾಂಡವಯೋಧರಾದ ಈ ಕರ್ಣಾರ್ಜುನರಲ್ಲಿ ಯಾರು ವಿಜಯಿಗಳಾಗುತ್ತಾರೆ? ಈ ನರಶ್ರೇಷ್ಠರ ನಡುವೆ ವಿಜಯವು ಸಮ-ಸಮವಾಗಿರಲೆಂಬುದೇ ನಮ್ಮ ಅಭಿಮತವಾಗಿದೆ.

ಕರ್ಣಾರ್ಜುನರ ವಿಜಯದ ಬಗೆಗಿನ ವಿವಾದದಿಂದಾಗಿ ಈ ಜಗತ್ತೇ ಬಹಳ ಸಂಕಟಕ್ಕೊಳಗಾಗಿದೆ. ಆದುದರಿಂದ ನೀನು ಇವರಿಬ್ಬರ ವಿಜಯದ ವಿಷಯದಲ್ಲಿ ನಿಜಾಂಶವನ್ನು ನಮಗೆ ಹೇಳಬೇಕು. 'ಸಮೋಽಸ್ತು

ವಿಜಯೋಽನಯೋಃ–ಈ ಇಬ್ಬರ ವಿಜಯವೂ ಸಮ-ಸಮವಾಗಲಿ'–ಎಂಬ ಶುಭವಾಕ್ಯವನ್ನು ನೀನು ಹೇಳಬೇಕು."

ದೇವತೆಗಳು ಹೇಳಿದ ಮಾತುಗಳನ್ನು ಕೇಳಿ ಬುದ್ಧಿವಂತರಲ್ಲಿ ಶ್ರೇಷ್ಠನಾದ ಇಂದ್ರನು ದೇವೇಶನಾದ ಪಿತಾಮಹನನ್ನು ನಮಿಸಿ ಈ ಮಾತನ್ನು ಬಿನ್ನವಿಸಿಕೊಂಡನು:

**ಪೂರ್ವಂ ಭಗವತಾ ಪ್ರೋಕ್ತಂ ಕೃಷ್ಣಯೋರ್ವಿಜಯೋ ಧ್ರುವಃ ।**
**ತತ್ತಾಥಾಸ್ತು ನಮಸ್ತೇಽಸ್ತು ಪ್ರಸೀದ ಭಗವನ್ಮಮ ॥೬೭॥**

"ಭಗವನ್! ಈ ಹಿಂದೆಯೇ ನೀನು ಕೃಷ್ಣಾರ್ಜುನರಿಗೆ ವಿಜಯವು ನಿಶ್ಚಯವೆಂದು ಹೇಳಿರುವೆ. ಅಂದು ನೀನು ಹೇಳಿದ ಶುಭವಾಕ್ಯವೇ ಇಂದು ಸತ್ಯವಾಗಿ ಪರಿಣಮಿಸಲಿ. ನಿನಗೆ ಸಾಷ್ಟಾಂಗನಮಸ್ಕಾರಮಾಡುತ್ತೇನೆ. ಪ್ರಸನ್ನನಾಗು."

ಹೀಗೆ ಇಂದ್ರನು ಪ್ರಾರ್ಥಿಸಿದನಂತರ ಬ್ರಹ್ಮೇಶಾನರು ತ್ರಿದಶೇಶ್ವರನೊಡನೆ ಹೇಳಿದರು:

**ವಿಜಯೋ ಧ್ರುವಮೇವಾಸ್ಯ ವಿಜಯಸ್ಯ ಮಹಾತ್ಮನಃ ।**
**ಖಾಣ್ಡವೇ ಯೇನ ಹುತಭುಕ್ತೋಷಿತಃ ಸವ್ಯಸಾಚಿನಾ ।**
**ಸ್ವರ್ಗಂ ಚ ಸಮನುಪ್ರಾಪ್ಯ ಸಾಹಾಯ್ಯಂ ಶಕ್ರ ತೇ ಕೃತಮ್ ॥೬೮॥**

"ಮಹಾತ್ಮನಾದ ವಿಜಯನಿಗೆ ವಿಜಯವು ಲಭಿಸುವುದು ನಿಶ್ಚಯ. ದೇವನಾಥ! ಈ ಅರ್ಜುನನು ಖಾಂಡವವನದಲ್ಲಿ ಯಜ್ಞೇಶ್ವರನನ್ನು ತೃಪ್ತಿಗೊಳಿಸಿದನು. ಸ್ವರ್ಗಕ್ಕೂ ಬಂದು ನಿನಗೂ ಸಹಾಯವನ್ನು ಮಾಡಿರುವನು.

**ಕರ್ಣಶ್ಚ ದಾನವಃ ಪಕ್ಷಃ ಅತಃ ಕಾರ್ಯಃ ಪರಾಜಯಃ ।**
**ಏವಂ ಕೃತೇ ಭವೇತ್ಕಾರ್ಯಂ ದೇವಾನಾಮೇವ ನಿಶ್ಚಿತಮ್ ।**
**ಆತ್ಮಕಾರ್ಯಂ ಚ ಸರ್ವೇಷಾಂ ಗರೀಯಸ್ತ್ರಿದಶೇಶ್ವರಃ ॥೬೯॥**

ತ್ರಿದಶೇಶ್ವರನೇ! ಕರ್ಣನು ದಾನವಪಕ್ಷದವನಾಗಿದ್ದಾನೆ. ಆದುದ ರಿಂದ ಅವನ ಪರಾಜಯವಾಗಲೇಬೇಕಾಗಿದೆ. ಹೀಗೆ ಮಾಡುವುದರಿಂದಲೇ

ದೇವತೆಗಳ ಕಾರ್ಯವು ಸಿದ್ಧವಾದಂತಾಗುತ್ತದೆ. ದೇವೇಂದ್ರ! ಪ್ರಪಂಚದಲ್ಲಿ ತನ್ನ ಕಾರ್ಯಸಾಧನೆಯೇ ಎಲ್ಲಕ್ಕಿಂತಲೂ ಮಿಗಿಲಾದುದು. ಫಾಲ್ಗುನನು ಮಹಾತ್ಮನು. ಎಲ್ಲ ಕಾಲಗಳಲ್ಲಿಯೂ ಸತ್ಯ ಮತ್ತು ಧರ್ಮಗಳಲ್ಲಿಯೇ ನಿರತನಾಗಿರತಕ್ಕವನು. ಅವನಿಗೆ ವಿಜಯವೆಂಬುದು ನಿಯತವಾದುದು. (ಅವಶ್ಯಕವಾಗಿ ಆಗತಕ್ಕುದು.) ಈ ವಿಷಯದಲ್ಲಿ ಸಂದೇಹವೇ ಇಲ್ಲ.



ದೇವೇಂದ್ರ! ಅರ್ಜುನನು ಭಗವಂತನಾದ, ವೃಷಧ್ವಜನಾದ ಪರ ಶಿವನನ್ನೂ ಸುಪ್ರೀತಗೊಳಿಸಿದ್ದಾನೆ. ಹೀಗಿರುವಾಗ ಅರ್ಜುನನಿಗೆ ವಿಜಯವು ಲಭಿಸದಿರುವುದು ಹೇಗೆ? ಶತಲೋಚನ! ಜಗತ್ತಿಗೇ ಪ್ರಭುವಾಗಿರುವ

ಮಹಾವಿಷ್ಣುವೇ ಯಾವನಿಗೆ ಸಾರಥಿಯೋ–ಅಂತಹವನಿಗೆ ಪರಾಜಯವೆಂಬುದೇ ಇಲ್ಲ.

ಮೇಲಾಗಿ ಅರ್ಜುನನು ಜಿತೇಂದ್ರಿಯನು. ಮಹಾಬಲಿಷ್ಠನು. ಮಹಾಶೂರನು. ಅಸ್ತ್ರವಿದ್ಯಾನಿಪುಣನು. ತಪೋಧನನು. ಸರ್ವಗುಣ ಪರಿಪೂರ್ಣನಾದ, ಮಹಾತೇಜಸ್ವಿಯಾದ ಪಾರ್ಥನು ಧನುರ್ವೇದವನ್ನು ಸಮಗ್ರವಾಗಿ ಧಾರಣೆಮಾಡಿಕೊಂಡಿರುತ್ತಾನೆ. ಆದುದರಿಂದ ಅವನಿಗೆ ಜಯವು ಖಂಡಿತವಾಗಿಯೂ ಲಭಿಸುತ್ತದೆ. ಮೇಲಾಗಿ ಇದು ದೇವತೆಗಳ ಕಾರ್ಯವೇ ಆಗಿರುತ್ತದೆ.

ವನವಾಸಾದಿಗಳಿಂದ ಪಾಂಡವರು ಬಹಳವಾಗಿ ಕ್ಲೇಶಪಟ್ಟಿರುತ್ತಾರೆ. ಪುರುಷಪ್ರವರನಾದ ಅರ್ಜುನನು ತಪೋಬಲದಿಂದಲೂ ಸಂಪನ್ನನಾಗಿ ಪರಿಪೂರ್ಣಶಕ್ತಿಶಾಲಿಯಾಗಿದ್ದಾನೆ. ಅವನು ತನ್ನ ಮಹಿಮೆಯಿಂದ ದೈವದ ಗತಿಯನ್ನೂ ಅತಿಕ್ರಮಿಸಬಲ್ಲನು. ಹಾಗೇನಾದರೂ ಅವನು ದೈವದ ಗತಿಯನ್ನು ಅತಿಕ್ರಮಿಸಿದ್ದೇ ಆದರೆ ಈ ಎಲ್ಲ ಲೋಕಗಳ ವಿನಾಶವೂ ಅನಿವಾರ್ಯ ವಾಗುತ್ತದೆ. ಕೃಷ್ಣಾರ್ಜುನರೇನಾದರೂ ಕುಪಿತರಾದರೆ ಪ್ರಪಂಚದಲ್ಲಿ ಯಾವ ವ್ಯವಸ್ಥೆಯೂ ಇರುವುದೇ ಇಲ್ಲ. ಪುರುಷಶ್ರೇಷ್ಠರಾದ ಅವರು ಸತತವಾಗಿ ಪ್ರಪಂಚವನ್ನು ಸೃಷ್ಟಿಸುತ್ತಲೇ ಇರುತ್ತಾರೆ. ಕೃಷ್ಣಾರ್ಜುನರು ಪ್ರಾಚೀನಮಹರ್ಷಿ ಶ್ರೇಷ್ಠರಾದ ನರ-ನಾರಾಯಣರು. ಅವರು ಯಾರ ನಿಯಂತ್ರಣಕ್ಕೂ ಒಳಪಡದವರು. ಆದರೆ ಎಲ್ಲರನ್ನೂ ನಿಯಂತ್ರಿಸುವವರು. ಆದುದರಿಂದಲೇ ಅವರು ಶತ್ರುಗಳನ್ನು ಸಂತಾಪನಗೊಳಿಸಲು ಸಮರ್ಥರಾಗಿರುತ್ತಾರೆ. ಅವರಿಬ್ಬರಿಗೂ ಸಮಾನರಾದವರು ದೇವಲೋಕದಲ್ಲಾಗಲೀ ಮನುಷ್ಯ ಲೋಕದಲ್ಲಾಗಲೀ ಯಾರೂ ಇಲ್ಲ. ದೇವರ್ಷಿ-ಚಾರಣಸಹಿತವಾದ ಮೂರು ಲೋಕಗಳೂ, ಸರ್ವದೇವಗಣ ಗಳೂ, ಸರ್ವಪ್ರಾಣಿಗಳೂ, ಇವರಿಬ್ಬರ ನಿಯಂತ್ರಣದಲ್ಲಿಯೇ ಇವೆ. ಇವರ ಪ್ರಭಾವದಿಂದಲೇ ಸಂಪೂರ್ಣಜಗತ್ತೂ ಉಳಿದುಕೊಂಡಿದೆ.

ಶೂರನಾದ, ಪುರುಷಶ್ರೇಷ್ಠನಾದ ವೈಕರ್ತನಕರ್ಣನು ಉತ್ತಮ ಲೋಕಗಳನ್ನು ಪಡೆದುಕೊಳ್ಳಲಿ. ವಿಜಯವು ಮಾತ್ರ ಕೃಷ್ಣಾರ್ಜುನರಿಗೇ

ಲಭಿಸಲಿ. ಕರ್ಣನು ದ್ರೋಣ-ಭೀಷ್ಮರೊಡನೆ ವಸುಗಳ ಅಥವಾ ಮರುತ್ತುಗಳ ಲೋಕಗಳನ್ನು ಪಡೆದುಕೊಳ್ಳಲಿ ಅಥವಾ ಸ್ವರ್ಗಲೋಕಕ್ಕಾದರೂ ಹೋಗಲಿ."

ದೇವಾಧಿದೇವನಾದ ಬ್ರಹ್ಮನೂ ಮತ್ತು ಶಂಕರನೂ ಹೀಗೆ ಹೇಳಿದ ನಂತರ ಇಂದ್ರನು ಎಲ್ಲ ಪ್ರಾಣಿಗಳನ್ನೂ ಆಹ್ವಾನಿಸಿ ಅವರಿಗೆ ಬ್ರಹ್ಮೇಶಾನರ ಅನುಶಾಸನವನ್ನು ತಿಳಿಸಿದನು.

"ದೇವತೆಗಳೇ! ಜಗತ್ತಿನ ಹಿತಕ್ಕಾಗಿಯೇ ಪೂಜ್ಯರಾದ ಬ್ರಹ್ಮೇಶಾನರು ಹೇಳಿದ ಮಾತುಗಳನ್ನು ನೀವೂ ಕೇಳಿದಿರಲ್ಲವೇ? ಅದು ಅವರು ಹೇಳಿದಂತೆಯೇ ಆಗುತ್ತದೆ. ವ್ಯತ್ಯಾಸವಾಗುವ ಸಂಭವವೇ ಇಲ್ಲ. ಇನ್ನಾದರೂ ನೀವು ನಿಶ್ಚಿಂತರಾಗಿರಿ."

ಮಾನನೀಯ ನರೇಶನೇ! ಇಂದ್ರನ ಮಾತುಗಳನ್ನು ಕೇಳಿ ಸರ್ವ ಪ್ರಾಣಿಗಳೂ ವಿಸ್ಮಯಗೊಂಡುವು. ಹರ್ಷಿತರಾಗಿ ಕೃಷ್ಣಾರ್ಜುನರನ್ನು ಪ್ರಶಂಸಿಸತೊಡಗಿದರು. ದೇವತೆಗಳು ಅವರ ಮೇಲೆ ಸುಗಂಧದ್ರವ್ಯಗಳನ್ನೆರ ಚಿದರು. ಪುಷ್ಪವೃಷ್ಟಿಯನ್ನು ಮಾಡಿದರು. ನಾನಾವಿಧವಾದ ದೇವವಾದ್ಯ ಗಳನ್ನೂ ಬಾರಿಸಿದರು. ನರಶ್ರೇಷ್ಠರಾದ ಕರ್ಣಾರ್ಜುನರ ಅಪ್ರತಿಮವಾದ ದ್ವೈರಥಯುದ್ಧವನ್ನು ನೋಡುವ ಇಚ್ಛೆಯಿಂದ ಎಲ್ಲ ದೇವ-ದಾನವ-ಗಂಧ ರ್ವರೂ ಅಲ್ಲಿಯೇ ನಿಂತಿದ್ದರು. ಪ್ರಹೃಷ್ಟರಾಗಿದ್ದ ಕರ್ಣಾರ್ಜುನರು ಯಾವ ರಥಗಳಲ್ಲಿ ಕುಳಿತಿದ್ದರೋ ಮಹಾತ್ಮರಾದ ಅವರಿಬ್ಬರ ರಥಗಳೂ ಬಿಳಿಯ ಕುದುರೆಗಳಿಂದ ಯುಕ್ತವಾಗಿದ್ದುವು. ಯುದ್ಧದ ಸಲುವಾಗಿ ಸಮ್ಮಿಳಿತರಾದ ಲೋಕ ವೀರರಾದ ವಾಸುದೇವಾರ್ಜುನರೂ ಮತ್ತು ಶಲ್ಯ-ಕರ್ಣರೂ ಪ್ರತ್ಯೇಕ-ಪ್ರತ್ಯೇಕವಾಗಿ ತಮ್ಮ-ತಮ್ಮ ಶಂಖಗಳನ್ನೂದಿದರು. ಶಕ್ರ-ಶಂಬರಾ ಸುರರಂತೆ ಪರಸ್ಪರವಾಗಿ ಸ್ಪರ್ಧಿಸುತ್ತಿದ್ದ ಕರ್ಣಾರ್ಜುನರ ಯುದ್ಧವು ಅತ್ಯಂತಭೀಕರವೂ, ಹೇಡಿಗಳಾದವರಿಗೆ ತ್ರಾಸದಾಯಕವೂ ಆಯಿತು. ಜಗತ್ತಿನ ಪ್ರಳಯಕಾಲದಲ್ಲಿ ರಾಹು-ಕೇತುಗಳಿಬ್ಬರೂ ಒಟ್ಟಾಗಿ ಆಕಾಶದಲ್ಲಿ ಕಾಣಿಸಿಕೊಳ್ಳುವಂತೆ–ನಿರ್ಮಲವಾಗಿದ್ದ ಆ ಇಬ್ಬರ ಧ್ವಜಗಳೂ ರಥದ ಮೇಲ್ಭಾಗ ದಲ್ಲಿ ಹಾರಾಡುತ್ತಾ ಶೋಭಿಸುತ್ತಿದ್ದುವು. ಕರ್ಣನ ಧ್ವಜದಲ್ಲಿ ನಾಗರಹಾವಿ

ನಂತಿದ್ದ ಆನೆಯ ಹಗ್ಗದ ಚಿಹ್ನೆಯಿದ್ದಿತು. ಆ ಧ್ವಜವು ರತ್ನ ಸಾರಮಯವಾಗಿದ್ದು (ಮಣಿರತ್ನಗಳಿಂದಲೇ ನಿರ್ಮಿಸಲ್ಪಟ್ಟಿದ್ದು) ಅತ್ಯಂತ ದೃಢವಾಗಿದ್ದಿತು. ಆ ಧ್ವಜವು ಆಕಾಶದಲ್ಲಿ ಇಂದ್ರನ ಧ್ವಜದಂತೆಯೇ ಶೋಭಾಯಮಾನವಾಗಿ ಕಾಣುತ್ತಿದ್ದಿತು. ಪಾರ್ಥನ ಧ್ವಜದಲ್ಲಿದ್ದ ಕಪಿಶ್ರೇಷ್ಠನು ಬಾಯ್ತೆರೆದ ಅಂತಕನಂತೆಯೇ ಕಾಣುತ್ತಿದ್ದನು. ಹಲ್ಲುಗಳಿಂದ ಶತ್ರುಗಳನ್ನು ಭಯಪಡಿಸುತ್ತಿದ್ದನು. ಪ್ರಖರವಾದ ರಶ್ಮಿಗಳಿಂದ ಕೂಡಿರುವ ಸೂರ್ಯನನ್ನು ನೋಡಲು ಸಾಧ್ಯವಾಗದಂತೆ–ಅರ್ಜುನಧ್ವಜಸ್ಥನಾದ ಕಪೀಶ್ವರನನ್ನು ನೋಡಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಗಾಂಡೀವಿಯ ಧ್ವಜವೂ ಶತ್ರುವಿನ ಧ್ವಜದೊಡನೆ ಯುದ್ಧಮಾಡುವ ಅಭಿಲಾಷೆಯನ್ನು ಹೊಂದಿದ್ದಿತು. ಆದುದರಿಂದಲೇ ಧ್ವಜಸ್ಥನಾಗಿದ್ದ, ವೇಗವಂತನಾದ ಕಪೀಶ್ವರನು ತನ್ನ ಸ್ಥಾನದಿಂದ ಕರ್ಣನ ಧ್ವಜಕ್ಕೆ ಹಾರಿದನು. ಗರುಡಪಕ್ಷಿಯು ಸರ್ಪವನ್ನು ಕಂಡೊಡನೆಯೇ ಕೊಕ್ಕಿನಿಂದ ಕಚ್ಚಿ ತುಂಡು-ತುಂಡುಮಾಡುವಂತೆ–ಕಪಿಯು ಕರ್ಣನ ಧ್ವಜವನ್ನು ಉಗುರುಗಳಿಂದ ಪರಚಿ ಹಲ್ಲುಗಳಿಂದ ಕಚ್ಚಿಹಾಕಲು ಉಪಕ್ರಮಿಸಿತು. ಆದರೆ ಕರ್ಣನ ಧ್ವಜದಲ್ಲಿದ್ದ ಆನೆಯ ರಜ್ಜುವೂ ಸುಮ್ಮನಿರಲಿಲ್ಲ. ಅದು ಕಾಲಪಾಶಸದೃಶವಾಗಿದ್ದಿತು. ಸಣ್ಣ-ಸಣ್ಣ ಗಂಟೆಗಳನ್ನೇ ಆಭರಣವನ್ನಾಗಿ ಹೊಂದಿದ್ದಿತು. ಕಪಿಯ ಉಪಟಳದಿಂದ ಖತಿಗೊಂಡ ಆನೆಯ ಹಗ್ಗವು ಕಪಿಯ ಮೇಲೆ ಆಕ್ರಮಣ ನಡೆಸಿತು. ಕರ್ಣಾರ್ಜುನ ರಿಬ್ಬರಿಗೂ ದ್ವೈರಥಯುದ್ಧರೂಪದ ಜೂಜಾಟವು ನಡೆಯುವುದರಲ್ಲಿದ್ದಾಗ ಅವರಿಬ್ಬರ ಯುದ್ಧಕ್ಕಿಂತಲೂ ಮುಂದಾಗಿ ಇಬ್ಬರ ಧ್ವಜಗಳೇ ಯುದ್ಧವನ್ನು ಉಪಕ್ರಮಿಸಿದುವು. ಒಬ್ಬರ ರಥದಲ್ಲಿದ್ದ ಕುದುರೆಗಳು ಮತ್ತೊಬ್ಬರ ರಥದಲ್ಲಿದ್ದ ಕುದುರೆಗಳನ್ನು ನೋಡಿ ಪರಸ್ಪರವಾಗಿ ಸ್ಪರ್ಧಿಸುತ್ತಾ ಹೇಷಾರವಗಳನ್ನು ಮಾಡುತ್ತಿದ್ದುವು. ಅರ್ಜುನನ ಸಾರಥಿಯಾದ ಪುಂಡರೀಕಾಕ್ಷನು ಕಣ್ಣುಗಳೆಂಬ ಬಾಣಗಳಿಂದಲೇ ಶಲ್ಯನನ್ನು ಪ್ರಹರಿಸುತ್ತಿದ್ದನು. (ತೀಕ್ಷ್ಣವಾಗಿ ನೋಡುತ್ತಿದ್ದನು.)

ಶಲ್ಯನೂ ಸಹ ಪುಂಡರೀಕಾಕ್ಷನನ್ನು ಅದೇ ರೀತಿಯಲ್ಲಿ ನೋಡುತ್ತಿದ್ದನು. ಆದರೆ ಕಡೆಯಲ್ಲಿ ಶ್ರೀಕೃಷ್ಣನೇ ಶಲ್ಯನನ್ನು ನೇತ್ರರೂಪವಾದ ಬಾಣಗಳಿಂದ ಪರಾಜಯಗೊಳಿಸಿದನು. ಕುಂತೀಪುತ್ರನಾದ ಧನಂಜಯನೂ

ಕರ್ಣನನ್ನು ನೇತ್ರರೂಪವಾದ ಬಾಣಗಳಿಂದ ಪರಾಜಯಗೊಳಿಸಿದನು. (ಇದಕ್ಕೆ ದೃಷ್ಟಿಯುದ್ಧವೆಂದು ಹೆಸರು. ಪ್ರತಿಸ್ಪರ್ಧಿಗಳು ಒಬ್ಬರು ಮತ್ತೊಬ್ಬರ ಕಣ್ಣುಗಳನ್ನು ದಿಟ್ಟಿಸಿನೋಡುವುದು. ಯಾರ ದೃಷ್ಟಿಯು ಶ್ರಾಂತವಾಗಿ ಕೆಳಗಾಗುವುದೋ ಅವರು ಪರಾಜಿತರಾದಂತೆ.) ಅನಂತರ ಸೂತ ಪುತ್ರನು ಶಲ್ಯನೊಡನೆ ಮಂದಹಾಸಪೂರ್ವಕವಾಗಿ ಮಾತನಾಡುತ್ತಾ ಹೇಳಿದನು:

**ಯದಿ ಪಾರ್ಥೋ ರಣೇ ಹನ್ಯಾದದ್ಯ ಮಾಮಿಹ ಕರ್ಹಿಚಿತ್ ।**
**ಕಿಂ ಕರಿಷ್ಯಸಿ ಸಂಗ್ರಾಮೇ ಶಲ್ಯ ಸತ್ಯಮಥೋಚ್ಯತಾಮ್ ॥೧೦೨॥**

"ಶಲ್ಯ! ಒಂದು ವೇಳೆ ಪಾರ್ಥನೇನಾದರೂ ನನ್ನನ್ನು ಇಂದಿನ ಯುದ್ಧದಲ್ಲಿ ಸಂಹರಿಸಿದ್ದೇ ಆದರೆ ಮುಂದೆ ನೀನೇನು ಮಾಡುವೆ? ಸತ್ಯವಾಗಿ ಹೇಳು."

**ಯದಿ ಕರ್ಣ ರಣೇ ಹನ್ಯಾದದ್ಯ ತ್ವಾಂ ಶ್ವೇತವಾಹನಃ ।**
**ಉಭಾವೇಕರಥೇನಾಹಂ ಹನ್ಯಾಂ ಮಾಧವಪಾಣ್ಡವೌ ॥೧೦೩॥**

"ಕರ್ಣ! ಅರ್ಜುನನು ಯುದ್ಧದಲ್ಲಿ ನಿನ್ನನ್ನೇನಾದರೂ ಇಂದು ಸಂಹರಿಸಿದ್ದೇ ಆದರೆ ಮಾಧವ-ಪಾಂಡವರಿಬ್ಬರನ್ನೂ ನಾನು ರಥೈಕಸಹಾಯನಾಗಿಯೇ ಸಂಹರಿಸುತ್ತೇನೆ."

ಮಹಾರಾಜ! ಇದೇ ರೀತಿಯಲ್ಲಿ ಅರ್ಜುನನೂ ಸಹ ಗೋವಿಂದನನ್ನು ಪ್ರಶ್ನಿಸಿದನು. ಆ ಪ್ರಶ್ನೆಗೆ ಶ್ರೀಕೃಷ್ಣನು ನಗುತ್ತಾ ಸತ್ಯವಾದ ಈ ಮಾತನ್ನೇ ಅವನೊಡನೆ ಹೇಳಿದನು.

**ಪತೇದ್ದಿವಾಕರಃ ಸ್ಥಾನಾಚ್ಛುಷ್ಯೇದಪಿ ಮಹೋದಧಿಃ ।**
**ಶೈತ್ಯಮಗ್ನಿರಿಯಾನ್ನ ತ್ವಾಂ ಹನ್ಯಾತ್ಕರ್ಣೋ ಧನಂಜಯ ॥೧೦೪॥**

"ಧನಂಜಯ! ಸೂರ್ಯನು ತಾನಿರುವ ಸ್ಥಳದಿಂದ ಚ್ಯುತನಾಗಿ ಕೆಳಕ್ಕೆ ಬೀಳಬಹುದು; ಮಹಾಸಾಗರವಾದರೂ ಬತ್ತಿಹೋಗಬಹುದು; ಅಗ್ನಿಯು ಶೀತಲನಾದರೂ ಆಗಬಹುದು. ಆದರೆ ಕರ್ಣನು ಮಾತ್ರ ನಿನ್ನನ್ನು ಸಂಹರಿಸಲಾರನು.

**ಯದಿ ಚೈತತ್ಕಥಂಚಿತ್ಸ್ಯಾಲ್ಲೋಕಪರ್ಯಾಸನಂ ಭವೇತ್ ।**
**ಹನ್ಯಾಂ ಕರ್ಣಂ ತಥಾ ಶಲ್ಯಂ ಬಾಹುಭ್ಯಾಮೇವ ಸಂಯುಗೇ ॥೧೦೬॥**

ಒಂದು ವೇಳೆ ಹಾಗೇನಾದರೂ ಆಗಿಹೋದರೆ (ಕರ್ಣನು ನಿನ್ನನ್ನು ಸಂಹರಿಸಿದರೆ), ಲೋಕಸ್ಥಿತಿಯೇ ವ್ಯತ್ಯಾಸಹೊಂದಿದರೆ, ನನ್ನ ಈ ತೋಳು ಗಳಿಂದಲೇ ಯುದ್ಧದಲ್ಲಿ ನಾನು ಕರ್ಣನನ್ನೂ ಮತ್ತು ಶಲ್ಯನನ್ನೂ ಸಂಹಾರ ಮಾಡುತ್ತೇನೆ."

ಮಹಾರಾಜ! ಶ್ರೀಕೃಷ್ಣನ ಮಾತನ್ನು ಕೇಳಿ ಕಪಿಧ್ವಜನಾದ ಅರ್ಜುನನು ನಗುತ್ತಾ, ಕಷ್ಟವಾದ ಕಾರ್ಯವನ್ನೂ ಅನಾಯಾಸವಾಗಿ ಮಾಡಿ ಮುಗಿಸುವ ಶ್ರೀಕೃಷ್ಣನೊಡನೆ ಈ ಮಾತುಗಳನ್ನು ಹೇಳಿದನು:

**ಮಮ ತಾವದಪರ್ಯಾಪ್ತೌ ಕರ್ಣಶಲ್ಯೌ ಜನಾರ್ದನ ।**
**ಸಪತಾಕಧ್ವಜಂ ಕರ್ಣಂ ಸಶಲ್ಯರಥವಾಜಿನಮ್ ॥೧೦೭॥**

**ಸಚ್ಛತ್ರಕವಚಂ ಚೈವ ಸಶಕ್ತಿಶರಕಾರ್ಮುಕಮ್ ।**
**ದ್ರಷ್ಟಾಸ್ಯದ್ಯ ರಣೇ ಕೃಷ್ಣ ಶರೈಶ್ಛಿನ್ನಮನೇಕಧಾ ॥೧೦೮॥**

"ಜನಾರ್ದನ! ಕರ್ಣ-ಶಲ್ಯರಿಬ್ಬರೂ ನನಗೆ ಸಾಟಿಯಾದ ವರೇನಲ್ಲ. ಶಲ್ಯ-ರಥ-ವಾಜಿ-ಪತಾಕ-ಧ್ವಜ-ಛತ್ರ-ಕವಚ-ಶಕ್ತಿ-ಶರ-ಕಾರ್ಮುಕ ಸಹಿತವಾಗಿ ಕರ್ಣನು ನನ್ನಿಂದ ಇಂದಿನ ಯುದ್ಧದಲ್ಲಿ ಛಿದ್ರ-ವಿಚ್ಛಿದ್ರನಾಗುವುದನ್ನು ನೀನು ಕಾಣಲಿರುವೆ.

ಅರಣ್ಯದಲ್ಲಿ ಮದಿಸಿದ ಆನೆಯು ವೃಕ್ಷವನ್ನು ಸಣ್ಣ-ಸಣ್ಣ ತುಂಡು ಗಳನ್ನಾಗಿ ಮಾಡಿಬಿಡುವಂತೆ–ರಥಾಶ್ವ-ಶಕ್ತಿ-ಕವಚಾಯುಧಸಹಿತನಾದ ಕರ್ಣನನ್ನು ನಾನು ಚೂರ್ಣೀಕರಿಸುತ್ತೇನೆ. ಇಂದು ರಾಧೇಯನ ಭಾರ್ಯೆ ಯರಿಗೆ ವೈಧವ್ಯವು ಪ್ರಾಪ್ತವಾಗಲಿದೆ. ಮಾಧವ! ನಿಶ್ಚಯವಾಗಿಯೂ ಕರ್ಣನ ಭಾರ್ಯೆಯರು ಸ್ವಪ್ನದಲ್ಲಿ ಅನಿಷ್ಟಸೂಚಕವಾದ ವಸ್ತುಗಳನ್ನು ಕಂಡೇ ಇರುತ್ತಾರೆ.

ನಿಶ್ಚಯವಾಗಿಯೂ ಇಂದು ಕರ್ಣನ ಭಾರ್ಯೆಯರು ವಿಧವೆಯರಾಗು ವುದನ್ನು ನೀನೇ ನೋಡುವೆ. ಮುಂದೇನಾಗುವುದೆಂದು ಯೋಚಿಸದಿರುವ

ಈ ಮೂಢನು ತುಂಬಿದ ಸಭೆಗೆ ಬಂದ ದ್ರೌಪದಿಯನ್ನೂ ಮತ್ತು ನಮ್ಮನ್ನೂ ಬಾರಿ-ಬಾರಿಗೂ ಅಪಹಾಸ್ಯಮಾಡುತ್ತಿದ್ದನು ಮತ್ತು ನಿಂದಿಸುತ್ತಿದ್ದನು. ಹಿಂದೆ ಇವನು ಮಾಡಿರುವ ಆ ಕುತ್ಸಿತಕಾರ್ಯದ ನಿರಂತರಸ್ಮರಣೆಯಿಂದಾಗಿ ನನ್ನ ಹೃದಯದಲ್ಲಡಗಿರುವ ಕೋಪಾಗ್ನಿಯು ಶಾಂತವಾಗುತ್ತಲೇ ಇಲ್ಲ. ಗೋವಿಂದ! ಮದಿಸಿದ ಗಜವು ಹೂಗಳಿಂದ ಕೂಡಿರುವ ವೃಕ್ಷವನ್ನು ಧ್ವಂಸ ಮಾಡುವಂತೆ–ಕರ್ಣನನ್ನು ನಾನು ಧ್ವಂಸಮಾಡುವುದನ್ನು ನೀನಿಂದು ಕಾಣುವೆ. ಮಧುಸೂದನನೇ! ಕರ್ಣನು ಹತನಾದನಂತರ ನನ್ನನ್ನು ಕುರಿತು ನಮ್ಮ ಬಂಧುಗಳು ಹೇಳುವ ಸುಮಧುರವಾದ ಮಾತುಗಳನ್ನು ನೀನು ಕೇಳಲಿರುವೆ. ನಮ್ಮ ಬಂಧುಗಳು ಆನಂದಪರವಶರಾಗಿ–'ದಿಷ್ಟ್ಯಾ ಜಯಸಿ ವಾರ್ಷ್ಣೇಯ–ವಾರ್ಷ್ಣೇಯ! ಸೌಭಾಗ್ಯವಶಾತ್ ನೀನಿಂದು ಜಯಗಳಿಸಿದೆ'–ಎಂದು ಹೇಳುತ್ತಾರೆ. ಕರ್ಣನ ಸಂಹಾರದಿಂದ ಪ್ರಹೃಷ್ಟನಾದ ನೀನು ಅಭಿಮನ್ಯುವಿನ ತಾಯಿಯಾದ ಸುಭದ್ರೆಯನ್ನೂ ನಿನ್ನ ಸೋದರತ್ತೆಯಾದ ಕುಂತಿಯನ್ನೂ ಸಂತಯಿಸುವೆ. ಹಿಂದಿನದನ್ನೇ ನೆನೆಯುತ್ತಾ ನಿರಂತರವಾಗಿ ಕಂಬನಿಗರೆಯುತ್ತಿರುವ ದ್ರೌಪದಿಯನ್ನಿಂದು ನೀನು ಸಾಂತ್ವನಗೊಳಿಸುವೆ. ಅಮೃತಸದೃಶವಾದ ಮಾತುಗಳಿಂದ ಧರ್ಮರಾಜನನ್ನು ನೀನಿಂದು ಸಂತಯಿಸುವೆ."

೬೭ನೆಯ ಅಧ್ಯಾಯವು ಮುಗಿಯಿತು.

೬೮ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನು ಕೌರವರ ಸೈನ್ಯವನ್ನು ಸಂಹರಿಸಿದುದು: ಅಶ್ವತ್ಥಾಮನು ಪಾಂಡವರೊಡನೆ ಸಂಧಾನಮಾಡಿಕೊಳ್ಳುವಂತೆ ದುರ್ಯೋಧನನಿಗೆ ಸಲಹೆಮಾಡಿದುದು: ದುರ್ಯೋಧನನ ನಿರಾಕರಣೆ

ಸಂಜಯನು ಅರ್ಜುನನ ಪರಾಕ್ರಮವನ್ನು ವರ್ಣಿಸುತ್ತಾ ಹೇಳುತ್ತಾನೆ:

"ಮಹಾರಾಜ! ಆ ಸಮಯದಲ್ಲಿ ಆಕಾಶದಲ್ಲಿ ದೇವತೆಗಳು, ನಾಗ

ಗಳು, ಅಸುರರು, ಸಿದ್ಧರು, ಯಕ್ಷರು, ಗಂಧರ್ವರು, ರಾಕ್ಷಸರು, ಅಪ್ಸರೆಯರ ಸಮೂಹಗಳು, ಬ್ರಹ್ಮರ್ಷಿಗಳು, ರಾಜರ್ಷಿಗಳು, ಗರುಡರು– ಇವರೆಲ್ಲರೂ ಸೇರಿದ್ದರು. ಈ ಕಾರಣದಿಂದ ಆಕಾಶವು ವಿಸ್ಮಯಕರವಾದ ರೂಪವನ್ನು ತಾಳಿದ್ದಿತು. ಕಿವಿಗಿಂಪಾಗುವ ನಾನಾವಿಧವಾದ ಶಬ್ದಗಳಿಂದಲೂ, ವಾದ್ಯ-ಗೀತ-ಸ್ತೋತ್ರ-ನೃತ್ಯ-ಹಾಸ್ಯಗಳಿಂದಲೂ ಆಕಾಶವು ಶಬ್ದಾಯಮಾನವಾಗಿದ್ದಿತು. ಭೂಮಿಯ ಮೇಲಿದ್ದ ಮನುಷ್ಯರೂ, ಅಂತರಿಕ್ಷದಲ್ಲಿದ್ದ ಪ್ರಾಣಿಗಳೂ ವಿಸ್ಮಯಕರವಾದ ಆಕಾಶವನ್ನು ನೋಡುತ್ತಿದ್ದರು. ಅನಂತರ ಪ್ರಹೃಷ್ಟರಾದ ಕುರು-ಪಾಂಡವಯೋಧರು ರಣವಾದ್ಯಗಳಿಂದಲೂ, ಶಂಖ ಧ್ವನಿಗಳಿಂದಲೂ, ಸಿಂಹನಾದಗಳಿಂದಲೂ ಭೂಮಿಯನ್ನೂ ಮತ್ತು ದಿಕ್ಕುಗಳನ್ನೂ ಪ್ರತಿಧ್ವನಿಸುತ್ತಾ, ಶತ್ರುಗಳನ್ನು ಸಂಹಾರಮಾಡತೊಡಗಿದರು. ಗಜಾಶ್ವ-ರಥ-ಪದಾತಿಗಳಿಂದ ಸಮಾಕುಲವಾಗಿದ್ದ, ಬಾಣ-ಶಕ್ತಿ-ಶಕ್ತ್ಯಾಯುಧ-ಋಷ್ಟಿ–ಇವೇ ಮುಂತಾದ ಆಯುಧಗಳ ನಿಪಾತ (ಪ್ರಯೋಗ) ದಿಂದ ಅತ್ಯಂತದುಃಸಹವಾಗಿದ್ದ, ವೀರರಿಂದ ಸಂಸೇವಿತವಾಗಿದ್ದ, ಮೃತರಾಗಿದ್ದವರ ಶರೀರಗಳಿಂದ ತುಂಬಿಹೋಗಿದ್ದ ರಣರಂಗವು ಕೆಂಪಾಗಿ ಕಾಣುತ್ತಿದ್ದಿತು.

ಹಿಂದೆ ದೇವತೆಗಳಿಗೂ ಮತ್ತು ಅಸುರರಿಗೂ ಯುದ್ಧವಾಗಿದ್ದಂತೆ ಕುರುಯೋಧರಿಗೂ ಮತ್ತು ಪಾಂಡವಯೋಧರಿಗೂ ಭಯಂಕರವಾದ ಯುದ್ಧವು ನಡೆಯುತ್ತಿದ್ದಿತು. ಧನಂಜಯನಿಗೂ ಮತ್ತು ಕರ್ಣನಿಗೂ ಭಯಂಕರವಾದ ಮತ್ತು ದಾರುಣವಾದ ಯುದ್ಧವು ನಡೆಯುತ್ತಿರಲಾಗಿ, ಕವಚಗಳನ್ನು ಧರಿಸಿದ್ದ ಕರ್ಣ-ಧನಂಜಯರು ನಿಶಿತವಾದ ಮತ್ತು ನೇರವಾದ ಬಾಣಗಳಿಂದ ದಿಕ್ಕುಗಳನ್ನೂ ಮತ್ತು ಸೈನ್ಯವನ್ನೂ ಪರಸ್ಪರವಾಗಿ ಆಚ್ಛಾದಿಸಲು ತೊಡಗಿದರು. ಕರ್ಣಾರ್ಜುನರ ಬಾಣಗಳಿಂದ ಸರ್ವತ್ರ ಅಂಧಕಾರವು ನಿರ್ಮಿಸಲ್ಪಡಲಾಗಿ ನಿನ್ನ ಕಡೆಯ ಯೋಧರಾಗಲೀ ಶತ್ರುಪಕ್ಷದ ಯೋಧರಾಗಲೀ–ಎಲ್ಲಿ ಏನು ನಡೆಯುತ್ತಿದೆ?–ಎಂಬುದನ್ನು ಕಾಣುತ್ತಿರಲಿಲ್ಲ. ಭಯದಿಂದ ವಿಹ್ವಲರಾದ ಅವರೆಲ್ಲರೂ ಮಹಾರಥರಾದ ಆ ಇಬ್ಬರ ಆಶ್ರಯವನ್ನೇ ಪಡೆದರು. ಬಳಿಕ ರಣಾಂಗಣದ ಸುತ್ತಲೂ ಪುನಃ ಅದ್ಭುತವಾದ ಯುದ್ಧವು ಪ್ರಾರಂಭವಾಯಿತು. ಪೂರ್ವ ಮತ್ತು ಪಶ್ಚಿಮದಿಕ್ಕುಗಳ ಗಾಳಿಗಳು ಎದುರು-ಬದು

ರಾಗಿ ಬೀಸುತ್ತಾ ಒಂದು ಕಡೆಯ ಗಾಳಿಯು ಎದುರು ಗಾಳಿಯ ವೇಗವನ್ನು ಕುಂಠಿತಗೊಳಿಸುವಂತೆ–ಕರ್ಣಾರ್ಜುನರು ಒಬ್ಬರು ಬಿಡುತ್ತಿದ್ದ ಅಸ್ತ್ರಗಳನ್ನು ಮತ್ತೊಬ್ಬರು ಪ್ರತ್ಯಸ್ತ್ರಗಳಿಂದ ನಿರಸನಗೊಳಿಸುತ್ತಾ–ಗಾಢಾಂಧಕಾರವು ತುಂಬಿರುವ ಸಮಯದಲ್ಲಿ ಅಂಧಕಾರವನ್ನು ಹೋಗಲಾಡಿಸುವ ಆಗ ತಾನೇ ಹುಟ್ಟಿದ ಸೂರ್ಯ-ಚಂದ್ರರೋಪಾದಿಯಲ್ಲಿ ಪ್ರಕಾಶಿಸಿದರು. 'ನ ಚಾಭಿ-ಸರ್ತವ್ಯಂ–ಮಹಾರಥರಿಬ್ಬರ ನಡುವೆ ಅದ್ಭುತವಾದ ಯುದ್ಧವು ನಡೆಯುತ್ತಿರುವಾಗ ಮುನ್ನುಗ್ಗಿ ಹೋಗಬಾರದು'–ಎಂದು ಪ್ರೇರಿತರಾದ ನಿನ್ನ ಕಡೆಯ ಮತ್ತು ಶತ್ರುಪಕ್ಷದ ಯೋಧರು–ಶಂಬರಾಸುರ-ವಾಸವರ ಯುದ್ಧಸಮಯದಲ್ಲಿ ಅಸುರರೂ ಮತ್ತು ದೇವತೆಗಳೂ ದಾನವೇಶ್ವರ-ದೇವೇಶ್ವರರನ್ನು ಸುತ್ತುವರಿದು ನಿಂತಿದ್ದಂತೆ–ಮಹಾರಥರಾದ ಕರ್ಣಾರ್ಜುನರಿಬ್ಬರನ್ನೂ ಸುತ್ತುವರಿದು ನಿಂತಿದ್ದರು. ಉಭಯಪಕ್ಷಗಳ ಸೈನ್ಯಗಳಲ್ಲಿಯೂ ಆಗುತ್ತಿದ್ದ ಮೃದಂಗ-ಭೇರೀ-ಪಣವಾನಕಧ್ವನಿಗಳಿಂದ ಕೂಡಿದ ಸಿಂಹನಾದಗಳಿಂದ ನರೋತ್ತಮರಾದ, ಪುರುಷಶ್ರೇಷ್ಠರಾದ ಕರ್ಣಾರ್ಜುನರು–ಮೇಘಗಳ ಗರ್ಜನೆಗಳಿಂದ ಕೂಡಿದ ಚಂದ್ರ-ಸೂರ್ಯರಂತೆಯೇ ಪ್ರಕಾಶಿಸಿದರು. ಕರ್ಣಾ ರ್ಜುನರು ಮಹಾಧನುರ್ಮಂಡಲದ ಮಧ್ಯಭಾಗದಲ್ಲಿದ್ದರು. ಸಾವಿರಾರು ಬಾಣಗಳ ರೂಪವಾದ ಕಿರಣಗಳನ್ನು ಹೊಂದಿದ್ದ ಅವರು ಒಳ್ಳೆಯ ವರ್ಚಸ್ವಿಗಳಾಗಿದ್ದರು. ಆ ಸಮಯದಲ್ಲವರು ಸಚರಾಚರಜಗತ್ತನ್ನೂ ದಹಿಸುವ ಪ್ರಳಯಕಾಲದ ಇಬ್ಬರು ಸೂರ್ಯರಂತೆ–ಶತ್ರುಗಳಿಗೆ ದುಸ್ಸಹರಾಗಿದ್ದರು. ಕರ್ಣಾರ್ಜುನರಿಬ್ಬರೂ ಅಜೇಯರಾಗಿದ್ದರು. ಶತ್ರುಗಳ ವಿನಾಶಕರಾಗಿದ್ದರು. ಅಸ್ತ್ರ-ಶಸ್ತ್ರಗಳಲ್ಲಿ ಕುಶಲರಾಗಿದ್ದರು. ಆ ಮಹಾಯುದ್ಧದಲ್ಲಿ ಕರ್ಣ-ಪಾಂಡವರು ಮಹೇಂದ್ರ-ಜಂಭಾಸುರರಂತೆ ಭಯರಹಿತರಾಗಿ ಒಬ್ಬರು ಮತ್ತೊಬ್ಬರೊಡನೆ ಸಂಘರ್ಷಿಸುತ್ತಿದ್ದರು. ಮಹಾಧನುರ್ಧಾರಿಗಳಾದ, ಮಹಾರಥರಾದ ಕರ್ಣಾರ್ಜುನರು ಮಹಾಸ್ತ್ರಗಳನ್ನು ಪ್ರಯೋಗಿಸುತ್ತಾ ಭಯಂಕರವಾದ ಬಾಣಗಳ ಮೂಲಕವಾಗಿ ಅಸಂಖ್ಯಾತರಾದ ಗಜಾಶ್ವ-ಪದಾತಿಸೈನಿಕರನ್ನು ಸಂಹರಿಸುತ್ತಿದ್ದರು ಮತ್ತು ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಗಾಯಗೊಳಿಸುತ್ತಿದ್ದರು. ನರಶ್ರೇಷ್ಠರಾದ

ಕರ್ಣ ಮತ್ತು ಧನಂಜಯರಿಂದ ಗಾಯಗೊಳಿಸಲ್ಪಟ್ಟ ಕುರು-ಪಾಂಡವ ಯೋಧರ ಆಶ್ರಯವನ್ನು ಪಡೆದಿದ್ದ ಗಜಾಶ್ವ-ರಥ-ಪದಾತಿಸೈನಿಕರು–ಸಿಂಹ ದಿಂದ ಗಾಯಗೊಳಿಸಲ್ಪಟ್ಟ ಅರಣ್ಯದ ಪ್ರಾಣಿಗಳೋಪಾದಿಯಲ್ಲಿ–ದಿಕ್ಕಾ ಪಾಲಾಗಿ ಓಡಿಹೋದರು.

ಅನಂತರ ದುರ್ಯೋಧನ, ಕೃತವರ್ಮಾ, ಶಕುನಿ, ಕೃಪ ಮತ್ತು ಕರ್ಣ–ಈ ಐವರು ಮಹಾರಥರು ಕೃಷ್ಣಾರ್ಜುನರನ್ನು, ಶರೀರಕ್ಕೆ ಬಹಳ ನೋವನ್ನುಂಟುಮಾಡುವ ಬಾಣಗಳಿಂದ ಪ್ರಹರಿಸಿದರು. ಅದಕ್ಕೆ ಪ್ರತಿ ಯಾಗಿ ಅರ್ಜುನನು ಆ ಮಹಾರಥರ ಧನುಸ್ಸುಗಳನ್ನೂ, ಬತ್ತಳಿಕೆಗಳನ್ನೂ, ಧ್ವಜಗಳನ್ನೂ, ಕುದುರೆಗಳನ್ನೂ, ರಥಗಳನ್ನೂ, ಸೂತರನ್ನೂ ಒಂದೇ ಬಾರಿಗೆ ಧ್ವಂಸಮಾಡಿ ಕರ್ಣನನ್ನು ಶ್ರೇಷ್ಠವಾದ ಹನ್ನೆರಡು ಬಾಣಗಳಿಂದ ಪುನಃ ಪ್ರಹರಿಸಿದನು. ಅನಂತರ ಅರ್ಜುನನನ್ನು ಸಂಹರಿಸಲು ಇಚ್ಛಿಸಿದ್ದ ನೂರು ಮಂದಿ ರಥಿಕರೂ ಮತ್ತು ನೂರು ಮಂದಿ ಗಜಸೈನಿಕರೂ ಶಕ-ತುಷಾರ-ಯವನ ಮತ್ತು ಕಾಂಬೋಜ ದೇಶಗಳ ಶ್ರೇಷ್ಠರಾದ ಕುದುರೆಸವಾರರೊಡನೆ ಅರ್ಜುನನನ್ನು ಆಕ್ರಮಿಸಿದರು. ಅರ್ಜುನನು ತನ್ನ ಕೈಯಲ್ಲಿದ್ದ ಬಾಣ ಗಳಿಂದಲೂ ಮತ್ತು ಕ್ಷುರಗಳಿಂದಲೂ ಗಜಾಶ್ವ-ರಥ-ಪದಾತಿಯೋಧರ ಶ್ರೇಷ್ಠ ವಾದ ಆಯುಧಗಳನ್ನು ಕತ್ತರಿಸಿ ಅವರ ತಲೆಗಳನ್ನೂ ತುಂಡರಿಸಿದನು. ತನ್ನೊಡನೆ ಯುದ್ಧಮಾಡುತ್ತಿದ್ದ ಅಶ್ವಸೈನಿಕರನ್ನೂ, ಗಜಸೈನಿಕರನ್ನೂ, ರಥಿಕರನ್ನೂ ಮತ್ತು ಇತರ ಎಲ್ಲ ಶತ್ರುಗಳನ್ನೂ ಸಂಹರಿಸಿ ನೆಲದ ಮೇಲೆ ಕೆಡವಿದನು. ಅರ್ಜುನನ ಬಾಣಪ್ರಯೋಗಕೌಶಲವನ್ನು ನೋಡಿ ಅಂತರಿಕ್ಷ ದಲ್ಲಿದ್ದ ದೇವತೆಗಳು ಪರಮಹೃಷ್ಟರಾಗಿ–'ಸಾಧು! ಅರ್ಜುನ ಸಾಧು!' ಎಂದು ಪ್ರಶಂಸೆಮಾಡಿದರು. ಮಂಗಳವಾದ್ಯಗಳನ್ನು ನುಡಿಸಿದರು. ವಾಯು ವಿನ ಪ್ರೇರಣೆಯಿಂದ ಶುಭಕರವಾದ, ಘಮಘಮಿಸುತ್ತಿದ್ದ, ಶ್ರೇಷ್ಠವಾದ ಪುಷ್ಪಗಳ ವೃಷ್ಟಿಯಾಯಿತು. ದೇವತೆಗಳ ಮತ್ತು ಮಾನವರ ಪ್ರತ್ಯಕ್ಷ ದಲ್ಲಿಯೇ ನಡೆಯುತ್ತಿದ್ದ ಪರಮಾದ್ಭುತವಾದ ಯುದ್ಧವನ್ನು ನೋಡಿ ಸಕಲಪ್ರಾಣಿಗಳೂ ವಿಸ್ಮಯಗೊಂಡುವು. ಆದರೆ ನಿನ್ನ ಮಗನಾದ ದುರ್ಯೋಧನನೂ ಮತ್ತು ಕರ್ಣನೂ ಒಂದೇ ವಿಧವಾದ ಅಭಿಪ್ರಾಯವನ್ನು ಹೊಂದಿದ್ದುದರಿಂದ ಅರ್ಜುನನ ಪರಾಕ್ರಮವನ್ನು ನೋಡಿ ವ್ಯಥಿತರಾಗಲೂ

ಇಲ್ಲ; ಅಚ್ಚರಿಯನ್ನೂ ತೋರ್ಪಡಿಸಲಿಲ್ಲ. ಆ ಸಮಯದಲ್ಲಿ ದ್ರೋಣರ ಮಗನಾದ ಅಶ್ವತ್ಥಾಮನು ನಿನ್ನ ಮಗನ ಕೈಯನ್ನು ತನ್ನ ಕೈಯಿಂದ ಬಲವಾಗಿ ಹಿಡಿದುಕೊಂಡು ಅವನನ್ನು ಸಮಾಧಾನಗೊಳಿಸುತ್ತಾ ಈ ಮಾತುಗಳನ್ನು ಹೇಳಿದನು:



ಪ್ರಸೀದ ದುರ್ಯೋಧನ ಶಾಮ್ಯ ಪಾಣ್ಡವೈ-
ರಲಂ ವಿರೋಧೇನ ಧಿಗಸ್ತು ವಿಗ್ರಹಮ್ ।
ಹತೋ ಗುರುರ್ಬ್ರಹ್ಮಸಮೋ ಮಹಾಸ್ತ್ರವಿ-
ತ್ತಥೈವ ಭೀಷ್ಮಪ್ರಮುಖಾ ಮಹಾರಥಾಃ ॥೨೧॥

“ದುರ್ಯೋಧನ! ಪ್ರಸನ್ನನಾಗು. ಪಾಂಡವರೊಡನೆ ಸಂಧಾನವನ್ನು ಮಾಡಿಕೊ. ವಿರೋಧದಿಂದ ಯಾವ ಪ್ರಯೋಜನವೂ ಇಲ್ಲ. ಈ ಯುದ್ಧಕ್ಕೆ ಧಿಕ್ಕಾರವಿರಲಿ! ಮಹಾಸ್ತ್ರವಿದರಾದ, ಬ್ರಹ್ಮಸದೃಶರಾದ, ಸರ್ವರಿಗೂ ಗುರುಗಳಾದ ದ್ರೋಣರು ಹತರಾದರು. ಅದೇ ರೀತಿಯಲ್ಲಿ ಭೀಷ್ಮಪ್ರಮುಖ ರಾದ ಅನೇಕ ಮಹಾರಥರೂ ಅಸುನೀಗಿದರು.

ಅಹಂ ತ್ವವಧ್ಯೋ ಮಮ ಚಾಪಿ ಮಾತುಲಃ
ಪ್ರಶಾಧಿ ರಾಜ್ಯಂ ಸಹ ಪಾಣ್ಡವೈಶ್ಚಿರಮ್ ।
ಧನಂಜಯಃ ಶಾಮ್ಯತಿ ವಾರಿತೋ ಮಯಾ
ಜನಾರ್ದನೋ ನೈವ ವಿರೋಧಮಿಚ್ಛತಿ ॥೨೨॥

ನಾನೂ ಮತ್ತು ನನ್ನ ಸೋದರಮಾವಂದಿರಾದ ಕೃಪರೂ ಅವಧ್ಯರು. (ನಾವು ನಿನಗೆ ಎಂದೂ ಬೆಂಬಲಿಗರಾಗಿರುತ್ತೇವೆ.) ಪಾಂಡವರೊಡನೆ ಸೇರಿ ಕೊಂಡು ಚಿರಕಾಲ ರಾಜ್ಯಭಾರಮಾಡು. ನಾನೇನಾದರೂ ಯುದ್ಧವು ಬೇಡ ವೆಂದು ಹೇಳಿದರೆ ಧನಂಜಯನೂ ಯುದ್ಧವನ್ನು ನಿಲ್ಲಿಸಿ ಶಾಂತನಾಗುತ್ತಾನೆ. ಜನಾರ್ದನನಾದರೂ ನಿಮ್ಮಿಬ್ಬರ ನಡುವೆ ವೈರವನ್ನು ಇಚ್ಛಿಸುವವನಲ್ಲ.

ಯುಧಿಷ್ಠಿರೋ ಭೂತಹಿತೇ ರತಃ ಸದಾ
ವೃಕೋದರಸ್ತದ್ವಶಗಸ್ತಥಾ ಯಮೌ ।
ತ್ವಯಾ ತು ಪಾರ್ಥೈಶ್ಚ ಕೃತೇ ಚ ಸಂವಿದೇ
ಪ್ರಜಾಃ ಶಿವಂ ಪ್ರಾಪ್ನುಯುರಿಚ್ಛಯಾ ತವ ॥೨೩॥

ವ್ರಜನ್ತು ಶೇಷಾಃ ಸ್ವಪುರಾಣಿ ಬಾನ್ಧವಾ
ನಿವೃತ್ತಯುದ್ಧಾಶ್ಚ ಭವನ್ತು ಸೈನಿಕಾಃ ।
ನ ಚೇದ್ವಚಃ ಶ್ರೋಷ್ಯಸಿ ಮೇ ನರಾಧಿಪ
ಧ್ರುವಂ ಪ್ರತಪ್ತಾಸಿ ಹತೋಽರಿಭಿರ್ಯುಧಿ ॥೨೪॥

ಯುಧಿಷ್ಠಿರನು ಸರ್ವಕಾಲದಲ್ಲಿಯೂ ಪ್ರಾಣಿಗಳ ಹಿತದಲ್ಲಿಯೇ ಆಸಕ್ತ ನಾಗಿರತಕ್ಕವನು. (ಆದುದರಿಂದ ಅವನು ಶಾಂತಿಗೆ ಬಹಳ ಸುಲಭವಾಗಿ

ಒಪ್ಪಿಕೊಳ್ಳುತ್ತಾನೆ.) ವೃಕೋದರ-ನಕುಲ-ಸಹದೇವರು ಯುಧಿಷ್ಠಿರನ ಅಧೀನದಲ್ಲಿರತಕ್ಕವರು. (ಅವನ ಅಭಿಪ್ರಾಯಕ್ಕೆ ವಿರೋಧವಾಗಿ ಎಂದೂ ನಡೆಯತಕ್ಕವರಲ್ಲ.) ನೀನು ಪಾಂಡವರೊಡನೆ ಸಂಧಿಮಾಡಿಕೊಂಡಿದ್ದೇ ಆದರೆ ದೇಶದ ಪ್ರಜೆಗಳು ಸೌಖ್ಯವನ್ನು ಹೊಂದುತ್ತಾರೆ. ನಿನ್ನ ಇಚ್ಛೆಯಂತೆ (ನಿನ್ನ ಅನುಜ್ಞೆಯನ್ನು ಪಡೆದು) ಅಳಿದುಳಿದಿರುವ ನಮ್ಮ ಬಂಧುಗಳು ತಮ್ಮ-ತಮ್ಮ ನಗರಗಳಿಗೆ ಹೋಗಲಿ. ಸೈನಿಕರು ಯುದ್ಧದಿಂದ ವಿರಾಮ ಹೊಂದಲಿ. ನರಾಧಿಪನೇ! ದುರ್ಯೋಧನ! ನನ್ನ ಈ ಸಮಯೋಚಿತವಾದ ಮಾತನ್ನು ನೀನು ಕೇಳದೆಯೇ ಹೋದರೆ–ಶತ್ರುಗಳಿಂದ ಹತನಾಗಿ ಆ ಸಮಯದಲ್ಲಿ ಬಹಳವಾಗಿ ಪಶ್ಚಾತ್ತಾಪಪಡುವೆ. ಇದು ಸತ್ಯ.

**ಇದಂ ಚ ದೃಷ್ಟಂ ಜಗತಾ ಸಹ ತ್ವಯಾ**
**ಕೃತಂ ಯದೇಕೇನ ಕಿರೀಟಮಾಲಿನಾ ।**
**ಯಥಾ ನ ಕುರ್ಯಾದ್ಬಲಭಿನ್ನ ಚಾನ್ತಕೋ**
**ನ ಚಾಪಿ ಧಾತಾ ಭಗವಾನ್ನ ಯಕ್ಷರಾಟ್ ॥೨೫॥**

ಕಿರೀಟಧರನಾದ ಅರ್ಜುನನು ಏಕಾಕಿಯಾಗಿ ಎಂತೆಂತಹ ಸಾಹಸಕಾರ್ಯಗಳನ್ನು ಮಾಡಿರುವನೆಂಬುದು ಜಗತ್ತಿಗೂ ತಿಳಿದಿದೆ. ನಿನಗೂ ತಿಳಿದಿದೆ. ಅರ್ಜುನನು ಮಾಡುವಂತಹ ಸಾಹಸಕಾರ್ಯವನ್ನು ಇಂದ್ರನಾಗಲೀ, ಯಮನಾಗಲೀ, ಬ್ರಹ್ಮನಾಗಲೀ, ಕುಬೇರನಾಗಲೀ ಖಂಡಿತವಾಗಿಯೂ ಮಾಡಲಾರರು.

**ಅತೋಽಪಿ ಭೂಯಾನ್ಸ್ವಗುಣೈರ್ಧನಂಜಯೋ**
**ನ ಚಾತಿವರ್ತಿಷ್ಯತಿ ಮೇ ವಚೋಽಖಿಲಮ್ ।**
**ತವಾನುಯಾತ್ರಾಂ ಚ ಸದಾ ಕರಿಷ್ಯತಿ**
**ಪ್ರಸೀದ ರಾಜೇನ್ದ್ರ ಶಮಂ ತ್ವಮಾಪ್ನುಹಿ ॥೨೬॥**

ಯದ್ಯಪಿ ಅರ್ಜುನನು ತನ್ನ ಸದ್ಗುಣಗಳಿಂದ ಇದಕ್ಕಿಂತಲೂ ಹೆಚ್ಚು ಮಹಾನ್ ವ್ಯಕ್ತಿಯಾಗಿದ್ದಾನೆ. ಆದರೂ ನನ್ನ ಯಾವುದೇ ಮಾತನ್ನಾದರೂ ಅರ್ಜುನನು ಅತಿಕ್ರಮಿಸುವುದಿಲ್ಲವೆಂಬ ವಿಶ್ವಾಸವು ನನಗೆ ಸಂಪೂರ್ಣ

ವಾಗಿದೆ. ಇಷ್ಟು ಮಾತ್ರವಲ್ಲ; ನೀನು ಪಾಂಡವರೊಡನೆ ಸಂಧಿಮಾಡಿಕೊಂಡರೆ ಅವರು ಯಾವಾಗಲೂ ನಿನ್ನನ್ನೇ ಅನುಸರಣೆ ಮಾಡಿಕೊಂಡಿರುತ್ತಾರೆ. ಆದುದರಿಂದ, ರಾಜೇಂದ್ರ! ಪ್ರಸನ್ನನಾಗು. ಪಾಂಡವರೊಡನೆ ಸಂಧಿಗೆ ಸಮ್ಮತಿಸು.

**ಮಮಾಪಿ ಮಾನಃ ಪರಮಃ ಸದಾ ತ್ವಯಿ**
**ಬ್ರವೀಮ್ಯತಸ್ತ್ವಾಂ ಪರಮಾಚ್ಚ ಸೌಹೃದಾತ್ ।**
**ನಿವಾರಯಿಷ್ಯಾಮಿ ಚ ಕರ್ಣಮಪ್ಯಹಂ**
**ಯದಾ ಭವಾನ್ಸಪ್ರಣಯೋ ಭವಿಷ್ಯಸಿ ॥೨೭॥**

ದುರ್ಯೋಧನ! ನನಗೆ ನಿನ್ನ ವಿಷಯದಲ್ಲಿ ವಿಶೇಷವಾದ ಗೌರವವಿರುವುದರಿಂದಲೂ ಪರಮಸ್ನೇಹವಿರುವುದರಿಂದಲೂ ನಾನು ಈ ಮಾತುಗಳನ್ನು ಹೇಳುತ್ತಿದ್ದೇನೆ. ನೀನು ಪಾಂಡವರ ವಿಷಯದಲ್ಲಿ ಪ್ರೀತನಾಗುವುದಾದರೆ ಕರ್ಣನನ್ನೂ ಯುದ್ಧದಿಂದ ಹಿಂದಿರುಗುವಂತೆ ಮಾಡುತ್ತೇನೆ.

**ವದನ್ತಿ ಮಿತ್ರಂ ಸಹಜಂ ವಿಚಕ್ಷಣಾ-**
**ಸ್ತಥೈವ ಸಾಮ್ನಾ ಚ ಧನೇನ ಚಾರ್ಜಿತಮ್ ।**
**ಪ್ರತಾಪತಶ್ಚೋಪನತಂ ಚತುರ್ವಿಧಂ**
**ತದಸ್ತಿ ಸರ್ವಂ ತವ ಪಾಣ್ಡವೇಷು ॥೨೮॥**

ದುರ್ಯೋಧನ! ವಿದ್ವಾಂಸರಾದವರು ಮಿತ್ರತ್ವದಲ್ಲಿ ನಾಲ್ಕು ಬಗೆಗಳನ್ನು ಹೇಳುತ್ತಾರೆ. ಮೊದಲನೆಯವನು: ಸಹಜಮಿತ್ರ. (ಮೈತ್ರಿಯ ಸಲುವಾಗಿಯೇ ಸ್ನೇಹವನ್ನು ಬೆಳೆಸುವವನು. ಅನೇಕ ವಿಷಯಗಳಲ್ಲಿ ಇಬ್ಬರ ಸ್ವಭಾವಗಳೂ ಒಂದಾಗಿ ಇಂತಹ ಮೈತ್ರಿಯು ಬೆಳೆಯುತ್ತದೆ. ಯಾವ ಒಂದು ಪ್ರಯೋಜನವನ್ನೂ ಉದ್ದೇಶಿಸಿ ಈ ಮೈತ್ರಿಯು ಬೆಳೆಯುವುದಿಲ್ಲ. ಇಂತಹ ಮಿತ್ರನಿಗೆ ಸಹಜಮಿತ್ರನೆಂದು ಹೆಸರು.) ಎರಡನೆಯವನು: ಸಂಧಿಯನ್ನು ಮಾಡಿಕೊಂಡು ಒಳ್ಳೆಯ ಮಾತಿನಿಂದ ಮಿತ್ರನಾದವನು. (ಇಬ್ಬರಿಗೂ ಯಾವುದೋ ವ್ಯವಹಾರದ ಕಾರಣದಿಂದ ದ್ವೇಷವೇ ಇರುತ್ತದೆ. ಆ ವ್ಯವಹಾರವು ಸಂಧಾನದ ಮೂಲಕವಾಗಿ ಮುಗಿದಲ್ಲಿ ಅವರಿಬ್ಬರಲ್ಲಿ

ಮುಂದೆ ಮೈತ್ರಿಯೂ ಬೆಳೆಯಬಹುದು. ಉದಾಸೀನನನ್ನೂ ಒಳ್ಳೆಯ ಮಾತಿನಿಂದ ಸ್ನೇಹಿತನನ್ನಾಗಿ ಮಾಡಿಕೊಳ್ಳಬಹುದು. ಇದು ಎರಡನೆಯದು.) ಮೂರನೆಯದು: ಧನವನ್ನು ವ್ಯಯಮಾಡಿ ಗಳಿಸಿಕೊಂಡ ಮೈತ್ರೀ. (ಕಷ್ಟದಲ್ಲಿರುವವನಿಗೆ ಆರ್ಥಿಕಸಹಾಯವನ್ನು ಮಾಡುವುದರಿಂದಲೂ ಪರಸ್ಪರವಾಗಿ ಮೈತ್ರಿಯು ಬೆಳೆಯುತ್ತದೆ. ಇದು ಮೂರನೆಯದು.) ನಾಲ್ಕನೆಯದು: ತನ್ನ ಪ್ರತಾಪವನ್ನು ತೋರಿಸಿ ಶರಣಾಗತನನ್ನಾಗಿ ಮಾಡಿಕೊಳ್ಳುವುದು. (ಬಲಿಷ್ಠರನ್ನು ಆಶ್ರಯಿಸುವವರು ಹಲವಾರು ಮಂದಿ; ಧನಿಕರನ್ನು ಆಶ್ರಯಿಸುವವರೂ ಹಲವಾರು ಮಂದಿ ಇರುತ್ತಾರೆ. ಧನಿಕನಿಗಾಗಲೀ ಬಲಿಷ್ಠನಿಗಾಗಲೀ ತನ್ನನ್ನು ಆಶ್ರಯಿಸಿಕೊಂಡು ಇರುವವರ ಮೇಲೆ ವಿಶೇಷವಾದ ಮೈತ್ರಿಯಿಲ್ಲದಿದ್ದರೂ ಆಶ್ರಯಪಡೆದವರು ಅವರನ್ನು ಆತ್ಮಹಿತದ ಕಾರಣದಿಂದ ಬಹಳವಾಗಿ ಪ್ರೀತಿಸುತ್ತಾರೆ.)

ಹೀಗೆ ಮೈತ್ರಿಯಲ್ಲಿ ನಾಲ್ಕು ವಿಧಗಳಿವೆ. ಈ ನಾಲ್ಕು ಪ್ರಕಾರಗಳಿಂದಲೂ ನೀನು ಪಾಂಡವರೊಡನೆ ಮೈತ್ರಿಯನ್ನು ಬೆಳೆಸಲು ಸಾಧ್ಯವಿದೆ. (ನೀವಿಬ್ಬರೂ ಅಣ್ಣ-ತಮ್ಮಂದಿರೇ ಆಗಿರುವುದರಿಂದ ಸಹಜ ಮೈತ್ರಿಗೂ ಅವಕಾಶವಿದೆ. ಇಷ್ಟು ಕಾಲ ವಿರೋಧಿಗಳಾಗಿದ್ದು ಈಗ ಸಂಧಾನಮಾಡಿಕೊಳ್ಳುವುದರಿಂದ ಈ ಮೂಲಕವಾದ ಮೈತ್ರಿಗೂ ಅವಕಾಶವಿದೆ. ನಿನ್ನ ಬಳಿ ಇರುವ ಅವರ ರಾಜ್ಯವನ್ನು ಪುನಃ ಅವರಿಗೆ ಒಪ್ಪಿಸಿಕೊಡುವುದರಿಂದ ಮೈತ್ರಿಯು ಬೆಳೆಯಲು ವಿಶೇಷವಾದ ಅವಕಾಶವಿದೆ. ಈಗ ಅವರು ನಿನಗಿಂತಲೂ ಹೆಚ್ಚು ಪ್ರತಾಪಶಾಲಿಗಳಾಗಿರುವುದರಿಂದ ಈ ಸಮಯದಲ್ಲಿ ಸಂಧಾನಮಾಡಿ ಕೊಳ್ಳುವುದು ಹೆಚ್ಚು ಶ್ರೇಯಸ್ಕರ. ಹೀಗೆ ನಾಲ್ಕು ವಿಧವಾದ ಸ್ನೇಹಕ್ಕೂ ಇದು ಸಕಾಲವಾಗಿದೆ. ಈ ವಿಷಯವನ್ನೇ ಮುಂದಿನ ಶ್ಲೋಕದಲ್ಲಿ ಅಶ್ವತ್ಥಾಮನು ಸ್ಪಷ್ಟವಾಗಿ ಹೇಳುತ್ತಾನೆ.)

ನಿಸರ್ಗತಸ್ತೇ ತವ ವೀರ ಬಾನ್ಧವಾಃ
ಪುನಶ್ಚ ಸಾಮ್ನಾ ಸಮವಾಪ್ನುಹಿ ಪ್ರಭೋ ।
ತ್ವಯಿ ಪ್ರಸನ್ನೇ ಯದಿ ಮಿತ್ರತಾಂ ಗತೇ
ಹಿತಂ ಕೃತಂ ಸ್ಯಾಜ್ಜಗತಸ್ತ್ವಯಾತುಲಮ್ ॥೨೯॥

ವೀರ ದುರ್ಯೋಧನ! ಪಾಂಡವರು ಹುಟ್ಟಿನಿಂದಲೇ ನಿನ್ನ ಬಾಂಧವರಾಗಿದ್ದಾರೆ. (ಸೋದರರಾಗಿದ್ದಾರೆ. ಸ್ನೇಹಿತರಾಗಿಯೇ ಹುಟ್ಟಿದ್ದಾರೆ.) ಈಗ ನೀನು ಪುನಃ ಅವರನ್ನು ಸಂಧಿಯ ಮೂಲಕವಾಗಿ ಮಿತ್ರರನ್ನಾಗಿ ಅಂಗೀಕರಿಸು. ನೀನು ಪ್ರಸನ್ನನಾಗಿ ಪಾಂಡವರೊಡನೆ ಮೈತ್ರಿಯನ್ನೇ ಬೆಳೆಸಿದ್ದಾದರೆ ಈ ಮೂಲಕವಾಗಿ ನೀನು ಜಗತ್ತಿಗೇ ಅನುಪಮವಾದ ಹಿತವನ್ನುಂಟು ಮಾಡಿದಂತಾಗುತ್ತದೆ."

ಮಹಾರಾಜ! ನಿನ್ನ ಮಗನು ಸುಹೃದನಾದ ಅಶ್ವತ್ಥಾಮನು ಹೇಳಿದ ಮಾತುಗಳನ್ನು ಕೇಳಿ, ಬಹಳ ಹೊತ್ತು ಚಿಂತಿಸುತ್ತಿದ್ದು, ದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ವ್ಯಾಕುಲಿತಮನಸ್ಕನಾಗಿ ಅಶ್ವತ್ಥಾಮನೊಡನೆ ಹೇಳಿದನು:

"ಪ್ರಾಣಸಖನೇ! ನೀನು ಏನು ಹೇಳಿದೆಯೋ ಅದು ವಾಸ್ತವವೇ ಸರಿ. ಅದರಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಆದರೆ ಈ ವಿಷಯದಲ್ಲಿ ನನ್ನ ಅಭಿಪ್ರಾಯವೇನೆಂಬುದನ್ನು ನಿನ್ನೊಡನೆ ವಿಜ್ಞಾಪಿಸಿಕೊಳ್ಳಲಿಚ್ಛಿಸಿರುವ ನನ್ನ ಮಾತನ್ನಾದರೂ ಸ್ವಲ್ಪ ಕೇಳು:

ನಿಹತ್ಯ ದುಃಶಾಸನಮುಕ್ತವಾನ್ವಚಃ
ಪ್ರಸಹ್ಯ ಶಾರ್ದೂಲವದೇಷ ದುರ್ಮತಿಃ ।
ವೃಕೋದರಸ್ತದ್ಧೃದಯೇ ಮಮ ಸ್ಥಿತಂ
ನ ತತ್ಪರೋಕ್ಷಂ ಭವತಃ ಕುತಃ ಶಮಃ ॥೩೧॥

ಗುರುಪುತ್ರ! ದುರ್ಬುದ್ಧಿಯಾದ ಭೀಮಸೇನನು ಹುಲಿಯಂತೆ ದುಃಶಾಸನನನ್ನು ಬಲಾತ್ಕಾರವಾಗಿ ಸೆಳೆದುಕೊಂಡು ಸಂಹರಿಸುತ್ತಿದ್ದಾಗ ಹೇಳಿದ ಮಾತುಗಳು ನನ್ನ ಮನಸ್ಸಿನಲ್ಲಿ ಈಗಲೂ ಬಹಳವಾಗಿ ನೋವನ್ನುಂಟುಮಾಡುತ್ತಿವೆ. ನಿನ್ನ ಪರೋಕ್ಷದಲ್ಲಿ ಆ ಮಾತುಗಳನ್ನು ಅವನೇನೂ ಹೇಳಲಿಲ್ಲ. ನಿನ್ನ ಎದುರಿನಲ್ಲಿಯೇ ಹೇಳಿದನು. ನಮ್ಮ ಶತ್ರುಗಳ ಮನಸ್ಸಿನಲ್ಲಿ ಇಂತಹ ದುರಭಿಪ್ರಾಯಗಳು ದೃಢವಾಗಿರುವಾಗ ಸಂಧಿಯು ಹೇಗೆ ಸಾಧ್ಯವಾಗುತ್ತದೆ?

ನ ಚಾಪಿ ಕರ್ಣಂ ಪ್ರಸಹೇದ್ರಣೇಽರ್ಜುನೋ
ಮಹಾಗಿರಿಂ ಮೇರುಮಿವೋಗ್ರಮಾರುತಃ ।

ನ ಚಾಶ್ವಸಿಷ್ಯನ್ತಿ ಪೃಥಾತ್ಮಜಾ ಮಯಿ
ಪ್ರಸಹ್ಯ ವೈರಂ ಬಹುಶೋ ವಿಚಿನ್ತ್ಯ ||೩೨||



ಆಚಾರ್ಯಪುತ್ರ! ನೀನು ಕರ್ಣನನ್ನು ಸಾಮಾನ್ಯನೆಂದು ಭಾವಿಸಬೇಡ. ಚಂಡಮಾರುತವು ಮೇರುಪರ್ವತವನ್ನು ಎದುರಿಸಲಾಗದಂತೆ– ಅರ್ಜುನನು ಕರ್ಣನನ್ನು ಎದುರಿಸಿ ನಿಲ್ಲಲಾರನು. ಕರ್ಣನ ಪ್ರಹಾರವನ್ನು ಸಹಿಸಿಕೊಳ್ಳಲಾರನು. ಬಲಾತ್ಕಾರಪೂರ್ವಕವಾಗಿಯೇ ನಾನು ಅನೇಕ ವಿಧಗಳಲ್ಲಿ ಪಾಂಡವರೊಡನೆ ವೈರವನ್ನು ಕಟ್ಟಿಕೊಂಡಿರುತ್ತೇನೆ. ಇದನ್ನೇ ಯೋಚಿಸುತ್ತಿರುವ ಕುಂತಿಯ ಮಕ್ಕಳು ನಿನ್ನಲ್ಲಿ ಖಂಡಿತವಾಗಿಯೂ ವಿಶ್ವಾಸವನ್ನಿಡುವುದಿಲ್ಲ.

ನ ಚಾಪಿ ಕರ್ಣಂ ಗುರುಪುತ್ರ ಸಂಯುಗಾ-
ದುಪಾರಮೇತ್ಯರ್ಹಸಿ ವಕ್ತುಮಚ್ಯುತ ।
ಶ್ರಮೇಣ ಯುಕ್ತೋ ಮಹತಾದ್ಯ ಫಾಲ್ಗುನ-
ಸ್ತಮೇಷ ಕರ್ಣಃ ಪ್ರಸಭಂ ಹನಿಷ್ಯತಿ ॥೩೩॥

ಗುರುಪುತ್ರ! ಈ ಸಮಯದಲ್ಲಿ ಕರ್ಣನನ್ನು ಯುದ್ಧದಿಂದ ವಿರಮಿಸುವಂತೆ ಹೇಳುವುದೂ ನಿನಗೆ ಉಚಿತವಲ್ಲ. ಏಕೆಂದರೆ: ಈಗ ಅರ್ಜುನನು ಬಹಳವಾಗಿ ಬಳಲಿದ್ದಾನೆ. ಬಳಲಿ ಬೆಂಡಾಗಿರುವ ಅರ್ಜುನನನ್ನು ಕರ್ಣನು ಬಲಪೂರ್ವಕವಾಗಿ ಸಂಹರಿಸುತ್ತಾನೆ.”

ಮಹಾರಾಜ! ನಿನ್ನ ಮಗನು ಅಶ್ವತ್ಥಾಮನೊಡನೆ ಹೀಗೆ ಹೇಳಿ, ಗುರುಪುತ್ರನನ್ನು ನಯ-ವಿನಯಗಳ ಮಾತುಗಳಿಂದ ಸಮಾಧಾನಗೊಳಿಸುತ್ತಾ ತನ್ನ ಸೈನಿಕರನ್ನೂ ಅನುಶಾಸಿಸುತ್ತಾ ಹೇಳಿದನು:

“ಸೈನಿಕರೇ! ಬಾಣಗಳನ್ನು ಹಿಡಿದುಕೊಂಡು ಸುಮ್ಮನೇಕೆ ನಿಂತಿದ್ದೀರಿ? ಶತ್ರುಗಳನ್ನು ಆಕ್ರಮಿಸಿರಿ; ಸಂಹರಿಸಿರಿ.”

೮೮ನೆಯ ಅಧ್ಯಾಯವು ಮುಗಿಯಿತು.

೮೯ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣಾರ್ಜುನರ ಭಯಂಕರಯುದ್ಧ: ಕೌರವವೀರರ ಪಲಾಯನ

ಸಂಜಯನು ಕರ್ಣಾರ್ಜುನರ ಯುದ್ಧವನ್ನು ವಿವರಿಸುತ್ತಾನೆ:

‘ಮಹಾರಾಜ! ನಿನ್ನ ಮಗನ ದುರ್ಮಂತ್ರಿತ್ವದ ಫಲವಾಗಿ ಸಮೃದ್ಧವಾದ ಶಂಖ-ಭೇರೀಧ್ವನಿಗಳಾಗುತ್ತಿರಲಾಗಿ ನರಶ್ರೇಷ್ಠರಾದ, ಶ್ವೇತಹಯರಾದ ವೈಕರ್ತನಾರ್ಜುನರು ಒಬ್ಬರು ಮತ್ತೊಬ್ಬರಿಗೆ ಅಭಿಮುಖವಾಗಿ ಯುದ್ಧಮಾಡಲು ತೆರಳಿದರು. ಮದೋದಕವನ್ನು ಸುರಿಸುತ್ತಿರುವ ದೀರ್ಘವಾದ ದಂತಗಳನ್ನು ಹೊಂದಿರುವ, ಹಿಮಾಚಲಪ್ರದೇಶದ ಎರಡು ಆನೆಗಳು ಹೆಣ್ಣಾನೆಯ ಸಲುವಾಗಿ ಸೆಣೆಸಾಡಲು ಮುನ್ನುಗ್ಗಿ ಹೋಗು

ವಂತೆ–ಉಗ್ರವೀರ್ಯರಾದ ಕರ್ಣ-ಧನಂಜಯರು ಪರಸ್ಪರವಾಗಿ ಸಂಘರ್ಷಿಸಲು ಒಂದೆಡೆಯಲ್ಲಿ ಸೇರಿದರು. ಮಹಾಮೇಘದೊಡನೆ ಮತ್ತೊಂದು ಮಹಾಮೇಘವು ಸಂಘರ್ಷಿಸುವಂತೆ, ಆಕಸ್ಮಿಕವಾಗಿ ಒಂದು ಪರ್ವತವು ಮತ್ತೊಂದು ಪರ್ವತದೊಡನೆ ಸಂಘರ್ಷಿಸುವಂತೆ–ಬಾಣಗಳ ಮಳೆಯನ್ನೇ ಸುರಿಸುವ ಕರ್ಣಾರ್ಜುನರು ಧನುಷ್ಟೇಂಕಾರಶಬ್ದಗಳಿಂದಲೂ, ಚಪ್ಪಾಳೆಯ ಶಬ್ದಗಳಿಂದಲೂ, ಚಕ್ರಗಳ ಧ್ವನಿಗಳಿಂದಲೂ ಪರಸ್ಪರವಾಗಿ ಸಂಧಿಸಿದರು. ವೃದ್ಧಿಹೊಂದಿರುವ ಶಿಖರಗಳಿಂದಲೂ, ವೃಕ್ಷಗಳಿಂದಲೂ, ಲತಾ-ಗುಲ್ಮಗಳಿಂದಲೂ, ಓಷಧಿಲತೆಗಳಿಂದಲೂ ಕೂಡಿರುವ, ತುಂಬಿಹರಿಯುತ್ತಿರುವ ನಾನಾವಿಧರಾದ ಚಿಲುಮೆಗಳಿಗೆ ಉಗಮಸ್ಥಾನವಾಗಿರುವ ಎರಡು ಪರ್ವತಗಳಂತೆ–ಮಹಾಬಲಿಷ್ಠರಾದ ಕರ್ಣಾರ್ಜುನರು ಒಬ್ಬರು ಮತ್ತೊಬ್ಬರಿಗೆ ಅಭಿಮುಖರಾಗಿ ಒಂದೆಡೆಯಲ್ಲಿ ಸೇರಿ ಮಹಾಸ್ತ್ರಗಳಿಂದ ಪರಸ್ಪರವಾಗಿ ಪ್ರಹರಿಸಲು ಉಪಕ್ರಮಿಸಿದರು. ಕರ್ಣಾರ್ಜುನರ ಆ ಮಹಾಸಂಗ್ರಾಮವು–ಹಿಂದೆ ಇಂದ್ರನಿಗೂ ಮತ್ತು ಬಲಿಚಕ್ರವರ್ತಿಗೂ ನಡೆದ ಘೋರವಾದ ಯುದ್ಧದಂತೆಯೇ ಇದ್ದಿತು. ಪರಸ್ಪರ ಬಾಣಗಳ ಪ್ರಹಾರ-ಪ್ರತಿಪ್ರಹಾರಗಳಿಂದ ಇಬ್ಬರ ಶರೀರಗಳೂ ಕ್ಷತ-ವಿಕ್ಷತವಾದುವು. ಅವರ ಸಾರಥಿಗಳೂ ಗಾಯಗೊಂಡರು. ಕುದುರೆಗಳೂ ಗಾಯಗೊಂಡುವು. ಕಟುರಕ್ತರೂಪವಾದ ನೀರು ರಣಾಂಗಣದಲ್ಲಿ ಹರಿಯತೊಡಗಿತು. ಆ ಯುದ್ಧವು ಬೇರೆಯವರಿಗೆ ದುಃಸಹವಾಗಿದ್ದಿತು. ಹೇರಳವಾದ ರಕ್ತಕಮಲಗಳಿಂದಲೂ, ನೀಲಕಮಲಗಳಿಂದಲೂ, ಮೀನುಗಳಿಂದಲೂ, ಆಮೆಗಳಿಂದಲೂ ಸಮಾಕುಲವಾದ, ಪಕ್ಷಿಗಳ ಸಮೂಹಗಳಿಂದ ಆವೃತವಾದ, ಅತಿಸಮೀಪದಲ್ಲಿಯೇ ಇರುವ ಎರಡು ಸರೋವರಗಳು ಬಿರುಗಾಳಿಯಿಂದ ಮೇಲೆದ್ದ ತೆರೆಗಳ ಮೂಲಕವಾಗಿ ಪರಸ್ಪರವಾಗಿ ಸಮ್ಮಿಲಿತವಾಗುವಂತೆ–ಧ್ವಜಗಳಿಂದ ಕೂಡಿದ ಕರ್ಣಾರ್ಜುನರ ಎರಡು ರಥಗಳೂ ಪರಸ್ಪರವಾಗಿ ಸಂಘರ್ಷಿಸಿದುವು.

ಉಭೌ ಮಹೇನ್ದ್ರಸ್ಯ ಸಮಾನವಿಕ್ರಮಾ-
ವುಭೌ ಮಹೇನ್ದ್ರಪ್ರತಿಮೌ ಮಹಾರಥೌ ।
ಮಹೇನ್ದ್ರವಜ್ರಪ್ರತಿಮೈಶ್ಚ ಸಾಯಕೈ-
ರ್ಮಹೇನ್ದ್ರವೃತ್ರಾವಿವ ಸಮ್ಪ್ರಜಘ್ನತುಃ ॥೭॥

ಕರ್ಣಾರ್ಜುನರಿಬ್ಬರೂ ಮಹೇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವರಾಗಿದ್ದರು. ಇಂದ್ರಸದೃಶರಾದ ಮಹಾರಥರಾಗಿದ್ದರು. ಮಹೇಂದ್ರನ ವಜ್ರಾಯುಧಕ್ಕೆ ಸಮಾನವಾದ ಬಾಣಗಳಿಂದ ಮಹೇಂದ್ರ-ವೃತ್ರಾಸುರರಂತೆ ಪ್ರಹಾರ-ಪ್ರತಿಪ್ರಹಾರಗಳಲ್ಲಿ ತೊಡಗಿದರು.

ಅರ್ಜುನನಿಗೂ-ಕರ್ಣನಿಗೂ ಭಯಂಕರವಾದ ಮತ್ತು ವಿಸ್ಮಯಗೊಳಿಸುವಂತಹ ಯುದ್ಧವು ನಡೆಯುತ್ತಿದ್ದ ಆ ಸಮಯದಲ್ಲಿ ವಿಚಿತ್ರವಾದ ಕವಚಗಳನ್ನೂ, ಆಭರಣಗಳನ್ನೂ, ಆಯುಧಗಳನ್ನೂ ಧರಿಸಿದ್ದ ಎರಡೂ ಪಕ್ಷಗಳ ಗಜಾಶ್ವ-ರಥ-ಪದಾತಿಸೈನಿಕರೂ ಮತ್ತು ಆಕಾಶದಲ್ಲಿದ್ದ ಪ್ರೇಕ್ಷಕರೂ ಭಯದಿಂದ ನಡುಗಿದರು. ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯೊಡನೆ ಸೆಣೆಸಾಡಲು ಮುನ್ನುಗ್ಗಿಹೋಗುವಂತೆ–ಅರ್ಜುನನು ಕರ್ಣನನ್ನು ಸಂಹರಿಸುವ ಇಚ್ಛೆಯಿಂದ ಮುನ್ನುಗ್ಗಲಾಗಿ ಹೃಷ್ಟರಾದ ಪ್ರೇಕ್ಷಕರು ಸಿಂಹನಾದಗಳನ್ನು ಮಾಡುತ್ತಾ ತಮ್ಮ ಅಂಗವಸ್ತ್ರಗಳನ್ನು ಬೆರಳುಗಳಲ್ಲಿ ಹಿಡಿದುಕೊಂಡು ತೋಳುಗಳನ್ನು ಮೇಲೆತ್ತಿ ಹಾರಾಡಿಸಲು ತೊಡಗಿದರು. ಆ ಸಮಯದಲ್ಲಿ ಸೋಮಕಸೈನಿಕರು ಮುಂದೆ ಬಂದು ಪಾರ್ಥನನ್ನು ಗಟ್ಟಿಯಾಗಿ ಕೂಗುತ್ತಾ ಹೇಳಿದರು:

“ಅರ್ಜುನ! ಕರ್ಣನನ್ನು ಸಂಹರಿಸು. ಸಾವಕಾಶವನ್ನು ಸಾಕುಮಾಡು. ಈ ಕೂಡಲೇ ಇವನ ತಲೆಯನ್ನು ಕತ್ತರಿಸಿ ಕೆಳಕ್ಕೆ ಹಾಕು. ಅಂತೆಯೇ ಧೃತರಾಷ್ಟ್ರಪುತ್ರನ ರಾಜ್ಯಶ್ರದ್ಧೆಯನ್ನೂ (ರಾಜ್ಯಪ್ರಾಪ್ತಿಯ ಆಸೆಯನ್ನೂ) ನಾಶಪಡಿಸು.”

ಮಹಾರಾಜ! ಸೋಮಕರು ಅರ್ಜುನನನ್ನು ಪ್ರೋತ್ಸಾಹಿಸು ತ್ತಿದ್ದಂತೆಯೇ ನಮ್ಮ ಕಡೆಯ ಅನೇಕ ಯೋಧರು ಕರ್ಣನನ್ನು ಕುರಿತು ‘ಮುಂದೆಹೋಗು–ತಡಮಾಡಬೇಡ–ಬೇಗಹೋಗು’ ಎಂದು ಅವಸರ ಪಡಿಸುತ್ತಾ–

ಜಹ್ಯರ್ಜುನಂ ಕರ್ಣ ಶರೈಃ ಸುತೀಕ್ಷ್ಣೈಃ
ಪುನರ್ವನಂ ಯಾಂತು ಚಿರಾಯ ಪಾರ್ಥಾಃ ॥೧೧॥

“ಕರ್ಣ! ಸುತೀಕ್ಷ್ಣವಾದ ಬಾಣಗಳಿಂದ ಅರ್ಜುನನನ್ನು

ಸಂಹರಿಸು. ದೀರ್ಘಕಾಲದ ವಾಸಕ್ಕಾಗಿ ಪಾರ್ಥರು ಪುನಃ ಅರಣ್ಯಕ್ಕೆ ಹೋಗಲಿ"–ಎಂದು ಹೇಳುತ್ತಿದ್ದರು. ಅನಂತರ ಕರ್ಣನು ಮೊದಲು ಹತ್ತು ಮಹಾಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅರ್ಜುನನೂ ಗಟ್ಟಿಯಾಗಿ ನಗುತ್ತಾ, ನಿಶಿತವಾದ ಅಗ್ರಭಾಗಗಳನ್ನು ಹೊಂದಿದ್ದ ಹತ್ತುಬಾಣಗಳಿಂದ ಕರ್ಣನನ್ನು–ಅವನ ತೋಳುಗಳ ಮೂಲಭಾಗಗಳಲ್ಲಿ ಪ್ರಹರಿಸಿದನು.

ಪರಸ್ಪರಂ ತೌ ವಿಶಿಖೈಃ ಸುಪುಙ್ಖೈ-
ಸ್ತತಕ್ಷತುಃ ಸೂತಪುತ್ರೋಽರ್ಜುನಶ್ಚ ।
ಪರಸ್ಪರಂ ತೌ ಬಿಭಿದುರ್ವಿಮರ್ದೇ
ಸುಭೀಮಮಭ್ಯಾಪತತುಶ್ಚ ಹೃಷ್ಟೌ ॥೧೩॥

ಸೂತಪುತ್ರಾರ್ಜುನರು ಅತ್ಯಂತಪ್ರಹೃಷ್ಟರಾಗಿ ಸುಂದರವಾದ ಮೂಲಭಾಗಗಳನ್ನು ಹೊಂದಿದ್ದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಕ್ಷತ-ವಿಕ್ಷತಗೊಳಿಸುತ್ತಿದ್ದರು ಮತ್ತು ಭಯಂಕರವಾದ ರೀತಿಯಲ್ಲಿ ಒಬ್ಬರು ಮತ್ತೊಬ್ಬರ ಮೇಲೆ ಆಕ್ರಮಣವನ್ನೂ ನಡೆಸುತ್ತಿದ್ದರು. ಅನಂತರ ಭಯಂಕರವಾದ ಧನುಸ್ಸನ್ನು ಹೊಂದಿದ್ದ ಅರ್ಜುನನು ತನ್ನೆರಡು ಭುಜಗಳನ್ನೂ ಒದರಿ, ಗಾಂಡೀವಧನುಸ್ಸನ್ನು ತೀಡಿ, ನಾರಾಚ, ನಾಲೀಕ, ವರಾಹ, ಕರ್ಣ, ಕ್ಷುರ, ಅಂಜಲಿಕ, ಅರ್ಧಚಂದ್ರ–ಇವೇ ಮುಂತಾದ ಆಯುಧಗಳನ್ನು ಶತ್ರುವಿನ ಮೇಲೆ ಸುರಿಸಲು ಉಪಕ್ರಮಿಸಿದನು. ಸಾಯಂಕಾಲದ ವೇಳೆಯಲ್ಲಿ ಪಕ್ಷಿಗಳ ಸಮೂಹಗಳು ಕತ್ತುಗಳನ್ನು ಕೆಳಕ್ಕೆ ಮಾಡಿಕೊಂಡು ಗೂಡನ್ನು ಸೇರಿಕೊಳ್ಳುವ ಸಲುವಾಗಿ ವೃಕ್ಷವನ್ನು ಪ್ರವೇಶಿಸುವಂತೆ–ಅರ್ಜುನನ ಬಾಣಗಳು ಕರ್ಣನ ರಥವನ್ನು ಪ್ರವೇಶಿಸುತ್ತಾ ಎಲ್ಲ ಕಡೆಗಳಲ್ಲಿಯೂ ಹರಡಿಕೊಂಡುವು. ಶತ್ರುಜಿತನಾದ ಅರ್ಜುನನು ಹುಬ್ಬನ್ನು ಗಂಟಿಕ್ಕಿಕೊಂಡು ಕಡೆಗಣ್ಣಿನಿಂದ ಕರ್ಣನನ್ನು ಅನುಲಕ್ಷಿಸಿ ಬಾಣಗಳನ್ನು ಬಿಡುತ್ತಿದ್ದನು. ಹಾಗೆ ಪುನಃ-ಪುನಃ ಅರ್ಜುನನು ಬಿಡುತ್ತಿದ್ದ ಬಾಣಗಳ ಸಮೂಹಗಳೆಲ್ಲವನ್ನೂ ಕರ್ಣನು ತನ್ನ ಬಾಣಗಳಿಂದ ನುಂಗಿಹಾಕುತ್ತಿದ್ದನು. (ನಿಷ್ಫಲಗೊಳಿಸುತ್ತಿದ್ದನು.)

ಬಳಿಕ ಮಹೇಂದ್ರನ ಮಗನಾದ ಅರ್ಜುನನು ಶತ್ರುಗಳ ನಾಶಕ್ಕೆ ಸಾಧನಭೂತವಾದ ಆಗ್ನೇಯಾಸ್ತ್ರವನ್ನು ಕರ್ಣನ ಮೇಲೆ ಪ್ರಯೋಗಿಸಿದನು. ಆಗ್ನೇಯಾಸ್ತ್ರದ ಮೂರ್ತಸ್ವರೂಪವು ಭೂಮ್ಯಂತರಿಕ್ಷಗಳನ್ನೂ, ದಿಕ್ಕುಗಳನ್ನೂ, ಸೂರ್ಯಪಥವನ್ನೂ ಆಕ್ರಮಿಸಿಕೊಂಡು ದೇದೀಪ್ಯಮಾನವಾಗಿ ಕಾಣುತ್ತಿದ್ದಿತು.

**ಯೋಧಾಶ್ಚ ಸರ್ವೇ ಜ್ವಲಿತಾಮ್ಬರಾ ಭೃಶಂ**
**ಪ್ರದುದ್ರುವುಸ್ತತ್ರ ವಿದಗ್ಧವಸ್ತ್ರಾಃ ।**
**ಶಬ್ದಶ್ಚ ಘೋರೋಽತಿಬಭೂವ ತತ್ರ**
**ಯಥಾ ವನೇ ವೇಣುವನಸ್ಯ ದಹ್ಯತಃ ॥೧೯॥**

ಆಗ್ನೇಯಾಸ್ತ್ರದ ಪ್ರಾದುರ್ಭಾವದಿಂದಾಗಿ ಎಲ್ಲ ಯೋಧರ ವಸ್ತ್ರಗಳೂ ಹೊತ್ತಿಕೊಂಡುವು. ಉರಿಯುತ್ತಿರುವ ವಸ್ತ್ರಗಳಿಂದ ಕೂಡಿದ್ದ ಆ ಯೋಧರು ದಿಕ್ಕಾಪಾಲಾಗಿ ಓಡಿಹೋದರು. ಅರಣ್ಯದಲ್ಲಿ ಬಿದಿರುಮೆಳೆಯು ಹೊತ್ತಿಕೊಂಡು ಉರಿಯುವಾಗ ಆಗುವ ಛಟ-ಛಟಾ ಶಬ್ದದಂತೆ–ಅತಿ ಘೋರವಾದ ಶಬ್ದವುಂಟಾಯಿತು.

ಜ್ವಲನಾಸ್ತ್ರದ ಆವಿರ್ಭಾವವಾದುದನ್ನು ಕಂಡು ಪ್ರತಾಪವಂತನಾದ ಕರ್ಣನು ಅದರ ಪ್ರಶಮನಾರ್ಥವಾಗಿ ವಾರುಣಾಸ್ತ್ರವನ್ನು ಪ್ರಯೋಗಿಸಿದನು. ವಾರುಣಾಸ್ತ್ರವು ಆಗ್ನೇಯಾಸ್ತ್ರದ ಅಗ್ನಿಯನ್ನು ಕ್ಷಣಮಾತ್ರದಲ್ಲಿ ಉಪಶಮನಗೊಳಿಸಿತು. ಇಷ್ಟು ಮಾತ್ರವಲ್ಲ:

**ಬಲಾಹಕೌಘಶ್ಚ ದಿಶಸ್ತರಸ್ವೀ**
**ಚಕಾರ ಸರ್ವಾಸ್ತಿಮಿರೇಣ ಸಂವೃತಾಃ ।**
**ತತೋ ಧರಿತ್ರೀಧರತುಲ್ಯರೋಧಸಃ**
**ಸಮನ್ತತೋ ವೈ ಪರಿವಾರ್ಯ ವಾರಿಣಾ ॥೨೦॥**

ವಾರುಣಾಸ್ತ್ರದ ಪ್ರಭಾವದಿಂದಾಗಿ ವೇಗದಿಂದ ಕೂಡಿದ ಮೋಡಗಳ ಸಮೂಹಗಳಿಂದ ಎಲ್ಲ ದಿಕ್ಕುಗಳೂ ಕತ್ತಲೆಯಿಂದ ಆಚ್ಛಾದಿತವಾದುವು. ದಿಕ್ಕುಗಳ ಅಗ್ರಭಾಗಗಳು ಪರ್ವತಗಳಂತೆ ಕಾಣುತ್ತಿದ್ದುವು. ಎಲ್ಲ ಪ್ರದೇಶಗಳೂ ಸಂಪೂರ್ಣವಾಗಿ ನೀರಿನಿಂದ ಆವೃತವಾಗಿದ್ದುವು.

**ತೈಶ್ಚಾತಿವೇಗಾತ್ಸ ತಥಾವಿಧೋಽಪಿ**
**ನೀತಃ ಶಮಂ ವಹ್ನಿರತಿಪ್ರಚಣ್ಡಃ ।**
**ಬಲಾಹಕೈರೇವ ದಿಗನ್ತರಾಣಿ**
**ವ್ಯಾಪ್ತಾನಿ ಸರ್ವಾಣಿ ಯಥಾ ನಭಶ್ಚ ॥೨೧॥**

ಅಗ್ನಿದೇವನು ಅತಿಪ್ರಚಂಡನಾಗಿದ್ದರೂ, ಭೂಮ್ಯಂತರಿಕ್ಷಗಳನ್ನೂ ಸುಟ್ಟುಹಾಕುವಷ್ಟು ಪ್ರಭಾವಶಾಲಿಯಾಗಿದ್ದರೂ, ವಾರುಣಾಸ್ತ್ರದಿಂದ ಉದ್ಭೂತವಾದ ಮೇಘಗಳಿಂದ ಬಹಳ ಬೇಗ ಉಪಶಮನಹೊಂದಿದನು. ಆ ಮೇಘಗಳು ದಿಗಂತದವರೆಗೂ ವ್ಯಾಪಿಸಿದ್ದು ಆಕಾಶವನ್ನೂ ಆವರಿಸಿ ಕೊಂಡಿದ್ದುವು.

ಮಹಾಮೇಘಗಳಿಂದ ಆವೃತವಾದ ಎಲ್ಲ ದಿಕ್ಕುಗಳೂ ಕತ್ತಲಿನಿಂದ ವ್ಯಾಪ್ತವಾದುವು. ಏನೊಂದೂ ಕಾಣುತ್ತಲೇ ಇರಲಿಲ್ಲ. ಆ ಸಮಯದಲ್ಲಿ ಕರ್ಣನ ವಾರುಣಾಸ್ತ್ರದ ಮೂಲಕವಾಗಿ ಹೊರಬರುತ್ತಿದ್ದ ನೀರನ್ನು ಹೊತ್ತ ಸಮಸ್ತವಾದ ಮೇಘಗಳ ಸಮೂಹಗಳನ್ನೂ ಅರ್ಜುನನು ವಾಯವ್ಯಾಸ್ತ್ರದ ಮೂಲಕವಾಗಿ ನಿರಸನಗೊಳಿಸಿದನು. ಅನಂತರ ಶತ್ರುಗಳಿಂದ ಎದುರಿಸಲು ಅಸಾಧ್ಯನಾದ ಅರ್ಜುನನು ಗಾಂಡೀವಧನುಸ್ಸನ್ನೂ, ಮೌರ್ವಿಯನ್ನೂ ಮತ್ತು ಬಾಣಗಳನ್ನೂ ಮಂತ್ರಪೂರ್ವಕವಾಗಿ ಅಭಿಮಂತ್ರಿಸಿ ಅತಿಪ್ರಭಾವ ಯುಕ್ತವಾದ, ದೇವರಾಜನಾದ ಇಂದ್ರನಿಗೆ ಅತ್ಯಂತಪ್ರಿಯವಾದ ವಜ್ರಾಸ್ತ್ರ ವನ್ನು ಪ್ರಕಾಶನಗೊಳಿಸಿದನು. ಮರುಕ್ಷಣದಲ್ಲಿಯೇ ಗಾಂಡೀವಮಹಾ ಧನುಸ್ಸಿನಿಂದ ವಜ್ರಾಯುಧದ ವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ಅತಿತೀಕ್ಷ್ಣವಾಗಿದ್ದ ಕ್ಷುರಪ್ರ, ಅಂಜಲಿಕ, ಅರ್ಧಚಂದ್ರ, ನಾಲೀಕ, ನಾರಾಚ, ವರಾಹಕರ್ಣ–ಇವೇ ಮುಂತಾದ ಸಾವಿರಾರು ಆಯುಧಗಳು ಹೊರಬಂದುವು. ಮಹಾಪ್ರಭಾವದಿಂದ ಕೂಡಿದ್ದ, ಹರಿತವಾಗಿದ್ದ, ರಣ ಹದ್ದಿನ ರೆಕ್ಕೆಗಳನ್ನು ಹೊಂದಿದ್ದ, ವೇಗಯುಕ್ತವಾಗಿದ್ದ ಗಾಂಡೀವಮುಕ್ತ ವಾದ ಆಯುಧಗಳು ಕರ್ಣನನ್ನು ಸೇರಿ ಅವನ ಅಂಗಾಂಗಗಳೆಲ್ಲವನ್ನೂ ಗಾಯಗೊಳಿಸಿದುವು; ಕುದುರೆಗಳನ್ನೂ ಗಾಯಗೊಳಿಸಿದುವು; ಕರ್ಣನ ಧನುಸ್ಸಿನಲ್ಲಿಯೂ, ರಥದ ನೊಗದಲ್ಲಿಯೂ, ಚಕ್ರಗಳಲ್ಲಿಯೂ ಮತ್ತು ಧ್ವಜ

ದಲ್ಲಿಯೂ ನಾಟಿಕೊಂಡುವು. ಗರುಡನಿಂದ ಭಯಗೊಂಡ ಸರ್ಪಗಳು ಬಹಳ ಬೇಗ ಬಿಲಗಳನ್ನು ಸೇರಿಕೊಳ್ಳುವಂತೆ–ಅರ್ಜುನನ ಬಾಣಗಳು ಕರ್ಣನನ್ನೂ, ಅವನ ಕುದುರೆಗಳನ್ನೂ ಮತ್ತು ಯುಗಚಕ್ರ-ಧ್ವಜಗಳನ್ನೂ ಭೇದಿಸಿ ಕೊಂಡು ಭೂಮಿಯನ್ನು ಸೇರಿಕೊಂಡುವು. ಕರ್ಣನು ವಜ್ರಾಸ್ತ್ರದಿಂದ ಪ್ರಾದುರ್ಭೂತವಾದ ಬಾಣಗಳ ಪ್ರಹಾರಗಳಿಂದ ಬಹಳವಾಗಿ ಗಾಯಗೊಂಡಿದ್ದನು. ಅವನ ಶರೀರವೆಲ್ಲವೂ ರಕ್ತದಿಂದ ತೋಯ್ದುಹೋಗಿದ್ದಿತು. ರೋಷಾವಿಷ್ಟನಾಗಿದ್ದ ಕರ್ಣನು ಅಗಲವಾದ ಕಣ್ಣುಗಳನ್ನು ತೆರೆದು ದುರುಗುಟ್ಟಿಕೊಂಡು ನೋಡುತ್ತಿದ್ದನು. ಮಹಾತ್ಮನಾದ ಕರ್ಣನು ಸುದೃಢವಾದ ಮೌರ್ವಿಯಿಂದ ಕೂಡಿದ್ದ ಧನುಸ್ಸನ್ನು ಬಗ್ಗಿಸಿ, ಸಮುದ್ರದ ಗರ್ಜನೆಯಂತೆ ಭಯಂಕರವಾಗಿ ಶಬ್ದಮಾಡುತ್ತಿದ್ದ ಭಾರ್ಗವಾಸ್ತ್ರವನ್ನು ಅನುಸಂಧಾನಮಾಡಿ ಪ್ರಯೋಗಿಸಿದನು. ಅರ್ಜುನನು ಪ್ರಯೋಗಿಸಿದ ವಜ್ರಾಸ್ತ್ರಪ್ರಮುಕ್ತವಾದ ಎಲ್ಲ ಬಗೆಯ ಬಾಣಗಳನ್ನೂ ಕರ್ಣನು ಭಾರ್ಗವಾಸ್ತ್ರ ಪ್ರಯೋಗದಿಂದ ಕ್ಷಣಮಾತ್ರದಲ್ಲಿ ತುಂಡು-ತುಂಡುಮಾಡಿ ವಜ್ರಾಸ್ತ್ರವನ್ನೂ ಭಾರ್ಗವಾಸ್ತ್ರದಿಂದಲೇ ಧ್ವಂಸಮಾಡಿ ಪಾಂಡವರ ಕಡೆಯ ರಥ-ನಾಗ-ಪದಾತಿಸೈನಿಕರನ್ನು ಸಂಹರಿಸಲು ಉಪಕ್ರಮಿಸಿದನು. ಅಸಹನಶೀಲನಾದ ಕರ್ಣನು ಆ ಮಹಾಯುದ್ಧದಲ್ಲಿ ಭಾರ್ಗವಾಸ್ತ್ರದ ಪ್ರಭಾವದಿಂದಾಗಿ ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನೇ ಪ್ರದರ್ಶಿಸುತ್ತಿದ್ದನು. ಕ್ರೋಧಾವಿಷ್ಟನಾದ, ವೇಗಶಾಲಿಯಾದ ಸೂತಪುತ್ರನು ಮುಖ್ಯ-ಮುಖ್ಯರಾದ ಪಾಂಚಾಲಯೋಧರನ್ನು ಸುವರ್ಣಮಯವಾದ ಮೂಲಭಾಗಗಳಿಂದ ಕೂಡಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ನೇರವಾಗಿ ಗುರಿಯಿಟ್ಟು ಪ್ರಯೋಗಿಸಿದ ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದನು. ಯುದ್ಧದಲ್ಲಿ ಕರ್ಣಪ್ರಮುಕ್ತವಾದ ಬಾಣಗಳ ಸಮೂಹಗಳಿಂದ ಬಹಳವಾಗಿ ಪೀಡಿತರಾದ ಪಾಂಚಾಲ-ಸೋಮಕ ಯೋಧರು ಕ್ರೋಧಾವಿಷ್ಟರಾಗಿ ಎಲ್ಲರೂ ಒಟ್ಟಾಗಿ ಸೇರಿ ಸೂತಪುತ್ರನ ಸುತ್ತಲೂ ನಿಂತು ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸಿದರು. ಸೂತಪುತ್ರನು ತನ್ನನ್ನು ಎದುರಿಸಿ ಯುದ್ಧಮಾಡುತ್ತಿದ್ದ ಪಾಂಚಾಲರ ರಥ-ನಾಗಾಶ್ವಸಮೂಹಗಳನ್ನು ಬಾಣಗಳಿಂದ ಸಂಹರಿಸಿದನು. ಬಲಪೂರ್ವಕ ವಾಗಿ ಬಾಣಗಳ ಸಮೂಹಗಳಿಂದ ಅವರೆಲ್ಲರನ್ನೂ ಮರ್ದಿಸಿ, ಅವನು

ರಣಾಂಗಣದಲ್ಲಿ ಸಂತೋಷಾಧಿಕ್ಯದಿಂದ ಸಂಚರಿಸುತ್ತಿದ್ದನು. ಭಯಂಕರಬಲಶಾಲಿಯಾದ, ಕೋಪಗೊಂಡ ಸಿಂಹದಿಂದ ಆನೆಗಳ ಸಮೂಹಗಳು ಯಾವ ರೀತಿಯಲ್ಲಿ ಮರ್ದನಮಾಡಲ್ಪಡುತ್ತವೆಯೋ–ಅದೇ ರೀತಿಯಲ್ಲಿ ಕರ್ಣನ ಬಾಣಗಳಿಂದ ಪ್ರಹೃತರಾಗುತ್ತಿದ್ದ ಪಾಂಚಾಲಯೋಧರು ಭಗ್ನದೇಹರಾಗಿ ಕೂಗಿಕೊಳ್ಳುತ್ತಾ ಅಸುನೀಗಿ ಭೂಮಿಯ ಮೇಲೆ ಬೀಳುತ್ತಿದ್ದರು. ಉದಾರವೀರ್ಯನಾದ ಕರ್ಣನು ಪಾಂಚಾಲರ ಶ್ರೇಷ್ಠಯೋಧರೆಲ್ಲರನ್ನೂ ಬಲಪೂರ್ವಕವಾಗಿ ಸಂಹರಿಸಿ ಅಂತರಿಕ್ಷದಲ್ಲಿರುವ ಉಗ್ರರಶ್ಮಿಯಾದ ಸೂರ್ಯನೋಪಾದಿಯಲ್ಲಿ ಪ್ರಕಾಶಿಸಿದನು. ಕೌರವೇಂದ್ರ! ಆ ಸಮಯದಲ್ಲಿ ಕರ್ಣನು ಪಾಂಚಾಲ ಯೋಧರನ್ನು ಸಂಹರಿಸಿ ಜಯಗಳಿಸಿದುದನ್ನು ತಿಳಿದು ನಿನ್ನ ಕಡೆಯವರೆಲ್ಲರೂ ಆನಂದತುಂದಿಲರಾಗಿ ಸಿಂಹನಾದಗಳನ್ನು ಮಾಡಿದರು. ಕರ್ಣನು ಕೃಷ್ಣಾರ್ಜುನರನ್ನೂ ಬಹಳವಾಗಿ ಗಾಯಗೊಳಿಸಿರುವನೆಂದೇ ಅವರೆಲ್ಲರೂ ಭಾವಿಸಿದರು. ಶತ್ರುಗಳಿಂದ ಎದುರಿಸಲು ಅಸಾಧ್ಯನಾದ, ಮಹಾರಥನಾದ ಕರ್ಣನ ಅಂತಹ ಅದ್ಭುತಪರಾಕ್ರಮವನ್ನು ಭೀಮಸೇನನು ನೋಡಿದನು. ಯುದ್ಧದ ಮಧ್ಯದಲ್ಲಿ ಧನಂಜಯನು ಪ್ರಯೋಗಿಸಿದ ವಜ್ರಾಸ್ತ್ರವೂ ಕರ್ಣನ ಭಾರ್ಗವಾಸ್ತ್ರದಿಂದ ಉಪಶಮನಹೊಂದಿದುದನ್ನೂ ಅವನು ಗಮನಿಸಿದನು. ಆದರಿಂದಾಗಿ ಸಹನೆಯನ್ನು ಕಳೆದುಕೊಂಡ ಅಸಹನಶೀಲನಾದ ವಾಯುಪುತ್ರನಾದ ಭೀಮಸೇನನು, ಕ್ರೋಧದಿಂದ ಪ್ರಜ್ವಲಿಸುತ್ತಿದ್ದ ಕಣ್ಣುಗಳುಳ್ಳವನಾಗಿ, ತನ್ನ ಒಂದು ಕೈಯಿಂದ ಮತ್ತೊಂದು ಕೈಯನ್ನು ಬಲವಾಗಿ ಮಸೆಯುತ್ತಾ, ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಬಹಳವಾಗಿ ಕೋಪಗೊಂಡು ಸತ್ಯಸಂಧನಾದ ಅರ್ಜುನನೊಡನೆ ಹೇಳಿದನು:

**ಕಥಂ ನು ಪಾಪೋಽಯಮಪೇತಧರ್ಮಃ**
**ಸೂತಾತ್ಮಜಃ ಸಮರೇಽದ್ಯ ಪ್ರಸಹ್ಯ ।**
**ಪಞ್ಚಾಲಾನಾಂ ಯೋಧಮುಖ್ಯಾನನೇಕಾ-**
**ನ್ನಿಜಘ್ನಿವಾಂಸ್ತವ ಜಿಷ್ಣೋ ಸಮಕ್ಷಮ್ ॥೩೭॥**

"ಅರ್ಜುನ! ಧರ್ಮಮಾರ್ಗವನ್ನು ಸಂಪೂರ್ಣವಾಗಿ ಬಿಟ್ಟಿರುವ,

ಸೂತಪುತ್ರನಾದ ಪಾಪಿಷ್ಠನಾದ ಈ ಕರ್ಣನು ಇಂದಿನ ಯುದ್ಧದಲ್ಲಿ ಅನೇಕ ಪಾಂಚಾಲಯೋಧಪ್ರಮುಖರನ್ನು ಬಲಪೂರ್ವಕವಾಗಿ ನಿನ್ನ ಎದುರಿನಲ್ಲಿಯೇ ಹೇಗೆ ಸಂಹರಿಸಿದನು?

ಪೂರ್ವಂ ದೇವೈರಜಿತಂ ಕಾಲಕೇಯೈಃ
ಸಾಕ್ಷಾತ್ಸ್ಥಾಣೋರ್ಬಾಹುಸಂಸ್ಪರ್ಶಮೇತ್ಯ ।
ಕಥಂ ನು ತ್ವಾಂ ಸೂತಪುತ್ರಃ ಕಿರೀಟಿ-
ನ್ನಥೇಷುಭಿರ್ದಶಭಿಃ ಪ್ರಾಗವಿದ್ಧ್ಯತ್ ॥೩೮॥

ಪಾರ್ಥ! ಹಿಂದೆ ನೀನು ದೇವತೆಗಳಿಂದಲೂ ಪರಾಜಿತನಾಗಲಿಲ್ಲ. ದೇವತೆಗಳಿಗೂ ಅಜೇಯರೆನಿಸಿದ್ದ ಕಾಲಕೇಯರಿಂದಲೂ ನೀನು ಪರಾಜಿತನಾಗಲಿಲ್ಲ. ನೀನು ಸಾಕ್ಷಾತ್ ಪರಶಿವನ ಬಾಹುಸಂಸ್ಪರ್ಶವನ್ನೂ ಪಡೆದುಕೊಂಡಿರುವೆ. (ಪರಶಿವನಿಂದಲೂ ಅನುಗೃಹೀತನಾಗಿರುವೆ.) ಹೀಗಿರುವಾಗ ಸೂತಪುತ್ರನೇ ಮೊದಲು ನಿನ್ನನ್ನು ಹತ್ತು ಬಾಣಗಳಿಂದ *ಹೇಗೆ ಪ್ರಹರಿಸಿದನು?

ತ್ವಯಾ ಕ್ಷಿಪ್ತಾಂಶ್ಚಾಗ್ರಸದ್ಬಾಣಸಂಘಾ-
ನಾಶ್ಚರ್ಯಮೇತತ್ಪ್ರತಿಭಾತಿ ಮೇಽದ್ಯ ।
ಕೃಷ್ಣಾಪರಿಕ್ಲೇಶಮನುಸ್ಮರ ತ್ವಂ
ಯಥಾಬ್ರುವೀತ್ತ್ವಣ್ಡತಿಲಾನ್ಸ್ಮ ವಾಚಃ ॥೩೯॥

ರೂಕ್ಷಾಃ ಸುತೀಕ್ಷ್ಣಾಶ್ಚ ಹಿ ಪಾಪಬುದ್ಧಿಃ
ಸೂತಾತ್ಮಜೋಽಯಂ ಗತಭೀರ್ದುರಾತ್ಮಾ ।

---

*ಕರ್ಣನು ಹತ್ತು ಬಾಣಗಳಿಂದ ಮೊದಲು ಪ್ರಹರಿಸಿದನೆಂದು ಇದೇ ಅಧ್ಯಾಯದ ೧೨ನೆಯ ಶ್ಲೋಕದಲ್ಲಿ ಬಂದಿರುತ್ತದೆ. ಭೀಮನು ಇದನ್ನು ಪ್ರಸ್ತಾಪಿಸಿ ಹೇಳುವುದರಿಂದ ಈ ಮಧ್ಯದಲ್ಲಿ ಬಂದಿರುವ ೧೨ನೆಯ ಶ್ಲೋಕದ ಉತ್ತರಾರ್ಧದಿಂದ ೩೬ನೆಯ ಶ್ಲೋಕದವರೆಗಿನ ಭಾಗವು ಅಧಿಕಪಾಠವೆಂದು ಭಂ. ರಿ. ಇನ್‌ಸ್ಟಿಟ್ಯೂಟ್‌ನವರ ಅಭಿಪ್ರಾಯವಾಗಿರುತ್ತದೆ. ಅವರು ಪ್ರಕಟಿಸಿರುವ ಪುಸ್ತಕದಲ್ಲಿ ಈ ಮಧ್ಯದ ಪ್ರಕರಣವು ಬರುವುದಿಲ್ಲ.

**ಸಂಸ್ಮೃತ್ಯ ಸರ್ವಂ ತದಿಹಾದ್ಯ ಪಾಪಂ**
**ಜಹ್ಯಾಶು ಕರ್ಣಂ ಯುಧಿ ಸವ್ಯಸಾಚಿನ್ ॥೪೦॥**

ನೀನು ಬಿಟ್ಟ ಬಾಣಗಳ ಸಮೂಹಗಳೆಲ್ಲವನ್ನೂ ಸೂತಪುತ್ರನು ನುಂಗಿಹಾಕುತ್ತಲೇ ಇದ್ದಾನೆ. ಇದು ನನಗೆ ಅತ್ಯಾಶ್ಚರ್ಯವಾಗಿ ಕಾಣುತ್ತಿದೆ. (ನೀನು ಕರ್ಣನೊಡನೆ ಅತ್ಯಂತಸೌಮ್ಯತೆಯಿಂದ ಯುದ್ಧಮಾಡುತ್ತಿರುವೆ ಯೆಂದು ನಾನು ಭಾವಿಸುತ್ತೇನೆ.)

ಸವ್ಯಸಾಚಿಯೇ! ನೀನು ನಮ್ಮ ಧರ್ಮಪತ್ನಿಯಾದ ದ್ರೌಪದಿಯ ಕ್ಲೇಶಗಳನ್ನು ಸ್ಮರಣೆಗೆ ತಂದುಕೊ. ಪಾಪಬುದ್ಧಿಯವನಾದ, ದುರಾತ್ಮನಾದ, ಸೂತನ ಮಗನಾದ ಈ ಕರ್ಣನು ಸ್ವಲ್ಪವಾದರೂ ಭಯವೇ ಇಲ್ಲದೇ ನಮ್ಮನ್ನು ಎಣ್ಣೆತೆಗೆದ ಎಳ್ಳಿಗೆ ಸಮಾನರೆಂದೂ–ನಪುಂಸಕರೆಂದೂ ಹೇಳಿದನು. ಕರ್ಣಕಠೋರವಾದ ಬಹಳ ತೀಕ್ಷ್ಣವಾದ ಮಾತುಗಳನ್ನೇ ತುಂಬಿದ ಸಭೆಯಲ್ಲಿ ಆಡಿದನು. ಆ ಎಲ್ಲವನ್ನೂ ನೀನೀಗ ಸ್ಮರಿಸಿಕೊಂಡು ಈ ಪಾಪಿಷ್ಠನನ್ನು ಈಗಿಂದೀಗಲೇ ಸಂಹರಿಸು.

**ಕಸ್ಮಾದುಪೇಕ್ಷಾಂ ಕುರುಷೇ ಕಿರೀಟಿ-**
**ನ್ನುಪೇಕ್ಷಿತುಂ ನಾಯಮಿಹಾದ್ಯ ಕಾಲಃ ।**
**ಯಯಾ ಧೃತ್ಯಾ ಸರ್ವಭೂತಾನಜೈಷೀ-**
**ರ್ಗ್ರಾಸಂ ದದತ್ಖಾಣ್ಡವೇ ಪಾವಕಾಯ ।**
**ತಯಾ ಧೃತ್ಯಾ ಸೂತಪುತ್ರಂ ಜಹಿ ತ್ವ-**
**ಮಹಂ ಚೈನಂ ಗದಯಾ ಪೋಥಯಿಷ್ಯೇ ॥೪೧॥**

ಕಿರೀಟಿಯೇ! ನೀನು ಯಾವ ಕಾರಣದಿಂದ ಇವನನ್ನು ಸಂಹರಿಸಲು ಉಪೇಕ್ಷೆಮಾಡುತ್ತಿರುವೆ? ಉಪೇಕ್ಷೆಮಾಡಲು ನಿಶ್ಚಯವಾಗಿಯೂ ಇದು ಸಮಯವಲ್ಲ. ನೀನು ಯಾವ ಧೈರ್ಯವನ್ನು ಅವಲಂಬಿಸಿ ಖಾಂಡವವನ ದಲ್ಲಿ ಯಜ್ಞೇಶ್ವರನಿಗೆ ಆಹಾರವನ್ನೊದಗಿಸುತ್ತಾ, ಅಡ್ಡಲಾಗಿ ಬಂದ ಎಲ್ಲ ಪ್ರಾಣಿಗಳನ್ನೂ ಜಯಿಸಿ ಹಿಂದಿರುಗುವಂತೆ ಮಾಡಿದೆಯೋ–ಅದೇ ಧೈರ್ಯ

ವನ್ನೇ ಈಗಲೂ ಅವಲಂಬಿಸಿ ಈ ಸೂತಪುತ್ರನನ್ನು ಸಂಹರಿಸು. ನಾನೂ ಸಹ ಇವನನ್ನು ಗದೆಯಿಂದ ಪ್ರಹರಿಸುತ್ತೇನೆ."

ಮಹಾರಾಜ! ಭೀಮಸೇನನು ಹೀಗೆ ಹೇಳಿದನಂತರ ಅರ್ಜುನನು ಬಿಡುತ್ತಿದ್ದ ಎಲ್ಲ ಬಾಣಗಳೂ ಕರ್ಣನಿಂದ ವಿನಾಶಗೊಳಿಸಲ್ಪಟ್ಟುದನ್ನು ಕಂಡು ಶ್ರೀಕೃಷ್ಣನು ಪಾರ್ಥನೊಡನೆ ಹೇಳಿದನು:

"ಅರ್ಜುನ! ಇದೇನಿದು? ನೀನು ಬಿಟ್ಟ ಎಲ್ಲ ಅಸ್ತ್ರಗಳನ್ನೂ ಕರ್ಣನು ಪ್ರತ್ಯಸ್ತ್ರಗಳಿಂದ ಧ್ವಂಸಮಾಡಿಬಿಟ್ಟನು. ನೀನೇನಾದರೂ ಮೋಹ ಗೊಂಡಿರುವೆಯಾ? ಮನಸ್ಸಮಾಧಾನವನ್ನು ಹೊಂದಿಲ್ಲವೇ? ಕರ್ಣನಿಗೆ ಲಭಿಸಿದ ವಿಜಯಕ್ಕಾಗಿ ಕೌರವರು ಪ್ರಹೃಷ್ಟರಾಗಿ ಸಿಂಹನಾದಗಳನ್ನು ಮಾಡುತ್ತಿದ್ದಾರೆ. ನೀನು ಬಿಡುತ್ತಿರುವ ಅಸ್ತ್ರಗಳೆಲ್ಲವೂ ಕರ್ಣನ ಪ್ರತ್ಯಸ್ತ್ರ ಗಳಿಂದ ವಿನಾಶವಾಗುತ್ತಿದೆಯೆಂಬುದು ಕರ್ಣನನ್ನು ಮುಂದೆಮಾಡಿಕೊಂಡು ಯುದ್ಧಮಾಡುತ್ತಿರುವ ಕೌರವರೆಲ್ಲರಿಗೂ ತಿಳಿದುಹೋಗಿದೆ. (ಈ ಕಾರಣ ದಿಂದಲೇ ಅವರು ಆನಂದತುಂದಿಲರಾಗಿ ಸಿಂಹನಾದಗಳನ್ನು ಮಾಡುತ್ತಿದ್ದಾರೆ.)

ಈ ಹಿಂದೆ ನೀನು ಧೈರ್ಯದಿಂದ ರಾಕ್ಷಸರ ತಾಮಸಾಸ್ತ್ರಗಳನ್ನು ವಿನಾಶಗೊಳಿಸಿರುವೆ. ಪ್ರತಿಯೊಂದು ಯುಗದಲ್ಲಿಯೂ ನೀನು ಧೈರ್ಯವನ್ನೇ ಆಶ್ರಯಿಸಿ ಅನೇಕ ಘೋರರಾಕ್ಷಸರನ್ನೂ ಸಂಹಾರಮಾಡಿರುವೆ. ಯುದ್ಧದಲ್ಲಿ ದಂಭೋದ್ಭವರೆಂಬ ಹೆಸರಿನ ರಾಕ್ಷಸರನ್ನೂ ಸಂಹರಿಸಿರುವೆ. (ಸೈನ್ಯಸಮೇತ ನಾದ ದಂಭೋದ್ಭವನನ್ನು ಸೋಲಿಸಿರುವೆ.) ಈಗಲೂ ಅದೇ ಧೈರ್ಯವನ್ನೇ ಆಶ್ರಯಿಸಿ ಕರ್ಣನನ್ನು ಸಂಹರಿಸು. ಅರ್ಜುನ! ಇದೋ ಈ ಸುದರ್ಶನ ಚಕ್ರವನ್ನೇ ನಾನು ನಿನಗೆ ಕೊಡುತ್ತೇನೆ. ಈ ಸುದರ್ಶನಚಕ್ರದ ಅಂಚಿನಲ್ಲಿ ಕತ್ತಿಯಂತೆ ಹರಿತವಾದ ಅಲುಗುಗಳಿವೆ. ಇಂದ್ರನು ವಜ್ರಾ ಯುಧದಿಂದ ನಮುಚಿಯ ಶಿರಸ್ಸನ್ನು ಕತ್ತರಿಸಿದಂತೆ–ಈ ಚಕ್ರಾಯುಧ ದಿಂದ ನೀನು ಶತ್ರುವಿನ ತಲೆಯನ್ನು ಬಲಪೂರ್ವಕವಾಗಿ ತುಂಡರಿಸು. ನೀನು ಶ್ರೇಷ್ಠವಾದ ಧೃತಿಯಿಂದ ಮಹಾತ್ಮನಾದ ಕಿರಾತರೂಪಿಯಾದ

ಪರಶಿವನನ್ನೇ ಯುದ್ಧದ ಮೂಲಕವಾಗಿ ಸಂತೋಷಗೊಳಿಸಿರುವೆ. ಪುನಃ ನೀನು ಅದೇ ವಿಧವಾದ ಧೃತಿಯನ್ನೇ ಆಶ್ರಯಿಸಿ ಪರಿವಾರಸಹಿತನಾದ ಸೂತಪುತ್ರನನ್ನು ಸಂಹರಿಸು. ಅನಂತರ ನೀನು ಸಮುದ್ರಗಳೇ ಒಡ್ಯಾಣರೂಪವಾಗಿರುವ ಪತ್ತನ–ಗ್ರಾಮಗಳಿಂದ ಸಮೃದ್ಧವಾಗಿರುವ, ನಿರ್ನಾಮಹೊಂದಿದ ಶತ್ರುಸಮೂಹವುಳ್ಳ (ಶತ್ರುಗಳಿಂದ ನಿರ್ಬಾಧಿತವಾದ) ಈ ಭೂಮಂಡಲವನ್ನು ರಾಜನಿಗೊಪ್ಪಿಸು. ಹೀಗೆ ಮಾಡುವುದರಿಂದ ನೀನು ಅಪಾರವಾದ ಯಶಸ್ಸನ್ನು ಗಳಿಸುವೆ."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದನಂತರ ಅತಿಬಲನಾದ ಮಹಾತ್ಮನಾದ ಅರ್ಜುನನು ಕರ್ಣನ ವಧೆಗೆ ನಿರ್ಧಾರಮಾಡಿದನು. ಭೀಮ-ಜನಾರ್ದನರಿಂದ ಪ್ರೇರಿತನಾದ ಪಾರ್ಥನು ತನ್ನ ಸ್ವರೂಪ ವೇನೆಂಬುದನ್ನು ಜ್ಞಾಪಿಸಿಕೊಂಡನು. ತಾನು ಭೂಲೋಕದಲ್ಲಿ ಅವತರಿಸಿದುದರ ಕಾರಣವನ್ನೂ ಯೋಚಿಸಿ ತಿಳಿದುಕೊಂಡು ಕೇಶವನೊಡನೆ ಹೇಳಿದನು:

ಪ್ರಾದುಷ್ಕರೋಮ್ಯೇಷ ಮಹಾಸ್ತ್ರಮುಗ್ರಂ
ಶಿವಾಯ ಲೋಕಸ್ಯ ವಧಾಯ ಸೌತೇಃ ।
ತನ್ಮೇಽನುಜಾನಾತು ಭವಾನ್ಸುರಾಶ್ಚ
ಬ್ರಹ್ಮಾ ಭವೋ ವೇದವಿದಶ್ಚ ಸರ್ವೇ ॥೫೦॥

"ಕೃಷ್ಣ! ಲೋಕಕ್ಕೆ ಮಂಗಳವಾಗಬೇಕೆಂಬ ಆಶಯದಿಂದಲೂ, ಕರ್ಣನನ್ನು ವಧಿಸುವ ಸಲುವಾಗಿಯೂ–ನಾನೀಗ ಅತ್ಯುಗ್ರವಾದ ಮಹಾಸ್ತ್ರವೊಂದನ್ನು ಪ್ರಕಟಪಡಿಸುತ್ತೇನೆ. ಇದನ್ನು ಪ್ರಕಟಪಡಿಸಲು ನೀನು ನನಗೆ ಅನುಮತಿಯನ್ನು ನೀಡು. ದೇವತೆಗಳು, ಬ್ರಹ್ಮ, ಈಶಾನ ಮತ್ತು ಬ್ರಹ್ಮವಿದರು–ಇವರೆಲ್ಲರೂ ಅನುಮತಿಯನ್ನು ದಯಪಾಲಿಸಲಿ."

ಕೌರವೇಶ್ವರ! ಮಹಾತ್ಮನಾದ ಅರ್ಜುನನು ಶ್ರೀಕೃಷ್ಣನೊಡನೆ ಹೀಗೆ ಹೇಳಿ, ಬ್ರಹ್ಮನಿಗೆ ನಮಸ್ಕರಿಸಿ, ಮನಸ್ಸಿನಲ್ಲಿಯೇ ನೆಲೆಗೊಂಡಿದ್ದ, ಶತ್ರುಗಳಿಂದ ಸಹಿಸಲು ಅಸಾಧ್ಯವಾದ ಶ್ರೇಷ್ಠವಾದ ಬ್ರಹ್ಮಾಸ್ತ್ರವನ್ನು ಪ್ರಕಟಪಡಿಸಿದನು. ಅರ್ಜುನನ ಆ ಬ್ರಹ್ಮಾಸ್ತ್ರವನ್ನು ಕರ್ಣನು–ಮೇಘವು ನೀರಿನ ಧಾರೆಗಳನ್ನು ಸುರಿಸುವಂತೆ–ಬಾಣಗಳ ವೃಷ್ಟಿಯನ್ನೇ ಸುರಿಸಿ

ವಿನಾಶಗೊಳಿಸಿದನು. ರಣರಂಗದ ಮಧ್ಯದಲ್ಲಿ ಅರ್ಜುನನ ಬ್ರಹ್ಮಾಸ್ತ್ರವೂ ಕರ್ಣನಿಂದ ವಿನಾಶಗೊಂಡುದನ್ನು ನೋಡಿ ಅಸಹನಶೀಲನಾದ, ಮಹಾ ಬಲಿಷ್ಠನಾದ, ಕೋಪದಿಂದ ಉರಿದುರಿದು ಬೀಳುತ್ತಿದ್ದ ಭೀಮನು ಸತ್ಯಸಂಧ ನಾದ ಅರ್ಜುನನೊಡನೆ ಹೇಳಿದನು:

"ಅರ್ಜುನ! ನೀನು ಶ್ರೇಷ್ಠವಾದ, ಮನೋವಿಧೇಯವಾಗಿರುವ, ಪರಮೋತ್ತಮವಾದ, ಮಹಾಸ್ತ್ರವಾದ ಬ್ರಹ್ಮಾಸ್ತ್ರವನ್ನೂ ತಿಳಿದಿರುವೆಯೆಂದು ಎಲ್ಲ ಜನರೂ ಹೇಳುತ್ತಾರೆ. ಆದುದರಿಂದ ಆ ಮತ್ತೊಂದು ಮಹಾಸ್ತ್ರವನ್ನೂ ಪ್ರಕಟಪಡಿಸು."

ಮಹಾರಾಜ! ಭೀಮಸೇನನು ಹೀಗೆ ಹೇಳುತ್ತಲೇ ಅರ್ಜುನನು ಮತ್ತೊಂದು ಮಹಾಸ್ತ್ರವನ್ನು ಪ್ರಕಟಪಡಿಸಿದನು. ಮಹಾತೇಜಸ್ವಿಯಾದ ಅರ್ಜುನನು ಗಾಂಡೀವಮುಕ್ತವಾದ, ಸರ್ಪಗಳಂತೆ ಉಗ್ರರೂಪಗಳನ್ನು ಹೊಂದಿದ್ದ, ಸೂರ್ಯರಶ್ಮಿಸದೃಶವಾಗಿದ್ದ, ಪ್ರಜ್ವಲಿಸುತ್ತಿದ್ದ ಬಾಣ ಗಳಿಂದ ಎಲ್ಲ ದಿಕ್ಕುಗಳನ್ನೂ ಉಪದಿಕ್ಕುಗಳನ್ನೂ ತುಂಬಿದನು. ಸುವರ್ಣ ಮಯವಾದ ಮೂಲಭಾಗಗಳನ್ನು ಹೊಂದಿದ್ದ, ಪ್ರಳಯಕಾಲದ ಸೂರ್ಯಾಗ್ನಿಗಳ ಕಿರಣಗಳಿಗೆ ಸಮಾನವಾಗಿದ್ದ, ಅರ್ಜುನವಿಸೃಷ್ಟವಾದ ಲಕ್ಷೋಪಲಕ್ಷ ಬಾಣಗಳು ಕ್ಷಣಮಾತ್ರದಲ್ಲಿ ಕರ್ಣನ ರಥವನ್ನು ಮುಚ್ಚಿ ಬಿಟ್ಟುವು. ಅರ್ಜುನನು ಪ್ರಯೋಗಿಸಿದ ಆ ಮಹಾಸ್ತ್ರದಿಂದ ಶೂಲಗಳೂ, ಗಂಡುಗೊಡಲಿಗಳೂ, ಚಕ್ರಗಳೂ, ನೂರಾರು ನಾರಾಚಗಳೂ ಮತ್ತು ಇನ್ನೂ ಘೋರತರವಾದ ಅನೇಕ ಅಸ್ತ್ರ-ಶಸ್ತ್ರಗಳೂ ಪ್ರಾದುರ್ಭವಿಸಿದುವು. ಆ ಆಯುಧಗಳ ಸಮೂಹಗಳಿಂದ ರಣಾಂಗಣದ ಸುತ್ತಲೂ ಇದ್ದ ಶತ್ರುಪಕ್ಷದ ಯೋಧರು ತಂಡ-ತಂಡವಾಗಿ ಕೊಲ್ಲಲ್ಪಟ್ಟರು. ಆ ರಣರಂಗದ ಮಧ್ಯದಲ್ಲಿ ಶತ್ರುಪಕ್ಷದ ಯೋಧನೊಬ್ಬನ ತಲೆಯು ಮುಂಡದಿಂದ ಕತ್ತರಿಸಲ್ಪಟ್ಟು ಮೇಲಕ್ಕೆ ಎಗರಿ ಇನ್ನೊಬ್ಬನ ದೇಹಕ್ಕೆ ತಗುಲಿ ಕೆಳಕ್ಕೆ ಬಿದ್ದಿತು. ಆ ಯೋಧನೂ ಭಯಗೊಂಡು ಒಡನೆಯೇ ಕೆಳಕ್ಕೆ ಬಿದ್ದನು. ಇನ್ನೊಬ್ಬನು ಬಿದ್ದವನನ್ನು ನೋಡಿಯೇ ಪ್ರಾಣತೊರೆದನು. ಮತ್ತೊಬ್ಬನ ಕತ್ತಿಯನ್ನು

ಹಿಡಿದಿರುವ ಕರಿಕರೋಪಮವಾದ ಬಾಹುವು ಅರ್ಜುನನು ಬಿಟ್ಟ ಮಹಾಸ್ತ್ರದ ಬಾಣಗಳಿಂದ ಕತ್ತರಿಸಲ್ಪಟ್ಟು ಖಡ್ಗಸಹಿತವಾಗಿಯೇ ಕೆಳಕ್ಕೆ ಬಿದ್ದಿತು. ಗುರಾಣಿಯನ್ನು ಹಿಡಿದ ಮತ್ತೊಬ್ಬನ ಎಡತೋಳು ಕ್ಷುರದಿಂದ ಕತ್ತರಿಸಲ್ಪಟ್ಟು ನೆಲದ ಮೇಲೆ ಬಿದ್ದಿತು. ಹೀಗೆ ಕಿರೀಟಮಾಲಿಯಾದ ಅರ್ಜುನನು ಕೌರವರ ಕಡೆಯ ಯೋಧಮುಖ್ಯರೆಲ್ಲರನ್ನೂ ಧ್ವಂಸಮಾಡಿದನು.

ಪಾರ್ಥನು ಶರೀರಾಂತಕರವಾದ, ಘೋರವಾದ ಬಾಣಗಳಿಂದ ದುರ್ಯೋಧನನ ಸೈನ್ಯವನ್ನು ಸಂಪೂರ್ಣವಾಗಿ ವಿನಾಶಗೊಳಿಸಿದನು. ಅದೇ ರೀತಿಯಲ್ಲಿ ವೈಕರ್ತನಕರ್ಣನೂ ಸಾವಿರಾರು ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು. ಪರ್ಜನ್ಯನಿಂದ ವಿಸೃಷ್ಟವಾದ ನೀರಿನ ಧಾರೆ ಗಳಂತೆ–ಕರ್ಣಪ್ರಮುಕ್ತವಾದ ಆ ಬಾಣಗಳು ಸೀತ್ಕಾರಧ್ವನಿಮಾಡುತ್ತಾ ಅರ್ಜುನನನ್ನು ಸೇರಿದುವು. ಬಳಿಕ ಭೀಮಬಲನಾದ, ಅಪ್ರತಿಮಪ್ರಭಾವ ನಾದ ಕರ್ಣನು–ಕೃಷ್ಣನನ್ನೂ, ಅರ್ಜುನನನ್ನೂ, ವೃಕೋದರನನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿ ಗಟ್ಟಿಯಾದ ಸ್ವರದಿಂದ ಭಯಂಕರವಾಗಿ ಸಿಂಹನಾದವನ್ನು ಮಾಡಿದನು. ಕರ್ಣನ ಬಾಣಗಳಿಂದ ಗಾಯಗೊಂಡ ಅರ್ಜುನನು, ಭೀಮ-ಕೃಷ್ಣರೂ ಕರ್ಣನ ಬಾಣಗಳಿಂದ ಗಾಯಗೊಂಡುದನ್ನು ನೋಡಿ ಸಹನೆತಪ್ಪಿದವನಾಗಿ ಪುನಃ ಹದಿನೆಂಟು ಬಾಣಗಳನ್ನು ಬತ್ತಳಿಕೆಯಿಂದ ಹೊರಕ್ಕೆ ತೆಗೆದು ಒಂದು ಬಾಣದಿಂದ ವೈಕರ್ತನಕರ್ಣನ ಧ್ವಜವನ್ನು ಪ್ರಹರಿಸಿ, ಸಾರಥಿಯಾದ ಶಲ್ಯನನ್ನು ನಾಲ್ಕು ಬಾಣಗಳಿಂದಲೂ, ಕರ್ಣನನ್ನು ಮೂರು ಬಾಣಗಳಿಂದಲೂ ಗಾಯಗೊಳಿಸಿದನು. ಅನಂತರ ಅರ್ಜುನನು ಉಳಿದ ಹತ್ತು ಬಾಣಗಳನ್ನು ಪ್ರಯೋಗಿಸಿ ಸುವರ್ಣಮಯವಾದ ಕವಚವನ್ನು ಧರಿಸಿದ್ದ ಸಭಾಪತಿ ಎಂಬ ರಾಜಕುಮಾರನನ್ನೂ ಸಂಹರಿಸಿದನು. ಸಭಾಪತಿಯು ಶಿರಸ್ಸು, ಬಾಹುಗಳು, ಕುದುರೆಗಳು, ಸೂತ, ಧನುಸ್ಸು ಮತ್ತು ಧ್ವಜ ಇವುಗಳೆಲ್ಲದರಿಂದಲೂ ವಿಹೀನನಾಗಿ–ಗಂಡುಗೊಡಲಿಯಿಂದ ಕತ್ತರಿಸಲ್ಪಟ್ಟ ಶಾಲವೃಕ್ಷ ದಂತೆ–ರಥಾಗ್ರಭಾಗದಿಂದ ಕೆಳಕ್ಕೆ ಬಿದ್ದನು. ಅರ್ಜುನನು ಪುನಃ ಕರ್ಣನನ್ನು ಮೂರು, ಎಂಟು, ಎರಡು, ನಾಲ್ಕು ಮತ್ತು ಹತ್ತು ಬಾಣಗಳಿಂದ ಅನುಕ್ರಮವಾಗಿ ಪ್ರಹರಿಸಿ, ಅಸ್ತ್ರ-ಶಸ್ತ್ರಧಾರಿಗಳಾದ ಸವಾರರಿಂದ ಕೂಡಿದ್ದ

ನಾಲ್ಕು ನೂರು ಆನೆಗಳನ್ನೂ, ಎಂಟುನೂರು ರಥಿಗಳನ್ನೂ ಸಂಹರಿಸಿದನು. ಸವಾರರಿಂದ ಕೂಡಿದ ಸಾವಿರಾರು ಕುದುರೆಗಳನ್ನೂ–ಎಂಟು ಸಾವಿರ ಪದಾತಿಸೈನಿಕರನ್ನೂ ಸಂಹರಿಸಿ, ಶೀಘ್ರಗಾಮಿಗಳಾದ ಬಾಣಗಳಿಂದ ಸೂತ-ರಥ-ಕೇತುಸಹಿತನಾದ ಕರ್ಣನನ್ನೂ ಕಣ್ಣಿಗೆ ಕಾಣದಂತೆ ಮುಚ್ಚಿದನು. ಧನಂಜಯನಿಂದ ಅನವರತವಾಗಿ ವಧಿಸಲ್ಪಡುತ್ತಿದ್ದ ಕುರುಗಳು ಕರ್ಣನನ್ನು ಕುರಿತು–"ಕರ್ಣ! ಶೀಘ್ರವಾಗಿ ಅರ್ಜುನನ ಮೇಲೆ ಬಾಣಗಳನ್ನು ಬಿಡು. ಎಲ್ಲ ಕುರುಗಳನ್ನೂ ಅರ್ಜುನನು ಸಂಹಾರಮಾಡುವ ಮೊದಲೇ ನೀನು ನಿಶಿತವಾದ ಬಾಣಗಳಿಂದ ಅವನನ್ನು ಗಾಯಗೊಳಿಸು"–ಎಂಬುದಾಗಿ ಎಲ್ಲ ಕಡೆಗಳಿಂದಲೂ ಕೂಗಿಕೊಂಡರು.

ಹೀಗೆ ಕುರುಯೋಧರಿಂದ ಪ್ರಚೋದಿತನಾದ ಕರ್ಣನು ಸರ್ವಪ್ರಯತ್ನದಿಂದಲೂ ಬಾಣಗಳನ್ನು ಅಪಾರಸಂಖ್ಯೆಯಲ್ಲಿ ಶತ್ರುಗಳ ಮೇಲೆ ಪ್ರಯೋಗಿಸುತ್ತಲೇ ಇದ್ದನು. ರಕ್ತದಿಂದ ಸಿಕ್ತವಾಗಿ ಧೂಳಿನಿಂದಲೂ ಆವೃತವಾಗಿದ್ದ, ಮರ್ಮಭೇದಿಗಳಾದ ಆ ಬಾಣಗಳು ಅನೇಕ ಪಾಂಡು-ಪಾಂಚಾಲಯೋಧರನ್ನು ಸಂಹರಿಸಿದುವು.

**ತಾವುತ್ತಮೌ ಸರ್ವಧನುರ್ಧರಾಣಾಂ**
**ಮಹಾಬಲೌ ಸರ್ವಸಪತ್ನಸಾಹೌ ।**
**ನಿಜಘ್ನತುಶ್ಚಾಹಿತಸೈನ್ಯಮುಗ್ರ-**
**ಮನ್ಯೋನ್ಯಮಪ್ಯಸ್ತ್ರವಿದೌ ಮಹಾಸ್ತ್ರೈಃ ॥೬೯॥**

ಸರ್ವಧನುಷ್ಮಂತರಲ್ಲಿಯೂ ಶ್ರೇಷ್ಠರಾದ, ಮಹಾಬಲರಾದ, ಸರ್ವ ಶತ್ರುಗಳನ್ನು ಏಕಕಾಲದಲ್ಲಿ ಎದುರಿಸುವ ಸಾಮರ್ಥ್ಯವನ್ನು ಹೊಂದಿರುವ, ಅಸ್ತ್ರವಿದ್ಯಾಕುಶಲರಾದ ಕರ್ಣಾರ್ಜುನರು ಮಹಾಸ್ತ್ರಗಳಿಂದ ತಮಗೆ ಅಹಿತರಾದವರನ್ನು ಅನ್ಯೋನ್ಯವಾಗಿ ಸಂಹರಿಸುತ್ತಿದ್ದರು. (ಪರಸ್ಪರ ವಾಗಿಯೂ ಪ್ರಹರಿಸುತ್ತಿದ್ದರು.)

ಅನಂತರ ಶಿಬಿರದಲ್ಲಿ ಸುಹೃದರಿಂದಲೂ ಮತ್ತು ಶ್ರೇಷ್ಠವೈದ್ಯ ರಿಂದಲೂ ಮಾಡಲ್ಪಟ್ಟ ಮಂತ್ರೌಷಧಿಗಳ ಉಪಚಾರಗಳಿಂದ ವೇದನಾರಹಿ ತನೂ, ಶಲ್ಯರಹಿತನೂ ಆಗಿದ್ದ ಯುಧಿಷ್ಠಿರನು ಸುವರ್ಣಮಯವಾದ

ಕವಚವನ್ನು ಧರಿಸಿ, ಕರ್ಣಾರ್ಜುನರ ಯುದ್ಧವನ್ನು ನೋಡುವ ಸಲುವಾಗಿ ತ್ವರೆಯಿಂದ ರಣಭೂಮಿಗೆ ಆಗಮಿಸಿದನು. ರಾಹುವಿನಿಂದ ಮುಕ್ತನಾದ, ನಿರ್ಮಲನಾದ ಪೂರ್ಣಚಂದ್ರನು ಉದಯಿಸಿದುದನ್ನು ನೋಡಿ ಜನರು ಆನಂದಿಸುವಂತೆ–ಧರ್ಮರಾಜನು ರಣರಂಗಕ್ಕೆ ಬಂದುದನ್ನು ನೋಡಿ ಸರ್ವಪ್ರಾಣಿಗಳೂ ಸಂತುಷ್ಟಗೊಂಡುವು.

ಪರಸ್ಪರವಾಗಿ ಯುದ್ಧದಲ್ಲಿ ತೊಡಗಿದ್ದ, ಶತ್ರುಹಂತಕರಾದ, ಯೋಧ ಮುಖ್ಯರಾದ ಕರ್ಣಾರ್ಜುನರನ್ನು ನೋಡಲು ಇಚ್ಛಿಸಿ ಆಗಮಿಸಿದ್ದ ಅಂತ ರಿಕ್ಷದಲ್ಲಿದ್ದ ದೇವತೆಗಳೂ ಭೂಮಿಯಲ್ಲಿದ್ದ ಜನರೂ ಯುದ್ಧಮಾಡುತ್ತಿದ್ದ ಅವರಿಬ್ಬರನ್ನೂ ನೋಡುತ್ತಾ ಸ್ತಬ್ಧರಾಗಿ ನಿಂತುಬಿಟ್ಟರು. ಆ ಸಮಯದಲ್ಲಿ ಶ್ರೇಷ್ಠವಾದ ಬಾಣಗಳ ಮೂಲಕವಾಗಿ ಪರಸ್ಪರವಾಗಿ ಗಾಯಗೊಳಿಸುತ್ತಿದ್ದ ಕರ್ಣಾರ್ಜುನರ ಧನುಸ್ಸು, ಮೌರ್ವೀ ಮತ್ತು ಅಂಗೈಗಳ ಪ್ರಹಾರಶಬ್ದಗಳೂ (ಟೇಂಕಾರ-ಚಪ್ಪಾಳೆಶಬ್ದಗಳೂ) ಸುಪ್ರಮುಕ್ತವಾದ ಬಾಣಗಳ ಸೀತ್ಕಾರ ಶಬ್ದಗಳೂ ಭಯಂಕರವಾಗಿ ಕೇಳಿಬರುತ್ತಿದ್ದುವು. ಹೀಗೆ ಅನ್ಯೋನ್ಯವಾಗಿ ಪ್ರಹರಿಸುತ್ತಿದ್ದ ಕರ್ಣಾರ್ಜುನರ ಯುದ್ಧವು ಭಯಂಕರವಾಗಿದ್ದಿತು. ಬಾಣ ಪ್ರಯೋಗಸಮಯದಲ್ಲಿ ಅರ್ಜುನನೊಮ್ಮೆ ಮೌರ್ವಿಯನ್ನು ಸುದೀರ್ಘವಾಗಿ ಸೆಳೆದನು. ಅದರಿಂದಾಗಿ ಗಾಂಡೀವಧನುಸ್ಸಿನ ಮೌರ್ವಿಯು ಭಯಂಕರಶಬ್ದ ಮಾಡುತ್ತಾ ಹರಿದುಹೋಯಿತು. ಆ ಅಂತರದಲ್ಲಿ ಸೂತಪುತ್ರನು ನೂರು ಕ್ಷುದ್ರಕಗಳಿಂದ ಅರ್ಜುನನನ್ನು ಪ್ರಹರಿಸಿದನು. ಪೊರೆಯನ್ನು ಬಿಟ್ಟ ಸರ್ಪ ಗಳಂತಿದ್ದ, ಎಣ್ಣೆಯಿಂದ ಹದಮಾಡಿದ್ದ, ಪಕ್ಷಿಗಳ ರೆಕ್ಕೆಗಳನ್ನು ಹೊಂದಿದ್ದ ಅರುವತ್ತು ಬಾಣಗಳಿಂದ ವಾಸುದೇವನನ್ನೂ ಪ್ರಹರಿಸಿ ಎಂಟು ಬಾಣಗಳಿಂದ ಪುನಃ ಅರ್ಜುನನನ್ನೂ ಪ್ರಹರಿಸಿದನು. ಬಳಿಕ ಸೂರ್ಯಕುಮಾರನಾದ ಕರ್ಣನು ವಾಯುಕುಮಾರನಾದ ಭೀಮನನ್ನು ಮರ್ಮಸ್ಥಾನಗಳಲ್ಲಿ ಪ್ರಹರಿಸಿದನು. ಬಳಿಕ ಕೃಷ್ಣನನ್ನೂ, ಪಾರ್ಥನನ್ನೂ, ಪಾರ್ಥನ ಧ್ವಜ ವನ್ನೂ, ಅನುಜರಾದ ನಕುಲ-ಸಹದೇವರನ್ನೂ, ಸೋಮಕರನ್ನೂ ಬಾಣಗಳ ಪ್ರಹಾರದಿಂದ ಕೆಳಕ್ಕೆ ಕೆಡವಲು ಪ್ರಯತ್ನಿಸುತ್ತಾ, ಶ್ರೇಷ್ಠವಾದ ಹತ್ತು ಸಾವಿರ ಬಾಣಗಳಿಂದ ಪ್ರಹರಿಸಿದನು. ಆಕಾಶದಲ್ಲಿ ಮೇಘಸಮೂಹಗಳು ಸೂರ್ಯನನ್ನು ಮುಚ್ಚುವಂತೆ–ಪಾಂಡವ-ಸೋಮಕರು ಕರ್ಣನನ್ನು ವಿಶಿಖ

ಗಳಿಂದಲೂ ಪೃಷತ್ಕಗಳಿಂದಲೂ ಮುಚ್ಚಿದರು. ಆದರೆ ಅಸ್ತ್ರವಿದ್ಯೆಯಲ್ಲಿ ಪರಿಣತನಾದ ಸೂತಪುತ್ರನು ತನ್ನನ್ನು ಆಕ್ರಮಿಸಲು ಬರುತ್ತಿದ್ದ ಪಾಂಡವ-ಸೋಮಕರನ್ನು ಅನೇಕಬಾಣಗಳಿಂದ ತಡೆದು ನಿಲ್ಲಿಸಿದನು. ಕರ್ಣನು–ಪಾಂಡವ-ಸೋಮಕಯೋಧರು ಬಿಡುತ್ತಿದ್ದ ಅಸ್ತ್ರ-ಶಸ್ತ್ರ ಗಳೆಲ್ಲವನ್ನೂ ಸಂಪೂರ್ಣವಾಗಿ ವಿನಾಶಗೊಳಿಸಿ ಅವರ ರಥಾಶ್ವ-ಗಜಸೈನಿಕರನ್ನೂ ಸಂಹರಿಸಿದನು. ಅದೇ ರೀತಿಯಲ್ಲಿ ಪಾಂಡವರ ಕಡೆಯ ಸೇನಾಪ್ರಮುಖರನ್ನೂ ಮಾರ್ಗಣಗಳಿಂದ ಬಹಳವಾಗಿ ಪೀಡಿಸ ತೊಡಗಿದನು. ನಾಯಿಗಳ ಸಮುದಾಯಗಳು ಅತ್ಯಂತಬಲಿಷ್ಠವಾದ ಕೋಪಗೊಂಡ ಸಿಂಹದಿಂದ ಕೊಲ್ಲಲ್ಪಡುವಂತೆ–ಕರ್ಣನ ಬಾಣಗಳಿಂದ ಛಿನ್ನ-ಭಿನ್ನವಾದ ದೇಹಗಳಿಂದ ಕೂಡಿದ್ದ ಪಾಂಡು-ಪಾಂಚಾಲಯೋಧರು ಆರ್ತನಾದಮಾಡುತ್ತಾ ಪ್ರಾಣಗಳನ್ನು ತೊರೆದು ರಣಭೂಮಿಯಲ್ಲಿ ಬೀಳುತ್ತಿದ್ದರು. ಪುನಃ ಪ್ರಧಾನರಾದ ಪಾಂಚಾಲಯೋಧರೂ ಮತ್ತು ಪಾಂಡವರ ಕಡೆಯ ಇತರ ಪ್ರಮುಖರೂ ಕರ್ಣ-ಧನಂಜಯರ ಮಧ್ಯದಲ್ಲಿ ಬಂದು ಕರ್ಣನನ್ನು ಬಾಣಗಳಿಂದ ಪ್ರಹರಿಸತೊಡಗಿದರು. ಆದರೆ ಬಲಿಷ್ಠನಾದ ಕರ್ಣನು ಅವರೆಲ್ಲರನ್ನೂ ಮಹಾಧನುಸ್ಸಿನಿಂದ ಸುಪ್ರಮುಕ್ತವಾದ ಬಾಣಗಳಿಂದ ಸಂಹರಿಸಿದನು. ಆ ಸಮಯದಲ್ಲಿ ನಿನ್ನ ಕಡೆಯವರೆಲ್ಲರೂ ಕರ್ಣನಿಗೆ ಅದ್ಭುತ ವಿಜಯವು ಲಭಿಸಿತೆಂದು ಭಾವಿಸಿ ಚಪ್ಪಾಳೆಗಳನ್ನು ತಟ್ಟಿದರು; ಸಿಂಹನಾದಗಳನ್ನೂ ಮಾಡಿದರು. ಆ ಯುದ್ಧದಲ್ಲಿ ಕೃಷ್ಣಾರ್ಜುನರು ಕರ್ಣನ ವಶರಾಗಿಹೋದರೆಂದೇ ಎಲ್ಲ ಸೈನಿಕರೂ ಭಾವಿಸಿದರು.

ಕರ್ಣನ ಬಾಣಗಳಿಂದ ಕ್ಷತ-ವಿಕ್ಷತವಾದ ಶರೀರವುಳ್ಳವನಾಗಿದ್ದ, ಅತಿ ಕ್ರುದ್ಧನಾಗಿದ್ದ ಅರ್ಜುನನು–ಧನುಸ್ಸನ್ನು ಬಗ್ಗಿಸಿ, ಶಿಂಜಿನಿಯನ್ನು ಸೆಳೆದು ಕಟ್ಟಿ, ಕರ್ಣನು ಬಿಟ್ಟ ಬಾಣಗಳೆಲ್ಲವನ್ನೂ ಬಹಳ ಬೇಗ ನಿರಸನಗೊಳಿಸಿ, ಮುಂದೆ ಬರದಂತೆ ಕೌರವಯೋಧರನ್ನು ತಡೆದು ನಿಲ್ಲಿಸಿದನು. ಅನಂತರ ಕಿರೀಟಧಾರಿಯಾದ ಅರ್ಜುನನು ಮೌರ್ವಿಯನ್ನು ಚೆನ್ನಾಗಿ ಉಜ್ಜಿ, ಕರ್ಣನು ಕೈಗಳಿಗೆ ಹಾಕಿಕೊಂಡಿದ್ದ ಚರ್ಮದ ಚೀಲಗಳನ್ನು ಕತ್ತರಿಸಿದನು. ಅಸಂಖ್ಯಾತವಾದ ಬಾಣಗಳನ್ನು ಪ್ರಯೋಗಿಸಿ ಅಂಧಕಾರವನ್ನೇ ಕಲ್ಪಿಸಿದನು. ಬಳಿಕ ಕಿರೀಟಿಯು ನಿಶಿತವಾದ ಬಾಣಗಳಿಂದ ಕರ್ಣನನ್ನೂ, ಶಲ್ಯನನ್ನೂ

ಮತ್ತು ಇತರ ಕುರುಮುಖ್ಯರನ್ನೂ ಬಲಪೂರ್ವಕವಾಗಿ ಗಾಯಗೊಳಿಸಿ ದನು. ಅರ್ಜುನನು ಮಹಾಸ್ತ್ರದಿಂದ ಅಂಧಕಾರವನ್ನು ಕಲ್ಪಿಸಿದುದರಿಂದ ಅಂತರಿಕ್ಷದಲ್ಲಿ ಪಕ್ಷಿಗಳೂ ತಮ್ಮ ಹಾರಾಟವನ್ನು ನಿಲ್ಲಿಸಿದುವು. ಅಂತರಿಕ್ಷ ದಲ್ಲಿದ್ದ ಪ್ರಾಣಿಗಳ ಸಮೂಹಗಳಿಂದ ಪ್ರೇರಿತನಾದ ವಾಯುವು ದಿವ್ಯವಾದ ಸುಗಂಧವನ್ನು ಹೊತ್ತು ಸರ್ವತ್ರ ಸಂಚರಿಸಿದನು. ಪಾರ್ಥನು ನಗು-ನಗುತ್ತಲೇ ಶಲ್ಯನನ್ನು ಹತ್ತು ಬಾಣಗಳಿಂದ ಗಾಢವಾಗಿ ಪ್ರಹರಿಸಿ ಅವನ ಕವಚವನ್ನೂ ಭಗ್ನಗೊಳಿಸಿದನು. ಮಹಾತ್ಮನಾದ ಕರ್ಣನನ್ನು ಸುಪ್ರಮುಕ್ತವಾದ ಹನ್ನೆರಡು ಬಾಣಗಳಿಂದ ಪ್ರಹರಿಸಿ ಪುನಃ ಏಳು ಬಾಣಗಳಿಂದಲೂ ಪ್ರಹರಿಸಿದನು. ಅರ್ಜುನನ ಧನುಸ್ಸಿನಿಂದ ಅತ್ಯಂತ ವೇಗವಾಗಿ ಹೊರಟ, ಭಯಂಕರವೇಗದಿಂದ ಕೂಡಿದ್ದ ಬಾಣಗಳಿಂದ ಬಹಳವಾಗಿ ಗಾಯಗೊಂಡ ಕರ್ಣನು ಭಗ್ನವಾದ ಶರೀರವುಳ್ಳವನಾಗಿ, ರಕ್ತದಿಂದ ತೋಯ್ದುಹೋದ ಅವಯವಗಳಿಂದ ಕೂಡಿ–ಶ್ಮಶಾನದ ಮಧ್ಯದಲ್ಲಿ ರೌದ್ರಮುಹೂರ್ತದಲ್ಲಿ ಕ್ರೀಡೆಯಾಡುವ, ಬಾಣದಿಂದ ವ್ಯಾಪ್ತವಾದ, ರಕ್ತದಿಂದ ತೋಯ್ದ ಶರೀರ ವನ್ನು ಧರಿಸಿರುವ ರುದ್ರದೇವನಂತೆಯೇ–ಪ್ರಕಾಶಿಸಿದನು. ಅನಂತರ ಕರ್ಣನು ಇಂದ್ರೋಪಮನಾದ ಧನಂಜಯನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಶ್ರೀಕೃಷ್ಣನನ್ನೂ ಸಂಹರಿಸುವ ಇಚ್ಛೆಯಿಂದ ಪ್ರಜ್ವಲಿಸುವ ಸರ್ಪಗಳೋಪಾದಿಯಲ್ಲಿದ್ದ ಐದು ಬಾಣಗಳನ್ನು ಅವನ ಶರೀರದಲ್ಲಿ ನೆಟ್ಟನು. ಸುವರ್ಣದಿಂದ ಚಿತ್ರಿತವಾಗಿದ್ದ ಸುಪ್ರಮುಕ್ತವಾದ ಆ ಬಾಣಗಳು ಪುರು ಷೋತ್ತಮನಾದ ಶ್ರೀಕೃಷ್ಣನ ಕವಚವನ್ನು ಭೇದಿಸಿಕೊಂಡು ಭೂಮಿಯ ಮೇಲೆ ಬಿದ್ದುವು. ವೇಗಯುಕ್ತವಾಗಿದ್ದ ಆ ಬಾಣಗಳು ಭೂಮಿಯನ್ನು ಬಹಳ ಆಳದವರೆಗೂ ಕೊರೆದುಕೊಂಡು ಹೋಗಿ ಪಾತಾಳಗಂಗೆಯಲ್ಲಿ ಸ್ನಾನಮಾಡಿ ಪುನಃ ಕರ್ಣನಿಗೆ ಅಭಿಮುಖವಾಗಿ ತೆರಳಿದುವು. ಅರ್ಜುನನು ಕರ್ಣನ ಸಮೀಪಕ್ಕೆ ವೇಗವಾಗಿ ಹೋಗುತ್ತಿದ್ದ ಆ ಐದು ಬಾಣಗಳನ್ನೂ ಸುಪ್ರ ಮುಕ್ತವಾದ ಹತ್ತು ಬಾಣಗಳಿಂದ ಒಂದೊಂದು ಬಾಣವನ್ನು ಮೂರು-ಮೂರು ತುಂಡುಗಳಾಗಿ ಕತ್ತರಿಸಿದನು. ಆದರೆ ಮರಣಕಾಲದಲ್ಲಿ ಅವುಗಳು ಸರ್ಪಗಳ ರೂಪವನ್ನು ತಾಳಿದುವು. ಆ ಐದು ಮಹಾಸರ್ಪಗಳೂ ತಕ್ಷಕನ ಮಗನಾದ ಅಶ್ವಸೇನನ ಪಕ್ಷಕ್ಕೆ ಸೇರಿದ್ದ ಸರ್ಪಗಳೇ ಆಗಿದ್ದುವು. ಕರ್ಣನ

ಭುಜಗಳಿಂದ ಪ್ರಮುಕ್ತವಾದ ಆ ಐದು ಸರ್ಪಬಾಣಗಳಿಂದ ಕೃಷ್ಣನು ಭಿನ್ನಾಂಗನಾದುದನ್ನು ನೋಡಿ ಕಿರೀಟಮಾಲಿಯಾದ ಅರ್ಜುನನು–ಹುಲ್ಲು ಮೆದೆಯನ್ನು ಸುಡುವ ಅಗ್ನಿಯೋಪಾದಿಯಲ್ಲಿ–ರೋಷದಿಂದ ಪ್ರಜ್ವಲಿಸಿದನು. ಕಿವಿಯ ತುದಿಯವರೆಗೂ ಸೆಳೆದುಬಿಟ್ಟ, ಶರೀರವನ್ನು ವಿನಾಶಗೊಳಿಸಲು ಸಮರ್ಥವಾದ, ಪ್ರಜ್ವಲಿಸುತ್ತಿದ್ದ ಬಾಣಗಳಿಂದ ಕರ್ಣನ ಮರ್ಮಸ್ಥಳಗಳಲ್ಲಿ ಪ್ರಹರಿಸಿದನು. ಆ ಸಮಯದಲ್ಲಿ ಕರ್ಣನು ವೇದನೆಯಿಂದ ತತ್ತರಿಸಿಹೋದನು. ಆದರೆ ಧೈರ್ಯಬುದ್ಧಿಯವನಾದ ಕರ್ಣನು ದೈವಯೋಗದಿಂದ ಹಾಗೆಯೇ ರಥದಲ್ಲಿ ಕುಳಿತಿದ್ದನು.

ಧನಂಜಯನು ಕೋಪಗೊಳ್ಳಲಾಗಿ–ಹಿಮಕಣಗಳಿಂದಲೂ ಮತ್ತು ಮಂಜಿನಿಂದಲೂ ಆಚ್ಛಾದಿತವಾದ ಆಕಾಶದಂತೆ–ಅರ್ಜುನನು ಬಿಟ್ಟ ಬಾಣಗಳ ಸಮೂಹಗಳಿಂದ ದಿಕ್ಕುಗಳೂ, ಉಪದಿಕ್ಕುಗಳೂ, ಸೂರ್ಯನ ಪ್ರಭೆಯೂ, ಕರ್ಣನ ರಥವೂ ಅದೃಶ್ಯವಾದುವು. ಕುರುಶ್ರೇಷ್ಠನಾದ, ಏಕೈಕವೀರನಾದ, ಶತ್ರುಹಂತಕನಾದ ಅರ್ಜುನನು– ಕರ್ಣನ ರಥದ ಚಕ್ರರಕ್ಷಕರನ್ನೂ, ಪಾದರಕ್ಷಕರನ್ನೂ, ಕರ್ಣನ ಮುಂಭಾಗದಲ್ಲಿದ್ದವರನ್ನೂ, ಹಿಂಭಾಗದಲ್ಲಿದ್ದ ರಕ್ಷಕರನ್ನೂ ಕೌರವರ ಸೈನ್ಯದಲ್ಲಿ ಸಾರಭೂತರಾದ ಪ್ರಮುಖರಥಿಗಳನ್ನೂ, ದುರ್ಯೋಧನನ ಆಜ್ಞಾಧಾರಿಗಳಾಗಿ ಕರ್ಣನನ್ನು ರಕ್ಷಣೆಮಾಡಲು ಬಂದವರನ್ನೂ, ಸದಾಕಾಲದಲ್ಲಿಯೂ ಯುದ್ಧೋದ್ಯತರಾಗಿದ್ದವರನ್ನೂ ಸಂಹರಿಸಿದನು. ರಥಾಶ್ವ-ಸೂತಸಹಿತರಾದ ಇಂತಹ ಎರಡು ಸಾವಿರ ಕೌರವಯೋಧರನ್ನೂ ಅರ್ಜುನನು ಕ್ಷಣಮಾತ್ರದಲ್ಲಿ ಧ್ವಂಸ ಮಾಡಿದನು. ಅದನ್ನು ನೋಡಿದ ಅಳಿದುಳಿದಿದ್ದ ಕುರುಸೈನಿಕರೂ ಮತ್ತು ನಿನ್ನ ಮಕ್ಕಳೂ ಭೀತರಾಗಿ, ಹತರಾದವರನ್ನೂ, ಬಾಣಗಳಿಂದ ಗಾಯಗೊಂಡವರನ್ನೂ, ಗಾಯಗೊಂಡು ಕೂಗಿಕೊಳ್ಳುತ್ತಿದ್ದ ತಮ್ಮ ಮಕ್ಕಳನ್ನೂ, ಪಿತೃಗಳನ್ನೂ ಮತ್ತು ಕರ್ಣನನ್ನೂ ಉಪೇಕ್ಷಿಸಿ ಪಲಾಯನಮಾಡಿದರು.

ಮಹಾರಾಜ! ಭಯದಿಂದ ಭಗ್ನರಾದ ಕುರುಸೈನಿಕರಿಂದ ವಿಹೀನವಾಗಿದ್ದ ರಣಭೂಮಿಯನ್ನೂ, ಶೂನ್ಯವಾದ ದಿಕ್ಕುಗಳನ್ನೂ ನೋಡಿಯೂ

ಕರ್ಣನು ಆ ಸಮಯದಲ್ಲಿ ವ್ಯಥಿತನಾಗಲಿಲ್ಲ. ಪ್ರಹೃಷ್ಟನಾಗಿಯೇ ಅರ್ಜುನನನ್ನು ಪುನಃ ಆಕ್ರಮಿಸಿದನು.”

೬೯ನೆಯ ಅಧ್ಯಾಯವು ಮುಗಿಯಿತು.

೯೦ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣಾರ್ಜುನರ ಘೋರಯುದ್ಧ; ಶ್ರೀಕೃಷ್ಣನು ಅರ್ಜುನನನ್ನು ಸರ್ಪಾಸ್ತ್ರದಿಂದ ರಕ್ಷಿಸಿದುದು; ಕರ್ಣನು ತನ್ನ ರಥಚಕ್ರಗಳು ಭೂಮಿಯಲ್ಲಿ ಹುದುಗಿಕೊಂಡಿರುವ ಸಮಯದಲ್ಲಿ ಬಾಣಬಿಡದಂತೆ ಅರ್ಜುನನನ್ನು ಅನುರೋಧಿಸಿದುದು

ಸಂಜಯನು ಕರ್ಣಾರ್ಜುನರ ಯುದ್ಧವನ್ನು ವರ್ಣಿಸುತ್ತಾ ಹೇಳುತ್ತಾನೆ:

“ಧೃತರಾಷ್ಟ್ರಮಹಾರಾಜ! ಪಲಾಯನಮಾಡುತ್ತಿದ್ದ ಚದುರಿಹೋದ ಕೌರವಸೈನಿಕರು ಅರ್ಜುನನ ಬಾಣಗಳು ಬೀಳುವ ಸ್ಥಳವನ್ನು ಅತಿಕ್ರಮಿಸಿ ಹೋಗಿ ಅಲ್ಲಿ ನಿಂತುಕೊಂಡರು. ಅಲ್ಲವರು ಧನಂಜಯನು ಬಿಟ್ಟ ವಿದ್ಯುತ್ಪ್ರಕಾಶಯುಕ್ತವಾದ ಮಹಾಸ್ತ್ರವು ಕ್ಷಣ-ಕ್ಷಣಕ್ಕೂ ವರ್ಧಿಸುತ್ತಿರುವುದನ್ನು ನೋಡಿದರು. ಆ ಮಹಾಸಮರದಲ್ಲಿ ಕರ್ಣನನ್ನು ಸಂಹರಿಸುವ ಸಲುವಾಗಿ ಕುಪಿತನಾದ ಅರ್ಜುನನಿಂದ ಶೀಘ್ರವಾಗಿ ಬಿಡಲ್ಪಡುತ್ತಿದ್ದ ಮಹಾಸ್ತ್ರಗಳನ್ನು ಕರ್ಣನು ಆಕಾಶದಲ್ಲಿಯೇ ಘೋರತರವಾದ ಬಾಣಗಳಿಂದ ನುಂಗಿ (ಕತ್ತರಿಸಿ) ಹಾಕುತ್ತಿದ್ದನು. ಕರ್ಣನು ಸುದೃಢವಾದ ಮೌರ್ವಿಯಿಂದ ಕೂಡಿದ್ದ ಅಮೋಘವಾದ ಧನುಸ್ಸನ್ನು ಟೇಂಕರಿಸುತ್ತಾ ಬಾಣಗಳ ಸಮೂಹಗಳನ್ನೇ ಶತ್ರುಗಳ ಮೇಲೆ ಸುರಿಸುತ್ತಿದ್ದನು. ಅರ್ಜುನನಿಂದ ಬಿಡಲ್ಪಡುತ್ತಿದ್ದ, ಸೈನಿಕರನ್ನು ದಹಿಸುತ್ತಿದ್ದ ಅಸ್ತ್ರಗಳನ್ನು ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಬಾಣಗಳಿಂದ ಧ್ವಂಸಮಾಡುತ್ತಿದ್ದನು.

ಕರ್ಣನು ಮಹಾತ್ಮನಾದ ಪರಶುರಾಮನಿಂದ ಪಡೆದುಕೊಂಡು, ಮಹಾ

ಮಹಿಮೆಯಿಂದ ಕೂಡಿದ್ದ, ಶತ್ರುನಾಶಕವಾದ ಅಥರ್ವಣಾಸ್ತ್ರವನ್ನು ಪ್ರಕಟಿಸಿ ಕೌರವಸೈನ್ಯವನ್ನು ದಹಿಸುತ್ತಿದ್ದ ಅರ್ಜುನನ ಅಸ್ತ್ರವನ್ನು ನಿಶಿತವಾದ ಬಾಣಗಳಿಂದ ಧ್ವಂಸಮಾಡಿದನು. ಅನಂತರ–ಉಗ್ರವಾದ ವಿಷಾಣಗಳಿಂದ ಎರಡು ಮದಿಸಿದ ಆನೆಗಳು ಸೆಣೆಸುವಂತೆ–ಪರಸ್ಪರವಾಗಿ ಬಾಣಗಳಿಂದ ಆಕ್ರಮಣನಡೆಸುತ್ತಿದ್ದ ಕರ್ಣಾರ್ಜುನರ ನಡುವೆ ಪುನಃ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಕರ್ಣಾರ್ಜುನರಿಬ್ಬರೂ ಬಿಡುತ್ತಿದ್ದ ಅಸ್ತ್ರಗಳ ಸಮೂಹಗಳಿಂದ ಆಚ್ಛಾದಿತವಾಗಿದ್ದ ಆ ಎಲ್ಲ ಪ್ರದೇಶಗಳೂ ಆ ಸಮಯದಲ್ಲಿ ಬಹಳ ಭಯಂಕರವಾಗಿ ಕಾಣುತ್ತಿದ್ದುವು. ಕರ್ಣ-ಪಾರ್ಥರು ಶರವೃಷ್ಟಿಗಳ ಸಮೂಹಗಳಿಂದ ಆಕಾಶವನ್ನೇ ಅಂತರರಹಿತವನ್ನಾಗಿ ಮಾಡಿದರು. (ಬಾಣಗಳು ಆಕಾಶದಲ್ಲಿ ತುಂಬಿಕೊಂಡಿದ್ದುವು.) ಕುರು-ಸೋಮಕಸೈನಿಕರು ಎಲ್ಲ ಕಡೆಗಳಲ್ಲಿಯೂ ದೊಡ್ಡದಾದ ಬಾಣಮಯ ಸಮೂಹಗಳನ್ನು ಮಾತ್ರವೇ ಕಾಣುತ್ತಿದ್ದರು. ಭಯಂಕರವಾದ ಆ ಬಾಣಾಂಧಕಾರದಲ್ಲಿ ಅವರು ಬೇರೆ ಯಾವ ಪ್ರಾಣಿಯನ್ನೂ ಕಾಣಲು ಸಾಧ್ಯವಾಗಲಿಲ್ಲ. ಮಹಾಧನುರ್ಧಾರಿಗಳಾದ ಕರ್ಣಾರ್ಜುನರು ನಿರಂತರವಾಗಿ ಅನುಸಂಧಾನಮಾಡುತ್ತಾ ಅನೇಕಬಾಣಗಳನ್ನು ಅನವರತವಾಗಿ ಪ್ರಯೋಗಿಸುತ್ತಿದ್ದರು. ಸಿದ್ಧಿಯನ್ನು ಪಡೆದುಕೊಂಡಿದ್ದ ವಿಧ-ವಿಧವಾದ ಅಸ್ತ್ರಗಳಿಂದ ಚಿತ್ರ-ವಿಚಿತ್ರವಾದ ಗತಿಗಳನ್ನು ತೋರಿಸುತ್ತಿದ್ದರು. (ಬಾಣಪ್ರಹರಣಗಳಲ್ಲಿನ ವೈಖರಿಯನ್ನು ತೋರಿಸುತ್ತಿದ್ದರು.) ರಣಾಂಗಣದ ಮಧ್ಯದಲ್ಲಿ ಅವರಿಬ್ಬರೂ ಹೀಗೆ ಯುದ್ಧಮಾಡುತ್ತಿದ್ದಾಗ ವೀರ್ಯ, ಅಸ್ತ್ರಪ್ರಯೋಗ, ಮಾಯಾವಿದ್ಯೆ ಮತ್ತು ಪೌರುಷಗಳಲ್ಲಿ ಕೆಲವೊಂದು ವೇಳೆ ಕರ್ಣನು ಅರ್ಜುನನನ್ನು ಅತಿಶಯಿಸುತ್ತಿದ್ದನು. ಮತ್ತೊಂದು ಸಮಯದಲ್ಲಿ ಅರ್ಜುನನು ಕರ್ಣನಿಗಿಂತಲೂ ಮಿಗಿಲಾಗಿ ಯುದ್ಧಮಾಡುತ್ತಿದ್ದನು. ಯುದ್ಧದಲ್ಲಿ ಛಿದ್ರಾನ್ವೇಷಣಮಾಡುತ್ತಿದ್ದ, ಮಹಾಘೋರವಾದ, ಬೇರೆಯವರಿಂದ ಸಹಿಸಿಕೊಳ್ಳಲು ಅಸಾಧ್ಯವಾದ ಆ ಇಬ್ಬರು ಮಹಾವೀರರ ಆಘಾತ-ಪ್ರತ್ಯಾಘಾತಗಳನ್ನು ನೋಡಿ ಎಲ್ಲ ಯೋಧರೂ ಅತ್ಯಂತವಿಸ್ಮಿತರಾದರು ನರೇಂದ್ರ! ಆ ಸಮಯದಲ್ಲಿ ಅಂತರಿಕ್ಷದಲ್ಲಿದ್ದ ಎಲ್ಲ ಪ್ರಾಣಿಗಳೂ ಕರ್ಣ-ಪಾರ್ಥರಿಬ್ಬರನ್ನೂ ಪ್ರಶಂಸೆಮಾಡಿದುವು. 'ಭೋ ಕರ್ಣ! ಸಾಧು ! ಭೋ ಅರ್ಜುನ!

ಸಾಧು'–ಎಂಬ ವಾಣಿಯು ಆಕಾಶದ ಎಲ್ಲ ಕಡೆಗಳಿಂದಲೂ ಕೇಳಿಬರುತ್ತಿದ್ದಿತು. ಭಯಂಕರವಾದ ಆ ಮಹಾಯುದ್ಧದಲ್ಲಿ ಸಂಪೂರ್ಣವಾಗಿ ನಾಶ ಹೊಂದಿದ್ದ ರಥಾಶ್ವ-ಗಜಗಳಿಂದ ಭೂಮಿಯೇ ಸೀಳಿಹೋಯಿತು.

ಆ ಸಮಯದಲ್ಲಿ ಹಿಂದೆ ಖಾಂಡವದಾಹಸಮಯದಲ್ಲಿ ತಪ್ಪಿಸಿಕೊಂಡಿದ್ದ ಅಶ್ವಸೇನನು ಪಾತಾಳಲೋಕದಲ್ಲಿದ್ದನು. ಅವನು ಅರ್ಜುನನನ್ನು ಬಹಳವಾಗಿ ದ್ವೇಷಿಸುತ್ತಿದ್ದನು. ಕರ್ಣಾರ್ಜುನರಿಗೆ ಯುದ್ಧವಾಗುತ್ತಿರುವ ಸಮಾಚಾರವನ್ನು ತಿಳಿದ ಅಶ್ವಸೇನನು ಮಹಾಕೋಪಯುಕ್ತನಾಗಿ ವಸುಧಾತಲವನ್ನು ಪ್ರವೇಶಿಸಿದನು. ಊರ್ಧ್ವಗತಿಯಾದ (ಆಕಾಶದಲ್ಲಿ ಹಾರುವ ಸಾಮರ್ಥ್ಯವನ್ನು ಹೊಂದಿದ್ದ) ಅಶ್ವಸೇನನು ಬಹಳ ಬೇಗ ಮೇಲಕ್ಕೆ ಹಾರಿಬಂದು ಯುದ್ಧಸ್ಥಳವನ್ನು ಸೇರಿದನು.

'ದುರಾತ್ಮನಾದ ಪಾರ್ಥನ ಮೇಲಿನ ವೈರಕ್ಕೆ ಸರಿಯಾದ ಪ್ರತೀಕಾರ ಮಾಡಲು ಇದೇ ಯೋಗ್ಯವಾದ ಸಮಯವಾಗಿದೆ'–ಹೀಗೆಂದು ಅಶ್ವಸೇನನು ಯೋಚಿಸಿ ಬಹಳ ಬೇಗ ಬಾಣದ ರೂಪವನ್ನು ಧರಿಸಿ ಕರ್ಣನ ಬತ್ತಳಿಕೆಯೊಳಗೆ ಸೇರಿಕೊಂಡನು. ಕರ್ಣಾರ್ಜುನರ ಪರಸ್ಪರವಾದ ಅಸ್ತ್ರಗಳ ಸಂಪಾತಗಳಿಂದ ಸಮಾಕುಲವಾಗಿದ್ದ ಆ ಸಂಪೂರ್ಣಪ್ರದೇಶವೂ ಎಲ್ಲ ಕಡೆಗಳಲ್ಲಿಯೂ ವ್ಯಾಪ್ತವಾಗಿರುವ ಆಯುಧಗಳ ಕಿರಣಗಳ ಸಮೂಹಗಳಿಂದ ತುಂಬಿದ್ದಿತು. ಆ ಸಮಯದಲ್ಲಿ ಕರ್ಣ-ಪಾರ್ಥರು ಶರಸಮೂಹಗಳ ಸುರಿಸುವಿಕೆಯಿಂದ ಆಕಾಶವನ್ನು ಸ್ವಲ್ಪವಾದರೂ ಸ್ಥಳವೇ ಇಲ್ಲದುದನ್ನಾಗಿ ಮಾಡಿದ್ದರು. ಸರ್ವತ್ರ ಒಂದೇ ಬಾಣಜಾಲಮಯವಾಗಿಬಿಟ್ಟಿದ್ದಿತು. ಅದನ್ನು ನೋಡಿ ಕುರು-ಸೋಮಕರೆಲ್ಲರೂ ಬಹಳವಾಗಿ ಭಯಗೊಂಡರು. ಅತಿಗಾಢವಾಗಿದ್ದ ಆ ಬಾಣಾಂಧಕಾರದಲ್ಲಿ ಬೇರೆ ಯಾವುದೂ ಬೀಳುತ್ತಿರುವುದೆಂಬ ಅರಿವೂ ಅವರಿಗುಂಟಾಗಲಿಲ್ಲ. ಸರ್ವಲೋಕಗಳಲ್ಲಿಯೂ ಸುವಿಖ್ಯಾತಧನುರ್ಧಾರಿಗಳಾದ, ಪುರುಷವ್ಯಾಘ್ರರಾದ, ಮಹಾವೀರರಾದ, ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುತ್ತಿದ್ದ ಕರ್ಣಾರ್ಜುನರು ಅನವರತವಾದ ಯುದ್ಧದಿಂದ ಬಳಲಿದರು. ಆ ಸಮಯದಲ್ಲಿ ಅಂತರಿಕ್ಷದಲ್ಲಿದ್ದ ಅಪ್ಸರೆಯರು ಶ್ರೀಗಂಧದ ನೀರಿನಿಂದ ಸಿಂಪಡಿಸಲ್ಪಟ್ಟ ದಿವ್ಯವಾದ ವಾಲವ್ಯಜನ

(ಚಾಮರ)ಗಳಿಂದ ಬೀಸುತ್ತಾ ಕರ್ಣಾರ್ಜುನರನ್ನು ಸೇವಿಸಿದರು. ಇಂದ್ರ-ಸೂರ್ಯರು ಕಮಲಕ್ಕೆ ಸಮಾನವಾದ ತಮ್ಮ ಕೈಗಳಿಂದ ಕರ್ಣಾರ್ಜುನರ ಮುಖಗಳನ್ನು ಒರೆಸಿದರು. ಯಾವಾಗ ಕರ್ಣನು ಪಾರ್ಥನನ್ನು ಅತಿಶಯಿಸಲಿಲ್ಲವೋ, ಕ್ಷಣ-ಕ್ಷಣಕ್ಕೂ ಪಾರ್ಥನದೇ ಮೇಲುಗೈ ಆಗುತ್ತಿದ್ದಿತೋ–ಆಗ ಪಾರ್ಥನ ಬಾಣಗಳಿಂದ ಬಹಳವಾಗಿ ಪೀಡಿತನಾಗಿದ್ದ ಕರ್ಣನು ಪ್ರತ್ಯೇಕವಾಗಿದ್ದ ಸರ್ಪಮುಖದ ಬಾಣವನ್ನು ಅರ್ಜುನನ ಮೇಲೆ ಪ್ರಯೋಗಿಸಲು ನಿಶ್ಚಯಿಸಿದನು. ಶತ್ರುನಾಶಕವಾದ, ಬಹಳ ಹಿಂದೆಯೇ ಸಂಚಯಿಸಿ ಇಟ್ಟುಕೊಂಡಿದ್ದ, ಸರ್ಪದ ಮುಖವನ್ನು ಹೊಂದಿದ್ದ, ಪ್ರಜ್ವಲಿಸುತ್ತಿದ್ದ, ಬಹಳ ಭಯಂಕರವಾಗಿದ್ದ, ಬಗ್ಗಿದ್ದ, ಉಗ್ರವಾಗಿದ್ದ, ಎಣ್ಣೆಯಿಂದ ಹದಮಾಡಲ್ಪಟ್ಟಿದ್ದ, ಅರ್ಜುನನನ್ನು ಸಂಹರಿಸುವ ಸಲುವಾಗಿಯೇ ಬಹಳ ಕಾಲದಿಂದಲೂ ರಕ್ಷಿಸಿಟ್ಟುಕೊಂಡಿದ್ದ, ಯಾವಾಗಲೂ ಅರ್ಚಿಸಲ್ಪಡುತ್ತಿದ್ದ, ಸುವರ್ಣಮಯವಾದ ಬತ್ತಳಿಕೆಯಲ್ಲಿ ಚಂದನಚೂರ್ಣದ ಮಧ್ಯಭಾಗದಲ್ಲಿಡಲ್ಪಟ್ಟಿದ್ದ, ಮಹಾಜ್ವಾಲೆಯಿಂದ ಕೂಡಿದ್ದ ಆ ಬಾಣವನ್ನು ಮಹಾತೇಜಸ್ವಿಯಾದ ಕರ್ಣನು ಧನುಸ್ಸಿನಲ್ಲಿ ಅನುಸಂಧಾನಮಾಡಿ, ಕಿವಿಯ ತುದಿಯವರೆಗೂ ಸೆಳೆದು ಪಾರ್ಥನಿಗೆದುರಾಗಿ ಗುರಿಯಿಟ್ಟು ಹೊಡೆದನು. ಯುದ್ಧದಲ್ಲಿ ಸವ್ಯಸಾಚಿಯ ಶಿರಸ್ಸನ್ನು ಅಪಹರಿಸಲು ಇಚ್ಛಿಸಿದ್ದ, ದೀಪ್ಯಮಾನವಾಗಿ ಕಾಣುತ್ತಿದ್ದ ಆ ಬಾಣವು ಸರ್ಪರಾಜನಾದ, ಐರಾವತವಂಶದಲ್ಲಿ ಹುಟ್ಟಿದ ಅಶ್ವಸೇನನೇ ಆಗಿದ್ದನು. ಆ ಬಾಣದ ಕಾಂತಿಯಿಂದಾಗಿ ದಿಕ್ಕುಗಳೂ ಮತ್ತು ಆಕಾಶವೂ ಪ್ರಜ್ವಲಿಸಿದುವು. ಘೋರವಾದ ನೂರಾರು ಉಲ್ಕೆಗಳೂ ಆಕಾಶದಿಂದ ಕೆಳಕ್ಕೆ ಬಿದ್ದುವು. ಬಾಣರೂಪನಾಗಿದ್ದ ನಾಗನನ್ನು ಧನುಸ್ಸಿನಲ್ಲಿ ಅನುಸಂಧಾನ ಮಾಡಲಾಗಿ ಇಂದ್ರನೊಡನೆ ಲೋಕಪಾಲಕರು ಹಾಹಾಕಾರಮಾಡಿದರು. ಯೋಗಬಲ ದಿಂದ ಅಶ್ವಸೇನನಾಗನು ಬಾಣವನ್ನು ಪ್ರವೇಶಿಸಿರುವ ವಿಷಯವು ಕರ್ಣನಿಗೂ ತಿಳಿದಿರಲಿಲ್ಲ.

**ದಶಶತನಯನೋಽಹಿಂ ದೃಶ್ಯ ಬಾಣೇ ಪ್ರವಿಷ್ಟಂ**
**ನಿಹತ ಇತಿ ಸುತೋ ಮೇ ಸ್ರಸ್ತಗಾತ್ರೋ ಬಭೂವ ।**

ಜಲಜಕುಸುಮಯೋನಿಃ ಶ್ರೇಷ್ಠಭಾವೋ ಜಿತಾತ್ಮಾ
ತ್ರಿದಶಪತಿಮವೋಚನ್ಮಾ ವ್ಯಥಿಷ್ಠಾ ಜಯೇ ಶ್ರೀಃ ॥

ಸಹಸ್ರಾಕ್ಷನು, ಅಶ್ವಸೇನನಾಗನು ಯೋಗಶಕ್ತಿಯಿಂದ ಬಾಣದಲ್ಲಿ ಪ್ರವೇಶಿಸಿದುದನ್ನು ಕಂಡು–'ನನ್ನ ಮಗನು ಹತನಾದನು'–ಎಂದೇ ಭಾವಿಸಿ ಶಿಥಿಲವಾದ ಶರೀರವುಳ್ಳವನಾದನು. (ಅವನ ಮೈ ನಡುಗಿ ಬೆವರಿಟ್ಟಿತು.) ಶ್ರೇಷ್ಠ ಸ್ವಭಾವದವನಾದ, ಜಿತಾತ್ಮನಾದ, ಕಮಲಯೋನಿಯಾದ (ವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದ) ಬ್ರಹ್ಮನು ವಿಜಯನಿಗೇ ಜಯವು ಲಭಿಸುವುದೆಂದೂ–ವ್ಯಥೆಪಡಬಾರದೆಂದೂ ಇಂದ್ರನಿಗೆ ಸಮಾಧಾನ ಹೇಳಿದನು.

ಇತ್ತಲಾಗಿ ಕರ್ಣನು ಧನುಸ್ಸಿನಲ್ಲಿ ಉಗ್ರವಾದ ಆ ಸರ್ಪಬಾಣವನ್ನು ಅನುಸಂಧಾನಮಾಡಿ ಅರ್ಜುನನ ಕಡೆಗೆ ಗುರಿಯಿಟ್ಟುದುದನ್ನು ಕಂಡು ಮಹಾತ್ಮನಾದ ಮದ್ರರಾಜನು ಕರ್ಣನೊಡನೆ ಹೇಳಿದನು: "ನೀನಿಟ್ಟಿರುವ ಗುರಿಯನ್ನು ನೋಡಿದರೆ ಈ ಬಾಣವು ಅರ್ಜುನನ ಕುತ್ತಿಗೆಗೆ ತಾಗುವುದಿಲ್ಲ. ಆದುದರಿಂದ ಸಮಾಲೋಚಿಸಿ ಬಾಣವು ಅರ್ಜುನನ ಕತ್ತನ್ನು ಕತ್ತರಿಸುವ ರೀತಿಯಲ್ಲಿ ಪುನಃ ಅನುಸಂಧಾನಮಾಡು."

ಶಲ್ಯನ ಆ ಸಲಹೆಯನ್ನು ಕೇಳಿದ ವೇಗವಂತನಾದ ಸೂತಪುತ್ರನು ಕ್ರೋಧದಿಂದ ಕೆಂಪಾದ ಕಣ್ಣುಳ್ಳವನಾಗಿ ಮದ್ರಾಧಿಪತಿಯೊಡನೆ ಹೇಳಿದನು:

ನ ಸಂಧತ್ತೇ ದ್ವಿಃ ಶರಂ ಶಲ್ಯ ಕರ್ಣೋ
ನ ಮಾದೃಶಾ ಜಿಹ್ಮಯುದ್ಧಾ ಭವನ್ತಿ ॥೨೬॥

"ಶಲ್ಯ! ಕರ್ಣನು ಯಾವಾಗಲೂ ಗುರಿಯನ್ನು ಎರಡು ಬಾರಿ ಇಡತಕ್ಕವನಲ್ಲ. ಒಮ್ಮೆ ಇಟ್ಟ ಗುರಿಯನ್ನು ಯಾವುದೇ ಕಾರಣದಿಂದಲೂ ಬದಲಾಯಿಸುವುದಿಲ್ಲ. ನನ್ನಂತಹವರೆಂದಿಗೂ ಮೋಸದ ಯುದ್ಧದಲ್ಲಿ ತೊಡಗುವುದಿಲ್ಲ."

ಮಹಾರಾಜ! ಕರ್ಣನು ಶಲ್ಯನೊಡನೆ ಹೀಗೆ ಹೇಳಿ ಅನೇಕ ವರ್ಷಗಳಿಂದ ಪೂಜಿಸಲ್ಪಡುತ್ತಿದ್ದ ಆ ಸರ್ಪಾಸ್ತ್ರವನ್ನು ಪ್ರಯತ್ನಪೂರ್ವಕವಾಗಿ ಅರ್ಜುನನ ಮೇಲೆ ಪ್ರಯೋಗಿಸಿದನು. 'ಫಾಲ್ಗುನ! ನೀನೀಗ ಹತನಾದೆ'–ಎಂದೂ ಕರ್ಣನು ಗಟ್ಟಿಯಾಗಿ ಉಚ್ಚಸ್ವರದಲ್ಲಿ ಕೂಗಿ ಹೇಳಿದನು.

ಮಹಾರಾಜ! ಕರ್ಣನ ಭುಜದಿಂದ ಪ್ರೇರಿತವಾಗಿ, ಕರ್ಣನ ಧನುಸ್ಸಿನಿಂದ ಪ್ರಮುಕ್ತವಾಗಿ, ಶಿಂಜಿನಿಯಿಂದ ಚ್ಯುತವಾದ ಸೂರ್ಯಾಗ್ನಿಸದೃಶವಾದ ಆ ಬಾಣವು ಅಂತರಿಕ್ಷದಲ್ಲಿ ಪ್ರಜ್ವಲಿಸುತ್ತಿದ್ದಿತು.



*ತಂ ಪ್ರೇಕ್ಷ್ಯ ದೀಪ್ತಂ ಯುಧಿ ಮಾಧವಸ್ತು
ತ್ವರಾನ್ವಿತಂ ಸತ್ವರಯೈವ ಲೀಲಯಾ ।

---

* ಒಂದು ಪುಸ್ತಕದಲ್ಲಿ ಈ ಶ್ಲೋಕಗಳಿವೆ:

ಸನ್ಧೀಯಮಾನಂ ಭುಜಗಂ ದೃಷ್ಟ್ವಾ ಕರ್ಣೇನ ಮಾಧವಃ ।
ಆಕ್ರಮ್ಯ ಸ್ಯನ್ದನಂ ಪದ್ಭ್ಯಾಂ ಬಲೇನ ಬಲಿನಾಂ ವರಃ ॥೧೦॥

ಪದಾ ವಿನಿಷ್ಪಿಷ್ಯ ರಥೋತ್ತಮಂ ಸ
ಪ್ರಾವೇಶಯತ್ಪೃಥಿವೀಂ ಕಿಂಚಿದೇವ ॥೨೯॥

ಪ್ರಜ್ವಲಿಸುತ್ತಿದ್ದ ಸರ್ಪಾಸ್ತ್ರವು ಬಹಳ ವೇಗವಾಗಿ ಬರುತ್ತಿದ್ದುದನ್ನು ಕಂಡು ಭಗವಾನ್ ಶ್ರೀಕೃಷ್ಣನು ಯುದ್ಧಸ್ಥಳದಲ್ಲಿ ಕ್ರೀಡೆಯಾಡುತ್ತಿರುವವನಂತೆ ಬೇಗನೆ ಶ್ರೇಷ್ಠವಾದ ಪಾರ್ಥನ ಆ ರಥವನ್ನು ಕಾಲಿನಿಂದ ಮೆಟ್ಟಿ ರಥಚಕ್ರದ ಸ್ವಲ್ಪ ಭಾಗವು ನೆಲದಲ್ಲಿ ಹೂತುಕೊಳ್ಳುವಂತೆ ಮಾಡಿದನು. ಚಕ್ರಗಳು ಭೂಮಿಯಲ್ಲಿ ಹೂತುಕೊಂಡೊಡನೆಯೇ ಸುವರ್ಣಮಯವಾದ ಬಲೆಗಳಿಂದ ಆಚ್ಛಾದಿತವಾಗಿದ್ದ, ಚಂದ್ರಕಿರಣಗಳ ಬಣ್ಣದಿಂದ ಪ್ರಕಾಶಿಸುತ್ತಿದ್ದ ಕುದುರೆಗಳು ಮೊಣಕಾಲುಗಳನ್ನು ಭೂಮಿಯ ಮೇಲೂರಿ ನಿಂತುಕೊಂಡುವು. ಇಂತಹ ಅತ್ಯದ್ಭುತವಾದ ಕಾರ್ಯಮಾಡಿದ ಜನಾರ್ದನನನ್ನು ಗೌರವಿಸುವ ಸಲುವಾಗಿ ಅಂತರಿಕ್ಷದಲ್ಲಿ ದೊಡ್ಡ ಕೋಲಾಹಲಶಬ್ದವಾಯಿತು. ಮಧುಸೂದನನ ಪ್ರಯತ್ನದಿಂದ ಅರ್ಜುನನ ರಥದ ಸ್ವಲ್ಪಭಾಗವು ಭೂಮಿಯಲ್ಲಿ ಹುದುಗಿಹೋಗಲಾಗಿ, ಅಂತರಿಕ್ಷದಲ್ಲಿ ಶ್ರೀಕೃಷ್ಣನ ಸ್ತುತಿವಾಕ್ಯಗಳೂ–ಸಿಂಹನಾದಗಳೂ ಕೇಳಿಬಂದುವು. ದಿವ್ಯಪುಷ್ಪಗಳ ವೃಷ್ಟಿಯಾಯಿತು. ಆ ಸರ್ಪಾಸ್ತ್ರವು ಇಂದ್ರನಿಂದ ಕೊಡಲ್ಪಟ್ಟಿದ್ದ, ಸುದೃಢವಾಗಿದ್ದ, ಧೀಮಂತನಾದ ಅರ್ಜುನನ ಕಿರೀಟವನ್ನು ಪ್ರಹರಿಸಿತು. ಅರ್ಜುನನ ಉತ್ತಮಾಂಗಕ್ಕೆ (ಶಿರಸ್ಸಿಗೆ) ಭೂಷಣವಾಗಿದ್ದ ಆ ಕಿರೀಟವು ಭೂಮ್ಯಂತರಿಕ್ಷ-ಸ್ವರ್ಗ-ಪಾತಾಳಲೋಕಗಳಲ್ಲಿಯೂ ಪ್ರಸಿದ್ಧಿಯನ್ನು ಹೊಂದಿದ್ದಿತು. ಸೂತಪುತ್ರನಾದ ಕರ್ಣನು, ಸರ್ಪಾಸ್ತ್ರದ ಉತ್ಪತ್ತಿ, ಉತ್ತಮಪ್ರಯತ್ನ ಮತ್ತು ಕ್ರೋಧಗಳ ಫಲವಾಗಿ ಆ ಮಹಾಬಾಣಪ್ರಯೋಗದಿಂದ ಸೂರ್ಯ-ಚಂದ್ರಾಗ್ನಿಗಳ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಚಿನ್ನ-ಮುತ್ತು ಮತ್ತು ವಜ್ರಗಳಿಂದ ಭೂಷಿತವಾಗಿದ್ದ, ಅರ್ಜುನನ ತಲೆಯ ಮೇಲಿದ್ದ ಕಿರೀಟವನ್ನು ಅಪಹರಿಸಿದನು. ಆ ಮಹಾಕಿರೀಟವನ್ನು ವಿಭುವಾದ ಬ್ರಹ್ಮನು ಪ್ರಯತ್ನಪೂರ್ವಕವಾಗಿ ತಪಸ್ಸುಮಾಡಿ ಇಂದ್ರನ ಸಲುವಾಗಿ ತಾನೇ ನಿರ್ಮಿಸಿದ್ದನು. ಆ ಕಿರೀಟವು ಬಹುಮೂಲ್ಯವಾಗಿದ್ದಿತು.

---

ಅವಗಾಢೇ ರಥೇ ಭೂಮೌ ಜಾನುಭ್ಯಾಮಗಮನ್ಹಯಾಃ ।
ತತಃ ಶರಃ ಸೋಽಭ್ಯಹನತ್ಕಿರೀಟಂ ತಸ್ಯ ಧೀಮತಃ ॥೧೧॥

ಸುಗಂಧದ ವಾಸನೆಯಿಂದ ಕೂಡಿದ್ದಿತು ಮತ್ತು ಧರಿಸಿದವನಿಗೆ ಅದು ಅತ್ಯಂತಸುಖಾವಹವಾಗಿದ್ದಿತು. ದೇವತೆಗಳ ಶತ್ರುಗಳಾದ ದೈತ್ಯರನ್ನು ಸಂಹರಿಸಲು ಹೊರಟಿದ್ದ ಅರ್ಜುನನಿಗೆ ಪ್ರಸನ್ನಮನಸ್ಕನಾದ ದೇವೇಂದ್ರನು ಆ ಕಿರೀಟವನ್ನು ತನ್ನ ಕೈಗಳಿಂದಲೇ ತೊಡಿಸಿದ್ದನು. ಸುರೋತ್ತಮರಾದ ಶಿವ-ವರುಣೇಂದ್ರ-ಕುಬೇರರ ಶ್ರೇಷ್ಠವಾದ ಪಿನಾಕ-ಪಾಶ-ವಜ್ರಾಯುಧ-ಬಾಣಗಳಿಂದಲೂ ಧ್ವಂಸಮಾಡಲು ಅಸಾಧ್ಯವಾಗಿದ್ದ ಆ ಮಹಾಕಿರೀಟವನ್ನು ಕರ್ಣನು ಬಲಪೂರ್ವಕವಾಗಿ ನಾಗಾಸ್ತ್ರದಿಂದ ಅಪಹರಿಸಿಬಿಟ್ಟನು. ದುಷ್ಟ ಸ್ವಭಾವದಿಂದ ಕೂಡಿದ್ದ, ಮಿಥ್ಯಾಪ್ರತಿಜ್ಞನಾದ, ವೇಗಶಾಲಿಯಾದ ನಾಗ ರಾಜನು–ಬಹುಮೂಲ್ಯವಾದ, ಸುವರ್ಣದಿಂದ ಚಿತ್ರಿತವಾಗಿದ್ದ, ಅತ್ಯದ್ಭುತ ವಾದ ಅರ್ಜುನನ ಕಿರೀಟವನ್ನು ಅವನ ಉತ್ತಮಾಂಗದಿಂದ ಅಪಹರಿಸಿದನು. ಸುವರ್ಣಮಯವಾದ ಬಲೆಯಿಂದ ಆವೃತವಾಗಿದ್ದ, ಜಾಜ್ವಲ್ಯಮಾನ ವಾಗಿದ್ದ, ಶ್ರೇಷ್ಠವಾದ ಸರ್ಪಾಸ್ತ್ರದಿಂದ ಮಥಿಸಲ್ಪಟ್ಟ, ವಿಷಾಗ್ನಿಯಿಂದ ಪ್ರದೀಪ್ತವಾಗಿದ್ದ, ಜ್ವಾಲೆಗಳಿಂದ ಕೂಡಿದ್ದ, ಪಾರ್ಥನಿಗೆ ಅತ್ಯಂತಪ್ರಿಯ ವಾಗಿದ್ದ ಆ ಶ್ರೇಷ್ಠವಾದ ಕಿರೀಟವು–ಅಸ್ತಾಚಲದಿಂದ ರಕ್ತಮಂಡಲನಾದ ಸೂರ್ಯನು ಕೆಳಕ್ಕೆ ಬೀಳುವಂತೆ–ದೊಡ್ಡ ಶಬ್ದದೊಡನೆ ಕೆಳಕ್ಕೆ ಬಿದ್ದಿತು. ಚೆನ್ನಾಗಿ ಬೆಳೆದಿರುವ, ಅಂಕುರಗಳಿಂದಲೂ ಮತ್ತು ಪುಷ್ಪಗಳಿಂದಲೂ ಸಮೃದ್ಧವಾಗಿರುವ ವೃಕ್ಷಗಳಿಂದ ಕೂಡಿರುವ ಪರ್ವತದ ಶಿಖರವನ್ನು ಇಂದ್ರನ ವಜ್ರಾಯುಧವು ಭೇದಿಸಿ ಕೆಳಕ್ಕೆ ಬೀಳಿಸುವಂತೆ–ಅನೇಕರತ್ನಗಳಿಂದ ಸಮಲಂಕೃತವಾಗಿದ್ದ ಆ ದಿವ್ಯಕಿರೀಟವನ್ನು ಅರ್ಜುನನ ತಲೆಯಿಂದ ನಾಗನು ಬಲಪೂರ್ವಕವಾಗಿ ಹಾರಿಸಿಬಿಟ್ಟನು. ಯಾವ ರೀತಿಯಲ್ಲಿ ಭೂಮಿ, ಆಕಾಶ, ಸ್ವರ್ಗ ಮತ್ತು ಜಲಗಳು ವಾಯುವಿನ ಮೂಲಕ ವೇಗಪೂರ್ವಕವಾಗಿ ಅಳ್ಳಾಡಿಸಲ್ಪಟ್ಟು ದೊಡ್ಡದಾಗಿ ಶಬ್ದಮಾಡುತ್ತವೆಯೋ–ಅದೇ ವಿಧವಾದ ಶಬ್ದವಾಗುತ್ತಿರುವುದೆಂದು ಪ್ರಪಂಚದ ಜನರು ಭಾವಿಸಿದರು ಮತ್ತು ಅದ ರಿಂದ ವ್ಯಥಿತರಾಗಿ ನಡುಗಿಹೋದರು. ಶ್ಯಾಮಲವರ್ಣದವನಾದ ನವ ಯುವಕನಾದ ಅರ್ಜುನನು ನೀಲಪರ್ವತದ ಶಿಖರದಂತೆ ಕಿರೀಟವಿಲ್ಲದೆಯೂ ಬಹಳವಾಗಿ ಪ್ರಕಾಶಿಸಿದನು. ಕಿರೀಟವು ಬಿದ್ದುಹೋದುದರಿಂದ ಸ್ವಲ್ಪ ವಾದರೂ ವ್ಯಥೆಪಡದಿದ್ದ ಅರ್ಜುನನು ತಲೆಗೂದಲುಗಳನ್ನು ಬಿಳಿಯದಾದ

ಬಟ್ಟೆಯಿಂದ ಬಿಗಿದುಕೊಂಡು–ಉದಯಾಚಲವು ಶಿಖರದ ಮೇಲೆ ಬೀಳು ತ್ತಿರುವ ಸೂರ್ಯರಶ್ಮಿಯಿಂದ ಪ್ರಕಾಶಿಸುವಂತೆ–ಬಹಳವಾಗಿ ಪ್ರಕಾಶಿಸಿ ದನು.

*ಗೋಕರ್ಣಾ ಸುಮುಖೀ ಕೃತೇನ
ಇಷುಣಾ ಗೋಪುತ್ರ ಸಮ್ಪ್ರೇಷಿತಾ
ಗೋಶಬ್ದಾತ್ಮಜಭೂಷಣಂ ಸುವಿಹಿತಂ
ಸುವ್ಯಕ್ತಗೋಽಸುಪ್ರಭಮ್ ।
ದೃಷ್ಟ್ವಾ ಗೋಗತಕಂ ಜಹಾರ
ಮುಕುಟಂ ಗೋಶಬ್ದಗೋಪೂರಿ ವೈ
ಗೋಕರ್ಣಾಸನಮರ್ದನಶ್ಚ
ನ ಯಯಾವಪ್ರಾಪ್ಯ ಮೃತ್ಯೋರ್ವಶಮ್ ॥೪೨॥

ಕಣ್ಣುಗಳೇ ಕಿವಿಯಾಗಿ ಉಳ್ಳ, ಸುಮುಖಿಯಾದ ಸರ್ಪಿಣಿಯೇ ಬಾಣ ರೂಪವನ್ನು ತಾಳಿ, ಸೂರ್ಯನ ಮಗನಾದ ಕರ್ಣನಿಂದ ಬಿಡಲ್ಪಟ್ಟು ನೇರ ವಾಗಿ ಹೋಗುತ್ತಿದ್ದಾಗ–ನಿರತಿಶಯತೇಜೋಬಲವಿಶಿಷ್ಟನಾದ ಅರ್ಜುನನು (ಅರ್ಜುನನ ರಥವು) ಭೂಮಿಯೊಳಗೆ ಹುದುಗಿಕೊಂಡುದನ್ನು ನೋಡಿ ತಾನು ಹೋಗುತ್ತಿರುವ ಗತಿಯನ್ನು ಬದಲಾಯಿಸಲಾಗದೇ ಬ್ರಹ್ಮನಿಂದ ನಿರ್ಮಿಸಲ್ಪಟ್ಟಿದ್ದ, ಅದಿತಿಯ ಮಗನಾದ ಇಂದ್ರನಿಗೆ ಭೂಷಣವಾಗಿದ್ದ, ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಅರ್ಜುನನ ಕಿರೀಟವನ್ನು ಅಪಹರಿಸಿದಳು. ತನ್ನನ್ನು ಸಂಹರಿಸಲು ಬಂದ ಸರ್ಪವನ್ನು ಬಾಣಕ್ಷೇಪದಿಂದ ಮರ್ದನಮಾಡಿದ ಅರ್ಜುನನು ಸರ್ಪವನ್ನು ಪುನಃ

---

*ಗೋಶಬ್ದವನ್ನು ನಾನಾರ್ಥಗಳಲ್ಲಿ ಉಪಯೋಗಿಸಿ ಈ ಶ್ಲೋಕವನ್ನು ರಚಿಸಿರು ತ್ತಾರೆ. ಈ ಶ್ಲೋಕವೂ ಮತ್ತು ಇದರ ಹಿಂದಿನ ಹಲವಾರು ಶ್ಲೋಕಗಳೂ ವ್ಯಾಸ ಕೃತಗಳೇ ಅಥವಾ ಅಲ್ಲವೇ? ಎಂಬುದೂ ಜಿಜ್ಞಾಸೆಯ ವಿಷಯವೇ ಆಗಿದೆ. ಈ ಅಧ್ಯಾಯದ ಹಲವಾರು ಕಡೆಗಳಲ್ಲಿ ವಿರೋಧಾಭಾಸದ ಶ್ಲೋಕಗಳಿವೆ. ಅವುಗಳನ್ನು ವಿಶ್ಲೇಷಣೆಯಲ್ಲಿ ಪ್ರಸ್ತಾಪಿಸಲಾಗುವುದು. ಈ ಶ್ಲೋಕವು ಭಂ. ರಿ. ಇನ್‌ಸ್ಟಿಟ್ಯೂಟ್ ರವರು ಪ್ರಕಟಿಸಿರುವ ಮಹಾಭಾರತ ಪ್ರತಿಯಲ್ಲಿ ಇರುವುದಿಲ್ಲ. ಈ ಶ್ಲೋಕಕ್ಕೆ

ಹೊಂದದೇ (ಸರ್ಪಾಸ್ತ್ರವನ್ನು ಮತ್ತೆ ಕರ್ಣನು ಪ್ರಯೋಗಿಸದಿದ್ದುದರಿಂದ) ಮೃತ್ಯುವಶನಾಗಲಿಲ್ಲ.

ಕರ್ಣನ ಕೈಯಿಂದ ಚ್ಯುತವಾದ ಸೂರ್ಯಾಗ್ನಿಸದೃಶವಾದ, ಬಹುಮೂಲ್ಯವಾದ, ಕರ್ಣನಿಗೆ ಬಹುಪೂಜ್ಯವಾಗಿದ್ದ ಆ ಬಾಣವು ನಿಶ್ಚಯವಾಗಿಯೂ ಒಂದು ಮಹಾಸರ್ಪವೇ ಆಗಿದ್ದಿತು. ಆ ಮಹಾಸರ್ಪವು ಅರ್ಜುನನ ಕಿರೀಟವನ್ನು ಕೆಡವಿ ಪುನಃ ಅಲ್ಲಿಂದ ಹೊರಟುಹೋಯಿತು. ಆ ಸರ್ಪಾಸ್ತ್ರವು ಸುವರ್ಣದಿಂದ ಚಿತ್ರಿತವಾಗಿ ಮಾಡಲ್ಪಟ್ಟಿದ್ದ ಅರ್ಜುನನ ಆ ಕಿರೀಟವನ್ನು ಕೆಳಕ್ಕೆ ಬೀಳಿಸಿ ಸುಟ್ಟು ಭಸ್ಮಮಾಡಿ ಪುನಃ ಕರ್ಣನ ಬತ್ತಳಿಕೆಯೊಳಗೆ ಸೇರಿಕೊಳ್ಳಲು ಇಚ್ಛಿಸಿ ಅತ್ತಕಡೆಗೆ ಹೋಗುತ್ತಿದ್ದಾಗ ಕರ್ಣನನ್ನು ಸಂಧಿಸಿ ಅವನೊಡನೆ ಹೇಳಿತು:

ಮುಕ್ತಸ್ತ್ವಯಾಹಂ ತ್ವಸಮೀಕ್ಷ್ಯ ಕರ್ಣ
ಶಿರೋ ಹೃತಂ ಯನ್ನ ಮಯಾರ್ಜುನಸ್ಯ ।
ಸಮೀಕ್ಷ್ಯ ಮಾಂ ಮುಂಚ ರಣೇ ತ್ವಮಾಶು
ಹನ್ತಾಸ್ಮಿ ಶತ್ರುಂ ತವ ಚಾತ್ಮನಶ್ಚ ॥೪೫॥

“ಕರ್ಣ! ನೀನು ಸರಿಯಾಗಿ ವಿಮರ್ಶಿಸದೇ ಅರ್ಜುನನ ಮೇಲೆ ನನ್ನನ್ನು ಪ್ರಯೋಗಿಸಿದೆ. ಈ ಕಾರಣದಿಂದಲೇ ನನಗೆ ಅರ್ಜುನನ ಶಿರಸ್ಸನ್ನು

---

ಅರ್ಥಮಾಡಲು ವ್ಯಾಖ್ಯಾನಕಾರರ ನೆರವು ಅನಿವಾರ್ಯ. ಅವರ ವ್ಯಾಖ್ಯೆಗೆ ಅನುಸಾರ ವಾಗಿ ಅನುವಾದಮಾಡಲಾಗಿದೆ. ಈ ಕೆಳಗೆ ಅವರ ವ್ಯಾಖ್ಯೆಯನ್ನೂ ಯಥಾವತ್ತಾಗಿ ಕೊಡಲಾಗಿದೆ. ‘ಗೋಕರ್ಣಾ ಮುಕುಟಂ ಜಹಾತೀತ್ಯನ್ವಯಃ’–‘ಗೋಕರ್ಣಾಳು (ಸರ್ಪಿಣಿಯು) ಕಿರೀಟವನ್ನು ಅಪಹರಿಸಿದಳು’–ಎಂಬುದು ಈ ಶ್ಲೋಕದ ಮುಖ್ಯಾರ್ಥ. ಅರ್ಜುನಸ್ಯ ಮುಕುಟಹರಣಮಪಿ ಮಹತ್ಕರ್ಮೇತಿ ಸೂಚಯನ್ ಮುಕುಟಂ ವಿಶಿನಷ್ಟಿ. ಅರ್ಜುನನ ಕಿರೀಟಹರಣವೂ ಮಹಾಕಾರ್ಯವೆಂಬುದನ್ನು ಸೂಚಿಸಲು ಈ ಶ್ಲೋಕದಲ್ಲಿ ಕಿರೀಟದ ವಿಷಯವನ್ನೇ ವಿಶೇಷವಾಗಿ ಹೇಳಲಾಗಿದೆ. ಗವಿ ಚಕ್ಷುಷಿ ಕರ್ಣೋ ಯಸ್ಯಾಃ ಸಾ ಗೋಕರ್ಣಾ. ಕಣ್ಣಿನಲ್ಲಿಯೇ ಕಿವಿಯೂ

ಅಪಹರಿಸಲು ಸಾಧ್ಯವಾಗಲಿಲ್ಲ. ಈಗಲಾದರೂ ನೀನು ಪುನಃ ಚೆನ್ನಾಗಿ ಸಮಾಲೋಚಿಸಿ ನನ್ನನ್ನು ಶತ್ರುವಿನ ಮೇಲೆ ಪ್ರಯೋಗಿಸು. ಖಂಡಿತವಾಗಿಯೂ ನಾನು ನಿನ್ನ ಮತ್ತು ನನ್ನ ಶತ್ರುವನ್ನು ಸಂಹರಿಸುತ್ತೇನೆ."

ಮಹಾರಾಜ! ಯುದ್ಧದ ಮಧ್ಯದಲ್ಲಿ ಹೀಗೆ ಹೇಳಿದ ಸರ್ಪಾಸ್ತ್ರವನ್ನು 'ಉಗ್ರರೂಪನಾಗಿರುವ ನೀನಾರು?'–ಎಂದು ಕರ್ಣನು ಪ್ರಶ್ನಿಸಿದನು. ಅದಕ್ಕುತ್ತರವಾಗಿ ಸರ್ಪವು ಹೇಳಿತು: "ಕರ್ಣ! ಪಾರ್ಥನು ನನ್ನ ವಿಷಯದಲ್ಲಿ ಮಹಾಪರಾಧವನ್ನೇ ಮಾಡಿದ್ದಾನೆ. ನನ್ನ ತಾಯಿಯನ್ನು ವಧೆಮಾಡಿದ ಕಾರಣದಿಂದ ಅವನ ಮೇಲೆ ನನಗೆ ವೈರವುಂಟಾಗಿದೆ. ನನ್ನನ್ನು ನೀನು ಪುನಃ ಪ್ರಯೋಗಿಸಿದ್ದೇ ಆದರೆ ಸಾಕ್ಷಾತ್ ವಜ್ರಧರನಾದ ಇಂದ್ರನೇ ಪಾರ್ಥನ ರಕ್ಷಣೆಗೆ ಬಂದರೂ ಇವನನ್ನು ಪಿತೃರಾಜನಾದ ಯಮನ ಮನೆಗೆ ಒಯ್ಯುತ್ತೇನೆ."

ನ ನಾಗ ಕರ್ಣೋಽದ್ಯ ರಣೇ ಪರಸ್ಯ
ಬಲಂ ಸಮಾಸ್ಥಾಯ ಜಯಂ ಬುಭೂಷೇತ್ ।
ನ ಸಂದಧ್ಯಾಂ ದ್ವಿಃ ಶರಂ ಚೈವ ನಾಗ
ಯದ್ಯರ್ಜುನಾನಾಂ ಶತಮೇವ ಹನ್ಯಾಮ್ ॥೪೭॥

"ನಾಗರಾಜ! ಕರ್ಣನು ಇತರರ ಬಲವನ್ನು ಆಶ್ರಯಿಸಿ ಜಯವನ್ನು ಆಶಿಸತಕ್ಕವನಲ್ಲ. ಎರಡನೆಯದಾಗಿ: ನೂರು ಮಂದಿ ಅರ್ಜುನರನ್ನು

---

ಇರತಕ್ಕವಳು ಗೋಕರ್ಣಾ. ಚಕ್ಷುಃ ಶ್ರವಾಃ ಸರ್ಪಿಣೀ–ಕಣ್ಣುಗಳೇ ಕಿವಿಯಾಗಿ ಉಳ್ಳ ಸರ್ಪಿಣಿಯು. ಅರ್ಜುನೇನ ಖಾಣ್ಡವೇ ನಿಹತಾ ಸತೀ ಇಹ ನಿಮಿತ್ತಭೂತಾ ತಸ್ಯ ಮುಕುಟಮೇವ ಜಹಾರ ಹೃತವತೀ ನ ತು ಶಿರಃ । ಅರ್ಜುನನಿಂದ ಖಾಂಡವ ವನದಲ್ಲಿ ಹತಳಾದ ಆ ಸರ್ಪಿಣಿಯು ಇಲ್ಲಿ ನಿಮಿತ್ತಮಾತ್ರಳಾಗಿ ಅರ್ಜುನನ ಕಿರೀಟವನ್ನು ಮಾತ್ರ ಹಾರಿಸಿದಳು. ಆದರೆ ತಲೆಯನ್ನು ಹಾರಿಸಲಿಲ್ಲ. ಕಥಂ ಹತಾಯಾಃ ಹನನನಿಮಿತ್ತತ್ವಂ? ಸತ್ತುಹೋದ ಸರ್ಪಿಣಿಯು ಅರ್ಜುನನ ಹನನಕ್ಕೆ ಹೇಗೆ ಕಾರಣಭೂತಳು? ಅತ ಆಹ ಸುಮುಖೀ ಕೃತೇನ ಇಷುಣಾ ಗೋಪುತ್ರಸಮ್ಪ್ರೇಷಿತಾ–

ಸಂಹರಿಸಬಹುದಾದರೂ ನಾನು ಒಂದು ಬಾಣವನ್ನು ಎರಡು ಸಲ ಅನುಸಂಧಾನಮಾಡುವುದಿಲ್ಲ."

ಮಹಾರಾಜ! ಯುದ್ಧದ ಮಧ್ಯದಲ್ಲಿ ಸೂರ್ಯನ ಶ್ರೇಷ್ಠಪುತ್ರನಾದ ಕರ್ಣನು ಪುನಃ ನಾಗರಾಜನೊಡನೆ ಹೇಳಿದನು:

ವ್ಯಾಲಾಸ್ತ್ರಸರ್ಗೋತ್ತಮಯತ್ನಮನ್ಯುಭಿ-
ರ್ಹನ್ತಾಸ್ಮಿ ಪಾರ್ಥಂ ಸುಸುಖೀ ವ್ರಜ ತ್ವಮ್ ॥೪೮॥

"ಎಲೈ ನಾಗನೇ! ಅಸ್ತ್ರಪ್ರಯೋಗದಿಂದಲೂ, ಸರ್ವಪ್ರಯತ್ನ ದಿಂದಲೂ ಮತ್ತು ಪರ್ಯಾಪ್ತವಾದ ರೋಷದಿಂದಲೂ ಪಾರ್ಥನನ್ನು ನಾನೇ ಸಂಹರಿಸುತ್ತೇನೆ. ಸಮಾಧಾನಚಿತ್ತನಾಗಿ ನೀನು ಹಿಂದಿರುಗಬಹುದು."

ಧೃತರಾಷ್ಟ್ರಮಹಾರಾಜ! ಕರ್ಣನು ಹೀಗೆ ಹೇಳಿದೊಡನೆಯೇ ಉಗ್ರನಾದ ನಾಗರಾಜನು ಕರ್ಣನು ಹೇಳಿದ ಮಾತನ್ನು ಸಹಿಸಿಕೊಳ್ಳಲಾರದೇ ರೋಷಾವಿಷ್ಟನಾಗಿ, ಉಗ್ರವಾದ ಸ್ವರೂಪವನ್ನು ತಾಳಿ ಪಾರ್ಥನನ್ನು ಸಂಹರಿಸುವ ಇಚ್ಛೆಯಿಂದ ತಾನಾಗಿಯೇ ಅವನ ಕಡೆಗೆ ಹೋದನು.

ನಾಗರಾಜನು ವೇಗವಾಗಿ ಅರ್ಜುನನ ರಥದ ಕಡೆಗೇ ಬರುತ್ತಿರುವುದನ್ನು ನೋಡಿ ಕೃಷ್ಣನು–ಬದ್ಧವೈರಿಯಾದ ಮಹಾಸರ್ಪವನ್ನು ಸಂಹರಿಸುವಂತೆ–ಪಾರ್ಥನಿಗೆ ಹೇಳಿದನು. ಶತ್ರುಗಳ ಪರಾಕ್ರಮವನ್ನು ಸಹಿಸಿಕೊಳ್ಳುವ ಸಾಮರ್ಥ್ಯವಿರುವ ಗಾಂಡೀವಧನ್ವನಾದ ಅರ್ಜುನನು

---

ಶೋಭನಂ ಪುತ್ರಜೀವನಕರಂ ಮುಖಂ ಯಸ್ಯಾಃ ಸಾ ಸುಮುಖೀ–ಪುತ್ರನ ಜೀವವನ್ನು ಉಳಿಸುವ ಮುಖವು ಯಾವಳಿಗಿರುವುದೋ ಅವಳು ಸುಮುಖೀ. ಸಾ ಹಿ ಪುತ್ರಂ ನಿಗೀರ್ಯ ದಹ್ಯಮಾನಾತ್ ಖಾಣ್ಡವಾದುತ್ಪತನ್ತೀ ಶಿರೋದೇಶೇ ಅರ್ಜುನೇನ ಛಿನ್ನಾ ಸತೀ ಸ್ವಯಂ ಮೃತಾ ಪುತ್ರಂ ಚ ರಕ್ಷಿತವತೀ ಇತ್ಯಾದಿಪರ್ವಣಿ ಉಪಾಖ್ಯಾಯತೇ–ಮಗನನ್ನು ನುಂಗಿ ಧಗ-ಧಗನೆ ಉರಿಯುತ್ತಿದ್ದ ಖಾಂಡವವನದಿಂದ ಹಾರಿಹೋಗುತ್ತಿದ್ದಾಗ ಅರ್ಜುನನ ಬಾಣದಿಂದ ಕತ್ತರಿಸಲ್ಪಟ್ಟು ತಾನು ಮಾತ್ರ ಮೃತಳಾಗಿ ಪುತ್ರನನ್ನು ರಕ್ಷಿಸಿದಳು. ಈ ಕಥೆಯು ಹಿಂದೆ ಆದಿಪರ್ವದಲ್ಲಿ ಉಕ್ತವಾಗಿದೆ.

ಶ್ರೀಕೃಷ್ಣನು ಹೇಳಿದ ಮಾತನ್ನು ಕೇಳಿ ಕೃಷ್ಣನನ್ನು ಪ್ರಶ್ನಿಸಿದನು. "ಮಧುಸೂದನ! ನನ್ನ ಬಳಿಗೆ ಬರುತ್ತಿರುವ ಈ ನಾಗವು ಯಾವುದು? ಗರುಡನ ಬಾಯಿಗೆ ಬೀಳಲು ಯಾವ ಸರ್ಪವು ತಾನೇ ಹೀಗೆ ಅವಸರದಿಂದ ಬರುತ್ತದೆ?"

"ಅರ್ಜುನ! ನೀನು ಖಾಂಡವವನದಲ್ಲಿ ಯಜ್ಞೇಶ್ವರನನ್ನು ಸಂತೃಪ್ತಿಗೊಳಿಸುತ್ತಿದ್ದ ಸಮಯದಲ್ಲಿ ಈ ನಾಗರಾಜನು ತಾಯಿಯಿಂದ ಸುಗುಪ್ತನಾಗಿ (ನುಂಗಲ್ಪಟ್ಟವನಾಗಿ) ಆಕಾಶದಲ್ಲಿದ್ದನು. ನೀನು, ಇವನ ತಾಯಿಯೊಬ್ಬಳೇ ಖಾಂಡವವನದಿಂದ ತಪ್ಪಿಸಿಕೊಂಡು ಹೋಗುತ್ತಿರುವಳೆಂದು ಬಗೆದು ಅವಳನ್ನು ಸಂಹರಿಸಿದೆ. ಇವನು ಮಾತ್ರ ಆ ಸಮಯದಲ್ಲಿ ಜೀವಂತನಾಗಿ ಉಳಿದುಕೊಂಡನು. ಅಂದಿನ ವೈರವನ್ನೇ ಸ್ಮರಿಸಿಕೊಂಡು ಇವನು ನಿನ್ನನ್ನು ವಧಿಸಲೆಂದೇ ಬರುತ್ತಿದ್ದಾನೆ. ಆದರೆ ಇವನ ಆಶಯವು ಅದಾಗಿದ್ದರೂ ಇವನೀಗ ಬರುತ್ತಿರುವುದು ತನ್ನ ವಧೆಗಾಗಿಯೇ. ಇದರಲ್ಲಿ ಸಂದೇಹವೇ ಇಲ್ಲ. ಶತ್ರುಗಳ ಪರಾಕ್ರಮವನ್ನು ಸಹಿಸಿಕೊಳ್ಳುವವನೇ! ಆಕಾಶದಿಂದ ಚ್ಯುತವಾಗಿ ಪ್ರಜ್ವಲಿಸುತ್ತಾ ಕೆಳಕ್ಕೆ ಬೀಳುತ್ತಿರುವ ಉಲ್ಕೆಯೋಪಾದಿಯಲ್ಲಿ ಇವನು ಸರ-ಸರನೆ ಬರುತ್ತಿರುವುದನ್ನಾದರೂ ನೋಡು."

ಮಹಾರಾಜ! ಶ್ರೀಕೃಷ್ಣನ ಮಾತನ್ನು ಕೇಳಿ ಅರ್ಜುನನು ರೋಷಾವಿಷ್ಟನಾಗಿ ಸರ್ಪದ ಕಡೆಗೆ ತಿರುಗಿ ಆಕಾಶದಲ್ಲಿ ವಕ್ರಗತಿಯಿಂದ ಹಾರಿಕೊಂಡು

---

**ಕೃತೇನ = ಸ್ವಯಂ ನಿರ್ಮಿತೇನ ಪುತ್ರೇಣ ತ್ರಾತೇನ–ಇಷುಣಾ =ಇಷುಭಾವಂ ಗತೇನ** ತಾನೇ ನಿರ್ಮಿಸಿದ (ರಕ್ಷಿಸಿದ) ಬಾಣರೂಪವನ್ನು ಹೊಂದಿದ ಪುತ್ರನಿಂದ. **ಆತ್ಮಾ ವೈ ಪುತ್ರನಾಮಾಸಿ ಇತಿ ಶ್ರುತೇಃ ಇಷ್ವಾಕಾರಪುತ್ರರೂಪೇಣ ಸಂಪನ್ನಾ ಸತೀ = ಆತ್ಮಾ ವೈ ಪುತ್ರನಾಮಾಸಿ** ಎಂಬ ಶ್ರುತಿಗೆ ಅನುಸಾರವಾಗಿ ಬಾಣರೂಪದ ಆಕಾರವನ್ನು ಧರಿಸಿದ್ದ ಪುತ್ರನಿಂದ ಸಂಪನ್ನಳಾಗಿ. **ಗೋಪುತ್ರಸಮ್ಪ್ರೇಷಿತಾ = ಗೋಮತಃ ರಶ್ಮಿಮತಃ–ಅರ್ಕಸ್ಯ ಪುತ್ರೇಣ ಕರ್ಣೇನ ಪ್ರೇಷಿತಾ**–ಸೂರ್ಯಪುತ್ರನಾದ ಕರ್ಣನಿಂದ ಕಳುಹಿಸಲ್ಪಟ್ಟವಳಾಗಿ. **ಕಿಂ ಕೃತ್ವಾ ಮುಕುಟಂ ಜಹಾರ? ಇತ್ಯತ ಆಹ** – ಏನು ಮಾಡಿ ಕಿರೀಟವನ್ನು ಅಪಹರಿಸಿದಳು? ಈ ವಿಷಯವಾಗಿ ಹೇಳುತ್ತಾರೆ. **ಸುವ್ಯಕ್ತಗೋಽ-**

ಬರುತ್ತಿದ್ದ ಸರ್ಪವನ್ನು ನಿಶಿತವಾದ ಅಲುಗನ್ನು ಹೊಂದಿದ್ದ ಆರು ಬಾಣಗಳಿಂದ ತುಂಡು-ತುಂಡುಮಾಡಿದನು. ಕತ್ತರಿಸಲ್ಪಟ್ಟ ಶರೀರವುಳ್ಳ ಆ ಸರ್ಪವು ಭೂಮಿಯ ಮೇಲೆ ಬಿದ್ದಿತು. ಅರ್ಜುನನು ಆ ಸರ್ಪವನ್ನು ಕತ್ತರಿಸಿಹಾಕಲಾಗಿ ಪುರುಷೋತ್ತಮನಾದ, ವಿಭುವಾದ ಶ್ರೀಕೃಷ್ಣನು ಪುನಃ-ಪುನಃ ನೆಲದಲ್ಲಿ ಹುದುಗಿಕೊಳ್ಳುತ್ತಿದ್ದ ರಥವನ್ನು ತನ್ನೆರಡು ಭುಜಗಳಿಂದಲೂ ಮೇಲಕ್ಕೆತ್ತಿದನು. ಆ ಸಮಯದಲ್ಲಿ ಪುರುಷಶ್ರೇಷ್ಠನಾದ ಕರ್ಣನು ವಕ್ರದೃಷ್ಟಿಯಿಂದ ನೋಡುತ್ತಾ ಮಸೆಗಲ್ಲಿನಿಂದ ಉಜ್ಜಲ್ಪಟ್ಟಿದ್ದ, ನವಿಲಿನ ಗರಿಗಳಿಂದ ಕೂಡಿದ್ದ ಹತ್ತು ಬಾಣಗಳಿಂದ ಧನಂಜಯನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅರ್ಜುನನೂ ಸುಪ್ರಮುಕ್ತವಾದ, ನಿಶಿತವಾದ ಹನ್ನೆರಡು ವರಾಹಕರ್ಣಗಳೆಂಬ ಬಾಣಗಳಿಂದ ಕರ್ಣನನ್ನು ಪ್ರಹರಿಸಿ ಪುನಃ ವಿಷಸರ್ಪದ ವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ನಾರಾಚವನ್ನು ಕಿವಿಯ ತುದಿಯವರೆಗೂ ಸೆಳೆದು ಕರ್ಣನ ಮೇಲೆ ಪ್ರಯೋಗಿಸಿದನು. ಅರ್ಜುನನಿಂದ ಪ್ರಮುಕ್ತವಾದ ಆ ಶ್ರೇಷ್ಠ ನಾರಾಚವು ಕರ್ಣನ ಚಿತ್ರಕವಚವನ್ನು ಭೇದಿಸಿ ಪ್ರಾಣಗಳನ್ನು ಅಪಹರಿಸುತ್ತಿರುವುದೋ ಎಂಬಂತೆ ಕರ್ಣನ ರಕ್ತವನ್ನು ಕುಡಿದು, ರಕ್ತದಿಂದ ತೋಯ್ದುಹೋಗಿದ್ದ ರೆಕ್ಕೆಯಿಂದ ಕೂಡಿ ಭೂಮಿಯನ್ನು ಸೇರಿತು. ಮಹಾಸರ್ಪವು ದಂಡಪ್ರಹಾರದಿಂದ ಕೋಪಗೊಳ್ಳುವಂತೆ–ಅರ್ಜುನನ ಬಾಣಪ್ರಹಾರದಿಂದ ಕುಪಿತನಾದ, ಶೀಘ್ರವಾಗಿ ಕಾರ್ಯಗಳನ್ನು ಮಾಡುವ ಕರ್ಣನು ಮಹಾವಿಷಯುಕ್ತವಾದ ಸರ್ಪವು ತೀಕ್ಷ್ಣವಿಷವನ್ನು ಕಾರುವಂತೆ–ಶ್ರೇಷ್ಠವಾದ ಬಾಣಗಳನ್ನು

---

**ಸುಪ್ರಭಂ ಗೋಗತಕಂ ದೃಷ್ಟ್ವಾ ಸುವ್ಯಕ್ತಾಃ ಅತಿಶಯೇನ ಆವಿರ್ಭೂತಾಃ ಗಾವಃ ರಶ್ಮಯಃ ತೇಜ ಇತಿ ಯಾವತ್–ಸುವ್ಯಕ್ತೈಃ ಗೋಭಿಃ ಅಸುಭಿಶ್ಚ ಭಾಸಮಾನಂ =** ನಿರತಿಶಯತೇಜೋಬಲಂ ಅರ್ಜುನಂ = ನಿರತಿಶಯತೇಜೋಬಲವಿಶಿಷ್ಟನಾದ ಅರ್ಜುನನನ್ನು. **ಗೋಗತಕಂ–ಗೋಶಬ್ದೇನ ಹಯರಶ್ಮೀನಾಂ ಪ್ರದೇಶೋ ಲಕ್ಷ್ಯತೇ** ಇಲ್ಲಿ ಗೋಶಬ್ದದಿಂದ ಕುದುರೆಗಳ ಲಗಾಮುಗಳ ಪ್ರದೇಶವು ಅನುಲಕ್ಷಿತವಾಗಿದೆ. **ತತ್ರ ಗತಂ ವಿದ್ಯಮಾನಂ ಕಂ ಶಿರಂ ಯಸ್ಯ ತಂ, ಅರ್ಜುನಸ್ಯ ಗ್ರೀವಾದೇಶಂ ಕರ್ಣೇನ ಲಕ್ಷ್ಯೀಕೃತಂ ವಿಜ್ಞಾಯ**–ಕುದುರೆಗಳ ಲಗಾಮುಗಳ ನೇರಕ್ಕೇ ಅರ್ಜುನನ ಕಂಠ ಪ್ರದೇಶವಿದೆ. ಆ ಕಂಠಪ್ರದೇಶಕ್ಕೆ ಗುರಿಯಿಟ್ಟು ಕರ್ಣನು ತನ್ನನ್ನು (ಸರ್ಪಿಣಿ

ಅರ್ಜುನನ ಮೇಲೆ ಪ್ರಯೋಗಿಸಿದನು. ಬಳಿಕ ಶ್ರೀಕೃಷ್ಣನನ್ನು ಹನ್ನೆರಡು ಬಾಣಗಳಿಂದ ಗಾಢವಾಗಿ ಪ್ರಹರಿಸಿದನು. ಅರ್ಜುನನನ್ನೂ ನೂತನವಾದ ತೊಂಬತ್ತು ಬಾಣಗಳಿಂದ ಪ್ರಹರಿಸಿದನು. ಸುಘೋರವಾದ ಬಾಣವೊಂದರಿಂದ ಅರ್ಜುನನನ್ನು ಪುನಃ ಪ್ರಹರಿಸಿ ವಿಕಟವಾಗಿ ನಗುತ್ತಾ ಸಿಂಹನಾದ ಮಾಡಿದನು. ಕರ್ಣನು ಸಂತೋಷಪಡುತ್ತಿರುವುದನ್ನು ಪಾಂಡವನು ಸಹಿಸಿಕೊಳ್ಳಲಿಲ್ಲ. ಮಹೇಂದ್ರಸಮವಿಕ್ರಮನಾದ, ಶತ್ರುವಿನ ಮರ್ಮಸ್ಥಾನಗಳನ್ನು ತಿಳಿದುಕೊಂಡಿದ್ದ ಅರ್ಜುನನು ಇಂದ್ರನು ಪರಾಕ್ರಮದಿಂದ ಬಲಾಸುರನನ್ನು ಪ್ರಹರಿಸಿದಂತೆ–ನೂರಕ್ಕೂ ಹೆಚ್ಚು ಬಾಣಗಳಿಂದ ಕರ್ಣನ ಮರ್ಮಸ್ಥಳಗಳಲ್ಲಿ ಪ್ರಹರಿಸಿದನು. ಪುನಃ ಅರ್ಜುನನು ಯಮದಂಡಸದೃಶವಾದ ತೊಂಬತ್ತು ಬಾಣಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು. ವಜ್ರಾಯುಧದಿಂದ ಸೀಳಲ್ಪಟ್ಟ ಪರ್ವತದೋಪಾದಿಯಲ್ಲಿ ಅರ್ಜುನನ ಬಾಣಗಳಿಂದ ಗಾಯಗೊಂಡ ಕರ್ಣನು ವ್ಯಥೆಪಟ್ಟನು. ಶ್ರೇಷ್ಠವಾದ ಮಣಿಗಳಿಂದಲೂ, ವಜ್ರಗಳಿಂದಲೂ, ಸುವರ್ಣದಿಂದಲೂ ಮಾಡಲ್ಪಟ್ಟಿದ್ದ ಕರ್ಣನ ಶಿರೋಭೂಷಣವಾದ ಕಿರೀಟವೂ ಮತ್ತು ಕರ್ಣಕುಂಡಲಗಳೂ ಅರ್ಜುನನ ಬಾಣಕ್ಕೆ ಲಕ್ಷ್ಯಗಳಾಗಿ ಛಿನ್ನ-ಭಿನ್ನವಾಗಿ ಭೂಮಿಯ ಮೇಲೆ ಬಿದ್ದುವು. ಶ್ರೇಷ್ಠಶಿಲ್ಪಿಗಳಿಂದ ಬಹಳಕಾಲದ ಅವಧಿಯಲ್ಲಿ ಪ್ರಯತ್ನಪೂರ್ವಕವಾಗಿ ನಿರ್ಮಿಸಲ್ಪಟ್ಟಿದ್ದ ಬಹುಮೂಲ್ಯವಾದ, ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದ ಕರ್ಣನ ಕವಚವನ್ನು ಅರ್ಜುನನು ಕ್ಷಣಮಾತ್ರದಲ್ಲಿ ಬಾಣಗಳಿಂದ ತುಂಡು-ತುಂಡು ಮಾಡಿದನು. ಕುಪಿತನಾಗಿದ್ದ ಅರ್ಜುನನು ಕವಚರಹಿತನಾಗಿದ್ದ ಕರ್ಣನನ್ನು ನಿಶಿತವಾದ ಮತ್ತು ಶ್ರೇಷ್ಠವಾದ ನಾಲ್ಕು ಬಾಣಗಳಿಂದ

---

ಯನ್ನು) ಅನುಸಂಧಾನಮಾಡಿರುವನೆಂಬುದನ್ನು ತಿಳಿದು. (ಇಲ್ಲಿ ವ್ಯಾಖ್ಯಾನಕಾರರು ಗೋಶಬ್ದಕ್ಕೆ ಮತ್ತೊಂದು ಅರ್ಥವನ್ನು ನಿರೂಪಿಸುವ ಸಲುವಾಗಿ **ಗೌಃ** ಎಂಬುದಕ್ಕೆ ಕುದುರೆಯ ಲಗಾಮು ಎಂದು ಅರ್ಥಮಾಡಿರುತ್ತಾರೆ.) **ಭಗವತಾ ಸ್ವಭಾರೇಣ ಅಶ್ವೇಷು ಜಾನುಭ್ಯಾಂ ಅವನೀಂ ಗಮಿತೇಷು** ಭಗವಂತನು ತನ್ನ ಭಾರದಿಂದ ಕುದುರೆಗಳನ್ನು ಮೊಣಕಾಲಿನಲ್ಲಿ ನಿಲ್ಲುವಂತೆ ಮಾಡಲಾಗಿ, **ಸಮಸೂತ್ರದೇಶೇ ಅರ್ಜುನಸ್ಯ ಶಿರಃ ದೃಷ್ಟ್ವಾಪಿ**–ಕುದುರೆಯ ಲಗಾಮುಗಳ ನೇರಕ್ಕೆ ಸರಿಯಾಗಿ ಅರ್ಜುನನ ತಲೆಯು ಇರುವುದನ್ನು ನೋಡುತ್ತಿದ್ದರೂ, **ವೇಗಾತಿಶಯಾತ್ ಸ್ವಯಂ ನೀಚೀ ಭವಿತುಮಶಕ್ತಾ ಸತೀ**–ವೇಗಾತಿಶಯದಿಂದ ತಾನು ಕೆಳಭಾಗಕ್ಕೆ ಬರಲು ಅಶಕ್ತ

ಪುನಃ ಗಾಢವಾಗಿ ಗಾಯಗೊಳಿಸಿದನು. ಶತ್ರುವಿನಿಂದ ಗಾಢವಾಗಿ ಪ್ರಹೃತನಾದ ಕರ್ಣನು–ರೋಗಿಯು ವಾತ-ಪಿತ್ತ-ಕಫರೂಪಗಳಾದ ತ್ರಿದೋಷಗಳಿಂದ ಮತ್ತು ಜ್ವರದಿಂದ ನರಳುವಂತೆ–ಬಹಳವಾಗಿ ಸಂಕಟಪಟ್ಟನು. ಕ್ರಿಯೆ, ಪ್ರಯತ್ನ ಮತ್ತು ಬಲಗಳಿಂದ ಬಿಡಲ್ಪಟ್ಟು, ಮಹಾಧನುರ್ಮಂಡಲದಿಂದ ಸತತವಾಗಿ ಹೊರಬರುತ್ತಿದ್ದ, ನಿಶಿತವಾದ, ಶ್ರೇಷ್ಠವಾದ ಹಲವಾರು ಬಾಣ ಗಳಿಂದ ಅರ್ಜುನನು ಕರ್ಣನನ್ನು ಗಾಯಗೊಳಿಸಿದನು. ಅರ್ಜುನನು ತ್ವರೆ ಯಿಂದ ಕರ್ಣನ ಮರ್ಮಸ್ಥಾನಗಳನ್ನೂ ಬಾಣಗಳಿಂದ ಭೇದಿಸಿದನು. ಭಯಂಕರವೇಗದಿಂದ ಕೂಡಿದ್ದ ನಿಶಿತವಾದ ನಾನಾಪ್ರಕಾರವಾದ ಅರ್ಜುನನ ಬಾಣಗಳಿಂದ ಪ್ರಹೃತನಾದ ಕರ್ಣನು ರಕ್ತವನ್ನು ಸುರಿಸುತ್ತಾ–ಗೈರಿಕಾದಿ ಧಾತುಗಳಿಂದ ಕೂಡಿದ ಪರ್ವತವು ಕೆಂಪುನೀರಿನಿಂದ ಕೂಡಿದ ಜಲಪಾತ ದಿಂದ ಪ್ರಕಾಶಿಸುವಂತೆ ಪ್ರಕಾಶಿಸುತ್ತಿದ್ದನು. ಪುನಃ ಅರ್ಜುನನು ನೇರವಾಗಿ ಹೋಗುವ, ನೂತನವಾದ, ಸುವರ್ಣಮಯವಾದ ಮೂಲಭಾಗದಿಂದ ಕೂಡಿರುವ, ದೃಢವಾಗಿರುವ, ಲೋಹಮಯವಾದ, ಯಮದಂಡಾಗ್ನಿ ದಂಡಗಳಿಗೆ ಸಮಾನವಾಗಿದ್ದ ಬಾಣಗಳಿಂದ–ಅಗ್ನಿಯ ಮಗನಾದ ಕಾರ್ತಿಕೇಯನು ಕ್ರೌಂಚಪರ್ವತವನ್ನು ಭೇದಿಸಿದಂತೆ–ಕರ್ಣನನ್ನು ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅರ್ಜುನನ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದ ಕರ್ಣನು ಬತ್ತಳಿಕೆಯನ್ನೂ, ಇಂದ್ರನ ಧನುಸ್ಸಿಗೆ ಸಮಾನವಾಗಿದ್ದ ಧನುಸ್ಸನ್ನೂ ಬಿಟ್ಟುಬಿಟ್ಟನು. ಅವನ ಮುಷ್ಟಿಯು ಸಡಿಲ ವಾಯಿತು. ತರತರನೆ ನಡುಗುತ್ತಾ ರಥದಲ್ಲಿ ಕುಳಿತಿದ್ದಂತೆಯೇ ಮೂರ್ಛೆ

---

ಳಾಗಿ. **ತದ್ದೇಶಸ್ಥಂ ಮುಕುಟಂ ಜಹಾರೇತ್ಯರ್ಥಃ**–ಆ ಸ್ಥಳದಲ್ಲಿದ್ದ ಕಿರೀಟವನ್ನು ಬಾಣರೂಪದಲ್ಲಿದ್ದ ಸರ್ಪಿಣಿಯು ಅಪಹರಿಸಿದಳು. **ಗೋಶಬ್ದಾತ್ಮಕಭೂಷಣಂ ಸುವಿಹಿತಮಿತಿ–ಗೌಃ ಪೃಥಿವೀತಯಾ ಶಬ್ದತೇ ಗೋಶಬ್ದಾ ಅದಿತಿಃ ಗೌಃ** ಎಂದರೆ: ಪೃಥಿವೀ. ಈ ಪೃಥ್ವೀಶಬ್ದದಿಂದ ಕರೆಯಲ್ಪಡತಕ್ಕವಳು ಅದಿತಿ. **'ಇಯಂ ವಾ ಅದಿತಿಃ' ಇತಿ ಪೃಥಿವ್ಯಾಃ ಅದಿತೇಃ ನಿರ್ದೇಶಾತ್ । *ಇಯಂ ವಾ ಅದಿತಿಃ***–ಎಂಬ ಶ್ರುತಿವಚನದಂತೆ ಪೃಥಿವಿಗೆ ಅದಿತಿ ಎಂಬ ನಿರ್ದೇಶನವಿರುವುದರಿಂದ ಗೋಶಬ್ದಕ್ಕೆ ಅರ್ಥಾಂತರದಿಂದ ಅದಿತಿ ಎಂದಾಗುತ್ತದೆ. **ತಸ್ಯಾಃ ಆತ್ಮಜಸ್ಯ ಇನ್ದ್ರಸ್ಯ ಭೂಷಣಂ**–

ಹೋದನು. ವೀರಪುರುಷರು ಆಚರಿಸುವ ವ್ರತದಲ್ಲಿ ನಿಷ್ಠನಾಗಿದ್ದ, ಆರ್ಯನಾದ ಅರ್ಜುನನು ಬಾಣಾಘಾತದ ವೇದನೆಯಿಂದ ಸಂಕಟಪಡುತ್ತಿದ್ದ ಮತ್ತು ಧನುರ್ಬಾಣಗಳನ್ನು ಕೈಬಿಟ್ಟಿದ್ದ ಕರ್ಣನನ್ನು ಸಂಹರಿಸಲು ಇಚ್ಛಿಸಲಿಲ್ಲ. ಅದನ್ನು ನೋಡಿದ ಇಂದ್ರಾನುಜನಾದ ಶ್ರೀಕೃಷ್ಣನು ಸಂಭ್ರಮದಿಂದ ಹೇಳಿದನು: 'ಹೇ ಪಾಣ್ಡವ! ಕಿಂ ಪ್ರಮಾದ್ಯಸೇ?–ಪಾರ್ಥ! ಅಜಾಗರೂಕನಾಗಿರುವೆಯಾ?'

**ನೈವಾಹಿತಾನಾಂ ಸತತಂ ವಿಪಶ್ಚಿತಃ**
**ಕ್ಷಣಂ ಪ್ರತೀಕ್ಷನ್ತ್ಯಪಿ ದುರ್ಬಲೀಯಸಾಮ್ ।**
**ವಿಶೇಷತೋಽರೀನ್ವ್ಯಸನೇಷು ಪಣ್ಡಿತೋ**
**ನಿಹತ್ಯ ಧರ್ಮಂ ಚ ಯಶಶ್ಚ ವಿನ್ದತೇ ॥೭೧॥**

ಶತ್ರುಗಳು ಪರಮದುರ್ಬಲರಾಗಿದ್ದರೂ ವಿದ್ವಾಂಸರಾದವರು ಅವರನ್ನು ವಿನಾಶಗೊಳಿಸಲು ಸಮಯವನ್ನು ಕಾಯುವುದಿಲ್ಲ. (ಸಮಯವು ಸಿಕ್ಕಿದಾಗ ಹಿಂದು-ಮುಂದು ನೋಡದೇ ವಿನಾಶಮಾಡುತ್ತಾರೆ.) ಹೀಗಿರುವಾಗ ಪ್ರಬಲನಾದ ಶತ್ರುವೊಬ್ಬನ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಪ್ರಬಲ ನಾದ ಶತ್ರುವು ಯಾವುದಾದರೂ ಕಾರಣದಿಂದ ಸಂಕಟದಲ್ಲಿ ಸಿಕ್ಕಿದಾಗ

---

ಅದಿತಿಯ ಮಗನಾದ ಇಂದ್ರನ ಭೂಷಣ. **ಸುವಿಹಿತಂ ವೇಧಸಾ ಇತಿ ಶೇಷಃ. ತಥಾ ಅತ್ರೈವೋಕ್ತಂ** = ಬ್ರಹ್ಮನಿಂದಲೇ ಮಾಡಲ್ಪಟ್ಟುದೆಂದು ಇಲ್ಲಿಯೇ ಹಿಂದೆ ಹೇಳಿದೆ. **'ಪುರನ್ದರಾರ್ಥಂ ತಪಸಾ ಪ್ರಯತ್ನತಃ ಸ್ವಯಂ ಕೃತಂ ಯದ್ವಿಧಿನಾ ಸ್ವಯಂಭುವಾ'** ಇತಿ–ಸ್ವಯಂಭೂಬ್ರಹ್ಮನು ಇಂದ್ರನ ಸಲುವಾಗಿ ತಪಸ್ಸಿನಿಂದಲೂ ಮತ್ತು ಪ್ರಯತ್ನದಿಂದಲೂ ವಿಧಿಪೂರ್ವಕವಾಗಿ ಕಿರೀಟವನ್ನು ನಿರ್ಮಿಸಿದನು ಎಂದು ೩೪ನೆಯ ಶ್ಲೋಕದಲ್ಲಿ ಹೇಳಿದೆ. **ಕೀದೃಶಂ ಮುಕುಟಂ ವೈ ನಿಶ್ಚಿತಂ ಪ್ರಸಿದ್ಧಂ ವಾ**–ಆ ಕಿರೀಟವೆಂತಹುದು? ಅದು ಪ್ರಸಿದ್ಧವಾದ ಕಿರೀಟ. **ಗೋಶಬ್ದಗೋಪೂರಿ = ಗೋಭಿಃ ರಶ್ಮಿಭಿಃ ಶಬ್ದ್ಯತೇ ರಶ್ಮಿಮಾನಿತಿ ಕಥ್ಯತೇ ಇತಿ ಸೂರ್ಯಃ** = ರಶ್ಮಿಗಳಿಂದ ಸೂಚಿಸ ಲ್ಪಡುತ್ತಾನಾದುದರಿಂದ ಅವನು ರಶ್ಮಿಮಂತ ಅರ್ಥಾತ್ ಸೂರ್ಯ. **ತಸ್ಮೈವ ಭುವನಃ**

ಪಂಡಿತನಾದವನು ಅವನನ್ನು ಸಂಹರಿಸಿ ಧರ್ಮವನ್ನೂ, ಯಶಸ್ಸನ್ನೂ ಗಳಿಸಿಕೊಳ್ಳುತ್ತಾನೆ.

ತದೇಕವೀರಂ ತವ ಚಾಹಿತಂ ಸದಾ
ತ್ವರಸ್ಯ ಕರ್ಣಂ ಸಹಸಾಭಿಮರ್ದಿತುಮ್ ।
ಪುರಾ ಸಮರ್ಥಃ ಸಮುಪೈತಿ ಸೂತಜೋ
ಭಿನ್ದಿ ತ್ವಮೇನಂ ನಮುಚಿಂ ಯಥಾ ಹರಿಃ ॥೭೨॥

ನಿರಂತರವಾಗಿ ನಿನ್ನಲ್ಲಿ ವೈರವನ್ನೇ ಸಾಧಿಸುತ್ತಿರುವ ಏಕೈಕವೀರನಾದ ಕರ್ಣನನ್ನು ಮರ್ದನಮಾಡಲು ತ್ವರೆಮಾಡು. ಇವನು ಪುನಃ ಆಯಾಸವನ್ನು ಪರಿಹಾರಮಾಡಿಕೊಂಡು ನಿನ್ನೊಡನೆ ಯುದ್ಧಮಾಡಲು ನವಚೇತನವನ್ನು ಹೊಂದಿ ಬರುವುದರೊಳಗಾಗಿ (ಇವನು ಈ ಮೂರ್ಛಾಸ್ಥಿತಿ ಯಲ್ಲಿರುವಾಗಲೇ) ಇಂದ್ರನು ನಮುಚಿಯನ್ನು ಸಂಹರಿಸಿದಂತೆ–ಕರ್ಣನನ್ನು ಸಂಹರಿಸು."

ಮಹಾರಾಜ! ಶ್ರೀಕೃಷ್ಣನು ಹೇಳಿದ ಮಾತನ್ನು ಕೇಳಿ, ಸರ್ವ ಕುರುಗಳಿಗೂ ಶ್ರೇಷ್ಠನಾದ ಅರ್ಜುನನು ಹಾಗೆಯೇ ಆಗಲೆಂದು ಹೇಳಿ, ಸಮಯೋಚಿತವಾದ ಸಲಹೆಕೊಟ್ಟುದಕ್ಕಾಗಿ ಶ್ರೀಕೃಷ್ಣನನ್ನು ಅಭಿನಂದಿಸುತ್ತಾ ಶ್ರೇಷ್ಠವಾದ ಬಾಣಗಳಿಂದ ಹಿಂದೆ ಇಂದ್ರನು ಬಲಿಯನ್ನು ಪ್ರಹರಿಸಿದಂತೆ–

---

**ಗರ್ಭವ್ಯಾಪಿನೋ ಗಾವಃ** ಆ ಸೂರ್ಯನ ಭುವನಗರ್ಭವ್ಯಾಪಿಯಾದ ಗಾವಃ ಎಂದರೆ ರಶ್ಮಿಗಳು. **ತೈಃ ಭುವನಂ ಪೂರಯಿತುಂ ಶೀಲಮಸ್ಯ**– ಆ ಕಿರಣಗಳಿಂದಲೇ ಪ್ರಪಂಚವನ್ನು ತುಂಬುವ ಶೀಲವಿರುವುದು. **ತತ್ತಥಾ ಸೂರ್ಯಸಮಪ್ರಭಮಿತ್ಯರ್ಥಃ ಗೋಶಬ್ದಗೋಪೂರಿ**–ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ. (ಕಿರೀಟ.) **ನನು ಚೇತನಾಧಿಷ್ಠಿತೋ ಬಾಣಃ ಪುನರೇತ್ಯ ಅರ್ಜುನಂ ಕುತಃ ನ ಹತವಾನ್ ಇತ್ಯತ** ಆಹ–ಚೇತನದಿಂದ ಕೂಡಿದ ಬಾಣವು ಅರ್ಜುನನ ಬಳಿಗೆ ಪುನಃ ಬಂದರೂ ಅವನನ್ನೇಕೆ ಸಂಹರಿಸಲಿಲ್ಲವೆಂಬುದಕ್ಕೆ ಸಮಾಧಾನವಿದು. ಗೋಕರ್ಣಾಸನ

ಕರ್ಣನನ್ನು ಪ್ರಹರಿಸಿದನು. ಪುನಃ ಅರ್ಜುನನು ರಥಾಶ್ವಗಳಿಂದ ಯುಕ್ತನಾದ ಕರ್ಣನನ್ನು ವತ್ಸದಂತಗಳೆಂಬ ಬಾಣಗಳಿಂದ ಚುಚ್ಚಿದನು. ಸಂಪೂರ್ಣವಾಗಿ ಪ್ರಯತ್ನಿಸಿ ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚಿದನು. ಅರ್ಜುನನ ವತ್ಸದಂತಗಳೆಂಬ ಬಾಣಗಳಿಂದ ಚುಚ್ಚಲ್ಪಟ್ಟಿದ್ದ ವಿಶಾಲಾಕ್ಷನಾದ ಕರ್ಣನು, ಸುಪುಷ್ಪಿತವಾದ ಅಶೋಕ, ಮುತ್ತುಗ, ಬೂರುಗ ಮತ್ತು ಚಂದನವೃಕ್ಷಗಳಿಂದ ಕೂಡಿರುವ ಪರ್ವತದಂತೆಯೇ ಪ್ರಕಾಶಿಸಿದನು. ಶರೀರಾದ್ಯಂತವಾಗಿ ಅರ್ಜುನಪ್ರಮುಕ್ತವಾದ ಅನೇಕಬಾಣಗಳನ್ನು ಹೊಂದಿದ್ದ ಕರ್ಣನು–ವೃಕ್ಷಗಳಿಂದ ವ್ಯಾಪ್ತವಾದ ಶಿಖರಗಳಿಂದಲೂ, ಕಂದರಗಳಿಂದಲೂ ಕೂಡಿರುವ ಸುಪುಷ್ಪಿತವಾದ ಕೆಂಪುಕಣಿಗಿಲೆಗಿಡಗಳಿಂದ ಕೂಡಿದ ಪರ್ವತದಂತೆಯೇ ಪ್ರಕಾಶಿಸುತ್ತಿದ್ದನು. ಆ ವೇಳೆಗೆ ಸ್ವಲ್ಪ ಚೇತರಿಸಿಕೊಂಡ ಕರ್ಣನು ಧನುಸ್ಸನ್ನೆತ್ತಿಕೊಂಡು ಬಾಣಗಳ ಸಮೂಹಗಳನ್ನೇ ಅರ್ಜುನನ ಮೇಲೆ ಸುರಿಸಿದನು. ರಕ್ತದಿಂದ ತೋಯ್ದು ಲೋಹಿತವರ್ಣನಾಗಿದ್ದ, ಬಾಣಗಳ ಸಮೂಹಗಳನ್ನೇ ಕಿರಣಗಳ ರೂಪದಲ್ಲಿ ಹೊಂದಿದ್ದ ಕರ್ಣನು ಅಸ್ತಾಚಲಕ್ಕೆ ಅಭಿಮುಖನಾಗಿ ಹೋಗುತ್ತಿರುವ ಕೆಂಪುಕಿರಣಗಳ ಮಂಡಲದಿಂದ ಕೂಡಿರುವ ಸೂರ್ಯನಂತೆಯೇ ಪ್ರಕಾಶಿಸಿದನು. ಮಹಾರಾಜ! ಕರ್ಣನ ತೋಳುಗಳ ಮಧ್ಯದಿಂದ ಹೊರಬರುತ್ತಿದ್ದ, ಮಹಾಸರ್ಪಗಳಂತೆ ದೇದೀಪ್ಯಮಾನವಾಗಿ ಕಾಣು

---

ಮರ್ದನಶ್ಚ ನ ಯಯಾವಪ್ರಾಪ್ಯ ಮೃತ್ಯೋರ್ವಶಂ ಇತಿ । **ಗೋಕರ್ಣ ಸರ್ಪಂ ಪುನರರ್ಜುನಂ ಹನ್ತುಮಿಚ್ಛನ್ತಂ ಆಸನೇನ ಬಾಣಕ್ಷೇಪೇಣ ಮರ್ದಯತಿ ಯಃ ಸಃ** ಅರ್ಜುನನನ್ನು ಪುನಃ ಸಂಹರಿಸಲು ಇಚ್ಛಿಸಿ ಬಂದಿದ್ದ ಸರ್ಪವನ್ನು ಬಾಣಕ್ಷೇಪದಿಂದ ಮರ್ದಿಸಿದವನು **ತಥಾಭೂತಃ ಅರ್ಜುನಶ್ಚ**–ಅಂತಹ ಅರ್ಜುನನು. **ತಮೇವ ಸರ್ಪಂ ಅನವಾಪ್ಯ ಮೃತ್ಯೋರ್ವಶಂ ನ ಯಯೌ** ಸರ್ಪವನ್ನು ಪುನಃ ಹೊಂದದೇ ಇದ್ದುದರಿಂದ (ಸರ್ಪಾಸ್ತ್ರದಿಂದ ಪುನಃ ಪ್ರಹೃತನಾಗದೇ ಇದ್ದುದರಿಂದ) ಅರ್ಜುನನು ಮೃತ್ಯುವಶನಾಗಲಿಲ್ಲ. **ಸರ್ಪಸ್ಯ ಪುನರಾಗಮನಂ ವಧಶ್ಚ ಅತ್ರೈವ**

ತ್ತಿದ್ದ ಬಾಣಗಳನ್ನು ಅರ್ಜುನನ ಬಾಹುಗಳಿಂದ ಹೊರಬರುತ್ತಿದ್ದ, ನಿಶಿತವಾದ ಅಗ್ರಭಾಗಗಳನ್ನು ಹೊಂದಿದ್ದ ಬಾಣಗಳು ಎಲ್ಲ ದಿಕ್ಕುಗಳಿಗೂ ಹೋಗಿ ನಾಶಗೊಳಿಸಿದುವು. ಅನಂತರ ಕರ್ಣನು ಧೈರ್ಯವನ್ನು ತಾಳಿ ಖತಿಗೊಂಡ ಸರ್ಪಗಳೋಪಾದಿಯಲ್ಲಿದ್ದ ಬಾಣಗಳನ್ನು ಅರ್ಜುನನ ಮೇಲೆ ಸುರಿಸಿದನು. ಹತ್ತು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದ ಬಳಿಕ ಕೋಪಗೊಂಡ ಸರ್ಪಗಳಂತೆಯೇ ಇದ್ದ ಆರು ಬಾಣಗಳಿಂದ ಶ್ರೀಕೃಷ್ಣನನ್ನೂ ಪ್ರಹರಿಸಿದನು. ಅದರಿಂದ ಕುಪಿತನಾದ, ಬುದ್ಧಿವಂತನಾದ ಅರ್ಜುನನು ಭಯಂಕರವಾದ ಶಬ್ದದಿಂದ ಕೂಡಿದ್ದ, ಸರ್ಪ, ವಿಷ ಮತ್ತು ಅಗ್ನಿಗಳಿಗೆ ಸಮಾನವಾಗಿದ್ದ, ಲೋಹಮಯವಾಗಿದ್ದ, ಭಯಂಕರವಾದ ಮಹಾಸ್ತ್ರದೊಡನೆ ಸಂಯೋಜಿಸಲ್ಪಟ್ಟಿದ್ದ ಮಹಾಬಾಣವೊಂದನ್ನು ಕರ್ಣನ ಮೇಲೆ ಪ್ರಯೋಗಿಸಲು ನಿರ್ಧರಿಸಿದನು. ಆ ಸಮಯಕ್ಕೆ ಸರಿಯಾಗಿ ಕಾಲಪುರುಷನು ಅದೃಶ್ಯನಾಗಿದ್ದು, ಬ್ರಾಹ್ಮಣನ ಕೋಪದ ಪರಿಣಾಮವಾಗಿ ಕರ್ಣನ ವಧೆಯಾಗುವುದೆಂಬುದನ್ನು ಸೂಚಿಸುತ್ತಾ, ಕರ್ಣನ ವಧೆಯ ಆ ಕಾಲವು ಸನ್ನಿಹಿತವಾಗಲಾಗಿ 'ಭೂಮಿಸ್ತು ಚಕ್ರಂ ಗ್ರಸತಿ–ಭೂಮಿಯು ನಿನ್ನ ರಥದ ಚಕ್ರವನ್ನು ನುಂಗುತ್ತದೆ'–ಎಂದು ಹೇಳಿದ್ದನು.

ತತಸ್ತದಸ್ತ್ರಂ ಮನಸಃ ಪ್ರಣಷ್ಟಂ
ಯದ್ಭಾರ್ಗವೋಽಸ್ಮೈ ಪ್ರದದೌ ಮಹಾತ್ಮಾ ।
ಚಕ್ರಂ ಚ ವಾಮಂ ಗ್ರಸತೇ ಭೂಮಿರಸ್ಯ
ಪ್ರಾಪ್ತೇ ತಸ್ಮಿನ್ವಧಕಾಲೇ ನೃವೀರ ॥೮೨॥

---

ಕಥ್ಯತೇ ಸರ್ಪವು ಪುನಃ ಹಿಂದಿರುಗಿಬಂದುದು ಮತ್ತು ಅದರ ವಧೆ ಇವುಗಳು ಮುಂದೆ ಉಕ್ತವಾಗಿವೆ. ಗೋಶಬ್ದಕ್ಕೆ ಇರುವ ನಾನಾರ್ಥಗಳು. ಗೌರ್ನಾದಿತ್ಯೇ ಬಲಿವರ್ದೇ ಋತುಭೇದರ್ಷಿಭೇದಯೋಃ । ಸ್ತ್ರೀ ತು ಸ್ಯಾದ್ದಿಶಿ ಭಾರತ್ಯಾಂ ಭೂಮೌ ಚ ಸುರಭಾವಪಿ । ನೃಸ್ತ್ರಿಯೋಃ ಸ್ವರ್ಗವಜ್ರಾಮ್ಬುರಶ್ಮಿದೃಗ್ಬಾಣಲೋಮಸು ॥ ಸೂರ್ಯ, ಎತ್ತು, ಋತುಭೇದ, ಋಷಿಭೇದ, ದಿಕ್ಕು, ವಾಕ್ಕು, ಭೂಮಿ, ಸುರಭಿ, ಸ್ವರ್ಗ, ವಜ್ರಾಯುಧ, ನೀರು, ರಶ್ಮಿ, ಕಣ್ಣು, ಬಾಣ, ಮೈಗೂದಲು.

ಕುರುರಾಜ! ಕರ್ಣನ ವಧೆಯ ಕಾಲವು ಪ್ರಾಪ್ತವಾಗಲಾಗಿ ಮಹಾತ್ಮನಾದ ಪರಶುರಾಮನು ದಯಪಾಲಿಸಿದ್ದ ಆ ಮಹಾಭಾರ್ಗವಾಸ್ತ್ರವೂ ಮರೆತುಹೋಯಿತು. ಕರ್ಣನ ರಥದ ಎಡಭಾಗದ ಚಕ್ರವನ್ನು ಭೂಮಿಯೇ ನುಂಗಲು ಉಪಕ್ರಮಿಸಿತು.



ನರೇಂದ್ರ! ಬ್ರಾಹ್ಮಣಶ್ರೇಷ್ಠನ ಶಾಪದಿಂದಾಗಿ ಕರ್ಣನ ರಥವು ಗರ-ಗರನೆ ಸುತ್ತತೊಡಗಿತು. ಮರುಕ್ಷಣದಲ್ಲಿಯೇ ಅವನ ರಥದ ಚಕ್ರವು ಭೂಮಿಯಲ್ಲಿ ಹುದುಗಿಕೊಂಡಿತು. ಆ ಸಮಯದಲ್ಲಿ ಕರ್ಣನು ವ್ಯಾಕುಲಗೊಂಡನು.

ಸುಂದರವಾದ, ಸುಪುಷ್ಪಿತವಾದ ಮತ್ತು ವಿಶಾಲವಾದ ಚೈತ್ಯವೃಕ್ಷವು ವೇದಿಸಹಿತವಾಗಿ ಭೂಮಿಯೊಳಗೆ ಹುದುಗಿಕೊಳ್ಳುವಂತೆ–ಕರ್ಣನ ರಥವು ಭೂಮಿಯೊಳಗೆ ಹುದುಗಿಕೊಂಡಿತು. ಬ್ರಾಹ್ಮಣನ ಶಾಪದಿಂದಾಗಿ ರಥವು ಗರ-ಗರನೆ ತಿರುಗಿ (ನಡುಗಿ) ಅದರ ಚಕ್ರವು ಭೂಮಿಯೊಳಗೆ ಹುದುಗಿಕೊಳ್ಳಲಾಗಿ, ಪರಶುರಾಮನಿಂದ ಪಡೆದುಕೊಂಡಿದ್ದ ಮಹಾಭಾರ್ಗವಾಸ್ತ್ರವೂ ಅಪ್ರಕಾಶವಾಗಲಾಗಿ, ಪಾರ್ಥನು ಸುಘೋರವಾಗಿದ್ದ ಸರ್ಪಮುಖಶರವನ್ನು ತುಂಡುಮಾಡಲಾಗಿ ಕರ್ಣನು ಬಹಳವಾಗಿ ವಿಷಾದಿಸಿದನು. ಏಕಕಾಲದಲ್ಲಿ ಒದಗಿದ ಆ ಎಲ್ಲ ವ್ಯಸನಗಳನ್ನೂ ಸಹಿಸಿಕೊಳ್ಳಲು ಸಾಧ್ಯವಾಗದೇ ತನ್ನೆರಡು ಕೈಗಳನ್ನೂ ಕೊಡವುತ್ತಾ ಧರ್ಮವನ್ನು ನಿಂದಿಸುತ್ತಾ ಕರ್ಣನು ಹೇಳಿದನು:

ಧರ್ಮಪ್ರಧಾನಂ ಕಿಲ ಪಾತಿ ಧರ್ಮ
ಇತ್ಯಬ್ರುವನ್ಧರ್ಮವಿದಃ ಸದೈವ ।
ವಯಂ ಚ ಧರ್ಮೇ ಪ್ರಯತಾಮ ನಿತ್ಯಂ
ಚರ್ತುಂ ಯಥಾಶಕ್ತಿ ಯಥಾಶ್ರುತಂ ಚ ।
ನ ಚಾಪಿ ನಿಘ್ನಾತಿ ನ ಪಾತಿ ಭಕ್ತಾ-
ನ್ಮನ್ಯೇ ನ ನಿತ್ಯಂ ಪರಿಪಾತಿ ಧರ್ಮಃ ॥೮೬॥

“ಧರ್ಮವನ್ನೇ ಪ್ರಧಾನವನ್ನಾಗಿಟ್ಟುಕೊಂಡು ವ್ಯವಹರಿಸುವವನನ್ನು ಎಲ್ಲ ಕಾಲಗಳಲ್ಲಿಯೂ ಧರ್ಮವೇ ರಕ್ಷಿಸುವುದೆಂದು ಧರ್ಮವಿದರು ಹೇಳುತ್ತಾರೆ. ನಾವಾದರೋ ಯಥಾಶಕ್ತಿ ಧರ್ಮಗ್ರಂಥಗಳಲ್ಲಿ ಹೇಗೆ ಹೇಳಿದೆಯೋ ಹಾಗೆ ಧರ್ಮಮಾರ್ಗದಲ್ಲಿಯೇ ನಡೆಯಲು ಪ್ರಯತ್ನಿಸುತ್ತಲೇ ಇದ್ದೇವೆ. ಈಗಿನ ನನ್ನ ಅನುಭವದಂತೆ ಆ ಧರ್ಮವೇ ನಮ್ಮನ್ನು ವಿನಾಶಗೊಳಿಸುತ್ತಿದೆ. (ಕೈಬಿಟ್ಟಿದೆ.) ಸಮಯಗಳಲ್ಲಿ ಧರ್ಮವು ಧರ್ಮಸೇವಕರನ್ನು ರಕ್ಷಿಸುವುದಿಲ್ಲ. ಆದುದರಿಂದ ಸರ್ವಕಾಲದಲ್ಲಿಯೂ ಧರ್ಮವು ಧರ್ಮಪ್ರಧಾನರಾಗಿರುವವರನ್ನು ರಕ್ಷಿಸುವುದಿಲ್ಲವೆಂದು ನಾನು ಭಾವಿಸುತ್ತೇನೆ.” ಕರ್ಣನು ಹೀಗೆ ಹೇಳುತ್ತಿದ್ದಾಗ ಅವನ ರಥದ ಕುದುರೆಗಳು ತತ್ತರಿಸಿದುವು. ಸಾರಥಿಯು ರಥದಿಂದ ಜಾರಿದನು. ಅರ್ಜುನನ ಬಾಣಗಳ

ಪ್ರಹಾರದಿಂದ ಕರ್ಣನು ವಿಚಲಿತನಾದನು. ಅರ್ಜುನನ ಬಾಣಗಳು ಮರ್ಮಸ್ಥಳಗಳಲ್ಲಿ ಬೀಳುತ್ತಿದ್ದುದರಿಂದ ಕರ್ಣನು ತನ್ನ ಕರ್ತವ್ಯದಲ್ಲಿ ಶೈಥಿಲ್ಯವನ್ನು ಹೊಂದಿದನು. (ಅರ್ಜುನನು ಬಿಟ್ಟ ಬಾಣಗಳಿಗೆ ಪ್ರತಿಯಾಗಿ ಬಾಣಗಳನ್ನು ಬಿಡಲು ಅಸಮರ್ಥನಾದನು.) ತನಗಾಗುತ್ತಿದ್ದ ತೊಂದರೆಗಳಿಗೆ ಪುನಃ ಪುನಃ ಧರ್ಮವನ್ನೇ ದೂಷಿಸಿದನು.

ಬಳಿಕ ಕರ್ಣನು ರಣರಂಗದಲ್ಲಿ ಭಯಂಕರವಾದ ಮೂರು ಬಾಣ ಗಳಿಂದ ಕೃಷ್ಣನ ಕೈಯನ್ನು ಗಾಯಗೊಳಿಸಿ ಅರ್ಜುನನನ್ನು ಏಳು ಬಾಣ ಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅರ್ಜುನನು ವಜ್ರಾಯುಧ ಸದೃಶವಾದ, ಅಗ್ನಿಯ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ, ಮಹಾಘೋರವಾಗಿದ್ದ, ತೀಕ್ಷ್ಣವಾದ ತೇಜಸ್ಸಿನಿಂದ ಕೂಡಿದ್ದ, ನೇರವಾಗಿ ಹೋಗುವ ಹದಿನೇಳು ಬಾಣಗಳನ್ನು ಕರ್ಣನ ಮೇಲೆ ಬಿಟ್ಟನು. ಭಯಂಕರವಾದ ವೇಗದಿಂದ ಕೂಡಿದ್ದ ಆ ಹದಿನೇಳು ಬಾಣಗಳೂ ಕರ್ಣ ನನ್ನು ಗಾಯಗೊಳಿಸಿ ಭೂಮಿಯ ಮೇಲೆ ಬಿದ್ದುವು. ಅದರಿಂದ ಕಂಪಿಸಿದ ಕರ್ಣನು ಪುನಃ ತನ್ನ ಶಕ್ತಿಯೆಲ್ಲವನ್ನೂ ಯೋಜಿಸಿ ಯುದ್ಧಮಾಡ ತೊಡಗಿದನು. ಧೈರ್ಯವನ್ನು ತಾಳಿ ಬಲಪೂರ್ವಕವಾಗಿ ಬ್ರಹ್ಮಾಸ್ತ್ರವನ್ನು ಪ್ರಕಟಿಸಿದನು. ಅದನ್ನು ನೋಡಿದ ಅರ್ಜುನನು ಐಂದ್ರಾಸ್ತ್ರವನ್ನು ಅಭಿಮಂತ್ರಿಸಿ ಬಾಣಪ್ರಯೋಗಮಾಡಿದನು. ಪರಂತಪನಾದ ಅರ್ಜುನನು ಗಾಂಡೀವಧನುಸ್ಸನ್ನೂ, ಮೌರ್ವಿಯನ್ನೂ ಮತ್ತು ಬಾಣಗಳನ್ನೂ ಐಂದ್ರಮಂತ್ರದಿಂದ ಅಭಿಮಂತ್ರಿಸಿ–ಪುರಂದರನು ನೀರಿನ ಮಳೆಗರೆಯು ವಂತೆ–ಬಾಣಗಳ ಮಳೆಯನ್ನೇ ಸುರಿಸಿದನು. ಬಳಿಕ ತೇಜೋಮಯ ವಾದ ಮಹಾವೀರ್ಯಯುಕ್ತವಾದ ಬಾಣಗಳು ಪಾರ್ಥನ ರಥದಿಂದ ಹೊರಟು ಕರ್ಣನ ರಥದ ಬಳಿಯಲ್ಲಿ ಪ್ರಕಟವಾದುವು. ಮಹಾರಥನಾದ ಕರ್ಣನು, ತನ್ನ ಬಳಿಗೆ ರಭಸದಿಂದ ಬರುತ್ತಿದ್ದ ಅರ್ಜುನಪ್ರಮುಕ್ತವಾದ ಎಲ್ಲ ಬಾಣಗಳನ್ನೂ ನಿಷ್ಫಲಗೊಳಿಸಿದನು. ಆ ಮಹಾಸ್ತ್ರವೂ ಕರ್ಣನ ಬಾಣಗಳಿಂದ ನಾಶಹೊಂದಲಾಗಿ ಶ್ರೀಕೃಷ್ಣನು ಅರ್ಜುನನೊಡನೆ ಹೇಳಿದನು: "ಪಾರ್ಥ! ಇದಕ್ಕಿಂತಲೂ ಶ್ರೇಷ್ಠವಾದ ಅಸ್ತ್ರವನ್ನು ಪ್ರಯೋಗಿಸು.

ರಾಧೇಯನು, ನೀನು ಅಸ್ತ್ರದ ಮೂಲಕವಾಗಿ ಬಿಟ್ಟ ಬಾಣಗಳೆಲ್ಲವನ್ನೂ ನುಂಗುತ್ತಲೇ ಇದ್ದಾನೆ.”

ಮಹಾರಾಜ! ಶ್ರೀಕೃಷ್ಣನ ಸಲಹೆಯಂತೆ ಅರ್ಜುನನು ಅತ್ಯುಗ್ರವಾದ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಧನುಸ್ಸಿನಲ್ಲಿ ಅನುಸಂಧಾನಮಾಡಿದನು.

ಅರ್ಜುನನು ಬ್ರಹ್ಮಾಸ್ತ್ರವನ್ನು ಪ್ರದರ್ಶಿಸುತ್ತಾ ಬಾಣಗಳಿಂದ ಕರ್ಣ ನನ್ನು ಆಚ್ಛಾದಿಸಿದನು. ಕರ್ಣನು ಆ ಬಾಣಗಳನ್ನೂ ಕತ್ತರಿಸಲಾಗಿ ಪುನಃ ಅರ್ಜುನನು ಇನ್ನೂ ಅನೇಕ ಬಾಣಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು. ಮರುಕ್ಷಣದಲ್ಲಿಯೇ ಕರ್ಣನು ಚೂಪಾಗಿದ್ದ ಮತ್ತು ಥಳ-ಥಳಿಸುತ್ತಿದ್ದ ಬಾಣಗಳಿಂದ ಗಾಂಡೀವಧನುಸ್ಸಿನ ಮೌರ್ವಿಯನ್ನೇ ಕತ್ತರಿಸಿದನು. ಒಡನೆಯೇ ಅರ್ಜುನನು ಮತ್ತೊಂದು ಶಿಂಜಿನಿಯನ್ನು ಧನುಸ್ಸಿಗೆ ಬಿಗಿದನು. ಅದನ್ನೂ ಕರ್ಣನು ಕತ್ತರಿಸಿದನು. ಹೀಗೆಯೇ ಕರ್ಣನು ಅರ್ಜುನನ ಧನುಸ್ಸಿನ ಹನ್ನೊಂದು ಶಿಂಜಿನಿಗಳನ್ನು ಕತ್ತರಿಸಿದನು. ಆದರೆ ನೂರು ಬಾಣಗಳನ್ನು ಏಕಕಾಲದಲ್ಲಿ ಅನುಸಂಧಾನಮಾಡಿ ಶತ್ರುವಿನ ಮೇಲೆ ಪ್ರಯೋಗಿಸುವಷ್ಟು ಸಾಮರ್ಥ್ಯವಿರುವ ಕರ್ಣನಿಗೆ ಅರ್ಜುನನ ಧನುಸ್ಸಿನಲ್ಲಿ ನೂರು ಶಿಂಜಿನಿಗಳಿದ್ದುವೆಂಬುದು ತಿಳಿದಿರಲಿಲ್ಲ. ಆ ಕಾರಣ ದಿಂದಲೇ ಕರ್ಣನು ಶಿಂಜಿನಿಯನ್ನು ಕತ್ತರಿಸುತ್ತಿದ್ದಂತೆಲ್ಲಾ ಅರ್ಜುನನು ಸ್ವಲ್ಪವೂ ಭ್ರಾಂತನಾಗದೇ ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಮತ್ತೊಂದು ಶಿಂಜಿನಿಯನ್ನು ಧನುಸ್ಸಿಗೆ ಜೋಡಿಸುತ್ತಿದ್ದನು. ಹನ್ನೊಂದ ನೆಯ ಶಿಂಜಿನಿಯನ್ನು ಕತ್ತರಿಸಿದನಂತರವೂ ಅರ್ಜುನನು ಕ್ಷಣಮಾತ್ರದಲ್ಲಿ ಹನ್ನೆರಡನೆಯ ಶಿಂಜಿನಿಯನ್ನು ಧನುಸ್ಸಿನಲ್ಲಿ ಬಂಧಿಸಿ ಮಹಾಮಂತ್ರದಿಂದ ಅಭಿಮಂತ್ರಿಸಿ ವಿಷಸರ್ಪಗಳಂತೆ ದೇದೀಪ್ಯಮಾನವಾಗಿದ್ದ ಬಾಣಗಳಿಂದ ಕರ್ಣನನ್ನು ಆಚ್ಛಾದಿಸಿದನು. ಅವನ ಬಾಣಪ್ರಯೋಗದ ವೇಗವು ಎಷ್ಟಿತ್ತೆಂದರೆ: ಕರ್ಣನಿಗೆ ಶಿಂಜಿನಿಯನ್ನು ಕತ್ತರಿಸಿದುದರ ಅರಿವೂ ಇರುತ್ತಿರಲಿಲ್ಲ. ಅರ್ಜುನನು ಪುನಃ ಶಿಂಜಿನಿಯನ್ನು ಬಂಧಿಸಿದುದರ ಅರಿವೂ ಇರುತ್ತಿರಲಿಲ್ಲ. ಅದು ಪ್ರೇಕ್ಷಕರಿಗೆ ಪರಮಾದ್ಭುತವಾಗಿ ಕಾಣುತ್ತಿದ್ದಿತು.

ಅರ್ಜುನನು ಬಿಡುತ್ತಿದ್ದ ಅಸ್ತ್ರಗಳನ್ನು ಅಸ್ತ್ರಗಳಿಂದಲೇ ನಿವಾರಣೆಮಾಡುತ್ತಾ ಮತ್ತು ಅದನ್ನು ಸಂಪೂರ್ಣವಾಗಿ ನಾಶಗೊಳಿಸುತ್ತಾ ಇದ್ದ ಕರ್ಣನು ತನ್ನ ವೀರ್ಯಾತಿಶಯವನ್ನು ಪ್ರದರ್ಶಿಸುತ್ತಾ ತಾನು ಪಾರ್ಥನಿಗಿಂತಲೂ ಅಧಿಕನಾದವನೆಂಬುದನ್ನು ಕಾರ್ಯತಃ ತೋರಿಸುತ್ತಿದ್ದನು. ಕರ್ಣನ ಅಸ್ತ್ರದಿಂದ ಪೀಡಿತನಾದ ಅರ್ಜುನನನ್ನು ನೋಡಿ ಶ್ರೀಕೃಷ್ಣನು 'ಎಡೆಬಿಡದೇ ಅಸ್ತ್ರಗಳನ್ನು ಬಿಡುತ್ತಲೇ ಇರು; ಉತ್ತಮಾಸ್ತ್ರಗಳನ್ನು ಪ್ರಯೋಗಿಸು; ಮುಂದೆ-ಮುಂದೆ ಹೋಗು'–ಎಂದು ಉತ್ತೇಜಿಸಿದನು.

ಶ್ರೀಕೃಷ್ಣನ ಆ ಮಾತನ್ನು ಕೇಳಿ ಅರ್ಜುನನು ಅಗ್ನಿಸದೃಶವಾಗಿದ್ದ ಅತಿ ಘೋರವಾಗಿದ್ದ, ಸರ್ಪದ ವಿಷಕ್ಕೆ ಸಮಾನವಾಗಿದ್ದ, ಲೋಹಮಯವಾಗಿದ್ದ, ದಿವ್ಯವಾದ ಬಾಣವನ್ನು ಅಭಿಮಂತ್ರಿಸಿ ಅದರಲ್ಲಿ ರೌದ್ರಾಸ್ತ್ರವನ್ನು ಪ್ರತಿಷ್ಠಾಪಿಸಿ ಕರ್ಣನ ಮೇಲೆ ಬಿಡುವುದರಲ್ಲಿದ್ದನು. ಆದರೆ ಆ ವೇಳೆಗೆ ಸರಿಯಾಗಿ ಕರ್ಣನ ರಥದ ಚಕ್ರವನ್ನು ಭೂಮಿಯು ನುಂಗಿಬಿಟ್ಟಿತು. (ಕರ್ಣನ ರಥದ ಚಕ್ರವು ಭೂಮಿಯಲ್ಲಿ ಹುದುಗಿಕೊಂಡಿತು.) ಒಡನೆಯೇ ರಾಧೇಯನು ರಥದಿಂದ ಕೆಳಗಿಳಿದು ಎರಡು ತೋಳುಗಳಿಂದಲೂ ರಥಚಕ್ರವನ್ನು ಪ್ರಯತ್ನಪೂರ್ವಕವಾಗಿ ಮೇಲೆತ್ತಲು ನಿಶ್ಚಯಿಸಿದನು.

**ಸಪ್ತದ್ವೀಪಾ ವಸುಮತೀ ಸಶೈಲವನಕಾನನಾ ।**
**ಗೀರ್ಣಚಕ್ರಾ ಸಮುತ್ಕ್ಷಿಪ್ತಾ ಕರ್ಣೇನ ಚತುರಙ್ಗುಲಮ್ ॥೧೦೬॥**

ಏಳು ದ್ವೀಪಗಳಿಂದ ಕೂಡಿರುವ, ಪರ್ವತಾರಣ್ಯ-ಕಾನನಗಳಿಂದ ಯುಕ್ತವಾದ, ಚಕ್ರವನ್ನು ನುಂಗಿರುವ ಭೂಮಿಯೇ ಮಹಾಬಲಶಾಲಿಯಾದ ಕರ್ಣನಿಂದ ನಾಲ್ಕು ಅಂಗುಲಗಳಷ್ಟು ಮೇಲಕ್ಕೆತ್ತಲ್ಪಟ್ಟಿತು. (ರಥಚಕ್ರವು ಮಾತ್ರ ಭೂಮಿಯಿಂದ ಹೊರಕ್ಕೆ ಬರಲಿಲ್ಲ.) ರಥದ ಚಕ್ರವು ನೆಲದಲ್ಲಿ ಹುದುಗಿಕೊಂಡು ಹೋಗಿದ್ದಿತು. ಮಹಾಪ್ರಯತ್ನದಿಂದಲೂ ಅದನ್ನು ಮೇಲಕ್ಕೆತ್ತಲಾಗಲಿಲ್ಲ. ರಾಧೇಯನು ಕೋಪದಿಂದ ಕಣ್ಣೀರು ಸುರಿಸಿದನು. ಮಹಾಸ್ತ್ರವನ್ನು ಧನುಸ್ಸಿನಲ್ಲಿ ಯೋಜಿಸಿ ಕೋಪಾವಿಷ್ಟನಾಗಿದ್ದ ಅರ್ಜುನನನ್ನು ನೋಡಿ ಅವನೊಡನೆ ಕರ್ಣನು ಹೇಳಿದನು:

ಭೋ ಭೋಃ ಪಾರ್ಥ ಮಹೇಷ್ವಾಸ ಮುಹೂರ್ತಂ ಪರಿಪಾಲಯ ।
ಯಾವಚ್ಚಕ್ರಮಿದಂ ಗ್ರಸ್ತಮುದ್ಧರಾಮಿ ಮಹೀತಲಾತ್ ॥೧೦೮॥



“ಮಹಾಧನುಷ್ಮಂತನೇ! ಪಾರ್ಥ! ಮುಹೂರ್ತಕಾಲ ಪ್ರತೀಕ್ಷಿಸು. ಭೂಮಿಯಲ್ಲಿ ಹುದುಗಿಕೊಂಡಿರುವ ಈ ಚಕ್ರವನ್ನು ಮೇಲೆತ್ತುವವರೆಗೂ ಸ್ವಲ್ಪ ಅವಕಾಶಕೊಡು.

ಸವ್ಯಂ ಚಕ್ರಂ ಮಹೀಗ್ರಸ್ತಂ ದೃಷ್ಟ್ವಾ ದೈವಾದಿದಂ ಮಮ ।
ಪಾರ್ಥ ಕಾಪುರುಷಾಚೀರ್ಣಮಭಿಸಂಧಿಂ ವಿಸರ್ಜಯ ॥೧೦೯॥

ಅರ್ಜುನ! ದುರದೃಷ್ಟದಿಂದ ನನ್ನ ರಥದ ಎಡಭಾಗದ ಚಕ್ರವು ಭೂಮಿಯಲ್ಲಿ ಹುದುಗಿಕೊಂಡಿದೆ. ಇದನ್ನು ನೋಡುತ್ತಿದ್ದರೂ ಪ್ರಹರಿಸಲು ಇದೇ ಸರಿಯಾದ ಸಮಯವೆಂದು ಬಗೆಯಬೇಡ. ಇದು ಕೇವಲ ಕಾಪುರುಷರು ಅನುಸರಿಸುವ ಮಾರ್ಗವಾಗಿರುತ್ತದೆ. ಆ ಮಾರ್ಗವನ್ನು ಬಿಟ್ಟುಬಿಡು.

**ನ ತ್ವಂ ಕಾಪುರುಷಾಚೀರ್ಣಂ ಮಾರ್ಗಮಾಸ್ಥಾತುಮರ್ಹಸಿ ।**
**ಖ್ಯಾತಸ್ತ್ವಮಸಿ ಕೌನ್ತೇಯ ವಿಶಿಷ್ಟೋ ರಣಕರ್ಮಸು ।**
**ವಿಶಿಷ್ಟತರಮೇವ ತ್ವಂ ಕರ್ತುಮರ್ಹಸಿ ಪಾಣ್ಡವ ॥೧೧೦॥**

ಕುತ್ಸಿತರಾದ ಮನುಷ್ಯರು ಅನುಸರಿಸುವ ಮಾರ್ಗವನ್ನು ಅನುಸರಿಸುವುದು ನಿನಗೆ ಖಂಡಿತವಾಗಿಯೂ ಉಚಿತವೆನಿಸುವುದಿಲ್ಲ. ನೀನು ಯುದ್ಧಕರ್ಮಗಳಲ್ಲಿ ವಿಶೇಷವಾದ ರೀತಿಯಲ್ಲಿ ಖ್ಯಾತಿಯನ್ನು ಪಡೆದಿರುವೆ. ಈ ಸಮಯದಲ್ಲಂತೂ ನೀನು ವಿಶಿಷ್ಟತರವಾದ ಕಾರ್ಯವನ್ನು ಮಾಡುವುದೇ ನಿನಗೆ ಯೋಗ್ಯವೆನಿಸುತ್ತದೆ.

**ಪ್ರಕೀರ್ಣಕೇಶೇ ವಿಮುಖೇ ಬ್ರಾಹ್ಮಣೇऽಥ ಕೃತಾಞ್ಜಲೌ ।**
**ಶರಣಾಗತೇ ನ್ಯಸ್ತಶಸ್ತ್ರೇ ಯಾಚಮಾನೇ ತಥಾರ್ಜುನ ॥೧೧೧॥**

**ಅಬಾಣೇ ಭ್ರಷ್ಟಕವಚೇ ಭ್ರಷ್ಟಭಗ್ನಾಯುಧೇ ತಥಾ ।**
**ನ ವಿಮುಞ್ಚನ್ತಿ ಶಸ್ತ್ರಾಣಿ ಶೂರಾಃ ಸಾಧುವ್ರತೇ ಸ್ಥಿತಾಃ ॥೧೧೨॥**

ಅರ್ಜುನ! ಮುಡಿಯು ಬಿಚ್ಚಿಹೋಗಿರುವವನನ್ನೂ, ಯುದ್ಧದಿಂದ ವಿಮುಖನಾದವನನ್ನೂ, ಬ್ರಾಹ್ಮಣನನ್ನೂ, ಬದ್ಧಾಂಜಲಿಯಾಗಿ ಶರಣಾಗತ ನಾದವನನ್ನೂ, ಶಸ್ತ್ರಸಂನ್ಯಾಸಮಾಡಿದವನನ್ನೂ, ಜೀವಯಾಚಕನನ್ನೂ, ಬಾಣಗಳಿಂದ ರಹಿತನಾದವನನ್ನೂ, ಕವಚದಿಂದ ವಿಹೀನನಾಗಿರು ವವನನ್ನೂ, ಆಯುಧಗಳನ್ನು ಕಳೆದುಕೊಂಡಿರುವವನನ್ನೂ–ಸಾಧುವ್ರತ ದಲ್ಲಿರುವ ಶಿಷ್ಟರಾದ ವೀರರು ಶಸ್ತ್ರಗಳಿಂದ ಪ್ರಹರಿಸುವುದಿಲ್ಲ. (ಇಂತಹವರ ಮೇಲೆ ಶಸ್ತ್ರಗಳನ್ನು ಪ್ರಯೋಗಿಸುವುದಿಲ್ಲ.)

**ತ್ವಂ ಚ ಶೂರತಮೋ ಲೋಕೇ ಸಾಧುವೃತ್ತಶ್ಚ ಪಾಣ್ಡವ ।**
**ಅಭಿಜ್ಞೋ ಯುದ್ಧಧರ್ಮಾಣಾಂ ವೇದಾನ್ತಾವಭೃತಾಪ್ಲುತಃ ।**
**ದಿವ್ಯಾಸ್ತ್ರವಿದಮೇಯಾತ್ಮಾ ಕಾರ್ತವೀರ್ಯಸಮೋ ಯುಧಿ ॥೧೧೩॥**

ಅರ್ಜುನ! ನೀನಾದರೋ ಲೋಕದಲ್ಲಿಯೇ ಶೂರತಮನು. ಸದಾಚಾರಸಂಪನ್ನನು. ಯುದ್ಧದ ಧರ್ಮಗಳನ್ನು ಚೆನ್ನಾಗಿ ತಿಳಿದಿರುವವನು. ವೇದಾಂತಾಧ್ಯಯನರೂಪವಾದ ಯಜ್ಞವನ್ನು ಪರಿಸಮಾಪ್ತಿಗೊಳಿಸಿ ಅವಭೃಥಸ್ನಾನವನ್ನೂ ನೀನು ಮಾಡಿರುವೆ. (ಜೀವನದ ರಹಸ್ಯವನ್ನು ತಿಳಿದಿರುವೆ. ಯಜ್ಞಗಳಲ್ಲಿ ಅವಭೃಥಸ್ನಾನವನ್ನೂ ಮಾಡಿರುವೆ.) ಎಲ್ಲ ದಿವ್ಯಾಸ್ತ್ರಗಳನ್ನೂ ತಿಳಿದವನಾಗಿರುವೆ. ಆತ್ಮಬಲಸಂಪನ್ನನಾಗಿರುವೆ. ಯುದ್ಧದಲ್ಲಿ ನೀನು ಕಾರ್ತವೀರ್ಯನಿಗೆ ಸಮಾನನು. ಮಹಾಭುಜನೇ! ಭೂಮಿಯಲ್ಲಿ ಹುದುಗಿಕೊಂಡಿರುವ ಈ ನನ್ನ ರಥದ ಚಕ್ರವನ್ನು ಮೇಲೆತ್ತುವವರೆಗೆ ರಥದಲ್ಲಿ ಕುಳಿತಿರುವ ನೀನು ಭೂಮಿಯ ಮೇಲಿರುವ ಮತ್ತು ರಥಾಂಗದಿಂದ ವಿಕಲನಾಗಿರುವ ನನ್ನನ್ನು ಸಂಹರಿಸುವುದು ಯೋಗ್ಯವೆನಿಸುವುದಿಲ್ಲ.

**ನ ವಾಸುದೇವಾತ್ತ್ವತ್ತೋ ವಾ ಪಾಣ್ಡವೇಯ ಬಿಭೇಮ್ಯಹಮ್ ।**
**ತ್ವಂ ಹಿ ಕ್ಷತ್ರಿಯದಾಯಾದೋ ಮಹಾಕುಲವಿವರ್ಧನಃ ।**
**ಅತಸ್ತ್ವಾಂ ಪ್ರಬ್ರವೀಮ್ಯೇಷ ಮುಹೂರ್ತಂ ಕ್ಷಮ ಪಾಣ್ಡವ ॥೧೧೬॥**

ವಾಸುದೇವನಿಗಾಗಲೀ, ನಿನಗಾಗಲೀ ಭಯಪಟ್ಟುಕೊಂಡು ಹೀಗೆ ಮಾತನಾಡುತ್ತಿರುವೆನೆಂದು ಭಾವಿಸಬೇಡ. ನೀನು ಕ್ಷತ್ರಿಯಕುಲದಲ್ಲಿ ಹುಟ್ಟಿರುವೆ ಮತ್ತು ಮಹಾಕುರುಕುಲದ ಕೀರ್ತಿಯನ್ನು ವರ್ಧಿಸುವವನಾಗಿರುವೆ. ಈ ಕಾರಣದಿಂದ ನಿನಗೆ ಈ ಮಾತನ್ನು ಹೇಳುತ್ತಿದ್ದೇನೆ. (ನಾನು ಹೇಳಿದಂತೆ ಮಾಡುವುದರಿಂದ ನಿನ್ನ ಕೀರ್ತಿಯು ಮತ್ತಷ್ಟು ಅಧಿಕವಾಗುತ್ತದೆ.) ಆದುದರಿಂದ ಮುಹೂರ್ತಕಾಲ (ಸ್ವಲ್ಪಹೊತ್ತು) ಸೈರಿಸು."

೯೦ನೆಯ ಅಧ್ಯಾಯವು ಮುಗಿಯಿತು.

೯೧ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಕರ್ಣನನ್ನು ಎಚ್ಚರಿಸಿದುದು: ಕರ್ಣನ ವಧೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಕರ್ಣನು ಅರ್ಜುನನೊಡನೆ ಹೇಳಿದ ಮಾತುಗಳನ್ನು ಕೇಳಿ ರಥದಲ್ಲಿ ಕುಳಿತಿದ್ದ ಶ್ರೀಕೃಷ್ಣನು ಕರ್ಣನಿಗೆ ಹೇಳಿದನು:

ರಾಧೇಯ ದಿಷ್ಟ್ಯಾ ಸ್ಮರಸೀಹ ಧರ್ಮಮ್ ।
ಪ್ರಾಯೇಣ ನೀಚಾ ವ್ಯಸನೇಷು ಮಗ್ನಾ
ನಿನ್ದನ್ತಿ ದೈವಂ ಕುಕೃತಂ ನ ತು ಸ್ವಮ್ ॥೧॥

"ರಾಧೇಯ! ಅದೃಷ್ಟವಶಾತ್ ನೀನು ಈಗ ಧರ್ಮವನ್ನು ಸ್ಮರಿಸುತ್ತಿರುವೆಯಲ್ಲವೇ! ನೀಚರ ಸ್ವಭಾವವೇ ಇಂತಹುದು. ವ್ಯಸನದಲ್ಲಿ ಮುಳುಗಿದಾಗ (ಸಂಕಟದಲ್ಲಿ ಸಿಕ್ಕಿಕೊಂಡಾಗ) ನೀಚಪುರುಷರು ಸಾಮಾನ್ಯವಾಗಿ ದೈವವನ್ನೇ ನಿಂದಿಸುತ್ತಾರೆ. ಆದರೆ ತಾವು ಮಾಡಿದ ಕುತ್ಸಿತಕರ್ಮಗಳನ್ನು ಅವರೆಂದಿಗೂ ನಿಂದಿಸುವುದೇ ಇಲ್ಲ. (ಸ್ಮರಿಸುವುದೇ ಇಲ್ಲ.)

ಯದ್ದ್ರೌಪದೀಮೇಕವಸ್ತ್ರಾಂ ಸಭಾಯಾ-
ಮಾನಾಯಯೇಸ್ತ್ವಂ ಚ ಸುಯೋಧನಶ್ಚ ।
ದುಃಶಾಸನಃ ಶಕುನಿಃ ಸೌಬಲಶ್ಚ
ನ ತೇ ಕರ್ಣ ಪ್ರತ್ಯಭಾತ್ತತ್ರ ಧರ್ಮಃ ॥೨॥

ನೀನು, ಸುಯೋಧನ, ದುಃಶಾಸನ, ಸುಬಲನ ಮಗನಾದ ಶಕುನಿ–ಈ ನಾಲ್ವರೂ ಸೇರಿ ಒಂದೇ ವಸ್ತ್ರವನ್ನುಟ್ಟಿದ್ದ ದ್ರೌಪದಿಯನ್ನು ತುಂಬಿದ ಸಭೆಗೆ ದುಃಶಾಸನನ ಮೂಲಕ ದರ-ದರನೆ ಎಳೆತರಿಸಿದಿರಿ. ಕರ್ಣ! ಆ ಸಮಯದಲ್ಲಿ ಧರ್ಮದ ವಿಚಾರವೇ ನಿನ್ನ ಸ್ಮೃತಿಪಥದಲ್ಲಿ ಗೋಚರಿಸಲಿಲ್ಲ, ಅಲ್ಲವೇ?

ಯದಾ ಸಭಾಯಾಂ ರಾಜಾನಮನಕ್ಷಜ್ಞಂ ಯುಧಿಷ್ಠಿರಮ್ ।
ಅಜೈಷೀಚ್ಛಕುನಿರ್ಜ್ಞಾನಾತ್ಕ್ವ ತೇ ಧರ್ಮಸ್ತದಾ ಗತಃ ॥೩॥

ಯುಧಿಷ್ಠಿರರಾಜನಿಗೆ ಅಕ್ಷವಿದ್ಯೆಯು ತಿಳಿದಿರಲಿಲ್ಲ. ಅವನಿಗೆ ಅದು ತಿಳಿದಿಲ್ಲವೆಂಬುದು ಶಕುನಿಗೆ ಚೆನ್ನಾಗಿ ತಿಳಿದಿದ್ದಿತು. ಹಾಗೆ ತಿಳಿದಿದ್ದರೂ ರಾಜನನ್ನು ಪಗಡೆಯಾಟಕ್ಕೆ ಕರೆದು ತುಂಬಿದ ಸಭೆಯಲ್ಲಿ ಶಕುನಿಯು ಅವನನ್ನು ಛಲದಿಂದ ಪರಾಜಯಗೊಳಿಸಿದನು. ಆ ಸಮಯದಲ್ಲಿ ನಿನ್ನ ಧರ್ಮವೆಲ್ಲಿಗೆ ಹೋಗಿದ್ದಿತು?

ವನವಾಸೇ ವ್ಯತೀತೇ ಚ ಕರ್ಣ ವರ್ಷೇ ತ್ರಯೋದಶೇ ।
ನ ಪ್ರಯಚ್ಛಸಿ ಯದ್ರಾಜ್ಯಂ ಕ್ವ ತೇ ಧರ್ಮಸ್ತದಾ ಗತಃ ॥೪॥

ಹನ್ನೆರಡು ವರ್ಷಗಳ ವನವಾಸವೂ ಮತ್ತು ಒಂದು ವರ್ಷದ ಅಜ್ಞಾತವಾಸವೂ ಕಳೆದುಹೋದರೂ ಮಾಡಿಕೊಂಡಿದ್ದ ನಿಬಂಧನೆಯಂತೆ ಪಾಂಡವರಿಗೆ ಅವರ ರಾಜ್ಯವನ್ನು ನೀನು ಕೊಡಲಿಲ್ಲ. (ದುರ್ಯೋಧನನಿಂದ ಕೊಡಿಸಲಿಲ್ಲ.) ಪಾಂಡವರು ತಮ್ಮ ವನವಾಸವನ್ನೂ ಅಜ್ಞಾತವಾಸವನ್ನೂ



ಮುಗಿಸಿಕೊಂಡು ಬಂದು ತಮ್ಮ ರಾಜ್ಯವನ್ನಪೇಕ್ಷಿಸಿದ ಕಾಲದಲ್ಲಿ ನಿನ್ನ ಈ ಧರ್ಮವು ಎಲ್ಲಿಗೆ ಹೋಗಿದ್ದಿತು?

**ಯದ್ಭೀಮಸೇನಂ ಸರ್ಪೈಶ್ಚ ವಿಷಯುಕ್ತೈಶ್ಚ ಭೋಜನೈಃ ।**
**ಆಚರತ್ತನ್ಮತೇ ರಾಜಾ ಕ್ವ ತೇ ಧರ್ಮಸ್ತದಾ ಗತಃ ॥೫॥**

ನಿನ್ನ ಸಲಹೆಯಂತೆಯೇ ದುರ್ಯೋಧನನು ಭೀಮಸೇನನನ್ನು ವಿಷ ಸರ್ಪಗಳಿಂದ ಕಡಿಸಿದನು. ವಿಷಪೂರ್ಣವಾದ ಭೋಜನವನ್ನು ಉಣಿಸಿ ದನು. ಆ ಸಮಯದಲ್ಲಿ ನಿನಗೆ ಧರ್ಮಾಧರ್ಮಗಳ ವಿವೇಚನೆಯಿರ ಲಿಲ್ಲವೇ?

**ಯದ್ವಾರಣಾವತೇ ಪಾರ್ಥಾನ್ಸುಪ್ತಾಂಜ್ಜತುಗೃಹೇ ತದಾ ।**
**ಆದೀಪಯಸ್ತ್ವಂ ರಾಧೇಯ ಕ್ವ ತೇ ಧರ್ಮಸ್ತದಾ ಗತಃ ॥೬॥**

ವಾರಣಾವತದಲ್ಲಿ ಉದ್ದೇಶಪೂರ್ವಕವಾಗಿ ನಿರ್ಮಿಸಿದ್ದ ಅರಗಿನ ಮನೆ ಯಲ್ಲಿ ಮಲಗಿದ್ದ ಪಾರ್ಥರನ್ನು ಸುಡಲು ಯತ್ನಿಸಿದೆ. (ನಿನ್ನ ಸಲಹೆಯಂತೆಯೇ ದುರ್ಯೋಧನನು ಅವರನ್ನು ಸುಟ್ಟುಹಾಕಲು ಪ್ರಯತ್ನಿಸಿದನು.) ಆ ಸಮಯದಲ್ಲಿ ನಿನ್ನ ಧರ್ಮವೆಲ್ಲಿಗೆ ಹೋಗಿದ್ದಿತು?

**ಯದಾ ರಜಸ್ವಲಾಂ ಕೃಷ್ಣಾಂ ದುಃಶಾಸನವಶೇ ಸ್ಥಿತಾಮ್ ।**
**ಸಭಾಯಾಂ ಪ್ರಾಹಸಃ ಕರ್ಣ ಕ್ವ ತೇ ಧರ್ಮಸ್ತದಾ ಗತಃ ॥೭॥**

ದುಃಶಾಸನನ ಹಿಡಿತದಲ್ಲಿದ್ದ, ರಜಸ್ವಲೆಯಾಗಿದ್ದ ದ್ರೌಪದಿಯನ್ನು ನೀನು ತುಂಬಿದ ಸಭೆಯಲ್ಲಿ ಅಪಹಾಸ್ಯಮಾಡಿದೆ. ಹಾಗೆ ಮಾಡುವುದು ಅಪರಾಧವೆಂದೂ, ಅಧರ್ಮವೆಂದೂ ಆಗ ನಿನಗೆ ಅನಿಸಲಿಲ್ಲವೇ? ಆ ಸಮಯದಲ್ಲಿ ನಿನ್ನ ಧರ್ಮವೆಲ್ಲಿ ಹೋಗಿದ್ದಿತು?

**ಯದನಾರ್ಯೈಃ ಪುರಾ ಕೃಷ್ಣಾಂ ಕ್ಲಿಶ್ಯಮಾನಾಮನಾಗಸಾಮ್ ।**
**ಉಪಪ್ರೇಕ್ಷಸಿ ರಾಧೇಯ ಕ್ವ ತೇ ಧರ್ಮಸ್ತದಾ ಗತಃ ॥೮॥**

ಅನಾರ್ಯರಾದ ದುರ್ಯೋಧನಾದಿಗಳು ನಿರಪರಾಧಿನಿಯಾದ ದ್ರೌಪದಿಯನ್ನು ಬಹಳವಾಗಿ ಕ್ಲೇಶಪಡಿಸಿದರು. ಆ ಸಮಯದಲ್ಲಿ ನೀನು ಮತಿಗೆಟ್ಟವನಂತೆ ಅತ್ಯಂತ ಸಮೀಪಕ್ಕೆ ಹೋಗಿ ಅವಳನ್ನು ನೀಚದೃಷ್ಟಿಯಿಂದ ನೋಡಿದೆ. (ಪರಸ್ತ್ರೀಯನ್ನು ಹಾಗೆ ನೋಡುವುದು ಅಧರ್ಮವೆಂದು ನಿನಗೆ ಆಗ ಅನಿಸಲಿಲ್ಲವೇ?) ಆ ಸಮಯದಲ್ಲಿ ನಿನ್ನ ಧರ್ಮವು ಎಲ್ಲಿಗೆ ಹೋಗಿದ್ದಿತು?

**ವಿನಷ್ಟಾಃ ಪಾಣ್ಡವಾಃ ಕೃಷ್ಣೇ ಶಾಶ್ವತಂ ನರಕಂ ಗತಾಃ ।**

**ಪತಿಮನ್ಯಂ ವೃಣೀಷ್ವೇತಿ ವದಂಸ್ತ್ವಂ ಗಜಗಾಮಿನೀಮ್ ।**
**ಉಪಪ್ರೇಕ್ಷಸಿ ರಾಧೇಯ ಕ್ವ ತೇ ಧರ್ಮಸ್ತದಾ ಗತಃ ॥೯॥**

"ಪಾಂಡವರೆಲ್ಲರೂ ಹಾಳಾಗಿ ಹೋದರು; ಶಾಶ್ವತವಾದ ನರಕದಲ್ಲಿ ಬಿದ್ದುಹೋದರು. ಇನ್ನು ಅವರ ಉದ್ಧಾರವು ಸಾಧ್ಯವಾಗಲಾರದು. ಆದುದರಿಂದ ಬೇರೆ ಯಾರನ್ನಾದರೂ ಪತಿಯನ್ನಾಗಿ ವರಿಸು." ಹೀಗೆ ಗಜಗಾಮಿನಿಯಾದ ದ್ರೌಪದಿಗೆ ಹೇಳುತ್ತಾ ಅವಳ ಸಮೀಪಕ್ಕೆ ಹೋಗಿ ಅವಳ ಮುಖವನ್ನು ದಿಟ್ಟಿಸಿ ನೋಡುತ್ತಿದ್ದೆ. ಸಾಧ್ವಿಯ ವಿಷಯದಲ್ಲಿ ಇಂತಹ ಮಾತುಗಳನ್ನಾಡುವುದು ನಿನಗೆ ಅಧರ್ಮವೆನಿಸಲಿಲ್ಲವೇ? ಆ ಸಮಯದಲ್ಲಿ ನಿನ್ನ ಧರ್ಮವು ಎಲ್ಲಿಗೆ ಹೋಗಿದ್ದಿತು?

**ರಾಜ್ಯಲುಬ್ಧಃ ಪುನಃ ಕರ್ಣ ಸಮಾವ್ಯಥಸಿ ಪಾಣ್ಡವಾನ್ ।**
**ಯದಾ ಶಕುನಿಮಾಶ್ರಿತ್ಯ ಕ್ವ ತೇ ಧರ್ಮಸ್ತದಾ ಗತಃ ॥೧೦॥**

ರಾಜ್ಯಲುಬ್ಧನಾದ ನೀನು, ಶಕುನಿಯ ಮೋಸದ ಪಗಡೆಯಾಟವನ್ನೇ ಉತ್ತೇಜಿಸಿ, ಅವನ ಸಲಹೆಯಂತೆ ಇಂದ್ರಪ್ರಸ್ಥಕ್ಕೆ ಹೊರಟುಹೋಗಿದ್ದ ಪಾಂಡವರನ್ನು ಪುನಃ ಜೂಜಾಟಕ್ಕೆ ಕರೆಯಿಸಿ ಅವರನ್ನು ಅತ್ಯಂತ ವ್ಯಥಿತರನ್ನಾಗಿ ಮಾಡಿದೆ. ಆ ಸಮಯದಲ್ಲಿ ನಿನ್ನ ಈ ಧರ್ಮವು ಎಲ್ಲಿಗೆ ಹೋಗಿದ್ದಿತು?

**ಯದಾಭಿಮನ್ಯುಂ ಬಹವೋ ಯುದ್ಧೇ ಜಘ್ನುರ್ಮಹಾರಥಾಃ ।**
**ಪರಿವಾರ್ಯ ರಣೇ ಬಾಲಂ ಕ್ವ ತೇ ಧರ್ಮಸ್ತದಾ ಗತಃ ॥೧೧॥**

ಯುದ್ಧದಲ್ಲಿ ಏಕಾಕಿಯಾಗಿದ್ದ ಬಾಲನಾದ ಅಭಿಮನ್ಯುವನ್ನು ಅನೇಕ ಮಹಾರಥರು ಸುತ್ತುವರಿದು ಸಂಹಾರಮಾಡಿದರು. ಆ ಸಮಯದಲ್ಲಿ ನಿನ್ನ ಈ ಧರ್ಮವು ಎಲ್ಲಿಗೆ ಹೋಗಿದ್ದಿತು?

**ಯದ್ಯೇಷ ಧರ್ಮಸ್ತತ್ರ ನ ವಿದ್ಯತೇ ಹಿ**
**ಕಿಂ ಸರ್ವಥಾ ತಾಲುವಿಶೋಷಣೇನ ।**
**ಅದ್ಯೇಹ ಧರ್ಮ್ಯಾಣಿ ವಿಧತ್ಸ್ವ ಸೂತ**
**ತಥಾಪಿ ಜೀವನ್ನ ವಿಮೋಕ್ಷ್ಯಸೇ ಹಿ ॥೧೨॥**

ನೀನು ಈಗ ಹೇಳುತ್ತಿರುವ ಧರ್ಮವು ಹಿಂದೆ ನಿನ್ನ ಆಚರಣೆಯಲ್ಲಿರಲಿಲ್ಲ. ಆದುದರಿಂದ ಧರ್ಮದ ವಿಷಯವಾಗಿ ಈಗ ನೀನು ಮಾತನಾಡುವುದರಿಂದ ದವಡೆಯು ಮಾತ್ರವೇ ಒಣಗುತ್ತದೆ. ಮತ್ತಾವ ಪ್ರಯೋಜನವೂ ಕಾಣುವುದಿಲ್ಲ. ಈಗ ನೀನು ಅನೇಕ ಧರ್ಮಕಾರ್ಯಗಳನ್ನೇ ಮಾಡು. ಆದರೂ ನೀನಿಂದು ಜೀವಸಹಿತವಾಗಿ ರಣಾಂಗಣದಿಂದ ಮುಕ್ತನಾಗಲಾರೆ.

**ನಲೋ ಹ್ಯಕ್ಷೈರ್ನಿರ್ಜಿತಃ ಪುಷ್ಕರೇಣ**
**ಪುನರ್ಯಶೋ ರಾಜ್ಯಮವಾಪ ವೀರ್ಯಾತ್ ।**
**ಪ್ರಾಪ್ತಾಸ್ತಥಾ ಪಾಣ್ಡವಾ ಬಾಹುವೀರ್ಯಾ-**
**ತ್ಸರ್ವೈಃ ಸಮೇತಾಃ ಪರಿವೃತ್ತಲೋಭಾಃ ॥೧೩॥**
**ನಿಹತ್ಯ ಶತ್ರೂನ್ಸಮರೇ ಪ್ರವೃದ್ಧಾ-**
**ನ್ಸಸೋಮಕಾ ರಾಜ್ಯಮವಾಪ್ನುಯುಸ್ತೇ ।**
**ತಥಾ ಗತಾ ಧಾರ್ತರಾಷ್ಟ್ರಾ ವಿನಾಶಂ**
**ಧರ್ಮಾಭಿಗುಪ್ತೈಃ ಸತತಂ ನೃಸಿಂಹೈಃ ॥೧೪॥**

ನಳರಾಜನನ್ನು ಪುಷ್ಕರನು ಪಗಡೆಯಾಟದಿಂದಲೇ ಜಯಿಸಿ ಕಾಡಿಗಟ್ಟಿದನು. ಆದರೆ ನಳನು ತನ್ನ ವೀರ್ಯ-ಪರಾಕ್ರಮಗಳಿಂದ ಪುನಃ ರಾಜ್ಯವನ್ನೂ, ಯಶಸ್ಸನ್ನೂ ಪಡೆದುಕೊಂಡನು.

ಅದೇ ರೀತಿಯಲ್ಲಿ ಲೋಭಿಗಳಲ್ಲದ ಪಾಂಡವರೂ ಸೋಮಕರೇ ಮೊದಲಾದ ತಮ್ಮ ಸಂಬಂಧಿಗಳೊಡನೆ, ಪ್ರವೃದ್ಧರಾಗಿರತಕ್ಕ ಶತ್ರುಗಳನ್ನು ತಮ್ಮ ಭುಜಬಲ-ಪರಾಕ್ರಮಗಳಿಂದಲೇ ಯುದ್ಧದಲ್ಲಿ ಸಂಹರಿಸಿ ತಮ್ಮ ರಾಜ್ಯವನ್ನು ಪಡೆದುಕೊಳ್ಳುತ್ತಾರೆ. ಸರ್ವಕಾಲದಲ್ಲಿಯೂ ಧರ್ಮದಿಂದಲೇ ರಕ್ಷಿಸಲ್ಪಡುತ್ತಿರುವ ಪಾಂಡವರಿಂದ ಧೃತರಾಷ್ಟ್ರನ ಮಕ್ಕಳು ವಿನಾಶಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ.

ಮಹಾರಾಜ! ವಾಸುದೇವನು ಕರ್ಣನೊಡನೆ ಹೀಗೆ ಹೇಳಿದನಂತರ ಕರ್ಣನು ಲಜ್ಜೆಯಿಂದ ತಲೆತಗ್ಗಿಸಿದನು. ಯಾವ ಉತ್ತರವನ್ನೂ ಕೊಡಲಿಲ್ಲ. ಆದರೆ ಅವನ ತುಟಿಗಳು ಕೋಪದಿಂದ ಅದುರುತ್ತಿದ್ದುವು. ಮಹಾವೇಗ ಪರಾಕ್ರಮನಾದ ಕರ್ಣನು ಧನುಸ್ಸನ್ನೆತ್ತಿಕೊಂಡು ಪಾರ್ಥನೊಡನೆ ಯುದ್ಧ

ದಲ್ಲಿ ತೊಡಗಿದನು. ವಾಸುದೇವನು ಪುರುಷಶ್ರೇಷ್ಠನಾದ ಅರ್ಜುನನನ್ನು ಕುರಿತು 'ದಿವ್ಯಾಸ್ತ್ರೇಣೈವ ನಿರ್ಭಿದ್ಯ ಪಾತಯಸ್ವ ಮಹಾಬಲ ಮಹಾಬಲನೇ! ದಿವ್ಯಾಸ್ತ್ರದಿಂದಲೇ ಇವನನ್ನು ಭೇದಿಸಿ ಕೆಳಕ್ಕುರುಳಿಸು' ಎಂದು ಹೇಳಿದನು. ಶ್ರೀಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಅರ್ಜುನನು ಕರ್ಣನ ವಿಷಯದಲ್ಲಿ ಅತ್ಯಂತ ಕುಪಿತನಾದನು. ಹಿಂದೆ ಕರ್ಣನು ಮಾಡಿದುದೆಲ್ಲವನ್ನೂ ಸ್ಮರಿಸುತ್ತಿದ್ದ ಅರ್ಜುನನನ್ನು ಘೋರವಾದ ಕ್ರೋಧವು ಆವರಿಸಿತು. ಕ್ರುದ್ಧನಾದ ಅರ್ಜುನನ ರೋಮ-ರೋಮ ಗಳಿಂದಲೂ ಎಲ್ಲ ರಂಧ್ರಗಳಿಂದಲೂ ಅಗ್ನಿಯ ಜ್ವಾಲೆಗಳು ಹೊರಹೊಮ್ಮಿ ದುವು. ಅದು ಎಲ್ಲರಿಗೂ ಪರಮಾದ್ಭುತವಾಗಿ ಕಂಡಿತು. ಅದನ್ನು ನೋಡಿದ ಕರ್ಣನು ಬ್ರಹ್ಮಾಸ್ತ್ರವನ್ನು ಪ್ರಕಟಪಡಿಸಿ ಅರ್ಜುನನ ಮೇಲೆ ಬಾಣಗಳ ಮಳೆಗರೆಯುತ್ತಾ ಪುನಃ ರಥವನ್ನು ಮೇಲೆತ್ತುವ ಪ್ರಯತ್ನವನ್ನು ಮುಂದುವರಿಸಿದನು. ಅದೇ ಬ್ರಹ್ಮಾಸ್ತ್ರದಿಂದಲೇ ಪಾರ್ಥನೂ ಸಹ ಬಾಣ ಗಳ ಮಳೆಗರೆದನು. ಬ್ರಹ್ಮಾಸ್ತ್ರವನ್ನು ಬ್ರಹ್ಮಾಸ್ತ್ರದಿಂದಲೇ ನಿರಸನಗೊಳಿಸಿದ ಪಾರ್ಥನು ಕರ್ಣನನ್ನು ಅನೇಕ ಬಾಣಗಳಿಂದ ಗಾಯಗೊಳಿಸಿದನು. ಅನಂತರ ಧನಂಜಯನು ಕರ್ಣನನ್ನು ಲಕ್ಷೀಕರಿಸಿ ಅಗ್ನಿದೇವನಿಗೆ ಅತಿಪ್ರಿಯವಾದ ಮತ್ತೊಂದು ದಿವ್ಯಾಸ್ತ್ರವನ್ನು ಪ್ರಯೋಗಿಸಿದನು. ಆ ಮಹಾಸ್ತ್ರವು ತೇಜಸ್ಸಿನಿಂದ ಬಹಳವಾಗಿ ಪ್ರಜ್ವಲಿಸಿತು. ಅದಕ್ಕೆ ಪ್ರತಿಯಾಗಿ ಕರ್ಣನು ವಾರುಣಾಸ್ತ್ರವನ್ನು ಪ್ರಯೋಗಿಸಿ ಅಗ್ನಿಯನ್ನು ಉಪಶಮನಗೊಳಿಸಿದನು. ಮೋಡಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬಿಸಿ ಮಳೆಗಾಲದಲ್ಲಿನ ದುರ್ದಿನಗಳಂತೆ ಸರ್ವತ್ರ ಕತ್ತಲೆಯನ್ನುಂಟುಮಾಡಿದನು. ಅದರಿಂದ ವೀರ್ಯವಂತನಾದ ಅರ್ಜುನನು ಸ್ವಲ್ಪವಾದರೂ ಭ್ರಾಂತನಾಗದೇ ಕರ್ಣನು ನೋಡುತ್ತಿರುವಂತೆಯೇ ವಾರುಣಾಸ್ತ್ರದಿಂದ ಪ್ರಾದುರ್ಭೂತವಾಗಿದ್ದ ಮೋಡಗಳನ್ನು ವಾಯವ್ಯಾಸ್ತ್ರದಿಂದ ನಿರಸನಗೊಳಿಸಿದನು. ಬಳಿಕ ಸೂತಪುತ್ರನು ಅರ್ಜುನನನ್ನು ಸಂಹರಿಸುವ ಉತ್ಕಟೇಚ್ಛೆಯಿಂದ, ಮಹಾಘೋರವಾದ, ಪ್ರಜ್ವಲಿಸುವ ಯಜ್ಞೇಶ್ವರನಂತೆಯೇ ಇದ್ದ ಬಾಣವನ್ನು ಕೈಗೆತ್ತಿಕೊಂಡನು. ಕರ್ಣನು ಶ್ಲಾಘ್ಯವಾದ ಧನುಸ್ಸಿನಲ್ಲಿ ಭಯಂಕರವಾದ ಆ ಬಾಣವನ್ನು ಸಂಧಾನಮಾಡಲಾಗಿ ಶೈಲ-ವನ-ಕಾನನಗಳಿಂದ ಸಹಿತವಾದ ಭೂಮಿಯೇ

ಕಂಪಿಸಿತು. ಕಲ್ಲುಗಳ ಸಮೇತವಾಗಿ ಗಾಳಿಯು ಬೀಸತೊಡಗಿತು. ಎಲ್ಲ ದಿಕ್ಕುಗಳಲ್ಲಿಯೂ ಧೂಳು ಕವಿಯಿತು. ಅಂತರಿಕ್ಷದಲ್ಲಿದ್ದ ದೇವತೆಗಳ ಮಧ್ಯದಲ್ಲಿ ಹಾಹಾಕಾರವುಂಟಾಯಿತು. ಕರ್ಣನು ಸುಘೋರವಾದ ಆ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿದುದನ್ನು ಕಂಡು ದೀನಚಿತ್ತರಾದ ಪಾಂಡವರು ಅತ್ಯಂತದುಃಖಿತರಾದರು. ಕರ್ಣನ ಭುಜದಿಂದ ಪ್ರಮುಕ್ತವಾದ, ಇಂದ್ರನ ವಜ್ರಾಯುಧದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ನಿಶಿತವಾದ ಅಗ್ರಭಾಗಗಳನ್ನು ಹೊಂದಿದ್ದ, ಮಹೋಗ್ರವಾದ ಆ ಬಾಣವು ಅರ್ಜುನನ ವಕ್ಷಃಸ್ಥಳವನ್ನು ಸಮೀಪಿಸಿ–ಮಹಾಸರ್ಪವು ಹುತ್ತದೊಳಗೆ ನುಸುಳಿಕೊಳ್ಳುವಂತೆ–ಅರ್ಜುನನ ವಕ್ಷಃಸ್ಥಳವನ್ನು ಹೊಕ್ಕಿತು. ಕರ್ಣಪ್ರಮುಕ್ತವಾದ ಮಹೋಗ್ರಬಾಣದಿಂದ ಬಹಳವಾಗಿ ಗಾಯಗೊಂಡ ಮಹಾತ್ಮನಾದ ಅರ್ಜುನನು ವಿಶೇಷವಾಗಿ ಕಂಪಿಸಿದನು. ಮುಷ್ಟಿಯು ಸಡಿಲವಾಗಿ ಗಾಂಡೀವಧನುಸ್ಸು ಕೈಯಿಂದ ಜಾರಿತು. ಭೂಕಂಪವಾದಾಗ ಶ್ರೇಷ್ಠವಾದ ಪರ್ವತವೇ ಅಳ್ಳಾಡಿಹೋಗುವಂತೆ–ಶತ್ರುಹಂತಕನಾದ ಅರ್ಜುನನೂ ನಡುಗಿಹೋದನು. ಅಂತಹ ಸಮಯವನ್ನೇ ನಿರೀಕ್ಷಿಸುತ್ತಿದ್ದ ಮಹಾರಥನಾದ ಕರ್ಣನು ಭೂಮಿಯಲ್ಲಿ ಹುದುಗಿಹೋಗಿದ್ದ ಚಕ್ರವನ್ನು ಮೇಲಕ್ಕೆತ್ತಲು ನಿರ್ಧರಿಸಿ ರಥದಿಂದ ಕೆಳಕ್ಕೆ ಧುಮುಕಿ ಎರಡು ಕೈಗಳಿಂದಲೂ ಚಕ್ರವನ್ನು ಬಲವಾಗಿ ಹಿಡಿದು ಮೇಲಕ್ಕೆತ್ತಲು ಪ್ರಯತ್ನಿಸಿದನು. ಆದರೆ ಕರ್ಣನು ಮಹಾಬಲನೇ ಆಗಿದ್ದರೂ ದೈವವಶಾತ್ ತನ್ನ ಪ್ರಯತ್ನದಲ್ಲಿ ಸಫಲನಾಗಲಿಲ್ಲ.

ಆ ವೇಳೆಗೆ ಮಹಾತ್ಮನಾದ ಪಾರ್ಥನು ಚೇತರಿಸಿಕೊಂಡು ಯಮದಂಡಸದೃಶವಾದ ಪ್ರಾಂಜಲಿಕವೆಂಬ ಬಾಣವನ್ನು ಕೈಗೆತ್ತಿಕೊಂಡನು. ಆ ಸಮಯಕ್ಕೆ ಸರಿಯಾಗಿ ವಾಸುದೇವನೂ ಅರ್ಜುನನೊಡನೆ ಈ ಮಾತನ್ನು ಹೇಳಿದನು:

**ಛಿನ್ಧ್ಯಸ್ಯ ಮೂರ್ಧಾನಮರೇಃ ಶರೇಣ ।**
**ನ ಯಾವದಾರೋಹತಿ ವೈ ರಥಂ ವೃಷಃ ॥೩೩॥**

“ಪಾರ್ಥ! ಕರ್ಣನು ಪುನಃ ರಥವನ್ನು ಹತ್ತುವುದರೊಳಗಾಗಿ ನೀನು ಹಿಡಿದಿರುವ ಬಾಣದಿಂದಲೇ ಶತ್ರುವಿನ ತಲೆಯನ್ನು ಕತ್ತರಿಸು.”

ಅರ್ಜುನನು ಪ್ರಭುವಾದ ಶ್ರೀಕೃಷ್ಣನ ಮಾತನ್ನು ಗೌರವಿಸಿ ಪ್ರಜ್ವಲಿತವಾದ ಬಾಣವನ್ನು ಹಿಡಿದುಕೊಂಡು, ಅದರಿಂದ ಚಕ್ರವು ಹುದುಗಿಹೋಗಿದ್ದ ಮಹಾರಥದಲ್ಲಿದ್ದ, ನಿರ್ಮಲವಾದ ಸೂರ್ಯನ ವರ್ಣ ದಿಂದ ಕೂಡಿದ್ದ ಧ್ವಜವನ್ನು ಪ್ರಹರಿಸಿದನು. ಅದು ಆನೆಯ ಹಗ್ಗದ ಚಿಹ್ನೆಯನ್ನು ಹೊಂದಿದ್ದಿತು. ಸುವರ್ಣ, ಮುತ್ತು ಮತ್ತು ವಜ್ರಗಳಿಂದ ಸಮಲಂಕೃತವಾಗಿದ್ದಿತು. ಅತ್ಯಂತಮೇಧಾವಿಗಳಾದ ಉತ್ತಮಶಿಲ್ಪಿಗಳಿಂದ ನಿರ್ಮಿಸಲ್ಪಟ್ಟಿದ್ದಿತು. ಸೂರ್ಯನಂತೆ ವಿಶ್ವವಿಖ್ಯಾತವಾಗಿದ್ದಿತು. ನಿನ್ನ ಸೈನ್ಯದ ವಿಜಯಕ್ಕೆ ಆಧಾರಸ್ತಂಭವಾಗಿದ್ದಿತು. ಶತ್ರುಗಳಿಗೆ ಭಯವನ್ನುಂಟು ಮಾಡುತ್ತಿದ್ದಿತು. ಸರ್ವರ ಸ್ತುತಿಗೂ ಪಾತ್ರವಾಗಿದ್ದಿತು. ಕಾಂತಿಯಲ್ಲಿ ಸೂರ್ಯ-ಚಂದ್ರಾಗ್ನಿಗಳಿಗೆ ಸಮಾನವಾಗಿದ್ದ ಅಂತಹ ಕರ್ಣನ ಧ್ವಜವನ್ನು ಅರ್ಜುನನು ಪ್ರಹರಿಸಿದನು.

ಕಿರೀಟಧರನಾದ ಅರ್ಜುನನು ಸುವರ್ಣಮಯವಾದ ಮೂಲಭಾಗ ವನ್ನು ಹೊಂದಿದ್ದ, ಆಹುತಿಯಿಂದ ಪ್ರಜ್ವಲಿಸುತ್ತಿರುವ ಅಗ್ನಿಯ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ, ಸುನಿಶಿತವಾದ ಕ್ಷುರಪ್ರದಿಂದ ಕರ್ಣನ ಮಹಾರಥದಲ್ಲಿ ಕಾಂತಿಯಿಂದ ಪ್ರಜ್ವಲಿಸುತ್ತಿದ್ದ ಧ್ವಜವನ್ನು ಧ್ವಂಸಮಾಡಿದನು. ಅರ್ಜುನನ ಬಾಣದಿಂದ ಕತ್ತರಿಸಲ್ಪಟ್ಟ ಆ ಧ್ವಜದ ಜೊತೆಯಲ್ಲಿಯೇ ಕೌರವರ ಯಶಸ್ಸು, ಅಭಿಮಾನ, ಸಮಸ್ತವಾದ ಪ್ರಿಯಕಾರ್ಯಗಳು ಮತ್ತು ಅವುಗಳ ಜೊತೆಯಲ್ಲಿಯೇ ಕುರುಯೋಧರ ಹೃದಯ ಗಳೂ ಕುಸಿದುಬಿದ್ದುವು. ಧ್ವಜವು ಕೆಳಕ್ಕೆ ಬಿದ್ದೊಡನೆಯೇ ದೊಡ್ಡದಾದ ಹಾಹಾಕಾರವುಂಟಾಯಿತು. ಬಹಳ ಬೇಗ ಕಾರ್ಯಗಳನ್ನು ಮಾಡಿ ಮುಗಿಸುವ, ಕುರುಪ್ರವೀರನಾದ ಅರ್ಜುನನಿಂದ ಕರ್ಣನ ಧ್ವಜವು ಕತ್ತರಿಸ ಲ್ಪಟ್ಟುದನ್ನು ನೋಡಿ ನಿನ್ನ ಕಡೆಯ ಎಲ್ಲ ಸೈನಿಕರೂ ಸೂತಪುತ್ರನಿಗೆ ವಿಜಯವು ಲಭಿಸುವುದೆಂಬ ಆಸೆಯನ್ನು ತೊರೆದರು. ಅನಂತರ ಪಾರ್ಥನು ಕರ್ಣನ ವಧೆಗಾಗಿ ತ್ವರೆಮಾಡುತ್ತಾ ಮಹೇಂದ್ರನ ವಜ್ರಾಯುಧ, ಅಗ್ನಿದಂಡ ಮತ್ತು ಸೂರ್ಯನ ಶ್ರೇಷ್ಠವಾದ ಕಿರಣ—ಇವುಗಳಿಗೆ ಸಮಾನ ವಾಗಿದ್ದ ಅಂಜಲಿಕವೆಂಬ ಬಾಣವನ್ನು ಬತ್ತಳಿಕೆಯಿಂದ ಹೊರತೆಗೆದನು.

ಮರ್ಮಸ್ಥಳಗಳನ್ನು ಕತ್ತರಿಸುವ, ರಕ್ತದಿಂದಲೂ ಮತ್ತು ಮಾಂಸದಿಂದಲೂ ಲೇಪಿತವಾಗಿದ್ದ, ಸೂರ್ಯಾಗ್ನಿಸದೃಶವಾಗಿದ್ದ, ಬಹುಮೂಲ್ಯವಾಗಿದ್ದ, ಗಜಾಶ್ವ-ಪದಾತಿಗಳ ಪ್ರಾಣಗಳನ್ನು ಅಪಹರಿಸುವ, ಮೂರು ಗುದ್ದು ಮೊಳಗಳಷ್ಟು ಉದ್ದವಾಗಿದ್ದ, ಆರು ರೆಕ್ಕೆಗಳನ್ನು ಹೊಂದಿದ್ದ, ಭಯಂಕರವೇಗಯುಕ್ತವಾಗಿದ್ದ, ಶೀಘ್ರಗಾಮಿಯಾದ, ಇಂದ್ರನ ವಜ್ರಾಯುಧದ ವೀರ್ಯಕ್ಕೆ ಸಮಾನವಾದ ದಾರ್ಢ್ಯವನ್ನು ಹೊಂದಿದ್ದ, ಬಾಯ್ದೆರೆದ ಪ್ರಳಯಕಾಲದ ಅಗ್ನಿಯಂತೆ ಅತಿಘೋರವಾಗಿದ್ದ, ಶಿವನ ಪಿನಾಕಕ್ಕೂ–ನಾರಾಯಣನ ಚಕ್ರಕ್ಕೂ ಸಮಾನವಾಗಿದ್ದ, ಭಯಂಕರವಾಗಿದ್ದ, ಪ್ರಾಣಿಗಳ ವಿನಾಶಕವಾಗಿದ್ದ ಅಂಜಲಿಕವೆಂಬ ಬಾಣವನ್ನು–ದೇವತೆಗಳ ಸಮೂಹಗಳಿಂದಲೂ ಎದುರಿಸಲು ದುಃಸಾಧ್ಯನಾದ, ಸರ್ವಸಮ್ಮಾನ್ಯನಾದ, ಮಹಾತ್ಮನಾದ, ದೇವಾಸುರರನ್ನೂ ಜಯಿಸಬಲ್ಲ ಮಹಾಬಾಣನಾದ, ಪ್ರಹೃಷ್ಟನಾದ ಪಾರ್ಥನು ಕೈಗೆತ್ತಿಕೊಂಡನು. ಅರ್ಜುನನು ಬಾಣವನ್ನು ಧನುಸ್ಸಿನಲ್ಲಿ ಯೋಜಿಸುತ್ತಿರುವುದನ್ನು ನೋಡಿ ಚರಾಚರಯುಕ್ತವಾದ ಭೂಮಿಯೇ ಅಳ್ಳಾಡಿತು. ಋಷಿ-ಮಹರ್ಷಿಗಳೆಲ್ಲರೂ ಪ್ರಪಂಚಕ್ಕೆ ಮಂಗಳವಾಗಲಿ–ಎಂದು ಉಚ್ಚಸ್ವರಗಳಿಂದ ಕೂಗತೊಡಗಿದರು. ಅನಂತರ ಗಾಂಡೀವಧನ್ವನಾದ ಅರ್ಜುನನು ಅಪ್ರಮೇಯವಾದ ಆ ಉತ್ತಮೋತ್ತಮ ವಾದ ಬಾಣವನ್ನು ಗಾಂಡೀವಧನುಸ್ಸಿನಲ್ಲಿ ಹೂಡಿ ಮಹಾಸ್ತ್ರದಿಂದ ಅಭಿಮಂತ್ರಿಸಿ ತ್ವರೆಯಿಂದ ಶಿಂಜಿನಿಯೊಡನೆ ಸುದೀರ್ಘವಾಗಿ ಸೆಳೆದು ಹೇಳಿದನು:

**ಅಯಂ ಮಹಾಸ್ತ್ರಪ್ರಹಿತೋ ಮಹಾಶರಃ**
**ಶರೀರಹೃಚ್ಚಾಸುಹರಶ್ಚ ದುರ್ಹೃದಃ ।**
**ತಪೋಽಸ್ತಿ ತಪ್ತಂ ಗುರವಶ್ಚ ತೋಷಿತಾ**
**ಮಯಾ ಯದೀಷ್ಟಂ ಸುಹೃದಾಂ ಶ್ರುತಂ ತಥಾ ।**
**ಅನೇನ ಸತ್ಯೇನ ನಿಹನ್ತ್ವಯಂ ಶರಃ**
**ಸುಸಂಹಿತಃ ಕರ್ಣಮರಿಂ ಮಮೋರ್ಜಿತಮ್ ॥೪೬॥**

"ಮಹಾಸ್ತ್ರದಿಂದ ಅಭಿಮಂತ್ರಿತವಾಗಿ ಬಿಡಲ್ಪಡುತ್ತಿರುವ ಈ ಮಹಾ ಶರವು ಶತ್ರುಗಳ ಶರೀರವನ್ನೂ, ಪ್ರಾಣವನ್ನೂ ಹರಣಮಾಡುವುದಾಗಿರು

ತ್ತದೆ. ನಾನು ತಪಸ್ಸುಮಾಡಿದ ಫಲವೇನಾದರೂ ಇದ್ದರೆ, ಗುರುಜನರನ್ನು ಸೇವೆಯಿಂದ ತುಷ್ಟರನ್ನಾಗಿ ಮಾಡಿದ್ದರೆ, ಯಜ್ಞ-ಯಾಗಾದಿಗಳನ್ನು ಮಾಡಿದ್ದರೆ, ಸುಹೃದರ ಹಿತವಚನಗಳನ್ನು ಕೇಳಿದ್ದರೆ, ಆ ಸತ್ಯದ ಪ್ರಭಾವದಿಂದ, ಸುವಿಹಿತವಾಗಿ ಸಂಧಾನವಾಗಿರುವ ಈ ಬಾಣವು ನನ್ನ ಪ್ರಬಲಶತ್ರುವಾಗಿರುವ ಕರ್ಣನನ್ನು ಸಂಹರಿಸಲಿ."

ಮಹಾರಾಜ! ಅರ್ಜುನನು ಹೀಗೆಂದು ಹೇಳುತ್ತಾ ಆ ಘೋರವಾದ ಬಾಣವನ್ನು ಕರ್ಣನ ವಧೆಯ ಸಲುವಾಗಿ ಪ್ರಯೋಗಿಸಿದನು. ಯಾವ ರೀತಿಯಲ್ಲಿ ಅಥರ್ವಾಂಗಿರಸಮಂತ್ರದ ಮೂಲಕವಾಗಿ ಮಾಡಿದ ಅಭಿಚಾರ ಪ್ರಯೋಗದಿಂದ ಹುಟ್ಟಿದ ಕೃತ್ಯೆಯು–ಉಗ್ರವೂ, ಪ್ರದೀಪ್ತವೂ, ಯುದ್ಧದಲ್ಲಿ ಮೃತ್ಯುವಿಗೂ ಎದುರಿಸಲು ಅಶಕ್ಯವೂ ಆಗಿರುತ್ತದೆಯೋ–ಅದೇ ರೀತಿಯಲ್ಲಿ ಅರ್ಜುನನು ಹಿಡಿದಿದ್ದ ಬಾಣವು ಉಗ್ರವೂ, ಪ್ರದೀಪ್ತವೂ ಮತ್ತು ಶತ್ರುಗಳಿಂದ ಸಹಿಸಲು ಅಶಕ್ಯವೂ ಆಗಿದ್ದಿತು. ಧನುಸ್ಸಿನಲ್ಲಿ ಅನುಸಂಧಾನ ಮಾಡಿದ್ದ ಆ ಬಾಣವನ್ನು ಅನುಲಕ್ಷಿಸಿ ಪರಮಹೃಷ್ಟನಾಗಿದ್ದ, ಕರ್ಣನನ್ನು ಸಂಹರಿಸಲು ನಿಶ್ಚಯಿಸಿದ್ದ ಅರ್ಜುನನು ಪುನಃ ಹೇಳಿದನು: "ಈ ಶರವು ನನಗೆ ವಿಜಯದಾಯಕವಾಗಲಿ. ಸೂರ್ಯ-ಚಂದ್ರರ ಪ್ರಭಾವಕ್ಕೆ ಸದೃಶವಾದ ಪ್ರಭಾವವುಳ್ಳ ಮತ್ತು ನನ್ನಿಂದ ಬಿಡಲ್ಪಡುವ ಈ ಬಾಣವು ಕರ್ಣನನ್ನು ಯಮನ ಅರಮನೆಗೆ ಒಯ್ಯಲಿ." ಚಂದ್ರಾದಿತ್ಯರ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ವಿಜಯದಾಯಕವಾಗಿದ್ದ ಶ್ರೇಷ್ಠವಾದ ಆ ಬಾಣದಿಂದ ಕರ್ಣನನ್ನು ಕೊಲ್ಲುವ ಇಚ್ಛೆಯುಳ್ಳ–ಅತಿಪ್ರಹೃಷ್ಟನಾಗಿದ್ದ ಪಾರ್ಥನು ಶತ್ರುವಿನ ಮೇಲೆ ಬಾಣವನ್ನು ಬಿಟ್ಟುಬಿಟ್ಟನು. ಬಲಿಷ್ಠನಾದ ಅರ್ಜುನನಿಂದ ಹಾಗೆ ಬಿಡಲ್ಪಟ್ಟ, ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಆ ಬಾಣವು ದಿಕ್ಕುಗಳನ್ನೂ ಮತ್ತು ಅಂತರಿಕ್ಷವನ್ನೂ ಜಾಜ್ವಲ್ಯಮಾನವನ್ನಾಗಿ ಮಾಡಿತು. ಮಹೇಂದ್ರನು ವಜ್ರಾಯುಧದಿಂದ ವೃತ್ರಾಸುರನ ಶಿರಸ್ಸನ್ನು ತುಂಡರಿಸಿದಂತೆ–ಅರ್ಜುನನು ಆ ಬಾಣದಿಂದ ಕರ್ಣನ ಶಿರಸ್ಸನ್ನು ಕತ್ತರಿಸಿದನು. ಇಂದ್ರನ ಮಗನಾದ ಅರ್ಜುನನು ಮಹಾದಿವ್ಯಾಸ್ತ್ರದಿಂದ ಅಭಿಮಂತ್ರಿತವಾಗಿದ್ದ 'ಅಂಜಲಿಕ' ಎಂಬ ಹೆಸರಿನ ಶ್ರೇಷ್ಠವಾದ ಬಾಣದಿಂದ ಹದಿನೇಳನೆಯ ದಿವಸದ ಅಪರಾಹ್ಣಸಮಯದಲ್ಲಿ

ಕರ್ಣನ ಶಿರಸ್ಸನ್ನು ಕತ್ತರಿಸಿದನು. ಅಂಜಲಿಕದಿಂದ ಭಿನ್ನವಾದ ಕರ್ಣನ ಶಿರಸ್ಸು ಮೊದಲು ಭೂಮಿಯ ಮೇಲೆ ಬಿದ್ದಿತು. ಅನಂತರ ಅವನ ಶರೀರವೂ ಕೆಳಕ್ಕೆ ಬಿದ್ದಿತು. ಕೆಂಪಾದ ಮಂಡಲದಿಂದ ಯುಕ್ತನಾದ ಸೂರ್ಯನು ಅಸ್ತಾಚಲದಿಂದ ಕೆಳಕ್ಕೆ ಬೀಳುವಂತೆ–ಆಗ ತಾನೇ ಹುಟ್ಟಿದ ಸೂರ್ಯನ



ತೇಜಸ್ಸಿಗೆ ಸಮಾನವಾದ ತೇಜಸ್ಸನ್ನು ಹೊಂದಿದ್ದ, ಶರತ್ಕಾಲದಲ್ಲಿ ನೆತ್ತಿಯ ಮೇಲೆ ಬಂದ ಸೂರ್ಯನಂತೆಯೇ ಕಾಣುತ್ತಿದ್ದ ಕರ್ಣನ ಉತ್ತಮಾಂಗವು (ಶಿರಸ್ಸು) ಸೇನೆಯ ಅಗ್ರಭಾಗದಲ್ಲಿ ಬಿದ್ದಿತು. ಸರ್ವಕಾಲದಲ್ಲಿಯೂ ಸುಖೋಪಭೋಗಕ್ಕೆ ಯೋಗ್ಯವಾಗಿದ್ದ, ಅತ್ಯಂತಸುಂದರವಾಗಿದ್ದ ದೇಹ ವನ್ನು, ಉದಾರಕರ್ಮನಾದ ಕರ್ಣನ ಶಿರಸ್ಸು–ಐಶ್ವರ್ಯವಂತನು ಸಂಪತ್ತು

ಗಳಿಂದ ತುಂಬಿರುವ ಒಳ್ಳೆಯ ಸಂಗವುಳ್ಳ (ಪ್ರಿಯಜನರಿರುವ) ತನ್ನ ಮನೆಯನ್ನು ಬಹಳ ಕಷ್ಟದಿಂದ ಬಿಟ್ಟುಹೋಗುವಂತೆ–ಬಹಳ ಕಷ್ಟದಿಂದ ಬಿಟ್ಟು ಹೋಯಿತು. ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತದ ವಿಶಾಲವಾದ ಶಿಖರಪ್ರದೇಶವು ಗೈರಿಕಾದಿ ಧಾತುಗಳಿಂದ ಸ್ರವಿಸುತ್ತಿರುವ ಕೆಂಪುನೀರಿನಿಂದ ಕೂಡಿ ಕೆಳಕ್ಕೆ ಬೀಳುವಂತೆ–ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟ ಮಹಾ ತೇಜಸ್ವಿಯಾದ ಕರ್ಣನ ಎತ್ತರವಾದ ಶರೀರವು ಪ್ರಾಣಶೂನ್ಯವಾಗಿ ರಕ್ತವನ್ನು ಸುರಿಸುತ್ತಾ ಭೂಮಿಯ ಮೇಲೆ ಬಿದ್ದಿತು. ಕೆಳಕ್ಕೆ ಬಿದ್ದ ಕರ್ಣನ ದೇಹದಿಂದ ತೇಜಸ್ಸೊಂದು ಹೊರಹೊರಟು ಆಕಾಶಕ್ಕೆ ಹೋಗಿ ಸೂರ್ಯಮಂಡಲದಲ್ಲಿ ಲೀನವಾಗಿಹೋಯಿತು. ಕರ್ಣನು ಹತನಾದ ಬಳಿಕ ನಡೆದ ಪರಮಾದ್ಭುತವನ್ನು (ಕರ್ಣನ ಪ್ರಾಣಜ್ಯೋತಿಯು ಸೂರ್ಯಮಂಡಲದಲ್ಲಿ ಲೀನವಾಗಿ ಹೋದುದನ್ನು) ಎಲ್ಲ ಮನುಷ್ಯಯೋಧರೂ ನೋಡಿದರು. ಬಳಿಕ ಪಾಂಡವರು, ಅರ್ಜುನನು ಕರ್ಣನನ್ನು ಸಂಹರಿಸಿದುದನ್ನು ಕಂಡು ಗಟ್ಟಿಯಾಗಿ ಶಂಖಗಳನ್ನೂದಿದರು. ಅದೇ ರೀತಿಯಲ್ಲಿ ಕೃಷ್ಣಾರ್ಜುನರೂ ತಮ್ಮ ಪಾಂಚಜನ್ಯ-ದೇವದತ್ತ ಶಂಖಗಳನ್ನೂದಿದರು. ಪರಮಹೃಷ್ಟರಾದ ನಕುಲ-ಸಹದೇವರೂ ಶಂಖಧ್ವನಿಗಳನ್ನು ಮಾಡಿದರು. ಸೋಮಕರು, ಕರ್ಣನು ಹತನಾಗಿ ರಣರಂಗದಲ್ಲಿ ಬಿದ್ದುದನ್ನು ಕಂಡು ಸೈನಿಕರೊಡನೆ ಸಿಂಹನಾದಗಳನ್ನು ಮಾಡಿದರು. ಅತಿಹೃಷ್ಟರಾದ ಪಾಂಡವ-ಸೃಂಜಯಯೋಧರು ರಣವಾದ್ಯಗಳನ್ನು ಬಾರಿಸಿದರು. ಅಂಗವಸ್ತ್ರಗಳನ್ನು ಮೇಲಕ್ಕೆ ಹಾರಿಸಿದರು. ತೋಳುಗಳನ್ನು ಮೇಲಕ್ಕೆತ್ತಿ ಅಳ್ಳಾಡಿಸುತ್ತಿದ್ದರು. ಪರಮಹೃಷ್ಟರಾದ ಪಾಂಡವರ ಕಡೆಯ ಯೋಧರೆಲ್ಲರೂ ಅರ್ಜುನನನ್ನು ಅಭಿನಂದಿಸುವ ಸಲುವಾಗಿ ಅವನ ಸಮೀಪಕ್ಕೆ ಧಾವಿಸಿದರು. ಅರ್ಜುನನ ಬಾಣಗಳಿಂದ ಛಿನ್ನ-ಭಿನ್ನನಾಗಿ ಪ್ರಾಣಶೂನ್ಯವಾಗಿ ರಥದ ಕೆಳಭಾಗದಲ್ಲಿ ಭೂಮಿಯ ಮೇಲೆ ಬಿದ್ದಿದ್ದ ಕರ್ಣನನ್ನು ನೋಡಿ ಬಲಿಷ್ಠರಾದ ಇತರ ಕೆಲವು ಸೈನಿಕರು ಪರಸ್ಪರವಾಗಿ ಆಲಿಂಗನಮಾಡಿಕೊಂಡು ಕುಣಿದಾಡುತ್ತಾ ಗರ್ಜನೆ ಮಾಡುತ್ತಾ ಒಬ್ಬರಿಗೊಬ್ಬರು ಮಾತಾಡಿಕೊಳ್ಳುತ್ತಿದ್ದರು:

**ಮಹಾನಿಲೇನಾದ್ರಿಮಿವಾಪವಿದ್ಧಂ**
**ಯಜ್ಞಾವಸಾನೇಽಗ್ನಿಮಿವ ಪ್ರಶಾನ್ತಮ್ ।**

ರರಾಜ ಕರ್ಣಸ್ಯ ಶಿರೋ ನಿಕೃತ್ತ-
ಮಸ್ತಂ ಗತಂ ಭಾಸ್ಕರಸ್ಯೇವ ಬಿಮ್ಬಮ್ ॥೬೦॥

“ಅರ್ಜುನನ ಬಾಣದಿಂದ ಕತ್ತರಿಸಲ್ಪಟ್ಟು ಕೆಳಗೆ ಬಿದ್ದಿರುವ ಕರ್ಣನ ಶಿರಸ್ಸು–ಚಂಡಮಾರುತದಿಂದ ಭಗ್ನವಾಗಿ ಕೆಳಗೆ ಬಿದ್ದ ಪರ್ವತದ ಖಂಡ ದಂತೆಯೂ–ಯಜ್ಞವು ಮುಗಿದನಂತರ ಪ್ರಶಾಂತವಾದ ಅಗ್ನಿಯಂತೆಯೂ–ಅಸ್ತಂಗತನಾದ ಸೂರ್ಯನ ಬಿಂಬದಂತೆಯೂ ಪ್ರಕಾಶಿಸುತ್ತಿದೆ.” ಕರ್ಣನ ದೇಹವು ಬಾಣಗಳಿಂದ ಚುಚ್ಚಲ್ಪಟ್ಟ ಸರ್ವಾವಯವವುಳ್ಳದ್ದಾಗಿ ರಕ್ತದ ಪ್ರವಾಹದಿಂದ ಸಂಪೂರ್ಣವಾಗಿ ತೋಯ್ದುಹೋಗಿದ್ದು ಸೂರ್ಯದೇವನು ತನ್ನ ರಶ್ಮಿಗಳಿಂದ ಪ್ರಕಾಶಿಸುವಂತೆ ಪ್ರಕಾಶಿಸುತ್ತಿದೆ. ಭಾಸ್ಕರಸದೃಶನಾದ ಕರ್ಣನು ಕಿರಣರೂಪವಾದ ಬಾಣಗಳಿಂದ ಶತ್ರುಸೈನ್ಯವನ್ನು ಪರಿತಾಪ ಗೊಳಿಸಿ ಕಾಲರೂಪನಾದ ಅರ್ಜುನನಿಂದ ಅಸ್ತಗೊಳಿಸಲ್ಪಟ್ಟನು. ಅಸ್ತ ನಾಗುತ್ತಿರುವಾಗ ಸೂರ್ಯನು ತನ್ನ ಪ್ರಜೆಗಳ ಸಮೇತನಾಗಿಯೇ ಹೋಗು ವಂತೆ ಅರ್ಜುನಪ್ರಮುಕ್ತವಾದ ಆ ಬಾಣವು ಕರ್ಣನ ಪ್ರಾಣಗಳನ್ನು ತೆಗೆದುಕೊಂಡೇ ಹೊರಟುಹೋಯಿತು. ಮಹಾರಾಜ! ಸೂತಪುತ್ರನ *ಮರಣವು ದಿವಸದ ಕಡೆಯ ಭಾಗದಲ್ಲಾಯಿತು. ಅಂಜಲಿಕವೆಂಬ ಬಾಣ ದಿಂದ ಕತ್ತರಿಸಲ್ಪಟ್ಟ ಶಿರಸ್ಸು ದೇಹಸಹಿತವಾಗಿ ಕೆಳಕ್ಕೆ ಬಿದ್ದಿತು. ಅರ್ಜುನ ನಿಂದ ಪ್ರಮುಕ್ತವಾದ ಆ ಬಾಣವು ಸೈನಿಕರ ಮೇಲ್ಭಾಗದಲ್ಲಿ ವೇಗವಾಗಿ ಹೋಗುತ್ತಾ ಅರ್ಜುನನ ಶತ್ರುವಾದ ಕರ್ಣನ ಎತ್ತರವಾಗಿದ್ದ ಶಿರಸ್ಸನ್ನು ಬಹಳ ಬೇಗ ಅಪಹರಿಸಿಬಿಟ್ಟಿತು. ಶರೀರಾದ್ಯಂತವಾಗಿ ಬಾಣಗಳಿಂದ ಚುಚ್ಚಲ್ಪಟ್ಟು ರಕ್ತದಿಂದ ತೋಯ್ದುಹೋಗಿ ಭೂಮಿಯ ಮೇಲೆ ಬಿದ್ದಿದ್ದ

---

*ಅಪರಾಹ್ಣೇಽಪರಾಹ್ನೋಽಸ್ಯ–ಎಂದು ಈ ಶ್ಲೋಕವು ಪ್ರಾರಂಭವಾಗುತ್ತದೆ. ಈ ಎರಡು ಶಬ್ದಗಳಿಗೂ ವ್ಯಾಖ್ಯಾನಕಾರರು ಬೇರೆ ಬೇರೆ ಅರ್ಥವನ್ನು ಕೊಟ್ಟಿದ್ದಾರೆ. ಅಪರಾಹ್ಣೇ = ದಿವಸಸ್ಯ ಪಶ್ಚಿಮೇ ಭಾಗೇ = ಸಾಯಂಕಾಲ. ಅಪರಂ = ಚರಮಂ, ಅಹಃ = ಮರಣದಿನಂ-ಅವನ ಮರಣದಿನವು. ‘ದಾನ ಕೊಡುವಾಗ ಪರದಿನ ಅಥವಾ ನಾಳೆ ಎಂದು ಯಾರು ಹೇಳುತ್ತಿರಲಿಲ್ಲವೋ ಅವನು’ ಎಂಬುದಾಗಿ ಹಿಂದೀ ವ್ಯಾಖ್ಯಾನಕಾರರು ಹೇಳಿದ್ದಾರೆ. ‘ದಾನ ದೇತೇ ಸಮಯ ಜೋ ದೂಸರೇ ದಿನಕೇ ಲಿಯೇ ವಾದಾ ನಹೀಂ ಕರತಾ ಥಾ.’

ಶೂರನಾದ ಕರ್ಣನನ್ನು ನೋಡಿ ಮದ್ರರಾಜನಾದ ಶಲ್ಯನು ಧ್ವಜದಿಂದ ವಿಹೀನವಾಗಿದ್ದ ರಥದ ಮೂಲಕವಾಗಿ ಹೊರಟುಹೋದನು. ಕರ್ಣನು ಹತನಾಗಲಾಗಿ ಅರ್ಜುನನ ಬಾಣಗಳಿಂದ ಗಾಢವಾಗಿ ಗಾಯಗೊಂಡಿದ್ದ ಕುರುಯೋಧರು ಪ್ರಜ್ವಲಿಸುತ್ತಿದ್ದ ಅರ್ಜುನನ ಮಹಾಧ್ವಜವನ್ನೇ ಬಾರಿ-ಬಾರಿಗೂ ನೋಡುತ್ತಾ ಪಲಾಯನಮಾಡಿದರು.

**ಸಹಸ್ರನೇತ್ರಪ್ರತಿಮಾನಕರ್ಮಣಃ**
**ಸಹಸ್ರಪತ್ರಪ್ರತಿಮಾನನಂ ಶುಭಮ್ ।**
**ಸಹಸ್ರರಶ್ಮಿರ್ದಿನಸಂಕ್ಷಯೇ ಯಥಾ**
**ತಥಾಪತತ್ಕರ್ಣಶಿರೋ ವಸುನ್ಧರಾಮ್ ॥೬೪॥**

ಸಹಸ್ರನೇತ್ರನಾದ ಇಂದ್ರನ ಸಾಹಸಕಾರ್ಯಗಳಿಗೆ ಸಮಾನವಾದ ಸಾಹಸಕಾರ್ಯಗಳನ್ನು ಮಾಡುತ್ತಿದ್ದ, ಸಹಸ್ರದಳ ಕಮಲಕ್ಕೆ ಸಮಾನವಾಗಿದ್ದ ಶುಭವಾದ ಮುಖವುಳ್ಳ ಸುಂದರವಾದ ಕರ್ಣನ ತಲೆಯು–ಸಾಯಂಕಾಲದ ಸಮಯದಲ್ಲಿ ಸಹಸ್ರರಶ್ಮಿಯಾದ ಸೂರ್ಯನು ಪಶ್ಚಿಮಪರ್ವತದಲ್ಲಿ ಬೀಳುವಂತೆ–ಭೂಮಿಯಲ್ಲಿ ಬಿದ್ದಿತು."

೯೧ನೆಯ ಅಧ್ಯಾಯವು ಮುಗಿಯಿತು.

೯೨ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವರ ಶೋಕ: ಪಾಂಡವರ ಹರ್ಷ: ಕೌರವಸೈನ್ಯದ ಪಲಾಯನ: ದುರ್ಯೋಧನನಿಗೆ ಶಲ್ಯನು ಸಮಾಧಾನ ಹೇಳಿದುದು

ಸಂಜಯನು ಕರ್ಣಸಂಹಾರಾನಂತರದ ವಾರ್ತೆಯನ್ನು ಧೃತರಾಷ್ಟ್ರನಿಗೆ ತಿಳಿಸುತ್ತಾನೆ:

"ಮಹಾರಾಜ! ಕರ್ಣಾರ್ಜುನರ ಆ ಮಹಾಯುದ್ಧದಲ್ಲಿ ಎರಡೂ ಪಕ್ಷಗಳ ಸೈನಿಕರು ಬಾಣಪ್ರಹಾರಗಳಿಂದ ವಿಧ್ವಸ್ತರಾಗಲಾಗಿ ಸಪರಿವಾರನಾದ ಆಧಿರಥಿಯೂ ಹತನಾಗಲಾಗಿ, ಶಲ್ಯನು ಸಕಲಸಾಮಗ್ರಿ

ಗಳೂ ನಷ್ಟವಾಗಿಹೋಗಿದ್ದ ರಥದ ಮೂಲಕವಾಗಿ ರಣಾಂಗಣವನ್ನು ಬಿಟ್ಟು ಹೊರಟುಹೋದನು. ಕೌರವಸೈನ್ಯದಲ್ಲಿ ರಥ-ಗಜಾಶ್ವ-ಪದಾತಿಸೈನಿಕರು ಬಹುಸಂಖ್ಯೆಯಲ್ಲಿ ಮೃತರಾಗಿ ಹೋಗಿದ್ದರು. ಸೂತಪುತ್ರನಾದ ಕರ್ಣನೂ ಅರ್ಜುನನಿಂದ ಹತನಾದನು. ಅದನ್ನು ನೋಡಿದ ದುರ್ಯೋಧನನು ಕಂಬನಿ



ತುಂಬಿದ ಕಣ್ಣುಗಳುಳ್ಳವನಾಗಿ ಬಹಳ ದೀನನಾದನು. ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಿದ್ದನು. ಆ ಸಮಯದಲ್ಲಿ ಅವನು ದುಃಖದ ಮೂರ್ತ ಸ್ವರೂಪನೇ ಆಗಿದ್ದನು. ಸ್ವೇಚ್ಛೆಯಿಂದ ಭೂಮಿಗೆ ಬಂದಿರುವ ಸೂರ್ಯನೋ ಎಂಬಂತೆ ಕಾಣುತ್ತಿದ್ದ, ನೂರಾರು ಬಾಣಗಳಿಂದ ಚುಚ್ಚಲ್ಪಟ್ಟಿದ್ದ, ರಕ್ತದಿಂದ ತೋಯ್ದುಹೋಗಿ ರಣಭೂಮಿಯಲ್ಲಿ ಬಿದ್ದಿದ್ದ ಶೂರಕರ್ಣನನ್ನು

ನೋಡುವ ಇಚ್ಛೆಯಿಂದ ಎಲ್ಲ ಯೋಧರೂ ಅವನನ್ನು ಸುತ್ತುವರಿದು ನಿಂತರು. ಹಾಗೆ ಕರ್ಣನನ್ನು ನೋಡಲು ನಿಂತಿದ್ದವರಲ್ಲಿ ಕೆಲವರು ಅವನ ಸಾಹಸಕರ್ಮವನ್ನು ನೆನೆಯುತ್ತಾ ಪ್ರಹೃಷ್ಟರಾಗಿದ್ದರು; ಕೆಲವರು ಕರ್ಣನ ಅವಸಾನವಾದನಂತರ ತಮ್ಮ ಗತಿಯೇನೆಂಬುದನ್ನು ಯೋಚಿಸುತ್ತಾ ಭಯ ಗ್ರಸ್ತರಾಗಿದ್ದರು; ಕೆಲವರು ಅತ್ಯಂತವಿಷಣ್ಣರಾಗಿದ್ದರು. ಕರ್ಣನು ಹೇಗೆ



ಅಸುನೀಗಿದನೆಂದು ಕೆಲವರಿಗೆ ವಿಸ್ಮಯವೂ ಆಗಿದ್ದಿತು. ಕೆಲವರು ಶೋಕ ದಿಂದ ಮೃತಪ್ರಾಯರೇ ಆಗಿದ್ದರು. ನಿನ್ನ ಪಕ್ಷದ ಮತ್ತು ಶತ್ರುಪಕ್ಷದ ಯೋಧರು ಆ ಸಮಯದಲ್ಲಿ ತಮ್ಮ-ತಮ್ಮ ಸ್ವಭಾವಗಳಿಗೆ ಅನುಗುಣವಾಗಿ ಕರ್ಣನ ವಿಷಯದಲ್ಲಿ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸುತ್ತಿದ್ದರು. ನಷ್ಟವಾಗಿ ಹೋಗಿದ್ದ ಕವಚಾಭರಣ-ವಸ್ತ್ರಾಯುಧನಾದ, ಮಹಾತೇಜಸ್ವಿಯಾದ

ಕರ್ಣನು ಅರ್ಜುನನಿಂದ ಸಂಹರಿಸಲ್ಪಟ್ಟುದನ್ನು ನೋಡಿ ವಿಜನವಾದ ಅರಣ್ಯದಲ್ಲಿ ಗೂಳಿಯು ಸತ್ತುಹೋದನಂತರ ಹಸುಗಳು ದಿಕ್ಕಾಪಾಲಾಗಿ ಓಡಿಹೋಗುವ ರೀತಿಯಲ್ಲಿ–ಕೌರವಯೋಧರು ದಿಕ್ಕಾಪಾಲಾಗಿ ಓಡಿಹೋದರು. ಕರ್ಣನು ಹತನಾದನಂತರ ಭೀಮಸೇನನು ಧೃತರಾಷ್ಟ್ರನ ಮಕ್ಕಳನ್ನು ಹೆದರಿಸುತ್ತಾ ಭಯಂಕರಧ್ವನಿಯಲ್ಲಿ ಸಿಂಹನಾದಗಳನ್ನು ಮಾಡುತ್ತಾ ಭೂಮ್ಯಂತರಿಕ್ಷಗಳನ್ನೂ ನಡುಗಿಸಿಬಿಟ್ಟನು. ಭುಜಗಳನ್ನು ತಟ್ಟಿಕೊಳ್ಳುತ್ತಾ ಚಪ್ಪಾಳೆಹೊಡೆದುಕೊಂಡು ಕುಣಿದು ಕುಪ್ಪಳಿಸಿದನು. ಅದೇ ರೀತಿಯಲ್ಲಿ ಸೋಮಕ-ಸೃಂಜಯರೂ ಶಂಖಗಳನ್ನೂದುತ್ತಾ ಪರಸ್ಪರವಾಗಿ ಆಲಿಂಗನ ಮಾಡಿಕೊಂಡರು. ಸೂತಪುತ್ರನಾದ ಕರ್ಣನು ಹತನಾಗಲಾಗಿ ಪಾಂಡವರ ಸೈನ್ಯದಲ್ಲಿದ್ದ ಎಲ್ಲ ಕ್ಷತ್ರಿಯರೂ ಆನಂದತುಂದಿಲರಾದರು. ಸಿಂಹವು ಆನೆಯನ್ನು ಸಂಹರಿಸುವಂತೆ–ಅರ್ಜುನನು ಕರ್ಣನೊಡನೆ ಘೋರವಾದ ಯುದ್ಧಮಾಡಿ ಅವನನ್ನು ಸಂಹರಿಸಿದನು. ಪಾರ್ಥನ ಪ್ರತಿಜ್ಞೆಯು ಪೂರ್ಣವಾಯಿತು. ಪಾರ್ಥನು ವೈರದ ಅಂತವನ್ನೂ ಹೊಂದಿದನು. (ಕರ್ಣನ ಅವಸಾನದೊಡನೆಯೇ ಅರ್ಜುನನಿಗೆ ಅವನ ಮೇಲಿದ್ದ ವೈರಭಾವವೂ ಕೊನೆಗೊಂಡಿತು.)

ಕರ್ಣನ ಸಂಹಾರದಿಂದಾಗಿ ಬುದ್ಧಿಗೆಟ್ಟಿದ್ದ ಶಲ್ಯನು ಧ್ವಜದಿಂದ ರಹಿತವಾಗಿದ್ದ ರಥದಲ್ಲಿ ಕುಳಿತು ಬಹಳ ಬೇಗ ದುರ್ಯೋಧನನ ಬಳಿಗೆ ಹೋಗಿ ಕಂಬನಿಗಳನ್ನು ಸುರಿಸುತ್ತಾ ಗದ್ಗದಸ್ವರದಿಂದ ಈ ಮಾತುಗಳನ್ನು ಹೇಳಿದನು:

“ದುರ್ಯೋಧನ! ನಿನ್ನ ಸೈನ್ಯದ ರಥ-ಗಜಾಶ್ವ-ಪದಾತಿಸೈನಿಕರು ನಷ್ಟ-ಭ್ರಷ್ಟರಾಗಿಹೋದರು. ನಮ್ಮ ಸೈನ್ಯವಿದ್ದ ಸ್ಥಳವು ಯಮನ ರಾಷ್ಟ್ರದಂತೆಯೇ ಕಾಣುತ್ತಿದ್ದಿತು. ಪರ್ವತಶಿಖರೋಪಮವಾಗಿದ್ದ ಮಹಾಗಜಾಶ್ವ ಪದಾತಿಸೈನ್ಯಗಳೊಡನೆ ಪರಸ್ಪರವಾಗಿ ಕಾದಾಡಿ ಅವಸಾನಹೊಂದಿತು. ಕರ್ಣಾರ್ಜುನರಿಗೆ ನಡೆದಂತಹ ಯುದ್ಧವು ಹಿಂದೆಂದೂ ನಡೆದಿರಲಿಲ್ಲ. ಮಹಾವೀರನಾದ ಕರ್ಣನು ಕೃಷ್ಣಾರ್ಜುನರನ್ನೂ ಮತ್ತು ಶತ್ರುಪಕ್ಷದ ಇನ್ನೂ ಅನೇಕಮಹಾಯೋಧರನ್ನೂ ಸಂಪೂರ್ಣವಾಗಿ ಆಕ್ರಮಿಸಿದ್ದನು. ನಿಶ್ಚಯವಾಗಿ ಹೇಳುವುದಾದರೆ: ದೈವವು ಪಾಂಡವರ ವಶವಾಗಿಹೋಗಿದೆ.

ಅವರಿಗೆ ಅನುಕೂಲಿಸಿ ಕಾರ್ಯಮಾಡುತ್ತಿದೆ. ಯಾವುದೇ ಸಂದರ್ಭದಲ್ಲಿಯೂ ಆ ದೈವವು ಪಾಂಡವರನ್ನು ರಕ್ಷಿಸುತ್ತಲೇ ಇದೆ; ನಮ್ಮನ್ನು ವಿನಾಶಗೊಳಿಸುತ್ತಲೇ ಇದೆ. ಇದೇ ಕಾರಣದಿಂದಾಗಿ ನಿನ್ನ ಅರ್ಥಸಿದ್ಧಿಗಾಗಿ ಪ್ರಯತ್ನಿಸುವವರೆಲ್ಲರೂ ಪ್ರಾಯಶಃ ಶತ್ರುಗಳಿಂದ ಹತರಾಗುತ್ತಲೇ ಇದ್ದಾರೆ. ದುರ್ಯೋಧನ! ನಿನ್ನ ಕಡೆಯ ಮಹಾಯೋಧರು ಕುಬೇರ-ಯಮ-ವಾಸವರಿಗೆ ಸದೃಶವಾದ ಪ್ರಭಾವವುಳ್ಳವರು. ವೀರ್ಯ-ಶೌರ್ಯ-ಬಲ-ತೇಜಸ್ಸುಗಳಿಂದಲೂ ನಾನಾವಿಧವಾದ ಗುಣಗಳಿಂದಲೂ ಸಂಪನ್ನರಾಗಿದ್ದಾರೆ. ಮೇಲಾಗಿ ನಿನ್ನ ಅರ್ಥಸಿದ್ಧಿಗಾಗಿ ಪಾಂಡವರೊಡನೆ ಯುದ್ಧಮಾಡಿದವರು ಅವಧ್ಯಪ್ರಾಯರು. ಸಾಮಾನ್ಯ ರೀತಿಯಲ್ಲಿ ಅವರು ವಧಿಸಲ್ಪಡತಕ್ಕವರೇ ಅಲ್ಲ. ಅಂತಹವರೆಲ್ಲರೂ ಯುದ್ಧದಲ್ಲಿ ಪಾಂಡವರಿಂದ ಹತರಾದರು. ಇದು ದೈವದ ಇಚ್ಛೆಯೇ ಹೊರತು ಇದರಲ್ಲಿ ಮನುಷ್ಯಪ್ರಯತ್ನವೇನೂ ಇರುವುದಿಲ್ಲ. ಆದುದರಿಂದ ನೀನು ಶೋಕಿಸಬೇಡ. ಸಮಾಧಾನವನ್ನು ಹೊಂದು. '**ನ ಸದಾಸ್ತಿ ಸಿದ್ಧಿಃ**'–ಎಲ್ಲರಿಗೂ ಎಲ್ಲ ಸಮಯಗಳಲ್ಲಿಯೂ ಕಾರ್ಯವು ಸಿದ್ಧಿಸುವುದಿಲ್ಲ."

ಮಹಾರಾಜ! ದುರ್ಯೋಧನನು ಶಲ್ಯನು ಹೇಳಿದ ಮಾತನ್ನು ಕೇಳಿ ತಾನು ಪಾಂಡವರ ವಿಷಯದಲ್ಲಿ ಮಾಡಿದ ಅನೀತಿಯ ಕಾರ್ಯಗಳನ್ನೂ ಮನಸ್ಸಿನಲ್ಲಿ ಸ್ಮರಿಸುತ್ತಾ ದೀನಮನಸ್ಕನಾದನು. ಸ್ವಲ್ಪಹೊತ್ತು ಮೂರ್ಛಿತನೂ ಆಗಿದ್ದನು. ಪುನಃ ಎಚ್ಚರಗೊಂಡು ಆರ್ತಸ್ವರೂಪನೇ ಆಗಿದ್ದ ಸುಯೋಧನನು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು.

೯೨ನೆಯ ಅಧ್ಯಾಯವು ಮುಗಿಯಿತು.

೯೩ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

**ಭೀಮಸೇನನು ಇಪ್ಪತ್ತೈದುಸಾವಿರ ಪದಾತಿಸೈನಿಕರನ್ನು ಸಂಹಾರ ಮಾಡಿದುದು: ಅರ್ಜುನನು ರಥಸೈನ್ಯವನ್ನು ವಿಧ್ವಂಸಮಾಡಿದುದು: ಕೌರವಸೈನ್ಯದ ಪಲಾಯನ: ಯೋಧರನ್ನು ಯುದ್ಧೋನ್ಮುಖರನ್ನಾಗಿ ಮಾಡಲು ದುರ್ಯೋಧನನ ಪ್ರಯತ್ನವು ವಿಫಲವಾದುದು**

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

“ಸಂಜಯ! ಕರ್ಣಾರ್ಜುನರ ಯುದ್ಧವು ನಡೆಯುತ್ತಿದ್ದ ಆ ಭಯಂಕರ ದಿನದಂದು ಬಾಣಾಗ್ನಿಯಿಂದ ಭಸ್ಮೀಭೂತವಾದ ಮತ್ತು ಓಡಿಹೋದ ಕುರು-ಸೃಂಜಯಸೈನ್ಯಗಳು ಯಾವ ರೂಪದಲ್ಲಿದ್ದುವು? ಅವುಗಳ ಅವಸ್ಥೆಯು ಹೇಗಿದ್ದಿತು?”

“ಮಹಾರಾಜ! ಆ ಯುದ್ಧಸ್ಥಳದಲ್ಲಿ ಮನುಷ್ಯರ ಶರೀರಗಳ, ಕುದುರೆಗಳ ಮತ್ತು ಆನೆಗಳ ಘೋರವಾದ ಮತ್ತು ಮಹತ್ತರವಾದ ವಿನಾಶವು ಯಾವ ರೀತಿಯಲ್ಲಿ ನಡೆಯಿತೆಂಬುದನ್ನು ಸಾವಧಾನಚಿತ್ತನಾಗಿ ಕೇಳು. ಕರ್ಣನು ಹತನಾಗಲಾಗಿ ಅರ್ಜುನನು ಸಿಂಹನಾದಮಾಡಿದನು. ಆಗ ಮಹಾಭಯವು ನಿನ್ನ ಮಕ್ಕಳನ್ನು ಪ್ರವೇಶಿಸಿತು. (ನಿನ್ನ ಮಕ್ಕಳು ಭಯಗ್ರಸ್ತರಾದರು.) ಕರ್ಣನ ವಧೆಯಾದನಂತರ ಶೀಘ್ರವಾಗಿ ಪರಾಕ್ರಮ ತೋರಿಸಲು ನಿನ್ನ ಕಡೆಯ ಯಾವ ಯೋಧರಿಗೂ ಮನಸ್ಸೇ ಬರಲಿಲ್ಲ. ತಮ್ಮ ಸೈನಿಕರೆಲ್ಲರನ್ನೂ ಪುನಃ ಸಂಘಟಿಸಲೇಬೇಕೆಂದು ಒಬ್ಬ ಯೋಧನೂ ಯೋಚಿಸಲಿಲ್ಲ. ದ್ವೀಪರೂಪನಾಗಿದ್ದ ಕರ್ಣನು ಅರ್ಜುನನಿಂದ ಹತನಾಗಲಾಗಿ–ಅಗಾಧವಾದ ಮತ್ತು ಅಪಾರವಾದ ಸಮುದ್ರಮಧ್ಯದಲ್ಲಿ ಬಿರುಗಾಳಿಯ ಬಡಿತದಿಂದ ಭಗ್ನವಾದ ಹಡಗಿನಲ್ಲಿದ್ದ ವರ್ತಕರಂತೆ–ದಾಟಲು ಅಸಾಧ್ಯವಾಗಿದ್ದ ಯುದ್ಧಸಮುದ್ರವನ್ನು ದಾಟಲಿಚ್ಛಿಸಿದ್ದ ನಿನ್ನ ಸೈನಿಕರು ಭ್ರಾಂತರಾದರು. ಸೂತಪುತ್ರನು ಹತನಾಗಲಾಗಿ–ಸಿಂಹಗಳಿಂದ ಪೀಡಿತವಾದ ಮೃಗಗಳಂತೆ–ಶತ್ರುಪಕ್ಷದ ಯೋಧರ ಶಸ್ತ್ರಾಸ್ತ್ರಗಳಿಂದ ಕ್ಷತ-ವಿಕ್ಷತರಾಗಿದ್ದ ಕೌರವಸೈನಿಕರು ಬಹಳವಾಗಿ ಭಯಗೊಂಡರು. ಅನಾಥರಾಗಿದ್ದ ಅವರೆಲ್ಲರೂ ತಮ್ಮ ರಕ್ಷಣೆಗಾಗಿ ನಾಯಕನೊಬ್ಬನನ್ನು ಅಪೇಕ್ಷಿಸುತ್ತಿದ್ದರು. ಭಗ್ನವಾದ ಕೊಂಬುಗಳುಳ್ಳ ಎತ್ತುಗಳಂತೆ–ವಿಷದ ಹಲ್ಲುಗಳನ್ನು ತೆಗೆದ ಹಾವುಗಳಂತೆ–ನಾವು ಆ ಸಂಜೆ ಅರ್ಜುನನಿಂದ ಪರಾಜಿತರಾಗಿ ಯುದ್ಧದಿಂದ ಹಿಂದಿರುಗಿದೆವು. ನಿನ್ನ ಸೈನ್ಯದಲ್ಲಿದ್ದ ಇನ್ನೂ ಅನೇಕ ಶ್ರೇಷ್ಠವೀರರು ಹತರಾದರು; ವಿಧ್ವಸ್ತರಾದರು; ನಿಶಿತವಾದ ಬಾಣಗಳಿಂದ ಕ್ಷತ-ವಿಕ್ಷತರಾದರು. ಕರ್ಣನು ಹತನಾಗಲು ನಿನ್ನ ಮಕ್ಕಳು ಭಯದಿಂದ ಪಲಾಯನಮಾಡಿದರು. ಯೋಧರ ಯಂತ್ರ ಮತ್ತು ಕವಚಗಳು ಜಾರಿ ಕೆಳಕ್ಕೆ ಬಿದ್ದುವು. ಬುದ್ಧಿಗೆಟ್ಟಿದ್ದ ಅವರು ಯಾವ ದಿಕ್ಕಿಗೆ ಪಲಾಯನಮಾಡಬೇಕೆಂಬುದನ್ನೇ ಅರಿಯದೇ

ಹೋದರು. ತಮ್ಮ ಕಡೆಯವರನ್ನೇ ತುಳಿದು ಧ್ವಂಸಮಾಡುತ್ತಾ ಶೂನ್ಯ ದೃಷ್ಟಿಯಿಂದ ನಾಲ್ಕು ದಿಕ್ಕುಗಳನ್ನೂ ನೋಡುತ್ತಾ ಭಯದಿಂದ ಬಹಳ ಪೀಡಿತರಾಗಿ ಓಡುತ್ತಿದ್ದರು. 'ನನ್ನನ್ನೇ ಅರ್ಜುನನು ಅಟ್ಟಿಸಿಕೊಂಡು ಬರುತ್ತಿದ್ದಾನೆ. ನನ್ನನ್ನೇ ಭೀಮಸೇನನು ಬೆನ್ನಟ್ಟಿ ಬರುತ್ತಿದ್ದಾನೆ'–ಹೀಗೆ ಭಾವಿಸಿಕೊಂಡು ಕುರುಯೋಧರೆಲ್ಲರೂ ಭ್ರಾಂತರಾಗಿ ನೆಲದ ಮೇಲೆ ಬೀಳುತ್ತಾ-ಏಳುತ್ತಾ ಬಹಳವಾಗಿ ಸಂಕಟಪಡುತ್ತಿದ್ದರು. ಅಳಿದುಳಿದಿದ್ದ ಕೌರವಮಹಾರಥರಲ್ಲಿ ಕೆಲವರು ಕುದುರೆಗಳನ್ನೂ, ಕೆಲವರು ಆನೆಗಳನ್ನೂ, ಮತ್ತೆ ಕೆಲವರು ರಥಗಳನ್ನೂ ಹತ್ತಿಕೊಂಡು ಭಯದಿಂದ ವೇಗವಾಗಿ ಪಲಾಯನಮಾಡುತ್ತಿದ್ದರು. ಆ ಸನ್ನಿವೇಶದಲ್ಲಿ ಆ ಎಲ್ಲರೂ ಪದಾತಿ ಸೈನಿಕರನ್ನು ಸಂಪೂರ್ಣವಾಗಿ ಪರಿತ್ಯಜಿಸಿದರು. ಪದಾತಿಸೈನಿಕರು ಹೇಗೆ ತಪ್ಪಿಸಿಕೊಳ್ಳುತ್ತಾರೆಂಬ ಯೋಚನೆಯನ್ನೇ ಯಾರೂ ಮಾಡಲಿಲ್ಲ.

ಕೌರವಸೈನಿಕರು ಭಯಭೀತರಾಗಿ ಪಲಾಯನಮಾಡುತ್ತಿದ್ದಾಗ ಆನೆಗಳು ರಥಗಳನ್ನು ಧ್ವಂಸಮಾಡಿದುವು. ಮಹಾರಥಗಳು ಕುದುರೆ ಸವಾರರನ್ನೂ, ಅಶ್ವಸಮೂಹಗಳು ಪದಾತಿಸೈನಿಕರನ್ನೂ ವಿನಾಶಗೊಳಿಸಿದುವು. ವಿಷಜಂತು ಗಳಿಂದಲೂ ಮತ್ತು ಕಳ್ಳಕಾಕರಿಂದಲೂ ನಿಬಿಡವಾದ ಅರಣ್ಯದಲ್ಲಿ ಗುಂಪಿನಿಂದ ಬೇರ್ಪಟ್ಟ ಅನಾಥರು ವಿಪತ್ತಿನಲ್ಲಿ ಸಿಕ್ಕಿಬೀಳುವಂತೆ–ಸೂತಪುತ್ರನು ಹತನಾದನಂತರ ನಿನ್ನ ಕಡೆಯ ಯೋಧರು ವಿಪತ್ತಿಗೊಳಗಾದರು. ಮಾವಟಿಗರನ್ನು ಕಳೆದುಕೊಂಡ ಆನೆಗಳಂತೆಯೂ, ಕೈಗಳನ್ನು ಕಳೆದುಕೊಂಡ ಪದಾತಿಗಳಂತೆಯೂ–ಮುಂದುಗಾಣದಿದ್ದ ನಿನ್ನ ಕಡೆಯ ಯೋಧರು ಭಯಪೀಡಿತರಾಗಿ ಪ್ರಪಂಚವನ್ನೇ ಪಾರ್ಥಮಯವನ್ನಾಗಿ ಕಂಡರು. ಭೀಮಸೇನನ ಭಯದಿಂದ ಪೀಡಿತರಾಗಿ ಪಲಾಯನಮಾಡುತ್ತಿದ್ದ ಸಮಗ್ರಸೈನಿಕರನ್ನೂ ನೋಡಿ ದುರ್ಯೋಧನನು ಹಾಹಾಕಾರಮಾಡುತ್ತಾ ಸೂತನೊಡನೆ ಹೇಳಿದನು:

"ಸೂತ! ನನ್ನ ರಥವನ್ನು ಮೆಲ್ಲ-ಮೆಲ್ಲನೆ ಮುಂದೆ ನಡೆಸು. ಸರ್ವ ಸೈನಿಕರ ಹಿಂಭಾಗದಲ್ಲಿ ಧನುಷ್ಪಾಣಿಯಾಗಿ ನಿಲ್ಲುವ ನನ್ನನ್ನು ಪಾರ್ಥನು ಅತಿಕ್ರಮಿಸಿ ಮುಂದೆ ಹೋಗಲಾರನು. ಯುದ್ಧಮಾಡುತ್ತಿರುವ ಕೌಂತೇಯನನ್ನು ನಾನು ನಿಶ್ಚಯವಾಗಿಯೂ ಸಂಹರಿಸುತ್ತೇನೆ.

ಸಮುದ್ರವು ತೀರವನ್ನು ಅತಿಕ್ರಮಿಸಿ ಹೋಗದಂತೆ–ನನ್ನನ್ನು ಅತಿಕ್ರಮಿಸಿ ಹೋಗಲು ಪಾರ್ಥನಿಗೆ ಸಾಧ್ಯವಾಗುವುದಿಲ್ಲ.

**ಅದ್ಯಾರ್ಜುನಂ ಸಗೋವಿನ್ದಂ ಮಾನಿನಂ ಚ ವೃಕೋದರಮ್ ।**
**ಹನ್ಯಾಂ ಶಿಷ್ಟಾಂಸ್ತಥಾ ಶತ್ರೂನ್ಕರ್ಣಸ್ಯಾನೃಣ್ಯಮಾಪ್ನುಯಾಮ್ ॥**

ಈಗ ನಾನು ಗೋವಿಂದಸಹಿತನಾದ ಅರ್ಜುನನನ್ನೂ, ಅಭಿಮಾನಿಯಾದ ವೃಕೋದರನನ್ನೂ, ಅಳಿದುಳಿದಿರುವ ಶತ್ರುಗಳನ್ನೂ ಸಂಹರಿಸಿ ಕರ್ಣನ ಋಣದಿಂದ ಮುಕ್ತನಾಗುತ್ತೇನೆ.”

ಮಹಾರಾಜ! ಶ್ರೇಷ್ಠರಾದ ಆರ್ಯಶೂರರ ಮಾತುಗಳಿಗೆ ಅನುಗುಣವಾಗಿದ್ದ ದುರ್ಯೋಧನನ ಮಾತನ್ನು ಕೇಳಿ ಸೂತನು ಸ್ವರ್ಣಮಯವಾದ ಬಲೆಗಳಿಂದ ಆಚ್ಛಾದಿತವಾಗಿದ್ದ ಕುದುರೆಗಳನ್ನು ಮೆಲ್ಲ-ಮೆಲ್ಲಗೆ ಮುಂದೆ ನಡೆಸಿದನು. ಆ ಸಮಯದಲ್ಲಿ ರಥಾಶ್ವ-ಗಜಗಳಿಂದ ರಹಿತರಾಗಿದ್ದ ಇಪ್ಪತ್ತೈದು ಸಾವಿರ ಪದಾತಿಸೈನಿಕರು ಮಾತ್ರವೇ ಯುದ್ಧಸನ್ನದ್ಧರಾಗಿ ನಿಂತಿದ್ದರು. ಚತುರಂಗಬಲದಿಂದ ಪರಿವೃತರಾಗಿದ್ದ, ಕ್ರುದ್ಧರಾಗಿದ್ದ ಭೀಮಸೇನ ಮತ್ತು ಧೃಷ್ಟದ್ಯುಮ್ನರು ಆ ಎಲ್ಲ ಪದಾತಿಸೈನಿಕರನ್ನೂ ಬಾಣಗಳಿಂದ ಸಂಹರಿಸಲು ಉಪಕ್ರಮಿಸಿದರು. ಪದಾತಿಸೈನಿಕರೂ ಧೃಷ್ಟದ್ಯುಮ್ನನೊಡನಿದ್ದ ಭೀಮಸೇನನೊಡನೆ ಉಗ್ರವಾಗಿ ಯುದ್ಧಮಾಡುತ್ತಿದ್ದರು. ಕೆಲವರು ಭೀಮಸೇನ-ಧೃಷ್ಟದ್ಯುಮ್ನರನ್ನು ಹೆಸರು ಹಿಡಿದು ಕರೆಯುತ್ತಾ ಯುದ್ಧಕ್ಕೆ ಆಹ್ವಾನಿಸುತ್ತಿದ್ದರು. ಆ ಸಮಯದಲ್ಲಿ ಭೀಮಸೇನನು ಪರಮಕ್ರುದ್ಧನಾಗಿ, ರಥದಿಂದ ಬಹಳ ಬೇಗ ಕೆಳಗಿಳಿದು ಗದಾಪಾಣಿಯಾಗಿ, ಸುತ್ತಲೂ ನಿಂತು ಯುದ್ಧಮಾಡುತ್ತಿದ್ದ ಕುರುಯೋಧರೊಡನೆ ಯುದ್ಧದಲ್ಲಿ ತೊಡಗಿದನು. ಭುಜಗಳ ಬಲದಲ್ಲಿಯೇ ಭರವಸೆಯನ್ನು ಹೊಂದಿದ್ದ ಕುಂತೀಪುತ್ರನಾದ ಭೀಮಸೇನನು ಧರ್ಮಯುದ್ಧವನ್ನು ಮಾಡುವ ಇಚ್ಛೆಯುಳ್ಳವನಾಗಿದ್ದುದರಿಂದ ಭೂಮಿಯ ಮೇಲೆ ನಿಂತು ಯುದ್ಧಮಾಡುತ್ತಿದ್ದ ಪದಾತಿಗಳೊಡನೆ ರಥದ ಮೇಲೆ ಕುಳಿತು ಯುದ್ಧಮಾಡಲು ಇಚ್ಛೆಸಲಿಲ್ಲ.

ಸುವರ್ಣಮಯವಾದ ತಗಡಿನಿಂದ ಸಮಾಚ್ಛಾದಿತವಾಗಿದ್ದ, ಬಹು

ದೊಡ್ಡದಾಗಿದ್ದ ಗದೆಯನ್ನು ಹಿಡಿದು–ದಂಡಪಾಣಿಯಾದ ಯಮನೋಪಾದಿಯಲ್ಲಿ–ನಿನ್ನ ಕಡೆಯ ಎಲ್ಲ ಸೈನಿಕರನ್ನೂ ಸಂಹರಿಸಿದನು. ಪದಾತಿಸೈನಿಕರೂ ಅತ್ಯಂತಪ್ರಿಯವಾದ ತಮ್ಮ ಪ್ರಾಣಗಳ ಹಂಗನ್ನೇ ತೊರೆದು–ಪತಂಗಗಳು ಬೆಂಕಿಯ ಬಳಿಗೆ ರಭಸದಿಂದ ನುಗ್ಗಿಹೋಗುವಂತೆ–ಭೀಮಸೇನನನ್ನು ಆಕ್ರಮಿಸಿದರು. ಪ್ರಾಣಿಗಳ ಸಮೂಹಗಳು ಯಾವ ರೀತಿಯಲ್ಲಿ ಯಮರಾಜ



ನನ್ನು ನೋಡಿದೊಡನೆಯೇ ಪ್ರಾಣಗಳನ್ನು ತೊರೆಯುತ್ತವೆಯೋ–ಅದೇ ರೀತಿಯಲ್ಲಿ ಕ್ರುದ್ಧರಾದ, ಯುದ್ಧದುರ್ಮದರಾದ ಪದಾತಿಸೈನಿಕರು ಭೀಮಸೇನನನ್ನು ಕಾಣುತ್ತಲೇ ಪ್ರಾಣಗಳನ್ನು ತೊರೆದರು. ಗಿಡಗಪಕ್ಷಿಯಂತೆ ಭೀಮಸೇನನು ಗದಾಪಾಣಿಯಾಗಿ ರಣರಂಗದಲ್ಲಿ ಸಂಚರಿಸುತ್ತಾ ನಿನ್ನ

ಕಡೆಯ ಇಪ್ಪತ್ತೈದು ಸಾವಿರ ಸೈನಿಕರನ್ನೂ ಧ್ವಂಸಮಾಡಿದನು. ಸತ್ಯಪರಾಕ್ರಮನಾದ, ಮಹಾಬಲನಾದ ಭೀಮಸೇನನು ಪದಾತಿಸೈನಿಕರೆಲ್ಲರನ್ನೂ ಸಂಹರಿಸಿ ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಮುಂದೆಮಾಡಿಕೊಂಡು ರಣರಂಗದಲ್ಲಿ ನಿಂತುಕೊಂಡನು. ಇನ್ನೊಂದು ಭಾಗದಲ್ಲಿ ವೀರ್ಯವಂತನಾದ ಧನಂಜಯನು ಕೌರವರ ರಥಸೈನ್ಯವನ್ನು ಆಕ್ರಮಿಸಿದನು. ಮಾದ್ರಿಯ



ಮಕ್ಕಳಾದ ನಕುಲ-ಸಹದೇವರೂ, ಮಹಾರಥನಾದ ಸಾತ್ಯಕಿಯೂ ಪರಮ ಹೃಷ್ಟರಾಗಿ ದುರ್ಯೋಧನನ ಸೈನ್ಯವನ್ನು ಸಂಹರಿಸುತ್ತಾ ಬಹಳ ವೇಗವಾಗಿ ಶಕುನಿಯನ್ನು ಆಕ್ರಮಿಸಿದರು. ನಕುಲ-ಸಹದೇವ-ಸಾತ್ಯಕಿಯರು ನಿಶಿತವಾದ ಬಾಣಗಳಿಂದ ಶಕುನಿಯ ಬಹುಮಂದಿ ಕುದುರೆಸವಾರರನ್ನು ಸಂಹರಿಸಿ

ಬಹಳ ಶೀಘ್ರವಾಗಿ ಶಕುನಿಯ ಬಳಿಗೆ ಧಾವಿಸಿದರು. ಶಕುನಿಗೂ ಮತ್ತು ನಕುಲ-ಸಹದೇವ-ಸಾತ್ಯಕಿಯರಿಗೂ ಭಯಂಕರಯುದ್ಧವು ಪ್ರಾರಂಭ ವಾಯಿತು. ಧನಂಜಯನು ನಿನ್ನ ರಥಸೈನ್ಯದ ಬಳಿಗೆ ಬಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿದ್ದ ಗಾಂಡೀವಧನುಸ್ಸನ್ನು ಟೇಂಕರಿಸಿದನು. ಶ್ರೀಕೃಷ್ಣನನ್ನೇ ಸಾರಥಿಯನ್ನಾಗಿ ಹೊಂದಿದ್ದ ಅರ್ಜುನನು ಯೋಧನಾಗಿ ಯುದ್ಧಮಾಡಲು ಬಂದುದನ್ನೂ ಮತ್ತು ಅವನು ಕುಳಿತಿದ್ದ ಶ್ವೇತಾಶ್ವಯುಕ್ತವಾದ ರಥವನ್ನೂ ನೋಡಿ ಭಯದಿಂದ ನಿನ್ನ ಕಡೆಯ ರಥಸೈನಿಕರು ಪಲಾಯನಮಾಡಿದರು. ಕೌರವರ ಕಡೆಯ ಅನೇಕರಥಗಳು ನಷ್ಟವಾಗಿ ಹೋದುವು. ಅನೇಕರು ಅರ್ಜುನನ ಬಾಣಗಳ ಪ್ರಹಾರಗಳಿಂದ ಬಹಳವಾಗಿ ಗಾಯಗೊಂಡರು. ಹಿಂದೆಯೇ ಹೇಳಿದಂತೆ ಇಪ್ಪತ್ತೈದು ಸಾವಿರ ಪದಾತಿಗಳೂ ಕಾಲವಶರಾದರು. ಮಹಾತ್ಮನಾದ, ಪಾಂಚಾಲರಾಜನ ಮಗನಾದ, ಮಹಾಧನುಷ್ಮಂತನಾದ, ಕಾಂತಿಯುಕ್ತನಾದ, ಶತ್ರುಗಳ ಸಮೂಹಗಳನ್ನು ಪರಿತಾಪಗೊಳಿಸುವ, ಪಾಂಚಾಲರ ಮಹಾರಥನಾದ, ಪುರುಷವ್ಯಾಘ್ರನಾದ ಧೃಷ್ಟದ್ಯುಮ್ನನು ಅವರೆಲ್ಲರನ್ನೂ ಸಂಹರಿಸಿ ಭೀಮಸೇನನನ್ನು ಮುಂದುಮಾಡಿಕೊಂಡು ಬಹಳ ಬೇಗ ರಣಾಂಗಣದಲ್ಲಿ ಪುನಃ ಕಾಣಿಸಿಕೊಂಡನು. ಪಾರಿವಾಳದ ಬಣ್ಣದಿಂದ ಕೂಡಿದ್ದ ಕುದುರೆಗಳನ್ನು ರಥದಲ್ಲಿ ಹೊಂದಿದ್ದ, ಧ್ವಜದಲ್ಲಿ ಕೋವಿದಾರ (ಕೆಂಗಾಂಚಳ) ವೃಕ್ಷವನ್ನೇ ಚಿಹ್ನೆಯನ್ನಾಗಿ ಹೊಂದಿದ್ದ ಧೃಷ್ಟದ್ಯುಮ್ನನನ್ನು ನೋಡಿ ನಿನ್ನ ಕಡೆಯ ಸೈನಿಕರೆಲ್ಲರೂ ಪಲಾಯನಮಾಡಿದರು.

ಯಶೋವಂತರಾದ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಸಾತ್ಯಕಿಯೊಡನೆ ಬಹಳ ಬೇಗ ಶೀಘ್ರಾಸ್ತ್ರನಾದ ಗಾಂಧಾರರಾಜನನ್ನು ಬೆನ್ನಟ್ಟಿ ಹೋಗಿ ಅವನೊಡನೆ ಯುದ್ಧದಲ್ಲಿ ತೊಡಗಿದ್ದುದು ಕಂಡುಬಂದಿತು. ಚೇಕಿತಾನ, ಶಿಖಂಡಿ, ದ್ರೌಪದಿಯ ಐವರು ಮಕ್ಕಳು–ಇವರೆಲ್ಲರೂ ಸೇರಿ ನಿನ್ನ ಕಡೆಯ ಅನೇಕಸೈನಿಕರನ್ನು ಸಂಹರಿಸಿ ಶಂಖಧ್ವನಿಗಳನ್ನು ಮಾಡಿದರು. ಗೂಳಿಗಳು ತಮ್ಮೊಡನೆ ಕಾದಾಟಕ್ಕೆ ಬರುವ ಕೋಪಗೊಂಡ ಗೂಳಿಗಳನ್ನು ಕಾಳಗದಲ್ಲಿ ಜಯಿಸಿದನಂತರವೂ ಸೋತ ಗೂಳಿಗಳನ್ನು ಅಟ್ಟಿಸಿಕೊಂಡೇ ಹೋಗುವಂತೆ–ಆ ಎಲ್ಲ ಪಾಂಡವಯೋಧರೂ ನಿನ್ನ ಕಡೆಯ ಸೈನಿಕರು

ಪರಾಙ್ಮುಖರಾಗಿ ಓಡಿಹೋಗುತ್ತಿರುವುದನ್ನು ನೋಡಿಯೂ ಅವರನ್ನೇ ಅಟ್ಟಿಸಿಕೊಂಡು ಹೋಗುತ್ತಿದ್ದರು. ಆ ಸಮಯದಲ್ಲಿ ರಣಾಂಗಣದಲ್ಲಿ ಯುದ್ಧ ಸನ್ನದ್ಧನಾಗಿ ನಿಂತಿದ್ದ, ಬಲಿಷ್ಠನಾದ, ವೀರ್ಯವಂತನಾದ, ಸವ್ಯಸಾಚಿಯಾದ, ಪಾಂಡುಪುತ್ರನಾದ ಧನಂಜಯನು ನಿನ್ನ ಸೈನ್ಯದಲ್ಲಿ ಇನ್ನೂ ಸ್ವಲ್ಪ ಶೇಷವು ಉಳಿದಿರುವುದನ್ನು ಕಂಡು ಮೂರು ಲೋಕಗಳಲ್ಲಿಯೂ ವಿಖ್ಯಾತವಾಗಿದ್ದ ಗಾಂಡೀವಧನುಸ್ಸನ್ನು ಟೇಂಕರಿಸುತ್ತಾ ರಥಸೈನಿಕರನ್ನು ಬಾಣಗಳ ಸಮೂಹಗಳಿಂದ ಮುಚ್ಚಿಬಿಟ್ಟನು. ಬಾಣಗಳ ಆವರಣದಿಂದಾಗಿ ಕತ್ತಲೆಯು ಕವಿದು ಆ ಸ್ಥಳದಲ್ಲಿ ಯಾವುದೊಂದೂ ಕಾಣುತ್ತಲೇ ಇರಲಿಲ್ಲ. ಬಾಣಗಳ ಆಚ್ಛಾದನೆಯಿಂದ ಲೋಕವೇ ಅಂಧಕಾರಮಯವಾಗಲಾಗಿ, ಭೂಮಿಯೆಲ್ಲವೂ ಧೂಳಿನಿಂದ ಮುಚ್ಚಿಹೋಗಲಾಗಿ, ನಿನ್ನ ಕಡೆಯ ಯೋಧರೆಲ್ಲರೂ ಪಲಾಯನ ಮಾಡಿದರು. ಕುರುಸೈನ್ಯವು ಭಗ್ನವಾಗುತ್ತಿರಲಾಗಿ, ಕುರುರಾಜನಾದ ನಿನ್ನ ಮಗನು ತನ್ನ ಎದುರಾಗಿ ಬಂದ ಶತ್ರುಗಳನ್ನು ಆಕ್ರಮಿಸಿದನು. ಹಿಂದೆ ಬಲಿಚಕ್ರವರ್ತಿಯು ಎಲ್ಲ ದೇವತೆಗಳನ್ನೂ ಯುದ್ಧಕ್ಕೆ ಕರೆಯುತ್ತಿದ್ದಂತೆ– ದುರ್ಯೋಧನನೂ ಎಲ್ಲ ಪಾಂಡವರನ್ನೂ ಯುದ್ಧಕ್ಕೆ ಆಹ್ವಾನಿಸಿದನು. ನಾನಾವಿಧವಾದ ಶಸ್ತ್ರಾಸ್ತ್ರಗಳನ್ನು ಧರಿಸಿದ್ದ ಕ್ರುದ್ಧರಾಗಿದ್ದ ಪಾಂಡವ ಯೋಧರು ಒಟ್ಟಾಗಿ ಸೇರಿ ಗರ್ಜಿಸುತ್ತಾ ದುರ್ಯೋಧನನನ್ನು ಬಾರಿ-ಬಾರಿಗೂ ಭಯಪಡಿಸುತ್ತಾ ಆಕ್ರಮಿಸಿದರು. ಕ್ರುದ್ಧನಾದ ದುರ್ಯೋಧನನು ಪಾಂಡವರೆಲ್ಲರೂ ಆಕ್ರಮಿಸಿದರೂ ಸ್ವಲ್ಪವಾದರೂ ಭ್ರಾಂತನಾಗದೇ ನಿಶಿತವಾದ ಬಾಣಗಳಿಂದ ನೂರಾರು-ಸಾವಿರಾರು ಯೋಧರನ್ನು ಸಂಹರಿಸುತ್ತಾ ಪಾಂಡವಯೋಧರೊಡನೆ ಶೌರ್ಯದಿಂದ ಯುದ್ಧವನ್ನು ಮುಂದುವರಿಸಿದನು. ನಿನ್ನ ಮಗನ ಅದ್ಭುತವಾದ ಪೌರುಷವನ್ನು ನಾವು ಆಗ ನೋಡಿದೆವು. ದುರ್ಯೋಧನನೊಬ್ಬನೇ ಸಂಘಟಿತರಾಗಿ ಬಂದಿದ್ದ ಎಲ್ಲ ಪಾಂಡವರೊಡನೆಯೂ ಯುದ್ಧ ಮಾಡುತ್ತಿದ್ದನು. ಆ ಸಮಯದಲ್ಲಿ ಮಹಾತ್ಮನಾದ ಬುದ್ಧಿವಂತನಾದ ನಿನ್ನ ಮಗ ದುರ್ಯೋಧನನು ತನ್ನ ಸೈನ್ಯವು ಗಾಯಗೊಂಡು ಅತ್ಯಂತದುಃಖಗೊಂಡಿರುವುದನ್ನು ನೋಡಿ ಅವರೆಲ್ಲರನ್ನೂ ಯುದ್ಧೋತ್ಸುಕರನ್ನಾಗಿ ಮಾಡಲು ನಿಶ್ಚಯಿಸಿ ಎಲ್ಲರೂ ಹರ್ಷಗೊಳ್ಳುವಂತೆ ಈ ಮಾತುಗಳನ್ನು ಹೇಳಿದನು:

**ನ ತಂ ದೇಶಂ ಪ್ರಪಶ್ಯಾಮಿ ಯತ್ರ ಯಾತಾ ಭಯಾರ್ದಿತಾಃ ।**
**ಗತಾನಾಂ ಯತ್ರ ವೈ ಮೋಕ್ಷಃ ಪಾಣ್ಡವಾತ್ಕಿಂ ಗತೇನ ವಃ ॥೫೨॥**

**ಅಲ್ಪಂ ಚ ಬಲಮೇತೇಷಾಂ ಕೃಷ್ಣೌ ಚ ಭೃಶವಿಕ್ಷತೌ ।**
**ಅದ್ಯ ಸರ್ವಾನ್ಹನಿಷ್ಯಾಮಿ ಧ್ರುವೋ ಹಿ ವಿಜಯೋ ಭವೇತ್ ॥೫೩॥**

"ಯೋಧರೇ! ಭಯದಿಂದ ಪೀಡಿತರಾಗಿರುವ ನೀವು ಯಾವ ದೇಶಕ್ಕೆ ಹೋಗಿ ಪಾಂಡವನಿಂದ ತಪ್ಪಿಸಿಕೊಳ್ಳುವಿರೆಂಬುದನ್ನು ನಾನು ತಿಳಿಯದವನಾಗಿದ್ದೇನೆ. ಆದುದರಿಂದ ನೀವು ಯುದ್ಧಭೂಮಿಯನ್ನು ಬಿಟ್ಟು ಓಡಿಹೋಗುವುದರಿಂದ ಪ್ರಯೋಜನವೇನಿದೆ? ಈ ಕೃಷ್ಣಾರ್ಜುನರಾದರೋ ಈಗ ಬಹಳವಾಗಿ ಗಾಯಗೊಂಡಿರುತ್ತಾರೆ. ಈಗ ಇವರಲ್ಲಿ ಅಲ್ಪಬಲವು ಮಾತ್ರವೇ ಉಳಿದಿದೆ. ಆದುದರಿಂದ ನಾನು ಈ ಎಲ್ಲರನ್ನೂ ಸಂಹಾರಮಾಡುತ್ತೇನೆ. ವಿಜಯವು ನಿಶ್ಚಯವಾಗಿಯೂ ನನಗೆ ಲಭಿಸಿಯೇ ಲಭಿಸುತ್ತದೆ. ನೀವು ಅಸಂಘಟಿತರಾಗಿ ಪ್ರಾಣಗಳನ್ನು ಉಳಿಸಿಕೊಳ್ಳುವ ಇಚ್ಛೆಯಿಂದ ಪಲಾಯನಮಾಡುವಿರಾದರೆ, ಪಾಂಡವರು ಅಪರಾಧಿಗಳಾದ ನಿಮ್ಮನ್ನು ಬೆನ್ನಟ್ಟಿ ಬಂದು ಸಂಹಾರಮಾಡುವುದಂತೂ ನಿಜ. ಆದುದರಿಂದ ಓಡಿಹೋದರೂ ಮರಣವು ಸಿದ್ಧವಾಗಿರುವಾಗ ಯುದ್ಧದಲ್ಲಿಯೇ ಮರಣವನ್ನಪ್ಪುವುದು ನಮಗೆ ಶ್ರೇಯಸ್ಕರ.

**ಸುಖಂ ಸಾಂಗ್ರಾಮಿಕೋ ಮೃತ್ಯುಃ ಕ್ಷತ್ರಧರ್ಮೇಣ ಯುಧ್ಯತಾಮ್ ।**
**ಮೃತೋ ದುಃಖಂ ನ ಜಾನೀತೇ ಪ್ರೇತ್ಯ ಚಾನನ್ತ್ಯಮಶ್ನುತೇ ॥೫೪॥**

ಕ್ಷತ್ರಧರ್ಮವನ್ನವಲಂಬಿಸಿ ಯುದ್ಧಮಾಡುವ ವೀರರಿಗೆ ಯುದ್ಧದಲ್ಲಿ ಲಭಿಸುವ ಮೃತ್ಯುವು ಅತ್ಯಂತಸುಖಕರವಾದುದು. ಯುದ್ಧದಲ್ಲಿ ಮೃತನಾದವನಿಗೆ ದುಃಖದ ಅರಿವಿರುವುದಿಲ್ಲ. ಮರಣಹೊಂದಿ ಪರಲೋಕಕ್ಕೆ ಹೋದನಂತರ ಅಕ್ಷಯವಾದ ಸುಖವೂ ಲಭಿಸುತ್ತದೆ.

ಎಷ್ಟು ಮಂದಿ ಕ್ಷತ್ರಿಯರು ಇಲ್ಲಿಗೆ ಯುದ್ಧಮಾಡುವ ಸಲುವಾಗಿ ಆಗಮಿಸಿರುವರೋ–ಅವರೆಲ್ಲರೂ ನನ್ನ ಈ ಮಾತುಗಳನ್ನು ಕೇಳಿರಿ!

**ಯದಾ ಶೂರಂ ಚ ಭೀರುಂ ಚ ಮಾರಯತ್ಯನ್ತಕೋ ಯಮಃ ।**
**ಕೋ ನು ಮೂಢೋ ನ ಯುಧ್ಯೇತ ಮಾದೃಶಃ ಕ್ಷತ್ರಿಯವ್ರತಃ ॥೫೫॥**

ಶೂರನನ್ನಾಗಲೀ, ಹೇಡಿಯನ್ನಾಗಲೀ–ಪ್ರಾಣಿಗಳ ಅಂತಕನಾದ ಯಮರಾಜನು ಸಂಹಾರಮಾಡಿಯೇ ತೀರುತ್ತಾನೆ. (ಹೇಡಿಯಾದವನು ಯುದ್ಧದಿಂದ ಪಲಾಯನಮಾಡಿದ ಮಾತ್ರಕ್ಕೆ ಅವನಿಗೆ ಮರಣವಿಲ್ಲ ವೆಂಬುದಿಲ್ಲ. ಸದ್ಯದಲ್ಲಿಲ್ಲದಿದ್ದರೂ ಅವನು ಮರಣದಿಂದಂತೂ ತಪ್ಪಿಸಿಕೊಳ್ಳಲಾರನು.) ಹೀಗಿರುವಾಗ ಯಾವ ಮೂಢನು ತಾನೇ ಯುದ್ಧ ಮಾಡದೇ ಪಲಾಯನಮಾಡುತ್ತಾನೆ? ಕ್ಷತ್ರಿಯವ್ರತಾಚರಣೆಯಲ್ಲಿರುವ ನನ್ನಂತಹವರಂತೂ ಯಾವುದೇ ಕಾರಣದಿಂದಲೂ ಯುದ್ಧದಿಂದ ಪರಾಙ್ಮುಖರಾಗುವುದಿಲ್ಲ.

**ದ್ವಿಷತೋ ಭೀಮಸೇನಸ್ಯ ಕ್ರುದ್ಧಸ್ಯ ವಶಮೇಷ್ಯಥ ।**
**ಪಿತಾಮಹೈರಾಚರಿತಂ ನ ಧರ್ಮಂ ಹಾತುಮರ್ಹಥ ॥೫೮॥**

ಶತ್ರುವಾದ ಮತ್ತು ಕ್ರುದ್ಧನಾದ ಭೀಮಸೇನನ ವಶರಾಗಿ ಪ್ರಾಣಗಳನ್ನಾದರೂ ತೊರೆಯಿರಿ. ಆದರೆ ನಮ್ಮ ಪಿತೃ-ಪಿತಾಮಹರಿಂದ ಅನುಷ್ಠಿತವಾದ ಧರ್ಮವನ್ನು ಮಾತ್ರ ಪರಿತ್ಯಜಿಸಬೇಡಿರಿ. ಹಾಗೆ ಪರಿತ್ಯಜಿಸುವುದು ಯೋಗ್ಯವೂ ಅಲ್ಲ.

**ನ ಹ್ಯಧರ್ಮೋಽಸ್ತಿ ಪಾಪೀಯಾನ್ ಕ್ಷತ್ರಿಯಸ್ಯ ಪಲಾಯನಾತ್ ।**
**ನ ಯುದ್ಧಧರ್ಮಾಚ್ಛ್ರೇಯೋ ಹಿ ಪನ್ಥಾಃ ಸ್ವರ್ಗಸ್ಯ ಕೌರವಾಃ ।**
**ಅಚಿರೇಣ ಹತಾ ಲೋಕಾನ್ಸದ್ಯೋ ಯೋಧಾಃ ಸಮಶ್ನುತ ॥೫೯॥**

ಕ್ಷತ್ರಿಯನಾದವನಿಗೆ ಯುದ್ಧದಿಂದ ಪರಾಙ್ಮುಖನಾಗಿ ಪಲಾಯನ ಮಾಡುವುದಕ್ಕಿಂತಲೂ ಹೆಚ್ಚಿನ ಮಹಾಪಾಪಕಾರ್ಯವು ಮತ್ತೊಂದಿರುವು ದಿಲ್ಲ. ಅದೇ ರೀತಿಯಲ್ಲಿ ಸ್ವರ್ಗಪ್ರಾಪ್ತಿಗೆ ಯುದ್ಧಧರ್ಮಕ್ಕಿಂತಲೂ ಶ್ರೇಯಸ್ಕರವಾದ ಮಾರ್ಗವೂ ಮತ್ತೊಂದಿರುವುದಿಲ್ಲ. ಯುದ್ಧದಲ್ಲಿ ಹತರಾಗುವ ನೀವು ಬಹಳ ಬೇಗ ಪುಣ್ಯಲೋಕಗಳನ್ನು ಅನುಭವಿಸುವಿರಿ."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ನಿನ್ನ ಮಗನು ಹೀಗೆ ಹೇಳುತ್ತಿದ್ದರೂ ಅರ್ಜುನನ ಬಾಣಗಳಿಂದ ಬಹಳವಾಗಿ ಗಾಯಗೊಂಡ ನಿನ್ನ ಕಡೆಯ ಸೈನಿಕರು ನಿನ್ನ

ಮಗನು ಹೇಳಿದ ಮಾತುಗಳನ್ನು ಕೇಳಿಯೂ ಮನಸ್ಸಿಗೇ ತಂದುಕೊಳ್ಳದೇ ಎಲ್ಲ ದಿಕ್ಕುಗಳಿಗೂ ಓಡಿಹೋದರು.

೯೩ನೆಯ ಅಧ್ಯಾಯವು ಮುಗಿಯಿತು.

೯೪ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಶಲ್ಯನಿಂದ ರಣಭೂಮಿಯ ದಿಗ್ದರ್ಶನ; ಕೌರವಸೇನೆಯ ಪಲಾಯನ: ಕೃಷ್ಣಾರ್ಜುನರು ಶಿಬಿರಕ್ಕೆ ತೆರಳಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಪಲಾಯನಮಾಡುತ್ತಿದ್ದ ನಿನ್ನ ಕಡೆಯ ಸೈನಿಕರನ್ನು ನಿನ್ನ ಮಗನು ಹಿಂದಿರುಗುವಂತೆ ಮಾಡಲು ಪ್ರಯತ್ನಿಸುತ್ತಿರುವುದನ್ನು ನೋಡಿ ಭಯಗೊಂಡವನಂತೆ ಕಾಣುತ್ತಿದ್ದ, ಮಂಕುಕವಿದವನಂತಿದ್ದ ಮದ್ರಾಧಿಪತಿಯಾದ ಶಲ್ಯನು ದುರ್ಯೋಧನನಿಗೆ ಹೇಳಿದನು:

“ದುರ್ಯೋಧನ! ಸತ್ತುಹೋಗಿರುವ ನರಾಶ್ವ-ಗಜಗಳಿಂದ ತುಂಬಿ ಹೋಗಿರುವ ಘೋರವಾದ ಈ ರಣರಂಗವನ್ನಾದರೂ ನೋಡು. ಮದೋದಕವನ್ನು ಸುರಿಸುತ್ತಿದ್ದ ಪರ್ವತೋಪಮವಾದ ಆನೆಗಳು ಬಾಣಗಳಿಂದ ಭಿನ್ನವಾದ ಶರೀರವುಳ್ಳವುಗಳಾಗಿ ಈ ರಣರಂಗದ ಸುತ್ತಲೂ ಬಿದ್ದಿವೆ. ಈ ಆನೆಗಳಲ್ಲಿ ಕೆಲವು ಯಾತನೆಯಿಂದ ಚಡಪಡಿಸುತ್ತಿವೆ; ಮತ್ತೆ ಕೆಲವು ಪ್ರಾಣಗಳನ್ನು ತೊರೆದಿವೆ. ಇವುಗಳ ಮೇಲೆ ಕುಳಿತಿದ್ದ ಯೋಧರು ಕವಚಾಯುಧ-ಗುರಾಣಿ-ಖಡ್ಗಗಳನ್ನು ಕಳೆದುಕೊಂಡು ಆನೆಗಳೊಡನೆಯೇ ನೆಲದ ಮೇಲೆ ಬಿದ್ದಿದ್ದಾರೆ. ಇಲ್ಲಿ ಬಿದ್ದಿರುವ ಆನೆಗಳು–ವಜ್ರಾಯುಧದಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದಿರುವ ನಾನಾವಿಧವಾದ ಬಂಡೆಗಳನ್ನೂ, ದೊಡ್ಡ-ದೊಡ್ಡ ವೃಕ್ಷಗಳನ್ನೂ, ಲತೆಗಳನ್ನೂ ಹೊಂದಿರುವ ಮಹಾಪರ್ವತಗಳಂತೆಯೇ ಕಾಣುತ್ತಿವೆ. ಈ ಆನೆಗಳ ಮೇಲಿದ್ದ ಚಿಕ್ಕ-ಚಿಕ್ಕ ಗಂಟೆಗಳೂ, ಅಂಕುಶಗಳೂ, ತೋಮರಗಳೂ, ಧ್ವಜಗಳೂ ಛಿದ್ರ-ಛಿದ್ರವಾಗಿ ಹೋಗಿವೆ. ಅವುಗಳ ಮೇಲೆ ಹೊದ್ದಿಸಿರುವ ಸುವರ್ಣಮಯವಾದ ಜಾಲಗಳ ಸಹಿತವಾಗಿ ಈ ಆನೆಗಳು ರಕ್ತದಿಂದ ತೋಯ್ದುಹೋಗಿವೆ. ಬಾಣಗಳ ಪ್ರಹಾರದಿಂದ ಗಾಯಗೊಂಡ ಕುದುರೆಗಳು ಕೆಳಕ್ಕೆ ಬಿದ್ದು ವಿಲಿ-ವಿಲಿಗುಟ್ಟುತ್ತಿವೆ.

ದಾರುಣವಾಗಿ ಧ್ವನಿಮಾಡುತ್ತಾ ವೇಗವಾಗಿ ನಿಟ್ಟುಸಿರುಬಿಡುತ್ತಿವೆ. ರಕ್ತವನ್ನೇ ಕಾರಿಕೊಳ್ಳುತ್ತಿವೆ. ಇಂತಹ ಆನೆಗಳಿಂದಲೂ ಕುದುರೆಗಳಿಂದಲೂ ರಣಾಂಗಣವೇ ತುಂಬಿಹೋಗಿದೆ. ದೀನವಾಗಿ ಧ್ವನಿಮಾಡುತ್ತಿರುವ, ಕಣ್ಣುಗಳನ್ನು ತಿರುಗಿಸುತ್ತಿರುವ, ನೆಲವನ್ನು ಕಚ್ಚಿರುವ, ಆರ್ತನಾದಗಳನ್ನು ಮಾಡುತ್ತಿರುವ, ಬಾಣಗಳ ಆಘಾತಕ್ಕೆ ಸಿಕ್ಕಿದ ಗಜಾಶ್ವ-ಪದಾತಿಸೈನಿಕರಿಂದಲೂ ವೀರಯೋಧರ ಸಮೂಹಗಳಿಂದಲೂ ರಣಾಂಗಣವು ನಿಬಿಡವಾಗಿದೆ. ಪ್ರಾಣಗಳನ್ನು ಬಿಟ್ಟಿರುವ ಮತ್ತು ಪ್ರಾಣಗಳನ್ನು ಬಿಡುತ್ತಿರುವ, ಸಮ್ಮರ್ದಿತರಾಗಿ ಕಾಂತಿಹೀನರಾಗಿರುವ ಗಜಾಶ್ವ-ರಥ-ಪದಾತಿಸೈನಿಕರಿಂದಲೂ ಮತ್ತು ಮುರಿದುಬಿದ್ದಿರುವ ರಥಗಳಿಂದಲೂ ನಿಬಿಡವಾಗಿರುವ ಈ ರಣಾಂಗಣವು ನಿಶ್ಚಯವಾಗಿಯೂ ಮಹಾಭಯಂಕರವಾದ ವೈತರಣೀ ನದಿಯಂತೆಯೇ ಕಾಣುತ್ತಿದೆ.

ಕತ್ತರಿಸಲ್ಪಟ್ಟ ಸೊಂಡಿಲಿನಿಂದಲೂ, ಕ್ಷತ-ವಿಕ್ಷತವಾದ ಶರೀರದಿಂದಲೂ ಕೂಡಿರುವ, ಗಡ-ಗಡನೆ ನಡುಗುತ್ತಾ ನೆಲದ ಮೇಲೆ ಬಿದ್ದಿರುವ, ಮುರಿದು ಹೋದ ದಂತಗಳುಳ್ಳ, ರಕ್ತವನ್ನು ಕಾರುತ್ತಿರುವ, ವೇದನೆಯಿಂದ ಚಡಪಡಿಸುತ್ತಿರುವ, ದೀನವಾಗಿ ಚೀತ್ಕಾರಮಾಡುತ್ತಿರುವ ಆನೆಗಳಿಂದ ಈ ಸಮರಭೂಮಿಯು ತುಂಬಿಹೋಗಿದೆ. ಕತ್ತರಿಸಿಹಾಕಲ್ಪಟ್ಟ ಚಕ್ರ-ಬಾಣ-ನೊಗ ಮತ್ತು ಹಗ್ಗಗಳುಳ್ಳ ವಿಧ್ವಸ್ತವಾದ ಬತ್ತಳಿಕೆ-ಪತಾಕ-ಧ್ವಜಗಳಿಂದ ಕೂಡಿರುವ, ಸುವರ್ಣಮಯವಾದ ಬಲೆಗಳಿಂದ ಆಚ್ಛಾದಿತವಾಗಿರುವ, ವಿಧ್ವಸ್ತವಾಗಿ ಕೆಳಕ್ಕೆ ಬಿದ್ದಿರುವ ರಥಗಳು ಮೋಡಗಳಂತೆಯೇ ರಣಾಂಗಣವನ್ನು ಆವರಿಸಿಕೊಂಡಿವೆ. ಯುದ್ಧಾಭಿಮುಖರಾಗಿದ್ದಾಗ ಶತ್ರುಗಳಿಂದ ಹತರಾಗಿ ಪ್ರಾಣಗಳನ್ನು ತೊರೆದು ಪ್ರಶಾಂತರಂತೆ ಕಾಣುತ್ತಿರುವ ಛಿನ್ನ-ಭಿನ್ನವಾದ ಕವಚಾಭರಣವಸ್ತ್ರಾಯುಧಗಳುಳ್ಳ, ಯಶೋವಂತರಾದ ಗಜಾಶ್ವ-ರಥಯೋಧರಿಂದಲೂ ಮತ್ತು ಪದಾತಿಸೈನಿಕರಿಂದಲೂ ಈ ರಣರಂಗವು ಸಮಾಕುಲವಾಗಿದೆ. ಆಕಾಶವು ನಿರ್ಮಲವಾಗಿರುವ ಪ್ರದೀಪ್ತವಾದ ಗ್ರಹಗಳಿಂದ ರಾತ್ರಿಯಲ್ಲಿ ಶೋಭಾಯಮಾನವಾಗಿ ಕಾಣುವಂತೆ–ಆಕಾಶದಿಂದ ಚ್ಯುತವಾದ ಗ್ರಹಗಳಂತೆಯೇ ಕಾಣುತ್ತಿರುವ

ಬಾಣಗಳ ಪ್ರಹಾರಗಳಿಂದ ಗಾಯಗೊಂಡು ಕೆಳಗೆ ಬಿದ್ದಿರುವ ಮಹಾ ಬಲಿಷ್ಠರಾದ ಸಾವಿರಾರು ಯೋಧರಿಂದ ಭೂಮಿಯು ಪ್ರಕಾಶಮಾನವಾಗಿ ಕಾಣುತ್ತಿದೆ. ಮಹಾಯುದ್ಧಸಮಯದಲ್ಲಿ ಕರ್ಣಾರ್ಜುನರು ಬಿಟ್ಟ ಬಾಣ



ಗಳಿಂದ ಅನೇಕ ಕುರು-ಸೃಂಜಯಯೋಧರು ಗಾಯಗೊಂಡಿದ್ದಾರೆ. ಕೆಲವರು ಅಸುನೀಗಿದ್ದಾರೆ. ಕೆಲವರು ಸಂಜ್ಞಾಹೀನರಾಗಿದ್ದಾರೆ. ಕೆಲವರು ಪುನಃ ಉಸಿರೆಳೆಯುತ್ತಿದ್ದಾರೆ. ಇಂತಹ ಶ್ರೇಷ್ಠವೀರರಿಂದ ತುಂಬಿರುವ ಈ ರಣಾಂಗಣವು ಆರಿಹೋದ ಯಜ್ಞಾಗ್ನಿಗಳಿಂದ ತುಂಬಿರುವ ಯಜ್ಞಭೂಮಿ ಯಂತೆಯೇ ಕಾಣಿಸುತ್ತಿದೆ. ದುರ್ಯೋಧನ! ಕರ್ಣಾರ್ಜುನರ ಬಾಹು

ಗಳಿಂದ ಬಿಡಲ್ಪಡುತ್ತಿದ್ದ ಬಾಣಗಳು ಗಜಾಶ್ವ-ಪದಾತಿಗಳ ದೇಹಗಳನ್ನು ಭೇದಿಸಿಕೊಂಡು ಪ್ರಾಣಗಳನ್ನು ಹೀರಿ, ಅರೆಕೆಂಪಾಗಿ–ಮಹಾಸರ್ಪಗಳು ಬಹಳ ಬೇಗ ಬಿಲವನ್ನು ಹೊಗುವಂತೆ–ಶೀಘ್ರವಾಗಿ ಭೂಮಿಯೊಳಗೆ ಸೇರಿಕೊಳ್ಳುತ್ತಿವೆ. ಕರ್ಣಾರ್ಜುನರ ಬಾಣಗಳಿಂದ ಹತರಾದ ಪದಾತಿ-ಗಜಾಶ್ವ-ಸೈನಿಕರಿಂದಲೂ–ಮಾರ್ಗಣಗಳಿಂದ ವಿಧ್ವಸ್ತವಾದ ರಥಗಳಿಂದಲೂ ತುಂಬಿಹೋಗಿರುವ ಈ ರಣರಂಗವು ಸಂಚಾರಕ್ಕೆ ಅಸಾಧ್ಯವಾಗಿದೆ. ಸಕಲ ಸಂಭಾರಗಳಿಂದಲೂ ಸುಸಜ್ಜಿತವಾಗಿದ್ದ ಶ್ರೇಷ್ಠವಾದ ರಥಗಳು ಬಾಣಗಳಿಂದ ವಿಧ್ವಸ್ತವಾಗಿ ರಣರಂಗದ ಸುತ್ತಲೂ ಬಿದ್ದಿವೆ. ರಥಗಳಲ್ಲಿದ್ದ ಯೋಧರೂ ಬಾಣಗಳಿಂದ ಹತರಾಗಿದ್ದಾರೆ. ಶಸ್ತ್ರಾಯುಧ-ಧ್ವಜಗಳೂ ಹಾಳಾಗಿ ಹೋಗಿವೆ. ಚಕ್ರಗಳು, ನೊಗಗಳು, ನೊಗವನ್ನು ಬಿಗಿಯುವ ಹಗ್ಗಗಳು, ಮರ, ತ್ರಿವೇಣು–ಎಲ್ಲವೂ ಬಾಣಗಳಿಂದ ಕತ್ತರಿಸಲ್ಪಟ್ಟು ಹಾಳಾಗಿ ಹೋಗಿವೆ. ರಥಗಳಲ್ಲಿದ್ದ ಶಸ್ತ್ರಗಳೂ ಮತ್ತು ಯುದ್ಧಸಾಮಗ್ರಿಗಳೂ ಚೆಲ್ಲಾಪಿಲ್ಲಿಯಾಗಿ ಸುತ್ತಲೂ ಬಿದ್ದುಹೋಗಿವೆ. ತೋಳುಮರಗಳೂ, ಬತ್ತಳಿಕೆಗಳೂ ಮತ್ತು ಕಟ್ಟುವ ಹಗ್ಗಗಳೂ ಹಾಳಾಗಿವೆ. ಯೋಧರು ಕುಳಿತುಕೊಳ್ಳುವ ಆಸನಗಳೂ ಭಗ್ನವಾಗಿವೆ. ಚಿನ್ನದಿಂದಲೂ ಮತ್ತು ಮಣಿಗಳಿಂದಲೂ ಅಲಂಕೃತವಾಗಿದ್ದ ಇಂತಹ ರಥಗಳಿಂದ ವ್ಯಾಪ್ತವಾದ ರಣಭೂಮಿಯು ಶರತ್ಕಾಲದ ಮೇಘಗಳಿಂದ ಆಚ್ಛಾದಿತವಾದ ಆಕಾಶದಂತೆಯೇ ಕಾಣುತ್ತಿದೆ. ಕರ್ಣಾರ್ಜುನರ ಬಾಣಗಳ ಪ್ರಹಾರಗಳನ್ನು ತಪ್ಪಿಸಿಕೊಳ್ಳಬೇಕೆಂದು ಓಡಿಹೋಗುತ್ತಿದ್ದವರಲ್ಲಿ ಅನೇಕರು ರಾಜರಿಂದ ವಿಹೀನವಾಗಿದ್ದ, ಸಕಲಸಾಮಗ್ರಿಗಳಿಂದಲೂ ಸಂಪನ್ನವಾಗಿದ್ದ, ವೇಗಗತಿಯುಳ್ಳ ಕುದುರೆಗಳಿಂದ ಎಳೆಯಲ್ಪಡುತ್ತಿದ್ದ ರಾಜರ ರಥಗಳಿಂದಲೂ ಪದಾತಿ-ಗಜಾಶ್ವಗಳಿಂದಲೂ ಚೂರ್ಣೀಕೃತರಾಗಿದ್ದಾರೆ. ಸುವರ್ಣಮಯ ವಾದ ಪಟ್ಟಿಯಿಂದ ಕೂಡಿದ ಪರಿಘಾಯುಧಗಳೂ, ಗಂಡುಗೊಡಲಿಗಳೂ, ನಿಶಿತವಾದ ಶೂಲಗಳೂ, ಮುಸಲಾಯುಧಗಳೂ, ಮುದ್ಗರಗಳೂ, ಒರೆ ಯಿಂದ ಹೊರತೆಗೆದ ಶುಭ್ರವಾದ ಕತ್ತಿಗಳೂ, ಸುವರ್ಣಮಯವಾದ ಪಟ್ಟಿ ಗಳಿಂದ ಕೂಡಿರುವ ಗದೆಗಳೂ ರಣಾಂಗಣದ ಸುತ್ತಲೂ ಬಿದ್ದಿವೆ. ಸುವರ್ಣ ಮಯವಾದ ಆಭರಣಗಳಿಂದ ವಿಭೂಷಿತವಾದ ಧನುಸ್ಸುಗಳೂ, ಚಿನ್ನದಿಂದ

ಚಿತ್ರಿತವಾದ ಮೂಲಭಾಗಗಳುಳ್ಳ ಬಾಣಗಳೂ, ಶುಭ್ರವಾದ ಮತ್ತು ಕೋಶದಿಂದ ಹೊರತೆಗೆದಿರುವ ಹೊಂಬಣ್ಣದ ಖುಷ್ಟಿಗಳೂ, ಸುವರ್ಣಮಯವಾದ ದಂಡದಿಂದ ದೇದೀಪ್ಯಮಾನವಾಗಿ ಕಾಣುವ ಪ್ರಾಸಾಯುಧಗಳೂ, ಛತ್ರಗಳೂ, ವಾಲ–ವ್ಯಜನಗಳೂ, ಶಂಖಗಳೂ ತುಂಡು-ತುಂಡಾಗಿ ಕತ್ತರಿಸಲ್ಪಟ್ಟು ಬಿದ್ದಿರುವ ವಿಚಿತ್ರವಾದ ಮಾಲೆಗಳೂ ರಣಾಂಗಣದ ಸುತ್ತಲೂ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಆನೆಗಳ ಮೇಲೆ ಹೊದ್ದಿಸಿರುವ ರತ್ನಗಂಬಳಿಗಳೂ, ಪತಾಕ-ವಸ್ತ್ರಾಭರಣಗಳೂ, ಕಿರೀಟಮಾಲೆಗಳೂ, ಶುಭ್ರವಾದ ಕಿರೀಟಗಳೂ, ಶ್ವೇತಚಾಮರಗಳೂ, ಹವಳದ ಮತ್ತು ಮುತ್ತಿನಹಾರಗಳೂ ರಣಾಂಗಣದ ಸುತ್ತಲೂ ಬಿದ್ದಿವೆ. ಶಿರಸ್ತ್ರಾಣ, ಕೇಯೂರ, ಸುಂದರವಾದ ಅಂಗದ, ಕಂಠಹಾರ, ಪದಕ, ಚಿನ್ನದ ಸರಪಣಿ, ಶ್ರೇಷ್ಠವಾದ ಮಣಿ-ವಜ್ರ-ಸುವರ್ಣ-ಮುತ್ತು-ರತ್ನಗಳು, ಬಗೆ-ಬಗೆಯ ಮಂಗಳಕಾರಕಗಳಾದ ರತ್ನಗಳು, ಅತ್ಯಂತಸುಖಭೋಗಕ್ಕೆ ಯೋಗ್ಯವಾದ ಶರೀರಗಳು, ಚಂದ್ರಸದೃಶವಾದ ಮುಖಗಳುಳ್ಳ ಶಿರಗಳು–ಇವುಗಳೆಲ್ಲವೂ ರಣರಂಗದಲ್ಲಿ ಹರಡಿಹೋಗಿವೆ. ನಮ್ಮ ಸೈನಿಕರು, ತಮ್ಮ ದೇಹ, ಭೋಗ, ಸುಮನೋಹರವಾದ ವಸ್ತ್ರಗಳು, ಮನಸ್ಸಿಗೆ ಬೇಕಾದ ಸುಖಗಳು–ಈ ಎಲ್ಲವನ್ನೂ ಪರಿತ್ಯಜಿಸಿ, ಎಲ್ಲಕ್ಕಿಂತಲೂ ಮಿಗಿಲಾದ ಸ್ವಧರ್ಮದಲ್ಲಿಯೇ ನಿಷ್ಠೆಯನ್ನಿಟ್ಟು ಬೇಗನೆ ತಮ್ಮ ಯಶಸ್ಸನ್ನು ಎಲ್ಲ ಲೋಕಗಳಲ್ಲಿಯೂ ಪ್ರಸರಿಸಿ ದಿವ್ಯಲೋಕಗಳಿಗೆ ಹೊರಟು ಹೋದರು.

ದುರ್ಯೋಧನ! ಮಾನದನೇ! ಪ್ರಭುವೇ! ಸೂರ್ಯನೂ ಪಶ್ಚಿಮದಿಕ್ಕಿನೆಡೆಗೆ ವಾಲುತ್ತಿದ್ದಾನೆ. ಇದುವರೆಗೆ ನಡೆದಿರುವ ಎಲ್ಲ ಸಂಹಾರ ಕ್ರಿಯೆಗೂ ನೀನೇ ಮುಖ್ಯಕಾರಣನು. (ಆದುದರಿಂದ ಯೋಚಿಸುತ್ತಾ ಕುಳಿತುಕೊಳ್ಳುವುದರಲ್ಲಿ ಯಾವ ಪ್ರಯೋಜನವೂ ಇಲ್ಲ.) ನೀನು ಶಿಬಿರಕ್ಕೆ ಹಿಂದಿರುಗು. ನಿನ್ನ ಸೈನಿಕರೂ ಹಿಂದಿರುಗಲಿ.”

‘ಹಾ ಕರ್ಣ! ಅಸುನೀಗಿದೆಯಾ? ಅಯ್ಯೋ!’–ಎಂದು ಹೇಳುತ್ತಾ ಅತ್ಯಂತಸಂಕಟಪಡುತ್ತಿದ್ದ, ಕ್ಷಣ-ಕ್ಷಣಕ್ಕೂ ಮೂರ್ಛಿತನಾಗುತ್ತಿದ್ದ ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ ದುರ್ಯೋಧನನನ್ನು ಕುರಿತು

ಶೋಕದಿಂದ ವ್ಯಾಕುಲಿತವಾದ ಮನಸ್ಸಿನಿಂದ ಕೂಡಿದ್ದ ಶಲ್ಯನು ಹೀಗೆ ಹೇಳಿ ವಿರಮಿಸಿದನು.

ಅಶ್ವತ್ಥಾಮನೇ ಮೊದಲಾದವರೂ, ನರೇಂದ್ರರೂ ದುರ್ಯೋಧನನ ಬಳಿಗೆ ಬಂದು ದುರ್ಯೋಧನನನ್ನು ಸಮಾಧಾನಗೊಳಿಸುತ್ತಿದ್ದು, ಅರ್ಜುನನ ಅತಿದೊಡ್ಡದಾದ ಮತ್ತು ಯಶಸ್ಸಿನಿಂದ ದೀಪ್ಯಮಾನವಾಗಿ ಕಾಣುತ್ತಿದ್ದ ಧ್ವಜವನ್ನು ನೋಡಿದೊಡನೆಯೇ ಪುನಃ ಹೊರಟುಹೋಗುತ್ತಿದ್ದರು.



ಗಜಾಶ್ವ-ಪದಾತಿಗಳ ಶರೀರಗಳಿಂದ ಪ್ರವಹಿಸುತ್ತಿದ್ದ ರಕ್ತದಿಂದ ಸಿಕ್ತವಾಗಿದ್ದ ಆ ರಣಭೂಮಿಯು–ರಕ್ತಮಾಲೆ, ರಕ್ತವಸ್ತ್ರ ಮತ್ತು ಸುವರ್ಣಮಯವಾದ ಆಭರಣಗಳ ಸಂಬಂಧದಿಂದ ಶೋಭಿಸುತ್ತಿರುವ ವೇಶ್ಯೆ

ಯಂತೆಯೇ ಕಾಣುತ್ತಿದ್ದಿತು. ಅತ್ಯಂತವಿರಾಜಮಾನವಾಗಿ ಕಾಣುತ್ತಿದ್ದ ಸಾಯಂಕಾಲದ ಆ ರೌದ್ರಮುಹೂರ್ತದಲ್ಲಿ ರಕ್ತದಿಂದಲೇ ತನ್ನ ನಿಜಸ್ವರೂಪವನ್ನು ಮರೆಮಾಡಿಕೊಂಡಿದ್ದ ಭೂಮಿಯನ್ನು ನೋಡಿ ಕುರುಗಳು ಅಲ್ಲಿ ಕ್ಷಣಮಾತ್ರವಾದರೂ ನಿಲ್ಲಲಿಲ್ಲ. ದೇವಲೋಕಕ್ಕೆ ಹೋಗಲು ದೀಕ್ಷೆಯನ್ನು ಸ್ವೀಕರಿಸಿದರು. (ಕಡೆಯವರೆಗೂ ಯುದ್ಧಮಾಡಿಯೇ ತೀರಬೇಕೆಂದು ನಿರ್ಧರಿಸಿದರು.) ಕರ್ಣನ ವಧೆಯಿಂದ ದುಃಖಿತರಾಗಿದ್ದ ಅವರು 'ಹಾ ಕರ್ಣ! ನಮ್ಮನ್ನು ಬಿಟ್ಟು ಹೊರಟುಹೋದೆಯಾ? ಅಯ್ಯೋ!'–ಎಂಬುದಾಗಿ ಹೇಳುತ್ತಾ ದಿವಾಕರನು ಕೆಂಪುಬಣ್ಣಕ್ಕೆ ತಿರುಗಿದುದನ್ನು ನೋಡಿ ಬಹಳ ಬೇಗ ತಮ್ಮ ಶಿಬಿರಗಳಿಗೆ ತೆರಳಿದರು.

ಗಾಂಡೀವಧನುಸ್ಸಿನಿಂದ ಪ್ರಮುಕ್ತವಾದ, ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ರಕ್ತದಿಂದ ತೋಯ್ದುಹೋದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ ಶರೀರಾದ್ಯಂತವಾಗಿ ಚುಚ್ಚಲ್ಪಟ್ಟಿದ್ದ ಕರ್ಣನು ಯದ್ಯಪಿ ಹತನಾಗಿದ್ದರೂ ಅಂಶುಮಾಲಿಯಾದ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದನು. "ಭಕ್ತರ ವಿಷಯದಲ್ಲಿ ಹೆಚ್ಚು ಅನುಕಂಪವಿರುವ ಭಗವಾನ್ ಸೂರ್ಯದೇವನು ರಕ್ತದಿಂದ ತೋಯ್ದುಹೋಗಿದ್ದ ಕರ್ಣನ ದೇಹವನ್ನು ಕಿರಣಗಳಿಂದ ಸ್ಪರ್ಶಮಾಡಿ, ತಾನೂ ರಕ್ತದಂತೆ ಕೆಂಪಾದ ರೂಪವನ್ನು ಧರಿಸಿ, ಆ ಕೆಂಪನ್ನು ತೊಳೆದುಕೊಳ್ಳಲು ಸ್ನಾನಮಾಡುವ ಇಚ್ಛೆಯಿಂದ ಪಶ್ಚಿಮಸಮುದ್ರದ ಕಡೆಗೆ ಹೊರಟುಹೋಗುತ್ತಿದ್ದಾನೆ."

ಕರ್ಣಾರ್ಜುನರಿಗೆ ನಡೆದ ಯುದ್ಧದ ವಿಷಯದಲ್ಲಿ ಇವೇ ಮುಂತಾಗಿ ಯೋಚಿಸುತ್ತಿದ್ದ ದೇವರ್ಷಿಗಳ ಸಮೂಹಗಳು ತಮ್ಮ-ತಮ್ಮ ನಿವಾಸಗಳಿಗೆ ಹೋದಂತೆಯೇ–ಇತರ ಜನರೂ ಅದೇ ರೀತಿಯಲ್ಲಿ ತಮ್ಮ-ತಮ್ಮ ಸ್ವಭಾವಾನು ಗುಣವಾಗಿ ಚಿಂತಿಸುತ್ತಾ, ಭೂಮ್ಯಂತರಿಕ್ಷಗಳಲ್ಲಿದ್ದ ತಮ್ಮ-ತಮ್ಮ ನಿವಾಸಗಳಿಗೆ ಸುಖವಾಗಿ ಪ್ರಯಾಣಮಾಡಿದರು.

ರಣಾಂಗಣದಲ್ಲಿದ್ದವರೆಲ್ಲರೂ ಪ್ರಾಣಿಮಾತ್ರಕ್ಕೇ ಭಯವನ್ನುಂಟು ಮಾಡುವುದಾಗಿದ್ದ ಕುರು–ಪಾಂಡವಮುಖ್ಯರಾದ ಕರ್ಣ–ಧನಂಜಯರ ಪರ

ಮಾದ್ಭುತವಾದ ಯುದ್ಧವನ್ನು ನೋಡಿ ವಿಸ್ಮಯಗೊಂಡವರಾಗಿ ಇಬ್ಬರನ್ನೂ ಪ್ರಶಂಸೆಮಾಡುತ್ತಾ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು.

ಬಾಣಗಳಿಂದ ಕತ್ತರಿಸಲ್ಪಟ್ಟ ಕವಚವುಳ್ಳವನಾಗಿದ್ದರೂ, ರಕ್ತದಿಂದ ತೋಯ್ದುಹೋಗಿದ್ದ ಬಟ್ಟೆಯುಳ್ಳವನಾಗಿದ್ದರೂ, ಪ್ರಾಣಗಳನ್ನೇ ತೊರೆದಿದ್ದರೂ–ಕರ್ಣನನ್ನು ಕಾಂತಿಯು ಮಾತ್ರ ಬಿಟ್ಟುಹೋಗಿರಲಿಲ್ಲ. ಸುವರ್ಣದ ಕಾಂತಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ, ಪ್ರಜ್ವಲಿಸುವ ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಕರ್ಣನನ್ನು ಎಲ್ಲ ಪ್ರಾಣಿಗಳೂ ಜೀವಂತನಾಗಿದ್ದಾನೆಂದೇ ಭಾವಿಸಿದುವು. ಸಿಂಹಕ್ಕೆ ಇತರ ಮೃಗಗಳು ಹೆದರಿಕೊಂಡು ಹೋಗುವಂತೆ–ಯುದ್ಧದಲ್ಲಿ ಸೂತಪುತ್ರನು ಹತನಾಗಿ ಬಿದ್ದಿದ್ದರೂ ಶತ್ರುಪಕ್ಷದ ಯೋಧರು ಅವನ ಹತ್ತಿರದಲ್ಲಿ ಸುಳಿದಾಡಲೂ ಭಯಪಡುತ್ತಿದ್ದರು. ಕರ್ಣನು ಯದ್ಯಪಿ ಹತನಾಗಿದ್ದರೂ ಜೀವಂತನಾಗಿರುವಂತೆಯೇ ಕಾಣುತ್ತಿದ್ದನು. ಮಹಾತ್ಮನಾದ ಅವನ ಶರೀರದಲ್ಲಿ ಮರಣಾನಂತರದಲ್ಲಿ ಯಾವುದೊಂದು ವಿಕಾರವೂ ಆಗಿರಲಿಲ್ಲ. ಒಳ್ಳೆಯ ವೇಷಭೂಷಣಗಳುಳ್ಳ, ವೀರಕಾಂತಿಯಿಂದ ಶೋಭಿಸುವ, ಮನೋಹರವಾದ ಕಂಠ ಮತ್ತು ಕಲೆಗಳಿಂದ ಕೂಡಿದ ಸೂತಪುತ್ರನಾದ ಕರ್ಣನ ಮುಖವು ಪೂರ್ಣಚಂದ್ರನ ಕಾಂತಿಗೆ ಸಮಾನವಾದ ಕಾಂತಿಯಿಂದ ಪರಿಶೋಭಿಸುತ್ತಿದ್ದಿತು. ನಾನಾವಿಧವಾದ ಆಭರಣಗಳನ್ನು ತೊಟ್ಟಿದ್ದ, ಸುವರ್ಣಮಯವಾದ ಅಂಗದಗಳನ್ನು ಧರಿಸಿದ್ದ, ಹತನಾಗಿದ್ದ ವೈಕರ್ತನಕರ್ಣನು ಚಿಗುರುಗಳಿಂದ ಕೂಡಿದ ವೃಕ್ಷದಂತೆ ನೆಲದ ಮೇಲೆ ಮಲಗಿದ್ದನು. ಉತ್ತಮವಾದ ಸುವರ್ಣದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಪ್ರಜ್ವಲಿಸುವ ಅಗ್ನಿಯಂತಿದ್ದ ಕರ್ಣನು ಪಾರ್ಥನ ಬಾಣರೂಪವಾದ ಜಲದಿಂದ ಉಪಶಮನಹೊಂದಿದ್ದನು.

**ಯಥಾ ಹಿ ಜ್ವಲನೋ ದೀಪ್ತೋ ಜಲಮಾಸಾದ್ಯ ಶಾಮ್ಯತಿ ।**
**ಕರ್ಣಾಗ್ನಿಃ ಸಮರೇ ತದ್ವತ್ಪಾರ್ಥಮೇಘೇನ ಶಾಮಿತಃ ॥೪೦॥**

ಪ್ರದೀಪ್ತವಾದ ಅಗ್ನಿಯು ನೀರಿನ ಸಂಪರ್ಕವನ್ನು ಹೊಂದಿದೊಡನೆಯೇ ಉಪಶಮನವಾಗುವಂತೆ–ಯುದ್ಧದಲ್ಲಿ ಕರ್ಣನೆಂಬ ಅಗ್ನಿಯು

ಅರ್ಜುನನೆಂಬ ಮೇಘದಿಂದ ಉಪಶಮನಗೊಂಡಿತು. ಈ ಭೂಮಿಯಲ್ಲಿ ಧರ್ಮಯುದ್ಧದ ಮೂಲಕವಾಗಿ ಪ್ರದೀಪ್ತವಾದ ಯಶಸ್ಸನ್ನು ಗಳಿಸಿ ಎಲ್ಲ ದಿಕ್ಕುಗಳಲ್ಲಿಯೂ ಬಾಣಗಳ ಮಳೆಯನ್ನು ಸುರಿಸುತ್ತಾ ಶತ್ರುಗಳನ್ನು ಪರಿತಾಪಗೊಳಿಸಿ ಪುತ್ರಸಹಿತನಾದ ಕರ್ಣನು ಯುದ್ಧದಲ್ಲಿ ಅರ್ಜುನನ ತೇಜಸ್ಸಿನಿಂದ ಶಾಂತನಾದನು. ಯಾಚಕರೆಂಬ ಪಕ್ಷಿಗಳ ಸಮೂಹಕ್ಕೆ ಕಲ್ಪವೃಕ್ಷಪ್ರಾಯನಾಗಿದ್ದ ಕರ್ಣನು ದಿವ್ಯಾಸ್ತ್ರಗಳ ಮಹಾತೇಜಸ್ಸಿನಿಂದ ಪಾಂಡವರನ್ನೂ ಮತ್ತು ಎಲ್ಲ ಪಾಂಚಾಲರನ್ನೂ ಸಂತಾಪಗೊಳಿಸಿ, ಬಾಣಗಳ ರೂಪವಾದ ಮಳೆಗರೆಯುತ್ತಾ, ಶತ್ರುಸೈನ್ಯವನ್ನೂ ಪರಿತಾಪಗೊಳಿಸುತ್ತಾ, ಸಹಸ್ರಕಿರಣನಾದ ಸೂರ್ಯದೇವನಂತೆ ತನ್ನ ಪ್ರತಾಪವನ್ನು ವಿಶ್ವದಲ್ಲಿ ಹರಡಿ, ಪುತ್ರ–ವಾಹನಸಹಿತನಾಗಿ ಭೂಮಿಯಲ್ಲಿ ಬಿದ್ದುಹೋದನು.

**ದದಾನೀತ್ಯೇವ ಯೋಽವೋಚನ್ನ ನಾಸ್ತೀತ್ಯರ್ಥಿತೋಽರ್ಥಿಭಿಃ ।**
**ಸದ್ಭಿಃ ಸದಾ ಸತ್ಪುರುಷಃ ಸ ಹತೋ ದ್ವೈರಥೇ ವೃಷಃ ॥೪೫॥**

ಸತ್ಪುರುಷರಾದ ಯಾಚಕರಿಂದ ಯಾಚಿಸಲ್ಪಡುತ್ತಿದ್ದ ಸತ್ಪುರುಷನಾದ ಕರ್ಣನು 'ಇದೋ ಕೊಡುವೆನು' ಎಂದು ಹೇಳುತ್ತಿದ್ದನೇ ಹೊರತು 'ಇಲ್ಲ' ಎಂದು ಯಾವುದೇ ಕಾರಣದಿಂದಲೂ ಹೇಳುತ್ತಲೇ ಇರಲಿಲ್ಲ. ಅಂತಹ ಧರ್ಮಾತ್ಮನಾದ ಕರ್ಣನು ದ್ವೈರಥಯುದ್ಧದಲ್ಲಿ ಅರ್ಜುನನಿಂದ ಹತನಾದನು.

**ಯಸ್ಯ ಬ್ರಾಹ್ಮಣಸಾತ್ಸರ್ವಂ ವಿತ್ತಮಾಸೀನ್ಮಹಾತ್ಮನಃ ।**
**ನಾದೇಯಂ ಬ್ರಾಹ್ಮಣೇಷ್ವಾಸೀದ್ಯಸ್ಯ ಸ್ವಮಪಿ ಜೀವಿತಮ್ ॥೪೬॥**

**ಸದಾ ಸ್ತ್ರೀಣಾಂ ಪ್ರಿಯೋ ನಿತ್ಯಂ ದಾತಾ ಚೈವ ಮಹಾರಥಃ ।**
**ಸ ವೈ ಪಾರ್ಥಾಸ್ತ್ರನಿರ್ದಗ್ಧೋ ಗತಃ ಪರಮಿಕಾಂ ಗತಿಮ್ ॥೪೭॥**

ಮಹಾತ್ಮನಾದ ಕರ್ಣನ ಸಕಲೈಶ್ವರ್ಯವೂ ಬ್ರಾಹ್ಮಣರಿಗೇ ಮೀಸಲಾಗಿದ್ದಿತು. ಬ್ರಾಹ್ಮಣರಿಗೆ ಕೊಡಬಾರದೆಂಬ ಯಾವ ವಸ್ತುವೂ–ಕೊನೆಗೆ ತನ್ನ ಜೀವಿತವೂ–ಕರ್ಣನಲ್ಲಿ ಇರಲೇ ಇಲ್ಲ. ಅವನು ಸ್ತ್ರೀಯರಿಗೆ ಅತ್ಯಂತ ಪ್ರಿಯನಾಗಿದ್ದನು. ಮಹಾದಾನಿಯಾಗಿದ್ದನು. ಅಂತಹ ಮಹಾರಥನಾದ

ಕರ್ಣನು ಪಾರ್ಥನ ಅಸ್ತ್ರರೂಪವಾದ ಅಗ್ನಿಯಿಂದ ದಗ್ಧನಾಗಿ ಶ್ರೇಷ್ಠವಾದ ಗತಿಯನ್ನು ಪಡೆದನು.

**ಯಮಾಶ್ರಿತ್ಯಾಕರೋದ್ವೈರಂ ಪುತ್ರಸ್ತೇ ಸ ಗತೋ ದಿವಮ್ ।**
**ಆದಾಯ ತವ ಪುತ್ರಾಣಾಂ ಜಯಾಶಾಂ ಶರ್ಮ ವರ್ಮ ಚ ॥೪೮॥**

ಯಾವನನ್ನು ಆಶ್ರಯಿಸಿ ನಿನ್ನ ಮಗನು ಪಾಂಡವರೊಡನೆ ವೈರವನ್ನು ಕಟ್ಟಿಕೊಂಡನೋ–ಆ ಕರ್ಣನು ನಿನ್ನ ಮಕ್ಕಳು ವಿಜಯಗಳಿಸುವ ಆಶೆಯನ್ನೂ, ಸುಖವನ್ನೂ, ರಕ್ಷಣೆಯನ್ನೂ ತನ್ನ ಜೊತೆಯಲ್ಲಿಯೇ ತೆಗೆದುಕೊಂಡು ಸ್ವರ್ಗಕ್ಕೆ ಹೊರಟುಹೋದನು.

ಕರ್ಣನು ಹತನಾಗಲಾಗಿ ನದಿಗಳು ಹರಿಯುವುದನ್ನು ನಿಲ್ಲಿಸಿಬಿಟ್ಟುವು. (ಸ್ತಬ್ಧವಾದುವು.) ಸೂರ್ಯನು ಅಸ್ತಂಗತನಾದನು. ಸೂರ್ಯಾಗ್ನಿಗಳಿಗೆ ಸಮಾನವಾದ ಕಾಂತಿಯನ್ನು ಹೊಂದಿರುವ ಮಂಗಳಗ್ರಹವೂ ಮತ್ತು ಚಂದ್ರನ ಮಗನಾದ ಬುಧಗ್ರಹವೂ ಅಡ್ಡಲಾಗಿ ಉದಯಿಸಿದುವು. ಆಕಾಶವು ಸೀಳಿಹೋದಂತಾಯಿತು. ಭೂಮಿಯೂ ಚೀತ್ಕಾರಮಾಡತೊಡಗಿತು. ಎಲ್ಲ ದಿಕ್ಕುಗಳೂ ಧೂಮಸಹಿತವಾಗಿ ಉರಿಯತೊಡಗಿದುವು. ಮಹಾಸಮುದ್ರ ಗಳು ಗರ್ಜನೆಮಾಡಿದುವು ಮತ್ತು ಅಲ್ಲೋಲ–ಕಲ್ಲೋಲಗೊಂಡುವು. ಅರಣ್ಯಸಹಿತವಾದ ಪರ್ವತಗಳು ನಡುಗಿದುವು. ಎಲ್ಲ ಪ್ರಾಣಿಗಳ ಸಮುದಾಯಗಳೂ ಬಹಳವಾಗಿ ವ್ಯಥೆಗೊಂಡುವು. ಬೃಹಸ್ಪತಿಯು ರೋಹಿಣೀನಕ್ಷತ್ರವನ್ನು ಎಲ್ಲ ಕಡೆಗಳಿಂದಲೂ ಆವರಿಸಿ ಚಂದ್ರ-ಸೂರ್ಯರಿಗೆ ಸಮಾನನಾಗಿ ಪ್ರಕಾಶಿಸಿದನು.

ಕರ್ಣನು ಹತನಾಗಲಾಗಿ ದಿಗಂತಗಳೂ ಜಾಜ್ವಲ್ಯಮಾನವಾಗಿ ಉರಿಯತೊಡಗಿದುವು. ಆಕಾಶವು ಕತ್ತಲೆಯಿಂದ ಆವೃತವಾಯಿತು. ಭೂಮಿಯು ಕಂಪಿಸಿತು. ಅಗ್ನಿಯ ಪ್ರಕಾಶಕ್ಕೆ ಸಮಾನವಾದ ಪ್ರಕಾಶ ದಿಂದ ಕೂಡಿದ್ದ ಉಲ್ಕೆಯು ಕೆಳಕ್ಕೆ ಬಿದ್ದಿತು. ನಿಶಾಚರರು ಪ್ರಹೃಷ್ಟ ರಾದರು. ಅರ್ಜುನನು ಕ್ಷುರದಿಂದ ಚಂದ್ರನ ಕಾಂತಿಗೆ ಸಮಾನವಾದ ಕಾಂತಿಯಿಂದ ಬೆಳಗುತ್ತಿದ್ದ ಮುಖಸಹಿತವಾದ ಕರ್ಣನ ಶಿರಸ್ಸನ್ನು

ಯಾವಾಗ ಕತ್ತರಿಸಿದನೋ–ಆಗ ದೇವತೆಗಳ ಸಮೂಹಗಳಿಂದ ಹೊರಬಂದ ಹಾಹಾಕಾರಶಬ್ದವು ಒಡನೆಯೇ ಅಂತರಿಕ್ಷದಲ್ಲಿ ಕೇಳಿಬಂದಿತು. ದೇವ-ಗಂಧರ್ವ-ಮನುಷ್ಯರಿಂದಲೂ ಗೌರವಿಸಲ್ಪಡುತ್ತಿದ್ದ ಶತ್ರುವಾದ ಕರ್ಣನನ್ನು ಅರ್ಜುನನು ಸಂಹರಿಸಿ–ವೃತ್ರನ ವಧೆಯಾದನಂತರ ಇಂದ್ರನು ಮಹಾ ತೇಜಸ್ಸಿನಿಂದ ಪ್ರಕಾಶಿಸಿದಂತೆ–ಮಹಾತೇಜಸ್ಸಿನಿಂದ ಪ್ರಕಾಶಿಸಿದನು. ಮಹೇಂದ್ರನ ವೀರ್ಯಕ್ಕೆ ಸಮಾನವಾದ ವೀರ್ಯ-ಶೌರ್ಯಾದಿಗಳಿಂದ ಕೂಡಿದ್ದ, ಸುವರ್ಣ-ಮುತ್ತು-ಮಣಿ-ವಜ್ರ ಮತ್ತು ಹವಳಗಳಿಂದ ಸಮಲಂಕೃತರಾಗಿದ್ದ, ಸೂರ್ಯಾಗ್ನಿಗಳ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿದ್ದ, ಭಯರಹಿತರಾಗಿದ್ದ–ಒಂದೇ ರಥದಲ್ಲಿ ಕುಳಿತಿರುವ ಇಂದ್ರೋಪೇಂದ್ರರಂತೆಯೇ ಕಾಣುತ್ತಿದ್ದ, ನರಶ್ರೇಷ್ಠರಾದ ಕೇಶವಾರ್ಜುನರು–ಮೇಘಗಳ ಸಮೂಹಗಳಂತೆ ಗರ್ಜನೆಮಾಡುತ್ತಿದ್ದ, ಶರತ್ಕಾಲದ ಮಧ್ಯಾಹ್ನದ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ರಾರಾಜಿಸುತ್ತಿದ್ದ, ಭಯಂಕರವಾಗಿ ಶಬ್ದಮಾಡುವ ಕಪಿಧ್ವಜದಿಂದ ಕೂಡಿದ್ದ, ಹಿಮ-ಚಂದ್ರ-ಶಂಖ ಮತ್ತು ಸ್ಫಟಿಕಶಿಲೆಗಳಂತೆ ಕಾಂತಿಯುಕ್ತವಾಗಿದ್ದ, ಮಹೇಂದ್ರನ ರಥಕ್ಕೆ ಅನುರೂಪವಾಗಿದ್ದ, ಅಪ್ರತಿಮವಾದ ವೇಗದಿಂದ ಕೂಡಿದ್ದ ರಥದಲ್ಲಿ ಕುಳಿತು ಆ ರಣಭೂಮಿಯಲ್ಲಿ ವಿಶೇಷವಾಗಿ ಶೋಭಿಸುತ್ತಿದ್ದರು. ಬಳಿಕ ಕಪಿಧ್ವಜನೂ ಮತ್ತು ಗರುಡಧ್ವಜನೂ ಧನುಸ್ಸು, ಮೌರ್ವೀ, ಚಪ್ಪಾಳೆ ಮತ್ತು ಬಾಣಗಳ ನಿನಾದಗಳಿಂದ ಬಲಾತ್ಕಾರವಾಗಿ ಶತ್ರುಗಳನ್ನು ನಿಷ್ಪ್ರಭರನ್ನಾಗಿ ಮಾಡಿ ಶ್ರೇಷ್ಠವಾದ ಬಾಣಗಳಿಂದ ಕುರುಗಳೆಲ್ಲರನ್ನೂ ಆಚ್ಛಾದಿಸಿ, ಸುವರ್ಣದ ಬಲೆಗಳಿಂದ ಆಚ್ಛಾದಿತವಾಗಿದ್ದ, ಮಹಾಧ್ವನಿಯನ್ನುಂಟುಮಾಡುವ, ಹಿಮದಂತೆ ಬಿಳುಪಾಗಿದ್ದ ತಮ್ಮ ಶಂಖಗಳನ್ನು ಕೈಗಳಲ್ಲೆತ್ತಿಕೊಂಡು ಶ್ರೇಷ್ಠವಾದ ಮುಖಗಳಿಂದ ಚುಂಬಿಸಿದರು ಮತ್ತು ಅಮಿತಪ್ರಭಾವಶಾಲಿಗಳಾದ ನರಶ್ರೇಷ್ಠರಾದ ಕೇಶವಾರ್ಜುನರು ಶತ್ರುಗಳ ಮನಸ್ಸನ್ನು ಭೇದಿಸುತ್ತಾ ಶಂಖಗಳನ್ನು ಏಕಕಾಲದಲ್ಲಿ ಊದಿದರು. ಶ್ರೀಕೃಷ್ಣನ ಪಾಂಚಜನ್ಯಶಂಖದ ಧ್ವನಿಯೂ ಮತ್ತು ಅರ್ಜುನನ ದೇವದತ್ತಶಂಖದ ಧ್ವನಿಯೂ ಎರಡು ಒಟ್ಟಾಗಿ ಸೇರಿಕೊಂಡು ಪೃಥಿವೀ, ಅಂತರಿಕ್ಷ ಮತ್ತು ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟು

ಮಾಡಿದುವು. ಮಾಧವಾರ್ಜುನರ ಆ ಮಹಾಶಂಖಗಳ ಧ್ವನಿಯಿಂದಾಗಿ ಎಲ್ಲ ಕೌರವರೂ ಬಹಳವಾಗಿ ಭಯಗೊಂಡರು. ಶಂಖಗಳ ಧ್ವನಿಗಳಿಂದ ವನ-ಶೈಲ-ಸರಿದ್ಗುಹೆಗಳನ್ನೂ ಪ್ರತಿಧ್ವನಿಸುತ್ತಾ, ನಿನ್ನ ಮಗನ ಸೈನ್ಯವನ್ನೂ ಭಯಗೊಳಿಸುತ್ತಾ ಶ್ರೇಷ್ಠತಮನಾದ ಯುಧಿಷ್ಠಿರನನ್ನು ಆನಂದಿತನನ್ನಾಗಿ ಮಾಡಿದರು.

ಮಹಾರಾಜ! ಪಾಂಚಜನ್ಯ-ದೇವದತ್ತಶಂಖಗಳ ಧ್ವನಿಯನ್ನು ಕೇಳುತ್ತಲೇ ಸಮಸ್ತಕೌರವಯೋಧರೂ ಮದ್ರಾಧಿಪತಿಯಾದ ಶಲ್ಯನನ್ನೂ ಭಾರತಾಧಿಪತಿಯಾದ ದುರ್ಯೋಧನನನ್ನೂ ಅಲ್ಲಿಯೇ ಬಿಟ್ಟು ಬಹಳ ಬೇಗ ಓಡಿಹೋದರು. ಆ ಸಮಯದಲ್ಲಿ ಸಕಲಪ್ರಾಣಿಗಳೂ ಒಟ್ಟಾಗಿ ಸೇರಿ, ಉದಯಿಸಿದ ಇಬ್ಬರು ಸೂರ್ಯರಂತೆ ರಣಭೂಮಿಯಲ್ಲಿ ಪ್ರಕಾಶಮಾನರಾಗಿ ಕಾಣುತ್ತಿದ್ದ ಧನಂಜಯ-ಕೃಷ್ಣರನ್ನು ಸಂಧಿಸಿ ಅವರು ಮಾಡಿದ ಕಾರ್ಯವನ್ನು ಅನುಮೋದಿಸಿದುವು. ಸಮರಭೂಮಿಯಲ್ಲಿ ಕರ್ಣನು ಬಿಟ್ಟ ಬಾಣಗಳಿಂದ ವ್ಯಾಪ್ತರಾಗಿದ್ದ, ಶತ್ರುಸಂತಾಪಿಗಳಾದ ಕೃಷ್ಣಾರ್ಜುನರು ಅಂಧಕಾರವನ್ನು ನಾಶಗೊಳಿಸಿ ಆಕಾಶದಲ್ಲಿ ಉದಯಿಸಿದ, ನಿರ್ಮಲರಾದ, ಅಂಶು ಮಾಲಿಗಳಾದ ಸೂರ್ಯ-ಚಂದ್ರರಂತೆಯೇ ಪ್ರಕಾಶಿಸುತ್ತಿದ್ದರು. ಅನುಪಮ ಪರಾಕ್ರಮಿಗಳಾದ ಸರ್ವಸಮರ್ಥರಾದ ಕೃಷ್ಣಾರ್ಜುನರು ತಮ್ಮ ಶರೀರದಲ್ಲಿದ್ದ ಬಾಣಗಳೆಲ್ಲವನ್ನೂ ಹೊರತೆಗೆದು–ಸುಹೃದರಿಂದ ಆವೃತರಾಗಿ ಯಜ್ಞಕ್ಕೆ ಆಹ್ವಾನಿತರಾದ ವಿಷ್ಣು-ವಾಸವರಂತೆ ಸುಖವಾಗಿ ಬಿಡಾರಗಳನ್ನು ಪ್ರವೇಶಿಸಿದರು. ಆ ಮಹಾಸಮರದಲ್ಲಿ ಕರ್ಣನು ಹತನಾಗಲಾಗಿ ದೇವ-ಗಂಧರ್ವ-ಮನುಷ್ಯ-ಚಾರಣ-ಮಹರ್ಷಿ-ಯಕ್ಷ-ಮಹೋರಗರು ವಿಜಯ ಗಳಿಸಿದ ಕೃಷ್ಣಾರ್ಜುನರನ್ನು ಸುತ್ತುವರಿದು 'ಶ್ರೀಕೃಷ್ಣನಿಗೆ ಜಯವಾಗಲಿ! ಅರ್ಜುನನಿಗೆ ಜಯವಾಗಲಿ!'–ಇವೇ ಮುಂತಾದ ಜಯಘೋಷಗಳಿಂದ ಇಬ್ಬರನ್ನೂ ಗೌರವಿಸಿ ಸತ್ಕರಿಸಿದರು. ಸುರೇಶ-ಕೇಶವರು ಬಲಾಸುರನನ್ನು ಸಂಹರಿಸಿದನಂತರ ತಮ್ಮ ಸುಹೃದರೊಡನೆ ಕೂಡಿಕೊಂಡು ಆನಂದಿಸಿದಂತೆ–ಕರ್ಣನನ್ನು ವಧಿಸಿ ಯಥಾನುರೂಪವಾಗಿ ಸಂಪೂಜಿತರಾದ, ಉಪಾರ್ಜಿಸಿದ ಅನೇಕ ಒಳ್ಳೆಯ ಗುಣಗಳಿಂದ ಎಲ್ಲರಿಂದಲೂ ಶ್ಲಾಘಿಸಲ್ಪಡುತ್ತಿದ್ದ

ಕೃಷ್ಣಾರ್ಜುನರು ಸುಹೃದರೊಡನೆ ಸೇರಿಕೊಂಡು ಅಧಿಕವಾದ ಆನಂದವನ್ನು ಅನುಭವಿಸಿದರು.

೯೪ನೆಯ ಅಧ್ಯಾಯವು ಮುಗಿಯಿತು.

೯೫ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವರ ಸೈನ್ಯವು ಶಿಬಿರದ ಕಡೆಗೆ ಪಲಾಯನಮಾಡಿ ಶಿಬಿರವನ್ನು ಪ್ರವೇಶಿಸಿದುದು

ಸಂಜಯನು ಕೌರವಸೈನಿಕರ ದುಃಸ್ಥಿತಿಯನ್ನು ಮುಂದುವರೆಸಿ ಹೇಳುತ್ತಾನೆ:

"ಮಹಾರಾಜ! ವೈಕರ್ತನಕರ್ಣನು ಹತನಾಗಲಾಗಿ, ಭಯ ಪೀಡಿತರಾದ ಸಾವಿರಾರು ಕುರುಯೋಧರು ಎಲ್ಲ ದಿಕ್ಕುಗಳನ್ನೂ ಶೂನ್ಯ ದೃಷ್ಟಿಯಿಂದ ನೋಡುತ್ತಾ ಪಲಾಯನಮಾಡಿದರು. ಶತ್ರುಗಳು ಆ ಮಹಾ ಸಮರದಲ್ಲಿ ಸೇನಾಪತಿಯಾದ ಕರ್ಣನನ್ನು ಸಂಹರಿಸಿದುದನ್ನು ಕಂಡು ಅರ್ಜುನನ ಬಾಣಗಳಿಂದ ಕ್ಷತ-ವಿಕ್ಷತರಾಗಿದ್ದ ನಿನ್ನ ಕಡೆಯ ಯೋಧರು ಭಯಗೊಂಡು ದಿಕ್ಕಾಪಾಲಾಗಿ ಓಡಿಹೋದರು. ಪರಮದುಃಖಿತರೂ, ಉದ್ವಿಗ್ನರೂ ಆಗಿದ್ದ ನಿನ್ನ ಕಡೆಯ ಯೋಧರು ಎಲ್ಲ ಕಡೆಗಳಿಂದಲೂ ಶತ್ರುಗಳಿಂದ ತಡೆಯಲ್ಪಟ್ಟವರಾಗಿ ಯುದ್ಧದಿಂದ ಹಿಮ್ಮೆಟ್ಟಲು ನಿಶ್ಚಯಿಸಿದರು. ತನ್ನ ಕಡೆಯ ಯೋಧರ ಆ ಅಭಿಪ್ರಾಯವನ್ನು ತಿಳಿದು ನಿನ್ನ ಮಗನು ಶಲ್ಯನ ಅನುಮತಿಯನ್ನು ಪಡೆದು ಸೈನಿಕರಿಗೆ ಯುದ್ಧದಿಂದ ಹಿಂದಿರುಗುವಂತೆ ಆಜ್ಞೆಮಾಡಿದನು. ಕೃತವರ್ಮನು ನಿನ್ನ ಕಡೆಯ ರಥಿಗಳಿಂದಲೂ ಮತ್ತು ಅಳಿದುಳಿದಿದ್ದ ನಾರಾಯಣಸೈನಿಕರಿಂದಲೂ ಪರಿವೃತನಾಗಿ ಶಿಬಿರದ ಕಡೆಗೆ ವೇಗದಿಂದ ಧಾವಿಸಿದನು.

ಶಕುನಿಯು ಅಧಿರಥನ ಮಗನಾದ ಕರ್ಣನು ಹತನಾದುದನ್ನು ಕಂಡು ಸಾವಿರಾರು ಗಾಂಧಾರಯೋಧರಿಂದ ಪರಿವೃತನಾಗಿ ಶಿಬಿರದ ಕಡೆಗೆ ಓಡಿ ಹೋದನು. ಕೃಪರು ಮಹಾಮೇಘಸದೃಶವಾದ ತಮ್ಮ ಗಜಸೈನ್ಯದೊಡನೆ ಶಿಬಿರದ ಕಡೆಗೆ ತೆರಳಿದರು. ಅಶ್ವತ್ಥಾಮನು ಪಾಂಡವರಿಗೆ ಲಭಿಸಿದ ಜಯ ವನ್ನು ನೋಡಿ ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಾ ಶಿಬಿರದ ಹಾದಿಯನ್ನು

ಹಿಡಿದನು. ಸುಶರ್ಮನು ಅಳಿದುಳಿದಿದ್ದ ಸಂಶಪ್ತಕಸೈನಿಕರಿಂದ ಪರಿವೃತನಾಗಿ ಭಯಪೀಡಿತನಾಗಿ ಸುತ್ತಲೂ ನೋಡುತ್ತಾ ಶಿಬಿರಕ್ಕೆ ತೆರಳಿದನು. ಸರ್ವಸ್ವವನ್ನೂ ಮತ್ತು ಎಲ್ಲ ಬಂಧು-ಮಿತ್ರರನ್ನೂ ಕಳೆದುಕೊಂಡ ರಾಜಾ ದುರ್ಯೋಧನನೂ ಶೋಕಮಗ್ನನಾಗಿ ಅನೇಕ ವಿಷಯಗಳನ್ನು ಮನಸ್ಸಿನಲ್ಲಿಯೇ ಚಿಂತಿಸುತ್ತಾ ಯಾವ ಪರಿಹಾರವನ್ನೂ ಕಾಣದೇ ಉದಾಸೀನಮನೋಭಾವದಿಂದ ಶಿಬಿರಕ್ಕೆ ತೆರಳಿದನು. ರಥಿಗಳಲ್ಲಿ ಶ್ರೇಷ್ಠನಾದ ಶಲ್ಯನು ಧ್ವಜಹೀನವಾಗಿದ್ದ ಕರ್ಣನ ರಥದಲ್ಲಿಯೇ ಕುಳಿತು ಹತ್ತು ದಿಕ್ಕುಗಳನ್ನೂ ಶೂನ್ಯದೃಷ್ಟಿಯಿಂದ ನೋಡುತ್ತಾ ಶಿಬಿರದ ಕಡೆಗೆ ಧಾವಿಸಿದನು. ಇನ್ನೂ ಅನೇಕ ಭಾರತಮಹಾರಥರು ಭಯಪೀಡಿತರಾಗಿ, ಲಜ್ಜಿತರಾಗಿ, ಬುದ್ಧಿಗೆಟ್ಟವರಾಗಿ ಶಿಬಿರದ ಕಡೆಗೆ ಓಡಿಹೋದರು. ರಕ್ತವನ್ನು ಸುರಿಸುತ್ತಿದ್ದ, ಉದ್ವಿಗ್ನರಾಗಿದ್ದ, ಗಡ-ಗಡನೆ ನಡುಗುತ್ತಿದ್ದ, ಸಂಕಟಪಡುತ್ತಿದ್ದ ಕುರುಯೋಧರು ಕರ್ಣನು ಸಮರಾಂಗಣದಲ್ಲಿ ಸತ್ತುಬಿದ್ದುದನ್ನು ನೋಡಿದೊಡನೆಯೇ ಪಲಾಯನಮಾಡಿದರು. ಕುರುಸತ್ತಮನೇ! ಕೌರವಯೋಧರಲ್ಲಿ ಕೆಲವರು ಅರ್ಜುನನನ್ನು ಪ್ರಶಂಸೆಮಾಡುತ್ತಲೂ ಕೆಲವರು ಕರ್ಣನನ್ನು ಪ್ರಶಂಸೆಮಾಡುತ್ತಲೂ ಇದ್ದರು. ಕರ್ಣನು ಹತನಾಗಿ ಕೆಳಕ್ಕೆ ಬಿದ್ದೊಡನೆಯೇ ಭಯಗೊಂಡ ಅವರೆಲ್ಲರೂ ದಿಕ್ಕಾಪಾಲಾಗಿ ಓಡಿಹೋದರು. ಆ ನಿನ್ನ ಸಾವಿರಾರು ಯೋಧರಲ್ಲಿ ಒಬ್ಬ ಯೋಧನಿಗಾದರೂ ಮುಂದೆ ಯುದ್ಧಮಾಡಬೇಕೆನ್ನುವ ಉತ್ಸಾಹವೇ ಇರಲಿಲ್ಲ. ಮಹಾರಾಜ! ಕರ್ಣನು ಹತನಾಗಲಾಗಿ, ಕುರುಗಳು–ರಾಜ್ಯಗಳಲ್ಲಿಯೂ, ಪತ್ನಿಯರಲ್ಲಿಯೂ, ಐಶ್ವರ್ಯಗಳಲ್ಲಿಯೂ, ಕಡೆಗೆ ತಮ್ಮ ಜೀವಿತಗಳಲ್ಲಿಯೂ ನಿರಾಶೆಯನ್ನು ಹೊಂದಿದರು. ಕರ್ಣನ ಅವಸಾನದಿಂದ ದುಃಖ-ಶೋಕಗಳಿಗೀಡಾಗಿದ್ದ ನಿನ್ನ ಮಗನು ಸರ್ವಪ್ರಯತ್ನದಿಂದಲೂ ಅವರೆಲ್ಲರನ್ನೂ ಒಟ್ಟುಗೂಡಿಸಿ ಶಿಬಿರಕ್ಕೆ ಕರೆದೊಯ್ಯಲು ನಿಶ್ಚಯಿಸಿದನು. ಕೌರವ ಮಹಾರಥರು ದುರ್ಯೋಧನನ ಆಜ್ಞೆಯನ್ನು ಶಿರಸಾವಹಿಸಿ ಕುಂದಿದ ಮುಖವುಳ್ಳವರಾಗಿ ಶಿಬಿರಗಳನ್ನು ಪ್ರವೇಶಿಸಿದರು."

೯೫ನೇಯ ಅಧ್ಯಾಯವು ಮುಗಿಯಿತು.

೯೬ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನು ರಣಭೂಮಿಯಲ್ಲಿ ಹತನಾದುದನ್ನು ಕಂಡು ಯುಧಿಷ್ಠಿರನು ಪ್ರಸನ್ನನಾಗಿ ಕೃಷ್ಣಾರ್ಜುನರನ್ನು ಪ್ರಶಂಸೆ ಮಾಡಿದುದು: ಧೃತರಾಷ್ಟ್ರನು ಶೋಕಮಗ್ನನಾದುದು: ಕರ್ಣಪರ್ವದ ಶ್ರವಣಫಲ

ಸಂಜಯನು ಕರ್ಣನ ವಧೆಯಾದನಂತರ ಪಾಂಡವರ ಕಡೆಯ ಪ್ರತಿಕ್ರಿಯೆಯನ್ನು ಧೃತರಾಷ್ಟ್ರನಿಗೆ ತಿಳಿಸುತ್ತಾನೆ:

"ಮಹಾರಾಜ! ಈ ರೀತಿಯಲ್ಲಿ ಕರ್ಣನು ಹತನಾಗಲಾಗಿ, ಶತ್ರು (ಕೌರವ) ಸೈನ್ಯವು ಪಲಾಯನಮಾಡಲಾಗಿ, ಶ್ರೀಕೃಷ್ಣನು ಅರ್ಜುನನನ್ನು ಅಪ್ಪಿಕೊಂಡು ಈ ಮಾತನ್ನು ಹೇಳಿದನು:

"ಅರ್ಜುನ! ಇಂದ್ರನು ವೃತ್ರಾಸುರನನ್ನು ಸಂಹರಿಸಿದಂತೆಯೇ ನೀನು ಕರ್ಣನನ್ನು ಸಂಹರಿಸಿರುವೆ. ವೃತ್ರಾಸುರನ ವಧೆಗಾಗಿ ಇಂದ್ರನು ಮಾಡಿದ ಯುದ್ಧವನ್ನೂ, ಕರ್ಣನ ವಧೆಗಾಗಿ ನೀನು ಮಾಡಿದ ಯುದ್ಧವನ್ನೂ– ಮಹಾಭಯಂಕರವಾದ ಯುದ್ಧಗಳೆಂದು ಮಾನವರು ಎಂದೆಂದಿಗೂ ಹೇಳುತ್ತಲೇ ಇರುತ್ತಾರೆ. ಮಹಾತೇಜಸ್ಸಿನಿಂದ ಕೂಡಿದ್ದ ವಜ್ರಾಯುಧದಿಂದ ಇಂದ್ರನೊಡನೆ ಮಾಡಿದ ಯುದ್ಧದಲ್ಲಿ ವೃತ್ರನು ಹತನಾದನು. ನೀನು ಕರ್ಣನನ್ನು ಮಹಾಧನುಸ್ಸಿನ ಮೂಲಕವಾಗಿ ಪ್ರಯೋಗಿಸಿದ ನಿಶಿತವಾದ ಬಾಣಗಳಿಂದ ಸಂಹರಿಸಿರುವೆ. ಅರ್ಜುನ! ತ್ರಿಲೋಕವಿಖ್ಯಾತವಾದ ಮತ್ತು ಯಶಸ್ಕರವಾದ ನಿನ್ನ ಈ ಪರಾಕ್ರಮವನ್ನು ಧೀಮಂತನಾದ ಕುರುರಾಜನಾದ ಯುಧಿಷ್ಠಿರನಿಗೆ ನಿವೇದಿಸೋಣ. ಯುಧಿಷ್ಠಿರನಿಗೆ ಬಹಳ ಹಿಂದಿನಿಂದಲೂ ಕರ್ಣನ ವಧೆಯಾಗಬೇಕೆಂಬ ಅಭಿಲಾಷೆಯಿದ್ದಿತು. ಅವನ ಅಭಿಲಾಷೆಯಿಂದು ಪೂರ್ಣವಾಗಿದೆ. ಈ ವಿಷಯವನ್ನು ನೀನು ಧರ್ಮರಾಜನಿಗೆ ತಿಳಿಸಿ ಋಣಮುಕ್ತನಾಗುವೆ. ನಿನಗೂ ಮತ್ತು ಕರ್ಣನಿಗೂ ಮಹಾಯುದ್ಧವು ನಡೆಯುತ್ತಿದ್ದಾಗ ಅದನ್ನು ನೋಡುವ ಸಲುವಾಗಿ ಧರ್ಮ ರಾಜನು ಇಲ್ಲಿಗೆ ಹಿಂದೆ ಬಂದಿದ್ದನು. ಅವನು ಬಹಳವಾಗಿ ಗಾಯಗೊಂಡಿದ್ದ

ರಿಂದ ಹೆಚ್ಚು ಹೊತ್ತು ರಣರಂಗದಲ್ಲಿ ನಿಲ್ಲಲಾಗದೆ ಶಿಬಿರಕ್ಕೆ ಹೋಗಿ ಈಗ ಅಲ್ಲಿಯೇ ವಿಶ್ರಮಿಸಿಕೊಳ್ಳುತ್ತಿದ್ದಾನೆ.”

ಕೇಶವನು ಹೇಳಿದಂತೆ ಅರ್ಜುನನು ಯುಧಿಷ್ಠಿರನನ್ನು ಸಂದರ್ಶಿಸುವ ಸಲುವಾಗಿ ಶಿಬಿರಕ್ಕೆ ಹೋಗಲು ಸಮ್ಮತಿಸಿದನು. ಯದುಕುಲತಿಲಕನಾದ ಶ್ರೀಕೃಷ್ಣನು ಶಿಬಿರಕ್ಕೆ ಹೋಗುವುದರಲ್ಲಿಯೇ ವ್ಯಗ್ರನಾಗಿ ರಥಿಶ್ರೇಷ್ಠನಾದ ಅರ್ಜುನನ ರಥವನ್ನು ಶಿಬಿರದ ಕಡೆಗೆ ತಿರುಗಿಸಿದನು.

ಶಿಬಿರಕ್ಕೆ ಹೋಗುವ ಮೊದಲು (ಅರ್ಜುನನೊಡನೆ ಮಾತನಾಡಿದ ನಂತರ) ಶ್ರೀಕೃಷ್ಣನು ಸೈನಿಕರಿಗೆ ‘ವೀರರೇ! ನೀವು ಶತ್ರುಗಳಿಗೆ ಅಭಿಮುಖರಾಗಿ ನಿಂತು ಪ್ರಯತ್ನಶೀಲರಾಗಿ ಅವರನ್ನು ತಡೆಯಿರಿ. ನಿಮಗೆ ಮಂಗಳವಾಗಲಿ’–ಎಂದು ಹೇಳಿದನು. ಅನಂತರ ಯೋಧಪ್ರಮುಖರಾದ ಧೃಷ್ಟದ್ಯುಮ್ನ, ಸಾತ್ಯಕಿ, ನಕುಲ-ಸಹದೇವರು, ವೃಕೋದರ, ಯುಧಾಮನ್ಯು ಇವರನ್ನೂ ಉದ್ದೇಶಿಸಿ ಹೇಳಿದನು:

**ಯಾವದಾವೇದ್ಯತೇ ರಾಜ್ಞೇ ಹತಃ ಕರ್ಣೋಽರ್ಜುನೇನ ವೈ ।**
**ತಾವದ್ಭವದ್ಭಿರ್ಯತ್ತೈಸ್ತು ಭವಿತವ್ಯಂ ನರಾಧಿಪೈಃ ॥೧೧॥**

“ಕರ್ಣನು ಹತನಾದನೆಂಬ ವಾರ್ತೆಯನ್ನು ಅರ್ಜುನನು ಯುಧಿಷ್ಠಿರರಾಜನಿಗೆ ತಿಳಿಸುವವರೆಗೂ ನೀವು ನಮ್ಮ ಕಡೆಯ ಎಲ್ಲ ರಾಜರೊಡನೆ ಯುದ್ಧಕ್ಕೆ ಸಿದ್ಧರಾಗಿರಿ.”

ಮಹಾರಾಜ! ಧೃಷ್ಟದ್ಯುಮ್ನಾದಿ ಶೂರಯೋಧರ ಅನುಜ್ಞೆಯನ್ನು ಪಡೆದು ಗೋವಿಂದನು ಪಾರ್ಥನನ್ನು ಕರೆದುಕೊಂಡು ರಾಜನಿದ್ದ ಶಿಬಿರವನ್ನು ಪ್ರವೇಶಿಸಿ ಅರ್ಜುನನೊಡನೆ ಧರ್ಮಜನನ್ನು ಸಂದರ್ಶಿಸಿದನು. ಸುವರ್ಣ ಮಯವಾದ ಹಂಸತೂಲಿಕಾತಲ್ಪದಲ್ಲಿ ಮಲಗಿದ್ದ, ನೃಪಶ್ರೇಷ್ಠನಾದ ಯುಧಿಷ್ಠಿರನ ಎರಡು ಪಾದಾರವಿಂದಗಳನ್ನೂ ಆನಂದತುಂದಿಲರಾಗಿದ್ದ ಕೃಷ್ಣಾರ್ಜುನರು ಹಿಡಿದುಕೊಂಡರು. ಕೃಷ್ಣಾರ್ಜುನರು ಹರ್ಷೋಲ್ಲಸಿತರಾಗಿರುವುದನ್ನು ನೋಡಿ, ಕರ್ಣನು ನಿಶ್ಚಯವಾಗಿಯೂ ಹತನಾದನೆಂದು ಭಾವಿಸಿದ ಯುಧಿಷ್ಠಿರನು ಎದ್ದು ಕುಳಿತನು. ಅವನ ಕಣ್ಣುಗಳಿಂದ ಆನಂದಬಾಷ್ಪಗಳು

ಉದುರತೊಡಗಿದುವು. ಮಹಾಬಾಹುವಾದ, ಅರಿಂದಮನಾದ ಯುಧಿಷ್ಠಿರನು ಕೃಷ್ಣಾರ್ಜುನರನ್ನು ಪುನಃ ಪುನಃ ಪ್ರೇಮಪೂರ್ವಕವಾಗಿ ಮಾತನಾಡಿಸುತ್ತಾ ಇಬ್ಬರನ್ನೂ ಗಾಢವಾಗಿ ಆಲಿಂಗಿಸಿಕೊಂಡನು. ಯದುಶ್ರೇಷ್ಠನಾದ ವಾಸುದೇವನು ಅರ್ಜುನನೊಡಗೂಡಿ ಕರ್ಣನ ನಿಧನಸಂಬಂಧವಾದ ಎಲ್ಲ ವಿಷಯಗಳನ್ನೂ ಅದು ಹೇಗೆ ನಡೆಯಿತೋ ಹಾಗೆಯೇ ಹೇಳಿದನು. ಭಗವಾನ್ ಶ್ರೀಕೃಷ್ಣನು ನಸುನಗುತ್ತಾ ಬದ್ಧಾಂಜಲಿಯಾಗಿ ಹತಶತ್ರುವಾದ ಯುಧಿಷ್ಠಿರರಾಜನೊಡನೆ ಹೇಳಿದನು:

**ದಿಷ್ಟ್ಯಾ ಗಾಣ್ಡೀವಧನ್ವಾ ಚ ಪಾಣ್ಡವಶ್ಚ ವೃಕೋದರಃ ।**
**ತ್ವಂ ಚಾಪಿ ಕುಶಲೀ ರಾಜನ್ಮಾದ್ರೀಪುತ್ರೌ ಚ ಪಾಣ್ಡವೌ ॥೧೮॥**

“ಮಹಾರಾಜ! ಸೌಭಾಗ್ಯವಶಾತ್ ಗಾಂಡೀವಧನ್ವನಾದ ಅರ್ಜುನನೂ, ಭೀಮಸೇನನೂ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರೂ ಮತ್ತು ನೀನೂ ಕುಶಲಿಗಳಾಗಿರುವಿರಿ.

**ಮುಕ್ತಾ ವೀರಕ್ಷಯಾದಸ್ಮಾತ್ಸಂಗ್ರಾಮಾಲ್ಲೋಮಹರ್ಷಣಾತ್ ।**
**ಕ್ಷಿಪ್ರಮುತ್ತರಕಾಲಾನಿ ಕುರು ಕಾರ್ಯಾಣಿ ಪಾಣ್ಡವ ॥೧೯॥**

ಯುಧಿಷ್ಠಿರ! ರೋಮಾಂಚಕರವಾದ, ಸರ್ವವೀರವಿನಾಶಕರವಾದ ಈ ಸಂಗ್ರಾಮದಿಂದ ನೀವು ಪಾರಾಗಿರುತ್ತೀರಿ. (ಇನ್ನು ಮುಂದೆ ನಿಮಗೆ ಯುದ್ಧಭಯವಿಲ್ಲ.) ಆದುದರಿಂದ ಮುಂದೆ ಮಾಡಬೇಕಾದ ಕಾರ್ಯಗಳನ್ನು ಮಾಡಲು ಉಪಕ್ರಮಿಸು.

**ಹತೋ ವೈಕರ್ತನೋ ರಾಜನ್ಸೂತಪುತ್ರೋ ಮಹಾರಥಃ ।**
**ದಿಷ್ಟ್ಯಾ ಜಯಸಿ ರಾಜೇನ್ದ್ರ ದಿಷ್ಟ್ಯಾ ವರ್ಧಸಿ ಭಾರತ ॥೨೦॥**

ಧರ್ಮರಾಜ! ಭಾರತನೇ! ವೈಕರ್ತನಕರ್ಣನು ಹತನಾದನು. ಸೌಭಾಗ್ಯವಶಾತ್ ನೀನು ದೈವಬಲದಿಂದ ಜಯಗಳಿಸಿರುವೆ ಮತ್ತು ವೃದ್ಧಿಯನ್ನೂ ಹೊಂದಿರುವೆ.

ಯಾವ ಪುರುಷಾಧಮನು ಜೂಜಾಟದಲ್ಲಿ ಜಿತಳಾದ ದ್ರೌಪದಿಯನ್ನು ಹಾಸ್ಯಮಾಡುತ್ತಾ ಮೂದಲಿಸಿದ್ದನೋ–ಅಂತಹ ಪುರುಷಾಧಮನಾದ

ಸೂತಪುತ್ರನ ರಕ್ತವನ್ನು ಭೂಮಿಯೀಗ ಪಾನಮಾಡುತ್ತಿದೆ. ಕುರು ಪುಂಗವನೇ! ಪುರುಷವ್ಯಾಘ್ರನೇ! ನಿನ್ನ ಶತ್ರುವೀಗ ಅಂಗಾಂಗಗಳಲ್ಲಿಯೂ ಬಾಣಗಳಿಂದ ಚುಚ್ಚಲ್ಪಟ್ಟು ರಣಭೂಮಿಯಲ್ಲಿ ಮಲಗಿದ್ದಾನೆ. ಅರ್ಜುನನ ಅನೇಕ



ಬಾಣಗಳಿಂದ ಭಿನ್ನಗಾತ್ರನಾಗಿರುವ ಆ ನಿನ್ನ ಶತ್ರುವನ್ನು ನೋಡು. ಪ್ರಯತ್ನಶೀಲನಾದ ನೀನು ನಮ್ಮೊಡನೆ ನಿಃಸಪತ್ನವಾದ ಈ ಭೂಮಂಡಲ ವನ್ನು ಶಾಸನಮಾಡು. ಪುಷ್ಕಲವಾದ ರಾಜಭೋಗಗಳನ್ನೂ ಅನುಭವಿಸು."

ಮಹಾರಾಜ! ಮಹಾತ್ಮನಾದ ಕೇಶವನು ಹೇಳಿದ ಮಾತನ್ನು ಕೇಳಿ ಪ್ರಹೃಷ್ಟನಾದ ಧರ್ಮಪುತ್ರನು ದಾಶಾರ್ಹನನ್ನು ಕುರಿತು ಹೇಳಿದನು:

"ನಿಜ, ಕೃಷ್ಣ! ಸೌಭಾಗ್ಯವಶದಿಂದ ಅರ್ಜುನನು ಕರ್ಣನನ್ನು ಸಂಹರಿಸಿದನು. ನಮ್ಮೆಲ್ಲರ ಸೌಭಾಗ್ಯದಿಂದಲೇ ಶತ್ರುಗಳು ಪರಾಜಿತರಾದರು. ಆದರೆ ದೇವಕಿನಂದನ! ನಿನ್ನ ಸಾನ್ನಿಧ್ಯವಿರುವಾಗ ಇಂತಹ ಅದ್ಭುತಕಾರ್ಯವು ನಡೆದುದರಲ್ಲಿ ನನಗೆ ಯಾವ ಅಚ್ಚರಿಯೂ ಕಾಣುವುದಿಲ್ಲ. ನೀನು ಸಾರಥಿಯಾಗಿ ಪಾರ್ಥನ ಜೊತೆಯಲ್ಲಿದ್ದುದರಿಂದಲೂ ಮತ್ತು ತನ್ನ ವಿಶೇಷಪ್ರಯತ್ನದಿಂದಲೂ ಅರ್ಜುನನು ಕರ್ಣನನ್ನು ಸಂಹರಿಸಿದನು. ನಿನ್ನ ಬುದ್ಧಿಯಿಂದಲೂ ಮತ್ತು ಪ್ರಸಾದದಿಂದಲೂ ಸಾಧಿಸಲ್ಪಟ್ಟಿರುವ ಕರ್ಣನ ಸಂಹಾರಕಾರ್ಯವು ನನಗೆ ಆಶ್ಚರ್ಯವೆನಿಸಿಲ್ಲ.

ಮಹಾರಾಜ! ಅನಂತರ ಧರ್ಮಾತ್ಮನಾದ ಯುಧಿಷ್ಠಿರನು ಅಂಗದಾಭರಣದಿಂದ ವಿಭೂಷಿತವಾಗಿದ್ದ ಬಲಭುಜವನ್ನು ಮೇಲೆತ್ತಿಕೊಂಡು ಕೃಷ್ಣಾರ್ಜುನರಿಬ್ಬರನ್ನೂ ಕುರಿತು ಹೇಳಿದನು:

**ನರನಾರಾಯಣೌ ದೇವೌ ಕಥಿತೌ ನಾರದೇನ ಮೇ ।**
**ಧರ್ಮಾತ್ಮಾನೌ ಮಹಾತ್ಮಾನೌ ಪುರಾಣಾವೃಷಿಸತ್ತಮೌ ॥೨೮॥**

"ನೀವಿಬ್ಬರೂ ಧರ್ಮಾತ್ಮರೂ, ಮಹಾತ್ಮರೂ, ಸನಾತನರೂ, ಋಷಿಶ್ರೇಷ್ಠರೂ ಆದ ನರ-ನಾರಾಯಣರೆಂಬ ದೇವತೆಗಳೆಂದು ನಾರದರು ನನಗೆ ಹೇಳಿದ್ದರು. ತತ್ತ್ವವಿದರಾದ, ಮೇಧಾವಿಗಳಾದ ಕೃಷ್ಣದ್ವೈಪಾಯನರೂ ಇದೇ ವಿಷಯವನ್ನೇ ನನ್ನೊಡನೆ ಹಲವು ಬಾರಿ ಹೇಳಿದ್ದರು. ಕೃಷ್ಣ! ಪಾಂಡುವಿನ ಮಗನಾದ ಈ ಧನಂಜಯನು ನಿನ್ನ ಅನುಗ್ರಹದಿಂದಲೇ ಶತ್ರುಗಳನ್ನು ಎದುರಿಸಿ ಜಯಗಳಿಸಿರುವನು. ಇವನು ಇದುವರೆಗೆ ಯಾವಾಗಲೂ ಯುದ್ಧದಿಂದ ಪರಾಙ್ಮುಖನಾಗಿರುವುದಿಲ್ಲ. ನೀನು ನಮ್ಮ ಹಿತೈಷಿಯಾಗಿರುವಾಗ ನಮಗೆ ಜಯವು ಲಭಿಸಿಯೇ ತೀರುತ್ತದೆ. ಪರಾಜಯವೇ ಇಲ್ಲ.

ನೀನು ಪಾರ್ಥನ ಸಾರಥ್ಯವನ್ನು ವಹಿಸಿಕೊಂಡಾಗ ಭೀಷ್ಮ ದ್ರೋಣರು, ಮಹಾತ್ಮನಾದ ಕರ್ಣ, ಗೌತಮವಂಶೀಯರಾದ ಕೃಪರು ಮತ್ತು ಇವರೆಲ್ಲರ ಅನುಯಾಯಿಗಳಾದ ಇನ್ನೂ ಅನೇಕ ಶೂರರೂ

ಇದ್ದರು. ಗೋವಿಂದ! ನಿನ್ನ ಬುದ್ಧಿಯ ಪ್ರಭಾವದಿಂದ ಕರ್ಣನೂ ಹತನಾಗಲಾಗಿ ಅವರೆಲ್ಲರೂ ಇಂದು ಸಂಪೂರ್ಣವಾಗಿ ಹತರಾದರೆಂಬುದೇ ನನ್ನ ಭಾವನೆಯಾಗಿದೆ.”

ಮಹಾರಾಜ! ಪುರುಷಸಿಂಹನಾದ, ಮಹಾಬಾಹುವಾದ ಯುಧಿಷ್ಠಿರನು ಹೀಗೆ ಹೇಳಿ, ಶರೀರದಲ್ಲಿ ಬಿಳುಪಾಗಿಯೂ ಬಾಲದಲ್ಲಿ ಕಪ್ಪಾಗಿಯೂ ಇದ್ದ, ಮನೋವೇಗಯುಕ್ತವಾಗಿದ್ದ ಕುದುರೆಗಳಿಂದ ಎಳೆಯಲ್ಪಡುತ್ತಿದ್ದ, ಸುವರ್ಣಭೂಷಿತವಾಗಿದ್ದ ರಥವನ್ನು ಹತ್ತಿ ತನ್ನ ಸೈನಿಕರಿಂದ ಪರಿವೃತನಾಗಿ ರಣರಂಗವನ್ನು ನೋಡುವ ಸಲುವಾಗಿ ತೆರಳಿದನು.

ಯುಧಿಷ್ಠಿರನು ವೀರರಾದ ಕೃಷ್ಣಾರ್ಜುನರೊಡನೆ ಪ್ರಿಯವಾದ ಮತ್ತು ಸಮಯೋಚಿತವಾದ ಮಾತುಗಳನ್ನಾಡುತ್ತಾ ರಣಭೂಮಿಗೆ ಹೋಗುತ್ತಿದ್ದನು. ವೀರರಾದ ಮಾಧವ-ಫಾಲ್ಗುನರೊಡನೆ ಯುದ್ಧದ ಸಂಬಂಧವಾದ ಅನೇಕ ಪ್ರಿಯವಿಷಯಗಳನ್ನೂ ವಿಮರ್ಶಿಸುತ್ತಾ, ರಣರಂಗದಲ್ಲಿ ಗತಾಸುವಾಗಿ ಮಲಗಿದ್ದ ಪುರುಷರ್ಷಭನಾದ ಕರ್ಣನನ್ನು ನೋಡಿದನು. ಕದಂಬಕುಸುಮವು ಕೇಸರಗಳಿಂದ ಸುತ್ತಲೂ ಆವೃತವಾಗಿರುವಂತೆ– ನೂರಾರು ಬಾಣಗಳಿಂದ ಶರೀರಾದ್ಯಂತವಾಗಿ ಚುಚ್ಚಲ್ಪಟ್ಟಿದ್ದ ಕರ್ಣನನ್ನು ನೋಡಿದನು. ಸುಗಂಧತೈಲದಿಂದ ನೆನೆಸಲ್ಪಟ್ಟಿದ್ದ ಸುವರ್ಣಮಯವಾದ ಸಾವಿರಾರು ದೀಪಿಕೆಗಳು ಕರ್ಣನ ಸುತ್ತಲೂ ಉರಿಯುತ್ತಿದ್ದುವು. ಅವುಗಳ ಬೆಳಕಿನಲ್ಲಿ ಧರ್ಮರಾಜಾದಿಗಳು ಕರ್ಣನನ್ನು ನೋಡಿದರು. ಕರ್ಣನ ಕವಚವು ಹರಿದುಹೋಗಿದ್ದಿತು. ಮೇಲಾಗಿ ಕರ್ಣನು ಸತ್ತುಹೋಗಿದ್ದ ತನ್ನ ಮಗನ ಸಮೀಪದಲ್ಲಿಯೇ ಸತ್ತುಬಿದ್ದಿದ್ದನು. ಅಂತಹ ಅವಸ್ಥೆಯಲ್ಲಿದ್ದ ಕರ್ಣನನ್ನು ನಾಲ್ಕಾರು ಬಾರಿ ನೋಡಿದನಂತರ ಯುಧಿಷ್ಠಿರನಿಗೆ ಕರ್ಣನು ನಿಶ್ಚಯವಾಗಿಯೂ ಮರಣಹೊಂದಿರುವನೆಂಬ ವಿಶ್ವಾಸವುಂಟಾಯಿತು. ಯುಧಿಷ್ಠಿರನು ಕರ್ಣನನ್ನು ಹಲವು ಬಾರಿ ನೋಡಿದನು. ಸ್ವಲ್ಪ ಹೊತ್ತಿನವರೆಗೆ ನೋಡುತ್ತಲೇ ಇದ್ದನು. ಅನಂತರ ಗೋವಿಂದಾರ್ಜುನರ ಕಡೆಗೆ ತಿರುಗಿ ಅವರನ್ನು ಬಹಳವಾಗಿ ಪ್ರಶಂಸೆಮಾಡಿದನು:

**ಅದ್ಯ ರಾಜಾಸ್ಮಿ ಗೋವಿನ್ದ ಪೃಥಿವ್ಯಾಂ ಭ್ರಾತೃಭಿಃ ಸಹ ।**
**ತ್ವಯಾ ನಾಥೇನ ವೀರೇಣ ವಿದುಷಾ ಪರಿಪಾಲಿತಃ ॥೪೧॥**

"ಗೋವಿಂದ! ವಿಚಕ್ಷಣನಾದ, ವೀರನಾದ, ಸ್ವಾಮಿಯಾದ ನಿನ್ನಿಂದ ಪರಿಪಾಲಿತನಾಗಿ ನಾನಿಂದು ನನ್ನ ಅನುಜರೊಡನೆ ಭೂಮಂಡಲದ ರಾಜನಾದೆನು. ಇಂದು ದುರಾತ್ಮನಾದ, ಧೃತರಾಷ್ಟ್ರನ ಮಗನಾದ ದುರ್ಯೋಧನನು–ನರವ್ಯಾಘ್ರನಾದ, ಮಹಾಮಾನಿಷ್ಠನಾದ ಕರ್ಣನು ಹತನಾದನೆಂಬ ವಾರ್ತೆಯನ್ನು ಕೇಳಿ–ಜೀವಿತದಲ್ಲಿಯೂ ಮತ್ತು ರಾಜ್ಯದ ವಿಷಯದಲ್ಲಿಯೂ ಅತ್ಯಂತನಿರಾಶನಾಗುತ್ತಾನೆ.

ಪುರುಷರ್ಷಭನೇ! ನಿನ್ನ ಅನುಗ್ರಹದಿಂದ ರಾಧಾಪುತ್ರನು ಹತನಾಗಲಾಗಿ ನಾವೆಲ್ಲರೂ ಕೃತಾರ್ಥರಾದೆವು. ಸೌಭಾಗ್ಯವಶದಿಂದ ನೀನು ಜಯವನ್ನು ಗಳಿಸಿದೆ. ಸೌಭಾಗ್ಯದಿಂದಲೇ ನಮ್ಮ ಶತ್ರುವೂ ಅಸುನೀಗಿ ಕೆಳಗೆ ಬಿದ್ದನು. ಅದೃಷ್ಟವಿಶೇಷದಿಂದಲೇ ಗಾಂಡೀವಧನ್ವನಾದ, ಪಾಂಡುವಿನ ಮಗನೂ ವಿಜಯಿಯಾದನು.

**ತ್ರಯೋದಶ ಸಮಾಸ್ತೀರ್ಣಾ ಜಾಗರೇಣ ಸುದುಃಖಿತಾಃ ।**
**ಸ್ವಪ್ಸ್ಯಾಮೋಽದ್ಯ ಸುಖಂ ರಾತ್ರೌ ತ್ವತ್ಪ್ರಸಾದಾನ್ಮಹಾಭುಜ ॥೪೨॥**

ಅತ್ಯಂತದುಃಖಿತರಾಗಿದ್ದ ನಾವು ನಿದ್ರೆಯನ್ನೇ ಮಾಡದೇ ಜಾಗ್ರತರಾಗಿಯೇ ಹದಿಮೂರು ವರ್ಷಗಳನ್ನು ಕಳೆದುಬಿಟ್ಟೆವು. ಮಹಾಭುಜನೇ! ನಿನ್ನ ಅನುಗ್ರಹದಿಂದಾಗಿ ಇಂದಿನ ರಾತ್ರಿಯಲ್ಲಾದರೂ ನಾವು ಸುಖವಾಗಿ ನಿದ್ರಿಸುವಂತಾಗಲಿ."

ಮಹಾರಾಜ! ಹೀಗೆ ಯುಧಿಷ್ಠಿರನು ಅನೇಕಪ್ರಕಾರವಾಗಿ ಜನಾರ್ದನನನ್ನೂ, ಕುರುಶ್ರೇಷ್ಠನಾದ ಅರ್ಜುನನನ್ನೂ ಪ್ರಶಂಸೆಮಾಡಿದನು. ಪಾರ್ಥನ ಬಾಣಗಳಿಂದ ಪುತ್ರಸಹಿತನಾಗಿ ಹತನಾಗಿ ಬಿದ್ದಿರುವ ಕರ್ಣನನ್ನು ನೋಡಿ ಮಹೀಪತಿಯಾದ ಯುಧಿಷ್ಠಿರನು ತನಗೆ ಪುನರ್ಜನ್ಮವೇ ಲಭಿಸಿತೆಂದು ಭಾವಿಸಿದನು. ಹರ್ಷಯುಕ್ತರಾದ ಪಾಂಡವರ ಕಡೆಯ ಮಹಾರಥರೆಲ್ಲರೂ ಒಟ್ಟಾಗಿ ಸೇರಿ ರಾಜನಾದ, ಕುಂತಿಯ ಮಗನಾದ ಯುಧಿಷ್ಠಿರನನ್ನು ಪ್ರಿಯವಚನಗಳಿಂದ ಸಂತೋಷಗೊಳಿಸುತ್ತಿದ್ದರು. ಸೂತಪುತ್ರನು ಹತನಾಗಲಾಗಿ ನಕುಲ-ಸಹದೇವರು, ವೃಕೋದರ, ವೃಷ್ಣಿವಂಶದಲ್ಲಿ ಮಹಾರಥನೆಂದು ಖ್ಯಾತಿಯನ್ನು ಪಡೆದಿದ್ದ ಸಾತ್ಯಕಿ, ಧೃಷ್ಟದ್ಯುಮ್ನ, ಶಿಖಂಡೀ,

ಪಾಂಡು-ಪಾಂಚಾಲ-ಸೃಂಜಯಯೋಧರು–ಇವರೆಲ್ಲರೂ ಒಟ್ಟಾಗಿ ಸೇರಿ ಅರ್ಜುನನನ್ನು ನಾನಾಪ್ರಕಾರವಾಗಿ ಪ್ರಶಂಸೆಮಾಡುತ್ತಿದ್ದರು. ವಿಜಯೋಲ್ಲಸಿತರಾದ, ಲಕ್ಷ್ಯವನ್ನು ಭೇದಿಸುವುದರಲ್ಲಿ ಸಿದ್ಧಿಯನ್ನು ಪಡೆದಿದ್ದ, ಯುದ್ಧಕುಶಲರಾದ, ಪ್ರಹಾರಿಗಳಾದ ಪಾಂಡವಮಹಾರಥರೂ ಮತ್ತು ಯೋಧರೂ ಧರ್ಮಾತ್ಮನಾದ ಯುಧಿಷ್ಠಿರರಾಜನನ್ನು ಅಭಿನಂದಿಸಿ, ಶತ್ರುತಾಪಕರಾದ ಕೃಷ್ಣಾರ್ಜುನರನ್ನೂ ಪ್ರಶಂಸಾಯುಕ್ತವಾದ ಮಾತುಗಳಿಂದ ಸ್ತೋತ್ರಮಾಡುತ್ತಾ ಸಂತೋಷಭರಿತರಾಗಿ ಶಿಬಿರಗಳಿಗೆ ಪ್ರಯಾಣ ಮಾಡಿದರು.

ಧೃತರಾಷ್ಟ್ರಮಹಾರಾಜ! ನಿನ್ನ ದುರಾಲೋಚನೆಯ ಫಲವಾಗಿಯೇ ರೋಮಾಂಚಕರವಾದ ಜನಸಂಹಾರಕಾರ್ಯವು ನಾನು ವಿವರಿಸಿದ ರೀತಿಯಲ್ಲಿ ನಡೆದುಹೋಯಿತು. ಆಗಿಹೋದುದಕ್ಕಾಗಿ ನೀನೇಕೆ ದುಃಖಿಸುವೆ?"

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ:

"ಮಹಾರಾಜ! ಅಂಬಿಕೆಯ ಮಗನಾದ ಧೃತರಾಷ್ಟ್ರನು ಅಪ್ರಿಯವಾದ ಆ ವಾರ್ತೆಯನ್ನು ಸಂಜಯನಿಂದ ಕೇಳಿ ಬುಡವನ್ನು ಕಡಿದ ವೃಕ್ಷದಂತೆ–ದೊಪ್ಪನೆ ನಿಶ್ಚೇಷ್ಟನಾಗಿ ನೆಲದ ಮೇಲೆ ಬಿದ್ದುಹೋದನು. ಅದೇ ರೀತಿಯಲ್ಲಿ ಮುಂದೇನಾಗುವುದೆಂಬುದನ್ನು ಮೊದಲೇ ಊಹಿಸಿದ್ದ ದೀರ್ಘದರ್ಶಿನಿಯಾದ ಗಾಂಧಾರಿಯೂ ಯುದ್ಧದಲ್ಲಿ ಕರ್ಣನು ನಿಧನಹೊಂದಿದನೆಂಬ ವಾರ್ತೆಯನ್ನು ಕೇಳುತ್ತಲೇ ವಿಮೂಢಳಾಗಿ ಕೆಳಗೆ ಬಿದ್ದು ಅನೇಕ ಬಗೆಯ ದುಃಖಾಲಾಪಗಳಿಂದ ರೋದಿಸಿದಳು. ಆ ಸಮಯದಲ್ಲಿ ವಿದುರನು ಗಾಂಧಾರಿಯನ್ನೂ, ಸಂಜಯನು ಧೃತರಾಷ್ಟ್ರನನ್ನೂ ಹಿಡಿದುಕೊಂಡು ಕುಳ್ಳಿರಿಸಿದರು. ಬಳಿಕ ವಿದುರ-ಸೃಂಜಯರು ಧೃತರಾಷ್ಟ್ರನಿಗೆ ಶೈತ್ಯೋಪಚಾರಮಾಡಿ ಸಮಾಧಾನಗೊಳಿಸಿದರು. ಅದೇ ರೀತಿಯಲ್ಲಿ ಕುರುರಾಜಕುಮಾರಿಯರೂ ಬಂದು ಗಾಂಧಾರಿಯನ್ನು ಸಂತಯಿಸಿದರು. ದೈವಚಿಂತನೆಯೇ ಹೆಚ್ಚಿನದೆಂಬುದನ್ನೂ–ಆಗಬೇಕಾದುದು ಆಗಿಯೇ ತೀರುವುದೆಂಬುದನ್ನೂ ಮನಗಂಡ ಮಹಾತಪಸ್ವಿಯಾದ ಧೃತರಾಷ್ಟ್ರನು ಅತಿಯಾದ ಮಾನಸಿಕಸಂಕಟಕ್ಕೊಳಗಾಗಿ ಬುದ್ಧಿಹೀನನಾದನು. ಚಿಂತೆ ಮತ್ತು ಶೋಕಗಳಿಂದ ಪರೀತವಾದ ಬುದ್ಧಿಯುಳ್ಳವನಾಗಿದ್ದ ಮತ್ತು ಮೋಹಪೀಡಿತನಾಗಿದ್ದ ರಾಜನು ತನ್ನ

ಮುಂದೆ ಏನು ನಡೆಯುತ್ತಿದೆಯೆಂಬುದನ್ನು ತಿಳಿದುಕೊಳ್ಳುವ ಸಾಮರ್ಥ್ಯವನ್ನೂ ಕಳೆದುಕೊಂಡಿದ್ದನು. ಸಂಜಯನಿಂದ ಸಮಾಧಾನಗೊಳಿಸಲ್ಪಟ್ಟ ರಾಜನು ಬುದ್ಧಿಗೆಟ್ಟವನಾಗಿ ಸುಮ್ಮನೆ ಕುಳಿತಿದ್ದನು."

೯೬ನೆಯ ಅಧ್ಯಾಯವು ಮುಗಿಯಿತು.

ಕರ್ಣಪರ್ವವು ಮುಗಿಯಿತು.

——

## ಕರ್ಣಪರ್ವದ ಶ್ರವಣಮಹಿಮೆ

ವೈಶಂಪಾಯನರು ಹೇಳುತ್ತಾರೆ:

ಇಮಂ ಮಹಾಯುದ್ಧಮಖಂ ಮಹಾತ್ಮನೋ-
ರ್ಧನಂಜಯಸ್ಯಾಧಿರಥೇಶ್ಚ ಯಃ ಪಠೇತ್ ।
ಸ ಸಮ್ಯಗಿಷ್ಟಸ್ಯ ಮುಖಸ್ಯ ಯತ್ಫಲಂ
ತದಾಪ್ನುಯಾತ್ಸಂಶ್ರವಣಾಚ್ಚ ಭಾರತ ॥೫೯॥

"ಜನಮೇಜಯ! ಯಾವ ಮನುಷ್ಯನು ಮಹಾತ್ಮರಾದ ಕರ್ಣಾರ್ಜುನರ ಯುದ್ಧರೂಪವಾದ ಈ ಯಜ್ಞಪ್ರಕರಣವನ್ನು ಪಠಿಸುತ್ತಾನೆಯೋ–ಅವನು ವಿಧಿವಿಹಿತವಾದ ರೀತಿಯಲ್ಲಿ ಯಜ್ಞಾನುಷ್ಠಾನ ಮಾಡುವುದರಿಂದ ಯಾವ ಮಹಾಫಲವು ಲಭಿಸುತ್ತದೆಯೋ–ಅಂತಹ ಫಲವನ್ನೇ ಪಡೆಯುತ್ತಾನೆ. ಶ್ರವಣಮಾತ್ರದಿಂದಲೂ ಅಂತಹ ಮಹಾಫಲವು ಲಭಿಸುತ್ತದೆ.

ಮಖೋ ಹಿ ವಿಷ್ಣುರ್ಭಗವಾನ್ಸನಾತನೋ
ವದನ್ತಿ ತಚ್ಚಾಗ್ನ್ಯನಿಲೇನ್ದುಭಾನವಃ ।
ಅತೋಽನಸೂಯುಃ ಶೃಣುಯಾತ್ಪಠೇಚ್ಚ ಯಃ
ಸ ಸರ್ವಲೋಕಾನುಚರಃ ಸುಖೀ ಭವೇತ್ ॥೬೦॥

ಸನಾತನನಾದ ಭಗವಾನ್ ವಿಷ್ಣುವು ಯಜ್ಞಸ್ವರೂಪನೇ ಆಗಿರುತ್ತಾನೆಂದು ಅಗ್ನಿ -ವಾಯು-ಚಂದ್ರ-ಸೂರ್ಯರೂ ಹೇಳುತ್ತಾರೆ.

'ಯಜ್ಞೋ ವೈ ವಿಷ್ಣುಃ' ಎಂಬ ಶ್ರುತಿವಚನವೂ ಇದೆ. (ಮೇಲಿನ ಶ್ಲೋಕದಲ್ಲಿ ನಿರೂಪಿಸುವಂತೆ ಯುದ್ಧವೂ ಒಂದು ಮಹಾಮಖವೇ ಆಗಿರುತ್ತದೆ. ಅರ್ಥಾತ್ ಯುದ್ಧವೂ ವಿಷ್ಣುವಿನ ವಿರಾಟ್ಸ್ವರೂಪವೇ ಸರಿ.) ಆದುದರಿಂದ ಯಾವನು ಕರ್ಣಾರ್ಜುನರ ಯುದ್ಧಪ್ರಕರಣವನ್ನು ಅಸೂಯಾರಹಿತನಾಗಿ ಪಠನಮಾಡುತ್ತಾನೆಯೋ ಅಥವಾ ಕೇಳುತ್ತಾನೆಯೋ–ಅವನು ಸರ್ವಲೋಕಗಳಲ್ಲಿಯೂ ಸಂಚರಿಸುವವನೂ–ಸುಖಿಯೂ ಆಗುತ್ತಾನೆ.

**ತಾಂ ಸರ್ವದಾ ಭಕ್ತಿಮುಪಾಗತಾ ನರಾಃ**
**ಪಠನ್ತಿ ಪುಣ್ಯಾಂ ವರಸಂಹಿತಾಮಿಮಾಮ್ ।**
**ಧನೇನ ಧಾನ್ಯೇನ ಯಶಸಾ ಚ ಮಾನುಷಾ**
**ನನ್ದನ್ತಿ ತೇ ನಾತ್ರ ವಿಚಾರಣಾಸ್ತಿ ॥೬೧॥**

ಯಾವ ಮನುಷ್ಯರು ಸರ್ವದಾ ಭಕ್ತಿಭಾವದಿಂದ ಉತ್ತಮವಾದ, ಪುಣ್ಯದಾಯಕವಾದ ಮತ್ತು ಶ್ರೇಷ್ಠವಾದ ಈ ಸಂಹಿತೆಯನ್ನು ಪಠನ ಮಾಡುತ್ತಾರೆಯೋ–ಅವರು ಧನ, ಧಾನ್ಯ ಮತ್ತು ಯಶಸ್ಸುಗಳನ್ನು ಪಡೆದುಕೊಂಡು ಆನಂದದಿಂದಿರುತ್ತಾರೆ. ಈ ವಿಷಯದಲ್ಲಿ ವಿಚಾರಮಾಡಬೇಕಾದ ಅವಶ್ಯಕತೆಯೇ ಇಲ್ಲ.

**ಅತೋಽನಸೂಯುಃ ಶೃಣುಯಾತ್ಸದಾ ತು ವೈ**
**ನರಃ ಸ ಸರ್ವಾಣಿ ಸುಖಾನಿ ಚಾಪ್ನುಯಾತ್ ।**
**ವಿಷ್ಣುಃ ಸ್ವಯಂಭೂರ್ಭಗವಾನ್ಭವಶ್ಚ**
**ತುಷ್ಯನ್ತಿ ತೇ ತಸ್ಯ ನರೋತ್ತಮಸ್ಯ ॥೬೨॥**

ಆದುದರಿಂದ ಅಸೂಯಾರಹಿತನಾಗಿ ಈ ಸಂಹಿತೆಯನ್ನು ಸರ್ವಕಾಲದಲ್ಲಿಯೂ ಕೇಳುತ್ತಿರಬೇಕು. ಅಂತಹ ಮನುಷ್ಯನು ಸಕಲವಿಧವಾದ ಸುಖಗಳನ್ನೂ ಹೊಂದುತ್ತಾನೆ. ಎಲ್ಲ ಕಾಲಗಳಲ್ಲಿಯೂ ಶ್ರೇಷ್ಠವಾದ ಈ ಆಖ್ಯಾನವನ್ನು ಕೇಳುವ ನರಶ್ರೇಷ್ಠನ ವಿಷಯದಲ್ಲಿ ವಿಷ್ಣು-ಬ್ರಹ್ಮರೂ ಮತ್ತು ಭಗವಾನ್ ಶಂಕರನೂ ತುಷ್ಟರಾಗುತ್ತಾರೆ.

**ವೇದಾವಾಪ್ತಿರ್ಬ್ರಾಹ್ಮಣಸ್ಯೇಹ ದೃಷ್ಟಾ**
**ರಣೇ ಬಲಂ ಕ್ಷತ್ರಿಯಾಣಾಂ ಜಯೋ ಯುಧಿ ।**

ಧನಜ್ಯೇಷ್ಠಾಶ್ಚಾಪಿ ಭವನ್ತಿ ವೈಶ್ಯಾಃ
ಶೂದ್ರಾರೋಗ್ಯಂ ಪ್ರಾಪ್ನುವನ್ತೀಹ ಸರ್ವೇ ॥೬೩॥

ಈ ಪರ್ವವನ್ನು ಪಠನಮಾಡುವ ಬ್ರಾಹ್ಮಣರಿಗೆ ವೇದಗಳ ಜ್ಞಾನವುಂಟಾಗುತ್ತದೆ. ಕ್ಷತ್ರಿಯರಿಗೆ ಯುದ್ಧಮಾಡುವಾಗ ಬಲವೂ ಕಡೆಯಲ್ಲಿ ವಿಜಯವೂ ಲಭಿಸುತ್ತದೆ. ವೈಶ್ಯರು ಐಶ್ವರ್ಯದಿಂದ ಹಿರಿಯರಾಗುತ್ತಾರೆ. ಶೂದ್ರರು ಆರೋಗ್ಯವನ್ನು ಪಡೆದುಕೊಳ್ಳುತ್ತಾರೆ.

ತಥೈವ ವಿಷ್ಣುರ್ಭಗವಾನ್ಸನಾತನಃ
ಸ ಚಾತ್ರ ದೇವಃ ಪರಿಕೀರ್ತ್ಯತೇ ಯತಃ ।
ತತಃ ಸ ಕಾಮಾಂಲ್ಲಭತೇ ಸುಖೀ ನರೋ
ಮಹಾಮುನೇಸ್ತಸ್ಯ ವಚೋರ್ಽಚಿತಂ ಯಥಾ ॥೬೪॥

ಈ ಪರ್ವದಲ್ಲಿ ಸನಾತನನಾದ ವಿಷ್ಣುಭಗವಂತನು ಕೀರ್ತಿತನಾಗಿರುತ್ತಾನೆ. ಆದುದರಿಂದ ಮಾನವನು ಈ ಪರ್ವವನ್ನು ಪಠನ ಮಾಡುವುದರಿಂದ ಪರಮಸುಖಿಯಾಗಿ ಮನೋವಾಂಛಿತವಾದ ಸಕಲಕಾಮನೆಗಳನ್ನೂ ಪಡೆದುಕೊಳ್ಳುತ್ತಾನೆ. ಮಹಾಮುನಿಗಳಾದ ವ್ಯಾಸರ ಪುಣ್ಯವಾಣಿಗೆ ಇಂತಹ ಪ್ರಭಾವವಿದೆ.

ಕಪಿಲಾನಾಂ ಸವತ್ಸಾನಾಂ ವರ್ಷಮೇಕಂ ನಿರನ್ತರಮ್ ।
ಯೋ ದದ್ಯಾತ್ಸುಕೃತಂ ತದ್ಧಿ ಶ್ರವಣಾತ್ಕರ್ಣಪರ್ವಣಃ ॥೬೫॥

ಕಪಿಲಾಧೇನುಗಳನ್ನು ಕರುಗಳೊಡನೆ ಒಂದು ವರ್ಷ ನಿರಂತರವಾಗಿ ದಾನಮಾಡುವವನಿಗೆ ಯಾವ ಮಹಾಪುಣ್ಯವು ಪ್ರಾಪ್ತವಾಗುತ್ತದೆಯೋ–ಆ ಮಹಾಪುಣ್ಯವೇ ಕರ್ಣಪರ್ವವನ್ನು ಶ್ರದ್ಧೆಯಿಂದ ಕೇಳುವವನಿಗೂ ಲಭಿಸುತ್ತದೆ.



ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥

ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

ಓಂ ತತ್ಸತ್



ಶ್ರೀಮಹಾಗಣಪತಯೇನಮಃ ಶ್ರೀಮಹಾಸರಸ್ವತ್ಯೈನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಶಲ್ಯಪರ್ವ



## ಸಂಜಯನಿಂದ ಶಲ್ಯ-ದುರ್ಯೋಧನರ ವಧೆಯ ವೃತ್ತಾಂತವನ್ನು ಕೇಳಿ ಧೃತರಾಷ್ಟ್ರನು ಮೂರ್ಛೆಹೋದುದು: ಪ್ರಜ್ಞೆಯು ಬಂದನಂತರ ವಿದುರನು ರಾಜನನ್ನು ಸಮಾಧಾನಪಡಿಸಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ:

**ಏವಂ ನಿಪಾತಿತೇ ಕರ್ಣೇ ಸಮರೇ ಸವ್ಯಸಾಚಿನಾ ।**
**ಅಲ್ಪಾವಶಿಷ್ಟಾಃ ಕುರವಃ ಕಿಮಕುರ್ವತ ವೈ ದ್ವಿಜ ॥೧॥**

"ಬ್ರಾಹ್ಮಣೋತ್ತಮರೇ! ತಾವು ಹೇಳಿದಂತೆ ಸವ್ಯಸಾಚಿಯು ರಣರಂಗದಲ್ಲಿ ಕರ್ಣನನ್ನು ಸಂಹಾರಮಾಡಿದನಂತರ ಅತ್ಯಲ್ಪಸಂಖ್ಯೆಯಲ್ಲಿದ್ದ ಉಳಿದ ಕುರುಗಳು ಏನು ಮಾಡಿದರು? ಪಾಂಡವರ ಬಲವು ದಿನ-ದಿನಕ್ಕೂ ಅಧಿಕವಾಗುತ್ತಿರುವುದನ್ನು ನೋಡಿ ಸುಯೋಧನರಾಜನು ಪಾಂಡವರೊಡನೆ ಸಮಯೋಚಿತವಾದ ಯಾವುದಾದರೂ ಒಡಂಬಡಿಕೆಗೆ ಬರಲು ಉದ್ದೇಶಿಸಿದನೇ? ಬ್ರಾಹ್ಮಣೋತ್ತಮರೇ! ಈ ವಿಷಯವನ್ನು ನಾನು ತಮ್ಮಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ನಮ್ಮ ಪೂರ್ವಜರ ಮಹಾಚರಿತ್ರೆಯನ್ನು ಕೇಳುತ್ತಿದ್ದಂತೆ ನನಗೆ ತೃಪ್ತಿಯೆಂಬುದೇ ಉಂಟಾಗುವುದಿಲ್ಲ."

"ಜನಮೇಜಯಮಹಾರಾಜ! ಕರ್ಣನು ಹತನಾದನಂತರ ಧೃತರಾಷ್ಟ್ರನ ಮಗನಾದ ದುರ್ಯೋಧನನು ಶೋಕಸಾಗರದಲ್ಲಿ ಸಂಪೂರ್ಣ

ವಾಗಿ ಮುಳುಗಿ ಎಲ್ಲ ಪ್ರಕಾರಗಳಿಂದಲೂ ನಿರಾಶೆಯನ್ನೇ ಹೊಂದಿದನು. 'ಹಾ! ಕರ್ಣ! ಹಾ ಕರ್ಣ!'–ಎಂದು ಪುನಃ ಪುನಃ ಹೇಳಿಕೊಂಡು ಗೋಳಾಡುತ್ತಾ ಹತರಾಗದೇ ಉಳಿದಿದ್ದ ರಾಜರೊಡನೆ ಬಹಳ ಕಷ್ಟದಿಂದ ತನ್ನ ಶಿಬಿರಕ್ಕೆ ಬಂದನು. ಶಾಸ್ತ್ರನಿಶ್ಚಿತವಾದ ಯುಕ್ತಿಗಳ ಮೂಲಕವಾಗಿ ರಾಜರು ಸಮಾಧಾನಹೇಳಿದರೂ ದುರ್ಯೋಧನನು ಕರ್ಣನ ವಧೆಯನ್ನೇ ಪದೇ-ಪದೇ ಸ್ಮರಿಸುತ್ತಿದ್ದು ಮನಸ್ಸಿಗೆ ಶಾಂತಿಯನ್ನು ಪಡೆದುಕೊಳ್ಳಲಿಲ್ಲ.

ಆಗಬೇಕಾದುದು ಆಗಿಯೇ ತೀರುವುದೆಂದೂ–ದೈವಚಿಂತನೆಯೇ ಬಲವತ್ತರವಾದುದೆಂದೂ ಭಾವಿಸಿ ಯುದ್ಧವನ್ನು ಮುಂದುವರಿಸಲು ನಿಶ್ಚಯ ಮಾಡಿ ದುರ್ಯೋಧನನು ಪುನಃ ಯುದ್ಧಕ್ಕೆ ಹೊರಟೇಬಿಟ್ಟನು. ರಾಜಶ್ರೇಷ್ಠನಾದ ಅವನು ಶಲ್ಯನಿಗೆ ವಿಧಿವತ್ತಾಗಿ ಸೇನಾಪತ್ಯವನ್ನು ವಹಿಸಿ, ಅಳಿದುಳಿದಿದ್ದ ರಾಜರೊಡನೆ ರಣಾಂಗಣಕ್ಕೆ ತೆರಳಿದನು. ಅನಂತರ ಕುರು-ಪಾಂಡವ ಸೈನಿಕರಿಗೆ ದೇವಾಸುರರ ಯುದ್ಧಕ್ಕೆ ಸಮಾನವಾದ ಮಹಾಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಸೈನ್ಯಸಮೇತನಾದ ಶಲ್ಯನು ಯುದ್ಧದ ಹದಿನೆಂಟನೆಯ ದಿವಸ ಪೂರ್ವಾಹ್ಣಕಾಲದಲ್ಲಿ ಅಪಾರಸಂಖ್ಯೆಯಲ್ಲಿ ಶತ್ರುಸೈನಿಕರನ್ನು ಸಂಹರಿಸಿ ಮಧ್ಯಾಹ್ನದ ಸಮಯದಲ್ಲಿ ಯುಧಿಷ್ಠಿರನಿಂದ ಕೊಲ್ಲಲ್ಪಟ್ಟನು. ಆ ವೇಳೆಗೆ ಬಂಧು-ಬಾಂಧವರೆಲ್ಲರನ್ನೂ ಸಂಪೂರ್ಣವಾಗಿ ಕಳೆದುಕೊಂಡಿದ್ದ ದುರ್ಯೋಧನರಾಜನು ರಣಾಂಗಣದಿಂದ ಹಿಂದಕ್ಕೆ ಸರಿದು ಶತ್ರುವಿನ ಭಯದಿಂದ ಘೋರವಾದೊಂದು ಸರೋವರವನ್ನು ಪ್ರವೇಶಿಸಿದನು. ಆ ದಿವಸದ ಅಪರಾಹ್ಣದ ಸಮಯದಲ್ಲಿ ಭೀಮಸೇನನು ಯುದ್ಧಕ್ಕಾಗಿ ಸರೋವರದಲ್ಲಿದ್ದ ದುರ್ಯೋಧನನನ್ನು ಆಹ್ವಾನಿಸಿ ಅವನು ಹೊರಗೆ ಬಂದನಂತರ ಅವನನ್ನು ಆಕ್ರಮಿಸಿ ಸಂಹರಿಸಿದನು. ಮಹಾಧನುಷ್ಮಂತನಾದ ದುರ್ಯೋಧನನು ಹತನಾಗಲಾಗಿ, ಹತರಾಗದೇ ಉಳಿದಿದ್ದ ಕೃಪಾಚಾರ್ಯರು, ಕೃತವರ್ಮಾ ಮತ್ತು ಅಶ್ವತ್ಥಾಮಾ–ಈ ಮೂವರು ಮಹಾರಥರು ಅಂದು ರಾತ್ರಿ ಪಾಂಚಾಲ-ಸೋಮಕರೆಲ್ಲರನ್ನೂ ನಿಃಶೇಷವಾಗಿ ಸಂಹರಿಸಿದರು. ಮರುದಿನ (ಹತ್ತೊಂಬತ್ತನೆಯ ದಿನ) ಪ್ರಾತಃಕಾಲದಲ್ಲಿ ದುಃಖ-ಶೋಕಗಳಿಂದ ಪೀಡಿತನಾಗಿದ್ದ ದೀನನಾಗಿದ್ದ ಸಂಜಯನು ಶಿಬಿರದಿಂದ ಹೊರಟು ಹಸ್ತಿನಾಪುರವನ್ನು ಪ್ರವೇಶಿಸಿದನು. ಪಟ್ಟಣವನ್ನು

ಪ್ರವೇಶಿಸಿದ ಸಂಜಯನು ತೋಳುಗಳೆರಡನ್ನೂ ಮೇಲಕ್ಕೆತ್ತಿಕೊಂಡು ಅತ್ಯಂತದುಃಖಿತನಾಗಿ ತರ-ತರನೆ ನಡುಗುತ್ತಾ ಧೃತರಾಷ್ಟ್ರರಾಜನ ಅರಮನೆಯನ್ನು ಪ್ರವೇಶಿಸಿದನು. ಅತಿದುಃಖಿತನಾಗಿದ್ದ ಸಂಜಯನು: "ನರವ್ಯಾಘ್ರನೇ! ಮಹಾರಾಜ! ಅಯ್ಯೋ! ಮಹಾತ್ಮನಾದ ದುರ್ಯೋಧನನ ನಿಧನದಿಂದ ನಾವೆಲ್ಲರೂ ಹಾಳಾಗಿಹೋದೆವು. ಅಯ್ಯೋ!"–ಎಂದೆನ್ನುತ್ತಾ ಗಟ್ಟಿಯಾಗಿ ಅಳತೊಡಗಿದನು.

**ವಿಧಿಶ್ಚ ಬಲವಾನತ್ರ ಪೌರುಷಂ ತು ನಿರರ್ಥಕಮ್ ।**
**ಶಕ್ರತುಲ್ಯಬಲಾಃ ಸರ್ವೇ ಯಥಾವಧ್ಯನ್ತ ಪಾಣ್ಡವೈಃ ॥೧೭॥**

"ಈ ಯುದ್ಧಪ್ರಕರಣದಲ್ಲಿ ವಿಧಿಯೇ ಬಲವತ್ತರವಾಯಿತು. ಪೌರುಷವು ನಿರರ್ಥಕವಾಯಿತು. ಏಕೆಂದರೆ: ಇಂದ್ರಸದೃಶಪರಾಕ್ರಮರಾದ ನಮ್ಮ ಕಡೆಯ ಯೋಧರೆಲ್ಲರೂ ಪಾಂಡವರಿಂದ ಹತರಾಗಿ ಹೋದರು"–ಎಂದು ಹೇಳುತ್ತಾ ಗಳ-ಗಳನೆ ಅತ್ತನು.

ಜನಮೇಜಯಮಹಾರಾಜ! ಮಹಾಕ್ಲೇಶಯುಕ್ತನಾಗಿದ್ದ ಸಂಜಯನನ್ನು ಹಸ್ತಿನಾಪುರದಲ್ಲಿ ನೋಡಿದ ಎಲ್ಲ ಜನರೂ ಎಲ್ಲ ಕಡೆಗಳಿಂದಲೂ 'ಅಯ್ಯೋ! ಮಹಾರಾಜ!'–ಎಂದೆನ್ನುತ್ತಾ ಅತ್ಯಂತ ಉದ್ವಿಗ್ನರಾಗಿ ವಿಕಾರಸ್ವರಗಳಿಂದ ಅಳತೊಡಗಿದರು. ಆಬಾಲವೃದ್ಧರಾದಿಯಾಗಿ ದುರ್ಯೋಧನರಾಜನು ಹತನಾದುದನ್ನು ಕೇಳಿ ಅಲ್ಲಲ್ಲಿಯೇ ನಿಂತು ಆರ್ತನಾದಗಳನ್ನು ಮಾಡುತ್ತಿದ್ದರು. *ದುಃಖದಿಂದ ಅತ್ಯಂತಪೀಡಿತ ರಾಗಿದ್ದ, ಬುದ್ಧಿಗೆಟ್ಟು ಹುಚ್ಚರಂತೆಯೇ ಇದ್ದ, ದಿಕ್ಕುಕಾಣದೇ ಓಡಿಹೋಗುತ್ತಿದ್ದ (ಮೂವರು) ಪುರುಷಶ್ರೇಷ್ಠರನ್ನು ಹಸ್ತಿನಾಪಟ್ಟಣದ ಪ್ರಜೆಗಳು ನೋಡಿದರು.

ಅತ್ಯಂತವಿಹ್ವಲನಾಗಿದ್ದ ಸಂಜಯನು ರಾಜನ ಅರಮನೆಯನ್ನು

---

*ಧಾವತಶ್ಚಾಪ್ಯಪಶ್ಯಾಮಸ್ತತ್ರ ತಾನ್ಪುರುಷರ್ಷಭಾನ್। –ಎಂಬ ಪಾಠವು ನಾವು ಅನುವಾದ ಮಾಡುತ್ತಿರುವ ಪುಸ್ತಕದಲ್ಲಿದೆ. ಈ ಮಾತು ಸಂಜಯನು ಹೇಳಿದ ಮಾತಿನಂತಿದೆ. ಈ ಸಂದರ್ಭದಲ್ಲಿ ಸಂಜಯನು ಮಾತನಾಡುವುದಿಲ್ಲ. ವೈಶಂಪಾಯನರು ಜನಮೇಜಯನಿಗೆ ಹೇಳುತ್ತಿರುವ ಮಾತಿದು. ಆದುದರಿಂದ ಪಾಠಾಂತರದಲ್ಲಿರುವ ಧಾವತಶ್ಚಾಪ್ಯಪಶ್ಯಚ್ಚ ತತ್ರ ತ್ರೀನ್ಪುರುಷರ್ಷಭಾನ್–ಎಂಬ ಪಾಠವನ್ನು ಅನುಸರಿಸಿ ಅರ್ಥಮಾಡಲಾಗಿದೆ.

ಪ್ರವೇಶಿಸಿ ಪ್ರಜ್ಞಾಚಕ್ಷುವಾದ, ನೃಪತಿಗಳೆಲ್ಲರಿಗೂ ಶ್ರೇಷ್ಠನಾದ ಧೃತರಾಷ್ಟ್ರ ಮಹಾರಾಜನನ್ನು ನೋಡಿದನು. ಕರ್ಣನ ನಿಧನದ ವಿಷಯವನ್ನೇ ಕುರಿತು ಚಿಂತಿಸುತ್ತಾ ಕುಳಿತಿದ್ದ, ಪಾಪರಹಿತನಾದ, ಸೊಸೆಯರಿಂದಲೂ, ಗಾಂಧಾರೀ-ವಿದುರರಿಂದಲೂ, ಇತರ ಸುಹೃದ್-ಜ್ಞಾತಿ-ಹಿತೈಷಿಗಳಿಂದಲೂ ಪರಿವೃತನಾಗಿದ್ದ ಧೃತರಾಷ್ಟ್ರರಾಜನನ್ನು ನೋಡಿದನು. ಜನಮೇಜಯ! ಖಿನ್ನಮನಸ್ಕನಾಗಿದ್ದ ಸಂಜಯನು ಗದ್ಗದಧ್ವನಿಯಿಂದ ಅಳುತ್ತಳುತ್ತಲೇ ಧೃತರಾಷ್ಟ್ರರಾಜನನ್ನು ಕುರಿತು ಈ ಮಾತುಗಳನ್ನು ಹೇಳಿದನು:

"ಭರತರ್ಷಭನೇ! ನಾನು ಸಂಜಯ; ನಮಸ್ಕರಿಸುತ್ತೇನೆ.

ಮದ್ರಾಧಿಪೋ ಹತಃ ಶಲ್ಯಃ ಶಕುನಿಃ ಸೌಬಲಸ್ತಥಾ ।
ಉಲೂಕಃ ಪುರುಷವ್ಯಾಘ್ರ ಕೈತವ್ಯೋ ದೃಢವಿಕ್ರಮಃ ॥೨೬॥

ಸಂಶಪ್ತಕಾ ಹತಾಃ ಸರ್ವೇ ಕಾಮ್ಬೋಜಾಶ್ಚ ಶಕೈಃ ಸಹ ।
ಮ್ಲೇಚ್ಛಾಶ್ಚ ಪರ್ವತೀಯಾಶ್ಚ ಯವನಾ ವಿನಿಪಾತಿತಾಃ ॥೨೭॥

ಪ್ರಾಚ್ಯಾ ಹತಾ ಮಹಾರಾಜ ದಾಕ್ಷಿಣಾತ್ಯಾಶ್ಚ ಸರ್ವಶಃ ।
ಉದೀಚ್ಯಾಶ್ಚ ಹತಾಃ ಸರ್ವೇ ಪ್ರತೀಚ್ಯಾಶ್ಚ ನರೋತ್ತಮಾಃ ॥೨೮॥

ರಾಜಾನೋ ರಾಜಪುತ್ರಾಶ್ಚ ಸರ್ವೇ ತೇ ನಿಹತಾ ನೃಪ ।
ದುರ್ಯೋಧನೋ ಹತೋ ರಾಜಾ ಯಥೋಕ್ತಂ ಪಾಣ್ಡವೇನ ಹ ।
ಭಗ್ನಸಕ್ಥೋ ಮಹಾರಾಜ ಶೇತೇ ಪಾಂಸುಷು ರೂಷಿತಃ ॥೨೯॥

ಪುರುಷಸಿಂಹನೇ! ಮದ್ರಾಧಿಪತಿಯಾದ ಶಲ್ಯನು ಹತನಾದನು. ಸುಬಲನ ಮಗನಾದ ಶಕುನಿಯೂ, ಜೂಜುಗಾರನ ಮಗನಾದ, ದೃಢ ವಿಕ್ರಮನಾದ ಉಲೂಕನೂ ಹತರಾದರು. ಸಂಶಪ್ತಕರೆಲ್ಲರೂ ಹತರಾದರು. ಶಕರೊಡನೆ ಕಾಂಬೋಜರೆಲ್ಲರೂ ಹತರಾದರು. ಮ್ಲೇಚ್ಛ-ಪರ್ವತೀಯ-ಯವನರೂ ಶತ್ರುಗಳಿಂದ ಹತರಾಗಿ ಕೆಳಕ್ಕೆ ಬೀಳಿಸಲ್ಪಟ್ಟರು. ಪೂರ್ವದೇಶದ ಯೋಧರೆಲ್ಲರೂ ಹತರಾದರು. ದಾಕ್ಷಿಣಾತ್ಯಯೋಧರೂ ಹತರಾದರು. ಉತ್ತರ ಮತ್ತು ಪಶ್ಚಿಮರಾಜ್ಯಗಳ ಎಲ್ಲ ಶ್ರೇಷ್ಠಯೋಧರೂ ಯುದ್ಧದಲ್ಲಿ ಅಸುನೀಗಿದರು. ರಾಜರೂ–ರಾಜಪುತ್ರರೂ ಎಲ್ಲರೂ ಹತರಾಗಿಹೋದರು.

ಭೀಮಸೇನನು ಯಾವ ಮಾತನ್ನು ಹೇಳಿದ್ದನೋ–ಆ ಮಾತಿನಂತೆಯೇ ದುರ್ಯೋಧನನು ತೊಡೆಮುರಿದುಕೊಂಡು ಹತನಾಗಿ ಧೂಳಿನಿಂದ ರೂಷಿತನಾಗಿ ರಣರಂಗದಲ್ಲಿ ಮಲಗಿದ್ದಾನೆ.

**ಧೃಷ್ಟದ್ಯುಮ್ನೋ ಮಹಾರಾಜ ಶಿಖಣ್ಡೀ ಚಾಪರಾಜಿತಃ ।**
**ಉತ್ತಮೌಜಾ ಯುಧಾಮನ್ಯುಸ್ತಥಾ ರಾಜನ್ಪ್ರಭದ್ರಕಾಃ ।**
**ಪಞ್ಚಾಲಾಶ್ಚ ನರವ್ಯಾಘ್ರ ಚೇದಯಶ್ಚ ನಿಷೂದಿತಾಃ ॥೩೧॥**

ಮಹಾರಾಜ! ಧೃಷ್ಟದ್ಯುಮ್ನ, ಅಪರಾಜಿತನಾದ ಶಿಖಂಡೀ, ಉತ್ತಮೌಜಸ, ಯುಧಾಮನ್ಯು, ಪ್ರಭದ್ರಕರು, ಪಾಂಚಾಲರು, ಚೇದಿಗಳು–ಇವರೆಲ್ಲರೂ ಹತರಾದರು.

**ತವ ಪುತ್ರಾ ಹತಾಃ ಸರ್ವೇ ದ್ರೌಪದೇಯಾಶ್ಚ ಭಾರತ ।**
**ಕರ್ಣಪುತ್ರೋ ಹತಃ ಶೂರೋ ವೃಷಸೇನಃ ಪ್ರತಾಪವಾನ್ ॥೩೨॥**

ನಿನ್ನ ಮಕ್ಕಳೆಲ್ಲರೂ ಹತರಾದರು. ದ್ರೌಪದಿಯ ಐವರು ಮಕ್ಕಳೂ ಹತರಾದರು. ಪ್ರತಾಪವಂತನಾದ, ಶೂರನಾದ, ಕರ್ಣನ ಮಗನಾದ ವೃಷಸೇನನೂ ಹತನಾದನು. ಪದಾತಿಸೈನಿಕರೂ ಹತರಾದರು. ಎರಡೂ ಪಕ್ಷಗಳ ಗಜಸೈನ್ಯಗಳು ಪರಸ್ಪರಪ್ರಹಾರಗಳಿಂದ ಕೆಳಕ್ಕೆ ಬೀಳಿಸಲ್ಪಟ್ಟುವು. ರಥಸೈನಿಕರೂ ಅಶ್ವಸೈನಿಕರೂ ಸಂಪೂರ್ಣವಾಗಿ ನಾಶಹೊಂದಿದರು. ಪಾಂಡವರಿಗೂ ಮತ್ತು ಕೌರವರಿಗೂ ಆದ ಸಂಘರ್ಷದಿಂದಾಗಿ ನಿನ್ನ ಮಗನ ಮತ್ತು ಪಾಂಡವರ ಶಿಬಿರಗಳಲ್ಲಿ ಸ್ವಲ್ಪ ಮಾತ್ರವೇ ಶೇಷವು ಉಳಿದಿದೆ.

**ಪ್ರಾಯಃ ಸ್ತ್ರೀಶೇಷಮಭವಜ್ಜಗತ್ಕಾಲೇನ ಮೋಹಿತಮ್ ।**
**ಸಪ್ತ ಪಾಣ್ಡವತಃ ಶೇಷಾ ಧಾರ್ತರಾಷ್ಟ್ರಾಸ್ತ್ರಯೋ ರಥಾಃ ॥೩೩॥**

ಕಾಲನಿಂದ ವಿಮೋಹಿತವಾದ ಈ ಜಗತ್ತಿನಲ್ಲಿ ಪ್ರಾಯಶಃ ಸ್ತ್ರೀಯರು ಮಾತ್ರವೇ ಉಳಿದಿರುತ್ತಾರೆ. ಪಾಂಡವರ ಪಕ್ಷದಲ್ಲಿ ಏಳು ಮಂದಿ, ದುರ್ಯೋಧನನ ಪಕ್ಷದಲ್ಲಿ ಮೂವರು ರಥರು ಮಾತ್ರವೇ ಹತಶೇಷರಾಗಿ ಉಳಿದಿರುತ್ತಾರೆ.

**ತೇ ಚೈವ ಭ್ರಾತರಃ ಪಞ್ಚ ವಾಸುದೇವೋಽಥ ಸಾತ್ಯಕಿಃ ।**
**ಕೃಪಶ್ಚ ಕೃತವರ್ಮಾ ಚ ದ್ರೌಣಿಶ್ಚ ಜಯತಾಂ ವರಃ ॥೩೪॥**

ಆ ಕಡೆಯಲ್ಲಿ ಐವರು ಪಾಂಡವಸಹೋದರರು, ವಾಸುದೇವ, ಸಾತ್ಯಕಿ–

ಈ ಏಳು ಮಂದಿ ಉಳಿದಿದ್ದಾರೆ. ಈ ಕಡೆಯಲ್ಲಿ ಕೃಪಾಚಾರ್ಯರು ಕೃತವರ್ಮ, ವೀರಶ್ರೇಷ್ಠನಾದ ಅಶ್ವತ್ಥಾಮಾ–ಈ ಮೂರು ಮಂದಿ ಉಳಿದಿದ್ದಾರೆ. ಜನೇಶ್ವರ! ಉಭಯಪಕ್ಷಗಳಲ್ಲಿಯೂ ಸಮಸ್ತವಾದ ಅಕ್ಷೌಹಿಣೀಸೈನ್ಯಗಳೂ ಏಕತ್ರ ಸಂಘಟಿತವಾಗಿದ್ದುವು. ಅವುಗಳಲ್ಲಿ ಈ ಹತ್ತು ರಥಿಗಳು ಮಾತ್ರ ಉಳಿದಿದ್ದಾರೆ. ಉಳಿದ ಎಲ್ಲರೂ ನಿಧನಹೊಂದಿದರು.

ಭರತಶ್ರೇಷ್ಠನೇ! ದುರ್ಯೋಧನನನ್ನೂ ಮತ್ತು ಅವನ ವೈರವನ್ನೂ ಮುಂದೆಮಾಡಿಕೊಂಡು ಕಾಲನೇ ಈ ಜಗತ್ತೆಲ್ಲವನ್ನೂ ವಿನಾಶಗೊಳಿಸಿದನು.”

ಜನಮೇಜಯ! ಸಂಜಯನು ಹೇಳಿದ ಅತಿಕ್ರೂರವಾದ ಮಾತುಗಳನ್ನು ಕೇಳಿದ ಧೃತರಾಷ್ಟ್ರನು ಪ್ರಾಣಹೋದವನಂತೆ ನೆಲದ ಮೇಲೆ ಬಿದ್ದು ಬಿಟ್ಟನು. ಧೃತರಾಷ್ಟ್ರನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದೊಡನೆಯೇ ಶೋಕ-ವ್ಯಸನಗಳಿಂದ ಪೀಡಿತನಾದ ವಿದುರನೂ ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು. ಸಂಜಯನು ಹೇಳಿದ ಕರ್ಣಕಠೋರವಾದ ಮಾತನ್ನು ಕೇಳಿ ಗಾಂಧಾರಿಯೂ ಮತ್ತು ಎಲ್ಲ ಕುರುಕುಲಸ್ತ್ರೀಯರೂ ಗತಪ್ರಜ್ಞರಾಗಿ ನೆಲದ ಮೇಲೆ ಬಿದ್ದರು. ದೊಡ್ಡದಾದ ಫಲಕಗಳಲ್ಲಿ ಅಂಕಿತವಾಗಿರುವ ಚಿತ್ರ ಗಳೋಪಾದಿಯಲ್ಲಿ ಪ್ರಲಾಪಯುಕ್ತವಾಗಿದ್ದ ರಾಜಮಂಡಲವು ಸಂಜ್ಞಾ ರಹಿತವಾಗಿ ಭೂಮಿಯಲ್ಲಿ ಬಿದ್ದಿದ್ದಿತು. ಸ್ವಲ್ಪಹೊತ್ತು ಕಳೆದನಂತರ ಪುತ್ರ ವ್ಯಸನದಿಂದ ಪೀಡಿತನಾಗಿದ್ದ, ಮಹೀಪತಿಯಾದ ಧೃತರಾಷ್ಟ್ರನು ಬಹಳ ಕಷ್ಟದಿಂದ ಮೆಲ್ಲ-ಮೆಲ್ಲನೆ ಮೂರ್ಛೆಯಿಂದ ಎಚ್ಚರಗೊಂಡನು. ಮೂರ್ಛೆ ಯಿಂದ ಎಚ್ಚೆತ್ತಿದ್ದರೂ ಸುದುಃಖಿತನಾಗಿದ್ದ ರಾಜನು ತರ-ತರನೆ ನಡುಗು ತ್ತಿದ್ದನು. ಎಲ್ಲ ದಿಕ್ಕುಗಳಿಗೂ ಕಣ್ಣನ್ನು ತಿರುಗಿಸಿ ಸಮೀಪದಲ್ಲಿದ್ದ ವಿದುರನೊಡನೆ ಹೇಳಿದನು:

“ವಿದ್ವಾಂಸನೇ! ಮಹಾಪ್ರಾಜ್ಞನೇ! ಭರತರ್ಷಭನೇ! ಪುತ್ರರಿಂದ ಹೀನನಾಗಿರುವ ಅನಾಥನಾಗಿರುವ ನನಗೆ ಈಗ ನೀನೇ ಪರಮಾಶ್ರಯ ನಾಗಿರುವೆ”–ಹೀಗೆಂದು ಹೇಳುತ್ತಲೇ ರಾಜನು ಪುನಃ ವಿಸಂಜ್ಞನಾದನು.

ರಾಜನು ಪುನಃ ಮೂರ್ಛಿತನಾಗಿ ಬಿದ್ದುದನ್ನು ಕಂಡು ಬಂಧುಗಳು ರಾಜನ ಮೇಲೆ ತಣ್ಣೀರು ಚುಮುಕಿಸಿದರು. ಬೀಸಣಿಗೆಗಳಿಂದ ಗಾಳಿಯನ್ನು ಬೀಸಿದರು. ಬಹಳ ಹೊತ್ತಿನನಂತರ ಧೃತರಾಷ್ಟ್ರನು ಮೂರ್ಛೆಯಿಂದ

ಎಚ್ಚರಗೊಂಡನು. ಪುತ್ರವ್ಯಸನದಿಂದ ಪೀಡಿತನಾಗಿದ್ದ ರಾಜನು ಚಿಂತಾ ಮಗ್ನನಾಗಿ ಮೌನಿಯಾಗಿ ಕುಳಿತಿದ್ದನು. ಗಡಿಗೆಯಲ್ಲಿಟ್ಟ ಹಾವಿನಂತೆ–ಧೃತರಾಷ್ಟ್ರನು ಕ್ಷಣ-ಕ್ಷಣಕ್ಕೂ ಸುದೀರ್ಘವಾಗಿ ನಿಟ್ಟುಸಿರು ಬಿಡುತ್ತಿದ್ದನು. ರಾಜನು ಹೀಗೆ ಸಂಕಟಪಡುತ್ತಿರುವುದನ್ನು ಕಂಡು ಸಂಜಯನೂ ರೋದನಮಾಡತೊಡಗಿದನು. ಅದೇ ರೀತಿಯಲ್ಲಿ ಎಲ್ಲ ಕುರುಕುಲಸ್ತ್ರೀಯರೂ ಗಾಂಧಾರಿಯೂ ಬಿಕ್ಕಿ-ಬಿಕ್ಕಿ ಅಳುತ್ತಿದ್ದರು. ಹೀಗೆಯೇ ಬಹಳ ಹೊತ್ತು ಕಳೆದನಂತರ ಕ್ಷಣ-ಕ್ಷಣಕ್ಕೂ ಮೂರ್ಛಿತನಾಗುತ್ತಿದ್ದ ಧೃತರಾಷ್ಟ್ರನು ವಿದುರನೊಡನೆ ಪುನಃ ಹೇಳಿದನು:

"ವಿದುರ! ಈ ಕುರುಕುಲಸ್ತ್ರೀಯರೆಲ್ಲರೂ ಇಲ್ಲಿಂದ ಹೊರಟು ಹೋಗಲಿ. ಯಶಸ್ವಿನಿಯಾದ ಗಾಂಧಾರಿಯೂ ಹೊರಟುಹೋಗಲಿ. ಅಂತೆಯೇ ಈ ನನ್ನ ಸುಹೃದರೂ ಇಲ್ಲಿರುವುದು ಬೇಡ. ಏಕೆಂದರೆ: ನನ್ನ ಮನಸ್ಸು ಬಹಳವಾಗಿ ಭ್ರಮೆಗೊಳ್ಳುತ್ತಿದೆ." ಧೃತರಾಷ್ಟ್ರನು ವಿದುರನೊಡನೆ ಹೀಗೆ ಹೇಳಿದನಂತರ, ಬಾರಿ-ಬಾರಿಗೂ ತತ್ತರಿಸುತ್ತಿದ್ದ ವಿದುರನು ಮೆಲ್ಲ-ಮೆಲ್ಲನೆ ಅಂತಃಪುರದ ಸ್ತ್ರೀಯರೆಲ್ಲರನ್ನೂ ಅವರವರ ಸೌಧಗಳಿಗೆ ಕಳುಹಿಸಿ ಕೊಟ್ಟನು. ಗಾಂಧಾರಿಯೇ ಮೊದಲಾದ ಸ್ತ್ರೀಯರೂ ಮತ್ತು ಸಮಸ್ತ ಹಿತೈಷಿಗಳೂ ಸಂಕಟಪಡುತ್ತಿರುವ ರಾಜನನ್ನೇ ನೋಡುತ್ತಾ ಹೊರಟು ಹೋದರು. ಪುನಃ ಮೂರ್ಛೆಯಿಂದ ಎಚ್ಚರಗೊಂಡ, ದೀನನಾಗಿದ್ದ, ರೋದನ ಮಾಡುತ್ತಿದ್ದ, ಪುತ್ರಶೋಕಪೀಡಿತನಾಗಿದ್ದ ನರಪತಿಯನ್ನು ಸಂಜಯನು ನೋಡಿದನು. ಬದ್ಧಾಂಜಲಿಯಾದ ವಿದುರನು ಬಾರಿ-ಬಾರಿಗೂ ನಿಟ್ಟುಸಿರು ಬಿಡುತ್ತಿದ್ದ ರಾಜನನ್ನು ಮಧುರವಾದ ಮಾತಿನಿಂದ ಸಂತಯಿಸಿದನು."

೧ನೆಯ ಅಧ್ಯಾಯವು ಮುಗಿಯಿತು.

೨ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ)

## ಧೃತರಾಷ್ಟ್ರರಾಜನ ವಿಲಾಪಃ ಸಂಜಯನಿಂದ ಯುದ್ಧದ ವೃತ್ತಾಂತವನ್ನು ಕೇಳಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ:

"ಜನಮೇಜಯ! ಅಂತಃಪುರದ ಸ್ತ್ರೀಯರೆಲ್ಲರೂ ಹೊರಟುಹೋದ

ನಂತರ ಒಂದು ದುಃಖವು ಮರೆಯುವುದರೊಳಗಾಗಿ ಮತ್ತೊಂದು ದುಃಖದ ವಾರ್ತೆಯನ್ನು ಕೇಳುತ್ತಿದ್ದ ಅಂಬಿಕೆಯ ಮಗನಾದ ಧೃತರಾಷ್ಟ್ರನು ಗೋಳಾಡುತ್ತಿದ್ದನು. ಅವನು ನಿಟ್ಟುಸಿರುಬಿಡುವಾಗ ಅವನ ನಿಃಶ್ವಾಸವು ಧೂಮಸಹಿತವಾಗಿರುವುದೋ ಎಂಬಂತೆ ಕಾಣುತ್ತಿದ್ದಿತು. (ನಿಟ್ಟುಸಿರು ಅಷ್ಟು ಬಿಸಿಯಾಗಿದ್ದಿತು.) ಎರಡು ಕೈಗಳನ್ನೂ ಮತ್ತೆ-ಮತ್ತೆ ಕೊಡವುತ್ತಿದ್ದನು. ಮತ್ತೊಮ್ಮೆ 'ಅಯ್ಯೋ' ಎನ್ನುತ್ತಾ ಮೇಲಕ್ಕೆತ್ತುತ್ತಿದ್ದನು. ಹೀಗೆ ತನ್ನೆರಡು ಕೈಗಳನ್ನೂ ಪುನಃ ಪುನಃ ಹಿಂದಕ್ಕೂ-ಮುಂದಕ್ಕೂ ಮೇಲಕ್ಕೂ-ಕೆಳಕ್ಕೂ ಮಾಡುತ್ತಿದ್ದನು. ಬಹಳ ಹೊತ್ತು ಚಿಂತಿಸುತ್ತಿದ್ದು ಅನಂತರ ಸಂಜಯನೊಡನೆ ಹೇಳಿದನು:

"ಸೂತ! ಪಾಂಡವರು ಕ್ಷೇಮದಿಂದಿರುವರೆಂಬುದನ್ನೂ ಮತ್ತು ಅವರೈವರಲ್ಲಿ ಯಾವ ನ್ಯೂನತೆಯೂ ಇಲ್ಲದೇ ನಾಶರಹಿತರಾಗಿರುವರೆಂಬು ದನ್ನೂ ನಿನ್ನಿಂದ ಕೇಳಿದೆನು. ಈ ವಾರ್ತೆಯು ನಿಶ್ಚಯವಾಗಿಯೂ ನನಗೆ ಅತ್ಯಂತ ದುಃಖದ ವಾರ್ತೆಯಾಗಿದೆ. ಈ ವಾರ್ತೆಯನ್ನು ನಾನು ಹೇಗೆ ಸಹಿಸಿಕೊಳ್ಳಲಿ? ಅಯ್ಯೋ! ನಿಶ್ಚಯವಾಗಿಯೂ ನನ್ನ ಹೃದಯವು ವಜ್ರದ ಸಾರದಿಂದಲೇ ನಿರ್ಮಿತವಾಗಿದ್ದು ಸುದೃಢವಾಗಿದೆ. ಏಕೆಂದರೆ: ನನ್ನ ಮಕ್ಕಳೆಲ್ಲರೂ ಹತರಾದರೆಂಬ ಸುದಾರುಣವಾದ ವಾರ್ತೆಯನ್ನು ಕೇಳಿಯೂ ನನ್ನ ಹೃದಯವು ಸಾವಿರಾರು ಚೂರುಗಳಾಗಿ ಒಡೆದುಹೋಗದೇ ಹಾಗೆಯೇ ಉಳಿದುಕೊಂಡಿದೆಯಲ್ಲವೇ? ನನ್ನ ಮಕ್ಕಳ ಪೂರ್ವವಯಸ್ಸನ್ನೂ ಮತ್ತು ಅವರ ಬಾಲಕ್ರೀಡೆಗಳನ್ನೂ ಸ್ಮರಿಸುತ್ತಾ ಅಂತಹ ನನ್ನ ಎಲ್ಲ ಪುತ್ರರೂ ಹತರಾದರೆಂದು ಮನಸ್ಸಿಗೆ ಬಂದೊಡನೆಯೇ ನನ್ನ ಹೃದಯವು ಈ ನಿಮಿಷದಲ್ಲಿ ಸೀಳಿಹೋಗಿಬಿಡುವುದೋ ಎಂದು ಭಾಸವಾಗುತ್ತದೆ. ನಾನು ಅಂಧನಾದುದರಿಂದ ನನ್ನ ಮಕ್ಕಳ ಆ ರೂಪ-ಲಾವಣ್ಯಗಳನ್ನು ಕಂಡವನಲ್ಲ. ಆದರೆ ಪುತ್ರಸ್ನೇಹದಿಂದ ಉಂಟಾದ ಪ್ರೀತಿಯು ಅವರ ಮೇಲೆ ನಿರಂತರವಾಗಿ ನನ್ನ ಮನಸ್ಸಿನಲ್ಲಿ ಸ್ಥಿರವಾಗಿದ್ದಿತು. ನನ್ನ ಮಕ್ಕಳು ಬಾಲ್ಯಾವಸ್ಥೆಯನ್ನು ದಾಟಿ ಯುವಕರಾದರೆಂಬ ವಾರ್ತೆಯನ್ನು ಕೇಳಿ ಆನಂದಿಸಿದೆನು. ಯುವಕ ರಾಗಿದ್ದವರು ಮಧ್ಯಪ್ರಾಯದವರಾದರೆಂಬ ವಾರ್ತೆಯನ್ನು ಕೇಳಿ ಪರಮ

ಹೃಷ್ಟನಾಗಿದ್ದೆನು. ಆ ನನ್ನ ಮಕ್ಕಳೇ ಇಂದು ಬಲೈಶ್ವರ್ಯಗಳಿಂದ ಹೀನರಾಗಿ ಹತರಾದರೆಂಬ ವಾರ್ತೆಯನ್ನು ಕೇಳಿ ಮಕ್ಕಳ ಸಂಬಂಧವಾದ ಮನೋರೋಗದಲ್ಲಿ ಮುಳುಗಿರುವ ನಾನು ಸ್ವಲ್ಪವಾದರೂ ಮನಃಶಾಂತಿ ಹೊಂದುತ್ತಿಲ್ಲ. (ನನ್ನ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲವಾಗಿದೆ.)" ಹೀಗೆಂದು ಸಂಜಯನೊಡನೆ ಹೇಳಿದ ಧೃತರಾಷ್ಟ್ರನು ಪುತ್ರಶೋಕದಿಂದ ಮೋಹಿತನಾಗಿ ವಿಲಪಿಸತೊಡಗಿದನು:

**ಏಹ್ಯೇಹಿ ಪುತ್ರ ರಾಜೇನ್ದ್ರ ಮಮಾನಾಥಸ್ಯ ಸಾಮ್ಪ್ರತಮ್ ।**
**ತ್ವಯಾ ಹೀನೋ ಮಹಾಬಾಹೋ ಕಾಂ ನು ಯಾಸ್ಯಾಮ್ಯಹಂ ಗತಿಮ್ ॥೯॥**

"ಬಾ ಮಗು! ಓಡಿ ಬಾ. ರಾಜೇಂದ್ರ! ಸಾರ್ವಭೌಮನೇ! ಈ ಸಮಯದಲ್ಲಿ ಅನಾಥನಾಗಿರುವ ನನ್ನ ಸಮೀಪಕ್ಕೆ ಬೇಗನೆ ಬಾ. ಮಹಾಬಾಹುವೇ! ನಿನ್ನಿಂದ ಹೀನನಾದ ನಾನು ಯಾವ ಗತಿಯನ್ನು ಹೊಂದುವೆನು? ನಿನ್ನನ್ನು ಬಿಟ್ಟರೆ ನನಗೆ ಮುಂದೆ ಗತಿಯಾರಿದ್ದಾರೆ?

ಮಗು! ನಿನ್ನಲ್ಲಿಗೆ ಬಂದಿರುವ ಮಹೀಪಾಲರೆಲ್ಲರನ್ನೂ ಬಿಟ್ಟು ಪ್ರಾಕೃತನಾದ ಮತ್ತು ಹೀನನಾದ ರಾಜನೋಪಾದಿಯಲ್ಲಿ ಹತನಾಗಿ ಭೂಮಿಯಲ್ಲೇಕೆ ಮಲಗಿರುವೆ? ಮಹಾರಾಜ! ವೀರನೇ! ನಮ್ಮ ಜ್ಞಾತಿ-ಬಾಂಧವರಿಗೂ ಮತ್ತು ಸುಹೃದರಿಗೂ ಸರ್ವದಾ ಆಶ್ರಯನಾಗಿರುತ್ತಿದ್ದ ನೀನು ಅಂಧನಾದ, ವೃದ್ಧನಾದ, ನಿನ್ನ ಪ್ರೀತಿಯ ತಂದೆಯಾದ ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ? ನಿನ್ನ ದಯಾಪರತೆ, ಪ್ರೀತಿ, ಮತ್ತೊಬ್ಬರನ್ನು ಸಮ್ಮಾನಿಸುವ ಸ್ವಭಾವ–ಇವುಗಳೆಲ್ಲವೂ ಎಲ್ಲಿಗೆ ಹೋಗಿಬಿಟ್ಟುವು? ಯುದ್ಧಗಳಲ್ಲಿ ಪರಾಜಿತನೇ ಆಗದಿದ್ದ ನಿನ್ನನ್ನು ಪಾರ್ಥರು ಹೇಗೆ ಸಂಹರಿಸಿದರು? ಪ್ರಾತಃಕಾಲದಲ್ಲಿ ಎದ್ದೊಡನೆಯೇ–'ತಾತ! ತಾತ!' 'ಮಹಾರಾಜ!' 'ಲೋಕನಾಥ!'–ಎಂದು ಹಲವಾರು ಬಾರಿ ಅಕ್ಕರೆಯಿಂದ ನನ್ನನ್ನು ಕರೆಯುವವರು ಇನ್ನು ಯಾರಿದ್ದಾರೆ? ಸ್ನೇಹದಿಂದ ಕಣ್ಣುಗಳಲ್ಲಿ ಆನಂದಬಾಷ್ಪಗಳನ್ನೂ ತುಂಬಿಕೊಂಡು ನನ್ನ ಕತ್ತನ್ನು ಬಿಗಿದುಕೊಂಡು (ಆಲಿಂಗನಮಾಡಿಕೊಂಡು) **'ತಾತ! ಅನುಶಾಧಿ**–ತಂದೆಯೇ! ನನ್ನ ಕರ್ತವ್ಯವೇನೆಂಬು

ದನ್ನು ಹೇಳು'–ಎಂಬುದಾಗಿ ಹೇಳುತ್ತಿದ್ದೆ. ಪುನಃ ನೀನು ಆ ಸುಮಧುರವಾದ ಮಾತನ್ನು ನನ್ನೊಡನೆ ಹೇಳು. ಪುತ್ರಕ!–'ನನ್ನ ಅಧಿಕಾರವ್ಯಾಪ್ತಿಗೆ ಭೂಮಂಡಲದ ಬಹುಭಾಗವು ಸೇರಿಹೋಗಿದೆ. ನಮ್ಮ ರಾಜ್ಯವು ಯುಧಿಷ್ಠಿರನ ಅಧಿಕಾರವ್ಯಾಪ್ತಿಯಲ್ಲಿದ್ದಾಗ ಇಷ್ಟೊಂದು ಭೂಭಾಗವು ನಮ್ಮ ಸಾಮ್ರಾಜ್ಯಕ್ಕೆ ಸೇರಿರಲಿಲ್ಲ'–ಎಂದು ನೀನು ಹೇಳುತ್ತಿದ್ದ ಮಾತನ್ನು ನಾನು ಹಲವು ಬಾರಿ ಕೇಳಿದ್ದೆನು.

ಭಗದತ್ತ, ಕೃಪರು, ಶಲ್ಯ, ಅವಂತಿಯ ರಾಜಕುಮಾರರಾದ ವಿಂದಾನುವಿಂದರು, ಜಯದ್ರಥ, ಭೂರಿಶ್ರವಸ, ಸೋಮದತ್ತ, ಬಾಹ್ಲಿಕ ಮಹಾರಾಜ, ಅಶ್ವತ್ಥಾಮಾ, ಕೃತವರ್ಮಾ, ಮಹಾಬಲಿಷ್ಠನಾದ ಮಗಧ ರಾಜನಾದ ಬೃಹದ್ಬಲ, ಕ್ರಾಥ, ಸುಬಲನ ಮಗನಾದ ಶಕುನಿ, ಲಕ್ಷೋಪಲಕ್ಷ ಮ್ಲೇಚ್ಛ-ಯವನ-ಶಕರು, ಕಾಂಬೋಜರಾಜನಾದ ಸುದಕ್ಷಿಣ, ತ್ರಿಗರ್ತರಾಜನಾದ ಸುಶರ್ಮಾ, ಪಿತಾಮಹನಾದ ಭೀಷ್ಮ, ಭರದ್ವಾಜರ ಮಕ್ಕಳಾದ ದ್ರೋಣರು, ಶ್ರುತಾಯುಷ, ಅಯುತಾಯುಷ, ಪರಾಕ್ರಮಿಯಾದ ಶತಾಯುಷ, ಜಲಸಂಧ, ಋಷ್ಯಶೃಂಗನ ಮಗನಾದ ಅಲಾಯುಧರಾಕ್ಷಸ, ಮಹಾಬಾಹುವಾದ ಅಲಂಬುಷ, ಮಹಾರಥನಾದ ಸುಬಾಹು–ಇವರೇ ಅಲ್ಲದೇ ಇನ್ನೂ ಅನೇಕ ರಾಜರು ನನ್ನ ಸಲುವಾಗಿ ಪ್ರಾಣೈಶ್ವರ್ಯಗಳ ಮೇಲಿನ ವ್ಯಾಮೋಹವನ್ನೂ ತೊರೆದು ಯುದ್ಧೋದ್ಯುಕ್ತರಾಗಿದ್ದಾರೆ. ಯುದ್ಧದಲ್ಲಿ ನಾನು ಅವರ ಮಧ್ಯದಲ್ಲಿ ಉಪಸ್ಥಿತನಾಗಿದ್ದು ನನ್ನ ಅನುಜರಿಂದಲೂ ಪರಿವೃತನಾಗಿ ಪಾರ್ಥ-ಪಾಂಚಾಲರನ್ನೂ, ಚೇದಿಗಳನ್ನೂ, ದ್ರೌಪದಿಯ ಮಕ್ಕಳನ್ನೂ, ಸಾತ್ಯಕಿಯನ್ನೂ, ಕುಂತಿಭೋಜನನ್ನೂ, ಘಟೋತ್ಕಚರಾಕ್ಷಸನನ್ನೂ ಎದುರಿಸಿ ನಾನೊಬ್ಬನೇ ಎಲ್ಲ ಕಡೆಗಳಿಂದಲೂ ಯುದ್ಧಮಾಡುತ್ತೇನೆ. ಯುದ್ಧದಲ್ಲಿ ನಮ್ಮ ಮೇಲೆ ಬೀಳಲು ಬರುವ ಎಲ್ಲ ಪಾಂಡವರನ್ನೂ ನಮ್ಮ ಸಹಯೋಗಿಗಳಲ್ಲಿ ಕ್ರುದ್ಧರಾದ ಒಬ್ಬೊಬ್ಬರೇ ತಡೆದು ನಿಲ್ಲಿಸುತ್ತಾರೆ. ಹೀಗಿರುವಾಗ ಪಾಂಡವರ ವಿಷಯದಲ್ಲಿ ವೈರಭಾವದಿಂದಿರುವ ಭಗದತ್ತಾದಿಗಳೆಲ್ಲರೂ ಸಂಘಟಿತರಾಗಿ ಯುದ್ಧಮಾಡಲು ಹೊರಟಿರುವಾಗ ವಿಜಯದ ವಿಷಯವಾಗಿ ಹೇಳುವುದೇನಿದೆ? ಅಥವಾ ಈ ಭಗದತ್ತಾದಿ

ಗಳೆಲ್ಲರೂ ಪಾಂಡವರ ಅನುಯಾಯಿಗಳೊಡನೆ ಯುದ್ಧಮಾಡುತ್ತಾರೆ. ಯುದ್ಧದಲ್ಲಿ ಅವರೆಲ್ಲರನ್ನೂ ಸಂಹರಿಸುತ್ತಾರೆ.

**ಕರ್ಣ ಏಕೋ ಮಯಾ ಸಾರ್ಧಂ ನಿಹನಿಷ್ಯತಿ ಪಾಣ್ಡವಾನ್ ।**
**ತತೋ ನೃಪತಯೋ ವೀರಾಃ ಸ್ಥಾಸ್ಯನ್ತಿ ಮಮ ಶಾಸನೇ ॥೨೬॥**

ನನ್ನೊಡನೆ ಕರ್ಣನೊಬ್ಬನೇ ಇದ್ದು ಯುದ್ಧದಲ್ಲಿ ಐವರು ಪಾಂಡವರನ್ನೂ ಸಂಹರಿಸುತ್ತಾನೆ. ಅನಂತರ ಭೂಮಂಡಲದ ಎಲ್ಲ ರಾಜರೂ ನನ್ನ ಆಜ್ಞಾಧಾರಕರಾಗುತ್ತಾರೆ. ಪಾಂಡವರ ನೇತಾರನಾದ ಮಹಾಬಲನಾದ ವಾಸುದೇವನು ಯುದ್ಧದ ಸಲುವಾಗಿ ಕವಚವನ್ನು ತೊಡುವುದಿಲ್ಲ. ಅರ್ಥಾತ್ ಯುದ್ಧಮಾಡುವುದಿಲ್ಲ. ಆದುದರಿಂದ ನಾವು ಸ್ವಲ್ಪವೂ ಭಯಪಡಬೇಕಾದ ಕಾರಣವಿಲ್ಲ'–ಇವೇ ಮುಂತಾಗಿ ದುರ್ಯೋಧನನು ನನ್ನೊಡನೆ ಹಲವಾರು ಬಾರಿ ಹೇಳುತ್ತಲೇ ಇದ್ದನು. ಸಂಜಯ! ನನ್ನ ಸಮೀಪದಲ್ಲಿ ಹೀಗೆ ದುರ್ಯೋಧನನು ಪದೇ-ಪದೇ ಹೇಳುತ್ತಿದ್ದುದ ರಿಂದ, ನಮ್ಮ ಶಕ್ತಿಯಿಂದ ಸಮಸ್ತಪಾಂಡವರೂ ರಣಭೂಮಿಯಲ್ಲಿ ಹತರಾಗಿ ಹೋದರೆಂದೇ ನಾನು ಭಾವಿಸಿಬಿಟ್ಟಿದ್ದೆನು. ಭಗದತ್ತನೇ ಮೊದಲಾದ ವೀರರ ಮಧ್ಯದಲ್ಲಿದ್ದೂ ಪ್ರಯತ್ನಪೂರ್ವಕವಾಗಿ ಯುದ್ಧಮಾಡುತ್ತಿದ್ದ ನನ್ನ ಮಕ್ಕಳೂ ಹತರಾದರೆಂದಮೇಲೆ ಇದು ಕೇವಲ ಪಾಂಡವರ ಸೌಭಾಗ್ಯವಲ್ಲದೇ ಮತ್ತೇನು? ಸಂಜಯ! ಲೋಕನಾಥನಾದ, ಪ್ರತಾಪವಂತನಾದ ಭೀಷ್ಮನು–ಸಿಂಹವು ಗುಳ್ಳೇನರಿಯನ್ನು ಎದುರಿಸಿ ಹತವಾದಂತೆ–ಶಿಖಂಡಿಯನ್ನೆದುರಿಸಿ ಹತನಾದನು. ಸರ್ವಶಸ್ತ್ರಾಸ್ತ್ರಪಾರಂಗತರಾದ ಬ್ರಾಹ್ಮಣೋತ್ತಮರಾದ ದ್ರೋಣರು ಯುದ್ಧದಲ್ಲಿ ಪಾಂಡವರಿಂದ ಹತರಾದರು. ಪಾಂಡವರ ಸೌಭಾಗ್ಯದ ಕಾರಣದಿಂದಲ್ಲದೇ ಬೇರಾವ ಕಾರಣದಿಂದ ಹೀಗಾಯಿತು? ದಿವ್ಯಾಸ್ತ್ರಜ್ಞನಾದ, ಮಹಾಬಲನಾದ ಕರ್ಣನು ಹತನಾದನು. ಭೂರಿಶ್ರವಸ, ಸೋಮದತ್ತ, ಬಾಹ್ಲಿಕಮಹಾರಾಜ–ಇವರೆಲ್ಲರೂ ಯುದ್ಧದಲ್ಲಿ ಹತರಾದರು. ಇದು ಕೇವಲ ಪಾಂಡವರ ಅದೃಷ್ಟವಲ್ಲದೇ ಮತ್ತೇನು? ಸಂಜಯ! ಗಜಯುದ್ಧವಿಶಾರದನಾದ ಭಗದತ್ತನು ಹತನಾದನು. ಜಯದ್ರಥನೂ ಹತನಾದನು. ಇದು ಕೇವಲ ಪಾಂಡವರ ಅದೃಷ್ಟದ ಕಾರಣದಿಂದಲ್ಲದೇ ಮತ್ಯಾವ ಕಾರಣದಿಂದ ಈ ಮಹಾತ್ಮರು

ಹತರಾದರು? ಕಾಂಬೋಜರಾಜನಾದ ಸುದಕ್ಷಿಣನು ಹತನಾದನು. ಪೌರವ–ಜಲಸಂಧನು ಹತನಾದನು. ಶ್ರುತಾಯುಷಾಯುತಾಯುಷರೂ ಪ್ರಾಣ ತ್ಯಾಗಮಾಡಿದರು. ಇಂತಹ ಮಹಾಪರಾಕ್ರಮಿಗಳೂ ಅಸುನೀಗಬೇಕಾದರೆ ಪಾಂಡವರ ಸೌಭಾಗ್ಯದ ಕಾರಣವನ್ನು ಬಿಟ್ಟು ಬೇರಾವ ಕಾರಣವೂ ಇಲ್ಲ.

ಮಹಾಬಲನಾದ ಸರ್ವಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠನಾದ ಪಾಂಡ್ಯ ರಾಜನು ಪಾಂಡವರಿಂದ ಹತನಾದನು. ಇದಕ್ಕೂ ಸಹ ಪಾಂಡವರ ಅದೃಷ್ಟವೇ ಮುಖ್ಯಕಾರಣವಾಗಿದೆ. ಬೃಹದ್ಬಲ, ಮಹಾಬಲನಾದ ಮಾಗಧ, ಧನುರ್ಧಾರಿಗಳಲ್ಲಿ ಆದರ್ಶಪ್ರಾಯನಾಗಿದ್ದ ಮತ್ತು ಮಹಾಪರಾ ಕ್ರಮಿಯಾಗಿದ್ದ ಉಗ್ರಾಯುಧ, ಅವಂತಿಯ ರಾಜಕುಮಾರರು, ತ್ರಿಗರ್ತ ರೊಡೆಯನಾದ ಸುಶರ್ಮಾ, ಸಂಶಪ್ತಕರು–ಇಂತಹ ಮಹಾ-ಮಹಾವೀರ ರೆಲ್ಲರೂ ಹತರಾಗಿ ಹೋದರು. ಇದು ದೈವದ ವಿಚಿತ್ರಗತಿಯಲ್ಲದೇ ಮತ್ತೇನು? ಸಂಜಯ! ಮಹಾಶೂರನಾದ ಅಲಂಬುಷನೂ, ಋಷ್ಯಶೃಂಗನ ಮಗನಾದ ಅಲಾಯುಧರಾಕ್ಷಸನೂ ಮಹಾಯುದ್ಧದಲ್ಲಿ ಹತರಾದರು. ಇದು ನಮ್ಮ ದೌರ್ಭಾಗ್ಯ ಅಥವಾ ಪಾಂಡವರ ಸೌಭಾಗ್ಯ ಎಂದು ಹೇಳದೇ ಬೇರೇನು ಹೇಳಲು ಸಾಧ್ಯವಿದೆ? ಯುದ್ಧದುರ್ಮದರಾಗಿದ್ದ ನಾರಾಯಣರೆಂಬ ಗೋಪಾಲಕರೂ, ಹಲವು ಸಾವಿರ ಮಂದಿ ಮ್ಲೇಚ್ಛರೂ ಈ ಯುದ್ಧದಲ್ಲಿ ವಿನಾಶಹೊಂದಿದರು. ಇದು ದೈವದ ದುರ್ವಿಪಾಕವಲ್ಲದೇ ಮತ್ತೇನು? ಸಂಜಯ! ಮಹಾಬಲಿಷ್ಠನಾದ, ಜೂಜುಕೋರನಾದ ಸುಬಲನ ಮಗನಾದ ಶಕುನಿಯೂ ತನ್ನ ಸೈನ್ಯಸಮೇತನಾಗಿ ವಿನಾಶಹೊಂದಿದನು. ಹೀಗಾಗಲು ಪಾಂಡವರ ಸೌಭಾಗ್ಯದ ಕಾರಣವಲ್ಲದೇ ಬೇರೆ ಯಾವ ಕಾರಣವಿದೆ? ಇವರೇ ಅಲ್ಲದೆ ಯುದ್ಧದುರ್ಮದರಾದ, ಅಸ್ತ್ರವಿದ್ಯಾಪಾರಂಗತರಾದ, ಪರಿಘಾಯುಧದಂತೆ ತೋಳುಗಳನ್ನು ಹೊಂದಿದ್ದ ಅನೇಕರಾಜರು ಮತ್ತು ರಾಜಪುತ್ರರೂ ಅಪಾರಸಂಖ್ಯೆಯಲ್ಲಿ ಹತರಾದರು. ಇವರ ಸಂಹಾರವು ದೈವದ ಇಚ್ಛೆಯಂತೆ ನಡೆದಿರುವುದೇ ಹೊರತು ಪುರುಷಪ್ರಯತ್ನವೇನೂ ಇದರಲ್ಲಿ ಕಾಣುವುದಿಲ್ಲ. ಮಹಾಧನುಷ್ಮಂತರಾದ, ಅಸ್ತ್ರಕುಶಲರಾದ, ಯುದ್ಧದುರ್ಮದರಾದ, ಮಹೇಂದ್ರಸಮಪರಾಕ್ರಮರಾದ, ನಾನಾದೇಶ ಗಳಿಂದ ಆಗಮಿಸಿದ್ದ ಕ್ಷತ್ರಿಯರು ಅಪಾರಸಂಖ್ಯೆಯಲ್ಲಿ ನಿಧನಹೊಂದಿದರು.

ಇದಕ್ಕೆ ಪಾಂಡವರ ಅದೃಷ್ಟವು ಕಾರಣವೇ ಹೊರತು ಅವರ ಪೌರುಷವು ಕಾರಣವಲ್ಲ. ನನ್ನ ಮಕ್ಕಳೆಲ್ಲರೂ ಹತರಾದರು. ಮಹಾಬಲರಾದ ಮೊಮ್ಮಕ್ಕಳೂ ಹತರಾದರು. ಸ್ನೇಹಿತರೂ-ಸಹೋದರರೂ ಎಲ್ಲರೂ ಹತರಾದರು. (ಧೃತರಾಷ್ಟ್ರನ ವಂಶವೇ ನಿರ್ನಾಮವಾಗಿ ಹೋಯಿತು.) ಇದು ನನ್ನ ದೌರ್ಭಾಗ್ಯವಲ್ಲದೇ ಮತ್ತೇನು? ಸಂಜಯ!

**ಭಾಗಧೇಯಸಮಾಯುಕ್ತೋ ಧ್ರುವಮುತ್ಪದ್ಯತೇ ನರಃ ।**
**ಯಸ್ತು ಭಾಗ್ಯಸಮಾಯುಕ್ತಃ ಸ ಶುಭಂ ಪ್ರಾಪ್ನುಯಾನ್ನರಃ ॥೪೬॥**

ಮಾನವನು ತನ್ನ ಸೌಭಾಗ್ಯವನ್ನೋ ಅಥವಾ ದೌರ್ಭಾಗ್ಯವನ್ನೋ ಬೆನ್ನಿನಲ್ಲಿ ಹೊತ್ತುಕೊಂಡೇ ಹುಟ್ಟುತ್ತಾನೆ. ಸೌಭಾಗ್ಯದಿಂದ ಕೂಡಿ ಹುಟ್ಟಿದವನು ಶುಭಫಲಗಳನ್ನೇ ಪಡೆಯುತ್ತಾನೆ. ಆದರೆ ನಾನು ಅಂತಹ ಸೌಭಾಗ್ಯಗಳಿಂದ ವಂಚಿತನಾಗಿದ್ದೇನೆ. ಮಕ್ಕಳಿಂದಲೂ ವಿಯುಕ್ತನಾಗಿರು ತ್ತೇನೆ. ವೃದ್ಧನಾದ ನಾನು ಶತ್ರುವಶನಾಗಿ ಹೇಗೆ ತಾನೇ ಬದುಕಿರಲಿ? ಸಂಜಯ! ಈ ಸಮಯದಲ್ಲಿ ವನವಾಸಕ್ಕಿಂತಲೂ ಶ್ರೇಷ್ಠವಾದ ಮಾರ್ಗವು ನನಗೆ ಮತ್ತಾವುದೂ ಕಾಣುತ್ತಿಲ್ಲ ಜ್ಞಾತಿ-ಬಾಂಧವರ ವಿನಾಶವಾದನಂತರ ನಾನು ಬಂಧು-ಬಾಂಧವರಿಂದ ರಹಿತನಾಗಿದ್ದೇನೆ. (ನನಗೆ ಹೇಳಿ-ಕೇಳುವವರೂ ಯಾರೂ ಉಳಿದಿಲ್ಲ.) ಆದುದರಿಂದ ನಾನು ಅರಣ್ಯಕ್ಕೆ ಹೊರಟುಹೋಗುತ್ತೇನೆ. ರೆಕ್ಕೆಗಳನ್ನು ಕತ್ತರಿಸಿದ ಪಕ್ಷಿಯಂತೆ—ಈ ದುರವಸ್ಥೆಯನ್ನು ಹೊಂದಿರುವ ನನಗೆ ವನವಾಸಕ್ಕೆ ಹೋಗುವುದಕ್ಕಿಂತಲೂ ಹೆಚ್ಚಿನ ಶ್ರೇಯಸ್ಸು ಬೇರೆ ಯಾವುದರಿಂದಲೂ ಲಭಿಸುವುದಿಲ್ಲ. ಯುದ್ಧದಲ್ಲಿ ದುರ್ಯೋಧನನು ಹತನಾದನು. ಶಲ್ಯನು ಹತನಾದನು. ದುಃಶಾಸನ, ವಿವಿಂಶತಿ, ಮಹಾಬಲನಾದ ವಿಕರ್ಣ—ಇವರೆಲ್ಲರೂ ಹತರಾದರು. ಭೀಮಸೇನನೊಬ್ಬನೇ ನನ್ನ ನೂರು ಮಕ್ಕಳನ್ನೂ ಸಂಹರಿಸಿದನು. ಅಂತಹ ಭೀಮಸೇನನ ಉಚ್ಚಸ್ವರದ ಗರ್ಜನೆಯನ್ನು ನಾನು ಹೇಗೆ ತಾನೇ ಕೇಳಲಿ? (ಆ ಗರ್ಜನೆಯನ್ನು ಸಹಿಸಿಕೊಳ್ಳುವುದೆಂತು?) ದುರ್ಯೋಧನನ ವಧೆಯಿಂದಾಗಿ ದುಃಖ-ಶೋಕಗಳಿಂದ ಪರಿತಪಿಸುತ್ತಿರುವ ನಾನು, ಪುನಃ ಪುನಃ ಹೇಳುವ ಭೀಮಸೇನನ ಕರ್ಣಕಠೋರವಾದ ಚುಚ್ಚುಮಾತುಗಳನ್ನು ಖಂಡಿತ ವಾಗಿಯೂ ಕೇಳಲಾರೆನು.”

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ:

“ಜನಮೇಜಯ! ಇವೇ ಮುಂತಾದ ಮಾತುಗಳಿಂದ ಧೃತರಾಷ್ಟ್ರನು ತನಗೊದಗಿರುವ ಅಪಾರದುಃಖವನ್ನು ಸಂಜಯನ ಮುಂದೆ ತೋಡಿ ಕೊಂಡನು. ಮಹಾರಾಜ! ನಾನು ಹಿಂದೆಯೇ ಹೇಳಿದಂತೆ ವೃದ್ಧನಾಗಿದ್ದ, ಬಂಧುಗಳೆಲ್ಲರನ್ನೂ ಕಳೆದುಕೊಂಡಿದ್ದ ಧೃತರಾಷ್ಟ್ರನು ಬಹಳವಾಗಿ ಪರಿತಪಿಸು ತ್ತಿದ್ದನು. ಕ್ಷಣ-ಕ್ಷಣಕ್ಕೂ ದುಃಖವನ್ನು ತಾಳಲಾರದೇ ಮೂರ್ಛೆಹೋಗು ತ್ತಿದ್ದನು. ಪುತ್ರಶೋಕವೆಂಬ ಮನೋರೋಗದಲ್ಲಿ ಮುಳುಗಿಹೋಗಿದ್ದನು.



ಬಹಳ ಹೊತ್ತು ವಿಲಾಪಮಾಡುತ್ತಲೇ ಇದ್ದನು. ತನ್ನ ಮಗನಿಗಾದ ಪರಾಭವವನ್ನು ಚಿಂತಿಸುತ್ತಾ ಸುದೀರ್ಘವಾದ ಮತ್ತು ಬಿಸಿಯಾದ ನಿಟ್ಟುಸಿರುಬಿಡುತ್ತಿದ್ದನು. ಪುತ್ರಶೋಕದ ದುಃಖದಿಂದ ಬಹಳವಾಗಿ ಪರಿತಪಿಸುತ್ತಿದ್ದನು. ಸ್ವಲ್ಪಹೊತ್ತು ಕಳೆದನಂತರ ಪುನಃ ಗವಲ್ಗಣನ ಮಗನಾದ ಸಂಜಯನನ್ನು ಪ್ರಶ್ನಿಸಿದನು:

“ಸಂಜಯ! ನಮ್ಮ ಸೈನ್ಯದ ದಂಡನಾಯಕರಾಗಿದ್ದ ಭೀಷ್ಮ-ದ್ರೋಣರು ಹತರಾದನಂತರ ನೇತಾರನಾಗಿದ್ದ, ಸೇನಾಪತಿಯಾಗಿದ್ದ ಕರ್ಣನೂ ಹತನಾದುದನ್ನು ಕೇಳಿ ನನ್ನ ಮಕ್ಕಳು ಮುಂದೇನು ಮಾಡಿದರು? ನನ್ನ ಮಕ್ಕಳು ಯಾರು-ಯಾರನ್ನು ಸೇನಾನಾಯಕರನ್ನಾಗಿ ಮಾಡು

ತ್ತಿದ್ದರೋ–ಅವರೆಲ್ಲರನ್ನೂ ಅತ್ಯಲ್ಪಕಾಲದಲ್ಲಿಯೇ ಪಾಂಡವರು ಸಂಹಾರ ಮಾಡುತ್ತಿದ್ದರು. ರಣಾಂಗಣದ ಅಗ್ರಭಾಗದಲ್ಲಿ ನೀವೆಲ್ಲರೂ ನೋಡುತ್ತಿದ್ದಂತೆಯೇ ಪ್ರಥಮದಂಡನಾಯಕನಾಗಿದ್ದ ಭೀಷ್ಮನು ಅರ್ಜುನನಿಂದ ಹತನಾದನು. ಅದೇ ರೀತಿಯಲ್ಲಿ ಎಲ್ಲರೂ ನೋಡುತ್ತಿದ್ದಂತೆಯೇ ದ್ರೋಣರೂ ಕೊಲ್ಲಲ್ಪಟ್ಟರು. ಪ್ರತಾಪವಂತನಾದ, ಸೂತಪುತ್ರನಾದ ಕರ್ಣನೂ ಎಲ್ಲ ರಾಜರ ಸಮೇತನಾಗಿ ನೀವೆಲ್ಲರೂ ನೋಡುತ್ತಿದ್ದಂತೆಯೇ ಅರ್ಜುನನಿಂದ ಹತನಾದನು. ಮಹಾತ್ಮನಾದ ವಿದುರನು ಬಹಳ ಹಿಂದೆಯೇ ದುರ್ಯೋಧನನ ಅಪರಾಧದಿಂದ ಪ್ರಜಾನಾಶವಾಗುವುದೆಂದು ಹೇಳಿದ್ದನು.

**ಕೇಚಿನ್ನ ಸಮ್ಯಕ್ಪಶ್ಯನ್ತಿ ಮೂಢಾಃ ಸಮ್ಯಗವೇಕ್ಷ್ಯ ಚ ।**
**ತದಿದಂ ಮಮ ಮೂಢಸ್ಯ ತಥಾಭೂತಂ ವಚಃ ಸ್ಮ ತತ್ ॥೬೧॥**

ಕೆಲವು ಮೂಢರು ವಿಷಯಗಳನ್ನು ಚೆನ್ನಾಗಿ ಪರಿಶೀಲಿಸಿದ್ದರೂ ಅದರ ಕಡೆಗೆ ಸರಿಯಾಗಿ ಗಮನಕೊಡುವುದಿಲ್ಲ. ನೋಡಿಯೂ ನೋಡದವರಂತೆ, ತಿಳಿದೂ ತಿಳಿಯದವರಂತೆ ಇದ್ದುಬಿಡುತ್ತಾರೆ. ಪರಮಮೂಢನಾದ ನನ್ನ ವಿಷಯದಲ್ಲಿಯೂ ಹೀಗೆಯೇ ಆಯಿತು. ವಿದುರನು ಹೇಳಿದ್ದ ಮಹತ್ವಪೂರ್ಣವಾದ ವಚನವನ್ನೂ ನಾನು ತೃಣೀಕರಿಸಿದೆನು. ಅವನು ನೂರಾರು ಬಾರಿ ಹೇಳಿದ ಮಾತನ್ನು ಕೇಳಿಸಿಕೊಂಡೂ ಕಿವುಡನಂತೆಯೇ ವರ್ತಿಸಿದೆನು. ಮುಂದೇನಾಗುವುದೆಂಬುದನ್ನು ಇಂದೇ ತಿಳಿಯುವ ಸಾಮರ್ಥ್ಯವಿದ್ದ ಧರ್ಮಾತ್ಮನಾದ ವಿದುರನು ಯಾವ ಮಾತನ್ನು ಹೇಳಿದ್ದನೋ ಸತ್ಯವಾದಿಯಾದ ಅವನ ಆ ಮಾತು ಯಥಾರ್ಥವಾಗಿಯೇ ಪರಿಣಮಿಸಿತು. ಆ ಸಮಯದಲ್ಲಿ ನನ್ನ ಬುದ್ಧಿಯನ್ನು ದೈವವೇ ಹಾಳುಮಾಡಿಬಿಟ್ಟಿದ್ದಿತು. ಈ ಕಾರಣದಿಂದಲೇ ನಾನು ವಿದುರನು ಹೇಳಿದಂತೆ ಮಾಡಲಿಲ್ಲ. ಆ ನನ್ನ ಅನೀತಿಯ ಫಲವನ್ನು ಪುನಃ ಸವಿಸ್ತರವಾಗಿ ಹೇಳು.

ಕರ್ಣನು ಹತನಾದನಂತರ ನಮ್ಮ ಸೈನ್ಯದ ಅಗ್ರಭಾಗದಲ್ಲಿ ಯಾರು ನಿಂತಿದ್ದರು? (ಯಾರು ಸೇನಾಪತಿಗಳಾದರು?) ಅರ್ಜುನ-ವಾಸುದೇವರನ್ನು ಯುದ್ಧದಲ್ಲಿ ಯಾರು ಎದುರಿಸಿದರು? ಕೃಷ್ಣಾರ್ಜುನರೊಡನೆ ಯುದ್ಧ ಮಾಡಲು ಇಚ್ಛಿಸಿದ್ದ ಮದ್ರರಾಜನ ರಥದ ಬಲಭಾಗದ ಚಕ್ರವನ್ನು ಯಾರು

ರಕ್ಷಿಸುತ್ತಿದ್ದರು? ಎಡಭಾಗದ ಚಕ್ರವನ್ನು ಯಾರು ರಕ್ಷಿಸುತ್ತಿದ್ದರು? ಶಲ್ಯನ ಪೃಷ್ಠರಕ್ಷಕರು ಯಾರಾಗಿದ್ದರು? ನೀವೆಲ್ಲರೂ ಸಂಘಟಿತರಾಗಿ ಯುದ್ಧಮಾಡುತ್ತಿದ್ದಾಗ ಮದ್ರರಾಜನಾದ ಶಲ್ಯನೂ ನನ್ನ ಮಗ ದುರ್ಯೋಧನನೂ ಪಾಂಡವರಿಂದ ಹೇಗೆ ಹತರಾದರು? ಭಾರತರ ಈ ಮಹಾವಿನಾಶವನ್ನು ನೀನು ನನಗೆ ಯಥಾವತ್ತಾಗಿ ಹೇಳು. ನನ್ನ ಮಗನಾದ ದುರ್ಯೋಧನನೂ ಹೇಗೆ ಹತನಾದನೆಂಬುದನ್ನೂ ಹೇಳು, ಸಂಜಯ!

ಅನುಯಾಯಿಗಳಿಂದ ಕೂಡಿದ್ದ ಪಾಂಚಾಲರೆಲ್ಲರೂ ಹೇಗೆ ಹತರಾದರು? ಧೃಷ್ಟದ್ಯುಮ್ನ, ಶಿಖಂಡೀ, ದ್ರೌಪದಿಯ ಐವರು ಮಕ್ಕಳು–ಇವರ ವಧೆಯು ಹೇಗಾಯಿತು? ನೀನು ಹೇಳಿದಂತೆ ಐವರು ಪಾಂಡವರು, ಸಾತ್ಯಕಿ-ಕೃಷ್ಣರು, ಕೃಪ-ಕೃತವರ್ಮಾಶ್ವತ್ಥಾಮರು ಮಾತ್ರವೇ ಯುದ್ಧದಲ್ಲಿ ಜೀವಂತರಾಗಿ ಉಳಿದರು. ಯಾವುದು ಹೇಗೆ ನಡೆಯಿತು? ಯುದ್ಧವು ಯಾವ ರೀತಿಯಲ್ಲಿ ನಡೆಯಿತು?–ಈ ಎಲ್ಲ ವಿಷಯಗಳನ್ನೂ ನಾನು ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ನೀನು ಯುದ್ಧವಾರ್ತೆಯನ್ನು ವಿವರಿಸಿ ಹೇಳುವುದರಲ್ಲಿ ಬಹಳ ಕುಶಲನಾಗಿರುವೆ, ಸಂಜಯ!"

೨ನೆಯ ಅಧ್ಯಾಯವು ಮುಗಿಯಿತು.

೩ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ)

## ಕರ್ಣನ ವಧೆಯಾದನಂತರ ಕೌರವಸೈನ್ಯದ ಪಲಾಯನ: ಭೀಮಸೇನನು ಇಪ್ಪತ್ತೈದು ಸಾವಿರ ಪದಾತಿಸೈನಿಕರನ್ನು ಸಂಹರಿಸಿದುದು: ದುರ್ಯೋಧನನು ತನ್ನ ಸೈನಿಕರನ್ನು ಸಮಾಧಾನಗೊಳಿಸಿ ಪುನಃ ಅವರನ್ನು ಪಾಂಡವರೊಡನೆ ಯುದ್ಧದಲ್ಲಿ ತೊಡಗಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಪರಸ್ಪರವಾಗಿ ಸಂಘರ್ಷಿಸಿದ ಕುರು-ಪಾಂಡವರ ಮಹಾಕ್ಷಯವು ಹೇಗಾಯಿತೆಂಬುದನ್ನು ಹೇಳುವೆನು, ಏಕಾಗ್ರಚಿತ್ತನಾಗಿ ಕೇಳು. ಮಹಾತ್ಮನಾದ ಅರ್ಜುನನು ಕರ್ಣನನ್ನು ಸಂಹರಿಸಿದನು. ಕುರುನಾಯಕರು ಎಷ್ಟೆಷ್ಟೇ ಸಮಾಧಾನಹೇಳಿ ಪ್ರೋತ್ಸಾಹದ ಮಾತುಗಳನ್ನಾಡಿ

ತಮ್ಮ ಸೈನಿಕರನ್ನು ಯುದ್ಧಕ್ಕೆ ಹಿಂದಿರುಗುವಂತೆ ಪುನಃ-ಪುನಃ ಪ್ರಯತ್ನಿಸುತ್ತಿದ್ದರೂ ನಿನ್ನ ಕಡೆಯ ಸೈನಿಕರೆಲ್ಲರೂ ಪಲಾಯನಪರಾಯಣರಾಗಿಯೇ ಇದ್ದರು. ರಣಭೂಮಿಯಲ್ಲಿ ಮಾನವಶರೀರಗಳ ಮಹಾಸಂಹಾರವೇ ಆಗುತ್ತಿದ್ದಿತು. ಕರ್ಣನು ಹತನಾಗಲಾಗಿ ಪಾರ್ಥನು ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಆ ಸಮಯದಲ್ಲಿ ನಿನ್ನ ಮಕ್ಕಳನ್ನು ಭಯವು ಆವರಿಸಿತು. ಸೇನಾಪತಿಯಾದ ಕರ್ಣನು ಹತನಾಗಲಾಗಿ, ನಿನ್ನ ಕಡೆಯ ಯಾವ ಒಬ್ಬ ಯೋಧನಿಗೂ ಸೈನ್ಯವನ್ನು ಸಂಘಟಿಸುವುದಕ್ಕಾಗಲೀ, ಪರಾಕ್ರಮವನ್ನು ತೋರಿಸುತ್ತಾ ಯುದ್ಧಮಾಡುವುದಕ್ಕಾಗಲೀ ಮನಸ್ಸೇ ಇರಲಿಲ್ಲ. ಅಗಾಧವಾದ ಸಮುದ್ರದ ಮಧ್ಯದಲ್ಲಿ ನಾವೆಯು ಭಿನ್ನವಾಗಲಾಗಿ ನೌಕಾರಹಿತರಾದ ವ್ಯಾಪಾರಿಜನರು ಭಯಗ್ರಸ್ತರಾಗುವಂತೆ–ಯುದ್ಧಸಾಗರದಲ್ಲಿದ್ದ ಕೌರವಸೈನಿಕರಿಗೆ ದ್ವೀಪದ ರೂಪದಲ್ಲಿದ್ದ ಕರ್ಣನನ್ನು ಪಾರ್ಥನು ಸಂಹರಿಸಿದನಂತರ ಬಾಣಗಳಿಂದ ಕ್ಷತ-ವಿಕ್ಷತರಾದ ಕೌರವ ಯೋಧರು ಭಯಪೀಡಿತರಾದರು. ನಾಯಕನಿಂದ ರಹಿತರಾಗಿದ್ದ ಅವರು ತಮ್ಮನ್ನು ರಕ್ಷಿಸುವ ಸಾಮರ್ಥ್ಯವುಳ್ಳ ನಾಯಕನೊಬ್ಬನನ್ನು ಅಪೇಕ್ಷಿಸುತ್ತಿದ್ದರು. ಸಿಂಹದಿಂದ ಪೀಡಿತವಾದ ಮೃಗಗಳಂತೆಯೂ, ಕೊಂಬುಗಳನ್ನು ಕಳೆದುಕೊಂಡ ಎತ್ತುಗಳಂತೆಯೂ, ವಿಷದ ಹಲ್ಲುಗಳನ್ನು ಕಿತ್ತ ಸರ್ಪಗಳಂತೆಯೂ–ಅವರ ಆಗಿನ ಸ್ಥಿತಿಯಿದ್ದಿತು.

ನಮ್ಮಲ್ಲಿ ಅನೇಕವೀರರು ಹತರಾಗಿದ್ದರು. ಕೆಲವರು ನಿಶಿತವಾದ ಬಾಣಗಳಿಂದ ಚುಚ್ಚಲ್ಪಟ್ಟವರಾಗಿ ವಿಧ್ವಸ್ತರಾಗುವುದರಲ್ಲಿದ್ದರು. (ಪ್ರಾಣ ಬಿಡುವುದರಲ್ಲಿದ್ದರು.) ಸಾಯಂಕಾಲದ ವೇಳೆಗೆ ನಾವೆಲ್ಲರೂ ಸವ್ಯಸಾಚಿಯಿಂದ ಪರಾಜಿತರಾಗಿ ಶಿಬಿರಗಳಿಗೆ ಹಿಂದಿರುಗಿದೆವು. ಸೂತಪುತ್ರನು ಹತನಾಗಲಾಗಿ ಹರಿದುಹೋಗಿದ್ದ ಕವಚಗಳುಳ್ಳ, ಯಾವ ದಿಕ್ಕಿಗೆ ಹೋಗಬೇಕೆಂಬುದೇ ತಿಳಿಯದೇ ಇದ್ದ, ಬುದ್ಧಿಗೆಟ್ಟಿದ್ದ ನಿನ್ನ ಮಕ್ಕಳು ಭಯದಿಂದ ದಿಕ್ಕಾಪಾಲಾಗಿ ಓಡಿಹೋದರು. ಅವರು ತಾವೇ ಪರಸ್ಪರವಾಗಿ ಪ್ರಹರಿಸಿಕೊಳ್ಳುತ್ತಾ ಭಯದಿಂದ ಎಲ್ಲ ದಿಕ್ಕುಗಳನ್ನೂ ನೋಡುತ್ತಾ– **'ಮಾಮೇವ ನೂನಂ ಬೀಭತ್ಸುರ್ಮಾಮೇವ ಚ ವೃಕೋದರಃ ಅಭಿಯಾಸ್ಯತಿ**–ನಿಶ್ಚಯವಾಗಿಯೂ ಅರ್ಜುನನು ನನ್ನನ್ನೇ ಬೆನ್ನಟ್ಟಿ

ಬರುತ್ತಿದ್ದಾನೆ. ವೃಕೋದರನು ನನ್ನ ಹಿಂದೆಯೇ ಅಟ್ಟಿಸಿಕೊಂಡು ಬರುತ್ತಿದ್ದಾನೆ'–ಎಂಬುದಾಗಿ ಭಾವಿಸಿಕೊಂಡು ಗಾಬರಿಯಿಂದ ರಣಾಂಗಣದಲ್ಲಿ ಬಿದ್ದುಹೋಗುತ್ತಿದ್ದರು. ಕೆಲವರು ತೂರಾಡುತ್ತಿದ್ದರು. ಕೆಲವರು ಕುದುರೆ



ಗಳನ್ನೂ, ಕೆಲವರು ಆನೆಗಳನ್ನೂ, ಕೆಲವು ಮಹಾರಥರು ರಥಗಳನ್ನೂ ಹತ್ತಿಕೊಂಡು ಪದಾತಿಸೈನಿಕರನ್ನು ಅಲ್ಲಿಯೇ ಬಿಟ್ಟು ಭಯದ ಕಾರಣದಿಂದ ಅತ್ಯಂತ ವೇಗವಾಗಿ ಓಡಿಹೋದರು. ಕುರುಸೈನಿಕರು ಭೀತರಾಗಿ ಪಲಾಯನಮಾಡುತ್ತಿದ್ದಾಗ ಆನೆಗಳು ರಥಗಳನ್ನು ಧ್ವಂಸಮಾಡಿದುವು. ಮಹಾರಥರು ಕುದುರೆಸವಾರರನ್ನು ಧ್ವಂಸಮಾಡಿದರು. ಕುದುರೆಗಳ ಗುಂಪುಗಳು ಪದಾತಿಸೈನಿಕರನ್ನು ವಿನಾಶಗೊಳಿಸಿದುವು. ನಿಬಿಡವಾದ ಅರಣ್ಯದಲ್ಲಿ

ಗುಂಪಿನಿಂದ ಬೇರ್ಪಟ್ಟ ಅನಾಥರು ವಿಪತ್ತಿನಲ್ಲಿ ಸಿಕ್ಕಿಬೀಳುವಂತೆ–ಸೂತ ಪುತ್ರನು ಹತನಾದನಂತರ ನಿನ್ನ ಕಡೆಯ ಯೋಧರು ವಿಪತ್ತಿಗೊಳಗಾದರು. ಕೆಲವು ಆನೆಗಳ ಮಾವಟಿಗರೇ ಸತ್ತುಹೋಗಿದ್ದರು. ಕೆಲವು ಆನೆಗಳು ಸೊಂಡಿಲುಗಳನ್ನೇ ಕಳೆದುಕೊಂಡಿದ್ದುವು. ಭಯಪೀಡಿತರಾದ ನಿನ್ನ ಕಡೆಯ ಯೋಧರು ಸಂಪೂರ್ಣಜಗತ್ತೂ ಅರ್ಜುನಮಯವಾಗಿರುವುದೆಂದೇ ಭಾವಿಸಿದರು. ಭಯಗ್ರಸ್ತರಾದ ಅವರಿಗೆ ಎಲ್ಲೆಡೆಗಳಲ್ಲಿಯೂ ಪಾರ್ಥನೇ ಕಾಣುತ್ತಿದ್ದನು. ಭೀಮಸೇನನ ಭಯದಿಂದ ಪೀಡಿತರಾಗಿ ಪಲಾಯನ ಮಾಡುತ್ತಿದ್ದ ಸರ್ವಸೈನಿಕರನ್ನೂ ನೋಡುತ್ತಿದ್ದ ದುರ್ಯೋಧನನು ಹಾಹಾಕಾರಮಾಡುತ್ತಾ ತನ್ನ ಸೂತನೊಡನೆ ಈ ಮಾತನ್ನು ಹೇಳಿದನು:

"ಸೂತ! ಸರ್ವಸೈನಿಕರ ಹಿಂಭಾಗದಲ್ಲಿ ಧನುಷ್ಪಾಣಿಯಾಗಿ ನಿಂತು ಯುದ್ಧಮಾಡುವ ನನ್ನನ್ನು ಅತಿಕ್ರಮಿಸಿ ಪಾರ್ಥನು ಮುಂದೆ ಹೋಗಲಾರನು. ಆದುದರಿಂದ ಕುದುರೆಗಳನ್ನು ವೇಗವಾಗಿ ಮುಂದಕ್ಕೆ ನಡೆಸು. ಮಹಾಸಮುದ್ರವು ತೀರವನ್ನು ಅತಿಕ್ರಮಿಸಿ ಹೋಗದಂತೆ– ಕುಂತಿಯ ಮಗನಾದ ಪಾರ್ಥನು ಯುದ್ಧಮಾಡುತ್ತಿರುವ ನನ್ನನ್ನು ಅತಿಕ್ರಮಿಸಿ ಮುಂದೆ ಹೋಗಲು ಶಕ್ತನಾಗುವುದಿಲ್ಲ. ಈಗ ಗೋವಿಂದಸಹಿತನಾದ ಅರ್ಜುನನನ್ನೂ, ಮಾನಿಯಾದ ವೃಕೋದರನನ್ನೂ, ಅಳಿದುಳಿದಿರುವ ಶತ್ರುಗಳನ್ನೂ ಸಂಹರಿಸಿ ಕರ್ಣನ ಋಣದಿಂದ ಮುಕ್ತನಾಗುವೆನು."

ಮಹಾರಾಜ! ಶ್ರೇಷ್ಠರಾದ, ಶೂರರಾದ ಆರ್ಯರ ಮಾತುಗಳಿಗೆ ಸದೃಶವಾಗಿದ್ದ ದುರ್ಯೋಧನನ ಮಾತನ್ನು ಕೇಳಿ ಸೂತನು ಸುವರ್ಣಮಯವಾದ ಬಲೆಯಿಂದ ಆಚ್ಛಾದಿತವಾಗಿದ್ದ ಕುದುರೆಗಳನ್ನು ಮೆಲ್ಲ-ಮೆಲ್ಲನೆ ಮುಂದೆ ನಡೆಸಿದನು. ಗಜಾಶ್ವ-ರಥಗಳಿಂದ ಹೀನರಾಗಿದ್ದ ಇಪ್ಪತ್ತೈದು ಸಾವಿರ ಪದಾತಿಸೈನಿಕರು ಮೆಲ್ಲ-ಮೆಲ್ಲನೆ ಮುಂದೆ ಹೋಗುತ್ತಿದ್ದರು. ಆ ಸೈನಿಕರನ್ನು ಚತುರಂಗಬಲದಿಂದ ಯುಕ್ತರಾಗಿದ್ದ ಕ್ರುದ್ಧರಾಗಿದ್ದ ಭೀಮಸೇನ-ಧೃಷ್ಟದ್ಯುಮ್ನರು ಬಾಣಗಳಿಂದ ಗಾಯಗೊಳಿಸಿದರು.

ಪದಾತಿಸೈನಿಕರೂ ಭೀಮ-ಪಾರ್ಷತರನ್ನು ಎದುರಿಸಿ ಯುದ್ಧಮಾಡು ತ್ತಿದ್ದರು. ಕೆಲವರು ಭೀಮಸೇನ-ಧೃಷ್ಟದ್ಯುಮ್ನರ ಹೆಸರು ಹಿಡಿದು ಕರೆ

ಯುತ್ತಾ ಯುದ್ಧಕ್ಕೆ ಆಹ್ವಾನಿಸುತ್ತಿದ್ದರು. ಆ ಸಮಯದಲ್ಲಿ ಭೀಮಸೇನನು ಪರಮಕ್ರುದ್ಧನಾಗಿ ಬಹಳ ಬೇಗ ರಥದಿಂದಿಳಿದು ಗದಾಪಾಣಿಯಾಗಿ ತನ್ನ ಸುತ್ತಲೂ ನೆಲದ ಮೇಲೆ ನಿಂತು ಯುದ್ಧಮಾಡುತ್ತಿದ್ದ ಕುರುಯೋಧರೊಡನೆ ಯುದ್ಧದಲ್ಲಿ ತೊಡಗಿದನು. ಭುಜಗಳ ಬಲವನ್ನೇ ಮುಖ್ಯಸಾಧನವನ್ನಾಗಿ ಹೊಂದಿದ್ದ ಕುಂತೀಪುತ್ರನಾದ ಭೀಮಸೇನನು ಧರ್ಮಯುದ್ಧ ಮಾಡುವ ಇಚ್ಛೆಯುಳ್ಳವನಾಗಿದ್ದುದರಿಂದ ಭೂಮಿಯ ಮೇಲೆ ನಿಂತು ಯುದ್ಧಮಾಡುತ್ತಿದ್ದ ಪದಾತಿಸೈನಿಕರೊಡನೆ ರಥದ ಮೇಲೆ ಕುಳಿತು ಯುದ್ಧಮಾಡಲು ಇಚ್ಛಿಸಲಿಲ್ಲ. ಸುವರ್ಣಮಯವಾದ ತಗಡಿನಿಂದ ಸಮಾಚ್ಛಾದಿತವಾಗಿದ್ದ, ಬಹಳ ದೊಡ್ಡದಾಗಿದ್ದ ಗದೆಯನ್ನು ಹಿಡಿದು ದಂಡಪಾಣಿಯಾದ ಯಮರಾಜನೋಪಾದಿಯಲ್ಲಿ ನಿನ್ನ ಕಡೆಯ ಎಲ್ಲ ಸೈನಿಕರನ್ನೂ ಸಂಹರಿಸಿದನು. ಪದಾತಿಸೈನಿಕರೂ ಸಹ ಅತ್ಯಂತಪ್ರಿಯವಾದ ಪ್ರಾಣಗಳನ್ನೂ, ಬಂಧುಗಳನ್ನೂ ತೊರೆದು–ಪತಂಗಗಳು ಬೆಂಕಿಯನ್ನು ಮುತ್ತುವಂತೆ–ಭೀಮಸೇನನನ್ನು ಆಕ್ರಮಿಸಿದರು. ಪ್ರಾಣಿಗಳ ಸಮೂಹಗಳು ಯಾವ ರೀತಿಯಲ್ಲಿ ಯಮರಾಜನನ್ನು ನೋಡಿದೊಡನೆಯೇ ಕೂಗಿಕೊಳ್ಳುತ್ತವೆಯೋ–ಅದೇ ರೀತಿಯಲ್ಲಿ ಕ್ರುದ್ಧರಾದ, ಯುದ್ಧದುರ್ಮದರಾದ ಪದಾತಿ ಸೈನಿಕರು ಭೀಮಸೇನನನ್ನು ಕಾಣುತ್ತಲೇ ಗಟ್ಟಿಯಾಗಿ ಕೂಗಿಕೊಂಡರು. ಭೀಮಸೇನನು ಗಿಡಗಪಕ್ಷಿಯಂತೆ–ರಣರಂಗದಲ್ಲಿ ಸಂಚರಿಸುತ್ತಾ ಖಡ್ಗದಿಂದಲೂ ಗದೆಯಿಂದಲೂ ನಿನ್ನ ಕಡೆಯ ಇಪ್ಪತ್ತೈದು ಸಾವಿರ ಸೈನಿಕರನ್ನೂ ಧ್ವಂಸಮಾಡಿದನು. ಸತ್ಯಪರಾಕ್ರಮನಾದ, ಮಹಾಬಲನಾದ ಭೀಮಸೇನನು ಪದಾತಿಸೈನಿಕರನ್ನೂ ಸಂಹರಿಸಿ, ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಮುಂದೆಮಾಡಿಕೊಂಡು ರಣರಂಗದಲ್ಲಿ ನಿಂತುಕೊಂಡನು. ವೀರ್ಯವಂತನಾದ ಧನಂಜಯನು ಕೌರವರ ರಥಸೈನ್ಯವನ್ನು ಆಕ್ರಮಿಸಿದನು. ಮಹಾರಥನಾದ ಸಾತ್ಯಕಿಯೂ ಮತ್ತು ಮಾದ್ರಿಯ ಮಕ್ಕಳಾದ ನಕುಲ-ಸಹದೇವರೂ ಪ್ರಹೃಷ್ಟರಾಗಿ ದುರ್ಯೋಧನನ ಸೈನ್ಯವನ್ನು ಸಂಹರಿಸುತ್ತಾ ಬಹಳ ಬೇಗ ಶಕುನಿಯನ್ನು ಆಕ್ರಮಿಸಿದರು. ಸಾತ್ಯಕಿ ಮತ್ತು ನಕುಲ-ಸಹದೇವರು ನಿಶಿತವಾದ ಬಾಣಗಳಿಂದ ಶಕುನಿಯ ಅನೇಕ ಕುದುರೆಸವಾರರನ್ನು ಸಂಹರಿಸಿ ಬಹಳ ಶೀಘ್ರವಾಗಿ ಶಕುನಿಯ ಬಳಿಗೆ ಧಾವಿಸಿದರು. ಶಕುನಿಗೂ ಮತ್ತು

ಸಾತ್ಯಕಿ-ನಕುಲ-ಸಹದೇವರಿಗೂ ಭಯಂಕರವಾದ ಯುದ್ಧವು ಪ್ರಾರಂಭ ವಾಯಿತು. ಧನಂಜಯನು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವ ಗಾಂಡೀವಧನುಸ್ಸನ್ನು ಟೇಂಕರಿಸುತ್ತಾ ನಿನ್ನ ರಥಸೈನ್ಯದೊಳಕ್ಕೆ ನುಗ್ಗಿದನು. ಶ್ರೀಕೃಷ್ಣನನ್ನೇ ಸಾರಥಿಯನ್ನಾಗಿ ಹೊಂದಿದ್ದ, ಯೋಧನಾಗಿ ಯುದ್ಧ ಮಾಡಲು ಬಂದ ಅರ್ಜುನನನ್ನೂ ಮತ್ತು ಅವನು ಕುಳಿತಿದ್ದ ಶ್ವೇತಾಶ್ವಯುಕ್ತವಾದ ರಥವನ್ನೂ ನೋಡಿ ನಿನ್ನ ಕಡೆಯ ರಥಸೈನಿಕರು ಭಯದಿಂದ ಪಲಾಯನಮಾಡಿದರು. ಕೌರವರ ಕಡೆಯ ಅನೇಕ ರಥಗಳೂ ಮತ್ತು ರಥಾಶ್ವಗಳೂ ನಷ್ಟವಾಗಿ ಹೋದುವು. ಅನೇಕರು ಅರ್ಜುನನ ಬಾಣಗಳ ಪ್ರಹಾರಗಳಿಂದ ಬಹಳವಾಗಿ ಗಾಯಗೊಂಡರು. ಇಪ್ಪತ್ತೈದುಸಾವಿರ ಪದಾತಿಗಳು ಭೀಮನನ್ನು ಆಕ್ರಮಿಸಿದರು. ಮಹಾತ್ಮನಾದ ಪಾಂಚಾಲ ರಾಜನ ಮಗನಾದ, ಮಹಾಧನುಷ್ಮಂತನಾದ, ಕಾಂತಿಯುಕ್ತನಾದ, ಶತ್ರುಗಳ ಸಮೂಹಗಳನ್ನು ಪರಿತಾಪಗೊಳಿಸುವ, ಪಾಂಚಾಲರ ಮಹಾರಥನಾದ, ಪುರುಷವ್ಯಾಘ್ರನಾದ ಧೃಷ್ಟದ್ಯುಮ್ನನು–ಅವರೆಲ್ಲರನ್ನೂ ಸಂಹರಿಸಿದ ಭೀಮಸೇನನನ್ನು ಮುಂದೆಮಾಡಿಕೊಂಡು ಬಹಳ ಬೇಗ ರಣರಂಗದಲ್ಲಿ ಪುನಃ ಕಾಣಿಸಿಕೊಂಡನು. ಪಾರಿವಾಳಹಕ್ಕಿಯ ಬಣ್ಣದ ಕುದುರೆಗಳನ್ನು ರಥದಲ್ಲಿ ಹೊಂದಿದ್ದ, ಧ್ವಜದಲ್ಲಿ ಕೆಂಗಾಂಚಳದ ಗಿಡವನ್ನೇ ಚಿಹ್ನೆಯನ್ನಾಗಿ ಹೊಂದಿದ್ದ ಧೃಷ್ಟದ್ಯುಮ್ನನನ್ನು ನೋಡಿ ನಿನ್ನ ಕಡೆಯ ಎಲ್ಲ ಸೈನಿಕರೂ ಓಡಿಹೋದರು.

ಯಶೋವಂತರಾದ ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಸಾತ್ಯಕಿಯೊಡನೆ ಶೀಘ್ರಾಸ್ತ್ರನಾದ ಗಾಂಧಾರರಾಜನನ್ನು ಬಹಳ ಬೇಗ ಬೆನ್ನಟ್ಟಿಹೋಗಿ, ಅವನೊಡನೆ ಯುದ್ಧದಲ್ಲಿ ತೊಡಗಿದ್ದುದು ಕಂಡುಬಂದಿತು. ಚೇಕಿತಾನ, ಶಿಖಂಡೀ, ದ್ರೌಪದಿಯ ಐವರು ಮಕ್ಕಳು–ಇವರೆಲ್ಲರೂ ಸೇರಿ ನಿನ್ನ ಕಡೆಯ ಅನೇಕಸೈನಿಕರನ್ನು ಸಂಹರಿಸಿ ಶಂಖಧ್ವನಿಗಳನ್ನು ಮಾಡಿದರು. ಗೂಳಿಗಳು ತಮ್ಮೊಡನೆ ಕಾಳಗಕ್ಕೆ ಬಂದ ಕೋಪಗೊಂಡ ಗೂಳಿಗಳನ್ನು ಕಾಳಗ ದಲ್ಲಿ ಜಯಿಸಿದನಂತರವೂ ಸೋತ ಗೂಳಿಗಳನ್ನು ಅಟ್ಟಿಸಿಕೊಂಡೇ ಹೋಗು ವಂತೆ–ಆ ಎಲ್ಲ ಪಾಂಡವಯೋಧರೂ ನಿನ್ನ ಕಡೆಯ ಸೈನಿಕರು ಪರಾಙ್ಮುಖ ರಾಗಿ ಓಡಿಹೋಗುತ್ತಿರುವುದನ್ನು ನೋಡಿಯೂ ಅವರನ್ನೇ ಅಟ್ಟಿಸಿಕೊಂಡು ಹೋಗುತ್ತಿದ್ದರು. ಆ ಸಮಯದಲ್ಲಿ ಪಾಂಡುವಿನ ಮಗನಾದ ಸವ್ಯಸಾಚಿಯು

ನಿನ್ನ ಮಗನ ಸೈನ್ಯದಲ್ಲಿ ಇನ್ನೂ ಸ್ವಲ್ಪ ಶೇಷವು ಉಳಿದಿರುವುದನ್ನು ಕಂಡು ಅತ್ಯಂತಕುಪಿತನಾದನು. ಒಡನೆಯೇ ಆ ಸೈನ್ಯವನ್ನು ಬಾಣಗಳಿಂದ ಮುಚ್ಚಿಬಿಟ್ಟನು. ಆ ಸಮಯದಲ್ಲಿ ಸರ್ವತ್ರ ಧೂಳಿಯೂ ಮೇಲಕ್ಕೆದ್ದುದರಿಂದ ಯಾವುದೊಂದೂ ಕಾಣುತ್ತಿರಲಿಲ್ಲ. ಧೂಳಿನಿಂದ ಪ್ರಪಂಚದಲ್ಲಿ ಗಾಢಾಂಧಕಾರವು ಕವಿಯಲಾಗಿ, ರಣಾಂಗಣವು ಬಾಣಮಯವಾಗಿರಲಾಗಿ, ನಿನ್ನ ಸೈನಿಕರು ಭಯದಿಂದ ಎಲ್ಲ ದಿಕ್ಕುಗಳಿಗೂ ಓಡಿಹೋದರು. *ಕುರು ಸೈನ್ಯವು ಭಗ್ನವಾಗುತ್ತಿರಲಾಗಿ, ಕುರುರಾಜನಾದ ದುರ್ಯೋಧನನು ಎರಡೂ ಪಕ್ಷಗಳ ಸೈನಿಕರ ಮೇಲೂ ಆಕ್ರಮಣವನ್ನು ನಡೆಸಿದನು. ಹಿಂದೆ ಬಲಿಚಕ್ರ ವರ್ತಿಯು ಎಲ್ಲ ದೇವತೆಗಳನ್ನೂ ಯುದ್ಧಕ್ಕೆ ಕರೆಯುತ್ತಿದ್ದಂತೆ– ದುರ್ಯೋಧನನೊಬ್ಬನೇ ಎಲ್ಲ ಪಾಂಡವರನ್ನೂ ಯುದ್ಧಕ್ಕೆ ಆಹ್ವಾನಿಸಿದನು. ನಾನಾ ವಿಧವಾದ ಶಸ್ತ್ರಾಸ್ತ್ರಗಳನ್ನು ಧರಿಸಿದ್ದ ಕ್ರುದ್ಧರಾಗಿದ್ದ ಪಾಂಡವಯೋಧರು ಒಟ್ಟಾಗಿ ಸೇರಿ ಗರ್ಜಿಸುತ್ತಾ, ಗರ್ಜನೆಮಾಡುತ್ತಿದ್ದ ದುರ್ಯೋಧನನನ್ನು ಬಾರಿ-ಬಾರಿಗೂ ಭಯಪಡಿಸುತ್ತಾ, ಆಕ್ರಮಿಸಿದರು. ಕ್ರುದ್ಧನಾಗಿದ್ದ ದುರ್ಯೋಧನನು, ಪಾಂಡವರೆಲ್ಲರೂ ಒಟ್ಟಾಗಿ ಸೇರಿ ತನ್ನ ಮೇಲೆ ಆಕ್ರಮಣ ನಡೆಸುತ್ತಿದ್ದರೂ ಸ್ವಲ್ಪವೂ ಭ್ರಾಂತನಾಗದೇ ನಿಶಿತವಾದ ಬಾಣಗಳಿಂದ ಶತ್ರುಸೈನಿಕರನ್ನು ಧ್ವಂಸಮಾಡಿದನು. ಆಗ ನಾವು ನಿನ್ನ ಮಗನ ಅದ್ಭುತವಾದ ಪರಾಕ್ರಮವನ್ನು ಕಂಡೆವು. ಪಾಂಡವರೆಲ್ಲರೂ ಒಟ್ಟಾಗಿ ಸೇರಿ ಯುದ್ಧ ಮಾಡುತ್ತಿದ್ದರೂ ಒಬ್ಬನೇ ಒಬ್ಬ ದುರ್ಯೋಧನನನ್ನು ಅತಿಕ್ರಮಿಸಲು ಅವ

---

*ಹಿಂದೆ ಕರ್ಣಪರ್ವದಲ್ಲಿ ೯೩ನೆಯ ಅಧ್ಯಾಯದಲ್ಲಿ ಇದೇ ೪೫ನೆಯ ಶ್ಲೋಕವು ಸ್ವಲ್ಪ ವ್ಯತ್ಯಾಸವಾಗಿ ಬಂದಿರುತ್ತದೆ. ಸಮ್ಭಜ್ಯಮಾನೇ ಸೈನ್ಯೇ ತು ಕುರುರಾಜೋ ವಿಶಾಮ್ಪತೇ। ಪರಾನಭಿಮುಖಾಂಶ್ಚೈವ ಸುತಸ್ತೇ ಸಮುಪಾದ್ರವತ್ ॥ 'ತನ್ನ ಎದುರಾಗಿ ಬಂದ ಶತ್ರುಗಳನ್ನು'–ಎಂಬ ಅರ್ಥವನ್ನು ಕೊಡುತ್ತದೆ. ಇದು ಸಮಂಜಸವಾಗಿಯೂ ಇದೆ. ಪ್ರಸಕ್ತ ಸಂದರ್ಭದಲ್ಲಿ–ಪರೇಷಾಮಾತ್ಮನಶ್ಚೈವ ಸೈನ್ಯೇ ತೇ ಸಮುಪಾದ್ರವತ್ । ಅರ್ಥಾತ್ 'ತನ್ನ ಸೈನ್ಯದ ಮೇಲೂ ದಾಳಿನಡೆಸಿದನು'–ಎಂಬ ಅರ್ಥವನ್ನು ಈ ಶ್ಲೋಕವು ಕೊಡುತ್ತದೆ. ಮುಂದೆ ಇದಕ್ಕೆ ಯಾವ ವಿಧವಾದ ಅನುವರ್ತನೆಯೂ ಇಲ್ಲದೇ ಇರುವುದರಿಂದ ಇದು ಲೇಖನದ ತಪ್ಪಿರಬಹುದೆಂದು ಶಂಕಿಸಬಹುದಾಗಿದೆ.

ರಿಗೆ ಸಾಧ್ಯವಾಗಲಿಲ್ಲ. ತನ್ನ ಸೈನ್ಯವು ಬಹಳವಾಗಿ ಗಾಯಗೊಂಡು ಪಲಾಯನಮಾಡಲು ಮನಸ್ಸುಮಾಡಿ ಓಡಿಹೋಗುತ್ತಿರುವುದನ್ನೂ, ಆದರೆ ಹೆಚ್ಚುದೂರ ಹೋಗದೇ ಇದ್ದುದನ್ನೂ ದುರ್ಯೋಧನನು ನೋಡಿದನು. ಯುದ್ಧವನ್ನು ಮುಂದುವರಿಸಬೇಕೆಂದು ದೃಢನಿಶ್ಚಯಮಾಡಿದ್ದ ನಿನ್ನ ಮಗನು ಆ ಯೋಧರೆಲ್ಲರನ್ನೂ ನಿಲ್ಲುವಂತೆ ಹೇಳಿ ಅವರನ್ನು ಹರ್ಷಗೊಳಿಸುತ್ತಾ ಹೇಳಿದನು: "ವೀರರೇ! ಭೂಮಿಯಲ್ಲಾಗಲೀ–ಪರ್ವತಗಳಲ್ಲಾಗಲೀ ಎಲ್ಲಿಗೇ ಹೋದರೂ ಪಾಂಡವರು ನಿಮ್ಮನ್ನು ಸಂಹರಿಸಲಾರರೆಂಬ ಪ್ರದೇಶವನ್ನೇ ನಾನು ಕಾಣೆನು. ಹೀಗಿರುವಾಗ ನೀವು ಪಲಾಯನಮಾಡುವುದರಿಂದ ಪ್ರಯೋಜನವೇನಿದೆ? ಕೃಷ್ಣಾರ್ಜುನರು ಬಹಳವಾಗಿ ಗಾಯಗೊಂಡಿರುತ್ತಾರೆ. ಈಗ ಇವರಲ್ಲಿ ಬಲವು ಸ್ವಲ್ಪಮಾತ್ರವೇ ಉಳಿದಿದೆ. ನಾವೆಲ್ಲರೂ ಸಂಘಟಿತರಾಗಿ ರಣರಂಗದಲ್ಲಿ ನಿಂತಿದ್ದೇ ಆದರೆ ನಮಗೆ ನಿಶ್ಚಯವಾಗಿಯೂ ವಿಜಯವು ಲಭಿಸುತ್ತದೆ. ನೀವೇನಾದರೂ ಸಂಘಟಿತರಾಗದೇ ನಿಮ್ಮ ಪ್ರಾಣಗಳನ್ನು ಉಳಿಸಿಕೊಳ್ಳುವ ಇಚ್ಛೆಯಿಂದ ಗುಂಪಿನಿಂದ ಬೇರ್ಪಟ್ಟು ಓಡಿಹೋದರೆ ಅಪರಾಧಿಗಳಾದ ನಿಮ್ಮನ್ನು ಪಾಂಡವರು ಬೆನ್ನಟ್ಟಿ ಬಂದು ಕೊಲ್ಲುತ್ತಾರೆ. ಹಾಗೆ ಓಡಿಹೋಗುತ್ತಿರುವಾಗ ಪ್ರಾಣಬಿಡುವುದಕ್ಕಿಂತಲೂ ಯುದ್ಧಮಾಡುತ್ತಿರುವಾಗಲೇ ಪ್ರಾಣಬಿಡುವುದು ಕ್ಷತ್ರಿಯರಾದ ನಿಮಗೆ ಶ್ರೇಯಸ್ಕರವಾದುದು. ಯುದ್ಧದಲ್ಲಿ ಲಭಿಸುವ ಮೃತ್ಯುವು ಅತ್ಯಂತಸುಖಕರವಾದುದು. ಆದುದರಿಂದ ನೀವೆಲ್ಲರೂ ಕ್ಷತ್ರಿಯಧರ್ಮವನ್ನವಲಂಬಿಸಿ ಯುದ್ಧಮಾಡಿರಿ. ಮೃತನಾದವನಿಗೆ ದುಃಖದ ಅರಿವಿರುವುದಿಲ್ಲ. ಯುದ್ಧದಲ್ಲಿ ಮರಣಹೊಂದಿ ಪರಲೋಕಕ್ಕೆ ಹೋದನಂತರ ಅಕ್ಷಯವಾದ ಸುಖವು ಲಭಿಸುತ್ತದೆ. ಎಷ್ಟು ಮಂದಿ ಕ್ಷತ್ರಿಯರು ಇಲ್ಲಿಗೆ ಯುದ್ಧಮಾಡುವ ಸಲುವಾಗಿ ಆಗಮಿಸಿರುವರೋ ಅವರೆಲ್ಲರೂ ನನ್ನ ಈ ಮಾತನ್ನು ಕೇಳಲಿ. ನೀವೇನಾದರೂ ಓಡಿಹೋದರೆ ಶತ್ರುವಾದ ಭೀಮಸೇನನ ಕೈಗೆ ಸಿಕ್ಕಿಹಾಕಿಕೊಳ್ಳುತ್ತೀರಿ. ಆದುದರಿಂದ ನಿಮ್ಮ ಪಿತೃ-ಪಿತಾಮಹರಿಂದ ಆಚರಿಸಲ್ಪಟ್ಟ ಕ್ಷತ್ರಿಯಧರ್ಮವನ್ನು ಬಿಟ್ಟು ಯುದ್ಧದಿಂದ ಪಲಾಯನಮಾಡುವುದು ನಿಮಗೆ ಉಚಿತವೆನಿಸುವುದಿಲ್ಲ. ಪಲಾಯನಮಾಡುವುದಕ್ಕಿಂತಲೂ ಮಿಗಿಲಾದ ಪಾಪಕರ್ಮವು ಕ್ಷತ್ರಿಯನಾದವನಿಗೆ ಮತ್ತೊಂದಿಲ್ಲ. ಯುದ್ಧದಿಂದ ಪಲಾಯನಮಾಡುವುದೆಂಬುದು

ಕ್ಷತ್ರಿಯನಿಗೆ ಅತ್ಯಂತಪಾಪಕರವಾದ ಕಾರ್ಯ. ಅಂತೆಯೇ ಯುದ್ಧಕ್ಕಿಂತಲೂ ಶ್ರೇಯಸ್ಕರವಾದುದು ಕ್ಷತ್ರಿಯನಿಗೆ ಬೇರೊಂದಿಲ್ಲ. ಕೌರವರೇ! ಯುದ್ಧವೆಂಬುದು ಕ್ಷತ್ರಿಯನಿಗೆ ಸ್ವರ್ಗದ ದ್ವಾರವಿದ್ದಂತೆ. ಅನೇಕಜನ್ಮಗಳಲ್ಲಿ ಪುಣ್ಯಕಾರ್ಯಗಳನ್ನು ಮಾಡಿ ಪಡೆಯಬಹುದಾದ ಪುಣ್ಯಲೋಕಗಳನ್ನು ಕ್ಷತ್ರಿಯನಾದವನು ಯುದ್ಧದ ಮೂಲಕವಾಗಿ ಒಡನೆಯೇ ಪಡೆದು ಕೊಳ್ಳುತ್ತಾನೆ.”

ಮಹಾರಾಜ! ಕೌರವಮಹಾರಥರು ದುರ್ಯೋಧನನ ಮಾತುಗಳನ್ನು ಪ್ರಶಂಸಿಸುತ್ತಾ, ತಮಗಾದ ಪರಾಜಯವನ್ನು ಸಹಿಸಿಕೊಳ್ಳಲಾರದೇ, ತಮ್ಮ ಪರಾಕ್ರಮವನ್ನು ಪುನಃ ಶತ್ರುವಿಗೆ ತೋರಿಸಲು ನಿಶ್ಚಯಿಸಿ ಪಾಂಡವರ ಕಡೆಗೆ ಯುದ್ಧಕ್ಕೆ ತೆರಳಿದರು. ಅನಂತರ ನಿನ್ನ ಕಡೆಯವರಿಗೂ ಮತ್ತು ಶತ್ರುಗಳಿಗೂ ದೇವಾಸುರರ ಯುದ್ಧಕ್ಕೆ ಅನುರೂಪವಾದ ಸುದಾರುಣವಾದ ಯುದ್ಧವು ಪುನಃ ಪ್ರಾರಂಭವಾಯಿತು. ಆ ಸಮಯದಲ್ಲಿ ದುರ್ಯೋಧನನು ತನ್ನ ಸರ್ವಸೈನ್ಯ ದೊಡನೆ ಯುಧಿಷ್ಠಿರಪುರಃಸರರಾದ ಪಾಂಡವರನ್ನು ಆಕ್ರಮಿಸಿದನು.

೩ನೆಯ ಅಧ್ಯಾಯವು ಮುಗಿಯಿತು.

೪ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ)

## ಪಾಂಡವರೊಡನೆ ಸಂಧಿಮಾಡಿಕೊಳ್ಳುವಂತೆ ಕೃಪರು ದುರ್ಯೋಧನನಿಗೆ ಸಲಹೆನೀಡಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಆ ಸಮಯದಲ್ಲಿ ರಣಭೂಮಿಯಲ್ಲಿ ಮಹಾತ್ಮರಾದ ಯೋಧರ ರಥಗಳೂ, ರಥಗಳಲ್ಲಿದ್ದ ಆಸನಗಳೂ ವಿಧ್ವಸ್ತವಾಗಿ ಬಿದ್ದಿದ್ದುವು. ಆನೆಗಳೂ ಮತ್ತು ಪದಾತಿಸೈನಿಕರೂ ಶತ್ರುಗಳಿಂದ ಹತರಾಗಿ ಬಿದ್ದಿದ್ದರು. ರುದ್ರನ ಆಟದ ಮೈದಾನವಾದ ಸ್ಮಶಾನದಂತೆ–ರಣರಂಗವು ಅತ್ಯಂತಭೀಕರ ವಾಗಿ ಕಾಣುತ್ತಿದ್ದಿತು. ಲಕ್ಷಾವಧಿ ರಾಜರು ನಿರ್ನಾಮವಾಗಿ ಹೋಗಿದ್ದರು. ಶೋಕದಿಂದ ದೀನಚಿತ್ತನಾಗಿದ್ದ ನಿನ್ನ ಮಗ ದುರ್ಯೋಧನನು ಯುದ್ಧದಿಂದ

ವಿಮುಖನಾಗಿದ್ದನು. ಪಾರ್ಥನ ಪರಾಕ್ರಮವನ್ನು ನೋಡಿ ಕೌರವಸೈನಿಕರು ಉದ್ವಿಗ್ನರಾಗಿದ್ದರು. ದುಃಖಕ್ಕೊಳಗಾಗಿದ್ದ ಆ ಸೈನಿಕರು ಮುಂದೇನು ಮಾಡಬೇಕೆಂಬುದನ್ನೇ ತಿಳಿಯದೇ ಚಿಂತಾಮಗ್ನರಾಗಿದ್ದರು. ಆಗ ಅರ್ಜುನನಿಂದ ಮಥಿಸಲ್ಪಡುತ್ತಿದ್ದ ಸೈನಿಕರ ಆರ್ತನಾದಗಳನ್ನು ಕೇಳಿ, ನರೇಂದ್ರರ



ಪ್ರಧಾನಚಿಹ್ನೆಗಳಾದ ಧ್ವಜಾದಿಗಳು ಛಿನ್ನ-ಭಿನ್ನವಾಗಿದ್ದುದನ್ನೂ ನೋಡಿ ಕೃಪಾವಿಷ್ಟರಾದ, ವಯಸ್ಕರಾಗಿದ್ದ, ಶೀಲಸಂಪನ್ನರಾಗಿದ್ದ, ತೇಜಸ್ವಿಗಳಾಗಿದ್ದ, ಮಾತನಾಡುವುದರಲ್ಲಿ ಚತುರರಾಗಿದ್ದ ಕೃಪರು ಜನಾಧಿಪನಾದ ದುರ್ಯೋಧನನ ಸಮೀಪಕ್ಕೆ ಹೋಗಿ ದೈನ್ಯದಿಂದ ಈ ಮಾತುಗಳನ್ನು ಹೇಳಿದರು:

"ಕುರುಮಹಾರಾಜ! ದುರ್ಯೋಧನ! ನಾನು ಹೇಳುವುದನ್ನು ಕೇಳು. ಕೇಳಿದನಂತರ ನಿನಗೆ ಯಾವುದು ಸೂಕ್ತವಾಗಿ ಕಾಣುವುದೋ ಅದರಂತೆ ಮಾಡು.

**ನ ಯುದ್ಧಧರ್ಮಾಚ್ಛ್ರೇಯಾನ್ವೈ ಪನ್ಥಾ ರಾಜೇನ್ದ್ರ ವಿದ್ಯತೇ ।**
**ಯಂ ಸಮಾಶ್ರಿತ್ಯ ಯುಧ್ಯನ್ತೇ ಕ್ಷತ್ರಿಯಾ ಕ್ಷತ್ರಿಯರ್ಷಭ ॥೮॥**

ಕ್ಷತ್ರಿಯರ್ಷಭನೇ! ಯಾವ ಯುದ್ಧಧರ್ಮವನ್ನಾಶ್ರಯಿಸಿ ಕ್ಷತ್ರಿಯರು ಯುದ್ಧಮಾಡುತ್ತಾರೆಯೋ–ಅಂತಹ ಯುದ್ಧಧರ್ಮಕ್ಕಿಂತಲೂ ಮಿಗಿಲಾದ ಶ್ರೇಯಸ್ಸಿನ ಮಾರ್ಗವು ಮತ್ತೊಂದಿರುವುದಿಲ್ಲ.

**ಪುತ್ರೋ ಭ್ರಾತಾ ಪಿತಾ ಚೈವ ಸ್ವಸ್ರೀಯೋ ಮಾತುಲಸ್ತಥಾ ।**
**ಸಮ್ಬನ್ಧಿಬಾನ್ಧವಾಶ್ಚೈವ ಯೋದ್ಧ್ಯಾ ವೈ ಕ್ಷತ್ರಜೀವಿನಾ ॥೯॥**

ಕ್ಷತ್ರಿಯಧರ್ಮಾನುಸಾರವಾಗಿ ಜೀವನನಿರ್ವಹಣೆಯನ್ನು ಮಾಡುವವನಿಗೆ ಪುತ್ರರು, ಅಣ್ಣ-ತಮ್ಮಂದಿರು, ತಂದೆ, ಸೋದರಳಿಯ, ಸೋದರ ಮಾವ, ಸಂಬಂಧಿಗಳು, ಬಾಂಧವರು–ಇವರೆಲ್ಲರೊಡನೆಯೂ ಯುದ್ಧ ಮಾಡುವುದು ಅನಿವಾರ್ಯವೇ ಆಗುತ್ತದೆ.

**ವಧೇ ಚೈವ ಪರೋ ಧರ್ಮಸ್ತಥಾಧರ್ಮಃ ಪಲಾಯನೇ ।**
**ತೇ ಸ್ಮ ಘೋರಾಂ ಸಮಾಪನ್ನಾ ಜೀವಿಕಾಂ ಜೀವಿತಾರ್ಥಿನಃ ॥೧೦॥**

ಯುದ್ಧದಲ್ಲಿ ಶತ್ರುಗಳನ್ನು ವಧಿಸುವುದು ಅಥವಾ ಶತ್ರುಗಳಿಂದ ವಧ್ಯನಾಗುವುದು ಶ್ರೇಷ್ಠವಾದ ಧರ್ಮವೆನಿಸಿದೆ. ಪಲಾಯನಮಾಡುವುದು ಅಧರ್ಮ. ಕ್ಷತ್ರಿಯಧರ್ಮಾನುಸಾರವಾಗಿ ಜೀವಿಕೆಯನ್ನು ನಡೆಸಲಿಚ್ಛಿಸುವವರು ಇಂತಹ ಘೋರವಾದ ಜೀವಿಕೆಯನ್ನು ಆಶ್ರಯಿಸುತ್ತಾರೆ. ಈ ಸಂಬಂಧದಲ್ಲಿಯೇ ನಾನು ನಿನಗೆ ಕೆಲವು ಹಿತಕರವಾದ ಮಾತುಗಳನ್ನು ಹೇಳಲಪೇಕ್ಷಿಸಿದ್ದೇನೆ. ಭೀಷ್ಮ, ದ್ರೋಣರು, ಮಹಾರಥನಾದ ಕರ್ಣ, ಜಯದ್ರಥ, ನಿನ್ನ ಅನುಜರು ಮತ್ತು ನಿನ್ನ ಮಗ ಲಕ್ಷ್ಮಣ–ಇವರೆಲ್ಲರೂ ಈ ಘೋರಸಂಗ್ರಾಮದಲ್ಲಿ ಹತರಾಗಿರುವಾಗ ಉಳಿದಿರುವವರಲ್ಲಿ ಯಾರನ್ನು ನಾವು ಆಶ್ರಯಿಸೋಣ? ಯಾರ ಮೇಲೆ ಈ ಯುದ್ಧದ ಭಾರವನ್ನು ಹೊರೆಸಿ ನಾವು ರಾಜ್ಯಲಾಭದ ಆಸೆಯನ್ನಿಟ್ಟುಕೊಂಡಿದ್ದೆವೋ, ಆ ಮಹಾಶೂರ

ರೆಲ್ಲರೂ ತಮ್ಮ ದೇಹಗಳನ್ನು ತ್ಯಾಗಮಾಡಿ ಬ್ರಹ್ಮವಿದರ ಉತ್ತಮಗತಿಯನ್ನು ಪಡೆದುಕೊಂಡರು.

ದುರ್ಯೋಧನ! ನಾವೀಗ ಭೀಷ್ಮರೇ ಮೊದಲಾದ ಗುಣಸಂಪನ್ನರಾದ ಮಹಾರಥರಿಂದ ವಿಹೀನರಾಗಿದ್ದೇವೆ. ನಮ್ಮ ಕಡೆಯ ಬಹುಸಂಖ್ಯಾತರಾದ ರಾಜರನ್ನು ಬಲಿಗೊಟ್ಟು ನಾವೀಗ ಶೋಚನೀಯಸ್ಥಿತಿಯಲ್ಲಿದ್ದೇವೆ. ಒಂದು ವೇಳೆ ಅವರೆಲ್ಲರೂ ಬದುಕಿದ್ದು ಒಟ್ಟಾಗಿ ಸೆಣೆಸಿದ್ದರೂ ಅರ್ಜುನನು ಪರಾಜಿತನಾಗುತ್ತಿರಲಿಲ್ಲ. ಶ್ರೀಕೃಷ್ಣನನ್ನೇ ನೇತಾರನನ್ನಾಗಿ ಹೊಂದಿರುವ (ಕೃಷ್ಣನೇ ನೇತ್ರಸ್ವರೂಪನಾಗಿರುವ) ಅರ್ಜುನನು ದೇವತೆಗಳಿಂದಲೂ ಎದುರಿಸಲು ಅಸಾಧ್ಯನಾದವನು. ಅವನ ರಥದ ಮೇಲಿರುವ ಕಪಿಧ್ವಜವು ಇಂದ್ರನ ಧನುಸ್ಸಾದ ಕಾಮನಬಿಲ್ಲಿನಂತೆ ಬಹುವರ್ಣದ್ದಾಗಿದೆ. ಇಂದ್ರ ಧ್ವಜದಂತೆ ಅತ್ಯುನ್ನತವಾಗಿದೆ. ಇಂತಹ ಧ್ವಜದ ಬಳಿಗೆ ಹೋಗಿ (ಅರ್ಜುನ ನೊಡನೆ ಯುದ್ಧಮಾಡಲು ಹೋಗಿ) ನಮ್ಮ ಮಹಾಸೈನ್ಯವು ಭಯದಿಂದ ಕಂಪಿಸುತ್ತಿದೆ. ಭೀಮನ ಸಿಂಹನಾದಗಳಿಂದಲೂ, ಪಾಂಚಜನ್ಯಶಂಖದ ಧ್ವನಿಯಿಂದಲೂ, ಗಾಂಡೀವಧನುಸ್ಸಿನ ಟೇಂಕಾರಶಬ್ದದಿಂದಲೂ ನಮ್ಮೆಲ್ಲರ ಮನಸ್ಸೂ ವಿಮೋಹಗೊಳ್ಳುತ್ತಿದೆ. ಕಣ್ಣಿನ ಪ್ರಭೆಯನ್ನು ಅಪಹರಿಸುವ, ತಿರುಗುತ್ತಿರುವ ಮತ್ತು ಫಳ-ಫಳಿಸುವ ವಿದ್ಯುತ್ತಿನ ಮಹಾಪ್ರಭೆ ಯಂತೆಯೂ–ಕೊಳ್ಳಿಯ ಚಕ್ರದಂತೆಯೂ ಅರ್ಜುನನ ಕೈಯಲ್ಲಿರುವ ಜಾಜ್ವಲ್ಯಮಾನವಾದ ಗಾಂಡೀವವು ಕಾಣುತ್ತಿದೆ. ಸುವರ್ಣದಿಂದ ಚಿತ್ರಿತ ವಾಗಿರುವ, ಹಿಂದಕ್ಕೂ ಮುಂದಕ್ಕೂ ಜಗ್ಗಿಸಲ್ಪಡುವ ಗಾಂಡೀವಮಹಾ ಧನುಸ್ಸು–ಮೋಡಗಳ ಮಧ್ಯದಲ್ಲಿ ಕಾಣಿಸಿಕೊಳ್ಳುವ ಮಿಂಚಿನಂತೆ–ಎಲ್ಲ ದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಅರ್ಜುನನ ರಥಕ್ಕೆ ಹೂಡಿರುವ ಕುದುರೆಗಳು ಬಿಳಿಯ ಬಣ್ಣದಿಂದ ಕೂಡಿವೆ; ವೇಗಯುಕ್ತವಾಗಿವೆ; ಚಂದ್ರನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿವೆ. ಆಕಾಶವನ್ನೇ ಪಾನಮಾಡು ತ್ತಿವೆಯೋ ಎಂಬಷ್ಟು ತೀವ್ರಗತಿಯಿಂದ ಕೂಡಿವೆ. ವಾಯುವಿನಿಂದ ಪ್ರೇರಿತವಾದ ಮೋಡಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವಂತೆ–ಶ್ರೀಕೃಷ್ಣನಿಂದ ನಡೆಸಲ್ಪಡುವ, ಸುವರ್ಣಮಯವಾದ ಬಲೆಗಳಿಂದ ಚಿತ್ರಿತವಾದ ಶರೀರಗಳುಳ್ಳ ಆ ಕುದುರೆಗಳು ಅರ್ಜುನನನ್ನು

ರಣರಂಗದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅತಿವೇಗದಿಂದ ಒಯ್ಯುತ್ತವೆ. ಗ್ರೀಷ್ಮರ್ತುವಿನಲ್ಲಿ ಭಯಂಕರವಾದ ಅಗ್ನಿಯು ದಟ್ಟವಾದ ಅರಣ್ಯವನ್ನೇ ಭಸ್ಮಮಾಡಿಬಿಡುವಂತೆ–ಅಸ್ತ್ರವಿಶಾರದನಾದ ಅರ್ಜುನನು ನಿನ್ನ ಸೈನ್ಯವನ್ನು ದಹಿಸಿಬಿಟ್ಟಿದ್ದಾನೆ. ಮಹೇಂದ್ರನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕಂಗೊಳಿಸುತ್ತಿರುವ ಅರ್ಜುನನು–ನಾಲ್ಕು ದಂತಗಳಿಂದ ಕೂಡಿ ರುವ ಸಲಗದಂತೆ ನಮ್ಮ ಸೈನ್ಯದೊಳಕ್ಕೆ ನುಗ್ಗಿಹೋಗುತ್ತಿರುವುದನ್ನು ನಾವು ಕಂಡೆವು. ಮದಿಸಿದ ಸಲಗವು ಕಮಲಗಳ ಸರೋವರಕ್ಕೆ ಧುಮುಕಿ ಅಲ್ಲೋಲ-ಕಲ್ಲೋಲಗೊಳಿಸುವಂತೆ–ಧನಂಜಯನು ನಮ್ಮ ಸೈನ್ಯದೊಳಗೆ ನುಗ್ಗಿ ಗಜಾಶ್ವ-ರಥ-ಪದಾತಿಸೈನಿಕರನ್ನು ಮಥಿಸುತ್ತಿರುವುದನ್ನೂ ಮತ್ತು ಭಯಗೊಳಿಸುತ್ತಿರುವುದನ್ನೂ ಕಂಡೆವು. ಸಿಂಹವು ಮೃಗಗಳ ಸಮೂಹಗಳನ್ನು ಭಯಪಡಿಸುವಂತೆ ಧನುಷ್ಟೇಂಕಾರದಿಂದ ನಮ್ಮ ಕಡೆಯ ಯೋಧರನ್ನು ಪುನಃ ಪುನಃ ಭಯಗೊಳಿಸುತ್ತಿರುವ ಅರ್ಜುನನನ್ನು ನಾವು ನೋಡಿದೆವು.

ಕವಚಗಳನ್ನು ಧರಿಸಿರುವ, ಸರ್ವಧನುಷ್ಮಂತರಿಗೂ ಶ್ರೇಷ್ಠರಾದ, ವಿಶ್ವದಲ್ಲಿಯೇ ಮಹಾಧನುಷ್ಮಂತರೆಂದು ಖ್ಯಾತಿಯನ್ನು ಗಳಿಸಿರುವ ಕೃಷ್ಣಾರ್ಜುನರು ಯೋಧರ ಸಮೂಹದಲ್ಲಿ ಸಂಚರಿಸುತ್ತಿದ್ದರು. ಸರ್ವತ್ರ ವಧಿಸಲ್ಪಡುತ್ತಿರುವ ಯೋಧರಿಗೆ ಅತಿಘೋರವಾದ ಕೌರವ-ಪಾಂಡವ ಸಂಗ್ರಾಮವು ಪ್ರಾರಂಭವಾಗಿ ಹದಿನೇಳು ದಿವಸಗಳು ಕಳೆಯಲಿವೆ.

ಶರತ್ಕಾಲದ ಮೇಘಗಳ ಸಮೂಹಗಳು ವಾಯುವಿನಿಂದ ಚದುರಿ ಹೋಗುವಂತೆ ನಿನ್ನ ಸೈನ್ಯಗಳು ಎಲ್ಲ ಕಡೆಗಳಲ್ಲಿಯೂ ಚದುರಿಹೋಗಿವೆ. ಮಹಾಸಮುದ್ರದಲ್ಲಿ ಬಿರುಗಾಳಿಯ ಬಡಿತಕ್ಕೆ ಸಿಕ್ಕಿ ಪರಿಭ್ರಮಿಸುವ ನೌಕೆಯಂತೆ–ಸವ್ಯಸಾಚಿಯಿಂದ ನಿನ್ನ ಸೈನ್ಯವು ಕಂಪಿಸಲ್ಪಡುತ್ತಿದೆ. ಅಂದು ಜಯದ್ರಥನು ಅರ್ಜುನನ ಬಾಣಕ್ಕೆ ಲಕ್ಷ್ಯನಾಗಿದ್ದಾಗ ಅವನನ್ನು ಉಳಿಸಲು ಪ್ರತಿಜ್ಞೆಮಾಡಿದ್ದ, ಅನುಯಾಯಿಗಳಿಂದ ಸಹಿತರಾದ ದ್ರೋಣ ರೆಲ್ಲಿಗೆ ಹೋಗಿದ್ದರು? ನೀನೆಲ್ಲಿಗೆ ಹೋಗಿದ್ದೆ? ಕೃತವರ್ಮನೆಲ್ಲಿ ಹೋಗಿ ದ್ದನು? ಅನುಜರಿಂದ ಸಹಿತನಾದ ನಿನ್ನ ತಮ್ಮನಾದ ದುಃಶಾಸನನು ಎಲ್ಲಿಗೆ ಹೋಗಿದ್ದನು? (ಅರ್ಜುನನು ಜಯದ್ರಥನನ್ನು ಸಂಹರಿಸುವಾಗ

ನಾವೆಲ್ಲರೂ ಅಲ್ಲಿಯೇ ಇದ್ದೆವಲ್ಲವೇ?) ನಿನ್ನ ಸಂಬಂಧಿಗಳನ್ನೂ, ಸಹೋದರರನ್ನೂ, ಸಹಾಯಕರನ್ನೂ, ಸೋದರಮಾವಂದಿರನ್ನೂ, ನಮ್ಮ ಕಡೆಯ ಎಲ್ಲ ಮಹಾವೀರರನ್ನೂ ತನ್ನ ಪರಾಕ್ರಮದಿಂದ ಪರಾಸ್ತಗೊಳಿಸಿ, ಎಲ್ಲರ ತಲೆಗಳನ್ನೂ ಮೆಟ್ಟಿ, ಎಲ್ಲರೂ ನೋಡುತ್ತಿದ್ದಂತೆಯೇ ಅರ್ಜುನನು ಜಯದ್ರಥನನ್ನು ಸಂಹರಿಸಿದನು. ಅಂತಹ ಮಹಾರಥರಿದ್ದಾಗಲೇ ನಾವು ಏನು ಮಾಡಲೂ ಸಾಧ್ಯವಾಗದಿದ್ದಾಗ ಈಗೇನು ಮಾಡಬಲ್ಲೆವು? ಉಳಿದಿರುವವರಲ್ಲಿ ಯಾರನ್ನು ನಾವು ಆಶ್ರಯಿಸುವುದು? ನಮ್ಮ ಕಡೆಯಲ್ಲಿ ಅರ್ಜುನನನ್ನು ಜಯಿಸತಕ್ಕ ಮಹಾಪುರುಷನು ಯಾವನಿದ್ದಾನೆ? ಮಹಾತ್ಮನಾದ ಅರ್ಜುನನ ವಿಧ-ವಿಧವಾದ ದಿವ್ಯಾಸ್ತ್ರಗಳೂ, ಗಾಂಡೀವಧನುಸ್ಸಿನ ಟೇಂಕಾರವೂ ನಮ್ಮಲ್ಲಿರುವ ಅಲ್ಪ-ಸ್ವಲ್ಪ ಧೈರ್ಯವನ್ನೂ ಕ್ಷಣಮಾತ್ರದಲ್ಲಿ ಅಪಹರಿಸಿಬಿಡುತ್ತದೆ. ಚಂದ್ರನಿಲ್ಲದ ಕಾಳರಾತ್ರಿಯಂತೆ–ನಮ್ಮ ಸೈನ್ಯವಿಂದು ನಾಯಕನಿಂದ ರಹಿತವಾಗಿದೆ. ಆನೆಯಿಂದ ಭಗ್ನವಾದ ವೃಕ್ಷಗಳುಳ್ಳ ಅರಣ್ಯದಂತೆ–ಬತ್ತಿಹೋದ ನೀರುಳ್ಳ ನದಿಯಂತೆ–ನಮ್ಮ ಸೈನ್ಯವಿಂದು ಬಹಳ ವ್ಯಾಕುಲಗೊಂಡು ನಿಸ್ತೇಜವಾಗಿದೆ. ಮಹಾಬಾಹುವಾದ, ಶ್ವೇತವಾಹನನಾದ ಅರ್ಜುನನು ನೇತಾರನಿಲ್ಲದ ನಮ್ಮ ಸೈನ್ಯದೊಳಗೆ ನುಗ್ಗಿ–ಹುಲ್ಲುಮೆದೆಯಲ್ಲಿರುವ ಅಗ್ನಿಯಂತೆ ಪ್ರಜ್ವಲಿಸುತ್ತಾ–ಸರ್ವತ್ರ ಅಡೆ-ತಡೆಗಳೇ ಇಲ್ಲದೇ ಸಂಚರಿಸುತ್ತಿದ್ದಾನೆ. ಸಾತ್ಯಕಿ-ಭೀಮಸೇನರೂ ಸಾಮಾನ್ಯರಲ್ಲ. ಅವರು ತಮ್ಮ ವೇಗದಿಂದ ಭೂಮಂಡಲದಲ್ಲಿರುವ ಎಲ್ಲ ಪರ್ವತಗಳನ್ನೂ ಸೀಳಿಬಿಡಬಲ್ಲರು; ಸಮುದ್ರಗಳನ್ನೂ ಶೋಷಿಸಿಬಿಡಬಲ್ಲರು. ಕೌರವರ ಸಭೆಯ ಮಧ್ಯದಲ್ಲಿ ಭೀಮಸೇನನಂದು ಯಾವ ಮಾತನ್ನಾಡಿದ್ದನೋ ಆ ಮಾತನ್ನವನು ಸಫಲಗೊಳಿಸಿಬಿಟ್ಟಿರುವನು. ಅವನು ಹೇಳಿರುವ ಮಾತುಗಳಲ್ಲಿ ಸಫಲಗೊಳಿಸದೇ ಉಳಿದಿರುವುದನ್ನು ಸಫಲಗೊಳಿಸಿಯೇ ತೀರುತ್ತಾನೆ. ಕರ್ಣನು ಸೇನಾಪ್ರಮುಖನಾಗಿ ನಿಂತು ಯುದ್ಧಮಾಡುತ್ತಿರಲಾಗಿ, ಪಾಂಡವರಕ್ಷಿತವಾಗಿದ್ದ ಸೈನ್ಯವು ಅವನಿಗೆ ದುರಾಸದವಾಗಿದ್ದಿತು. ಏಕೆಂದರೆ: ಪಾಂಡವರ ಸೈನ್ಯವು ಅರ್ಜುನನಿಂದ ವ್ಯೂಹಕ್ರಮದಲ್ಲಿ ನಿಲ್ಲಿಸಲ್ಪಟ್ಟಿದ್ದಿತು ಮತ್ತು ಅವನಿಂದಲೇ ರಕ್ಷಿಸಲ್ಪಡುತ್ತಿದ್ದಿತು. ಸತ್ಪುರುಷರಾದ ಪಾಂಡವರ ವಿಷಯದಲ್ಲಿ ನೀವು ನಿಷ್ಕಾರಣವಾಗಿ ಅಯೋಗ್ಯವಾದ ರೀತಿಯಲ್ಲಿ ವ್ಯವಹರಿ

ಸಿದಿರಿ. ಆದುದರಿಂದಲೇ ನಿಮಗೆ ಇಂತಹ ಫಲವು ಪ್ರಾಪ್ತವಾಯಿತು. ನಿನ್ನ ರಕ್ಷಣೆಯ ಸಲುವಾಗಿ ಅಥವಾ ನೀನು ಗೆಲ್ಲುವ ಸಲುವಾಗಿ ಈ ರಾಜರೂ ಪ್ರಾಣಸಂಕಟಕ್ಕೆ ಗುರಿಯಾಗಿದ್ದಾರೆ. ನೀನು ಅತ್ಯಂತಪ್ರಯತ್ನದಿಂದ ಪ್ರಪಂಚದ ಎಲ್ಲ ರಾಜರನ್ನೂ ಇಲ್ಲಿಗೆ ಕರೆತಂದಿರುವೆ. ಆದರೆ ಇಂದು ನಿನ್ನ ಜೀವವುಳಿಯುವುದೇ ಸಂಶಯವಾಗಿದೆ. ಈ ಸಮಯದಲ್ಲಾದರೂ ನೀನು ನಿನ್ನ ಶರೀರವನ್ನು ರಕ್ಷಿಸಿಕೊ. ಏಕೆಂದರೆ: **ಆತ್ಮಾ ಸರ್ವಸ್ಯ ಭಾಜನಮ್ ।**
**ಭಿನ್ನೇ ಹಿ ಭಾಜನೇ ತಾತ ದಿಶೋ ಗಚ್ಛತಿ ತದ್ಗತಮ್ ॥೪೨॥**

ಈ ಶರೀರವೇ ಸಮಸ್ತಸುಖಗಳ ಅನುಭವಸ್ಥಾನವಾಗಿದೆ. ಪಾತ್ರೆಯು ಭಿನ್ನವಾದನಂತರ ಅದರಲ್ಲಿರುವ ನೀರು ಎಲ್ಲ ಕಡೆಗಳಿಗೂ ಹರಿದುಹೋಗುವಂತೆ–ಶರೀರವು ನಷ್ಟವಾಗಿಹೋದನಂತರ ಶರೀರವನ್ನೇ ಅವಲಂಬಿಸಿರುವ ಸುಖಗಳೂ ಅಂತ್ಯಗೊಳ್ಳುತ್ತವೆ.

**ಹೀಯಮಾನೇನ ವೈ ಸನ್ಧಿಃ ಪರ್ಯೇಷ್ಟವ್ಯಃ ಸಮೇನ ವಾ ।**
**ವಿಗ್ರಹೋ ವರ್ಧಮಾನೇನ ಮತಿರೇಷಾ ಬೃಹಸ್ಪತೇಃ ॥೪೩॥**

'ತನ್ನ ಬಲವು ಶತ್ರುವಿನ ಬಲಕ್ಕಿಂತಲೂ ಕಡಿಮೆಯಾಗಿರುವಾಗ ಅಥವಾ ಸಮನಾಗಿರುವಾಗ–ಶತ್ರುವಿನೊಡನೆ ಸಂಧಿಯನ್ನು ಮಾಡಿಕೊಳ್ಳಲು ಮಾರ್ಗವನ್ನು ಹುಡುಕಬೇಕು. ತಾನು ಶತ್ರುವಿಗಿಂತಲೂ ಬಲಿಷ್ಠನೆಂದು ಮನಗಂಡಾಗ ಅವನೊಡನೆ ಯುದ್ಧಮಾಡಬೇಕು'–ಎಂದು ಬೃಹಸ್ಪತಿಯ ನೀತಿಶಾಸ್ತ್ರವು ಹೇಳುತ್ತದೆ. ಈಗ ನಾವು ಪಾಂಡುಪುತ್ರರಿಗಿಂತಲೂ ಬಲದಿಂದಲೂ ಮತ್ತು ಶಕ್ತಿಯಿಂದಲೂ ಹೀನರಾಗಿದ್ದೇವೆ. ಪ್ರಭೋ! ಆದುದರಿಂದ ಈ ಸಮಯದಲ್ಲಿ ನಾವು ಪಾಂಡವರೊಡನೆ ಸಂಧಿಮಾಡಿಕೊಳ್ಳುವುದೇ ಯುಕ್ತವಾಗಿದೆಯೆಂದು ನಾನು ಭಾವಿಸುತ್ತೇನೆ.

**ನ ಜಾನೀತೇ ಹಿ ಯಃ ಶ್ರೇಯಃ ಶ್ರೇಯಸಶ್ಚಾವಮನ್ಯತೇ ।**
**ಸ ಕ್ಷಿಪ್ರಂ ಭ್ರಶ್ಯತೇ ರಾಜ್ಯಾನ್ನ ಚ ಶ್ರೇಯೋಽನುವಿನ್ದತೇ ॥೪೪॥**

ಯಾವ ರೀತಿಯಲ್ಲಿ ವರ್ತಿಸಿದರೆ ಶ್ರೇಯಸ್ಸುಂಟಾಗುವುದೆಂಬುದನ್ನು ಯಾರು ತಿಳಿಯುವುದಿಲ್ಲವೋ, ಯಾರು ಶ್ರೇಷ್ಠಪುರುಷರನ್ನು ಅಪಮಾನ ಗೊಳಿಸುವರೋ–ಅಂತಹವರು ಬಹಳ ಬೇಗ ರಾಜ್ಯಭ್ರಷ್ಟರಾಗುತ್ತಾರೆ. ಅಂತಹವರಿಗೆ ಯಾವ ವಿಧವಾದ ಶ್ರೇಯಸ್ಸೂ ಲಭಿಸುವುದಿಲ್ಲ.

**ಪ್ರಣಿಪತ್ಯ ಹಿ ರಾಜಾನಂ ರಾಜ್ಯಂ ಯದಿ ಲಭೇಮಹಿ ।**
**ಶ್ರೇಯಃ ಸ್ಯಾನ್ನ ತು ಮೌಢ್ಯೇನ ರಾಜನ್ಗಂತುಃ ಪರಾಭವಮ್ ॥೪೬॥**

ಯುಧಿಷ್ಠಿರರಾಜನಿಗೆ ತಲೆಬಾಗಿ ನಾವು ರಾಜ್ಯವನ್ನು ಪಡೆದುಕೊಂಡರೆ ಅದರಿಂದ ನಮಗೆ ಶ್ರೇಯಸ್ಸೇ ಉಂಟಾಗುತ್ತದೆ. ಅದನ್ನು ಬಿಟ್ಟು ಮೌಢ್ಯದಿಂದ ಯುದ್ಧವನ್ನೇ ಮುಂದುವರಿಸಿ ಪರಾಭವಹೊಂದಿದರೆ ಯಾವ ವಿಧವಾದ ಶ್ರೇಯಸ್ಸೂ ಉಂಟಾಗುವುದಿಲ್ಲ. ದಯಾಳುವಾದ ಯುಧಿಷ್ಠಿರನು ವೈಚಿತ್ರವೀರ್ಯನ ಮತ್ತು ಶ್ರೀಕೃಷ್ಣನ ಮಾತಿನಿಂದ ನಿನ್ನನ್ನೇ ರಾಜ್ಯದಲ್ಲಿ ಪ್ರತಿಷ್ಠಿತನನ್ನಾಗಿಯೂ ಮಾಡಬಹುದು. (ರಾಜ್ಯವನ್ನು ನಿನಗೇ ಕೊಟ್ಟು ಬಿಡಬಹುದು.) ಹೃಷೀಕೇಶನು ಅಪರಾಜಿತನಾದ ಯುಧಿಷ್ಠಿರನಿಗೆ ಮತ್ತು ಭೀಮಾರ್ಜುನರಿಗೆ ಏನೆಂದು ಆಜ್ಞೆಮಾಡುವನೋ ಆ ಆಜ್ಞೆಯಂತೆಯೇ ಅವರೆಲ್ಲರೂ ನಡೆದುಕೊಳ್ಳುತ್ತಾರೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಕುರುರಾಜನಾದ ಧೃತರಾಷ್ಟ್ರನ ಮಾತನ್ನು ಶ್ರೀಕೃಷ್ಣನು ಉಲ್ಲಂಘಿಸುವುದಿಲ್ಲ. ಅಂತೆಯೇ ಶ್ರೀಕೃಷ್ಣನ ಮಾತನ್ನು ಯುಧಿಷ್ಠಿರನೂ ಉಲ್ಲಂಘಿಸುವುದಿಲ್ಲ–ಎಂಬುದು ನನ್ನ ಅಭಿಮತವಾಗಿದೆ. ಈ ಸಮಯದಲ್ಲಿ ನೀನು ಹೀಗೆ ಮಾಡುವುದೇ (ಯುಧಿಷ್ಠಿರನೊಡನೆ ಸಂಧಿಮಾಡಿಕೊಳ್ಳುವುದೇ) ಯುಕ್ತವೆಂದು ಭಾವಿಸುತ್ತೇನೆ. ಪಾರ್ಥರೊಡನೆ ಯುದ್ಧವನ್ನು ಮುಂದುವರಿಸುವುದು ಉಚಿತವಾಗಿ ಕಾಣುವುದಿಲ್ಲ. ನಾನು ಈ ಮಾತನ್ನು–ಯುದ್ಧಮಾಡುವುದು ಕಷ್ಟವೆಂಬ ಕಾರಣದಿಂದಾಗಲೀ, ನನ್ನ ಪ್ರಾಣಗಳನ್ನು ಉಳಿಸಿಕೊಳ್ಳಬೇಕೆಂಬ ಕಾರಣದಿಂದಾಗಲೀ ಹೇಳುತ್ತಿಲ್ಲ. ನಿನಗೆ ಪಥ್ಯವಾಗುವ ಮತ್ತು ಹಿತವಾಗುವ ಮಾತನ್ನು ಹೇಳುತ್ತಿದ್ದೇನೆ. ಒಂದು ವೇಳೆ ನೀನೀಗ ನನ್ನ ಮಾತನ್ನು ಅಂಗೀಕರಿಸಿ ಅದರಂತೆ ನಡೆದುಕೊಳ್ಳದಿದ್ದರೆ ಪ್ರಾಣೋತ್ಕ್ರಮಣವು ಸನ್ನಿಹಿತವಾದಾಗ ನನ್ನ ಈ ಮಾತುಗಳನ್ನು ಸ್ಮರಿಸಿಕೊಳ್ಳುವೆ."

ಮಹಾರಾಜ! ವೃದ್ಧರಾಗಿದ್ದ, ಶರದ್ವಂತರ ಮಕ್ಕಳಾದ ಕೃಪರು ಈ ಮಾತುಗಳನ್ನು ಹೇಳಿ ಸುದೀರ್ಘವಾಗಿ ಬಿಸಿ-ಬಿಸಿಯಾದ ನಿಟ್ಟುಸಿರು ಬಿಡುತ್ತಾ, ಬಹಳವಾಗಿ ಶೋಕಿಸುತ್ತಾ, ದುಃಖಾತಿರೇಕದಿಂದ ಮೂರ್ಛಿತರಾದರು."

ಳನೆಯ ಅಧ್ಯಾಯವು ಮುಗಿಯಿತು.

## ದುರ್ಯೋಧನನು ಕೃಪರಿಗೆ ಉತ್ತರಿಸಿದುದು: ಸಂಧಿಗೊಪ್ಪದೆ ಯುದ್ಧವನ್ನೇ ಮುಂದುವರಿಸಲು ನಿಶ್ಚಯಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ತಪಸ್ವಿಗಳಾದ ಗೌತಮರು ಹೀಗೆ ಹೇಳಿದನಂತರ ದುರ್ಯೋಧನನು ಸುದೀರ್ಘವಾದ ಮತ್ತು ಬಿಸಿ-ಬಿಸಿಯಾದ ನಿಟ್ಟುಸಿರು ಬಿಟ್ಟು ಸ್ವಲ್ಪಹೊತ್ತಿನವರೆಗೂ ಮೌನಿಯಾಗಿದ್ದನು. ಮಹಾಮನಸ್ವಿಯಾದ, ಶತ್ರುತಾಪಕನಾದ ದುರ್ಯೋಧನನು ಮುಹೂರ್ತಕಾಲದವರೆಗೆ ತನ್ನಲ್ಲಿಯೇ ಚಿಂತಿಸುತ್ತಿದ್ದು ಅನಂತರ ಕೃಪರನ್ನು ಕುರಿತು ಹೇಳಿದನು:

"ಬ್ರಾಹ್ಮಣೋತ್ತಮರೇ! ಹಿತೈಷಿಗಳಾದ ಸುಹೃದರು ಆಪತ್ಕಾಲಗಳಲ್ಲಿ ಯಾವ ಸಲಹೆಗಳನ್ನು ನೀಡಬೇಕೋ, ಅಂತಹ ಸಲಹೆಗಳನ್ನೇ ನೀವೂ ನೀಡಿರುವಿರಿ. ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುವ ನೀವು ನನ್ನ ವಿಜಯಕ್ಕಾಗಿ ಎಲ್ಲ ಪ್ರಯತ್ನಗಳನ್ನೂ ಮಾಡಿರುವಿರಿ. ಶತ್ರುಗಳ ಸೈನ್ಯದ ಮಧ್ಯದಲ್ಲಿ ನುಗ್ಗಿ ಮಹಾತೇಜಸ್ವಿಗಳಾದ, ಮಹಾರಥರಾದ ಪಾಂಡವರೊಡನೆ ಯುದ್ಧಮಾಡುವ ನಿಮ್ಮನ್ನು ಲೋಕವೇ ಅವಲೋಕಿಸಿದೆ. ಆದರೆ ಸುಹೃದರಾದ ನೀವು ನನ್ನನ್ನು ಕುರಿತು ಹೇಳಿದ ಮಾತುಗಳು– ಮರಣಾಸನ್ನನಾಗಿರುವವನಿಗೆ ಔಷಧಿಯು ಬೇಡವಾಗುವಂತೆ–ನನಗೆ ಗ್ರಾಹ್ಯವಾಗುವುದಿಲ್ಲ. ನಿಮ್ಮ ಮಾತುಗಳು ನನ್ನ ಮನಸ್ಸಿಗೆ ಆಪ್ಯಾಯನ (ಹಿತ)ವನ್ನುಂಟುಮಾಡಿಲ್ಲ.

ವಿಪ್ರಶ್ರೇಷ್ಠರೇ! ತಾವು ಯುಕ್ತಿ ಮತ್ತು ಕಾರಣಗಳಿಂದ ಸುಸಂಗತವಾದ, ಹಿತಕರವಾದ, ಉತ್ತಮವಾದ ಮಾತುಗಳನ್ನೇ ಆಡಿರುವಿರಿ. ಆದರೆ ಆ ಮಾತುಗಳು ನನ್ನ ಮನಸ್ಸಿಗೆ ರುಚಿಸುತ್ತಿಲ್ಲ.

**ರಾಜ್ಯಾದ್ವಿನಿಕೃತೋಽಸ್ಮಾಭಿಃ ಕಥಂ ಸೋಽಸ್ಮಾಸು ವಿಶ್ವಸೇತ್ ।**
**ಅಕ್ಷದ್ಯೂತೇ ಚ ನೃಪತಿರ್ಜಿತೋಽಸ್ಮಾಭಿರ್ಮಹಾಧನಃ ।**
**ಸ ಕಥಂ ಮಮ ವಾಕ್ಯಾನಿ ಶ್ರದ್ದಧ್ಯಾದ್ಭೂಯ ಏವ ತು ॥೭॥**

ನಮ್ಮಿಂದಲೇ ಯುಧಿಷ್ಠಿರನು ರಾಜ್ಯದಿಂದ ವಂಚಿತನಾದನು. ಮಹಾಧನನಾಗಿದ್ದ ನೃಪತಿಯನ್ನು ಪಗಡೆಯಾಟದಲ್ಲಿ ನಾವು ಸೋಲಿಸಿದೆವು. (ಅವನಲ್ಲಿದ್ದುದೆಲ್ಲವನ್ನೂ ಅಪಹರಿಸಿದೆವು.) ಹೀಗಿರುವಾಗ ಅವನು ನಮ್ಮ ಮೇಲೆ ಹೇಗೆ ವಿಶ್ವಾಸವನ್ನಿಡುವನು? ಪುನಃ ಯುಧಿಷ್ಠಿರನು ನನ್ನ ಮಾತಿನ ಮೇಲೆ ಹೇಗೆ ಶ್ರದ್ಧೆಯಿಡುತ್ತಾನೆ? ಪಾಂಡವರ ಹಿತದಲ್ಲಿಯೇ ನಿರತನಾದ ಶ್ರೀಕೃಷ್ಣನು ದೌತ್ಯವನ್ನು ವಹಿಸಿ ಸಂಧಿಗಾಗಿ ನಮ್ಮಲ್ಲಿಗೆ ಬಂದಿದ್ದನು. ಆ ಸಮಯದಲ್ಲಿ ನಮ್ಮಿಂದವನು ವಂಚಿತನಾದನು. ಆ ಸಮಯದಲ್ಲಿ ನಾವು ಮಾಡಿದ ಕಾರ್ಯವು ವಿವೇಕಯುಕ್ತವಾಗಿರಲಿಲ್ಲ. ಹೀಗಿರುವಾಗ ಈ ಸಮಯದಲ್ಲಿ ಶ್ರೀಕೃಷ್ಣನು ನನ್ನ ಮಾತನ್ನು ಹೇಗೆ ಮಾನ್ಯಮಾಡುತ್ತಾನೆ? ತುಂಬಿದ ಸಭೆಗೆ ದ್ರೌಪದಿಯನ್ನು ಸೆಳೆದುತಂದಾಗ ಅವಳು ವಿಲಪಿಸಿದುದನ್ನೂ ಮತ್ತು ಪಾಂಡವರ ರಾಜ್ಯಹರಣವನ್ನೂ ಶ್ರೀಕೃಷ್ಣನು ಖಂಡಿತವಾಗಿಯೂ ಸಹಿಸುವವನಲ್ಲ.

**ಏಕಪ್ರಾಣಾವುಭೌ ಕೃಷ್ಣಾವನ್ಯೋನ್ಯಮಭಿಸಂಶ್ರಿತೌ ।**
**ಪುರಾ ಯಚ್ಛ್ರುತಮೇವಾಸೀದದ್ಯ ಪಶ್ಯಾಮಿ ತತ್ಪ್ರಭೋ ॥೧೧॥**

ಕೃಷ್ಣಾರ್ಜುನರಿಬ್ಬರೂ ಒಂದೇ ಪ್ರಾಣವುಳ್ಳವರು. ದೇಹಗಳು ಮಾತ್ರ ಎರಡಾಗಿರುವಂತೆ ಕಾಣುತ್ತಿವೆ. ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಆಶ್ರಯಿಸಿರತಕ್ಕವರು. ಈ ವಿಷಯವನ್ನು ನಾನು ಹಿಂದೆ ಇತರರ ಬಾಯಿಂದ ಮಾತ್ರ ಕೇಳಿದ್ದೆನು. ಈಗ ಪ್ರತ್ಯಕ್ಷವಾಗಿಯೇ ನೋಡಿದೆನು. ತನ್ನ ತಂಗಿಯ ಮಗನಾದ ಅಭಿಮನ್ಯುವು ಹತನಾದನೆಂದು ಕೇಳಿದಂದಿನಿಂದ ಕೇಶವನು ಸುಖವಾಗಿ ನಿದ್ರೆಮಾಡುತ್ತಿಲ್ಲ. ನಾವು ಅವನಿಗೆ ಅಪರಾಧವನ್ನೆಸಗಿದ್ದೇವೆ. ಹೀಗಿರುವಾಗ ಅವನು ನಮ್ಮನ್ನು ಹೇಗೆ ತಾನೇ ಕ್ಷಮಿಸುವನು?

ಅಭಿಮನ್ಯುವಿನ ವಿನಾಶದಿಂದಾಗಿ ಅರ್ಜುನನಿಗೆ ಸುಖವೆಂಬುದೇ ಇಲ್ಲವಾಗಿದೆ. ಒಂದು ವೇಳೆ ನಾನು ಅವನನ್ನು ಪ್ರಾರ್ಥಿಸಿದರೂ ಅವನು ನನ್ನ ಅರ್ಥಸಿದ್ಧಿಗಾಗಿ ಹೇಗೆ ಪ್ರಯತ್ನಿಸುತ್ತಾನೆ?

**ಮಧ್ಯಮಃ ಪಾಣ್ಡವಸ್ತೀಕ್ಷ್ಣೋ ಭೀಮಸೇನೋ ಮಹಾಬಲಃ ।**
**ಪ್ರತಿಜ್ಞಾತಂ ಚ ತೇನೋಗ್ರಂ ಭಜ್ಯೇತಾಪಿ ನ ಸಂನಮೇತ್ ॥೧೪॥**

ಪಾಂಡವಮಧ್ಯಮನಾದ, ಮಹಾಬಲನಾದ ಭೀಮಸೇನನು ತೀಕ್ಷ್ಣ ಸ್ವಭಾವದವನು. ಅವನು ನನ್ನ ವಿಷಯದಲ್ಲಿ ಉಗ್ರವಾದ ಪ್ರತಿಜ್ಞೆಯನ್ನೇ ಮಾಡಿರುವನು. ಅವನು ಭಗ್ನನಾಗಬಹುದೇ ಹೊರತು ಬಾಗತಕ್ಕವನಲ್ಲ (ಮುರಿದುಹೋಗಬಹುದು. ಆದರೆ ಬಾಗುವುದಿಲ್ಲ.)

ಕತ್ತಿಗಳನ್ನು ಹಿಡಿದು ಕವಚಗಳನ್ನು ತೊಟ್ಟಿರುವ ಯಮಳರಾದ ನಕುಲ-ಸಹದೇವರು ಯಮರಾಜನಂತೆಯೇ ಭಯಂಕರರಾಗಿದ್ದು ನನ್ನ ವಿಷಯದಲ್ಲಿ ವೈರಭಾವವನ್ನು ತಳೆದಿದ್ದಾರೆ. ಶಿಖಂಡಿ-ಧೃಷ್ಟದ್ಯುಮ್ನರೂ ನನ್ನೊಡನೆ ದ್ವೇಷವನ್ನು ಕಟ್ಟಿಕೊಂಡಿರುತ್ತಾರೆ. ಅಂತಹವರು ನನ್ನ ಅರ್ಥಸಿದ್ಧಿಗಾಗಿ ಹೇಗೆ ಪ್ರಯತ್ನಿಸುವರು? ದುಃಶಾಸನನು ರಜಸ್ವಲೆ ಯಾಗಿದ್ದ, ಏಕವಸ್ತ್ರಧರಳಾಗಿದ್ದ ದ್ರೌಪದಿಯನ್ನು ಎಲ್ಲರೂ ನೋಡುತ್ತಿದ್ದಂತೆಯೇ ಸಭಾಮಧ್ಯಕ್ಕೆ ಸೆಳೆದು ತಂದನು. ಅಂತೆಯೇ ಅವಳನ್ನು ವಸ್ತ್ರಹೀನಳನ್ನಾಗಿ ಮಾಡಲು ಯತ್ನಿಸಿದನು. ಆ ಸಮಯದಲ್ಲಿ ದ್ರೌಪದಿಯು ಅತ್ಯಂತದೀನಳಾಗಿ ಶೋಕತಪ್ತಳಾಗಿದ್ದಳು. ಅಂದಿನ ಘಟನೆಯನ್ನು ಇಂದೂ ಸಹ ಪಾಂಡವರು ಸ್ಮರಿಸುತ್ತಾರೆ. ಆದುದರಿಂದ ಶತ್ರುತಾಪಕರಾದ ಪಾಂಡವರನ್ನು ಯುದ್ಧದಿಂದ ವಿರಮಿಸುವಂತೆ ಮಾಡಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ನಮ್ಮಿಂದ ಕ್ಲೇಶಗೊಳಿಸಲ್ಪಟ್ಟ ದ್ರೌಪದಿಯು ಪರಮದುಃಖಿತಳಾಗಿ ನನ್ನ ವಿನಾಶಕ್ಕೋಸ್ಕರವೇ ಸಂಕಲ್ಪಿಸಿ ಅನುದಿನವೂ (ಮಂಚದ ಮೇಲೆ ಮಲಗದೇ) ನೆಲದ ಮೇಲೆಯೇ ಮಲಗುತ್ತಿದ್ದಾಳೆ. ಎಂದಿನವರೆಗೆ ವೈರದ ಯಾತನೆಯಿರುವುದೋ ಅಲ್ಲಿಯವರೆಗೂ ಅವಳು ಆ ವ್ರತಾನುಷ್ಠಾನದಲ್ಲಿಯೇ ಇರುತ್ತಾಳೆ. (ನನ್ನ ವಧೆಯಾದನಂತರವೇ ದ್ರೌಪದಿಯು ಆ ವ್ರತವನ್ನು ಪರಿಸಮಾಪನಗೊಳಿಸುತ್ತಾಳೆ.) ದ್ರೌಪದಿಯು ಪತಿಗಳ ಅರ್ಥಸಿದ್ಧಿಗಾಗಿ ಉಗ್ರವಾದ ತಪಸ್ಸನ್ನು ಮಾಡಿದ್ದಾಳೆ. ವಾಸುದೇವನ ತಂಗಿಯಾದ ಸುಭದ್ರೆಯು ಮಾನ ಮತ್ತು ದರ್ಪಗಳನ್ನು ಬದಿಗೊತ್ತಿ ದ್ರೌಪದಿಯ ದಾಸಿಯಂತೆ ಅವಳ ಸೇವೆಯನ್ನು ಸರ್ವಕಾಲದಲ್ಲಿಯೂ ಮಾಡುತ್ತಿರುತ್ತಾಳೆ. ಹೀಗೆ ಎಲ್ಲ ಪ್ರಕಾರಗಳಿಂದಲೂ ಈ ವೈರವು ವೃದ್ಧಿಸುತ್ತಲೇ ಇದೆ. ಆದುದರಿಂದ ಈಗ ಅದನ್ನು ನಿವಾರಿಸಲು ಖಂಡಿತವಾಗಿಯೂ ಸಾಧ್ಯ ವಾಗುವುದಿಲ್ಲ. ಅಭಿಮನ್ಯುವನ್ನು ವಿನಾಶಗೊಳಿಸಿ ಅರ್ಜುನನ ಹೃದಯ

ವೇದನೆಗೆ ಕಾರಣನಾಗಿರುವ ನಾನು ಅವನೊಡನೆ ಸಂಧಿಯನ್ನು ಹೇಗೆ ಮಾಡಿಕೊಳ್ಳಲಿ? ಸಾರ್ವಭೌಮನಾಗಿ ಸಾಗರವೇ ವಸ್ತ್ರಪ್ರಾಯವಾಗಿರುವ (ಸಾಗರಾಂತವಾಗಿರುವ) ಈ ಅಖಂಡಭೂಮಂಡಲವನ್ನೂ ವೀರ್ಯ- ಪರಾಕ್ರಮ-ಯುಕ್ತಿಗಳಿಂದ ಇದುವರೆಗೂ ಉಪಭೋಗಿಸಿರುವ ನಾನು ಈಗ ಪಾಂಡವರ ಅನುಗ್ರಹದಿಂದ ಹೇಗೆ ಈ ರಾಜ್ಯವನ್ನು ಉಪಭೋಗಿಸಲಿ? ಭೂಮಂಡಲದ ಸಕಲರಾಜರನ್ನೂ ಮೆಟ್ಟಿ ಸೂರ್ಯನಂತೆಯೇ ಪ್ರಜ್ವಲಿಸುತ್ತಿರುವ ನಾನೀಗ ಯುಧಿಷ್ಠಿರನನ್ನು ಅನುಸರಿಸಿ ಸೇವಕನೋಪಾದಿಯಲ್ಲಿ ಅವನ ಹಿಂದೆ ಹೇಗೆ ತಿರುಗಲಿ? ರಾಜೋಚಿತವಾದ ಅನೇಕ ಭೋಗಗಳನ್ನು ಅನುಭವಿಸಿ, ಬೇಕುಬೇಕಾದಂತೆ ಪುಷ್ಕಳವಾಗಿ ದಾನಮಾಡುತ್ತಿದ್ದ ನಾನು ಈಗ ದೀನಪುರುಷನಂತೆ ದೀನಜೀವಿಕೆಯನ್ನು ಹೇಗೆ ನಡೆಸಲಿ? ಆಚಾರ್ಯರೇ! ನನ್ನ ಮೇಲಿನ ವಿಶ್ವಾಸದಿಂದ ಹಿತವಾದ ಮಾತುಗಳನ್ನೇ ಆಡಿರುತ್ತೀರಿ. ನೀವು ಹೀಗೆ ಹೇಳಕೂಡದಾಗಿತ್ತೆಂಬ ಅಭಿಪ್ರಾಯವೂ ನನ್ನದಲ್ಲ. ನೀವು ಹೀಗೆ ಹೇಳಿದ್ದರಿಂದ ನಿಮ್ಮಲ್ಲಿ ನಾನು ದೋಷವನ್ನು ಎಣಿಸುವುದಿಲ್ಲ. ಆದರೆ ಸಂಧಿಗೆ ಇದು ಸಕಾಲವಾಗಿದೆಯೆಂಬುದನ್ನು ಮಾತ್ರ ನಾನು ಯಾವುದೇ ಕಾರಣದಿಂದಲೂ ಒಪ್ಪುವುದಿಲ್ಲ. ಪರಂತಪರೇ! ಸರಿಯಾದ ರೀತಿಯಲ್ಲಿ ಯುದ್ಧಮಾಡುವುದೇ ಈಗ ಉತ್ತಮವಾದ ನೀತಿಯೆಂದು ನಾನು ಭಾವಿಸಿದ್ದೇನೆ. ನಮ್ಮ ದೌರ್ಬಲ್ಯವನ್ನು ಪ್ರದರ್ಶಿಸಲು ಇದು ಕಾಲವಲ್ಲ. ಉತ್ಸಾಹಪೂರ್ವಕವಾಗಿ ಯುದ್ಧಮಾಡಲು ಇದು ಸಕಾಲವಾಗಿದೆ. ಆಚಾರ್ಯರೇ! ನಾನು ಅನೇಕಯಜ್ಞಗಳಿಂದ ದೇವತೆಗಳನ್ನೂ ತೃಪ್ತಿಗೊಳಿಸಿದ್ದೇನೆ. ಬ್ರಾಹ್ಮಣರಿಗೆ ಅಪಾರವಾದ ದಕ್ಷಿಣೆಗಳನ್ನೂ ಕೊಟ್ಟಿದ್ದೇನೆ. ಸಕಲವಿಧವಾದ ಕಾಮನೆಗಳನ್ನೂ ಪಡೆದುಕೊಂಡು ಅನುಭವಿಸಿದ್ದೇನೆ. ವೇದಗಳನ್ನು ಅಧ್ಯಯನಮಾಡಿದ್ದೇನೆ. ಶತ್ರುಗಳ ತಲೆಗಳನ್ನು ಮೆಟ್ಟಿನಿಂತಿದ್ದೇನೆ. ಭೃತ್ಯರ ಪಾಲನೆ-ಪೋಷಣೆಗಳನ್ನು ಚೆನ್ನಾಗಿ ಮಾಡಿದ್ದೇನೆ. ದೀನ-ದಲಿತರನ್ನು ಉದ್ಧರಿಸಿದ್ದೇನೆ. (ಜೀವನದಲ್ಲಿ ಮಾಡಬೇಕಾದುದೆಲ್ಲವನ್ನೂ ಮಾಡಿ ಮುಗಿಸಿದ್ದೇನೆ. ಅನುಭವಿಸಬೇಕಾದುದೆಲ್ಲವನ್ನೂ ಅನುಭವಿಸಿದ್ದೇನೆ.) ಆದುದರಿಂದ ಈ ಸಮಯದಲ್ಲಿ ನಾನು ಪಾಂಡವರ ಬಳಿಗೆ ಹೋಗಿ 'ಸಂಧಿಮಾಡಿಕೊಳ್ಳಿರಿ' ಎಂದು ಯಾಚಿಸಲು

ಸಮರ್ಥನಾಗಿಲ್ಲ. ನಾನು ಶತ್ರುಗಳ ರಾಷ್ಟ್ರಗಳನ್ನು ಜಯಿಸಿ ಅವರನ್ನು ಸಾಮಂತರನ್ನಾಗಿ ಮಾಡಿಕೊಂಡಿರುತ್ತೇನೆ. ನನ್ನ ರಾಷ್ಟ್ರವನ್ನು ಚೆನ್ನಾಗಿ ಪರಿಪಾಲನೆಮಾಡಿದ್ದೇನೆ. ವಿಧ-ವಿಧವಾದ ಭೋಗಗಳನ್ನು ಉಪಭೋಗಿಸಿದ್ದೇನೆ. ಧರ್ಮಾರ್ಥಕಾಮಗಳನ್ನೂ ಸಾಧಿಸಿಕೊಂಡಿದ್ದೇನೆ. ಕ್ಷತ್ರಿಯಧರ್ಮದ ಮತ್ತು ಪಿತೃಗಳ ಋಣವನ್ನೂ ತೀರಿಸಿದ್ದೇನೆ.

**ನ ಧ್ರುವಂ ಸುಖಮಸ್ತೀಹ ಕುತೋ ರಾಷ್ಟ್ರಂ ಕುತೋ ಯಶಃ ।**
**ಇಹ ಕೀರ್ತಿರ್ವಿಧಾತವ್ಯಾ ಸಾ ಚ ಯುದ್ಧೇನ ನಾನ್ಯಥಾ ॥೩೧॥**

ಈ ಪ್ರಪಂಚದಲ್ಲಿ ಸುಖವೆಂಬುದು ಶಾಶ್ವತವಾಗಿರುವುದಿಲ್ಲ. ಹೀಗಿರುವಾಗ ರಾಷ್ಟ್ರವಾಗಲೀ *ಯಶಸ್ಸಾಗಲೀ ಶಾಶ್ವತವಾಗಿರಲು ಹೇಗೆ ಸಾಧ್ಯವಾಗುತ್ತದೆ? ಈ ಲೋಕದಲ್ಲಿ ಕೀರ್ತಿಯನ್ನು ಗಳಿಸುವುದೇ ಮುಖ್ಯ ಕರ್ತವ್ಯವಾಗಿರುತ್ತದೆ. ಕ್ಷತ್ರಿಯನಿಗೆ ಆ ಕೀರ್ತಿಯು ಯುದ್ಧದಿಂದಲ್ಲದೇ ಬೇರೆ ಯಾವ ವಿಧಾನದಿಂದಲೂ ಲಭಿಸುವುದಿಲ್ಲ.

**ಗೃಹೇ ಯತ್ಕ್ಷತ್ರಿಯಸ್ಯಾಪಿ ನಿಧನಂ ತದ್ವಿಗರ್ಹಿತಮ್ ।**
**ಅಧರ್ಮಃ ಸುಮಹಾನೇಷ ಯಚ್ಛಯ್ಯಾಮರಣಂ ಗೃಹೇ ॥೩೨॥**

ಕ್ಷತ್ರಿಯನಾದವನಿಗೆ ಮನೆಯಲ್ಲಿ ಮರಣವುಂಟಾದರೆ ಅದು ಅತಿನಿಂದ್ಯವಾದುದು. ಇಷ್ಟುಮಾತ್ರವಲ್ಲ; ಕ್ಷತ್ರಿಯನಾದವನು ಮನೆಯಲ್ಲಿ ಹಾಸಿಗೆಯ ಮೇಲೆ ಮರಣಹೊಂದುವುದು ದೊಡ್ಡ ಅಧರ್ಮವೇ ಸರಿ.

**ಅರಣ್ಯೇ ಯೋ ವಿಮುಚ್ಯೇತ ಸಂಗ್ರಾಮೇ ವಾ ತನುಂ ನರಃ ।**
**ಕ್ರತೂನಾಹೃತ್ಯ ಮಹತೋ ಮಹಿಮಾನಂ ಸ ಗಚ್ಛತಿ ॥೩೩॥**

ದೊಡ್ಡ-ದೊಡ್ಡ ಯಜ್ಞಗಳನ್ನು ಮಾಡುತ್ತಾ ಯಾವ ಕ್ಷತ್ರಿಯನು ಅರಣ್ಯದಲ್ಲಾಗಲೀ, ಯುದ್ಧದಲ್ಲಾಗಲೀ ಶರೀರತ್ಯಾಗಮಾಡುತ್ತಾನೆಯೋ ಅವನು ಮಹತ್ತ್ವವನ್ನು ಹೊಂದುತ್ತಾನೆ.

---

*ದಾನ-ಧರ್ಮಾದಿಗಳಿಂದ ಗಳಿಸಲ್ಪಡುವುದು ಕೀರ್ತಿ. ಇದು ಶಾಶ್ವತವಾದುದು. ಶೌರ್ಯದಿಂದ ಪಡೆಯುವುದು ಯಶಸ್ಸು. ಅದು ಅಶಾಶ್ವತವಾದುದು. ಎರಡು ಅರ್ಥಗಳಲ್ಲಿಯೂ ಎರಡು ಪದಗಳ ಪ್ರಯೋಗವೂ ಉಂಟು.

**ಕೃಪಣಂ ವಿಲಪನ್ನಾರ್ತೋ ಜರಯಾಭಿಪರಿಪ್ಲುತಃ ।**
**ಮ್ರಿಯತೇ ರುದತಾಂ ಮಧ್ಯೇ ಜ್ಞಾತೀನಾಂ ನ ಸ ಪೂರುಷಃ ॥೩೪॥**

ಮುಪ್ಪಿನಿಂದ ಶಿಥಿಲಹೊಂದಿದ ಶರೀರವುಳ್ಳವನಾಗಿ, ರೋಗದಿಂದ ಪೀಡಿತನಾಗಿ, ಆರ್ತನಾಗಿ ವಿಲಪಿಸುತ್ತಾ, ಗೋಳಾಡುತ್ತಿರುವ ಜ್ಞಾತಿಗಳ ಮಧ್ಯದಲ್ಲಿ ಮರಣಹೊಂದುವವನು ಖಂಡಿತವಾಗಿಯೂ ಪುರುಷನೇ ಅಲ್ಲ. (ಅವನನ್ನು ವೀರಪುರುಷನೆಂದು ಕರೆಯುವ ಸಾಧ್ಯತೆಯಿಲ್ಲ.)

**ತ್ಯಕ್ತ್ವಾ ತು ವಿವಿಧಾನ್ಭೋಗಾನ್ಪ್ರಾಪ್ತಾನಾಂ ಪರಮಾಂ ಗತಿಮ್ ।**
**ಅಪೀದಾನೀಂ ಸುಯುದ್ಧೇನ ಗಚ್ಛೇಯಂ ಯತ್ಸಲೋಕತಾಮ್ ॥೩೫॥**

ನಾನಾವಿಧವಾದ ಭೋಗಗಳನ್ನೂ ಪರಿತ್ಯಜಿಸಿ (ತಪಸ್ಸಿನಿಂದ) ಶ್ರೇಷ್ಠವಾದ ಗತಿಯನ್ನು ಪಡೆದುಕೊಂಡಿರುವವರಿಗೆ ಯಾವ ಉತ್ತಮಲೋಕಗಳು ಪ್ರಾಪ್ತವಾಗುವುವೋ ಅದೇ ಪುಣ್ಯಲೋಕಗಳನ್ನು ನಾನೀಗಲೇ ಧರ್ಮಯುದ್ಧದ ಮೂಲಕವಾಗಿ ಪಡೆದುಕೊಳ್ಳುತ್ತೇನೆ.

**ಶೂರಾಣಾಮಾರ್ಯವೃತ್ತಾನಾಂ ಸಂಗ್ರಾಮೇಷ್ವನಿವರ್ತಿನಾಮ್ ।**
**ಧೀಮತಾಂ ಸತ್ಯಸಂಧಾನಾಂ ಸರ್ವೇಷಾಂ ಕ್ರತುಯಾಜಿನಾಮ್ ।**
**ಶಸ್ತ್ರಾವಭೃಥಪೂತಾನಾಂ ಧ್ರುವಂ ವಾಸಸ್ತ್ರಿವಿಷ್ಟಪೇ ॥೩೬॥**

ಶ್ರೇಷ್ಠವಾದ ಆಚಾರ-ವ್ಯವಹಾರಗಳುಳ್ಳವರಿಗೆ, ಯುದ್ಧಭೂಮಿಯಿಂದ ಹಿಂದಿರುಗದಿರುವ ಶೂರರಿಗೆ, ಧೀಮಂತರಾದ ಸತ್ಯಪ್ರತಿಜ್ಞರಿಗೆ, ಯಜ್ಞ-ಯಾಗಾದಿಗಳನ್ನು ಮಾಡುವವರಿಗೆ, ಶಸ್ತ್ರದ ಅಲುಗಿನಿಂದ ಅವಭೃಥ ಸ್ನಾನಮಾಡಿ ಪೂತರಾದವರಿಗೆ–ಈ ಎಲ್ಲರಿಗೂ ಸ್ವರ್ಗದಲ್ಲಿ ವಾಸವು ನಿಶ್ಚಿತವಾಗಿದೆ.

**ಮುದಾ ನೂನಂ ಪ್ರಪಶ್ಯನ್ತಿ ಯುದ್ಧೇ ಹ್ಯಪ್ಸರಸಾಂ ಗಣಾಃ ।**
**ಪಶ್ಯನ್ತಿ ನೂನಂ ಪಿತರಃ ಪೂಜಿತಾನ್ಸುರಸಂಸದಿ ।**
**ಅಪ್ಸರೋಭಿಃ ಪರಿವೃತಾನ್ಮೋದಮಾನಾಂಸ್ತ್ರಿವಿಷ್ಟಪೇ ॥೩೭॥**

ಯುದ್ಧದಲ್ಲಿ ಪ್ರಾಣಾರ್ಪಣೆಮಾಡುವವರನ್ನು ಅಪ್ಸರೆಯರು ಪರಮ ಸಂತೋಷದಿಂದ ಸ್ವಾಗತಿಸುತ್ತಾರೆ. ದೇವತೆಗಳ ಸಭೆಯಲ್ಲಿ ಸಮ್ಮಾನಿತ

ರಾಗುವ ಮತ್ತು ಅಪ್ಸರೆಯರಿಂದ ಪರಿವೃತರಾಗಿ ಸ್ವರ್ಗದಲ್ಲಿ ಅತಿಶಯವಾದ ಆನಂದವನ್ನನುಭವಿಸುವ ಇಂತಹ ವೀರರನ್ನು ನೋಡಿ ಪಿತೃಗಳೂ ಆನಂದಿಸುತ್ತಾರೆ.

ಯುದ್ಧದಿಂದ ಹಿಂದಿರುಗದೇ ಯುದ್ಧಮಾಡುತ್ತಿರುವಾಗಲೇ ಪ್ರಾಣಾರ್ಪಣೆಮಾಡುವವರೂ ಮತ್ತು ದೇವತೆಗಳೂ ಹೋಗುವ ಮಾರ್ಗವನ್ನೇ ಅನುಸರಿಸಿ ನಾವೂ ಸಹ ಪುಣ್ಯಲೋಕಗಳಿಗೆ ಹೋಗುತ್ತೇವೆ. ವೃದ್ಧರಾದ ಪಿತಾಮಹ ಭೀಷ್ಮ, ಧೀಮಂತರಾದ ಆಚಾರ್ಯರು, ಜಯದ್ರಥ-ಕರ್ಣ- ದುಃಶಾಸನರು ಇವರೊಡನೆ ಕೂಡಿಕೊಂಡು ನಾವಲ್ಲಿಗೆ ಹೋಗುತ್ತೇವಲ್ಲವೇ!

ನನ್ನ ಸಲುವಾಗಿ ಸಂಘಟಿತರಾಗಿ ಬಂದಿರುವ ಶೂರರಾದ ರಾಜರು ಬಾಣಗಳಿಂದ ಕ್ಷತ-ವಿಕ್ಷತರಾಗಿ, ಹತರಾಗಿ, ರಕ್ತಸಿಕ್ತಾಂಗರಾಗಿ ರಣಭೂಮಿಯಲ್ಲಿ ಮಲಗಿದ್ದಾರೆ. ಉತ್ತಮಾಸ್ತ್ರಗಳನ್ನು ತಿಳಿದಿದ್ದ, ಶೂರರಾದ– ವಿಧ್ಯುಕ್ತವಾಗಿ ಯಜ್ಞ-ಯಾಗಾದಿಗಳನ್ನು ಮಾಡಿದ್ದ ರಾಜರು, ಯಥೋಚಿತವಾದ ರೀತಿಯಲ್ಲಿ ಪ್ರಾಣಗಳನ್ನು ಪರಿತ್ಯಜಿಸಿ ಇಂದ್ರನ ಲೋಕದಲ್ಲಿ ಆಶ್ರಯವನ್ನು ಪಡೆದಿರುತ್ತಾರೆ. ಮಹಾರಭಸದಿಂದ ಯುದ್ಧದಲ್ಲಿ ತೊಡಗಿ ಪ್ರಾಣಾರ್ಪಣೆಮಾಡಿ ಸದ್ಗತಿಯನ್ನು ಹೊಂದುವವರಿಂದ ನಿರ್ಮಿತವಾಗಿರುವ ಈ ಮಾರ್ಗವು ಸುಗಮವಾಗಿದೆ. ಮುಂದೆ (ಇಂತಹ ಯುದ್ಧಗಳು ನಡೆಯದೆ) ಸದ್ಗತಿಯ ಈ ಮಾರ್ಗವು ಪುನಃ ದುರ್ಗಮವಾಗಬಹುದು. ನನ್ನ ಸಲುವಾಗಿ ಯುದ್ಧಮಾಡುತ್ತಾ ಯಾವ ಶೂರರು ಹತರಾಗಿದ್ದಾರೆಯೋ– ಅವರ ಸಾಹಸಕಾರ್ಯಗಳನ್ನು ಸ್ಮರಿಸುತ್ತಾ ಅವರ ಋಣದಿಂದ ವಿಮುಕ್ತಿಯನ್ನು ಹೊಂದಲು ಪ್ರಯತ್ನಿಸುತ್ತಿರುವ ನಾನು ರಾಜ್ಯವನ್ನು ಪಡೆದುಕೊಳ್ಳಬೇಕೆಂಬ ಮನಸ್ಸುಳ್ಳವನಾಗಿಲ್ಲ. ಸ್ನೇಹಿತರನ್ನೂ, ತಮ್ಮಂದಿರನ್ನೂ, ಪಿತಾಮಹರನ್ನೂ ಸಾಯಗೊಟ್ಟು ಈ ಸಮಯದಲ್ಲಿ ನಾನು ನನ್ನ ಜೀವಿತವನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸಿದ್ದೇ ಆದರೆ ಲೋಕವು ನನ್ನನ್ನು ಖಂಡಿತವಾಗಿಯೂ ನಿಂದಿಸುತ್ತದೆ. ಬಂಧುಗಳಿಂದಲೂ, ಸ್ನೇಹಿತರಿಂದಲೂ ವಿಹೀನನಾಗಿ ಯುಧಿಷ್ಠಿರನಿಗೆ ಶರಣಾಗತನಾಗಿ ಪಡೆದುಕೊಳ್ಳುವ ನನ್ನ ರಾಜ್ಯಭಾರವಾದರೂ ಹೇಗಿದ್ದಿರಬಹುದು? (ನಿಶ್ಚಯವಾಗಿಯೂ ಬಂಧು-ಮಿತ್ರರಿಂದ ವಿಹೀನನಾಗಿ ದೈನ್ಯದಿಂದ ರಾಜ್ಯವನ್ನು ಪಡೆದುಕೊಳ್ಳುವ ನಾನು ಮನುಷ್ಯ

ನೆನಿಸುವೆನೇ? ಅಂತಹ ರಾಜ್ಯವಾದರೂ ನನಗೇಕೆ ಬೇಕು?) ಭೂಮಂಡಲವನ್ನೇ ಪರಾಜಯಗೊಳಿಸಿ ಅಸಾಮಾನ್ಯವಾದ ರೀತಿಯಲ್ಲಿ ರಾಜ್ಯಭಾರಮಾಡುತ್ತಿರುವ ನಾನು ಇನ್ನು ಮುಂದೆ ದೀನನಾಗಿ ಬಂಧುಗಳಿಂದ ರಹಿತನಾಗಿ ರಾಜ್ಯಭಾರಮಾಡಲು ಹೇಗೆ ಸಾಧ್ಯ? ಆದುದರಿಂದ ಉತ್ತಮವಾದ ಯುದ್ಧದ ಮೂಲಕವಾಗಿಯೇ ನಾನು ಸ್ವರ್ಗವನ್ನು ಪಡೆದುಕೊಳ್ಳುತ್ತೇನೆ. ನನ್ನ ಶ್ರೇಯಸ್ಸಿಗೆ ಇದಕ್ಕಿಂತಲೂ ಮಿಗಿಲಾದ ಬೇರೆಯ ಮಾರ್ಗವೇ ಇಲ್ಲ."

ಮಹಾರಾಜ! ದುರ್ಯೋಧನನು ಹೇಳಿದ ಮಾತುಗಳನ್ನು ಎಲ್ಲ ಯೋಧರೂ ಗೌರವಿಸಿದರು. ಎಲ್ಲ ಕ್ಷತ್ರಿಯರೂ ದುರ್ಯೋಧನರಾಜನನ್ನು 'ಸಾಧು-ಸಾಧು' ಎಂಬುದಾಗಿ ಪ್ರಶಂಸೆಮಾಡಿದರು. ತಮ್ಮ ಪರಾಜಯದ ವಿಷಯವಾಗಿ ಶೋಕಿಸುವುದನ್ನು ನಿಲ್ಲಿಸಿ, ಪರಾಕ್ರಮವನ್ನು ತೋರಿಸುವುದರಲ್ಲಿಯೇ ದೃಢಚಿತ್ತರಾಗಿ, ಎಲ್ಲರೂ ಯುದ್ಧಮಾಡಲು ನಿಶ್ಚಯಿಸಿ ಉತ್ಸಾಹಪೂರ್ಣಮನಸ್ಕರಾದರು. ಯುದ್ಧಾಭಿನಂದಿಗಳಾದ ಆ ಎಲ್ಲ ಕೌರವರೂ ತಮ್ಮ-ತಮ್ಮ ವಾಹನಗಳನ್ನು ಹುಲ್ಲು-ನೀರು ಮುಂತಾದುವುಗಳಿಂದ ಸಂತಯಿಸಿ, ಎರಡು ಯೋಜನಗಳಿಗಿಂತಲೂ ಸ್ವಲ್ಪ ಕಡಿಮೆ ದೂರದಲ್ಲಿ ಬಿಡಾರಗಳನ್ನು ಮಾಡಿಕೊಂಡರು.

ಆಕಾಶದಲ್ಲಿರುವಂತೆಯೇ ಕಾಣುತ್ತಿದ್ದ, ವೃಕ್ಷರಹಿತವಾಗಿದ್ದ, ಶುಭಾವಹವಾದ ಹಿಮವತ್ಪರ್ವತದ ಪುಣ್ಯತಮವಾದ ತಪ್ಪಲುಪ್ರದೇಶದಲ್ಲಿ ಹರಿಯುತ್ತಿದ್ದ, ಎಣೆಗೆಂಪಿನ ನೀರಿನಿಂದ ಕೂಡಿದ್ದ ಸರಸ್ವತೀನದಿಯ ಬಳಿಗೆ ಹೋಗಿ ಕೌರವಯೋಧರು ಆ ಪವಿತ್ರಜಲವನ್ನು ಕುಡಿದರು ಮತ್ತು ಅದರಲ್ಲಿಯೇ ಮಿಂದರು. ಕಾಲಚೋದಿತರಾದ ಸಮಸ್ತಕ್ಷತ್ರಿಯರೂ ನಿನ್ನ ಮಗನಿಂದ ಪ್ರೋತ್ಸಾಹಿತರಾಗಿ ಪರಸ್ಪರಸಂಭಾಷಣೆಗಳಿಂದ ಮನಸ್ಸನ್ನು ಯುದ್ಧದಲ್ಲಿಯೇ ಸ್ಥಿರಗೊಳಿಸಿ ಯುದ್ಧಭೂಮಿಗೆ ಹಿಂದಿರುಗಿದರು."

೫ನೆಯ ಅಧ್ಯಾಯವು ಮುಗಿಯಿತು.

## ದುರ್ಯೋಧನನ ಕೋರಿಕೆಯಂತೆ ಅಶ್ವತ್ಥಾಮನು ಶಲ್ಯನಿಗೆ ಸೇನಾಪತ್ಯವನ್ನು ವಹಿಸಲು ಹೇಳಿದುದು: ದುರ್ಯೋಧನನು ಶಲ್ಯನನ್ನು ಸೇನಾಪತಿಯಾಗಲು ಪ್ರಾರ್ಥಿಸಿದುದು: ಸೇನಾಪತಿಯಾಗಲು ಶಲ್ಯನು ಒಪ್ಪಿಗೆಯನ್ನಿತ್ತುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಹಿಮಾಲಯದ ತಪ್ಪಲಿನಲ್ಲಿ ಬಿಡಾರಗಳನ್ನು ಸ್ಥಾಪಿಸಿ ಯುದ್ಧಾಭಿನಂದಿಗಳಾದ ಎಲ್ಲ ಮಹಾಯೋಧರೂ ಅಲ್ಲಿ ಸೇರಿದರು. ಶಲ್ಯ, ಚಿತ್ರಸೇನ, ಮಹಾರಥನಾದ ಶಕುನಿ, ಅಶ್ವತ್ಥಾಮಾ, ಕೃಪರು, ಸಾತ್ವತವಂಶೀಯನಾದ ಕೃತವರ್ಮಾ, ಸುಷೇಣ, ಅರಿಷ್ಟಸೇನ, ವೀರ್ಯವಂತನಾದ ಧೃತಸೇನ, ಜಯತ್ಸೇನ–ಇವರೆಲ್ಲರೂ ಹಿಮಾಲಯದ ತಪ್ಪಲಿನಲ್ಲಿಯೇ ಆ ರಾತ್ರಿಯನ್ನು ಕಳೆದರು. ವೀರನಾದ ಕರ್ಣನು ಯುದ್ಧದಲ್ಲಿ ಹತನಾಗಲಾಗಿ ವಿಜಯದಿಂದ ಉಲ್ಲಸಿತರಾದ ಪಾಂಡವರಿಂದ ಭಯಗೊಳಿಸಲ್ಪಟ್ಟ ನಿನ್ನ ಮಕ್ಕಳು ಹಿಮಾಲಯಪರ್ವತದ ತಪ್ಪಲನ್ನು ಬಿಟ್ಟು ಮತ್ತೆಲ್ಲಿಯೂ ಶಾಂತಿಯನ್ನು ಪಡೆದುಕೊಳ್ಳಲಿಲ್ಲ. ಕದಡಿಹೋಗಿದ್ದ ಅವರ ಮನಸ್ಸಿಗೆ ಹಿಮಾಲಯದ ತಪ್ಪಲಿನಲ್ಲಿ ನೆಮ್ಮದಿಯು ಸಿಕ್ಕಿತು. ರಣಾಂಗಣದಲ್ಲಿ ದುರ್ಯೋಧನನಿಗೆ ವಿಜಯವನ್ನು ಗಳಿಸಿಕೊಡಬೇಕೆಂದು ಸತತವಾಗಿ ಪ್ರಯತ್ನಿಸುತ್ತಿದ್ದ ಎಲ್ಲ ಯೋಧರೂ ಅಲ್ಲಿ ಸಂಘಟಿತರಾಗಿ ಶಲ್ಯರಾಜನ ಸಮೀಪದಲ್ಲಿದ್ದ ದುರ್ಯೋಧನನನ್ನು ವಿಧಿಪೂರ್ವಕವಾಗಿ ಸಂಪೂಜಿಸಿ ಹೇಳಿದರು:

“ಮಹಾರಾಜ! ನಮ್ಮ ಸೈನ್ಯಕ್ಕೆ ನಾಯಕನೊಬ್ಬನನ್ನು ನಿಯಮಿಸಿ ಶತ್ರುಗಳೊಡನೆ ಯುದ್ಧಮಾಡುವುದು ಸೂಕ್ತವಾಗಿ ಕಾಣುತ್ತದೆ. ಸೇನಾಪತಿಯಿಂದ ರಕ್ಷಿಸಲ್ಪಡುವ ನಾವು ಶತ್ರುಗಳನ್ನು ಜಯಿಸುತ್ತೇವೆ.”

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ನಿನ್ನ ಕಡೆಯ ಯೋಧರು ಹೀಗೆ ಹೇಳುತ್ತಲೇ ದುರ್ಯೋಧನನು ರಥದಲ್ಲಿ ಕುಳಿತು ಅಶ್ವತ್ಥಾಮನ ಸಮೀಪಕ್ಕೆ ಹೋದನು.

ತತೋ ದುರ್ಯೋಧನಃ ಸ್ಥಿತ್ವಾ ರಥೇ ರಥವರೋತ್ತಮಮ್ ।
ಸರ್ವಯುದ್ಧವಿಭಾವಜ್ಞಮನ್ತಕಪ್ರತಿಮಂ ಯುಧಿ ॥೭॥

ಸ್ವಙ್ಗಂ ಪ್ರಚ್ಛನ್ನಶಿರಸಂ ಕಮ್ಬುಗ್ರೀವಂ ಪ್ರಿಯಂವದಮ್ ।
ವ್ಯಾಕೋಶಪದ್ಮಪತ್ರಾಕ್ಷಂ ವ್ಯಾಘ್ರಾಸ್ಯಂ ಮೇರುಗೌರವಮ್ ॥೮॥

ಸ್ಥಾಣೋರ್ವೃಷಸ್ಯ ಸದೃಶಂ ಸ್ಕನ್ಧನೇತ್ರಗತಿಸ್ವರೈಃ ।
ಪುಷ್ಟಶ್ಲಿಷ್ಟಾಯುತಭುಜಂ ಸುವಿಸ್ತೀರ್ಣವರೋರಸಮ್ ॥೯॥

ಬಲೇ ಜವೇ ಚ ಸದೃಶಮರುಣಾನುಜವಾತಯೋಃ ।
ಆದಿತ್ಯಸ್ಯಾರ್ಚಿಷಾ ತುಲ್ಯಂ ಬುದ್ಧ್ಯಾ ಚೋಶನಸಾ ಸಮಮ್ ॥೧೦॥

ಕಾನ್ತಿರೂಪಮುಖೈಶ್ಚರ್ಯೈಸ್ತ್ರಿಭಿಶ್ಚನ್ದ್ರಮಸಾ ಸಮಮ್ ।
ಕಾಞ್ಚನೋಪಲಸಂಘಾತೈಃ ಸದೃಶಂ ಶ್ಲಿಷ್ಟಸಂಧಿಕಮ್ ॥೧೧॥

ಸುವೃತ್ತೋರುಕಟೀಜಙ್ಘಂ ಸುಪಾದಂ ಸ್ವಙ್ಗುಲೀನಖಮ್ ।
ಸ್ಮೃತ್ವಾ ಸ್ಮೃತ್ವೈವ ತು ಗುಣಾನ್ಧಾತ್ರಾ ಯತ್ನಾದ್ವಿನಿರ್ಮಿತಮ್ ॥೧೨॥

ಸರ್ವಲಕ್ಷಣಸಂಪನ್ನಂ ನಿಪುಣಂ ಶ್ರುತಿಸಾಗರಮ್ ।
ಜೇತಾರಂ ತರಸಾರೀಣಾಮಜೇಯಮರಿಭಿರ್ಬಲಾತ್ ॥೧೩॥

ದಶಾಙ್ಗಂ ಯಶ್ಚತುಷ್ಪಾದಮಿಷ್ವಸ್ತ್ರಂ ವೇದ ತತ್ತ್ವತಃ ।
ಸಾಙ್ಗಾಂಸ್ತು ಚತುರೋ ವೇದಾನ್ಸಮ್ಯಗಾಖ್ಯಾನಪಞ್ಚಮಾನ್ ॥೧೪॥

ಆರಾಧ್ಯ ತ್ರ್ಯಮ್ಬಕಂ ಯತ್ನಾದ್ವ್ರತೈರುಗ್ರೈರ್ಮಹಾತಪಾಃ ।
ಅಯೋನಿಜಾಯಾಮುತ್ಪನ್ನೋ ದ್ರೋಣೇನಾಯೋನಿಜೇನ ಯಃ॥೧೫॥

ತಮಪ್ರತಿಮಕರ್ಮಾಣಂ ರೂಪೇಣಾಪ್ರತಿಮಂ ಭುವಿ ।
ಪಾರಗಂ ಸರ್ವವಿದ್ಯಾನಾಂ ಗುಣಾರ್ಣವಮನಿನ್ದಿತಮ್ ।
ತಮಭ್ಯೇತ್ಯಾತ್ಮಜಸ್ತುಭ್ಯಮಶ್ವತ್ಥಾಮಾನಮಬ್ರವೀತ್ ॥೧೬॥

ಅಶ್ವತ್ಥಾಮನು ಎಲ್ಲ ರಣಶ್ರೇಷ್ಠರಲ್ಲಿಯೂ ಉತ್ತಮನಾಗಿದ್ದನು. ಯುದ್ಧದ ಎಲ್ಲ ಪ್ರಕಾರಗಳನ್ನೂ (ಧನುರ್ಯುದ್ಧ, ಗದಾಯುದ್ಧ, ಖಡ್ಗಯುದ್ಧ, ಮುಷ್ಟಿಯುದ್ಧ–ಇವೇ ಮುಂತಾದುವುಗಳನ್ನೂ) ತಿಳಿದವ

ನಾಗಿದ್ದನು. ಯುದ್ಧದಲ್ಲಿ ಯಮಸದೃಶನಾಗಿ ಶತ್ರುಭಯಂಕರನಾಗಿದ್ದನು. ಅವನ ಅವಯವಗಳು ಬಹುಸುಂದರವಾಗಿದ್ದುವು. ಅವನ ತಲೆಯು ಕೇಶರಾಶಿಯಿಂದ ಮುಚ್ಚಲ್ಪಟ್ಟಿದ್ದಿತು. ಎಲ್ಲರೊಡನೆಯೂ ಪ್ರಿಯವಾದ ಮಾತುಗಳನ್ನೇ ಆಡುತ್ತಿದ್ದನು. ಕಣ್ಣುಗಳು ಅರಳಿದ ಕಮಲದಳಗಳಿಗೆ ಅನುರೂಪವಾಗಿದ್ದುವು. ಮುಖವು ವ್ಯಾಘ್ರದ ಮುಖದಂತೆ ಭಯಂಕರವಾಗಿಯೂ ವಿಶಾಲವಾಗಿಯೂ ಇದ್ದಿತು. ದೊಡ್ಡತನದಲ್ಲವನು ಮೇರುಪರ್ವತಕ್ಕೆ ಸಮಾನನಾಗಿದ್ದನು. ಹೆಗಲು, ಕಣ್ಣುಗಳು, ನಡಿಗೆ ಮತ್ತು ಗರ್ಜನೆಗಳಲ್ಲಿ ಅಶ್ವತ್ಥಾಮನು ಶಂಕರನ ವಾಹನವಾದ ನಂದಿಗೆ ಸಮಾನನಾಗಿದ್ದನು. ತೋಳುಗಳು ಪುಷ್ಟವಾಗಿಯೂ, ಸುಸಂಘಟಿತ ವಾಗಿಯೂ, ನೀಳವಾಗಿಯೂ ಇದ್ದುವು. ಅವನಿಗೆ ವಿಶಾಲವಾದ ಮತ್ತು ಶ್ರೇಷ್ಠವಾದ ವಕ್ಷಃಸ್ಥಳವಿದ್ದಿತು. ಬಲದಲ್ಲಿಯೂ ಮತ್ತು ವೇಗದಲ್ಲಿಯೂ ದ್ರೌಣಿಯು ಅರುಣಾನುಜನಾದ ಗರುಡನಿಗೂ, ವಾಯುವಿಗೂ ಸಮಾನನಾಗಿದ್ದನು. ತೇಜಸ್ಸಿನಲ್ಲಿ ಸೂರ್ಯನಿಗೂ, ಬುದ್ಧಿಯಲ್ಲಿ ಶುಕ್ರಾಚಾರ್ಯರಿಗೂ ಸಮಾನನಾಗಿದ್ದನು.

ಕಾಂತಿ, ರೂಪ ಮತ್ತು ವದನಸೌಂದರ್ಯ–ಈ ಮೂರರಲ್ಲಿ ಚಂದ್ರಸದೃಶನಾಗಿದ್ದನು. ಅವನ ಶರೀರವು ಸುವರ್ಣಮಯವಾದ ಕಲ್ಲು ಗಳ ಸಮೂಹದಂತೆ ಕಾಂತಿಯುಕ್ತವಾಗಿದ್ದಿತು. ಶರೀರವು ಸುಘಟಿತವಾದ ಸಂಧಿಗಳಿಂದ ಕೂಡಿದ್ದಿತು. ಅವನ ತೊಡೆಗಳೂ, ಕಟಿ ಮತ್ತು ಮೊಣಕಾಲು ಗಳೂ ವೃತ್ತಾಕಾರದಿಂದಿದ್ದುವು. (ದುಂಡಾಗಿದ್ದುವು). ಎರಡು ಪಾದ ಗಳೂ, ಬೆರಳುಗಳೂ ಮತ್ತು ಉಗುರುಗಳೂ ಸುಂದರವಾಗಿದ್ದುವು. ಬ್ರಹ್ಮನು ಒಳ್ಳೊಳ್ಳೆಯ ಗುಣಗಳನ್ನು ಸ್ಮರಣೆಗೆ ತಂದುಕೊಂಡು ಅಶ್ವತ್ಥಾಮನ ಶರೀರವನ್ನು ಪ್ರಯತ್ನಪೂರ್ವಕವಾಗಿ ನಿರ್ಮಿಸಿದನೋ–ಎನ್ನುವಷ್ಟು ಅವನ ಅವಯವಗಳು ಬಹಳ ಸುಂದರವಾಗಿದ್ದುವು. ಆದುದರಿಂದಲೇ ದ್ರೌಣಿಯು ಸರ್ವಲಕ್ಷಣಸಂಪನ್ನನಾಗಿದ್ದನು. ಬಹಳ ನಿಪುಣನಾಗಿದ್ದನು. ವೇದವಿದ್ಯೆಗಳಿಗೆ ಸಮುದ್ರಪ್ರಾಯನಾಗಿದ್ದನು. ಶತ್ರುಗಳನ್ನು ಬಹಳ ಬೇಗ ಜಯಿಸುವವನಾಗಿದ್ದನು. ಆದರೆ ಶತ್ರುಗಳಿಗೆ ಅವನನ್ನು ಬಲಪೂರ್ವಕವಾಗಿಯಾದರೂ ಪರಾಜಯಗೊಳಿಸಲು ಸಾಧ್ಯವಾಗುತ್ತಿರಲಿಲ್ಲ.

ವ್ರತ, ಪ್ರಾಪ್ತಿ, ಧೃತಿ, ಪುಷ್ಟಿ, ಸ್ಮೃತಿ, ಕ್ಷೇಪ, ಶತ್ರುಭೇದನ, ಚಿಕಿತ್ಸಾ, ಉದ್ದೀಪನ ಮತ್ತು ಕೃಷ್ಟಿಗಳೆಂಬ ಹತ್ತು ವಿಧವಾದ ಧನುರ್ವೇದದ ಅಂಗಗಳನ್ನೂ ದ್ರೌಣಿಯು ತಿಳಿದುಕೊಂಡಿದ್ದನು. ದೀಕ್ಷಾ, ಶಿಕ್ಷಾ, ಆತ್ಮರಕ್ಷಾ ಮತ್ತು ಸಾಧನಗಳೆಂಬ ನಾಲ್ಕು ಪಾದಗಳನ್ನೂ ತಿಳಿದುಕೊಂಡಿದ್ದನು. ಇಷ್ವಸ್ತ್ರಗಳ ಆದಾನ-ಸಂಧಾನ-ಪ್ರಯೋಗಗಳನ್ನೂ ಯಥಾವತ್ತಾಗಿ ತಿಳಿದು ಕೊಂಡಿದ್ದನು. ನಾಲ್ಕು ವೇದಗಳನ್ನೂ ಸಾಂಗವಾಗಿ (ಷಡಂಗಸಹಿತವಾಗಿ) ಅಧ್ಯಯನಮಾಡಿದ್ದನು. ಇತಿಹಾಸ-ಪುರಾಣ ರೂಪವಾದ ಐದನೆಯ ವೇದವನ್ನೂ ತಿಳಿದುಕೊಂಡಿದ್ದನು. ಮಹಾತಪಸ್ವಿಯಾದ ಅಶ್ವತ್ಥಾಮನು ಉಗ್ರವಾದ ವ್ರತಾನುಷ್ಠಾನಗಳಿಂದ ತ್ರ್ಯಂಬಕನನ್ನು ಪ್ರಯತ್ನಪೂರ್ವಕವಾಗಿ ಆರಾಧಿಸಿ ಅವನ ಅನುಗ್ರಹವನ್ನು ಪಡೆದುಕೊಂಡಿದ್ದನು. ಅಯೋನಿಜೆಯಾದ ಕೃಪಿಯ ಮತ್ತು ಅಯೋ ನಿಜರಾದ ದ್ರೋಣರ ಸಮಾಗಮದಿಂದ ಅಶ್ವತ್ಥಾಮನು ಜನ್ಮತಾಳಿದ್ದನು. ದುರ್ಯೋಧನನು ಅಪ್ರತಿಮಕರ್ಮನಾದ, ಪ್ರಪಂಚದಲ್ಲಿಯೇ ಅಪ್ರತಿಮರೂಪನಾದ, ಸರ್ವವಿದ್ಯಾಪಾರಂಗತನಾದ ಅಶ್ವತ್ಥಾಮನ ಬಳಿಗೆ ಬಂದು ಹೇಳಿದನು:

"ಬ್ರಾಹ್ಮಣೋತ್ತಮ! ನಮ್ಮ ಗುರುಗಳ ಮಗನಾದ ನೀನೇ ನಮಗೀಗ ಪರಮಾಶ್ರಯನಾಗಿರುವೆ. ಆದುದರಿಂದ ನಮ್ಮ ಸೇನಾಪತಿಯು ಯಾರಾಗಬೇಕೆಂಬುದನ್ನು ನೀನೇ ಸೂಚಿಸು. ನಿನ್ನ ನಿರ್ದೇಶನದಂತೆ ನಾನು ನಡೆದುಕೊಳ್ಳುತ್ತೇನೆ. ನಾವೆಲ್ಲರೂ ಸಂಘಟಿತರಾಗಿ ಯಾರನ್ನು ನಮ್ಮ ನಾಯಕನನ್ನಾಗಿ ಮಾಡಿಕೊಂಡರೆ ಪಾಂಡವರನ್ನು ಜಯಿಸಬಹುದೆಂಬುದನ್ನು ತಿಳಿಸು."

"ದುರ್ಯೋಧನ! ಮದ್ರರಾಜನಾದ ಶಲ್ಯನು ಕುಲ, ರೂಪ, ತೇಜಸ್ಸು, ಯಶಸ್ಸು ಮತ್ತು ಸಂಪತ್ತು–ಇವೇ ಮುಂತಾದ ಸಕಲ ಸದ್ಗುಣಗಳಿಂದಲೂ ಸಂಪನ್ನನಾಗಿರುತ್ತಾನೆ. ಇವನೇ ನಮಗೆ ಸೇನಾಪತಿಯಾಗಲಿ. ತನ್ನ ತಂಗಿಯ ಮಕ್ಕಳನ್ನೂ ಪರಿತ್ಯಜಿಸಿ ಕೃತಜ್ಞನಾದ ಶಲ್ಯನು ನಮ್ಮನ್ನೇ ಅನುಸರಿಸಿ ಬಂದಿರುತ್ತಾನೆ. ಮತ್ತೊಬ್ಬ ಕಾರ್ತಿಕೇಯನಂತೆಯೇ ಇವನು ಮಹಾಸೇನಾನಿಯೂ–ಮಹಾಬಾಹುವೂ ಆಗಿದ್ದಾನೆ.

ದೇವತೆಗಳು ಅಪರಾಜಿತನಾದ ಸ್ಕಂದನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ಅಸುರರೊಡನೆ ನಡೆದ ಯುದ್ಧದಲ್ಲಿ ಜಯಗಳಿಸಿದಂತೆ–ಶಲ್ಯ ರಾಜನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ಪಾಂಡವರೊಡನೆ ನಡೆಯುವ ಯುದ್ಧದಲ್ಲಿ ನಾವೂ ಜಯವನ್ನು ಗಳಿಸಬಹುದಾಗಿದೆ."



ಮಹಾರಾಜ! ಅಶ್ವತ್ಥಾಮನು ಹೀಗೆ ಹೇಳಲಾಗಿ, ಎಲ್ಲ ನರಾಧಿಪರೂ ಶಲ್ಯನನ್ನು ಸುತ್ತುಗಟ್ಟಿ ನಿಂತುಕೊಂಡು ಜಯಕಾರಗಳನ್ನು ಮಾಡಿದರು. ಯುದ್ಧಮಾಡಬೇಕೆಂದು ಪೂರ್ಣವಾಗಿ ನಿಶ್ಚಯಿಸಿ ಆವೇಶಪೂರ್ಣರಾದರು. ಅನಂತರ ದುರ್ಯೋಧನನು ನೆಲದ ಮೇಲೆಯೇ ನಿಂತು ಶ್ರೇಷ್ಠವಾದ ರಥದಲ್ಲಿ ಕುಳಿತಿದ್ದ, ಯುದ್ಧದಲ್ಲಿ ದ್ರೋಣ-ಭೀಷ್ಮಸಮಪರಾಕ್ರಮನಾದ ಶಲ್ಯನನ್ನು

ಕುರಿತು ಬದ್ಧಾಂಜಲಿಯಾಗಿ ಹೇಳಿದನು: “ಮಿತ್ರವತ್ಸಲನೇ! ಮಿತ್ರರಿಗೆ ಈಗೊಂದು (ಗೆಳೆಯರ ಯೋಗ್ಯತೆಯನ್ನು ಅಳೆಯುವ) ಕಾಲವು ಪ್ರಾಪ್ತವಾಗಿದೆ. ಇಂತಹ ಕಾಲದಲ್ಲಿಯೇ ವಿದ್ವಾಂಸರಾದವರು ತಮ್ಮ ಮಿತ್ರರಾರು? ಮತ್ತು ಶತ್ರುಗಳಾರು?–ಎಂಬುದನ್ನು ಪರೀಕ್ಷಿಸಿ ತಿಳಿದುಕೊಳ್ಳುತ್ತಾರೆ. ಶೂರನಾದ ನೀನು ನಮ್ಮ ಸೈನ್ಯದ ಅಗ್ರಭಾಗದಲ್ಲಿ ನಿಂತು (ಸೇನಾಪತಿ



ಯಾಗಿ) ಸೇನೆಯನ್ನು ಮುನ್ನಡೆಸುವವನಾಗು. ನೀನು ಯುದ್ಧಕ್ಕೆ ಹೋದೆಯಾದರೆ ಮಂದಬುದ್ಧಿಯವರಾದ ಪಾಂಡವರೂ, ಅಮಾತ್ಯಸಹಿತರಾದ ಪಾಂಚಾಲರೂ ಉದ್ಯೋಗಶೂನ್ಯರಾಗುತ್ತಾರೆ.”

ದುರ್ಯೋಧನನು ಹೇಳಿದ ಮಾತುಗಳನ್ನು ಕೇಳಿ ವಾಕ್ಯಜ್ಞನಾದ

(ಸಮಯೋಚಿತವಾಗಿ ಮಾತನಾಡುವುದನ್ನು ತಿಳಿದಿರುವ) ಮದ್ರಾಧಿಪತಿಯಾದ ಶಲ್ಯನು ಸಕಲರಾಜರ ಸಮ್ಮುಖದಲ್ಲಿ ದುರ್ಯೋಧನರಾಜನನ್ನು ಕುರಿತು ಹೇಳಿದನು:

"ಕುರುರಾಜ! ಯಾವ ಕಾರ್ಯವನ್ನು ಮಾಡಲು ನಾನು ಸಮರ್ಥನೆಂದು ನೀನು ಭಾವಿಸುವೆಯೋ–ಆ ಕಾರ್ಯವನ್ನು ಮಾಡಲು ಸಿದ್ಧನಾಗಿದ್ದೇನೆ. ನನ್ನ ರಾಜ್ಯ, ಐಶ್ವರ್ಯ ಮತ್ತು ಪರಮಪ್ರಿಯವಾದ ಪ್ರಾಣಗಳೂ ನಿನ್ನ ಪ್ರೀತ್ಯರ್ಥವಾಗಿಯೇ ಮುಡುಪಾಗಿಡಲ್ಪಟ್ಟಿವೆ.

"ಮಾತುಲ! ನೀನು ಅತುಲಪರಾಕ್ರಮಿಯಾಗಿರುವೆ. ಯೋಧ ಶ್ರೇಷ್ಠನೇ! ನಿನ್ನನ್ನು ನಾನು ನಮ್ಮ ಸೈನ್ಯದ ದಂಡನಾಯಕನ ಸ್ಥಾನದಲ್ಲಿ ವರಣಮಾಡುತ್ತೇನೆ. ದೇವಾಸುರಯುದ್ಧದಲ್ಲಿ ಸ್ಕಂದನು ದೇವತೆಗಳನ್ನು ಸಂರಕ್ಷಿಸಿದಂತೆ–ನೀನು ನಮ್ಮನ್ನು ಸಂರಕ್ಷಿಸು. ದೇವತೆಗಳು ಸ್ಕಂದನಿಗೆ ದೇವಸೇನಾಪತ್ಯದಲ್ಲಿ ಪಟ್ಟಕಟ್ಟಿದಂತೆ–ನಾವೂ ನಿನಗೆ ಕೌರವಸೇನಾಪತ್ಯದಲ್ಲಿ ಪಟ್ಟಕಟ್ಟುತ್ತೇವೆ. ವೀರನೇ! ನಮ್ಮಿಂದ ಅಭಿಷಿಕ್ತನಾದ ನೀನು–ಇಂದ್ರನು ದಾನವರನ್ನು ಸಂಹರಿಸಿದಂತೆ–ನಮ್ಮ ಶತ್ರುಗಳನ್ನು ಯುದ್ಧದಲ್ಲಿ ಸಂಹರಿಸು."

೬ನೆಯ ಅಧ್ಯಾಯವು ಮುಗಿಯಿತು.

೭ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಶಲ್ಯರಾಜನ ವೀರೋಚಿತವಾದ ಮಾತುಗಳು: ಶ್ರೀಕೃಷ್ಣನು ಶಲ್ಯನನ್ನು ಸಂಹರಿಸುವಂತೆ ಯುಧಿಷ್ಠಿರನನ್ನು ಪ್ರೋತ್ಸಾಹಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ದುರ್ಯೋಧನನು ಹೇಳಿದ ಮಾತುಗಳನ್ನು ಕೇಳಿ ಪ್ರತಾಪವಂತನಾದ ಮದ್ರರಾಜನಾದ ಶಲ್ಯನು ದುರ್ಯೋಧನನನ್ನು ಕುರಿತು ಹೇಳಿದನು:

"ಮಹಾಬಾಹುವೇ! ಯಾರಲ್ಲಿ ಹೇಗೆ ಮಾತನಾಡಬೇಕೆಂಬುದನ್ನು ತಿಳಿದಿರುವವರಲ್ಲಿ ಶ್ರೇಷ್ಠನಾದವನೇ! ದುರ್ಯೋಧನ! ರಥಸ್ಥರಾಗಿರುವ

ಈ ಕೃಷ್ಣಾರ್ಜುನರನ್ನು ನೀನು ರಥಿಗಳೆಲ್ಲರಿಗೂ ಶ್ರೇಷ್ಠರೆಂದು ಭಾವಿಸಿರುವೆ ಯಲ್ಲವೇ? ಆದರೆ ಬಾಹುಬಲ-ಪರಾಕ್ರಮಗಳಲ್ಲಿ ಅವರಿಬ್ಬರೂ ನನಗೆ ಸಮಾನರಲ್ಲ. ನನ್ನೆದುರಾಗಿ ಯುದ್ಧಕ್ಕೆ ನಿಲ್ಲುವ ದೇವಾಸುರ-ಮನುಷ್ಯರಿಂದ ಸಹಿತವಾದ ಅಖಂಡಭೂಮಂಡಲದೊಡನೆಯೂ ಕ್ರುದ್ಧನಾದ ನಾನು ಯುದ್ಧ



ಮಾಡಬಲ್ಲೆನು. ಹೀಗಿರುವಾಗ ಏಕದೇಶಮಾತ್ರರಾದ ಪಾಂಡವರ ವಿಷಯ ದಲ್ಲಿ ಹೇಳತಕ್ಕದ್ದೇನಿದೆ? ದುರ್ಯೋಧನ! ನಾನು ನಿನ್ನ ಸೈನ್ಯದ ಸೇನಾಪತಿ ಯಾಗುತ್ತೇನೆ. ಇದರಲ್ಲಿ ಸಂಶಯಲೇಶವೂ ಇಲ್ಲ. ನನ್ನೊಡನೆ ಯುದ್ಧಕ್ಕೆ ಬರುವ ಪಾರ್ಥರನ್ನೂ ಮತ್ತು ಸೋಮಕರನ್ನೂ ನಾನು ಜಯಿಸುತ್ತೇನೆ. ಶತ್ರುಗಳಿಂದ ಅತಿಕ್ರಮಿಸಲು ಸಾಧ್ಯವಾಗದಂತಹ ವ್ಯೂಹವನ್ನು ರಚಿಸು

ತ್ತೇನೆ. ನಾನು ಸತ್ಯವಾದ ಮಾತನ್ನೇ ಹೇಳುತ್ತಿದ್ದೇನೆ. ಈ ವಿಷಯದಲ್ಲಿ ಸಂಶಯಕ್ಕೆ ಎಡೆಯೇ ಇಲ್ಲ."

ಮಹಾರಾಜ! ಮದ್ರರಾಜನು ಹೀಗೆ ಹೇಳಿದಕೂಡಲೇ ಬಹಳವಾಗಿ ಕ್ಲೇಶಗೊಂಡಿದ್ದ ದುರ್ಯೋಧನರಾಜನು ಸೈನ್ಯದ ಮಧ್ಯಭಾಗದಲ್ಲಿ ಶಾಸ್ತ್ರ ದೃಷ್ಟವಾದ ವಿಧಿಯಿಂದ ಶಲ್ಯನಿಗೆ ಸೇನಾಪತ್ಯದಲ್ಲಿ ಪಟ್ಟಕಟ್ಟಿದನು. ಶಲ್ಯನು ಸೇನಾಪತಿಯಾಗಿ ಅಭಿಷಿಕ್ತನಾದೊಡನೆಯೇ ಕೌರವಸೈನ್ಯದಲ್ಲಿ ದೊಡ್ಡದಾದ ಸಿಂಹನಾದವುಂಟಾಯಿತು. ನಾನಾವಿಧವಾದ ರಣವಾದ್ಯಗಳೂ ಮೊಳಗಿದುವು. ಶಲ್ಯನು ಸೇನಾಪತಿಯಾಗಲಾಗಿ, ಯೋಧರೂ ಮತ್ತು ಮಹಾರಥರಾದ ಮದ್ರಕರೂ ಪರಮಹೃಷ್ಟರಾಗಿ ಸಂಗ್ರಾಮಶೋಭಿಯಾದ ಶಲ್ಯನನ್ನು ಸ್ತೋತ್ರಮಾಡತೊಡಗಿದರು.

**ಜಯ ರಾಜಂಶ್ಚಿರಞ್ಜೀವ ಜಹಿ ಶತ್ರೂನ್ಸಮಾಗತಾನ್ ।**
**ತವ ಬಾಹುಬಲಂ ಪ್ರಾಪ್ಯ ಧಾರ್ತರಾಷ್ಟ್ರಾ ಮಹಾಬಲಾಃ ।**
**ನಿಖಿಲಾಃ ಪೃಥಿವೀಂ ಸರ್ವಾಂ ಪ್ರಶಾಸನ್ತು ಹತದ್ವಿಷಃ ॥೧೦॥**

"ಶಲ್ಯರಾಜ! ನಿನಗೆ ಮಂಗಳವಾಗಲಿ. ಚಿರಂಜೀವಿಯಾಗಿರು. ನಿನ್ನೆದುರಾಗಿ ಬರುವ ಶತ್ರುಗಳನ್ನು ಸಂಹರಿಸು. ಮಹಾಬಲರಾದ ಧೃತರಾಷ್ಟ್ರನ ಮಕ್ಕಳು ನಿನ್ನ ಬಾಹುಬಲವನ್ನು ಆಶ್ರಯಿಸಿ ಹತಶತ್ರುಗಳಾಗಿ ಅಖಂಡಭೂಮಂಡಲವನ್ನೂ ಪ್ರಶಾಸನಮಾಡಲಿ. ನೀನು ಯುದ್ಧದಲ್ಲಿ ಸುರಾಸುರ-ಮಾನವರನ್ನೂ ಜಯಿಸಲು ಸಮರ್ಥನಾಗಿರುವೆ. ಹೀಗಿರುವಾಗ ಮರಣಧರ್ಮವಿರುವ ಸೃಂಜಯ-ಸೋಮಕರ ವಿಷಯದಲ್ಲಿ ಹೇಳತಕ್ಕದ್ದೇನಿದೆ? (ಅವರು ನಿನಗೆ ಅಗಣ್ಯರು.)" ಮಹಾರಾಜ! ಹೀಗೆ ಪ್ರಶಂಸಿತನಾದ, ಬಲಿಷ್ಠನಾದ, ವೀರನಾದ ಮದ್ರರಾಜನು ಯುದ್ಧಧರ್ಮವನ್ನು ತಿಳಿಯದೇ ಇರತಕ್ಕವರಿಂದ (ಯುದ್ಧದಲ್ಲಿ ಸ್ಥಿರಬುದ್ಧಿಯಿಲ್ಲದವರಿಂದ) ಅನುಭವಿಸಲು ಅಸಾಧ್ಯವಾದ ಮಹಾನಂದವನ್ನು ಅನುಭವಿಸಿದನು. ಪುನಃ ಕೌರವರನ್ನು ಕುರಿತು ಹೇಳಿದನು:

**ಅದ್ಯ ಚಾಹಂ ರಣೇ ಸರ್ವಾನ್ಪಞ್ಚಾಲಾನ್ಸಹ ಪಾಣ್ಡವೈಃ ।**
**ನಿಹನಿಷ್ಯಾಮಿ ವಾ ರಾಜನ್ಸ್ವರ್ಗಂ ಯಾಸ್ಯಾಮಿ ವಾ ಹತಃ ॥೧೩॥**

“ನಾನೀಗಲೇ ಯುದ್ಧದಲ್ಲಿ ಪಾಂಡವಸಹಿತರಾದ ಎಲ್ಲ ಪಾಂಚಾಲರನ್ನೂ ಸಂಹಾರಮಾಡುತ್ತೇನೆ. ಹಾಗಲ್ಲದಿದ್ದರೆ ಅವರಿಂದಲೇ ಹತನಾಗಿ ಸ್ವರ್ಗಕ್ಕಾದರೂ ಹೋಗುತ್ತೇನೆ.

ರಣರಂಗದಲ್ಲಿ ಸ್ವಲ್ಪವಾದರೂ ಭಯವೇ ಇಲ್ಲದವನಂತೆ ಸಂಚರಿಸುವ ನನ್ನನ್ನು ಎಲ್ಲ ಜನರೂ ನೋಡಲಿ. ನನ್ನ ಪರಾಕ್ರಮವನ್ನೂ, ನನ್ನ ಧನುಸ್ಸಿನ ಮಹಾಬಲವನ್ನೂ–ಪಾಂಡುಪುತ್ರರೂ, ಸಾತ್ಯಕಿ-ವಾಸುದೇವರೂ, ಪಾಂಚಾಲ-ಚೇದಿಗಳೂ, ದ್ರೌಪದೇಯರೂ, ಧೃಷ್ಟದ್ಯುಮ್ನ-ಶಿಖಂಡಿಗಳೂ ಎಲ್ಲ ಪ್ರಭದ್ರಕರೂ ನೋಡಲಿ. ಇಂದಿನ ಯುದ್ಧದಲ್ಲಿ ಬಾಣಬಿಡುವುದರಲ್ಲಿ ನನಗಿರುವ ಹಸ್ತಲಾಘವವನ್ನೂ, ನನ್ನಲ್ಲಿರುವ ಮಹಾಸ್ತ್ರಗಳ ವೀರ್ಯ ವತ್ತೆಯನ್ನೂ, ನನ್ನ ಭುಜಗಳಲ್ಲಿ ಬಲವೆಷ್ಟಿರುವುದೆಂಬುದನ್ನೂ, ನನ್ನಲ್ಲಿ ಮಹಾಬಲವೂ–ಮಹಾಸ್ತ್ರಗಳ ಸಂಪತ್ತೂ ಎಷ್ಟಿರುವುದೆಂಬುದನ್ನೂ, ಪಾರ್ಥರೂ, ಸಿದ್ಧ-ಚಾರಣರೂ ನೋಡಲಿ. ಪಾಂಡವಮಹಾರಥರು ನನ್ನ ಪರಾಕ್ರಮವನ್ನು ನೋಡಿ ಪ್ರತೀಕಾರಮಾಡುವುದರಲ್ಲಿ ತತ್ಪರರಾಗಿ ನಾನಾ ವಿಧವಾದ ಕಾರ್ಯಗಳಲ್ಲಿ ತೊಡಗಲಿ. ಇಂದು ನಾನು ಪಾಂಡವಸೈನಿಕರನ್ನು ರಣರಂಗದ ಸುತ್ತಲೂ ಓಡಾಡಿಸಿಬಿಡುತ್ತೇನೆ. ಕೌರವ! ನಿನ್ನ ಪ್ರಿಯಾರ್ಥವಾಗಿ ದ್ರೋಣ-ಭೀಷ್ಮರನ್ನೂ, ಕರ್ಣನನ್ನೂ ಮೀರಿಸಿ ನಾನು ಶತ್ರುಗಳೊಡನೆ ಯುದ್ಧಮಾಡುತ್ತಾ ರಣಾಂಗಣದಲ್ಲಿ ಸಂಚರಿಸುತ್ತೇನೆ.”– ಹೀಗೆ ಹೇಳಿ ಶಲ್ಯನು ಕೌರವಸೈನಿಕರನ್ನು ಬಹಳವಾಗಿ ಪ್ರೋತ್ಸಾಹಿಸಿದನು.

ಮಾನದನೇ! ಶಲ್ಯನು ಸೇನಾಪತಿಯಾಗಿ ಅಭಿಷಿಕ್ತನಾಗಲಾಗಿ, ನಿನ್ನ ಸೈನ್ಯದಲ್ಲಿ ಯಾರೂ ಕರ್ಣನ ಸಂಬಂಧವಾದ ವ್ಯಸನವನ್ನು ಸ್ವಲ್ಪವಾದರೂ ಮನಸ್ಸಿಗೇ ತೆಗೆದುಕೊಳ್ಳಲಿಲ್ಲ. (ಕರ್ಣನಿಗಾಗಿ ಯಾರೂ ಹೆಚ್ಚು ವ್ಯಸನಪಡಲಿಲ್ಲ.) ಕೌರವಸೈನಿಕರು ಹೃಷ್ಟರೂ ಪ್ರಸನ್ನಚಿತ್ತರೂ ಆಗಿದ್ದರು. ಮದ್ರರಾಜನ ವಶಕ್ಕೆ ಸಿಕ್ಕಿದ ಪಾಂಡವರು ವಿನಾಶಹೊಂದಿದರೆಂದೇ ಅವರೆಲ್ಲರೂ ಭಾವಿಸಿದರು. ಭರತರ್ಷಭನೇ! ನಿನ್ನ ಸೈನ್ಯವು ಶಲ್ಯನ ನಾಯಕತ್ವದಿಂದ ಪ್ರಹೃಷ್ಟವಾಗಿ ಆ ರಾತ್ರಿ ಅಲ್ಲಿಯೇ ಉಳಿದುಕೊಂಡಿದ್ದು ಮಲಗಿ ನಿದ್ರಿಸಿತು. ಎಚ್ಚರಗೊಂಡನಂತರ ನಿನ್ನ ಸೈನ್ಯವು ಹೃಷ್ಟವಾದ ಮನಸ್ಸಿನಿಂದ ಕೂಡಿ ಹರ್ಷೋದ್ಗಾರಗಳನ್ನು ಮಾಡುತ್ತಿದ್ದಿತು.

ಮಹಾರಾಜ! ನಿನ್ನ ಸೈನಿಕರು ಮಾಡುತ್ತಿದ್ದ ಹರ್ಷನಾದಗಳನ್ನು ಕೇಳಿ ಯುಧಿಷ್ಠಿರರಾಜನು ಎಲ್ಲ ರಾಜರ ಸಮ್ಮುಖದಲ್ಲಿ ಶ್ರೀಕೃಷ್ಣನನ್ನು ಕುರಿತು ಹೇಳಿದನು:



“ಮಾಧವ! ಧೃತರಾಷ್ಟ್ರನ ಮಗನಾದ ದುರ್ಯೋಧನನು ಚತುರಂಗಬಲದಿಂದಲೂ ಸಮ್ಮಾನಿಸಲ್ಪಟ್ಟ, ಮಹಾಧನುಷ್ಮಂತನಾದ, ಮದ್ರಾಧಿಪತಿಯಾದ ಶಲ್ಯನನ್ನು ಸೇನಾಪತಿಯನ್ನಾಗಿ ಮಾಡಿದ್ದಾನೆ.

ಈ ವಿಷಯವನ್ನು ನೀನು ಯಥಾವತ್ತಾಗಿ ಪರ್ಯಾಲೋಚಿಸಿ ನಿನಗೆ ಹೇಗೆ ಉಚಿತವೆನಿಸುವುದೋ ಹಾಗೆಯೇ ಮಾಡು. ನೀನು ನಮ್ಮ ನೇತಾರ

ನಾಗಿರುವೆ. ನಮ್ಮ ರಕ್ಷಕನೂ ಆಗಿರುವೆ. ಆದುದರಿಂದ ಮುಂದೇನು ಮಾಡಬೇಕೆಂಬುದನ್ನು ನಿಶ್ಚಯಿಸು."

ಮಹಾರಾಜ! ಹೀಗೆ ಹೇಳಿದ ಯುಧಿಷ್ಠಿರನಿಗೆ ಶ್ರೀಕೃಷ್ಣನು ಯಥೋಚಿತವಾಗಿ ಉತ್ತರಿಸಿದನು:

ಆರ್ತಾಯನಿಮಹಂ ಜಾನೇ ಯಥಾತತ್ತ್ವೇನ ಭಾರತ ॥೨೭॥

"ಭಾರತನೇ! ಋತಾಯನನ ಮಗನಾದ ಶಲ್ಯನನ್ನು ನಾನು ಬಹಳ ಚೆನ್ನಾಗಿ ಅರ್ಥಮಾಡಿಕೊಂಡಿರುತ್ತೇನೆ.

ವೀರ್ಯವಾಂಶ್ಚ ಮಹಾತೇಜಾ ಮಹಾತ್ಮಾ ಚ ವಿಶೇಷತಃ ।
ಕೃತೀ ಚ ಚಿತ್ರಯೋಧೀ ಚ ಸಂಯುಕ್ತೋ ಲಾಘವೇನ ಚ ॥೨೮॥

ಯಾದೃಗ್ಭೀಷ್ಮಸ್ತಥಾ ದ್ರೋಣೋ ಯಾದೃಕ್ಕರ್ಣಶ್ಚ ಸಂಯುಗೇ ।
ತಾದೃಶಸ್ತದ್ವಿಶಿಷ್ಟೋ ವಾ ಮದ್ರರಾಜೋ ಮತೋ ಮಮ ॥೨೯॥

ಯುದ್ಧಮಾನಸ್ಯ ತಸ್ಯಾಹಂ ಚಿನ್ತಯಾನಶ್ಚ ಭಾರತ ।
ಯೋದ್ಧಾರಂ ನಾಧಿಗಚ್ಛಾಮಿ ತುಲ್ಯರೂಪಂ ಜನಾಧಿಪ ॥೩೦॥

ಶಲ್ಯನು ಮಹಾವೀರ್ಯವಂತನು; ಮಹಾತೇಜಸ್ವಿಯು; ಅದರಲ್ಲಿಯೂ ವಿಶೇಷವಾಗಿ ಮಹಾತ್ಮನು. ವಿದ್ವಾಂಸನು. ವಿಚಿತ್ರರೀತಿಯಲ್ಲಿ ಯುದ್ಧಮಾಡುವುದನ್ನು ತಿಳಿದಿರತಕ್ಕವನು. ಹಸ್ತಲಾಘವದಿಂದ ಯುಕ್ತನಾಗಿರತಕ್ಕವನು. (ಶೀಘ್ರವಾಗಿ ಶಸ್ತ್ರಾಸ್ತ್ರಗಳನ್ನು ಬಿಡತಕ್ಕವನು.) ಭೀಷ್ಮ-ದ್ರೋಣ-ಕರ್ಣರು ಹೇಗೆ ಯುದ್ಧದಲ್ಲಿ ಅತುಲಪರಾಕ್ರಮಿಗಳಾಗಿದ್ದರೋ–ಅದೇ ರೀತಿಯಲ್ಲಿ ಶಲ್ಯನೂ ಅತುಲವಾದ ಪರಾಕ್ರಮದಿಂದ ಯುದ್ಧಮಾಡುವವನು ಅಥವಾ ಪರಾಕ್ರಮದಲ್ಲಿ ಭೀಷ್ಮ-ದ್ರೋಣ-ಕರ್ಣರಿಗಿಂತಲೂ ವಿಶಿಷ್ಟನೂ ಆಗಿರುವನೆಂಬುದೇ ನನ್ನ ಅಭಿಪ್ರಾಯವಾಗಿದೆ. ನಾನು ಅನೇಕ ಪ್ರಕಾರವಾಗಿ ಯೋಚಿಸಿದರೂ ಯುದ್ಧಪರಾಯಣನಾದ ಶಲ್ಯನಿಗೆ ಅನುರೂಪವಾಗಿ ಯುದ್ಧಮಾಡುವ ಮಹಾಯೋಧನನ್ನು ನಮ್ಮ ಪಕ್ಷದಲ್ಲಿ ಕಾಣುತ್ತಿಲ್ಲ.

ಶಿಖಣ್ಡ್ಯರ್ಜುನಭೀಮಾನಾಂ ಸಾತ್ವತಸ್ಯ ಚ ಭಾರತ ।
ಧೃಷ್ಟದ್ಯುಮ್ನಸ್ಯ ಚ ತಥಾ ಬಲೇನಾಭ್ಯಧಿಕೋ ರಣೇ ॥೩೧॥

ಶಿಖಂಡೀ, ಅರ್ಜುನ, ಭೀಮ, ಸಾತ್ಯಕಿ, ಧೃಷ್ಟದ್ಯುಮ್ನ–ಇವರೆಲ್ಲರಿಗಿಂತಲೂ ಶಲ್ಯನು ಬಲದಲ್ಲಿ ಅಧಿಕನಾದವನು.

ಮಹಾರಾಜ! ಶಲ್ಯನು ಸಿಂಹ-ಗಜಗಳ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವನು. ಪ್ರಳಯಕಾಲದಲ್ಲಿ ಪ್ರಜೆಗಳ ವಿಷಯದಲ್ಲಿ ಕ್ರುದ್ಧನಾದ ಕಾಲನಂತೆ–ಶಲ್ಯನು ಭಯರಹಿತನಾಗಿ ರಣರಂಗದಲ್ಲಿ ಸಂಚರಿಸುತ್ತಾನೆ. ಪುರುಷವ್ಯಾಘ್ರನೇ! ಶಾರ್ದೂಲಸಮವಿಕ್ರಮನಾದ ನಿನ್ನೊಬ್ಬನನ್ನು ಬಿಟ್ಟು ನಮ್ಮ ಪಕ್ಷದಲ್ಲಿ ಶಲ್ಯನಿಗೆದುರಾಗಿ ಯುದ್ಧಮಾಡುವ ಸಾಮರ್ಥ್ಯವಿರುವವನನ್ನು ನಾನು ಕಾಣುತ್ತಿಲ್ಲ. ಕುರುನಂದನ! ದೇವತೆಗಳಿಂದ ಯುಕ್ತವಾದ ಈ ಸಂಪೂರ್ಣ ಜಗತ್ತಿನಲ್ಲಿ ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾವ ಪುರುಷನೂ ಕ್ರುದ್ಧನಾದ ಶಲ್ಯರಾಜನನ್ನು ಯುದ್ಧದಲ್ಲಿ ಸಂಹರಿಸಲಾರನು. ಯುದ್ಧವು ಪ್ರಾರಂಭವಾದಾಗಿನಿಂದ ಅನುದಿನವೂ ಯುದ್ಧಮಾಡುತ್ತಾ ನಿನ್ನ ಸೈನ್ಯವನ್ನು ಅಲ್ಲೋಲ-ಕಲ್ಲೋಲಗೊಳಿಸುತ್ತಿರುವ ಶಲ್ಯನನ್ನು–ಇಂದ್ರನು ಶಂಬರಾಸುರನನ್ನು ಸಂಹರಿಸಿದಂತೆ ಸಂಹರಿಸು. ವೀರನಾದ ಶಲ್ಯನು ಅಜೇಯನು. ಮೇಲಾಗಿ ದುರ್ಯೋಧನನಿಂದ ಸಮ್ಮಾನಿತನಾಗಿದ್ದಾನೆ. ಈ ಮದ್ರೇಶ್ವರನು ಹತನಾದನೆಂದರೆ ನಿಶ್ಚಯವಾಗಿಯೂ ನಿನಗೇ ವಿಜಯವು ಲಭಿಸುತ್ತದೆ. ಇವನು ಹತನಾದನೆಂದರೆ ವಿಶಾಲವಾದ ದುರ್ಯೋಧನನ ಸೈನ್ಯವು ಸಂಪೂರ್ಣವಾಗಿ ವಿನಾಶ ಹೊಂದಿದಂತೆಯೇ ಸರಿ. ಈ ಸಮಯದಲ್ಲಿ ನೀನು ನನ್ನ ಈ ಸಲಹೆಯಂತೆ ಯುದ್ಧದಲ್ಲಿ ಮಹಾರಥನಾದ ಮದ್ರರಾಜನನ್ನು ಎದುರಿಸು. ಮಹಾಬಾಹುವೇ! ವಾಸವನು ನಮುಚಿಯನ್ನು ಸಂಹರಿಸಿದಂತೆ-ನೀನು ಶಲ್ಯನನ್ನು ಸಂಹರಿಸು.

**ನ ಚೈವಾತ್ರ ದಯಾ ಕಾರ್ಯಾ ಮಾತುಲೋಽಯಂ ಮಮೇತಿ ವೈ ।**
**ಕ್ಷತ್ರಧರ್ಮಂ ಪುರಸ್ಕೃತ್ಯ ಜಹಿ ಮದ್ರಜನೇಶ್ವರಮ್ ॥೩೯॥**

'ಇವನು ನನ್ನ ಸೋದರಮಾವನು' –ಎಂಬ ಕಾರಣದಿಂದ ಶಲ್ಯನ ವಿಷಯದಲ್ಲಿ ದಯೆಯನ್ನು ತೋರಬಾರದು. ಕ್ಷತ್ರಧರ್ಮವನ್ನು ಪುರಸ್ಕರಿಸಿ ಮದ್ರೇಶ್ವರನನ್ನು ಸಂಹರಿಸು.

**ದ್ರೋಣಭೀಷ್ಮಾರ್ಣವಂ ತೀರ್ತ್ವಾ ಕರ್ಣಪಾತಾಲಸಮ್ಭವಮ್ ।**
**ಮಾ ನಿಮಜ್ಜಸ್ವ ಸಗಣಃ ಶಲ್ಯಮಾಸಾದ್ಯ ಗೋಷ್ಪದಮ್ ॥೪೦॥**

ದ್ರೋಣ-ಭೀಷ್ಮರೆಂಬ ಮಹಾಸಮುದ್ರವನ್ನೂ–ಕರ್ಣನೆಂಬ ಪಾತಾಳದಂತಿರುವ ಅಗಾಧವಾದ ಮಡುವನ್ನೂ ದಾಟಿರುವ ನೀನು, ಗೋಷ್ಪಾದದಷ್ಟಿರುವ ಶಲ್ಯರೂಪದ ನೀರಿನಲ್ಲಿ ಪರಿವಾರಸಮೇತನಾಗಿ ಮುಳುಗಿಹೋಗಬೇಡ.

ನಿನ್ನಲ್ಲಿ ಯಾವ ತಪೋಬಲವಿರುವುದೋ, ಯಾವ ಕ್ಷಾತ್ರಬಲವಿರುವುದೋ–ಆ ಎಲ್ಲ ಬಲಗಳನ್ನೂ ಈಗ ಪ್ರದರ್ಶಿಸು. ಮಹಾರಥನಾದ ಶಲ್ಯನನ್ನು ಸಂಹರಿಸು.”

ಮಹಾರಾಜ! ಶತ್ರುವೀರಹಂತಕನಾದ ಕೇಶವನು ಇಷ್ಟು ಮಾತನ್ನು ಯುಧಿಷ್ಠಿರನಿಗೆ ಹೇಳಿ ಪಾಂಡವರಿಂದ ಸಮ್ಮಾನಿತನಾಗಿ ಸಾಯಂಕಾಲವಾಗುತ್ತಲೇ ಶಿಬಿರಕ್ಕೆ ತೆರಳಿದನು. ಶ್ರೀಕೃಷ್ಣನು ಶಿಬಿರಕ್ಕೆ ಹೊರಟುಹೋದನಂತರ ಯುಧಿಷ್ಠಿರನು ತನ್ನ ಎಲ್ಲ ಅನುಜರನ್ನೂ, ಪಾಂಚಾಲ-ಸೋಮಕರನ್ನೂ ಅವರವರ ಶಿಬಿರಗಳಿಗೆ ಕಳುಹಿಸಿಕೊಟ್ಟು–ಅಂಕುಶದಿಂದ ರಹಿತವಾದ ಆನೆಯೋಪಾದಿಯಲ್ಲಿ- ಮನೋವ್ಯಾಕುಲರಹಿತನಾಗಿ ಆ ರಾತ್ರಿಯಲ್ಲಿ ಸುಖದಿಂದ ನಿದ್ರಿಸಿದನು. ಮಹಾಧನುಷ್ಮಂತರಾದ ಆ ಎಲ್ಲ ಪಾಂಚಾಲರೂ, ಪಾಂಡವರೂ ಕರ್ಣನ ನಿಧನದಿಂದ ಪ್ರಹೃಷ್ಟರಾಗಿ ರಾತ್ರಿಯಲ್ಲಿ ಸುಖದಿಂದ ನಿದ್ರಿಸಿದರು.

ಮಹಾರಾಜ! ಸೂತಪುತ್ರನಾದ ಕರ್ಣನು ಯುದ್ಧದಲ್ಲಿ ನಿಧನಹೊಂದಿದನಂತರ ವಿಜಯವನ್ನು ಗಳಿಸಿ ಮಹಾಧನುಸ್ಸುಗಳಿಂದಲೂ ರಥಗಳಿಂದಲೂ ಸುಶೋಭಿತವಾಗಿದ್ದ, ಯುದ್ಧವೆಂಬ ಸಮುದ್ರವನ್ನು ದಾಟಿದ್ದ, ಚಿಂತೆಯಿಂದ ರಹಿತವಾಗಿದ್ದ ಪಾಂಡವರ ಸೈನ್ಯವು ಮುದಿತವಾಗಿದ್ದಿತು.”

ಎನೆಯ ಅಧ್ಯಾಯವು ಮುಗಿಯಿತು.

ಉನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಎರಡು ಪಕ್ಷಗಳ ಸೈನಿಕರೂ ಸಮರಾಂಗಣದಲ್ಲಿ ಸಜ್ಜಾದುದು: ಅಳಿದುಳಿದಿದ್ದ ಸೈನಿಕರ ಸಂಖ್ಯಾಕಥನ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ರಾತ್ರಿಯು ಕಳೆದು ಬೆಳಗಾದನಂತರ ದುರ್ಯೋಧನ ರಾಜನು–ಮಹಾರಥರೆಲ್ಲರೂ ಕವಚಗಳನ್ನು ಧರಿಸಿ ಯುದ್ಧಸನ್ನದ್ಧರಾಗು



ವಂತೆ–ತನ್ನ ಕಡೆಯ ಎಲ್ಲ ಯೋಧರಿಗೂ ಆಜ್ಞಾಪಿಸಿದನು. ರಾಜನ ಆ ಅಭಿಪ್ರಾಯವನ್ನು ತಿಳಿದು ಎಲ್ಲ ಸೈನಿಕರೂ ಯುದ್ಧಸನ್ನದ್ಧರಾಗತೊಡಗಿದರು. ಕೆಲವರು ರಥಗಳಿಗೆ ಕುದುರೆಗಳನ್ನು ಹೂಡಿದರು. ಕೆಲವರು ಶಸ್ತ್ರಾಸ್ತ್ರ

ಗಳನ್ನು ತರಲು ಅತ್ತಲಿತ್ತ ಓಡಾಡುತ್ತಿದ್ದರು. ಕೆಲವರು ಆನೆಗಳನ್ನು ಯುದ್ಧಕ್ಕಾಗಿ ಸಜ್ಜುಗೊಳಿಸುತ್ತಿದ್ದರು. ಪದಾತಿಸೈನಿಕರು ಕವಚಗಳನ್ನು ತೊಟ್ಟುಕೊಂಡರು. ಸಾವಿರಾರು ಮಂದಿ ಸೇವಕರು ರಥಗಳಿಗೆ ರತ್ನಗಂಬಳಿಗಳನ್ನು ಹಾಸಲು ತೊಡಗಿದರು. ಆ ಸಮಯದಲ್ಲಿ ಹಲವಾರು ವಾದ್ಯಗಳ ಧ್ವನಿಗಳೂ, ಯುದ್ಧದ ಸಲುವಾಗಿ ಸಿದ್ಧರಾಗುತ್ತಿದ್ದ ಯೋಧರ ಮತ್ತು ಮುಂದೆ ಹೋಗುತ್ತಿದ್ದ ಸೈನಿಕರ ಕೋಲಾಹಲಧ್ವನಿಗಳೂ ಕೇಳಿಬರುತ್ತಿದ್ದುವು. ಭಾರತನೇ! ಅನಂತರ ಅಳಿದುಳಿದಿದ್ದ ಎಲ್ಲ ಸೈನಿಕರೂ ಮೃತ್ಯುವನ್ನೇ ಹಿಂದಿರುಗುವ ಸ್ಥಾನವನ್ನಾಗಿ ಕಲ್ಪಿಸಿಕೊಂಡು ಯುದ್ಧಕ್ಕೆ ಹೊರಟುದು ಕಂಡುಬಂದಿತು. ಮದ್ರರಾಜನಾದ ಶಲ್ಯನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ಕೌರವಮಹಾರಥರು ಚತುರಂಗಬಲ ವನ್ನೂ ವ್ಯವಸ್ಥಿತರೀತಿಯಲ್ಲಿ ವಿಭಾಗಿಸಿ ತಮ್ಮ-ತಮ್ಮ ದಳಗಳಲ್ಲಿ ಸನ್ನದ್ಧರಾಗಿ ನಿಂತರು. ಅನಂತರ ನಿನ್ನ ಕಡೆಯ ಎಲ್ಲ ಸೈನಿಕರೂ, ಕೃಪ-ಕೃತವರ್ಮಾಶ್ವತ್ಥಾಮ-ಸೌಬಲರೂ, ಹತಶೇಷರಾಗಿದ್ದ ಇತರ ರಾಜರೂ ನಿನ್ನ ಮಗನಾದ ದುರ್ಯೋಧನನೊಡನೆ ಸಮ್ಮಿಳಿತರಾಗಿ ಆದರಪೂರ್ವಕವಾಗಿ ಈ ನಿಯಮಗಳನ್ನು ಮಾಡಿಕೊಂಡರು.

ನ ನ ಏಕೇನ ಯೋದ್ಧವ್ಯಂ ಕಥಂಚಿದಪಿ ಪಾಣ್ಡವೈಃ ।
ಯೋ ಹ್ಯೇಕಃ ಪಾಣ್ಡವೈರ್ಯುಧ್ಯೇದ್ಯೋ ವಾ ಯುಧ್ಯನ್ತಮುತ್ಸೃಜೇತ್ ।
ಸ ಪಞ್ಚಭಿರ್ಭವೇದ್ಯುಕ್ತಃ ಪಾತಕೈಶ್ಚೋಪಪಾತಕೈಃ ॥೯॥

"ನಮ್ಮಲ್ಲಿ ಯಾವ ಒಬ್ಬ ಯೋಧನೂ ಏಕಾಕಿಯಾಗಿದ್ದುಕೊಂಡು ಯಾವುದೇ ಕಾರಣದಿಂದಲೂ ಪಾಂಡವರೊಡನೆ ಯುದ್ಧಮಾಡಬಾರದು. ಯಾವನಾದರೂ ಏಕಾಕಿಯಾಗಿ ಪಾಂಡವರೊಡನೆ ಯುದ್ಧಮಾಡಿದ್ದೇ ಆದರೆ–ಯುದ್ಧಮಾಡುತ್ತಿರುವ ಒಬ್ಬನನ್ನೇ ಬಿಟ್ಟು ಹೊರಬಂದರೆ– ಅಂತಹವನು ಪಂಚಮಹಾಪಾತಕಗಳಿಂದಲೂ ಮತ್ತು ಉಪಪಾತಕ ಗಳಿಂದಲೂ ಯುಕ್ತನಾಗುತ್ತಾನೆ.

ನಾವೆಲ್ಲರೂ ಸಂಘಟಿತರಾಗಿ ಅನ್ಯೋನ್ಯವಾಗಿ ಒಬ್ಬರು ಮತ್ತೊಬ್ಬರನ್ನು ರಕ್ಷಿಸುತ್ತಾ ಶತ್ರುಗಳೊಡನೆ ಯುದ್ಧಮಾಡಬೇಕು."

ಮಹಾರಾಜ! ಕೌರವಮಹಾರಥರೆಲ್ಲರೂ ಈ ನಿಯಮವನ್ನು ಮಾಡಿಕೊಂಡು ಮದ್ರರಾಜನನ್ನು ಮುಂದೆ ಬಿಟ್ಟುಕೊಂಡು ಬಹಳ ಬೇಗ ಶತ್ರುಗಳ ಮೇಲೆ ಆಕ್ರಮಣವನ್ನು ನಡೆಸಿದರು. ಅದೇ ರೀತಿಯಲ್ಲಿ ಪಾಂಡವರೂ ಆ ಮಹಾಯುದ್ಧದಲ್ಲಿ ತಮ್ಮ ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿ ಯುದ್ಧಸನ್ನದ್ಧರಾಗಿ ಎಲ್ಲ ಕಡೆಗಳಲ್ಲಿಯೂ ಕೌರವರನ್ನು ಆಕ್ರಮಿಸಿದರು. ಮಹಾರಾಜ! ಆ ವಿಶಾಲಸೈನ್ಯವು ಕ್ಷುಭಿತವಾದ ಮಹಾಸಮುದ್ರದಂತೆ ಭೋರ್ಗರೆಯುವ ಶಬ್ದದಿಂದ ಕೂಡಿದ್ದಿತು.

ಮಹಾಸಮುದ್ರವು ಉಕ್ಕಿಬರುವಂತೆ ಮಹಾಸಮುದ್ರರೂಪವಾದ ಸೈನ್ಯದಲ್ಲಿದ್ದ ರಥ-ಗಜಸೈನ್ಯಗಳು ಮುನ್ನುಗ್ಗಿಹೋಗುತ್ತಿದ್ದುವು."

ಧೃತರಾಷ್ಟ್ರನು ಹೇಳುತ್ತಾನೆ:

"ಸಂಜಯ! ನಾನು ದ್ರೋಣ-ಭೀಷ್ಮ-ರಾಧೇಯರ ವಧೆಯ ವೃತ್ತಾಂತವನ್ನು ಸಂಪೂರ್ಣವಾಗಿ ಕೇಳಿದೆನು. ಈಗ ಪುನಃ ನನಗೆ ಶಲ್ಯನ ಮತ್ತು ನನ್ನ ಮಗನಾದ ದುರ್ಯೋಧನನ ನಿಧನದ ವೃತ್ತಾಂತವನ್ನು ಸವಿಸ್ತರವಾಗಿ ಹೇಳು. ಯುದ್ಧದಲ್ಲಿ ಧರ್ಮರಾಜನು ಶಲ್ಯನನ್ನು ಹೇಗೆ ಸಂಹರಿಸಿದನು? ಮಹಾಬಾಹುವಾದ ನನ್ನ ಮಗ ದುರ್ಯೋಧನನನ್ನು ಭೀಮಸೇನನು ಹೇಗೆ ನಾಶಗೊಳಿಸಿದನು?–ಎಂಬುದನ್ನು ಹೇಳು."

"ಮಹಾರಾಜ! ಆ ಮಹಾಯುದ್ಧದಲ್ಲಿ ಮನುಷ್ಯರು ಮತ್ತು ಆನೆ-ಕುದುರೆಗಳು ಹೇಗೆ ಕ್ಷಯಿಸಿದುವು ಎಂಬುದನ್ನು ಸ್ಥಿರಚಿತ್ತನಾಗಿ ಕೇಳು. ನಾನೆಲ್ಲವನ್ನೂ ನಿನಗೆ ಹೇಳುತ್ತೇನೆ. ದ್ರೋಣ-ಭೀಷ್ಮ-ಕರ್ಣರು ಹತರಾಗಿ ಹೋಗಿದ್ದರೂ ನಿನ್ನ ಮಕ್ಕಳಿಗೆ ಶಲ್ಯನು ಯುದ್ಧದಲ್ಲಿ ಕೌಂತೇಯರೆಲ್ಲರನ್ನೂ ಸಂಹರಿಸುವನೆಂಬ ಬಲವತ್ತರವಾದ ಆಶೆಯಿದ್ದಿತು. ಆ ಆಶೆಯನ್ನೇ ಮನಸ್ಸಿನಲ್ಲಿಟ್ಟುಕೊಂಡು ನಿನ್ನ ಮಕ್ಕಳು ಮನಸ್ಸಿಗೆ ಸಮಾಧಾನ ತಂದುಕೊಂಡು ಯುದ್ಧದಲ್ಲಿ ಮಹಾರಥನಾದ ಮದ್ರೇಶ್ವರನನ್ನು ಆಶ್ರಯಿಸಿ ತಾವು ಸನಾಥರಾದೆವೆಂಬ ಭಾವನೆಯನ್ನು ಹೊಂದಿದರು.

ಕರ್ಣನು ಹತನಾದಮೇಲೆ ಪಾರ್ಥರು ಸಿಂಹನಾದಗಳನ್ನು ಮಾಡುತ್ತಿದ್ದಾಗ ನಿನ್ನ ಕಡೆಯ ಸೈನಿಕರನ್ನು ಭಯವು ಆವರಿಸಿತು. ಪ್ರತಾಪವಂತನಾದ, ಮಹಾರಥನಾದ ಶಲ್ಯನು ನಿನ್ನ ಕಡೆಯ ಯೋಧರನ್ನು ಸಮಾಧಾನಗೊಳಿಸಿ ಸರ್ವತೋಭದ್ರವೆಂಬ ಸರ್ವಸಮೃದ್ಧವಾದ ವ್ಯೂಹವನ್ನು ರಚಿಸಿ ಶತ್ರುಭಾರನಾಶಕವಾದ, ವೇಗವತ್ತರವಾದ, ಚಿತ್ರಿತವಾದ ಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಸಿಂಧುದೇಶದ ಉತ್ತಮಾಶ್ವಗಳನ್ನು ಹೂಡಿದ್ದ ಶ್ರೇಷ್ಠವಾದ ರಥದಲ್ಲಿ ಕುಳಿತು ಪಾರ್ಥರನ್ನು ಆಕ್ರಮಿಸಿದನು. ಶಲ್ಯನ ರಥದಲ್ಲಿ ಕುಳಿತಿದ್ದ ಸಾರಥಿಯೂ ರಥವನ್ನು ಶೋಭಾಯಮಾನಗೊಳಿಸಿದನು. ಶತ್ರುಕರ್ಶನನಾದ ಶೂರ-ವೀರನಾದ ಶಲ್ಯನು ಅಂತಹ ರಥದಲ್ಲಿ ಕುಳಿತು ನಿನ್ನ ಮಕ್ಕಳ ಭಯವನ್ನು ಹೋಗಲಾಡಿಸುತ್ತಾ ಯುದ್ಧಸನ್ನದ್ಧನಾಗಿ ನಿಂತನು. ರಣಾಂಗಣಕ್ಕೆ ಪ್ರಯಾಣಮಾಡುವ ಕಾಲದಲ್ಲಿ ಮದ್ರರಾಜನು ಕವಚವನ್ನು ಧರಿಸಿ, ಮದ್ರಕರಿಂದಲೂ, ದುರ್ಜಯರಾದ ಕರ್ಣನ ಮಕ್ಕಳಿಂದಲೂ ಕೂಡಿಕೊಂಡು ವ್ಯೂಹದ ಮುಖಸ್ಥಾನದಲ್ಲಿದ್ದನು. ಸರ್ವತೋಭದ್ರವ್ಯೂಹದ ಎಡಪಕ್ಕದಲ್ಲಿ ತ್ರಿಗರ್ತಸೈನಿಕರಿಂದ ಪರಿವೃತನಾಗಿದ್ದ ಕೃತವರ್ಮನಿದ್ದನು. ಬಲಪಕ್ಕದಲ್ಲಿ ಶಕರಿಂದಲೂ, ಯವನರಿಂದಲೂ ಪರಿವೃತರಾದ ಗೌತಮರಿದ್ದರು. ವ್ಯೂಹದ ಹಿಂಭಾಗದಲ್ಲಿ ಕಾಂಬೋಜ ಸೈನಿಕರಿಂದ ಪರಿವೃತನಾದ ಅಶ್ವತ್ಥಾಮನಿದ್ದನು. ವ್ಯೂಹದ ಮಧ್ಯಭಾಗದಲ್ಲಿ ಕುರುಪುಂಗವರಿಂದ ರಕ್ಷಿಸಲ್ಪಡುತ್ತಿದ್ದ ದುರ್ಯೋಧನನಿದ್ದನು. ಶಕುನಿಯೂ ಸಹ ದೊಡ್ಡದಾದ ಅಶ್ವಸೈನ್ಯದಿಂದ ಪರಿವೃತನಾಗಿ ದುರ್ಯೋಧನನೊಡನೆಯೇ ಇದ್ದನು. ಶಕುನಿಯ ಮಗನಾದ, ಮಹಾರಥನಾದ ಉಲೂಕನೂ ಸರ್ವಸೈನ್ಯದಿಂದ ಪರಿವೃತನಾಗಿ ಯುದ್ಧಕ್ಕೆ ಹೊರಟನು.

ಶತ್ರುಗಳನ್ನು ದಮನಮಾಡುವ ಮಹಾಧನುಷ್ಮಂತರಾದ ಪಾಂಡವರೂ ತಮ್ಮ ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿ ಮೂರು ವಿಭಾಗಗಳನ್ನಾಗಿ ಮಾಡಿಕೊಂಡು ನಿನ್ನ ಸೈನ್ಯವನ್ನು ಆಕ್ರಮಿಸಿದರು. ಧೃಷ್ಟದ್ಯುಮ್ನ, ಶಿಖಂಡೀ ಮತ್ತು ಮಹಾರಥನಾದ ಸಾತ್ಯಕಿ–ಈ ಮೂವರೂ ಶಲ್ಯನ ಸೈನ್ಯವನ್ನು ಸಂಹರಿಸುವ ಇಚ್ಛೆಯಿಂದ ಅವನ ಸೈನ್ಯದ ಮೇಲೆ ದಾಳಿಮಾಡಿದರು.

ಅನಂತರ ಭರತಶ್ರೇಷ್ಠನಾದ ಯುಧಿಷ್ಠಿರನು ತನ್ನ ಸೈನ್ಯದಿಂದ ಪರಿವೃತನಾಗಿ ಶಲ್ಯನನ್ನು ಸಂಹರಿಸುವ ಇಚ್ಛೆಯಿಂದ ಶಲ್ಯನನ್ನೇ ಆಕ್ರಮಿಸಿದನು. ಶತ್ರು ಸೈನ್ಯಹಂತಕನಾದ ಮಹಾಧನುರ್ಧರನಾದ ಅರ್ಜುನನು ಹಾರ್ದಿಕ್ಯನನ್ನೂ, ಸುತ್ತುವರಿದು ನಿಂತಿದ್ದ ಸಂಶಪ್ತಕಸೈನಿಕರನ್ನೂ ರಭಸದಿಂದ ಆಕ್ರಮಿಸಿದನು. ಭೀಮಸೇನನೂ ಮತ್ತು ಸೋಮಕಮಹಾರಥರೂ ಯುದ್ಧದಲ್ಲಿ ಶತ್ರುಸೈನಿಕರನ್ನು ಸಂಹರಿಸುತ್ತಾ ಕೃಪರನ್ನು ಆಕ್ರಮಿಸಿದರು. ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಸೇನಾಸಹಿತರಾಗಿ, ರಣರಂಗದಲ್ಲಿ ಸೈನ್ಯಸಮೇತರಾಗಿ ನಿಂತಿದ್ದ ಶಕುನಿ ಮತ್ತು ಉಲೂಕರನ್ನು ಎದುರಿಸಿ ನಿಂತರು. ಅದೇ ರೀತಿಯಲ್ಲಿ ವಿವಿಧವಾದ ಆಯುಧಗಳನ್ನು ಹಿಡಿದಿದ್ದ ನಿನ್ನ ಕಡೆಯ ಹತ್ತು ಸಾವಿರಯೋಧರು ರಣಾಂಗಣದಲ್ಲಿ ಪಾಂಡವರನ್ನು ಆಕ್ರಮಿಸಿದರು."

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ:

"ಸಂಜಯ! ಪಿತಾಮಹನಾದ ಭೀಷ್ಮ, ಮಹಾಧನುಷ್ಮಂತರಾದ ದ್ರೋಣರು, ಮಹಾರಥನಾದ ಕರ್ಣ–ಇವರೆಲ್ಲರೂ ಹತರಾಗಲಾಗಿ ಕುರು-ಪಾಂಡವರ ಸೈನ್ಯಗಳಲ್ಲಿ ಸ್ವಲ್ಪಭಾಗ ಮಾತ್ರವೇ ಉಳಿದಿದ್ದಿತು. ಪಾರ್ಥರು ಕೋಪಾವಿಷ್ಟರಾಗಿ ಪರಾಕ್ರಮವನ್ನು ಪ್ರದರ್ಶಿಸುತ್ತಿದ್ದರು. ಆ ಸಮಯದಲ್ಲಿ ನನ್ನ ಪಕ್ಷದಲ್ಲಿ ಮತ್ತು ಪಾಂಡವರ ಪಕ್ಷದಲ್ಲಿ ಎಷ್ಟು ಸೈನ್ಯವು ಉಳಿದಿತ್ತೆಂಬುದನ್ನು ವಿವರಿಸಿ ಹೇಳು."

"ಮಹಾರಾಜ! ನಾವೂ ಮತ್ತು ನಮ್ಮ ಶತ್ರುಗಳೂ ಯುದ್ಧೋದ್ಯತರಾಗಿದ್ದ ಸಮಯದಲ್ಲಿ ಅಂದಿನ ಯುದ್ಧದಲ್ಲಿ ನಮ್ಮಗಳ ಸೈನ್ಯಬಲವೆಷ್ಟಿತ್ತೆಂಬುದನ್ನು ಹೇಳುವೆನು; ಕೇಳು:

**ಏಕಾದಶ ಸಹಸ್ರಾಣಿ ರಥಾನಾಂ ಭರತರ್ಷಭ ।**
**ದಶ ದನ್ತಿ ಸಹಸ್ರಾಣಿ ಸಪ್ತ ಚೈವ ಶತಾನಿ ಚ ॥೩೮॥**

**ಪೂರ್ಣೇ ಶತಸಹಸ್ರೇ ದ್ವೇ ಹಯಾನಾಂ ತತ್ರ ಭಾರತ ।**
**ಪತ್ತಿಕೋಟ್ಯಸ್ತಥಾ ತಿಸ್ರೋ ಬಲಮೇತತ್ತವಾಭವತ್ ॥೩೯॥**

ನಿನ್ನ ಪಕ್ಷದಲ್ಲಿ ಹನ್ನೊಂದು ಸಾವಿರ ರಥಗಳೂ, ಹತ್ತು ಸಾವಿರದ

ಏಳು ನೂರು ಆನೆಗಳೂ, ಎರಡು ಲಕ್ಷ ಕುದುರೆಗಳೂ ಮತ್ತು ಮೂರು ಕೋಟಿ ಪದಾತಿಸೈನಿಕರೂ ಉಳಿದಿದ್ದರು.

**ರಥಾನಾಂ ಷಟ್ಸಹಸ್ರಾಣಿ ಷಟ್ಸಹಸ್ರಾಶ್ಚ ಕುಞ್ಜರಾಃ ।**
**ದಶ ಚಾಶ್ವಸಹಸ್ರಾಣಿ ಪತ್ತಿಕೋಟೀ ಚ ಭಾರತ ।**
**ಏತದ್ಬಲಂ ಪಾಣ್ಡವಾನಾಮಭವಚ್ಛೇಷಮಾಹವೇ ॥೪೧॥**

ಪಾಂಡವರ ಪಕ್ಷದಲ್ಲಿ ಆರು ಸಾವಿರ ರಥಗಳೂ, ಆರು ಸಾವಿರ ಆನೆಗಳೂ, ಹತ್ತು ಸಾವಿರ ಕುದುರೆಗಳೂ ಮತ್ತು ಎರಡು ಕೋಟಿ ಪದಾತಿ ಸೈನಿಕರೂ ಉಳಿದಿದ್ದರು. ಎರಡು ಪಕ್ಷಗಳಲ್ಲಿಯೂ ಹತಶೇಷರಾಗಿ ಉಳಿದಿದ್ದ ಸೈನಿಕರೇ ಅಂದು, ಯುದ್ಧಮಾಡುವ ಸಲುವಾಗಿ ರಣಭೂಮಿಯಲ್ಲಿ ಸೇರಿದ್ದರು.

ರಾಜೇಂದ್ರ! ಮದ್ರರಾಜನ ಅಧೀನರಾಗಿದ್ದ, ವಿಜಯದ ಆಶೆಯನ್ನು ಹೊಂದಿದ್ದ, ಅತ್ಯಂತಕುಪಿತರಾಗಿದ್ದ ನಿನ್ನ ಸೈನಿಕರು ಹೀಗೆ ವಿಂಗಡಿಸಿಕೊಂಡು ಪಾಂಡವರನ್ನು ಎದುರಿಸಿದರು. ಅದೇ ರೀತಿಯಲ್ಲಿ ವಿಜಯದಿಂದ ಉಲ್ಲಸಿತರಾಗಿದ್ದ ಶೂರರಾದ ಪಾಂಡವರೂ–ಯಶೋವಂತರಾದ, ನರಶ್ರೇಷ್ಠರಾದ ಪಾಂಚಾಲರೂ ಯುದ್ಧಮಾಡುವ ಸಲುವಾಗಿ ಕೌರವರ ಸಮೀಪಕ್ಕೆ ಹೋದರು. ಅನ್ಯೋನ್ಯವಾಗಿ ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆಂಬ ಇಚ್ಛೆಯಿಂದ ನಮ್ಮ ಕಡೆಯ ದುರ್ಯೋಧನಾದಿಗಳೂ ಮತ್ತು ಶತ್ರುಪಕ್ಷದ ಯುಧಿಷ್ಠಿರಾದಿಗಳೂ ಸೈನ್ಯಗಳ ಸಮೂಹಗಳಿಂದ ಪರಿವೃತರಾಗಿ ಹದಿನೆಂಟನೆಯ ದಿವಸದ ಪ್ರಾತಃಕಾಲದಲ್ಲಿ ಪರಸ್ಪರವಾಗಿ ಮಿಳಿತರಾದರು. ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಘೋರರೂಪವಾದ ಮತ್ತು ಭಯಾನಕವಾದ ಯುದ್ಧವು ಪ್ರಾರಂಭವಾಯಿತು.”

೮ನೆಯ ಅಧ್ಯಾಯವು ಮುಗಿಯಿತು.

## ಎರಡೂ ಪಕ್ಷಗಳ ನಡುವೆ ಭಯಂಕರಯುದ್ಧ: ಕೌರವಸೈನಿಕರ ಪಲಾಯನ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಅನಂತರ ಕುರುಗಳಿಗೂ ಮತ್ತು ಸೃಂಜಯರಿಗೂ ಭಯವನ್ನು ಹೆಚ್ಚಿಸುವ, ಘೋರರೂಪವಾದ, ದೇವಾಸುರರ ಯುದ್ಧಕ್ಕೆ ಸಮಾನವಾದ ಯುದ್ಧವು ಪ್ರಾರಂಭವಾಯಿತು. ಪದಾತಿಗಳೂ, ರಥಿಗಳೂ, ಆನೆಗಳ ಸಮೂಹಗಳೂ, ಸಾವಿರಾರು ಕುದುರೆಸವಾರರೂ ತಮ್ಮ-ತಮ್ಮ ಪರಾಕ್ರಮಗಳನ್ನು ಪ್ರದರ್ಶಿಸುತ್ತಾ ಪರಸ್ಪರವಾಗಿ ಸಂಘರ್ಷಿಸಿದರು. ವರ್ಷಾಕಾಲದಲ್ಲಿ ಆಕಾಶದಲ್ಲಾಗುವ ಮೇಘಗಳ ನಿನಾದದಂತೆ–ಭಯಂಕರವಾದ ಆಕಾರದಿಂದ ಕೂಡಿದ್ದ, ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡಿಹೋಗುತ್ತಿದ್ದ ಆನೆಗಳ ಘೀಂಕಾರಶಬ್ದವು ಬಹಳ ಗಟ್ಟಿಯಾಗಿ ಕೇಳಿಸುತ್ತಿದ್ದಿತು. ಮದಿಸಿದ ಆನೆಗಳ ಆಘಾತಗಳಿಂದ ಎಷ್ಟೋ ರಥಿಗಳು ರಥಸಹಿತರಾಗಿಯೇ ಕೆಳಕ್ಕುರುಳಿದರು. ಅನೇಕವೀರರು ಮದೋದಕವನ್ನು ಸುರಿಸುತ್ತಿದ್ದ ಆನೆಗಳಿಂದ ದೂಡಲ್ಪಟ್ಟವರಾಗಿ ರಣಭೂಮಿಯನ್ನು ಬಿಟ್ಟು ಓಡಿಯೇ ಹೋದರು. ಸುಶಿಕ್ಷಿತರಾಗಿದ್ದ ರಥಿಗಳು ನಿಶಿತವಾದ ಬಾಣಗಳಿಂದ ಕುದುರೆಗಳ ಸಮೂಹಗಳನ್ನೂ, ಪಾದರಕ್ಷಕರನ್ನೂ ಪರಲೋಕಕ್ಕೆ ಕಳುಹಿಸಿಕೊಡುತ್ತಿದ್ದರು. ಸುಶಿಕ್ಷಿತರಾದ ಕುದುರೆಸವಾರರು ರಣಾಂಗಣದ ಸುತ್ತಲೂ ತಿರುಗುತ್ತಾ ಮಹಾರಥರನ್ನು ಎದುರಿಸುತ್ತಾ ಪ್ರಾಸ, ಶಕ್ತಿ ಮತ್ತು ಋಷ್ಟಿಗಳಿಂದ ಅವರನ್ನು ಪ್ರಹರಿಸುತ್ತಿದ್ದರು. ಧನುಷ್ಮಂತರಾದ ಕೆಲವು ಪುರುಷರು ಮಹಾರಥರನ್ನು ಆಕ್ರಮಿಸಿ ಕ್ಷಣಮಾತ್ರದಲ್ಲಿ ಯಮಲೋಕಕ್ಕೆ ಕಳುಹಿಸಿ ಬಿಡುತ್ತಿದ್ದರು. ಕೆಲವು ಮಹಾರಥರು ಆನೆಗಳನ್ನೂ, ಶ್ರೇಷ್ಠರಥಿಕರನ್ನೂ ಸುತ್ತುವರಿದು ಯುದ್ಧಮಾಡುತ್ತಿದ್ದರು. ಕೆಲವು ಯೋಧರು ಒಬ್ಬರ ಆಶ್ರಯದಲ್ಲಿ ಯುದ್ಧಮಾಡುತ್ತಾ, ಅಲ್ಲಿಂದಿಲ್ಲಿಗೂ ಇಲ್ಲಿಂದಲ್ಲಿಗೂ ಸಂಚರಿಸು ತ್ತಿದ್ದ ಮಹಾರಥನನ್ನು ಸಂಹರಿಸುತ್ತಿದ್ದರು. ಅದೇ ರೀತಿಯಲ್ಲಿ ಆನೆಗಳು ಅನೇಕಬಾಣಗಳನ್ನು ಸುತ್ತಲೂ ಸುರಿಸುತ್ತಿದ್ದ ಕ್ರುದ್ಧರಾದ ರಥಿಕರನ್ನು

ಎಲ್ಲ ಕಡೆಗಳಿಂದಲೂ ಆಕ್ರಮಿಸಿ ಸಂಹರಿಸುತ್ತಿದ್ದುವು. ಆನೆಯು (ಗಜಯೋಧನು) ಆನೆಯನ್ನೂ (ಗಜಯೋಧನನ್ನೂ,) ರಥಿಯು ರಥಿಕರನ್ನೂ ಆಕ್ರಮಿಸುತ್ತಾ ಶಕ್ತಿ-ತೋಮರ-ನಾರಾಚಗಳಿಂದ ಒಬ್ಬನು ಮತ್ತೊಬ್ಬನನ್ನು ಸಂಹರಿಸುತ್ತಿದ್ದರು. ಸಂಗ್ರಾಮದ ಮಧ್ಯದಲ್ಲಿ ರಥಗಳೂ–ಗಜಾಶ್ವಗಳೂ ಪದಾತಿಸೈನಿಕರ ಮೇಲೆ ಹರಿದು, ಕಾಲುಗಳಿಂದ ತುಳಿದು ಅವರೆಲ್ಲರಿಗೂ ಹೆಚ್ಚಾದ ವ್ಯಾಕುಲವನ್ನುಂಟುಮಾಡುತ್ತಿದ್ದುದು ಕಂಡುಬಂದಿತು. ಹಿಮವತ್ಪ್ರಸ್ಥದಲ್ಲಿರುವ ಹಂಸಪಕ್ಷಿಗಳು ನೀರುಕುಡಿಯುವ ಸಲುವಾಗಿ ಭೂಮಿಯ ಕಡೆಗೆ ಬಹಳ ವೇಗದಿಂದ ಹಾರಿಬರುವಂತೆ–ಚಾಮರಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ಕುದುರೆಗಳು ಬಹಳ ವೇಗವಾಗಿ ರಣಾಂಗಣದ ಸುತ್ತಲೂ ಓಡಾಡುತ್ತಿದ್ದುವು. ಪ್ರಿಯತಮನ ಉಗುರುಗಳಿಂದ ಕ್ಷತಳಾದ ನಾರೀಮಣಿಯಂತೆ–ಕುದುರೆಗಳ ಗೊರಸುಗಳಿಂದ ಚಿತ್ರಿತವಾಗಿದ್ದ ರಣರಂಗವು ಶೋಭಾಯಮಾನವಾಗಿ ಕಾಣುತ್ತಿದ್ದಿತು. ಕುದುರೆಗಳ ಗೊರಸುಗಳ ಶಬ್ದಗಳಿಂದಲೂ, ರಥಚಕ್ರಗಳ ಶಬ್ದಗಳಿಂದಲೂ, ಪತ್ತಿಗಳ ಕೋಲಾಹಲಶಬ್ದಗಳಿಂದಲೂ, ಆನೆಗಳ ಘೀಂಕಾರಗಳಿಂದಲೂ, ರಣವಾದ್ಯಗಳ ಘೋಷಗಳಿಂದಲೂ, ಶಂಖಗಳ ನಿನಾದಗಳಿಂದಲೂ ಪ್ರತಿಧ್ವನಿತವಾದ ಭೂಮಿಯು ಸಿಡಿಲುಗಳಿಂದ ನಿನಾದಿತವಾಗುವಂತೆ ಕಂಡಿತು. ಟೇಂಕರಿಸುತ್ತಿದ್ದ ಧನುಸ್ಸುಗಳಿಂದಲೂ, ದೇದೀಪ್ಯಮಾನವಾಗಿ ಕಾಣುತ್ತಿದ್ದ ಅಸ್ತ್ರ-ಶಸ್ತ್ರಗಳ ಸಮೂಹಗಳಿಂದಲೂ, ಯೋಧರು ಧರಿಸಿದ್ದ ಕವಚಗಳ ಪ್ರಭೆಯಿಂದಲೂ ಸಮಾವೃತವಾಗಿದ್ದ ಆ ರಣರಂಗದಲ್ಲಿ ಯಾವುದೊಂದೂ ತಿಳಿಯುತ್ತಲೇ ಇರಲಿಲ್ಲ. ಯೋಧರ ಕರಿಕರೋಪಮವಾದ ಸಾವಿರಾರು ತೋಳುಗಳು ಕತ್ತರಿಸಲ್ಪಟ್ಟು ರಣರಂಗದಲ್ಲಿ ಬಿದ್ದು ಸುತ್ತುತ್ತಿದ್ದುವು. ಕೆಲವು ಭುಜಗಳು ಕುಪ್ಪಳಿಸುತ್ತಿದ್ದುವು. ಬಾಣಗಳಿಂದ ಕತ್ತರಿಸಲ್ಪಟ್ಟು ನೆಲದ ಮೇಲೆ ಬೀಳುತ್ತಿದ್ದ ಯೋಧರ ಶಿರಸ್ಸುಗಳ ಶಬ್ದಗಳು ತಾಳೇಮರದಿಂದ ಚ್ಯುತವಾಗಿ ನೆಲದ ಮೇಲೆ ಬಿದ್ದ ತಾಲಫಲಗಳ ಶಬ್ದದಂತೆಯೇ ಕೇಳಿಬರುತ್ತಿದ್ದುವು. ಕೆಳಕ್ಕೆ ಬಿದ್ದಿರುವ, ರಕ್ತದಿಂದ ತೋಯ್ದುಹೋಗಿದ್ದ ಯೋಧರ ಶಿರಸ್ಸುಗಳಿಂದ ಯುದ್ಧಭೂಮಿಯು–ಸುವರ್ಣಮಯವಾದ ಕಮಲಪುಷ್ಪಗಳಿಂದ ಆಸ್ತೃತವಾಗಿರುವಂತೆಯೇ ಪ್ರಕಾಶಿಸುತ್ತಿದ್ದಿತು. ಹೊರಕ್ಕೆ ಬಂದ ಕಣ್ಣು

ಗುಡ್ಡೆಗಳುಳ್ಳ, ಪ್ರಾಣಹೀನವಾದ, ಗಾಯಗೊಂಡ ಆ ಶಿರಸ್ಸುಗಳಿಂದ ಆವೃತವಾಗಿದ್ದ ರಣಾಂಗಣವು ಕಮಲಪುಷ್ಪಗಳಿಂದ ಆಚ್ಛಾದಿತವಾಗಿರುವಂತೆಯೇ ಕಾಣುತ್ತಿದ್ದಿತು. ಚಂದನಚರ್ಚಿತವಾಗಿದ್ದ, ಬಹುಮೂಲ್ಯವಾದ ಅಂಗದ-ಕೇಯೂರಗಳಿಂದ ಸಮಲಂಕೃತವಾಗಿದ್ದ, ರಣರಂಗದ ಸುತ್ತಲೂ ಬಿದ್ದಿದ್ದ ಯೋಧರ ತೋಳುಗಳಿಂದ ರಣರಂಗವು ದೊಡ್ಡ-ದೊಡ್ಡ ಇಂದ್ರಧ್ವಜಗಳಿಂದ ಆವೃತವಾಗಿರುವಂತೆ ಶೋಭಾಯಮಾನವಾಗಿ ಕಾಣುತ್ತಿದ್ದಿತು.

ಆ ಮಹಾಯುದ್ಧದಲ್ಲಿ ಆನೆಯ ಸೊಂಡಿಲಿಗೆ ಸಮಾನವಾಗಿದ್ದ, ಕತ್ತರಿಸಲ್ಪಟ್ಟ ನರೇಂದ್ರರ ತೊಡೆಗಳಿಂದ ರಣರಂಗವು ತುಂಬಿಹೋಗಿದ್ದಿತು. ನೂರಾರು ಮುಂಡಗಳಿಂದ ಸಮಾಕುಲವಾಗಿದ್ದ, ಛತ್ರ-ಚಾಮರಗಳಿಂದ ಸಮೃದ್ಧವಾಗಿದ್ದ ಸೇನಾರೂಪವಾದ ವನವು–ಪುಷ್ಪಗಳಿಂದ ವ್ಯಾಪ್ತವಾದ ವಿಶಾಲವಾದ ಅರಣ್ಯದಂತೆಯೇ–ಶೋಭಾಯಮಾನವಾಗಿ ಕಾಣುತ್ತಿದ್ದಿತು.

ಆ ರಣಭೂಮಿಯಲ್ಲಿ ಭಯವೇ ಇಲ್ಲದವರಂತೆ ರಣಾಂಗಣದ ಸುತ್ತಲೂ ಸಂಚರಿಸುತ್ತಿದ್ದ, ರಕ್ತಸಿಕ್ತವಾದ ಅವಯವಗಳಿಂದ ಕೂಡಿದ್ದ ಯೋಧರು ಸುಪುಷ್ಪಿತವಾದ ಮುತ್ತುಗದ ಮರಗಳಂತೆಯೇ ಕಾಣುತ್ತಿದ್ದರು. ಶರ-ತೋಮರಗಳಿಂದ ಪ್ರಹೃತವಾದ ಮದಗಜಗಳು ರಣಾಂಗಣದಲ್ಲಿ ಅಲ್ಲಲ್ಲಿಯೇ ಅಸುನೀಗಿ ಬೀಳುತ್ತಾ–ಭಿನ್ನವಾದ ಮೇಘಗಳು ಆಕಾಶದಿಂದ ಕೆಳಗೆ ಬೀಳುತ್ತಿವೆಯೋ–ಎಂಬಂತೆ ಕಾಣುತ್ತಿದ್ದುವು. ಮಹಾತ್ಮರಾದ ವೀರಯೋಧರಿಂದ ಸತತವಾಗಿ ಪ್ರಹರಿಸಲ್ಪಡುತ್ತಿದ್ದ ಗಜಸೈನ್ಯವು–ಬಿರುಗಾಳಿಯಿಂದ ಚೋದಿತವಾದ ಮೋಡಗಳಂತೆ–ಎಲ್ಲ ದಿಕ್ಕುಗಳಿಗೂ ಚೆದುರಿಹೋಯಿತು. ಮೇಘಗಳೋಪಾದಿಯಲ್ಲಿದ್ದ ಆನೆಗಳು ಬಾಣಗಳಿಂದ ಹತವಾಗಿ ರಣಾಂಗಣದ ಸುತ್ತಲೂ ಬಿದ್ದಿದ್ದುವು. ಆ ಸಮಯದಲ್ಲಿ ಅವು–ಪ್ರಳಯಕಾಲದಲ್ಲಿ ವಜ್ರಾಯುಧದಿಂದ ಕತ್ತರಿಸಲ್ಪಟ್ಟು ಭೂಮಂಡಲದ ಸುತ್ತಲೂ ಬಿದ್ದಿರುವ ಪರ್ವತಗಳಂತೆಯೇ–ಪ್ರಕಾಶಿಸಿದುವು. ರಣರಂಗದ ಸುತ್ತಲೂ ಅಲ್ಲಲ್ಲಿ ಸತ್ತುಬಿದ್ದಿದ್ದ ಸವಾರರಿಂದೊಡಗೂಡಿದ ಕುದುರೆಗಳ ದೇಹಗಳ ರಾಶಿಗಳು ಪರ್ವತದಷ್ಟು ಎತ್ತರವಾಗಿರುವಂತೆ ಕಾಣುತ್ತಿದ್ದುವು. ಆ ಸಮಯದಲ್ಲಿ ರಣಭೂಮಿಯಲ್ಲಿ ಪರಲೋಕಕ್ಕೊಯ್ಯುವ ಒಂದು ರಕ್ತನದಿಯೇ ಹರಿಯತೊಡಗಿತು. ರಕ್ತವೇ ಅದರ ನೀರಾಗಿದ್ದಿತು. ರಥಗಳು ಸುಳಿಗಳಾಗಿದ್ದುವು. ಧ್ವಜಗಳೇ ನದಿಯ

ತೀರದಲ್ಲಿರುವ ವೃಕ್ಷಗಳಂತಿದ್ದುವು. ಮೂಳೆಗಳೇ ಕಲ್ಲುಗಳಂತೆ ಕಾಣುತ್ತಿದ್ದುವು. ಯೋಧರ ಭುಜಗಳು ಮೊಸಳೆಗಳಂತಿದ್ದುವು. ಧನುಸ್ಸುಗಳೇ ಪ್ರವಾಹರೂಪ ದಲ್ಲಿದ್ದುವು. ಆನೆಗಳು ನದಿಯ ಸಮೀಪದಲ್ಲಿರುವ ಪರ್ವತಗಳಂತಿದ್ದುವು. ಕುದುರೆಗಳು ಪರ್ವತದ ಬಂಡೆಗಳಂತಿದ್ದುವು. ಮೇದಸ್ಸು ಮತ್ತು ವಸೆಗಳೇ ಆ ರಕ್ತನದಿಯ ಕೆಸರಾಗಿದ್ದುವು. ಶ್ವೇತಚ್ಛತ್ರಗಳು ಹಂಸಗಳಂತಿದ್ದುವು. ಗದೆಗಳು ನೌಕೆಗಳಂತಿದ್ದುವು. ಕವಚಗಳಿಂದಲೂ ಮತ್ತು ಪಗಡಿಗಳಿಂದಲೂ ಆ ರಕ್ತನದಿಯು ಪಾಚಿಯಂತೆ ಮುಚ್ಚಲ್ಪಟ್ಟಿದ್ದಿತು. ಪತಾಕೆಗಳು ನದಿಯ ತೀರದಲ್ಲಿರುವ ಸುಂದರವಾದ ವೃಕ್ಷಗಳಂತೆಯೇ ಕಾಣುತ್ತಿದ್ದುವು. ಚಕ್ರಗಳಿಂದ ಸಮೃದ್ಧವಾಗಿದ್ದ ಆ ರಕ್ತನದಿಯು ಚಕ್ರವಾಕಪಕ್ಷಿಗಳಿಂದ ಸೇವಿಸಲ್ಪಡುವ ನದಿಯಂತೆಯೇ ಕಾಣುತ್ತಿದ್ದಿತು. ರಥಗಳ ತ್ರಿವೇಣುರೂಪವಾದ ಸರ್ಪಗಳಿಂದ ಆ ರಕ್ತನದಿಯು ಆವೃತವಾಗಿದ್ದಿತು.

ಶೂರರಿಗೆ ಹರ್ಷವರ್ಧಕವೂ–ಹೇಡಿಗಳಿಗೆ ಭಯವರ್ಧಕವೂ ಆಗಿದ್ದ, ಕುರು–ಸೃಂಜಯಯೋಧರಿಂದ ಸಮಾಕುಲವಾಗಿದ್ದ, ಭಯಂಕರವಾದ ರಕ್ತ ನದಿಯು ರಣಭೂಮಿಯಲ್ಲಿ ಪ್ರವಹಿಸಿತು. ಪರಲೋಕಕ್ಕೆ ವೀರಯೋಧರನ್ನು ಒಯ್ಯುವುದಾಗಿದ್ದ ಮಹಾಭಯಂಕರವಾಗಿದ್ದ ಆ ನದಿಯನ್ನು ಪರಿಘಾ ಯುಧಕ್ಕೆ ಸಮಾನವಾದ ತೋಳುಗಳನ್ನು ಹೊಂದಿದ್ದ ಶೂರಯೋಧರು ವಾಹನಗಳೆಂಬ ನೌಕೆಗಳ ಮೂಲಕವಾಗಿ ದಾಟುತ್ತಿದ್ದರು. ಹಿಂದೆ ನಡೆದ ದೇವಾಸುರರ ಯುದ್ಧಕ್ಕೆ ಸಮಾನವಾಗಿದ್ದ, ಚತುರಂಗಬಲವನ್ನೂ ಕ್ಷಯಿ ಸುವುದಾಗಿದ್ದ, ಮಹಾಘೋರವಾಗಿದ್ದ, ಯುದ್ಧಮರ್ಯಾದೆಯನ್ನೂ ಮೀರಿ ನಡೆಯುತ್ತಿದ್ದ ಭೀಕರಯುದ್ಧವು ನಡೆಯುತ್ತಿರಲಾಗಿ, ಭಯಪೀಡಿತರಾಗಿದ್ದ ಅನೇಕಸೈನಿಕರು ತಮ್ಮ ಬಂಧು-ಬಾಂಧವರನ್ನು ಕೂಗುತ್ತಿದ್ದರು. ಕೆಲವು ಯೋಧರು ತಮ್ಮ ಪ್ರಿಯಜನರಿಂದ ಕರೆಯಲ್ಪಡುತ್ತಿದ್ದರೂ ಯುದ್ಧದಿಂದ ಹಿಮ್ಮೆಟ್ಟುತ್ತಿರಲಿಲ್ಲ. ಭಯಂಕರವಾದ, ಮರ್ಯಾದಾತೀತವಾದ ಯುದ್ಧವು ನಡೆಯುತ್ತಿರಲಾಗಿ, ಅರ್ಜುನ-ಭೀಮಸೇನರಿಬ್ಬರೂ ಸೇರಿ ಶತ್ರುಸೈನಿಕರನ್ನು ವಿಮೋಹಗೊಳಿಸಿದರು. ಭೀಮಾರ್ಜುನರಿಂದ ಪ್ರಹರಿಸಲ್ಪಡುತ್ತಿದ್ದ ನಿನ್ನ ವಿಶಾಲಸೈನ್ಯವು–ಮದದಿಂದ ಮತ್ತಳಾದ ಯುವತಿಯಂತೆ–ಮೂರ್ಛಿತ

ವಾಗಿ ಅಲ್ಲಲ್ಲಿಯೇ ಬೀಳುತ್ತಿದ್ದಿತು. ಭೀಮ–ಧನಂಜಯರು ಕೌರವಸೈನ್ಯವನ್ನು ಸಂಪೂರ್ಣವಾಗಿ ಮೋಹಗೊಳಿಸಿ ಶಂಖಗಳನ್ನೂದಿ ಸಿಂಹನಾದಗಳನ್ನು ಮಾಡಿದರು. ಆ ಮಹಾಶಬ್ದವನ್ನು ಕೇಳಿದೊಡನೆಯೇ ಶಿಖಂಡಿ-ಧೃಷ್ಟದ್ಯುಮ್ನರು ಧರ್ಮರಾಜನನ್ನು ಮುಂದೆಮಾಡಿಕೊಂಡು ಮದ್ರರಾಜನಾದ ಶಲ್ಯನನ್ನು ಆಕ್ರಮಿಸಿದರು. ಅಲ್ಲಿ ನಾವು ಭಯಂಕರವಾದ ಮತ್ತು ಆಶ್ಚರ್ಯಕರವಾದ ದೃಶ್ಯವನ್ನು ಕಂಡೆವು. ವಿಭಾಗಗಳನ್ನು ಮಾಡಿಕೊಂಡು ಯುದ್ಧಮಾಡಲು ರಣಾಂಗಣಕ್ಕೆ ಬಂದ ಪಾಂಡವಯೋಧರೆಲ್ಲರೂ ಶಲ್ಯನೊಬ್ಬನೊಡನೆಯೇ ಯುದ್ಧಮಾಡು ತ್ತಿದ್ದರು. ಅಸ್ತ್ರವಿದ್ಯಾವಿಶಾರದರಾದ, ಯುದ್ಧದುರ್ಮದರಾದ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರೂ ವಿಜಯಗಳಿಸುವ ಇಚ್ಛೆಯಿಂದ ತ್ವರಾಯುಕ್ತರಾಗಿ ಶಲ್ಯನನ್ನು ಆಕ್ರಮಿಸಿದರು. ವಿಜಯೋಲ್ಲಸಿತರಾದ ಪಾಂಡವರಿಂದ ಬಾಣಗಳ ಮೂಲಕವಾಗಿ ಪದೇ-ಪದೇ ಗಾಯಗೊಳಿಸಲ್ಪಡುತ್ತಿದ್ದ ನಿನ್ನ ಸೈನ್ಯವು ಯುದ್ಧದಿಂದ ಹಿಮ್ಮೆಟ್ಟಿತು. ಬಾಣಗಳ ವೃಷ್ಟಿಯಿಂದ ಚುಚ್ಚಲ್ಪಟ್ಟು ಸತತವಾಗಿ ಗಾಯಗೊಳಿಸಲ್ಪಡುತ್ತಿದ್ದ ನಿನ್ನ ಸೈನ್ಯವು, ನಿನ್ನ ಮಕ್ಕಳು ನೋಡುತ್ತಿದ್ದಂತೆಯೇ ದಿಕ್ಕಾಪಾಲಾಗಿ ಓಡಿಹೋಯಿತು. ಆಗ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಯುದ್ಧದಲ್ಲಿ ಪರಸ್ಪರ ಸಹಾಯದಿಂದ ವಿಜಯವನ್ನು ಗಳಿಸಬೇಕೆಂದು ಇಚ್ಛಿಸಿದ್ದ ಮಹಾತ್ಮರಾದ ಕ್ಷತ್ರಿಯರು ಓಡಿಹೋಗುತ್ತಿದ್ದ ಯೋಧರನ್ನು ಕುರಿತು 'ನಿಲ್ಲಿರಿ! ನಿಲ್ಲಿರಿ!' ಎಂದು ಕೂಗಿ ಹೇಳುತ್ತಿದ್ದುದೂ ಕೇಳಿಬರುತ್ತಿದ್ದಿತು. ಪಾಂಡವರಿಂದ ಭಗ್ನರಾದ ನಿನ್ನ ಸೈನಿಕರು ಯುದ್ಧದಲ್ಲಿ ತಮಗೆ ಅತ್ಯಂತಪ್ರಿಯರಾದ ಮಕ್ಕಳನ್ನೂ, ಸಹೋದರರನ್ನೂ, ಪಿತಾಮಹರನ್ನೂ ಸೋದರಮಾವಂದಿರನ್ನೂ, ಸೋದರಳಿಯಂದಿರನ್ನೂ, ಸ್ನೇಹಿತರನ್ನೂ ಪರಿತ್ಯಜಿಸಿ ಓಡಿಹೋಗುತ್ತಿದ್ದರು. ಕುದುರೆಗಳನ್ನೂ ಮತ್ತು ಆನೆಗಳನ್ನೂ ತ್ವರೆಗೊಳಿಸುತ್ತಾ ಆತ್ಮರಕ್ಷಣೆಯಲ್ಲಿಯೇ ಉತ್ಸಾಹವುಳ್ಳವರಾಗಿದ್ದ ನಿನ್ನ ಕಡೆಯ ಯೋಧರು ಎಲ್ಲ ದಿಕ್ಕುಗಳಿಗೂ ಓಡಿಹೋದರು."

೯ನೆಯ ಅಧ್ಯಾಯವು ಮುಗಿಯಿತು.

೧೦ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ನಕುಲನು ಕರ್ಣನ ಮೂವರು ಮಕ್ಕಳನ್ನು ಸಂಹರಿಸಿದುದು: ಕೌರವ-ಪಾಂಡವರ ಭಯಂಕರಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಪ್ರತಾಪವಂತನಾದ ಶಲ್ಯನು ತನ್ನ ಕಡೆಯ ಸೈನ್ಯವು ಭಗ್ನವಾದುದನ್ನು ಕಂಡು ಮಹಾವೇಗವುಳ್ಳ ಕುದುರೆಗಳನ್ನು ಶೀಘ್ರವಾಗಿ ನಡೆಸುವಂತೆ ಸಾರಥಿಗೆ ಹೇಳಿದನು:



"ಸಾರಥೇ! ಪಾಂಡುಪುತ್ರನಾದ ಯುಧಿಷ್ಠಿರರಾಜನು ಶ್ವೇತಛತ್ರ

ಯುಕ್ತನಾಗಿ ರಣರಂಗದಲ್ಲಿ ವಿರಾಜಮಾನನಾಗಿ ನಿಂತಿದ್ದಾನೆ. ಅವನಿರುವೆಡೆಗೆ ನನ್ನನ್ನು ಶೀಘ್ರವಾಗಿ ಒಯ್ಯುವವನಾಗು. ಅವನೊಡನೆ ಯುದ್ಧಮಾಡುವಾಗ ನನ್ನ ಬಲವೆಷ್ಟಿದೆಯೆಂಬುದನ್ನು ಪ್ರತ್ಯಕ್ಷವಾಗಿ ಕಾಣುವೆ. ಇಂದಿನ ಯುದ್ಧದಲ್ಲಿ ಧರ್ಮರಾಜನು ನನ್ನೆದುರಾಗಿ ನಿಂತು ಯುದ್ಧಮಾಡಲು ಖಂಡಿತವಾಗಿಯೂ ಸಮರ್ಥನಲ್ಲ."

ಮಹಾರಾಜ! ಶಲ್ಯರಾಜನು ಹೀಗೆ ಹೇಳಿದೊಡನೆಯೇ ಸಾರಥಿಯು ಸತ್ಯಸಂಧನಾದ, ಧರ್ಮಪುತ್ರನಾದ ಯುಧಿಷ್ಠಿರನಿದ್ದೆಡೆಗೆ ರಥವನ್ನು ನಡೆಸಿದನು. ಶಲ್ಯನು ಯುಧಿಷ್ಠಿರನನ್ನು ಆಕ್ರಮಿಸಲು ಬಂದುದನ್ನು ನೋಡಿ ಪಾಂಡವರ ಮಹಾಸೈನ್ಯವೂ ಅವನನ್ನೆದುರಿಸಿ ನಿಂತಿತು. ಉಕ್ಕಿಬರುವ ಸಮುದ್ರವನ್ನು ಸಮುದ್ರತೀರವು ತಡೆದು ನಿಲ್ಲಿಸುವಂತೆ–ಶಲ್ಯನೊಬ್ಬನೇ ಯುಧಿಷ್ಠಿರಪ್ರಮುಖವಾದ ಆ ಮಹಾಸೈನ್ಯವನ್ನು ತಡೆದು ನಿಲ್ಲಿಸಿದನು. ನದಿಯ ವೇಗವು ಪರ್ವತದ ಸಮೀಪಕ್ಕೆ ಹೋದೊಡನೆಯೇ ಸ್ತಬ್ಧವಾಗಿಬಿಡುವಂತೆ–ಪಾಂಡವರ ವೇಗಯುಕ್ತವಾದ ಮಹಾಸೈನ್ಯವು ಶಲ್ಯನನ್ನು ಸಂಧಿಸಿದೊಡನೆಯೇ ಸ್ತಬ್ಧವಾಗಿ ನಿಂತಿತು. ಸಮರಾಂಗಣದಲ್ಲಿ ಶಲ್ಯನು ಯುದ್ಧಸನ್ನದ್ಧನಾಗಿ ನಿಂತಿರುವುದನ್ನು ನೋಡಿ ಕುರುಯೋಧರು ಮೃತ್ಯುವನ್ನೇ ಹಿಂದಿರುಗುವ ಸ್ಥಾನವನ್ನಾಗಿ ಮಾಡಿಕೊಂಡು ಪುನಃ ಯುದ್ಧಕ್ಕೆ ಹಿಂದಿರುಗಿದರು. ಕೌರವಸೈನಿಕರೆಲ್ಲರೂ ಹಿಂದಿರುಗಲಾಗಿ, ಪ್ರತ್ಯೇಕ-ಪ್ರತ್ಯೇಕ ವಿಭಾಗಗಳಲ್ಲಿ ವ್ಯೂಹಗಳನ್ನು ರಚಿಸಿಕೊಳ್ಳಲಾಗಿ, ಪಾಂಡವರಿಗೂ ಮತ್ತು ಕೌರವರಿಗೂ ಮಹಾಭಯಂಕರವಾದ ಯುದ್ಧವು ಪ್ರಾರಂಭವಾಯಿತು. ರಕ್ತವೇ ನೀರಿನ ರೂಪದಲ್ಲಿರುವ ನದಿಯು ಹರಿಯತೊಡಗಿತು. ಆ ಸಮಯದಲ್ಲಿ ಯುದ್ಧದುರ್ಮದನಾದ ನಕುಲನು ಕರ್ಣನ ಮಗನಾದ ಚಿತ್ರಸೇನನನ್ನು ಆಕ್ರಮಿಸಿದನು. ದಕ್ಷಿಣೋತ್ತರದಿಕ್ಕುಗಳಿಂದ ಮೇಲ್ಮುಖವಾಗಿ ಬಂದು ಆಕಾಶದ ಮಧ್ಯದಲ್ಲಿ ಸಂಘರ್ಷಿಸಿ ಮಳೆಗರೆಯುವ ಎರಡು ಮೇಘಗಳೋಪಾದಿಯಲ್ಲಿ–ಚಿತ್ರಿತವಾದ ಧನುಸ್ಸುಗಳನ್ನು ಧರಿಸಿದ್ದ ನಕುಲ-ಚಿತ್ರಸೇನರು ಪರಸ್ಪರವಾಗಿ ಸಂಘರ್ಷಿಸುತ್ತಾ ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳ ಮಳೆಗರೆಯಲು ಉಪಕ್ರಮಿಸಿದರು. ಆ ಸಮಯದಲ್ಲಿ ನಾನು ನಕುಲನಿಗೂ ಮತ್ತು ಚಿತ್ರಸೇನನಿಗೂ ಯಾವ ವಿಧವಾದ ತಾರತಮ್ಯವನ್ನೂ ಕಾಣಲಿಲ್ಲ.

ಇಬ್ಬರೂ ಅಸ್ತ್ರವಿದ್ಯಾವಿಶಾರದರಾಗಿದ್ದರು. ಬಲಿಷ್ಠರಾಗಿದ್ದರು. ರಥಯುದ್ಧ ದಲ್ಲಿ ಮಹಾಕುಶಲರಾಗಿದ್ದರು. ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಿದ್ದರು. ಚಿತ್ರಸೇನನು ನಿಶಿತವಾದ ಮತ್ತು ಹೊಂಬಣ್ಣದ ಭಲ್ಲದಿಂದ ನಕುಲನ ಧನುಸ್ಸನ್ನು ಮುಷ್ಟಿಯಿದ್ದೆಡೆಯಲ್ಲಿ (ಧನುಸ್ಸನ್ನು ಮುಷ್ಟಿಯಿಂದ ಹಿಡಿದುಕೊಂಡಿದ್ದ ಸ್ಥಳದಲ್ಲಿ) ಕತ್ತರಿಸಿದನು. ಅನಂತರ ಅಸಂಭ್ರಾಂತನಾದ ಚಿತ್ರಸೇನನು ಧನುಸ್ಸಿನಿಂದ ವಿಹೀನನಾದ ನಕುಲನನ್ನು ಸುವರ್ಣಮಯವಾದ ಮೂಲಭಾಗವನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಮೂರು ಬಾಣಗಳಿಂದ ಹಣೆಯ ಪ್ರದೇಶದಲ್ಲಿ ಪ್ರಹರಿಸಿದನು. ನಕುಲನ ರಥದಲ್ಲಿದ್ದ ಕುದುರೆಗಳನ್ನೂ ತೀಕ್ಷ್ಣ ವಾದ ಬಾಣಗಳಿಂದ ಮೃತ್ಯುವಿನೆಡೆಗೆ ಕಳುಹಿಸಿಕೊಟ್ಟನು. ಅದೇ ರೀತಿಯಲ್ಲಿ ಧ್ವಜವನ್ನೂ ಮತ್ತು ಸಾರಥಿಯನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಶತ್ರುವಿನ ಭುಜದಿಂದ ಬಿಡಲ್ಪಟ್ಟು ಹಣೆಗೆ ಚುಚ್ಚಿಕೊಂಡಿದ್ದ ಆ ಮೂರು ಬಾಣಗಳಿಂದ ನಕುಲನು ಮೂರು ಶಿಖರಗಳುಳ್ಳ ಪರ್ವತದೋ ಪಾದಿಯಲ್ಲಿ ಪ್ರಕಾಶಿಸಿದನು. ಧನುಸ್ಸಿನಿಂದಲೂ, ರಥದಿಂದಲೂ ವಿಹೀನ ನಾಗಿದ್ದ ನಕುಲನು ಖಡ್ಗ ಮತ್ತು ಗುರಾಣಿಗಳನ್ನೆತ್ತಿಕೊಂಡು–ಸಿಂಹವು ಪರ್ವತದ ಮೇಲ್ಭಾಗದಿಂದ ಹಾರಿ ರಭಸದಿಂದ ಬರುವಂತೆ–ರಥದಿಂದ ಕೆಳಕ್ಕೆ ಧುಮುಕಿದನು. ಪದಾತಿಯಾಗಿಯೇ ತನ್ನ ಮೇಲೆ ಆಕ್ರಮಣ ನಡೆಸಲು ಬರುತ್ತಿದ್ದ ನಕುಲನ ಮೇಲೆ ಚಿತ್ರಸೇನನು ಬಾಣಗಳ ಮಳೆಯನ್ನೇ ಸುರಿಸಿ ದನು. ಆದರೆ ಲಘುವಿಕ್ರಮನಾದ ನಕುಲನು ಗುರಾಣಿಯ ಸಹಾಯದಿಂದಲೇ ಚಿತ್ರಸೇನನು ಸುರಿಸುತ್ತಿದ್ದ ಬಾಣಗಳೆಲ್ಲವನ್ನೂ ವ್ಯರ್ಥಗೊಳಿಸುತ್ತಿದ್ದನು. ಶ್ರಮವನ್ನೇ ಜಯಿಸಿದ್ದ, ಚಿತ್ರಯೋಧಿಯಾದ ನಕುಲನು ಚಿತ್ರಸೇನನ ರಥದ ಬಳಿಗೆ ಸಾರಿ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಅವನ ರಥವನ್ನು ಹತ್ತಿ, ಕುಂಡಲಯುಕ್ತವಾಗಿದ್ದ, ವಿಶಾಲವಾದ ಕಣ್ಣುಗಳನ್ನೂ ಮತ್ತು ಸುಂದರವಾದ ಮೂಗನ್ನೂ ಹೊಂದಿದ್ದ, ಕಿರೀಟಸಹಿತವಾಗಿದ್ದ ಚಿತ್ರಸೇನನ ತಲೆಯನ್ನು ಶರೀರದಿಂದ ಅಪಹರಿಸಿದನು. ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಆ ಶಿರಸ್ಸು ರಥದ ಸಮೀಪದಲ್ಲಿ ಬಿದ್ದಿತು. ಚಿತ್ರ ಸೇನನು ಹತನಾದುದನ್ನು ನೋಡಿದೊಡನೆಯೇ ಪಾಂಡವರ ಕಡೆಯ ಮಹಾ

ರಥರು, 'ಸಾಧು-ಸಾಧು' ಎಂದು ಕೂಗುತ್ತಾ ಸಿಂಹನಾದಗಳನ್ನು ಮಾಡಿ ದರು. ಸಹೋದರನು ಹತನಾದುದನ್ನು ಕಂಡು ಮಹಾರಥರಾದ ಸುಷೇಣ-ಸತ್ಯಸೇನರೆಂಬ ಕರ್ಣನ ಇಬ್ಬರು ಮಕ್ಕಳು ವಿಧ-ವಿಧವಾದ ಬಾಣಗಳನ್ನು ಸುರಿಸುತ್ತಾ ರಥಿಗಳಲ್ಲಿ ಶ್ರೇಷ್ಠನಾದ ನಕುಲನನ್ನು ಬಹಳಬೇಗ ಆಕ್ರಮಿಸಿ



ದರು. ಮಹಾರಣ್ಯದಲ್ಲಿ ಮದಿಸಿದ ಒಂದು ಆನೆಯನ್ನು ಕೊಲ್ಲುವ ಇಚ್ಛೆಯಿಂದ ಎರಡು ವ್ಯಾಘ್ರಗಳು ಧಾವಿಸಿಹೋಗುವಂತೆ–ತೀಕ್ಷ್ಣವಾದ ಸ್ವಭಾವದಿಂದ ಕೂಡಿದ್ದ ಆ ಇಬ್ಬರು ಸಹೋದರರೂ ಮಹಾರಥನಾದ ನಕುಲನನ್ನು–ಮೇಘವು ಮಳೆಗರೆಯುವಂತೆ–ಬಾಣಗಳನ್ನು ಸುರಿಸುತ್ತಾ ಆಕ್ರಮಿಸಿದರು.

ಸುಷೇಣ-ಸತ್ಯಸೇನರು ಬಿಟ್ಟ ಬಾಣಗಳಿಂದ ಬಹಳವಾಗಿ ಗಾಯಗೊಂಡರೂ ಪ್ರಹೃಷ್ಟನಾಗಿಯೇ ಇದ್ದ, ವೇಗವಂತನಾದ, ವೀರನಾದ ನಕುಲನು ರಥವನ್ನು ಹತ್ತಿ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಕ್ರುದ್ಧನಾದ ಯಮನೋಪಾದಿಯಲ್ಲಿ ಯುದ್ಧಸನ್ನದ್ಧನಾಗಿ ನಿಂತನು. ಸುಷೇಣ-ಸತ್ಯಸೇನ ಸಹೋದರರು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ನಕುಲನ ರಥವನ್ನೇ ಚೂರು-ಚೂರುಗಳನ್ನಾಗಿ ಮಾಡಲು ಉಪಕ್ರಮಿಸಿದರು. ಅದನ್ನು ಗಮನಿಸಿದ ನಕುಲನು ಗಹಗಹಿಸಿ ನಗುತ್ತಾ ನಿಶಿತವಾದ ನಾಲ್ಕು ಬಾಣಗಳಿಂದ ಸತ್ಯಸೇನನ ನಾಲ್ಕು ಕುದುರೆಗಳನ್ನೂ ಸಂಹರಿಸಿದನು. ಬಳಿಕ ಸುವರ್ಣಮಯವಾದ ಮೂಲಭಾಗವನ್ನು ಹೊಂದಿದ್ದ, ಮಸೆಗಲ್ಲಿನಿಂದ ಹರಿತವಾಗಿ ಮಾಡಲ್ಪಟ್ಟಿದ್ದ ನಾರಾಚವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಸತ್ಯಸೇನನ ಧನುಸ್ಸನ್ನೂ ಕತ್ತರಿಸಿದನು. ಒಡನೆಯೇ ಸತ್ಯಸೇನನು ಮತ್ತೊಂದು ರಥವನ್ನು ಹತ್ತಿ ನೂತನವಾದ ಧನುಸ್ಸೊಂದನ್ನು ಕೈಗೆತ್ತಿಕೊಂಡನು. ಸತ್ಯಸೇನ-ಸುಷೇಣರಿಬ್ಬರೂ ಪುನಃ ನಕುಲನನ್ನು ಆಕ್ರಮಿಸಿದರು. ಪ್ರತಾಪವಂತನಾದ, ಮಾದ್ರಿಯ ಮಗನಾದ ನಕುಲನು ಸ್ವಲ್ಪವಾದರೂ ಗಾಬರಿಗೊಳ್ಳದೇ ಆ ಇಬ್ಬರನ್ನೂ ಎರಡೆರಡು ಬಾಣಗಳಿಂದ ಪ್ರಹರಿಸಿದನು. ಕ್ರುದ್ಧನಾಗಿದ್ದ ಮಹಾರಥನಾದ ಸುಷೇಣನು ನಗು-ನಗುತ್ತಲೇ ಕ್ಷುರಪ್ರದಿಂದ ನಕುಲನ ಮಹಾಧನುಸ್ಸನ್ನು ಕತ್ತರಿಸಿದನು. ಕ್ರೋಧಮೂರ್ಛಿತನಾದ ನಕುಲನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಸುಷೇಣನನ್ನು ಐದು ಬಾಣಗಳಿಂದ ಪ್ರಹರಿಸಿ ಮತ್ತೊಂದು ಬಾಣದಿಂದ ಅವನ ಧ್ವಜವನ್ನೂ ಕತ್ತರಿಸಿದನು. ಮರುಕ್ಷಣದಲ್ಲಿಯೇ ನಕುಲನು ಸತ್ಯಸೇನನ ಧನುಸ್ಸನ್ನೂ ಮತ್ತು ಕೈಚೀಲವನ್ನೂ ಬಹಳ ಬೇಗ ಕತ್ತರಿಸಿದನು. ಅದನ್ನು ನೋಡಿದ ಜನರು ಗಟ್ಟಿಯಾಗಿ ಕೂಗಿಕೊಂಡರು. ಅನಂತರ ಸತ್ಯಸೇನನು ಶತ್ರುಪಕ್ಷದ ವೇಗ ವನ್ನು ತಡೆಯಲು ಸಮರ್ಥವಾದ, ಭಾರಸಾಧನವಾದ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಬಾಣಗಳಿಂದ ನಕುಲನನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟನು. ಶತ್ರುವೀರಹಂತಕನಾದ ನಕುಲನು ಸತ್ಯಸೇನನು ಬಿಟ್ಟ ಬಾಣಗಳೆಲ್ಲವನ್ನೂ ನಿರಸನಗೊಳಿಸಿ ಸುಷೇಣ-ಸತ್ಯಸೇನರಿಬ್ಬರನ್ನೂ ಎರಡೆರಡು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅವರಿಬ್ಬರೂ ನೇರವಾಗಿ

ಹೋಗುವ ಬಾಣಗಳಿಂದ ನಕುಲನನ್ನು ಗಾಯಗೊಳಿಸಿದರು. ನಕುಲನ ಸಾರಥಿಯನ್ನೂ ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ಬಳಿಕ ಸಿದ್ಧಹಸ್ತನಾದ ಮತ್ತು ಪ್ರತಾಪವಂತನಾದ ಸತ್ಯಸೇನನು ಪ್ರತ್ಯೇಕವಾದ ಎರಡೆರಡು ಬಾಣಗಳಿಂದ ನಕುಲನ ಧನುಸ್ಸನ್ನೂ ಮತ್ತು ರಥದಲ್ಲಿದ್ದ ಈಷಾದಂಡವನ್ನೂ



ಕತ್ತರಿಸಿದನು. ಅದರಿಂದ ಕುಪಿತನಾದ, ಅತಿರಥನಾದ ನಕುಲನು ರಥದಲ್ಲಿಯೇ ನಿಂತು ರಥಶಕ್ತಿಯನ್ನು ಕೈಗೆತ್ತಿಕೊಂಡನು. ಸುವರ್ಣಮಯವಾದ ದಂಡವನ್ನು ಹೊಂದಿದ್ದ, ನೇರವಾದ ಅಗ್ರಭಾಗವಿದ್ದ, ಎಣ್ಣೆಯಿಂದ ಹದಮಾಡಲ್ಪಟ್ಟಿದ್ದ, ನಿರ್ಮಲವಾಗಿದ್ದ, ಕಟವಾಯಿಗಳನ್ನು ನೆಕ್ಕುತ್ತಿರುವ ಮಹಾವಿಷಯುಕ್ತಸರ್ಪಿಣಿಯಂತೆಯೇ ಇದ್ದ ರಥಶಕ್ತಿಯನ್ನು ಮೇಲಕ್ಕೆತ್ತಿ ರಭಸ

ದಿಂದ ಸತ್ಯಸೇನನ ಕಡೆಗೆ ಎಸೆದನು. ಆ ರಥಶಕ್ತಿಯು ಸತ್ಯಸೇನನ ಹೃದಯವನ್ನು ಭೇದಿಸಿತು. ಅಲ್ಪಚೇತನನಾದ ಸತ್ಯಸೇನನು ಪ್ರಾಣಗಳನ್ನು ತೊರೆದು ಒಡನೆಯೇ ರಥದಿಂದ ಭೂಮಿಯಲ್ಲಿ ಬಿದ್ದನು. ಸಹೋದರನು ಹತನಾದುದನ್ನು ಕಂಡು ಕ್ರೋಧಮೂರ್ಛಿತನಾದ ಸುಷೇಣನು ನೆಲದ ಮೇಲೆ ನಿಂತಿದ್ದ ನಕುಲನನ್ನು ಬಾಣಗಳ ಸುರಿಸುವಿಕೆಯಿಂದ ಆಚ್ಛಾದಿಸಿದನು. ಕರ್ಣಪುತ್ರನು ನಾಲ್ಕು ಬಾಣಗಳಿಂದ ನಕುಲನ ನಾಲ್ಕು ಕುದುರೆಗಳನ್ನು ಸಂಹರಿಸಿ, ಪುನಃ ಮೂರು ಬಾಣಗಳಿಂದ ಅವನ ಸಾರಥಿಯನ್ನೂ ಯಮ ಲೋಕಕ್ಕೆ ಕಳುಹಿಸಿ ಸಿಂಹನಾದವನ್ನು ಮಾಡಿದನು.

ಮಹಾರಥನಾದ ನಕುಲನು ರಥಹೀನನಾಗಿರುವುದನ್ನು ನೋಡಿ ದ್ರೌಪದಿಯ ಮಗನಾದ ಸುತಸೋಮನು ತಂದೆಯನ್ನು ರಕ್ಷಿಸುವ ಇಚ್ಛೆ ಯಿಂದ ಧಾವಿಸಿ ಬಂದನು. ಒಡನೆಯೇ ನಕುಲನು ಸುತಸೋಮನ ರಥವನ್ನು ಹತ್ತಿ ಪರ್ವತದ ಮೇಲಿರುವ ಸಿಂಹದಂತೆಯೇ ಪ್ರಕಾಶಿಸಿದನು. ಬಳಿಕ ನಕುಲನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಸುಷೇಣನೊಡನೆ ಯುದ್ಧಮಾಡಲು ಉಪಕ್ರಮಿಸಿದನು. ಆ ಇಬ್ಬರು ಮಹಾರಥರೂ ಬಾಣಗಳ ಸುರಿಸುವಿಕೆಯಿಂದ ಪರಸ್ಪರವಾಗಿ ಸಂಘರ್ಷಿಸುತ್ತಾ ಒಬ್ಬರು ಮತ್ತೊಬ್ಬ ರನ್ನು ಸಂಹರಿಸಬೇಕೆಂದು ಪ್ರಯತ್ನಮಾಡುತ್ತಿದ್ದರು. ಬಳಿಕ ಕ್ರುದ್ಧನಾದ ಸುಷೇಣನು ನಕುಲನನ್ನು ಮೂರು ಬಾಣಗಳಿಂದ ಪ್ರಹರಿಸಿ ಇಪ್ಪತ್ತು ಬಾಣಗಳಿಂದ ಸುತಸೋಮನ ತೋಳುಗಳನ್ನೂ ಮತ್ತು ವಕ್ಷಃಸ್ಥಳವನ್ನೂ ಗಾಯಗೊಳಿಸಿದನು. ಅದರಿಂದ ಕ್ರುದ್ಧನಾದ, ಶತ್ರುವೀರಹಂತಕನಾದ, ವೀರನಾದ ನಕುಲನು ಬಾಣಗಳ ಸತತವಾದ ಪ್ರಯೋಗದಿಂದ ಸುಷೇಣನನ್ನು ಎಲ್ಲ ಕಡೆಗಳಿಂದಲೂ ಮುಚ್ಚಿದನು. ಬಳಿಕ ತೀಕ್ಷ್ಣವಾದ ಅಗ್ರಭಾಗದಿಂದ ಕೂಡಿದ್ದ, ಬಹಳ ಹರಿತವಾಗಿದ್ದ, ವೇಗಯುಕ್ತವಾಗಿದ್ದ, ಅರ್ಧಚಂದ್ರ ವೆಂಬ ಬಾಣವನ್ನು ಕರ್ಣನ ಮಗನ ಮೇಲೆ ಪ್ರಯೋಗಿಸಿದನು. ನಕುಲನು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಆ ಬಾಣದಿಂದ ಸುಷೇಣನ ತಲೆಯನ್ನು ಹಾರಿಸಿಬಿಟ್ಟನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ನದಿಯ ಪ್ರವಾಹದ ವೇಗಕ್ಕೆ ಸಿಕ್ಕಿದ ತೀರಪ್ರದೇಶದಲ್ಲಿರುವ ಮಹಾವೃಕ್ಷವು

ಬುಡಮೇಲಾಗಿ ಕೆಳಕ್ಕೆ ಬೀಳುವಂತೆ–ಮಹಾತ್ಮನಾದ ನಕುಲನಿಂದ ಪ್ರಹೃತನಾದ ಸುಷೇಣನು ಅಸುವನ್ನು ತೊರೆದು ಕೆಳಕ್ಕೆ ಬಿದ್ದನು. ಕರ್ಣಪುತ್ರನಾದ *ಸುಷೇಣನು ಹತನಾದುದನ್ನೂ, ನಕುಲನ ಅತುಲಪರಾಕ್ರಮವನ್ನೂ ನೋಡಿದ ನಿನ್ನ ಸೈನ್ಯವು ಭಯದಿಂದ ಪಲಾಯನಮಾಡಿತು. ಆ ಸಮಯದಲ್ಲಿ ಪ್ರತಾಪವಂತನಾದ, ಶೂರನಾದ, ಸೇನಾಪತಿಯಾದ, ಶತ್ರುಗಳನ್ನು ದಮನಮಾಡುವ ಶಲ್ಯನು ಪಲಾಯನಮಾಡುತ್ತಿದ್ದ ಸೈನ್ಯವನ್ನು ಸಂರಕ್ಷಿಸಿದನು. ಶಲ್ಯನು, ಓಡಿಹೋಗುತ್ತಿದ್ದ ಸೈನ್ಯವನ್ನು ಪ್ರೋತ್ಸಾಹಿಸಿ ಹಿಂದಕ್ಕೆ ಕರೆಸಿಕೊಂಡು ಸುವ್ಯವಸ್ಥಿತರೀತಿಯಲ್ಲಿ ನಿಲ್ಲಿಸಿ ಭಯರಹಿತನಾಗಿ ಸಮರಾಂಗಣದಲ್ಲಿ ನಿಂತುಕೊಂಡನು. ಗಟ್ಟಿಯಾಗಿ ಸಿಂಹನಾದಮಾಡಿ ಶತ್ರುಗಳಿಗೆ ಭಯವಾಗುವ ರೀತಿಯಲ್ಲಿ ಧನುಸ್ಸನ್ನೂ ಟೇಂಕರಿಸಿದನು. ದೃಢಧನ್ವನಾದ ಶಲ್ಯನಿಂದ ರಕ್ಷಿಸಲ್ಪಟ್ಟ ನಿನ್ನ ಸೈನಿಕರು ಕ್ಲೇಶರಹಿತರಾಗಿ ಶತ್ರುಗಳನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿದರು. ನಿನ್ನ ಮಹಾಸೈನ್ಯವು ಮಹಾಧನುಷ್ಮಂತನಾದ ಮದ್ರರಾಜನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದು ಪಾಂಡವಸೈನಿಕರೊಡನೆ ಯುದ್ಧಮಾಡುವ ಇಚ್ಛೆಯಿಂದ ನಿಂತಿದ್ದಿತು. ಸಾತ್ಯಕಿ, ಭೀಮಸೇನ, ನಕುಲ-ಸಹದೇವರು ಲಜ್ಜಾಶೀಲನಾದ, ಅರಿಂದಮನಾದ ಯುಧಿಷ್ಠಿರನನ್ನು ಮುಂದೆಮಾಡಿಕೊಂಡು ಯುದ್ಧಸನ್ನದ್ಧರಾದರು. ಪಾಂಡವರ ಕಡೆಯ ವೀರ

---

* ಕರ್ಣನ ಪುತ್ರರಾದ ಸುಷೇಣ-ಸತ್ಯಸೇನರು ಕರ್ಣನ ಚಕ್ರದ ರಕ್ಷಕರಾಗಿದ್ದರು. (ಕರ್ಣಪರ್ವ–ಅಧ್ಯಾಯ ೪೮, ಶ್ಲೋಕಗಳು ೧೮ ಮತ್ತು ೩೪ ರಿಂದ ೪೦ರ ವರೆಗೆ) ಅಲ್ಲಿಯೂ ನಕುಲನೊಡನೆಯೇ ಸುಷೇಣನು ಯುದ್ಧಮಾಡುತ್ತಾನೆ. ಪುನಃ ಕರ್ಣಪರ್ವ–೭೫ನೆಯ ಅಧ್ಯಾಯದ ೧೩ನೆಯ ಶ್ಲೋಕದಲ್ಲಿ ಉತ್ತಮೌಜಸನಿಂದ ಕರ್ಣಪುತ್ರನಾದ ಸುಷೇಣನು ಹತನಾದ ಪ್ರಸಂಗವು ಬಂದಿರುತ್ತದೆ. ಸುಷೇಣನೇ ಇಲ್ಲಿಯೂ ನಕುಲನಿಂದ ಹತನಾಗುತ್ತಾನೆ. 'ಸುಷೇಣ' ಎಂಬ ಹೆಸರಿನ ಇಬ್ಬರು ಮಕ್ಕಳು ಕರ್ಣನಿಗಿದ್ದರೇ? ಕರ್ಣಪರ್ವದ ೭೫ನೆಯ ಅಧ್ಯಾಯವೇ ಹೆಚ್ಚು ಪಾಠವೇ? ಏಕೆಂದರೆ: ಆ ಅಧ್ಯಾಯದಲ್ಲಿ ಕೆಲವು ಅಸಂಗತವಾದ ಶ್ಲೋಕಗಳೂ ಇವೆ. ಸುಷೇಣನು ಹತನಾದುದನ್ನು ಕಂಡು ತಂದೆಯಾದ ಕರ್ಣನು ಕುಪಿತನಾಗಿ ಉತ್ತಮೌಜಸನ ಕುದುರೆಗಳನ್ನೂ ರಥ-ಧ್ವಜಗಳನ್ನೂ ಧ್ವಂಸಮಾಡುತ್ತಾನೆ. ಅದಕ್ಕೆ ಪ್ರತಿಯಾಗಿ

ಯೋಧರು ಯುಧಿಷ್ಠಿರನನ್ನು ಸುತ್ತುವರಿದು ನಿಂತು ಸಿಂಹನಾದಗಳನ್ನೂ, ಶಂಖನಾದಗಳನ್ನೂ, ವಿಧ-ವಿಧವಾದ ಜಯಘೋಷಗಳನ್ನೂ ಮಾಡುತ್ತಾ ಬಾಣಗಳ ಧ್ವನಿಗಳಿಂದ ರಣಾಂಗಣವನ್ನೇ ತುಂಬಿಬಿಟ್ಟರು. ಅದೇ ರೀತಿಯಲ್ಲಿ ನಿನ್ನ ಪಕ್ಷದ ಯೋಧರೂ ಆವೇಶಯುಕ್ತರಾಗಿ ಮದ್ರಾಧಿಪತಿಯನ್ನು ಸುತ್ತುವರಿದು ನಿಂತು ಪುನಃ ಯುದ್ಧಮಾಡಲು ಆಸಕ್ತಿಯನ್ನು ತೋರಿಸು ತ್ತಿದ್ದರು. ಅನಂತರ ಮೃತ್ಯುವನ್ನೇ ಹಿಂದಿರುಗುವ ಸ್ಥಾನವನ್ನಾಗಿ ಮಾಡಿಕೊಂಡ ನಿನ್ನ ಕಡೆಯವರಿಗೂ ಮತ್ತು ಶತ್ರುಪಕ್ಷದವರಿಗೂ ಹೇಡಿಗಳಿಗೆ ಭಯವನ್ನುಂಟುಮಾಡುವ ಭಯಂಕರವಾದ ಯುದ್ಧವು ಪ್ರಾರಂಭ ವಾಯಿತು. ಹಿಂದೆ ದೇವತೆಗಳಿಗೂ ಮತ್ತು ಅಸುರರಿಗೂ ನಡೆದ ಯುದ್ಧ ದಂತೆ–ಭಯರಹಿತರಾಗಿದ್ದ ಎರಡು ಪಕ್ಷಗಳಿಗೂ ಯಮನ ರಾಷ್ಟ್ರದ ಜನಸಂಖ್ಯೆಯನ್ನು ಹೆಚ್ಚಿಸುವ ಯುದ್ಧವು ನಡೆಯಿತು. ಆ ವೇಳೆಗೆ ಸರಿಯಾಗಿ ಅರ್ಜುನನೂ ಅನೇಕ ಸಂಶಪ್ತಕರನ್ನು ಸಂಹರಿಸಿ (ಉಳಿದವರನ್ನು ಹಿಮ್ಮೆಟ್ಟಿಸಿ) ಕೌರವಸೈನ್ಯವನ್ನು ಆಕ್ರಮಿಸಿದನು. ಮತ್ತೊಂದು ವಿಭಾಗದಲ್ಲಿ ಧೃಷ್ಟದ್ಯುಮ್ನಪುರಃಸರರಾದ ಪಾಂಡವಯೋಧರು ನಿಶಿತವಾದ ಬಾಣಗಳನ್ನು ಸುರಿಸುತ್ತಾ ಅದೇ ಕೌರವಸೈನ್ಯವನ್ನೇ ಆಕ್ರಮಿಸಿದರು. ಪಾಂಡವ ಯೋಧರ ಬಾಣಗಳಿಂದ ಆಚ್ಛಾದಿತವಾದ ಕೌರವಸೈನ್ಯವು ಭ್ರಾಂತವಾಯಿತು.

---

ರಥಹೀನನಾದ ಉತ್ತಮೌಜಸನು ನಿಶಿತವಾದ ಬಾಣಗಳಿಂದಲೂ ಖಡ್ಗದಿಂದಲೂ ಕೃಪರ ಪೃಷ್ಠರಕ್ಷಕರನ್ನೂ ಕುದುರೆಗಳನ್ನೂ ಸಂಹಾರಮಾಡಿ ಶಿಖಂಡಿಯ ರಥವನ್ನು ಹತ್ತಿಕೊಳ್ಳುತ್ತಾನೆ. (೧೪-೧೫) ಕರ್ಣನ ಬಾಣಗಳಿಂದ ರಥಹೀನನಾದವನು ಕರ್ಣನ ಮೇಲೆ ಸೇಡುತೀರಿಸಿಕೊಳ್ಳುವ ಸಂಭವವಿದೆಯೇ ಹೊರತು ಬೇರೊಬ್ಬರೊಡನೆ ಯುದ್ಧಮಾಡುತ್ತಿರುವ ಕೃಪರ ಕುದುರೆಗಳನ್ನೂ, ಪಾರ್ಶ್ವರಕ್ಷಕರನ್ನೂ ಧ್ವಂಸಮಾಡುವ ಸಾಧ್ಯತೆಯಿಲ್ಲ. ಇದು ಯುದ್ಧನಿಯಮಕ್ಕೆ ವಿರುದ್ಧವಾಗಿದೆ. ಕೃಪರಾದರೂ ಅಷ್ಟು ಸುಲಭವಾಗಿ ಪರಾಜಿತರಾಗತಕ್ಕವರೂ ಅಲ್ಲ. ಆದುದರಿಂದ ಈ ಅಧ್ಯಾಯವು ಹೆಚ್ಚಿನ ಪಾಠದಂತಿದೆ. ಸುಷೇಣನ ವಧೆಯೇ ಈ ಅಧ್ಯಾಯದ ಮುಖ್ಯ ವಿಷಯವಾಗಿದೆ. ಆದರೆ ಎಲ್ಲ ಪುಸ್ತಕಗಳಲ್ಲಿಯೂ ಈ ಅಧ್ಯಾಯವಿದೆ. ಆದುದರಿಂದ ಯಾವ ಸಮಾಧಾನ ಹೇಳಹೋದರೂ ಸ್ವಲ್ಪ ಕಷ್ಟವೇ ಆಗುವುದು.

ಕೌರವಸೈನಿಕರಿಗೆ ದಿಕ್ಕುಗಳಾಗಲೀ ಉಪದಿಕ್ಕುಗಳಾಗಲೀ ಗೋಚರಿಸುತ್ತಲೇ ಇರಲಿಲ್ಲ. ಪಾಂಡವಯೋಧರಿಂದ ಬಿಡಲ್ಪಟ್ಟ ನಿಶಿತವಾದ ಬಾಣಗಳಿಂದ ಮುಚ್ಚಿಹೋಗಿದ್ದ ಕೌರವಯೋಧರಲ್ಲಿ ಪ್ರಮುಖವೀರರು ಹತರಾದರು. ಕೆಲವರು ಕೈಕಾಲುಗಳನ್ನು ಕಳೆದುಕೊಂಡರು. ಜೀವದಿಂದ ಉಳಿದಿದ್ದವರು ತಪ್ಪಿಸಿಕೊಂಡು ಹೋಗಲು ಸಾಧ್ಯವಾಗದಂತೆ ಎಲ್ಲ ಕಡೆಗಳಿಂದಲೂ ನಿರೋಧಿಸಲ್ಪಡುತ್ತಿದ್ದರು. ಮಹಾರಥರಾದ ಪಾಂಡುಪುತ್ರರು ಹೀಗೆ ಕೌರವ ಸೈನಿಕರನ್ನು ಸಂಹರಿಸಿದರು. ಅದೇ ರೀತಿಯಲ್ಲಿ ನಿನ್ನ ಮಕ್ಕಳೂ ನಿಶಿತವಾದ ಬಾಣಗಳಿಂದ ನೂರಾರು-ಸಾವಿರಾರು ಪಾಂಡವಸೈನಿಕರನ್ನು ಯುದ್ಧದಲ್ಲಿ ಸಂಹರಿಸಿದರು. ಎರಡೂ ಪಕ್ಷಗಳ ಸೇನೆಗಳೂ ಪರಸ್ಪರವಾಗಿ ವಧಿಸಲ್ಪಡುತ್ತಿದ್ದು ಅತ್ಯಂತ ಸಂತಾಪಗೊಂಡುವುಗಳಾಗಿ ವರ್ಷಾಕಾಲದ ಎರಡು ನದಿಗಳೋಪಾದಿಯಲ್ಲಿ ವ್ಯಾಕುಲಗೊಂಡುವು. ಹೀಗೆ ಘೋರವಾದ ಯುದ್ಧವಾಗುತ್ತಿರುವಾಗ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ತೀವ್ರವಾದ ಮಹಾಭಯವುಂಟಾಯಿತು.

೧೧೦ನೆಯ ಅಧ್ಯಾಯವು ಮುಗಿಯಿತು.

೧೧೧ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಶಲ್ಯನ ಪರಾಕ್ರಮ: ಕೌರವ-ಪಾಂಡವರ ದ್ವಂದ್ವಯುದ್ಧ: ಭೀಮಸೇನನಿಂದ ಶಲ್ಯನ ಪರಾಜಯ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಆ ಮಹಾಸಮರವು ನಡೆಯುತ್ತಿರಲಾಗಿ ಎರಡೂ ಪಕ್ಷಗಳ ಸೈನಿಕರೂ ಪರಸ್ಪರವಾಗಿ ಪೀಡಿಸಲ್ಪಡುತ್ತಿದ್ದು ವ್ಯಾಕುಲ ಗೊಂಡಿದ್ದರು. ಯೋಧರಲ್ಲಿ ಅನೇಕರು ಪಲಾಯನಮಾಡುತ್ತಿದ್ದರು. ಆನೆಗಳು ಚೀತ್ಕಾರಮಾಡುತ್ತಿದ್ದುವು. ಆ ಮಹಾಯುದ್ಧದಲ್ಲಿ ಪದಾತಿಸೈನಿಕರು ಗಟ್ಟಿಯಾಗಿ ಕೂಗುತ್ತಿದ್ದರು. ಹಲವು ಕುದುರೆಗಳು ಹತವಾದುವು. ಸರ್ವಪ್ರಾಣಿಗಳ ಸಂಹಾರವೂ ಆಗುತ್ತಿದ್ದು ಘೋರವಾದ ಜನಕ್ಷಯವಾಗುತ್ತಿದ್ದಿತು.

ನಾನಾವಿಧವಾದ ಶಸ್ತ್ರಗಳು ಪರಸ್ಪರವಾಗಿ ಸಂಘರ್ಷಿಸುತ್ತಿದ್ದುವು. ರಥಗಳೂ ಮತ್ತು ಆನೆಗಳೂ ಪರಸ್ಪರವಾಗಿ ಸಂಘರ್ಷಿಸುತ್ತಿದ್ದುವು. ಆ ಮಹಾಸಮರವು ಯುದ್ಧಕುಶಲರಾದ ಯೋಧರಿಗೆ ಹರ್ಷದಾಯಕ ವಾಗಿದ್ದಿತು. ಹೇಡಿಗಳಿಗೆ ಭಯವನ್ನುಂಟುಮಾಡುವುದಾಗಿದ್ದಿತು. ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆಂಬ ಇಚ್ಛೆಯಿಂದ ಒಂದು ಪಕ್ಷದ ಯೋಧರು ಮತ್ತೊಂದು ಪಕ್ಷದೊಳಗೆ ನುಗ್ಗಿಹೋಗುತ್ತಿದ್ದರು. ಪ್ರಾಣಗಳನ್ನೇ ಒತ್ತೆಯಾಗಿಟ್ಟು ಮಹಾಘೋರವಾದ ಆ ಯುದ್ಧವೆಂಬ ಜೂಜಾಟವು ನಡೆಯುತ್ತಿದ್ದಿತು. ಯಮರಾಷ್ಟ್ರವರ್ಧಕವಾದ ಘೋರರೂಪವಾದ ಆ ಮಹಾಯುದ್ಧವು ನಡೆಯುತ್ತಿರಲಾಗಿ, ಪಾಂಡವರು ನಿನ್ನ ಸೈನ್ಯವನ್ನು ನಿಶಿತವಾದ ಬಾಣಗಳಿಂದ ಸಂಹರಿಸುತ್ತಿದ್ದರು. ಅಂತೆಯೇ ನಿನ್ನ ಕಡೆಯ ಯೋಧರೂ ಪಾಂಡವರ ಕಡೆಯ ಸೈನಿಕರನ್ನು ಸಂಹರಿಸುತ್ತಿದ್ದರು. ಸೂರ್ಯನು ಉದಯಿಸಿ ಪೂರ್ವಾಹ್ಣವು ಪ್ರಾಪ್ತವಾಗಲಾಗಿ ಭೀರುಗಳಿಗೆ ಭಯಾವಹವಾದ ಅಂತಹ ಭೀಕರಯುದ್ಧವು ನಡೆಯುತ್ತಿರಲಾಗಿ, ಮಹಾತ್ಮನಾದ ಅರ್ಜುನನಿಂದ ರಕ್ಷಿಸಲ್ಪಡುತ್ತಿದ್ದ, ಲಕ್ಷ್ಯವನ್ನು ಭೇದಿಸುವುದರಲ್ಲಿ ಸಿದ್ಧಹಸ್ತರಾಗಿದ್ದ ಪಾಂಡವಯೋಧರು ಮೃತ್ಯುವನ್ನೇ ತಮ್ಮ ಹಿಂದಿರುಗುವ ಸ್ಥಾನವನ್ನಾಗಿ ಮಾಡಿಕೊಂಡು ನಿನ್ನ ಸೈನಿಕರೊಡನೆ ವೀರಾವೇಶದಿಂದ ಹೋರಾಡುತ್ತಿದ್ದರು. ಪ್ರಹಾರಕುಶಲರಾದ ಲಬ್ಧಲಕ್ಷ್ಯರಾದ, ದೃಪ್ತರಾದ ಮತ್ತು ಬಲಿಷ್ಠರಾದ ಪಾಂಡವಯೋಧರಿಂದ ಪ್ರಹರಿಸಲ್ಪಡುತ್ತಿದ್ದ ನಿನ್ನ ಸೈನ್ಯವು–ದಾವಾಗ್ನಿಯಿಂದ ಸುತ್ತುವರಿಯಲ್ಪಟ್ಟ ಹರಿಣಿಯಂತೆ–ವ್ಯಾಕುಲ ಗೊಂಡಿದ್ದಿತು.

ಕೆಸರಿನಲ್ಲಿ ಸಿಲುಕಿದ ದುರ್ಬಲವಾದ ಹಸುವಿನಂತೆ–ಕೌರವಸೈನ್ಯವು ವಿನಾಶಹೊಂದುತ್ತಿರುವುದನ್ನು ಕಂಡು ಅದನ್ನು ಉದ್ಧಾರಮಾಡುವ ಇಚ್ಛೆ ಯಿಂದ ಶಲ್ಯನು ಪಾಂಡವರೊಡನೆ ಯುದ್ಧಮಾಡಲು ಹೋದನು. ಅತ್ಯಂತ ಕ್ರುದ್ಧನಾಗಿದ್ದ ಮದ್ರರಾಜನು ಶ್ರೇಷ್ಠವಾದ ಧನುಸ್ಸನ್ನು ಹಿಡಿದುಕೊಂಡು ತನ್ನನ್ನು ಯುದ್ಧದಲ್ಲಿ ಸಂಹರಿಸಲು ಪ್ರಯತ್ನಿಸುತ್ತಿದ್ದ ಪಾಂಡವರನ್ನು ಆಕ್ರಮಿಸಿದನು. ವಿಜಯೋಲ್ಲಸಿತರಾದ ಪಾಂಡವರೂ ಮದ್ರರಾಜನನ್ನು ಸಮೀಪಿಸಿ ಅವನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸತೊಡಗಿದರು.

ಅದಕ್ಕೆ ಪ್ರತಿಯಾಗಿ ಮಹಾರಥನಾದ ಮದ್ರರಾಜನೂ ತೀಕ್ಷ್ಣವಾದ ನೂರಾರು ಬಾಣಗಳಿಂದ ಧರ್ಮರಾಜನು ನೋಡುತ್ತಿದ್ದಂತೆಯೇ ಅವನ ಸೈನ್ಯವನ್ನು ಮರ್ದನಮಾಡಿದನು. ಆ ಸಮಯದಲ್ಲಿ ನಾನಾವಿಧವಾದ ಅಶುಭಸೂಚಕವಾದ ನಿಮಿತ್ತಗಳು ನಾನಾರೂಪಗಳಲ್ಲಿ ಕಾಣಿಸಿಕೊಂಡುವು. ಪರ್ವತಸಹಿತವಾದ ಭೂಮಿಯು ಗಟ್ಟಿಯಾಗಿ ಶಬ್ದಮಾಡುತ್ತಾ ಪ್ರಕಂಪಿಸಿತು. ಆಕಾಶದ ಕಡೆಯಿಂದ ಅನೇಕ ಉಲ್ಕೆಗಳು ಸೂರ್ಯಮಂಡಲವನ್ನು ಅಪ್ಪಳಿಸಿ ಭೂಮಿಯ ಮೇಲೆ ಬೀಳತೊಡಗಿದುವು. ಅವುಗಳ ಜೊತೆಯಲ್ಲಿಯೇ ದಂಡಯುಕ್ತವಾದ ಶೂಲಗಳೂ ಬೀಳುತ್ತಿದ್ದುವು. ಆ ಉಲ್ಕೆಗಳು ಪ್ರದೀಪ್ತವಾದ ಅಗ್ರಭಾಗಗಳನ್ನು ಹೊಂದಿದ್ದುವು. ಭೂಮಿಯ ಮೇಲೆ ಬೀಳುವಾಗ ಸುತ್ತಲೂ ಚದುರಿಬೀಳುತ್ತಿದ್ದುವು. ಆ ಸಮಯದಲ್ಲಿ ಮೃಗಗಳೂ, ಎಮ್ಮೆಗಳೂ ಮತ್ತು ಪಕ್ಷಿಗಳೂ ನಿನ್ನ ಸೈನ್ಯವನ್ನು ಹಲವು ಬಾರಿ ಬಲಕ್ಕೆ ಬಿಟ್ಟುಕೊಂಡು ಹೋಗುತ್ತಿದ್ದುವು. ಶುಕ್ರ-ಮಂಗಳರಿಬ್ಬರೂ ಬುಧನ ಜೊತೆಯಲ್ಲಿ ಸೇರಿ ಪಾಂಡುನಂದನರ ಹಿಂಭಾಗದಲ್ಲಿಯೂ–ಉಳಿದ ಸರ್ವಭೂಪಾಲರ ಸಮ್ಮುಖದಲ್ಲಿಯೂ ಕಾಣಿಸಿಕೊಂಡರು. ಶಸ್ತ್ರಗಳ ಅಗ್ರಭಾಗಗಳಲ್ಲಿ ಜ್ವಾಲೆಯು ಹುಟ್ಟಿ ಯೋಧರ ಕಣ್ಣುಗಳನ್ನು ಕೋರೈಸಿ ಸರಿದುಹೋಗುತ್ತಿದ್ದಿತು. ಕಾಗೆಗಳೂ ಮತ್ತು ಗೂಬೆಗಳೂ ಯೋಧರ ಶಿರಸ್ಸುಗಳಲ್ಲಿಯೂ ಧ್ವಜಗಳಲ್ಲಿಯೂ ಸೇರಿಕೊಳ್ಳುತ್ತಿದ್ದುವು.

ಅನಂತರ ಸಂಘಟಿತರಾಗಿದ್ದ ಎರಡೂ ಪಕ್ಷಗಳ ಯೋಧರ ನಡುವೆ ನಡೆಯುತ್ತಿದ್ದ ಯುದ್ಧವು ಅತ್ಯುಗ್ರವಾಗಿ ಪರಿಣಮಿಸಿತು. ಕೌರವಯೋಧರು ತಮ್ಮ ಎಲ್ಲ ಸೈನಿಕರನ್ನೂ ಒಟ್ಟಾಗಿ ಸೇರಿಸಿಕೊಂಡು ಪಾಂಡವರ ಸೈನ್ಯದ ಮೇಲೆ ದಾಳಿಮಾಡತೊಡಗಿದರು. ವರ್ಷಾಕಾಲದಲ್ಲಿ ಸಹಸ್ರಾಕ್ಷನು ಮಳೆಗರೆಯುವಂತೆ–ಧರ್ಮಾತ್ಮನಾದ ಶಲ್ಯನು ಕುಂತಿಯ ಮಗನಾದ ಯುಧಿಷ್ಠಿರನನ್ನು ಬಾಣಗಳ ಮಳೆಯಿಂದ ಮುಚ್ಚಿದನು. ಮಹಾಬಲನಾದ ಶಲ್ಯನು–ಭೀಮಸೇನ, ದ್ರೌಪದಿಯ ಮಕ್ಕಳು, ನಕುಲ-ಸಹದೇವರು, ಧೃಷ್ಟದ್ಯುಮ್ನ, ಸಾತ್ಯಕಿ, ಮಹಾಬಲನಾದ ಶಿಖಂಡೀ–ಇವರಲ್ಲಿ ಒಬ್ಬೊಬ್ಬರನ್ನೂ ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ

ಮಾಡಲ್ಪಟ್ಟಿದ್ದ ಹತ್ತು-ಹತ್ತು ಬಾಣಗಳಿಂದ ಪ್ರಹರಿಸಿದನು. ವರ್ಷಾಕಾಲದಲ್ಲಿ ಇಂದ್ರನು ಮಳೆಯನ್ನು ಸುರಿಸುವಂತೆ–ಪಾಂಡವರ ಸೈನ್ಯದ ಮೇಲೆ ಪುನಃ ಬಾಣಗಳ ಮಳೆಗರೆದನು. ಶಲ್ಯನ ಬಾಣಗಳಿಂದ ಪ್ರಹೃತರಾದ ಸಾವಿರಾರು ಪ್ರಭದ್ರಕರೂ ಮತ್ತು ಸಾವಿರಾರು ಸೋಮಕರೂ ಹತರಾಗಿ ಕೆಳಕ್ಕೆ ಬಿದ್ದುದೂ ಮತ್ತು ಬೀಳುತ್ತಿದ್ದುದೂ ಕಂಡುಬರುತ್ತಿದ್ದಿತು. ದುಂಬಿಗಳ ಸಮೂಹಗಳೋಪಾದಿಯಲ್ಲಿ, ಮಿಡತೆಗಳ ಗುಂಪುಗಳೋಪಾದಿಯಲ್ಲಿ, ಮೇಘಗಳಿಂದ ಹೊರಹೊರಟ ಮಿಂಚುಗಳೋಪಾದಿಯಲ್ಲಿ–ಶಲ್ಯನ ಧನುಸ್ಸಿನಿಂದ ಬಾಣಗಳು ಪುಂಖಾನುಪುಂಖವಾಗಿ ಹೊರಬರುತ್ತಿದ್ದುವು. ಶಲ್ಯನ ಬಾಣಗಳಿಂದ ಪೀಡಿತವಾದ ಆನೆಗಳೂ, ಕುದುರೆಗಳೂ, ರಥಿಕರೂ ಮತ್ತು ಪದಾತಿಗಳೂ ರಣಾಂಗಣದ ಸುತ್ತಲೂ ದಿಕ್ಕುಗಾಣದೇ ತಿರುಗುತ್ತಿದ್ದುವು; ಸಂಕಟದಿಂದ ಕೂಗಿಕೊಳ್ಳುತ್ತಿದ್ದುವು ; ಅಸುನೀಗಿ ಕೆಳಕ್ಕೆ ಬೀಳುತ್ತಿದ್ದುವು; ಮದ್ರೇಶನು ಕೋಪದಿಂದಲೂ ಮತ್ತು ಪೌರುಷದಿಂದಲೂ ಆವೇಶಗೊಂಡವನಂತೆ–ಪ್ರಳಯಕಾಲದಲ್ಲಿ ಪ್ರಾದುರ್ಭೂತನಾದ ಅಂತಕನೋಪಾದಿಯಲ್ಲಿ–ಶತ್ರುಗಳನ್ನು ಬಾಣಗಳಿಂದ ಮುಚ್ಚುತ್ತಿದ್ದನು. ಮಹಾಬಲಿಷ್ಠನಾದ ಮದ್ರೇಶನು ಮೇಘದ ಗರ್ಜನೆಗೆ ಸಮಾನವಾಗಿ ಗರ್ಜನೆಮಾಡುತ್ತಿದ್ದನು. ಶಲ್ಯನಿಂದ ಸತತವಾಗಿ ಪೀಡಿಸಲ್ಪಡುತ್ತಿದ್ದ ಪಾಂಡವರ ಸೈನ್ಯವು ಅಜಾತಶತ್ರುವಾದ ಯುಧಿಷ್ಠಿರನ ಬಳಿಗೆ ಓಡಿಹೋಯಿತು. ಲಘುಹಸ್ತನಾದ ಶಲ್ಯನು ನಿಶಿತವಾದ ಬಾಣಗಳಿಂದ ಯುಧಿಷ್ಠಿರನ ಸೈನ್ಯವನ್ನು ಮರ್ದನಮಾಡಿ ದೊಡ್ಡದಾದ ಬಾಣವರ್ಷದಿಂದ ಯುಧಿಷ್ಠಿರನನ್ನೂ ಪ್ರಹರಿಸಿದನು. ಅದರಿಂದ ಕ್ರುದ್ಧನಾದ ಯುಧಿಷ್ಠಿರನು ಅಶ್ವ-ಪದಾತಿಸೈನಿಕರೊಡನೆ ತನ್ನ ಮೇಲೆ ಬೀಳಲು ಬರುತ್ತಿದ್ದ ಶಲ್ಯನನ್ನು ತೀಕ್ಷ್ಣವಾದ ಬಾಣಗಳ ಪ್ರಹಾರದಿಂದ–ಮಹಾಗಜವನ್ನು ಮಾವಟಿಗನು ಅಂಕುಶಗಳಿಂದ ನಿರೋಧಿಸುವಂತೆ–ನಿರೋಧಿಸಿದನು. ಶಲ್ಯನು ಮಹಾಘೋರವಾಗಿದ್ದ ಮತ್ತು ವಿಷಸರ್ಪದಂತೆಯೇ ಇದ್ದ ಬಾಣವೊಂದನ್ನು ಯುಧಿಷ್ಠಿರನ ಮೇಲೆ ಪ್ರಯೋಗಿಸಿದನು. ಅದು ಮಹಾತ್ಮನಾದ ಧರ್ಮರಾಜನನ್ನು ಭೇದಿಸಿಕೊಂಡು ಭೂಮಿಯ ಮೇಲೆ ಬಿದ್ದಿತು. ಅನಂತರ ಕ್ರುದ್ಧನಾದ ವೃಕೋದರನು ಶಲ್ಯನನ್ನು ಏಳು ಬಾಣಗಳಿಂದ ಪ್ರಹರಿಸಿದನು. ಅವನನ್ನೇ ಅನುಸರಿಸಿ ಸಹದೇವನು ಐದು ಬಾಣಗಳಿಂದಲೂ, ನಕುಲನು

ಹತ್ತು ಬಾಣಗಳಿಂದಲೂ ಶಲ್ಯನನ್ನು ಪ್ರಹರಿಸಿದರು. ದ್ರೌಪದಿಯ ಮಕ್ಕಳು ಅನೇಕ ಬಾಣಗಳಿಂದ ಶೂರನಾದ ಶತ್ರುಹಂತಕನಾದ ಆರ್ತಾಯನಿಯನ್ನು (ಶಲ್ಯ ನನ್ನು) –ಮೇಘಗಳು ಪರ್ವತವನ್ನು ಜಲಧಾರೆಗಳಿಂದ ಮುಚ್ಚಿಬಿಡು ವಂತೆಯೇ–ಮುಚ್ಚಿದರು. ಶಲ್ಯನು ಪಾರ್ಥರಿಂದ ಎಲ್ಲ ಕಡೆಗಳಿಂದಲೂ ನಿರೋಧಿಸಲ್ಪಡುತ್ತಿರುವುದನ್ನು ಕಂಡು ಸಂಕ್ರುದ್ಧರಾದ ಕೃಪ-ಕೃತವರ್ಮರು ಪಾಂಡವರ ಕಡೆಗೆ ಧಾವಿಸಿದರು. ಮಹಾವೀರ್ಯನಾದ ಉಲೂಕ, ಸುಬಲನ ಮಗನಾದ ಶಕುನಿ, ಮಹಾಬಲನಾದ, ಮಹಾವೀರ್ಯನಾದ ಅಶ್ವತ್ಥಾಮಾ, ನಿನ್ನ ಮಕ್ಕಳು–ಈ ಎಲ್ಲರೂ ಮೆಲ್ಲ-ಮೆಲ್ಲಗೆ ಅಲ್ಲಿಗೆ ಬಂದು ಸಂಘಟಿತರಾಗಿ ಶಲ್ಯನನ್ನು ರಕ್ಷಿಸತೊಡಗಿದರು. ಕೃತವರ್ಮನು ಕೋಪದ ಮೂರ್ತಿ ಯಂತೆಯೇ ಇದ್ದ ಭೀಮಸೇನನನ್ನು ಮೂರು ಬಾಣಗಳಿಂದ ಪ್ರಹರಿಸಿ ಅನಂತರ ಬಾಣಗಳ ಮಳೆಯನ್ನೇ ಸುರಿಸುತ್ತಾ ಅವನು ಮುಂದಕ್ಕೆ ಬರದಂತೆ ತಡೆದು ನಿಲ್ಲಿಸಿದನು. ಕ್ರುದ್ಧರಾಗಿದ್ದ ಕೃಪರು ಧೃಷ್ಟದ್ಯುಮ್ನನನ್ನು ಬಾಣಗಳ ಸುರಿಸುವಿಕೆಯಿಂದ ಪೀಡಿಸಿದರು. ಅದೇ ರೀತಿಯಲ್ಲಿ ಶಕುನಿಯು ದ್ರೌಪದಿಯ ಮಕ್ಕಳನ್ನೂ, ಅಶ್ವತ್ಥಾಮನು ನಕುಲ-ಸಹದೇವರನ್ನೂ ಆಕ್ರಮಿಸಿದರು. ಯೋಧಶ್ರೇಷ್ಠನಾದ, ಉಗ್ರವಾದ ತೇಜಸ್ಸನ್ನು ಹೊಂದಿದ್ದ, ಬಲಿಷ್ಠನಾದ ದುರ್ಯೋಧನನು ಕೃಷ್ಣಾರ್ಜುನರನ್ನು ಆಕ್ರಮಿಸಿ ಬಾಣ ಗಳಿಂದ ಅವರನ್ನು ಬಲವಾಗಿ ಪ್ರಹರಿಸಿದನು. ಪ್ರಜಾನಾಥ! ಹೀಗೆ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಭಯಂಕರವಾದ ಮತ್ತು ವಿಚಿತ್ರತರವಾದ ನೂರಾರು ದ್ವಂದ್ವಯುದ್ಧಗಳು ಪ್ರಾರಂಭವಾದುವು. ಕೃತವರ್ಮನಿಗೂ ಭೀಮಸೇನನಿಗೂ ನಡೆಯುತ್ತಿದ್ದ ದ್ವಂದ್ವಯುದ್ಧದಲ್ಲಿ ಕೃತವರ್ಮನು ಭೀಮಸೇನನ ಕರಡಿಯ ಬಣ್ಣದ ಕುದುರೆಗಳನ್ನು ಸಂಹರಿಸಿದನು. ಒಡನೆಯೇ ಪಾಂಡುವಿನ ಮಗನಾದ ಭೀಮಸೇನನು ಕುದುರೆಗಳಿಂದ ವಿಹೀನವಾಗಿದ್ದ ರಥದಿಂದಿಳಿದು–ಯಮರಾಜನು ಕಾಲದಂಡವನ್ನೆತ್ತಿ ಪ್ರಾಣಿಗಳನ್ನು ವಿನಾಶಗೊಳಿಸುವಂತೆ–ಗದೆಯನ್ನು ಮೇಲೆತ್ತಿಕೊಂಡು ಶತ್ರುಗಳೊಡನೆ ಯುದ್ಧಮಾಡಲು ಉಪಕ್ರಮಿಸಿದನು. ಮದ್ರರಾಜನು ತನಗೆದುರಾಗಿಬಂದ ಸಹದೇವನ ರಥದ ಕುದುರೆಗಳನ್ನು ಸಂಹರಿಸಿದನು. ಅದಕ್ಕೆ ಪ್ರತಿಯಾಗಿ ಸಹದೇವನು ಶಲ್ಯನ ಮಗನನ್ನು

ಕತ್ತಿಯಿಂದ ಸಂಹರಿಸಿದನು. ಕೃಪಾಚಾರ್ಯರು ಸ್ವಲ್ಪವಾದರೂ ಸಂಭ್ರಾಂತರಾಗದೇ ವಿಜಯವನ್ನು ಸಾಧಿಸಲು ಸಂಪೂರ್ಣವಾಗಿ ಪ್ರಯತ್ನಮಾಡುತ್ತಾ ಅಸಂಭ್ರಾಂತನಾದ ಮತ್ತು ಹೆಚ್ಚು ಪ್ರಯತ್ನಶೀಲನಾದ ಧೃಷ್ಟದ್ಯುಮ್ನನೊಡನೆ ಯುದ್ಧಮಾಡುತ್ತಿದ್ದರು. ದ್ರೋಣರ ಮಗನಾದ ಅಶ್ವತ್ಥಾಮನು ಹೆಚ್ಚು ಕೋಪಗೊಳ್ಳದೇ ನಗುತ್ತಿರುವನೋ ಎಂಬಂತೆ ದ್ರೌಪದಿಯ ಐವರು ಮಕ್ಕಳನ್ನೂ ಹತ್ತು-ಹತ್ತು ಬಾಣಗಳಿಂದ ಪ್ರಹರಿಸಿದನು.

*(ಈ ಮಧ್ಯದಲ್ಲಿ ಭೀಮಸೇನನು ಮತ್ತೊಂದು ರಥದಲ್ಲಿ ಕುಳಿತು ಕೃತವರ್ಮನೊಡನೆ ಯುದ್ಧಮಾಡುತ್ತಿದ್ದನು. ಪುನಃ ಕೃತವರ್ಮನು ಭೀಮಸೇನನ ಕುದುರೆಗಳನ್ನು ಸಂಹರಿಸಿದನು. ಕ್ರುದ್ಧನಾಗಿದ್ದ, ಮಹಾಬಲನಾಗಿದ್ದ ಭೀಮಸೇನನು ಬಹಳ ಬೇಗ ಕುದುರೆಗಳಿಂದ ವಿಹೀನವಾಗಿದ್ದ ರಥದಿಂದಿಳಿದು–ಯಮನು ದಂಡವನ್ನೆತ್ತಿಕೊಂಡು ಪ್ರಾಣಿಗಳನ್ನು ಸಂಹರಿಸುವಂತೆ–ಗದೆಯನ್ನು ಮೇಲಕ್ಕೆತ್ತಿಕೊಂಡು ಕೃತವರ್ಮನ ಕುದುರೆಗಳನ್ನೂ ಮತ್ತು ರಥವನ್ನೂ ಧ್ವಂಸಮಾಡಿದನು. ಒಡನೆಯೇ ಕೃತವರ್ಮನು ರಥದಿಂದ ನೆಗೆದು ಓಡಿಹೋದನು.)

ಇತ್ತಲಾಗಿ ಶಲ್ಯನೂ ಕ್ರುದ್ಧನಾಗಿ ಸೋಮಕರನ್ನೂ ಮತ್ತು ಪಾಂಡವ

---

*ಕಂಸದಲ್ಲಿ ಕೊಟ್ಟಿರುವುದು ಮೂಲದಲ್ಲಿಲ್ಲ. ೪೧ನೆಯ ಶ್ಲೋಕದಲ್ಲಿ ಕೃತವರ್ಮನು ಭೀಮಸೇನನ ಕುದುರೆಗಳನ್ನು ಸಂಹರಿಸಿದನೆಂದೂ ಬಳಿಕ ಭೀಮನು ಗದೆಯನ್ನೆತ್ತಿಕೊಂಡು ಯುದ್ಧವನ್ನು ಪ್ರಾರಂಭಿಸಿದನೆಂದೂ ಹೇಳಿದೆ. ಮುಂದೆ ಅವನ ಗದಾಯುದ್ಧದ ವಿವರಣೆಯಿಲ್ಲ. ಅವನು ಮತ್ತೊಂದು ರಥದಲ್ಲಿ ಕುಳಿತ ಪ್ರಸಂಗವೂ ಇಲ್ಲ. ಆದರೆ ೪೫ನೆಯ ಶ್ಲೋಕದಲ್ಲಿ 'ಪುನಃ ಕೃತವರ್ಮನು ಭೀಮಸೇನನ ಕುದುರೆಗಳನ್ನು ಸಂಹರಿಸಿದನೆಂದು' ಹೇಳಿದೆ. ಒಂದೆರಡು ಪದಗಳನ್ನು ಬಿಟ್ಟರೆ ೪೧ನೆಯ ಶ್ಲೋಕದ ಮೂರು ಸಾಲುಗಳು ಇಲ್ಲಿ ಪುನರಾವರ್ತಿತವಾಗಿವೆ. ಇದನ್ನು ಸಮನ್ವಯಿಸುವ ಸಲುವಾಗಿ ಪುನಃ ಈ ವಿವರಣೆಯನ್ನು ಕೊಡಲಾಗಿದೆ. ಆದರೆ ಒಂದು ಪುಸ್ತಕದಲ್ಲಿ ಪುನಃ ಕೃತವರ್ಮನು ಭೀಮಸೇನನ ಕುದುರೆಗಳನ್ನು ಪ್ರಹರಿಸುವುದಾಗಲೀ, ಇದಕ್ಕೆ ಪ್ರತಿಯಾಗಿ ಭೀಮಸೇನನು ಗದೆಯಿಂದ ಕೃತವರ್ಮನ ರಥಾಶ್ವಗಳನ್ನು ಧ್ವಂಸಮಾಡುವುದಾಗಲೀ, ಕೃತವರ್ಮನು ಓಡಿಹೋದ ಪ್ರಕರಣವಾಗಲೀ–ಬರುವುದಿಲ್ಲ. ಈ ಪಾಠವೇ ಸಾಧುವಾಗಿ ಕಾಣುತ್ತದೆ.

ಯೋಧರನ್ನೂ ಬಾಣಗಳಿಂದ ಹಿಂಸೆಪಡಿಸುತ್ತಾ ಯುಧಿಷ್ಠಿರನನ್ನು ನಿಶಿತವಾದ ಬಾಣಗಳಿಂದ ಪುನಃ ಪೀಡಿಸತೊಡಗಿದನು. ಆದರಿಂದ ವೀರ್ಯವಂತನಾದ ಭೀಮಸೇನನು ಕ್ರುದ್ಧನಾಗಿ ತುಟಿಯನ್ನು ಕಚ್ಚುತ್ತಾ ಶಲ್ಯನನ್ನು ಧ್ವಂಸಮಾಡಬೇಕೆಂದು ನಿಶ್ಚಯಿಸಿ ಯಮದಂಡಸದೃಶವಾಗಿದ್ದ, ಮೇಲೆದ್ದು ಬಂದ ಕಾಳರಾತ್ರಿಯಂತೆಯೇ ಕಾಣುತ್ತಿದ್ದ, ಆನೆ-ಕುದುರೆ ಮತ್ತು ಪದಾತಿಗಳ ಶರೀರಗಳನ್ನು ವಿನಾಶಗೊಳಿಸುವುದಾಗಿದ್ದ ಮಹಾಗದೆಯನ್ನು ಕೈಗೆತ್ತಿಕೊಂಡನು.

ಆ ಮಹಾಗದೆಯು ಸುವರ್ಣದ ಪಟ್ಟಿಯಿಂದ ಆಚ್ಛಾದಿತವಾಗಿದ್ದಿತು; ಉಲ್ಕೆಯೋಪಾದಿಯಲ್ಲಿ ಪ್ರಜ್ವಲಿಸುತ್ತಿದ್ದಿತು; ವಜ್ರದಷ್ಟು ಕಠಿನವಾಗಿ ದ್ದಿತು; ಲೋಹಮಯವಾಗಿದ್ದಿತು; ಉಯ್ಯಾಲೆಯ ಮೇಲಿರುವ ಭಯಂಕರ ವಾದ ವಿಷಸರ್ಪಿಣಿಯಂತೆಯೇ ಇದ್ದಿತು. ಚಂದನ ಮತ್ತು ಅಗುರುಗಳಿಂದ ಲೇಪಿತಳಾದ, ಅಭೀಪ್ಸಳಾದ ಪ್ರಿಯತಮೆಯಂತೆ ಇದ್ದ ಆ ಮಹಾಗದೆಯು ಪ್ರಾಣಿಗಳ ವಸೆ ಮತ್ತು ಮೇದಸ್ಸುಗಳಿಂದ ಲೇಪಿಸಲ್ಪಟ್ಟಿದ್ದಿತು. ಯಮರಾಜನ ನಾಲಿಗೆಯೋಪಾದಿಯಲ್ಲಿ ಅತ್ಯಂತಭಯಂಕರವಾಗಿದ್ದಿತು. ಆ ಗದೆಯಲ್ಲಿ ನೂರಾರು ಗಂಟೆಗಳಿದ್ದು ಅವು ಯಾವಾಗಲೂ ಧ್ವನಿಮಾಡು ತ್ತಿದ್ದುವು. ಅದು ಇಂದ್ರನ ವಜ್ರಾಯುಧಕ್ಕೆ ಸಮಾನವಾಗಿದ್ದಿತು. ಪೊರೆ ಯನ್ನು ಕಳಚಿದ ವಿಷಸರ್ಪದಂತೆಯೇ ಇದ್ದಿತು. ಆನೆಗಳ ಮದೋದಕ ದಿಂದ ಸಿಕ್ತವಾಗಿದ್ದಿತು. ಎಲ್ಲ ಪ್ರಾಣಿಗಳನ್ನೂ ಭಯಗೊಳಿಸುವುದಾಗಿದ್ದಿತು. ತನ್ನ ಕಡೆಯ ಸೈನಿಕರಿಗೆ ಹರ್ಷವನ್ನುಂಟುಮಾಡುವುದಾಗಿದ್ದಿತು. ಪರ್ವತ ಗಳ ಶಿಖರಗಳನ್ನೇ ಸೀಳುವ ಸಾಮರ್ಥ್ಯವಿದ್ದ ಆ ಗದೆಯು ಮನುಷ್ಯಲೋಕ ದಲ್ಲಿ ವಿಖ್ಯಾತವಾಗಿದ್ದಿತು. ಆ ಗದೆಯ ಆಶ್ರಯದಿಂದಲೇ ಮಹಾಬಲನಾದ ಭೀಮಸೇನನು ಕೈಲಾಸಪರ್ವತದಲ್ಲಿ ಮಹೇಶ್ವರನ ಸಖನಾದ ಕುಬೇರನನ್ನು ಯುದ್ಧಕ್ಕೆ ಆಹ್ವಾನಿಸಿದ್ದನು. ದ್ರೌಪದಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಮಹಾಬಲನಾದ ಮತ್ತು ಕ್ರುದ್ಧನಾಗಿದ್ದ ಭೀಮಸೇನನು, ಅನೇಕರು ಅಲ್ಲಿಗೆ ಹೋಗದಂತೆ ತಡೆದರೂ ಗಣನೆಗೆ ತೆಗೆದುಕೊಳ್ಳದೇ ಆ ಗದೆಯನ್ನೇ ಅವಲಂಬಿಸಿ ಕುಬೇರನ ಪಟ್ಟಣದಲ್ಲಿದ್ದ ಮಾಯಾವಿಗಳಾದ

ಮತ್ತು ದೃಪ್ತರಾಗಿದ್ದ ಅನೇಕ ಗುಹ್ಯಕರನ್ನೂ ಸಂಹರಿಸಿದ್ದನು. ಮಹಾ ಬಾಹುವಾದ ಭೀಮಸೇನನು ವಜ್ರ, ಮಣಿ ಮತ್ತು ರತ್ನಗಳ ಸಮೂಹಗಳಿಂದ ಚಿತ್ರಿತವಾಗಿ ಮಾಡಲ್ಪಟ್ಟಿದ್ದ, ವಜ್ರದಂತೆಯೇ ಬಹುಭಾರವಾಗಿದ್ದ ಮಹಾಗದೆಯನ್ನೆತ್ತಿಕೊಂಡು ಶಲ್ಯನನ್ನು ಆಕ್ರಮಿಸಿದನು. ಯುದ್ಧಕುಶಲ



ನಾದ ಭೀಮಸೇನನು ದಾರುಣವಾದ ಧ್ವನಿಯಿಂದ ಕೂಡಿದ್ದ ಆ ಗದೆಯಿಂದ ಮಹಾವೇಗಯುಕ್ತವಾಗಿದ್ದ ಶಲ್ಯನ ನಾಲ್ಕು ಕುದುರೆಗಳನ್ನು ಕ್ಷಣಮಾತ್ರ ದಲ್ಲಿ ಧ್ವಂಸಮಾಡಿದನು. ಅದರಿಂದ ಶೂರನಾದ ಶಲ್ಯನು ಕುಪಿತ ನಾಗಿ ಗರ್ಜನೆಮಾಡುತ್ತಾ ಭೀಮಸೇನನ ವಿಶಾಲವಾಗಿದ್ದ ವಕ್ಷಃಸ್ಥಳದಲ್ಲಿ

ತೋಮರವನ್ನು ನೆಟ್ಟನು. ಆ ತೋಮರವು ಭೀಮಸೇನನ ಕವಚವನ್ನು ಭೇದಿಸಿ ವಕ್ಷಃಸ್ಥಳದಲ್ಲಿ ನೆಟ್ಟುಕೊಂಡಿತು. ಅಷ್ಟಾದರೂ ಗಾಬರಿಗೊಳ್ಳದಿದ್ದ ಭೀಮಸೇನನು ವಕ್ಷಃಸ್ಥಳದಲ್ಲಿ ನೆಟ್ಟುಕೊಂಡಿದ್ದ ತೋಮರವನ್ನು ಉಪಾಯವಾಗಿ ಹೊರತೆಗೆದು, ಅದೇ ತೋಮರದಿಂದಲೇ ಮದ್ರರಾಜನ ಸಾರಥಿಯ ವಕ್ಷಃಸ್ಥಳವನ್ನು ಪ್ರಹರಿಸಿದನು. ತೋಮರದ ಪ್ರಹಾರದಿಂದ ಭಿನ್ನಕವಚನಾದ ದೀನನಾದ ಶಲ್ಯನ ಸಾರಥಿಯು ರಕ್ತವನ್ನೇ ವಾಂತಿಮಾಡುತ್ತಾ ಭಯಗೊಂಡ ಮನಸ್ಸಿನಿಂದ ಕೂಡಿದವನಾಗಿ ಶಲ್ಯನ ಮುಂಭಾಗದಲ್ಲಿ ರಥದಿಂದ ಕೆಳಕ್ಕೆ ಬಿದ್ದನು. ಸಾರಥಿಯಿಂದ ವಿಹೀನನಾದ ಮದ್ರರಾಜನು ಹಿಂದಕ್ಕೆ ಸರಿದನು. ಧರ್ಮಾತ್ಮನಾದ ಶಲ್ಯನು ತಾನು ಮಾಡಿದುದಕ್ಕೆ ಭೀಮಸೇನನು ಪ್ರತೀಕಾರಮಾಡಿದುದನ್ನು ಕಂಡು ಆಶ್ಚರ್ಯಚಕಿತವಾದ ಮನಸ್ಸಿನಿಂದ ಕೂಡಿದವನಾಗಿ ಗದೆಯನ್ನು ಕೈಗೆತ್ತಿಕೊಂಡು ಶತ್ರುವಾದ ಭೀಮಸೇನನನ್ನು ದುರುಗುಟ್ಟಿಕೊಂಡು ನೋಡಿದನು. ಅನಾಯಾಸವಾಗಿ ಸಾಹಸಕರ್ಮಗಳನ್ನು ಮಾಡಿ ಮುಗಿಸುವ ಭೀಮಸೇನನ ಭಯಂಕರವಾದ ಆ ಕಾರ್ಯವನ್ನು ನೋಡಿ ಸುಮನಸ್ಕರಾದ ಪಾರ್ಥರು ಭೀಮಸೇನನನ್ನು ಬಹಳವಾಗಿ ಪ್ರಶಂಸಿಸಿದರು."

೧೧ನೆಯ ಅಧ್ಯಾಯವು ಮುಗಿಯಿತು.

——

೧೨ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಶಲ್ಯನಿಗೂ-ಭೀಮಸೇನನಿಗೂ ಭಯಂಕರವಾದ ಗದಾಯುದ್ಧ: ಯುಧಿಷ್ಠಿರ-ಶಲ್ಯರ ಯುದ್ಧ: ದುರ್ಯೋಧನನು ಚೇಕಿತಾನನನ್ನು ಸಂಹರಿಸಿದುದು: ಯುಧಿಷ್ಠಿರನಿಂದ ಚಂದ್ರಸೇನ-ದ್ರುಮಸೇನರ ಸಂಹಾರ: ಯುಧಿಷ್ಠಿರ-ನಕುಲ-ಸಹದೇವರೊಡನೆ ಶಲ್ಯನ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಸಾರಥಿಯು ಕೆಳಕ್ಕೆ ಬಿದ್ದುದನ್ನು ನೋಡಿ ಶಲ್ಯನು ಬಹಳ ಶೀಘ್ರವಾಗಿ ಲೋಹಮಯವಾದ ಗದೆಯನ್ನೆತ್ತಿಕೊಂಡು ಪರ್ವತದೋಪಾದಿಯಲ್ಲಿ ಅವಿಚಲನಾಗಿ ನಿಂತುಕೊಂಡನು. ಆ ಸಮಯದಲ್ಲಿ ಶಲ್ಯನು ಪ್ರಳಯಕಾಲದಲ್ಲಿ ಪ್ರಜ್ವಲಿಸುವ ಅಗ್ನಿಗೆ ಸಮಾನನಾಗಿದ್ದನು. ಪಾಶವನ್ನು ಕೈಯಲ್ಲಿ ಹಿಡಿದಿರುವ ಯಮಧರ್ಮನಂತೆಯೇ ಇದ್ದನು. ಶಿಖರದಿಂದ ಕೂಡಿದ ಕೈಲಾಸದಂತೆಯೂ–ವಜ್ರಾಯುಧವನ್ನು ಹಿಡಿದಿರುವ ಇಂದ್ರನಂತೆಯೂ ಕಾಣುತ್ತಿದ್ದನು. ಶೂಲಪಾಣಿಯಾದ ಲೋಹಿತಾಕ್ಷ (ರುದ್ರ) ನಂತೆಯೂ ಮದಿಸಿದ ಕಾಡಾನೆಯಂತೆಯೂ ಇದ್ದ ಶಲ್ಯನನ್ನು ಮಹಾಬಲನಾದ ಭೀಮಸೇನನು ದೊಡ್ಡದಾದ ಗದೆಯನ್ನೆತ್ತಿಕೊಂಡು ಬಹಳ ಶೀಘ್ರವಾಗಿ ಆಕ್ರಮಿಸಿದನು. ಗದೆಗಳಿಂದ ಶಲ್ಯ-ಭೀಮರು ಪರಸ್ಪರವಾಗಿ ಸಂಘರ್ಷಿಸುತ್ತಿರಲಾಗಿ ಶಂಖಧ್ವನಿಗಳಾದುವು; ಸಾವಿರಾರು ಮಂಗಳವಾದ್ಯಗಳು ಮೊಳಗಿದುವು. ಶೂರರ ಸಂತೋಷವನ್ನು ಹೆಚ್ಚಿಸುವ ಸಿಂಹನಾದಗಳಾದುವು. ಯೋಧರಲ್ಲಿ ಮಹಾಗಜಗಳ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದ ಆ ಇಬ್ಬರು ಯೋಧರನ್ನೂ ನಿನ್ನ ಕಡೆಯ ಮತ್ತು ಶತ್ರುಪಕ್ಷದ ಯೋಧರು ಸುತ್ತಲೂ ನಿಂತು ವೀಕ್ಷಿಸುತ್ತಾ ‘ಸಾಧು ಶಲ್ಯ! ಸಾಧು’ ‘ಸಾಧು ಭೀಮ! ಸಾಧು’–ಎಂದು ಹೇಳುತ್ತಾ ಪ್ರಶಂಸೆಮಾಡುತ್ತಿದ್ದರು.

**ನ ಹಿ ಮದ್ರಾಧಿಪಾದನ್ಯೋ ರಾಮಾದ್ವಾ ಯದುನನ್ದನಾತ್ ।**
**ಸೋಢುಮುತ್ಸಹತೇ ವೇಗಂ ಭೀಮಸೇನಸ್ಯ ಸಂಯುಗೇ ॥೬॥**

"ಮದ್ರಾಧಿಪತಿಯಾದ ಶಲ್ಯನನ್ನು ಅಥವಾ ಯದುನಂದನನಾದ ಬಲರಾಮನನ್ನು ಬಿಟ್ಟರೆ ಬೇರೆ ಯಾರೂ ಭೀಮಸೇನನ ವೇಗವನ್ನು ಸಹಿಸಿಕೊಳ್ಳಲು ಉತ್ಸುಕರಾಗುವುದಿಲ್ಲ. (ಬೇರೆ ಯಾರಿಂದಲೂ ಭೀಮಸೇನನ ಗದಾಪ್ರಹಾರವನ್ನು ಸಹಿಸಿಕೊಳ್ಳುವ ಸಾಧ್ಯತೆಯಿಲ್ಲ.)



**ತಥಾ ಮದ್ರಾಧಿಪಸ್ಯಾಪಿ ಗದಾವೇಗಂ ಮಹಾತ್ಮನಃ ।**
**ಸೋಢುಮುತ್ಸಹತೇ ನಾನ್ಯೋ ಯೋಧೋ ಯುಧಿ ವೃಕೋದರಾತ್ ॥೭॥**

ಅದೇ ರೀತಿಯಲ್ಲಿ ಯುದ್ಧದಲ್ಲಿ ಮಹಾತ್ಮನಾದ ಮದ್ರಾಧಿಪನ ಗದಾ ವೇಗವನ್ನೂ ಭೀಮಸೇನನ ಹೊರತಾಗಿ ಮತ್ತಾರೂ ಸಹಿಸಿಕೊಳ್ಳಲಾರರು."

ಹೀಗೆ ಅವರಿಬ್ಬರನ್ನೂ ಎರಡೂ ಪಕ್ಷಗಳ ಯೋಧರೂ ಪ್ರಶಂಸೆ ಮಾಡುತ್ತಿದ್ದರು.

ಮದ್ರರಾಜ-ವೃಕೋದರರಿಬ್ಬರೂ ಗದಾಪಾಣಿಗಳಾಗಿ ಗೂಳಿಗಳಂತೆ ಗರ್ಜನೆಮಾಡುತ್ತಾ ಗದೆಗಳನ್ನು ತಿರುಗಿಸುತ್ತಾ ಮಂಡಲಕ್ರಮದಲ್ಲಿ ತಿರುಗುತ್ತಿದ್ದರು. ಮಂಡಲಾಕಾರವಾಗಿ ತಿರುಗುತ್ತಾ ನಾನಾಪ್ರಕಾರವಾದ ನಡಿಗೆಗಳನ್ನಿಡುವುದರಲ್ಲಾಗಲೀ ಗದೆಗಳನ್ನು ವರಸೆ-ವರಸೆಯಾಗಿ ತಿರುಗಿಸುವುದರಲ್ಲಾಗಲೀ ಯಾವ ವಿಧವಾದ ವ್ಯತ್ಯಾಸವೂ ಇಲ್ಲದಂತೆ ಪುರುಷಸಿಂಹರಾದ ಶಲ್ಯ-ಭೀಮರ ಯುದ್ಧವು ನಡೆಯುತ್ತಿದ್ದಿತು. ಚೆನ್ನಾಗಿ ಕಾಯಿಸಿ ಶುದ್ಧಗೊಳಿಸಲ್ಪಟ್ಟ ಸುವರ್ಣದ ಶುಭ್ರವಾದ ಪಟ್ಟಿಗಳಿಂದ ಆಚ್ಛಾದಿತವಾಗಿದ್ದ ಶಲ್ಯನ ಗದೆಯು ಅಗ್ನಿಯ ಜ್ವಾಲೆಗಳಿಂದ ವ್ಯಾಪ್ತವಾಗಿರುವಂತೆ ಕಾಣುತ್ತಿದ್ದು ಶತ್ರುಗಳ ಹೃದಯದಲ್ಲಿ ಭಯವನ್ನು ವರ್ಧಿಸುತ್ತಿದ್ದಿತು. ಅದೇ ರೀತಿಯಲ್ಲಿ ಮಂಡಲಕ್ರಮಗಳಲ್ಲಿ ನಡಿಗೆಗಳನ್ನಿಡುತ್ತಿದ್ದ ಮಹಾತ್ಮನಾದ ಭೀಮಸೇನನ ಗದೆಯೂ ವಿದ್ಯುತ್ತಿನಿಂದ ಕೂಡಿದ ಮೇಘದೋಪಾದಿಯಲ್ಲಿ ಪ್ರಕಾಶಿಸುತ್ತಿದ್ದಿತು. ಮದ್ರರಾಜನು ತನ್ನ ಗದೆಯಿಂದ ಭೀಮಸೇನನ ಗದೆಯನ್ನು ಪ್ರಹರಿಸಿದನು. ಒಡನೆಯೇ ಆ ಗದೆಯು ಉರಿಯುತ್ತಿರುವುದೋ ಎಂಬಂತೆ ಆಕಾಶದಲ್ಲಿ ಅಗ್ನಿಯ ಜ್ವಾಲೆಗಳನ್ನೇ ಹೊರಸೂಸಿತು. ಅದೇ ರೀತಿಯಲ್ಲಿ ಭೀಮನ ಗದೆಯಿಂದ ಪ್ರಹೃತವಾದ ಶಲ್ಯನ ಗದೆಯೂ ಬೆಂಕಿಯ ಮಳೆಯನ್ನೇ ಸುರಿಸಿತು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಮಹಾಗಜಗಳು ತಿವಿದಾಡುವಂತೆಯೂ–ಮಹಾವೃಷಭಗಳು ಕೊಂಬುಗಳಿಂದ ತಿವಿದಾಡುವಂತೆಯೂ ಶಲ್ಯ-ಭೀಮರು ಪರಸ್ಪರವಾಗಿ ಗದೆಯ ಅಗ್ರಭಾಗಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಗದೆಗಳ ಪರಸ್ಪರ ಪ್ರಹಾರಗಳಿಂದ ಇಬ್ಬರ ಶರೀರಗಳಲ್ಲಿಯೂ ಗಾಯಗಳುಂಟಾಗಿ ಆ ಗಾಯಗಳಿಂದ ಹೊರಹೊಮ್ಮಿದ ರಕ್ತದಿಂದ ಇಬ್ಬರೂ ತೋಯ್ದುಹೋಗಿ ಪುಷ್ಪಿತವಾದ ಮುತ್ತುಗದ ಮರಗಳಂತೆ ಪ್ರೇಕ್ಷಣೀಯರಾಗಿದ್ದರು. ಮದ್ರರಾಜನ ಗದೆಯಿಂದ ಬಲಪಾರ್ಶ್ವದಲ್ಲಿಯೂ ಮತ್ತು ಎಡಪಾರ್ಶ್ವದಲ್ಲಿಯೂ ಪ್ರಹರಿಸಲ್ಪಟ್ಟ ಮಹಾಬಾಹುವಾದ ಭೀಮಸೇನನು ಪರ್ವತದಂತೆ ಸುಸ್ಥಿರವಾಗಿ ನಿಂತಿದ್ದನೇ ಹೊರತು ಸ್ವಲ್ಪವಾದರೂ ವಿಚಲಿತನಾಗಲಿಲ್ಲ.

ಅದೇ ರೀತಿಯಲ್ಲಿ ಭೀಮನ ಗದೆಯಿಂದ ಬಾರಿ-ಬಾರಿಗೂ ವೇಗವಾಗಿ ಪ್ರಹೃತನಾಗುತ್ತಿದ್ದ ಶಲ್ಯನೂ–ಮದಿಸಿದ ಆನೆಯ ದಂತಪ್ರಹಾರಗಳಿಂದ ಪರ್ವತವು ವ್ಯಥಿತವಾಗದಂತೆ–ವ್ಯಥಿತನಾಗಲಿಲ್ಲ. ಪುರುಷಸಿಂಹರಾದ ಶಲ್ಯ-ಭೀಮರ ಗದೆಗಳ ಸಂಘರ್ಷಣದಿಂದ ಪ್ರಾದುರ್ಭೂತವಾಗುತ್ತಿದ್ದ ಮಹಾಶಬ್ದವು–ಎರಡು ವಜ್ರಾಯುಧಗಳ ಸಂಘರ್ಷಣದಿಂದ ಉಂಟಾಗುವ ಶಬ್ದದಂತೆ–ಎಲ್ಲ ದಿಕ್ಕುಗಳಲ್ಲಿಯೂ ಕೇಳಿಸುತ್ತಿದ್ದಿತು. ಮಹಾಪರಾಕ್ರಮಿಗಳಾದ ಶಲ್ಯ-ಭೀಮರು ಒಮ್ಮೆ ತಮ್ಮ ಗದೆಗಳನ್ನು ಮೇಲಕ್ಕೆತ್ತುತ್ತಿದ್ದರು. ಮತ್ತೊಮ್ಮೆ ಹಿಂದಕ್ಕೆ ಸರಿಯುತ್ತಿದ್ದರು. ಪುನಃ ಮಧ್ಯಮಾರ್ಗದಲ್ಲಿ ನಿಂತು ಮಂಡಲಕ್ರಮದಲ್ಲಿ ಸಂಚರಿಸುತ್ತಿದ್ದರು. ಹೀಗೆಯೇ ಅವರು ಮಂಡಲಕ್ರಮದಲ್ಲಿ ಸಂಚರಿಸುತ್ತಿದ್ದಾಗ ಎಂಟು ಹೆಜ್ಜೆಗಳಷ್ಟು ಮುಂದೆ ಬಂದಾಗ ಅತಿಮಾನುಷವಾದ ಕಾರ್ಯಮಾಡುವ ಅವರಿಬ್ಬರಿಗೂ ಸಂಘರ್ಷವು ಪ್ರಾರಂಭವಾಯಿತು. ಲೋಹಮಯವಾಗಿದ್ದ ದಂಡಗಳನ್ನು ಮೇಲೆತ್ತಿ ಒಬ್ಬರು ಮತ್ತೊಬ್ಬರನ್ನು ಪ್ರಹರಿಸತೊಡಗಿದರು. ಯುದ್ಧಕುಶಲರಾದ ಅವರಿಬ್ಬರೂ ಪರಸ್ಪರವಾಗಿ ಗದೆಗಳಿಂದ ಅಪ್ಪಳಿಸುತ್ತಾ ಮಂಡಲಕ್ರಮದಲ್ಲಿ ಸಂಚರಿಸುತ್ತಿದ್ದರು. ತಮಗೆ ತಿಳಿದಿದ್ದ ಯುದ್ಧಕಾರ್ಯಕೌಶಲ್ಯವನ್ನೂ ಪ್ರದರ್ಶಿಸುತ್ತಿದ್ದರು. ಶಿಖರಗಳಿಂದ ಕೂಡಿದ ಪರ್ವತಗಳಂತೆ ಇಬ್ಬರೂ ತಮ್ಮ-ತಮ್ಮ ಘೋರವಾದ ಗದೆಗಳನ್ನು ಮೇಲೆತ್ತಿ ಒಬ್ಬರು ಮತ್ತೊಬ್ಬರನ್ನು ಪ್ರಹರಿಸಿ ಪುನಃ ಮಂಡಲಕ್ರಮದಲ್ಲಿ ಸಂಚರಿಸತೊಡಗಿದರು. ವಿಶೇಷವಾದ ಯುದ್ಧಕ್ರಿಯೆಗಳ ಪ್ರದರ್ಶನದಲ್ಲಿ ಅತ್ಯಂತಕುಶಲರಾಗಿದ್ದ, ರಣಭೂಮಿಯಲ್ಲಿ ಅಚಲರಾಗಿ ನಿಂತಿದ್ದ ಇಬ್ಬರು ವೀರರೂ ಅತ್ಯಂತಕ್ರುದ್ಧರಾಗಿ ಗದೆಗಳಿಂದ ಒಬ್ಬರು ಮತ್ತೊಬ್ಬರನ್ನು ರಭಸದಿಂದ ಅಪ್ಪಳಿಸುತ್ತಿದ್ದರು. ಭೀಮ-ಶಲ್ಯರಿಬ್ಬರೂ ಪರಸ್ಪರ ಗದಾಪ್ರಹಾರಗಳಿಂದ ಬಹಳವಾಗಿ ಗಾಯಗೊಂಡು ಎರಡು ಇಂದ್ರ ಧ್ವಜಗಳೋಪಾದಿಯಲ್ಲಿ ಒಟ್ಟಿಗೆ ಕೆಳಕ್ಕೆ ಬಿದ್ದರು. ಎರಡೂ ಪಕ್ಷಗಳಲ್ಲಿದ್ದ ವೀರಸೈನಿಕರು ಭೀಮ-ಶಲ್ಯರಿಬ್ಬರೂ ಬಿದ್ದುದನ್ನು ಕಂಡು ಹಾಹಾಕಾರಮಾಡತೊಡಗಿದರು.

ಮರ್ಮಸ್ಥಳಗಳಲ್ಲಿ ಗಾಯಗೊಂಡಿದ್ದ ಅವರಿಬ್ಬರೂ ಅತ್ಯಂತವಿಹ್ವಲರಾಗಿದ್ದರು. ಆ ಸಮಯದಲ್ಲಿ ಕೃಪರು ಮದ್ರಾಧಿಪತಿಯಾದ ಶಲ್ಯನನ್ನು

ತಮ್ಮ ರಥದಲ್ಲಿ ಹತ್ತಿಸಿಕೊಂಡು ರಣಾಂಗಣದಿಂದ ಬಹಳ ಬೇಗ ಹೊರಟು ಹೋದರು. ವಿಹ್ವಲತೆಯಿಂದ ಸ್ವಲ್ಪಹೊತ್ತು ಕ್ಷೀಣನಾದವನಂತೆಯೇ (ಗತಪ್ರಾಣನಂತೆಯೇ) ಇದ್ದ ಭೀಮಸೇನನು ನಿಮಿಷಮಾತ್ರದಲ್ಲಿಯೇ ಮೇಲೆದ್ದು ಗದಾಪಾಣಿಯಾಗಿ ಶಲ್ಯನನ್ನು ಯುದ್ಧಕ್ಕೆ ಆಹ್ವಾನಿಸಿದನು. ನಿನ್ನ



ಕಡೆಯ ಶೂರರು ನಾನಾವಿಧವಾದ ಶಸ್ತ್ರಗಳನ್ನು ಹೊಂದಿದವರಾಗಿ ನಾನಾವಿಧವಾದ ರಣವಾದ್ಯಗಳೊಡನೆ ಪಾಂಡವಸೈನಿಕರೊಡನೆ ಯುದ್ಧಮಾಡ ತೊಡಗಿದರು. ದುರ್ಯೋಧನಪ್ರಮುಖರಾದ ಕೌರವಯೋಧರು ತೋಳುಗಳನ್ನೂ ಮತ್ತು ಶಸ್ತ್ರಗಳನ್ನೂ ಮೇಲೆತ್ತಿಕೊಂಡು ಗಟ್ಟಿಯಾಗಿ ಸಿಂಹ ನಾದಗಳನ್ನು ಮಾಡುತ್ತಾ ಶತ್ರುಗಳನ್ನು ಆಕ್ರಮಿಸಿದರು. ಪಾಂಡುನಂದನರು

ತಮ್ಮೆದುರಾಗಿ ಬರುತ್ತಿದ್ದ ಕೌರವಸೈನ್ಯವನ್ನು ನೋಡಿ ಸಿಂಹನಾದಗಳನ್ನು ಮಾಡುತ್ತಾ ದುರ್ಯೋಧನಪುರಃಸರರಾದ ಯೋಧರ ಬಳಿಗೆ ನುಗ್ಗಿದರು. ಬಹಳ ಅವಸರದಿಂದ ತನ್ನ ಮೇಲೆ ಬೀಳಲು ಬರುತ್ತಿದ್ದ ಪಾಂಡವಯೋಧರನ್ನು ನೋಡಿದ ದುರ್ಯೋಧನನು ಪ್ರಾಸಾಯುಧದಿಂದ ಚೇಕಿತಾನನ ವಕ್ಷಃಸ್ಥಳವನ್ನು ಪ್ರಹರಿಸಿದನು. ನಿನ್ನ ಮಗನಿಂದ ಪ್ರಹೃತನಾದ ಚೇಕಿತಾನನು ಗತಪ್ರಾಣನಾಗಿ ರಥದ ಆಸನದಲ್ಲಿ ಬಿದ್ದುಬಿಟ್ಟನು. ಆ ಸಮಯದಲ್ಲಿ ಅವನ ಶರೀರವೆಲ್ಲವೂ ರಕ್ತದಿಂದ ತೋಯ್ದುಹೋಗಿದ್ದಿತು. ಚೇಕಿತಾನನು ಹತನಾದುದನ್ನು ಕಂಡು ಪಾಂಡವಮಹಾರಥರು ಪ್ರತ್ಯೇಕ-ಪ್ರತ್ಯೇಕವಾಗಿ ಬಾಣಗಳ ಮಳೆಗರೆಯಲು ಉಪಕ್ರಮಿಸಿದರು. ವಿಜಯೋಲ್ಲಸಿತರಾದ ಪಾಂಡವರು ನಿನ್ನ ಪಕ್ಷದ ಸೈನ್ಯಗಳ ಮಧ್ಯದಲ್ಲಿ ಭಯರಹಿತರಾಗಿ ಸಂಚರಿಸುತ್ತಿದ್ದರು. ಆ ಸಮಯದಲ್ಲವರು ಪ್ರೇಕ್ಷಣೀಯರಾಗಿದ್ದರು. ಕೃಪ-ಕೃತವರ್ಮರೂ, ಮಹಾರಥನಾದ ಶಕುನಿಯೂ ಮದ್ರರಾಜನನ್ನು ಮುಂದೆಮಾಡಿಕೊಂಡು ಧರ್ಮರಾಜನೊಡನೆ ಯುದ್ಧದಲ್ಲಿ ತೊಡಗಿದರು. ದುರ್ಯೋಧನನು ದ್ರೋಣಹಂತಕನಾದ, ಅತುಲವೀರ್ಯಪರಾಕ್ರಮಸಂಪನ್ನನಾಗಿದ್ದ ಧೃಷ್ಟದ್ಯುಮ್ನನೊಡನೆ ಯುದ್ಧದಲ್ಲಿ ತೊಡಗಿದನು. ನಿನ್ನ ಮಗನಿಂದ ನಿರ್ದೇಶಿತರಾದ ಮೂರು ಸಾವಿರ ಯೋಧರು ಅಶ್ವತ್ಥಾಮಪುರಃಸರರಾಗಿ ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದರು. ವಿಜಯವನ್ನು ಪಡೆದುಕೊಳ್ಳಬೇಕೆಂದು ದೃಢಸಂಕಲ್ಪಮಾಡಿ ಯುದ್ಧದಲ್ಲಿ ಪ್ರಾಣಗಳನ್ನೇ ಮುಡುಪಾಗಿಟ್ಟು–ಹಂಸಗಳು ಮಹಾಸರೋವರವನ್ನು ಪ್ರವೇಶಿಸುವಂತೆ–ನಿನ್ನ ಕಡೆಯ ಸೈನಿಕರು ಶತ್ರುಗಳ ಸೈನ್ಯವನ್ನು ಪ್ರವೇಶಿಸಿದರು. ಬಳಿಕ ಪರಸ್ಪರ ವಧೆಯಲ್ಲಿ ಇಚ್ಛೆಯುಳ್ಳವರಾಗಿದ್ದ ಎರಡೂ ಪಕ್ಷಗಳ ಸೈನಿಕರ ನಡುವೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಆ ಯುದ್ಧವು ಪರಸ್ಪರವಧೆಯಿಂದ ಕೂಡಿದುದಾಗಿಯೂ ಮತ್ತು ಪರಸ್ಪರವಾಗಿ ಸಂತೋಷವನ್ನು ವರ್ಧಿಸುವುದಾಗಿಯೂ ಇದ್ದಿತು. ವೀರಶ್ರೇಷ್ಠರ ಕ್ಷಯಕರವಾದ ಆ ಘೋರಸಂಗ್ರಾಮವು ಹೀಗೆ ನಡೆಯುತ್ತಿರಲಾಗಿ, ಬಿರುಗಾಳಿಯಿಂದ ಎಬ್ಬಿಸಲ್ಪಟ್ಟ ಭಯಂಕರವಾದ ಧೂಳು ಭೂಮಿಯಿಂದ ಮೇಲೆದ್ದಿತು. ಆ ಸಮಯದಲ್ಲಿ ಧೂಳುಕವಿದು ರಣಾಂಗಣವು ಅಂಧಕಾರಮಯವಾಗಿದ್ದರೂ ಎರಡೂ ಪಕ್ಷಗಳ ಯೋಧರು

ಭಯವೇ ಇಲ್ಲದವರಂತೆ ಯುದ್ಧವನ್ನು ಮುಂದುವರಿಸುತ್ತಲೇ ಇದ್ದರು. ಪಾಂಡವಯೋಧರು ತಮ್ಮ-ತಮ್ಮ ನಾಮಧೇಯಗಳನ್ನು ಉಚ್ಚಸ್ವರಗಳಲ್ಲಿ ಹೇಳುತ್ತಿದ್ದರು. ಅದನ್ನು ಕೇಳಿದನಂತರವೇ ನಮ್ಮೆದುರಾಗಿ ನಿಂತು ಯುದ್ಧ ಮಾಡುತ್ತಿರುವವರು ಯಾರೆಂಬುದನ್ನು ನಾವು ಅರಿತುಕೊಳ್ಳುತ್ತಿದ್ದೆವು. ಘೋರರೂಪವಾಗಿದ್ದ ಆ ಧೂಳಿಯು ಸ್ವಲ್ಪಹೊತ್ತಿನಲ್ಲಿಯೇ ಗಜಾಶ್ವ-ಪದಾತಿಗಳ ರಕ್ತಸೇಚನೆಯಿಂದ ಅಡಗಿತು. ಧೂಳುಕವಿದಿದ್ದುದರಿಂದ ಉಂಟಾಗಿದ್ದ ಅಂಧಕಾರವು ನಾಶವಾಗಲಾಗಿ ದಿಕ್ಕುಗಳೆಲ್ಲವೂ ಸ್ವಚ್ಛವಾದುವು. ಭಯಂಕರವಾದ, ಘೋರರೂಪವಾದ ಸಂಗ್ರಾಮವು ಹೀಗೆ ನಡೆಯುತ್ತಿರಲಾಗಿ, ನಿನ್ನ ಕಡೆಯ ಯೋಧರಲ್ಲಾಗಲೀ ಶತ್ರುಪಕ್ಷದ ಯೋಧರಲ್ಲಾಗಲೀ ಯಾವನೊಬ್ಬನೂ ಪರಾಙ್ಮುಖನಾಗಲಿಲ್ಲ. ಎಲ್ಲರ ಲಕ್ಷ್ಯವೂ ಬ್ರಹ್ಮಲೋಕ ಪ್ರಾಪ್ತಿಯೇ ಆಗಿದ್ದಿತು. ಎಲ್ಲ ಸೈನಿಕರೂ ಯುದ್ಧದಲ್ಲಿ ವಿಜಯವನ್ನು ಆಶಿಸುತ್ತಾ ಧರ್ಮಯುದ್ಧದ ಮೂಲಕವಾಗಿ ತಮ್ಮ ಪರಾಕ್ರಮವನ್ನು ಪ್ರದರ್ಶಿಸುತ್ತಾ ಸ್ವರ್ಗಲೋಕವನ್ನು ಪಡೆದುಕೊಳ್ಳುವ ಅಭಿಲಾಷೆಯುಳ್ಳವರಾಗಿದ್ದರು. ಎಲ್ಲ ಯೋಧರೂ ಯಜಮಾನನ ಅನ್ನದ ಋಣವನ್ನು ತೀರಿಸುವ ಸಲುವಾಗಿ ಯಜಮಾನನ ಕಾರ್ಯವನ್ನು ನಿಷ್ಠೆಯಿಂದ ಮಾಡಲು ನಿಶ್ಚಯಿಸಿದವರಾಗಿ, ಸ್ವರ್ಗಪ್ರಾಪ್ತಿಯಲ್ಲಿಯೇ ಲೀನವಾದ ಮನಸ್ಸುಳ್ಳವರಾಗಿ ವೀರಾವೇಶದಿಂದ ಯುದ್ಧಮಾಡುತ್ತಿದ್ದರು. ಮಹಾರಥರು ನಾನಾರೂಪವಾದ ಶಸ್ತ್ರಗಳನ್ನು ಪ್ರಯೋಗಿಸುತ್ತಾ, ಪರಸ್ಪರವಾಗಿ ಗರ್ಜನೆಮಾಡುತ್ತಾ, ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಾ ಯುದ್ಧಮಾಡುತ್ತಿದ್ದರು. 'ಹತ! ಕೊಲ್ಲಿರಿ', 'ವಿಧ್ಯತ!–ಪ್ರಹರಿಸಿರಿ', 'ಗೃಹ್ಣೀತ!–ಬಂಧಿಸಿರಿ', 'ಪ್ರಹರಧ್ವಂ–ಹೊಡೆಯಿರಿ', 'ನಿಕೃನ್ತತ–ಕತ್ತರಿಸಿರಿ'– ಇವೇ ಮೊದಲಾದ ವೀರೋಚಿತವಾದ ಮಾತುಗಳು ನಿನ್ನ ಸೈನ್ಯದಲ್ಲಿಯೂ ಮತ್ತು ಶತ್ರು ಸೈನ್ಯದಲ್ಲಿಯೂ ಕೇಳಿಬರುತ್ತಿದ್ದುವು. ಅನಂತರ ಶಲ್ಯನು ಮಹಾರಥನಾದ ಯುಧಿಷ್ಠಿರನನ್ನು ಸಂಹಾರಮಾಡಲು ನಿಶ್ಚಯಿಸಿ ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಮರ್ಮಜ್ಞನಾದ ಧರ್ಮಾತ್ಮನಾದ ಯುಧಿಷ್ಠಿರನೂ ನಗು-ನಗುತ್ತಲೇ ಹದಿನಾಲ್ಕು ಬಾಣಗಳನ್ನು ಶಲ್ಯನ

ಮರ್ಮಸ್ಥಾನಗಳಲ್ಲಿ ನಾಟಿಸಿದನು. ಮಹಾಬಲನಾದ, ಕ್ರುದ್ಧನಾದ ಶಲ್ಯನು ಯುಧಿಷ್ಠಿರನನ್ನು ಕೊಲ್ಲಲಿಚ್ಛಿಸಿ ಬಾಣಗಳಿಂದ ಅವನನ್ನು ತಡೆದು ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಅನೇಕ ಬಾಣಗಳಿಂದ ಗಾಯಗೊಳಿಸಿದನು. ಬಳಿಕ ಮದ್ರರಾಜನು ಬಗ್ಗಿದ ಗಿಣ್ಣೆನಿಂದ ಕೂಡಿದ ಬಾಣದಿಂದ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಯುಧಿಷ್ಠಿರನನ್ನು ಪುನಃ ಪ್ರಹರಿಸಿದನು. ಅದರಿಂದ ಯಶೋವಂತನಾದ ಧರ್ಮರಾಜನೂ ಸಂಕ್ರುದ್ಧನಾಗಿ, ರಣಹದ್ದಿನ ಮತ್ತು ನವಿಲಿನ ರೆಕ್ಕೆಗಳನ್ನು ಹೊಂದಿದ್ದ ನಿಶಿತವಾದ ಬಾಣಗಳಿಂದ ಮದ್ರರಾಜನನ್ನು ಪ್ರಹರಿಸಿದನು. ಅನಂತರ ಮಹಾರಥನಾದ ಯುಧಿಷ್ಠಿರನು ಎಪ್ಪತ್ತು ಬಾಣಗಳಿಂದ ಚಂದ್ರಸೇನನನ್ನೂ, ಒಂಬತ್ತು ಬಾಣಗಳಿಂದ ಅವನ ಸೂತನನ್ನೂ, ಅರುವತ್ತುನಾಲ್ಕು ಬಾಣಗಳಿಂದ ದ್ರುಮಸೇನನನ್ನೂ ಸಂಹರಿಸಿದನು. ಶಲ್ಯನ ಚಕ್ರಗಳ ರಕ್ಷಕರಾಗಿದ್ದ ಚಂದ್ರಸೇನ–ದ್ರುಮಸೇನರು ಮಹಾತ್ಮನಾದ ಪಾಂಡವನಿಂದ ಸಂಹೃತರಾಗಲಾಗಿ, ಕ್ರುದ್ಧನಾದ ಶಲ್ಯನು ಅದಕ್ಕೆ ಪ್ರತಿಯಾಗಿ ಇಪ್ಪತ್ತೈದು ಚೇದಿಯೋಧರನ್ನು ಸಂಹರಿಸಿದನು. ಪುನಃ ಶಲ್ಯನು ಸಾತ್ಯಕಿಯನ್ನು ಇಪ್ಪತ್ತೈದು ಬಾಣಗಳಿಂದಲೂ, ಭೀಮಸೇನನನ್ನು ಐದು ಬಾಣಗಳಿಂದಲೂ, ಮಾದ್ರಿಯ ಮಕ್ಕಳನ್ನು ನಿಶಿತವಾದ ನೂರು ಬಾಣಗಳಿಂದಲೂ ಪ್ರಹರಿಸಿದನು. ಹೀಗೆ ಶತ್ರುಪಕ್ಷದ ಯೋಧರನ್ನು ನಿಶಿತವಾದ ಬಾಣಗಳಿಂದ ಪ್ರಹರಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದ ಶಲ್ಯನ ಮೇಲೆ ಪಾರ್ಥನು (ಧರ್ಮರಾಜನು) ನಿಶಿತವಾಗಿದ್ದ, ಸರ್ಪೋಪಮವಾಗಿದ್ದ ಅನೇಕ ಬಾಣಗಳನ್ನು ಪ್ರಯೋಗಿಸಿದನು. ಕುಂತೀಪುತ್ರನಾದ ಯುಧಿಷ್ಠಿರನು ಭಲ್ಲದಿಂದ ತನ್ನ ಮುಂಭಾಗದಲ್ಲಿಯೇ ಇದ್ದ ಶಲ್ಯನ ಧ್ವಜಾಗ್ರವನ್ನು ಕತ್ತರಿಸಿ ರಥದಿಂದ ಕೆಳಕ್ಕೆ ಬೀಳಿಸಿದನು. ವಜ್ರಾಯುಧದ ಪ್ರಹಾರದಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬೀಳುತ್ತಿರುವ ಪರ್ವತಶಿಖರದಂತೆ–ಮಹಾತ್ಮನಾದ ಪಾಂಡುಪುತ್ರನಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬೀಳುತ್ತಿದ್ದ ಶಲ್ಯನ ಧ್ವಜವನ್ನು ನಾವು ನೋಡಿದೆವು. ರಥದ ಧ್ವಜವು ಕೆಳಕ್ಕೆ ಬಿದ್ದುದನ್ನೂ, ಯುಧಿಷ್ಠಿರನು ತನಗೆ ಅಭಿಮುಖನಾಗಿ ನಿಂತಿರುವುದನ್ನೂ ನೋಡಿದ ಮದ್ರರಾಜನು ಪರಮಕ್ರುದ್ಧನಾಗಿ ಅಪಾರವಾದ ಬಾಣಗಳ ವೃಷ್ಟಿಯನ್ನು ಧರ್ಮರಾಜನ ಮೇಲೆ ಸುರಿಸಿದನು. ಸತತವಾಗಿ ಮಳೆಗರೆ

ಯುವ ಪರ್ಜನ್ಯನೋಪಾದಿಯಲ್ಲಿ ಕ್ಷತ್ರಿಯಶ್ರೇಷ್ಠನಾದ, ಮಹಾತ್ಮನಾದ ಶಲ್ಯನು ಕ್ಷತ್ರಿಯರ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ಸಾತ್ಯಕಿ-ಭೀಮ-ನಕುಲ-ಸಹದೇವರಲ್ಲಿ ಒಬ್ಬೊಬ್ಬರನ್ನೂ ಐದೈದು ಬಾಣಗಳಿಂದ ಪ್ರಹರಿಸಿ, ಬಳಿಕ ಯುಧಿಷ್ಠಿರನನ್ನೂ ಅನೇಕ ಬಾಣಗಳಿಂದ ಪೀಡಿಸಿದನು. ಮೇಘಗಳ ಸಮೂಹದಂತೆ ಮಹಾತ್ಮನಾದ ಯುಧಿಷ್ಠಿರನ ವಕ್ಷಃಸ್ಥಳದಲ್ಲಿ ಬಾಣಮಯವಾದ ಬಲೆಯು ಆವರಿಸಿಕೊಂಡಿದ್ದುದನ್ನು ಆ ಸಮಯದಲ್ಲಿ ನಾವು ನೋಡಿದೆವು. ಮಹಾರಥನಾದ ಶಲ್ಯನು ಯುಧಿಷ್ಠಿರನ ಮೇಲೆ ಕೋಪಗೊಂಡು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ದಿಕ್ಕುಗಳನ್ನೂ, ಉಪದಿಕ್ಕುಗಳನ್ನೂ ಮುಚ್ಚಿಬಿಟ್ಟನು. ಅದ್ಭುತಪರಾಕ್ರಮನಾದ ಯುಧಿಷ್ಠಿರ ರಾಜನು–ಇಂದ್ರನಿಂದ ಪೀಡಿತನಾದ ಜಂಭಾಸುರನಂತೆ– ಶಲ್ಯನು ಬಿಟ್ಟ ಬಾಣಗಳ ಸಮೂಹಗಳಿಂದ ಬಹಳವಾಗಿ ಪೀಡಿತನಾದನು."

೧೨ನೆಯ ಅಧ್ಯಾಯವು ಮುಗಿಯಿತು.

೧೩ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಶಲ್ಯನ ಅದ್ಭುತಪರಾಕ್ರಮ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಮದ್ರರಾಜನಿಂದ ಧರ್ಮರಾಜನು ಪೀಡಿಸಲ್ಪಡುತ್ತಿರಲಾಗಿ, ಸಾತ್ಯಕಿ-ಭೀಮಸೇನ-ನಕುಲ-ಸಹದೇವರು ರಥಸೈನ್ಯಗಳಿಂದ ಶಲ್ಯನಿಗೆ ಮುತ್ತಿಗೆ ಹಾಕಿ ಅವನನ್ನು ಯುದ್ಧದಲ್ಲಿ ಪೀಡಿಸತೊಡಗಿದರು. ಏಕಾಕಿಯಾಗಿದ್ದ ಶಲ್ಯನು ಅನೇಕಮಹಾರಥರಿಂದ ಪೀಡಿಸಲ್ಪಡುತ್ತಿದ್ದರೂ ಧೃತಿಗೆಡದೇ ಒಬ್ಬನೇ ಎಲ್ಲರನ್ನೂ ಎದುರಿಸುತ್ತಿದ್ದುದಕ್ಕಾಗಿ ಎಲ್ಲ ಕಡೆಗಳಿಂದಲೂ, 'ಸಾಧು ಶಲ್ಯ! ಸಾಧು'–ಎಂಬ ಪ್ರಶಂಸಾವಾಕ್ಯಗಳು ಕೇಳಿಬಂದುವು. ಶಲ್ಯನ ಪರಾಕ್ರಮವನ್ನು ನೋಡಿ ಸಿದ್ಧರು ಪ್ರಹರ್ಷಿತರಾದರು. ಅಲ್ಲಿ ನೆರೆದಿದ್ದ ಮಹರ್ಷಿಗಳು 'ಆಶ್ಚರ್ಯಮಾಶ್ಚರ್ಯಂ' ಎಂದೆನ್ನುತ್ತಾ ಶಲ್ಯನ ಪರಾಕ್ರಮದ ವಿಷಯದಲ್ಲಿ ತಮ್ಮ ವಿಸ್ಮಯವನ್ನು ವ್ಯಕ್ತಪಡಿಸಿದರು. ಭೀಮಸೇನನು ತನ್ನ ಪರಾಕ್ರಮಪ್ರದರ್ಶನಕ್ಕೆ ಕಂಟಕಪ್ರಾಯನಾಗಿದ್ದ ಶಲ್ಯನನ್ನು ಮೊದಲು ಒಂದು ಬಾಣದಿಂದ ಪ್ರಹರಿಸಿ ಬಳಿಕ

ಏಳು ಬಾಣಗಳಿಂದಲೂ ಪ್ರಹರಿಸಿದನು. ಧರ್ಮಪುತ್ರನನ್ನು ರಕ್ಷಿಸುವ ಇಚ್ಛೆಯಿಂದ ಸಾತ್ಯಕಿಯೂ ಮದ್ರೇಶ್ವರನನ್ನು ನೂರು ಬಾಣಗಳಿಂದ ಆಚ್ಛಾದಿಸಿ ಸಿಂಹನಾದಮಾಡಿದನು. ನಕುಲನು ಐದು ಬಾಣಗಳಿಂದ ಶಲ್ಯನನ್ನು ಪ್ರಹರಿಸಿದನು. ಸಹದೇವನೂ ಐದು ಬಾಣಗಳಿಂದ ಪ್ರಹರಿಸಿ ಪುನಃ ಏಳು



ಬಾಣಗಳಿಂದಲೂ ಶಲ್ಯನನ್ನು ಬಹಳ ಶೀಘ್ರವಾಗಿ ಪ್ರಹರಿಸಿದನು. ವೀರನಾದ ಶಲ್ಯನು ಪಾಂಡವಮಹಾರಥರಿಂದ ಪೀಡಿಸಲ್ಪಟ್ಟವನಾಗಿ ಶತ್ರುಗಳ ವೇಗವನ್ನು ಸ್ತಂಭನಗೊಳಿಸುವ, ಭಾರಸಾಧನವಾದ, ಘೋರವಾದ ಧನುಸ್ಸನ್ನು ಕಿವಿಯವರೆಗೂ ಸೆಳೆದು ಸಾತ್ಯಕಿಯನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ಅನಂತರ ಭೀಮಸೇನನನ್ನು ಎಪ್ಪತ್ತು ಬಾಣ

ಗಳಿಂದಲೂ, ನಕುಲನನ್ನು ಏಳು ಬಾಣಗಳಿಂದಲೂ ಪ್ರಹರಿಸಿದನು. ಬಳಿಕ ಶಲ್ಯನು ಧನುಷ್ಮಂತನಾದ ಸಹದೇವನ ಬಾಣಯುಕ್ತವಾಗಿದ್ದ ಧನುಸ್ಸನ್ನು ಭಲ್ಲದಿಂದ ಕತ್ತರಿಸಿ ಇಪ್ಪತ್ತೊಂದು ಬಾಣಗಳಿಂದ ಸಹದೇವನನ್ನೂ ಗಾಯ ಗೊಳಿಸಿದನು. ಸಹದೇವನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಶಿಂಜಿನಿ ಯನ್ನು ಯೋಜಿಸಿ, ಮಹಾವರ್ಚಸ್ವಿಯಾದ ಸೋದರಮಾವನನ್ನು ಸರ್ಪದ ಆಕಾರವನ್ನು ಹೊಂದಿದ್ದ, ಪ್ರಜ್ವಲಿಸುತ್ತಿರುವ ಅಗ್ನಿಗೆ ಸಮಾನವಾಗಿದ್ದ ಐದು ಬಾಣಗಳಿಂದ ಪ್ರಹರಿಸಿದನು. ಅತ್ಯಂತಕುಪಿತನಾಗಿದ್ದ ಸಹದೇವನು ಬಗ್ಗಿದ ಗಿಣ್ಣಿನಿಂದ ಕೂಡಿದ್ದ ಒಂದು ಬಾಣದಿಂದ ಶಲ್ಯನ ಸಾರಥಿಯನ್ನು ಗಾಯಗೊಳಿಸಿ ಶಲ್ಯನನ್ನೂ ಮೂರು ಬಾಣಗಳಿಂದ ಗಾಯಗೊಳಿಸಿದನು. ಅನಂತರ ಭೀಮಸೇನನು ಎಪ್ಪತ್ತು ಬಾಣಗಳಿಂದಲೂ, ಸಾತ್ಯಕಿಯು ಒಂಬತ್ತು ಬಾಣಗಳಿಂದಲೂ, ಧರ್ಮರಾಜನು ಅರುವತ್ತು ಬಾಣಗಳಿಂದಲೂ ಶಲ್ಯನ ಶರೀರದಲ್ಲಿ ಗಾಯಗಳನ್ನುಂಟುಮಾಡಿದರು. ಪಾಂಡವಮಹಾರಥ ರಿಂದ ಬಹಳವಾಗಿ ಗಾಯಗೊಂಡ ಶಲ್ಯನು–ಪರ್ವತವು ಗೈರಿಕಾದಿಧಾತು ಗಳಿಂದ ಮಿಶ್ರವಾದ ನೀರನ್ನು ಸುರಿಸುವಂತೆ–ತನ್ನ ಎಲ್ಲ ಅಂಗಗಳಿಂದಲೂ ರಕ್ತವನ್ನು ಸುರಿಸಿದನು. ಅನಂತರ ಶಲ್ಯನು ಆ ಎಲ್ಲ ಮಹಾಧನುಷ್ಮಂತ ರನ್ನೂ ಬಹಳ ಶೀಘ್ರವಾಗಿ ಐದೈದು ಬಾಣಗಳಿಂದ ಪ್ರಹರಿಸಿದನು. ಅವನ ಆ ಕಾರ್ಯವು ನಮಗೆ ಪರಮಾದ್ಭುತವಾಗಿ ಕಂಡಿತು. ಅನಂತರ ಮಹಾರಥ ನಾದ ಶಲ್ಯನು ಮತ್ತೊಂದು ಭಲ್ಲದಿಂದ ಶಿಂಜಿನಿಯಿಂದ ಸಹಿತವಾದ ಧರ್ಮರಾಜನ ಧನುಸ್ಸನ್ನು ಕತ್ತರಿಸಿದನು. ಧರ್ಮಪುತ್ರನಾದ ಯುಧಿಷ್ಠಿರನು ಮರುಕ್ಷಣದಲ್ಲಿಯೇ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಅಶ್ವ-ಸೂತ-ರಥ ಸಹಿತನಾದ ಶಲ್ಯನನ್ನು ಬಾಣಗಳಿಂದ ಆಚ್ಛಾದಿಸಿದನು. ಧರ್ಮಪುತ್ರನು ಬಿಟ್ಟ ಬಾಣಗಳಿಂದ ಆಚ್ಛಾದಿಸಲ್ಪಟ್ಟ ಶಲ್ಯನು ನಿಶಿತವಾದ ಹತ್ತು ಬಾಣಗಳಿಂದ ಯುಧಿಷ್ಠಿರನನ್ನು ಪ್ರಹರಿಸಿದನು. ಧರ್ಮಪುತ್ರನು ಶಲ್ಯನ ಬಾಣಗಳಿಂದ ಪೀಡಿಸಲ್ಪಡುತ್ತಿರುವುದನ್ನು ನೋಡಿ ಕ್ರುದ್ಧನಾದ ಸಾತ್ಯಕಿಯು ಶೂರನಾದ ಮದ್ರಾಧಿಪತಿಯನ್ನು ಐದು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಶಲ್ಯನು ಸಾತ್ಯಕಿಯ ಮಹಾಧನುಸ್ಸನ್ನು ಕ್ಷುರಪ್ರದಿಂದ ಕತ್ತರಿಸಿದನು. ಭೀಮಸೇನಪುರಃಸರರಾದ ಆ ಎಲ್ಲ ಯೋಧರನ್ನೂ

ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಅದರಿಂದ ಕ್ರುದ್ಧನಾದ ಸತ್ಯವಿಕ್ರಮನಾದ ಸಾತ್ಯಕಿಯು ಸುವರ್ಣಮಯವಾದ ದಂಡದಿಂದ ಕೂಡಿದ್ದ ಬಹುಮೂಲ್ಯವಾದ ತೋಮರವನ್ನು ಶಲ್ಯನ ಮೇಲೆ ರಭಸದಿಂದ ಎಸೆದನು. ಬಳಿಕ ಭೀಮಸೇನನು ಪ್ರಜ್ವಲಿಸುವ ಸರ್ಪದಂತಿದ್ದ ನಾರಾಚವನ್ನು ಶಲ್ಯನ ಮೇಲೆ ಪ್ರಯೋಗಿಸಿದನು. ನಕುಲನು ಶಕ್ತ್ಯಾಯುಧವನ್ನೂ, ಸಹದೇವನು ಗದೆಯನ್ನೂ ಶಲ್ಯನ ಮೇಲೆ ಪ್ರಯೋಗಿಸಿದರು. ಧರ್ಮರಾಜನು ಶಲ್ಯನನ್ನು ಸಂಹರಿಸಬೇಕೆಂದೇ ನಿಶ್ಚಯಿಸಿ ಶತಘ್ನಿಯಿಂದ ಪ್ರಹರಿಸಿದನು. ಆದರೆ ಐವರು ಯೋಧರ ಭುಜಗಳಿಂದ ಚ್ಯುತವಾದ ತೋಮರ-ನಾರಾಚ-ಶಕ್ತಿ-ಗದಾ ಶತಘ್ನಿಗಳನ್ನೂ ಶಲ್ಯನು ಬಹಳ ಬೇಗ ಶಸ್ತ್ರಗಳ ಸಮೂಹಗಳಿಂದ ನಿವಾರಿಸಿ ಕೊಂಡನು. ಮಹಾಬಲನಾದ ಸಾತ್ಯಕಿಯಿಂದ ಪ್ರಮುಕ್ತವಾದ ತೋಮರ ವನ್ನು ಭಲ್ಲಗಳಿಂದ ಕತ್ತರಿಸಿದನು. ಸಿದ್ಧಹಸ್ತನಾದ ಮತ್ತು ಪ್ರತಾಪವಂತ ನಾದ ಶಲ್ಯನು ಭೀಮಸೇನನಿಂದ ಪ್ರಮುಕ್ತವಾದ, ಸುವರ್ಣಭೂಷಿತವಾದ ನಾರಾಚವನ್ನು ಎರಡು ಭಾಗಗಳಾಗಿ ಕತ್ತರಿಸಿದನು. ನಕುಲಪ್ರೇಷಿತವಾದ, ಸುವರ್ಣಮಯವಾದ ದಂಡದಿಂದ ಕೂಡಿದ್ದ, ಭಯಂಕರವಾಗಿದ್ದ ಶಕ್ತ್ಯಾ ಯುಧವನ್ನೂ ಮತ್ತು ಸಹದೇವನಿಂದ ಪ್ರಮುಕ್ತವಾದ ಗದೆಯನ್ನೂ ಶಲ್ಯನು ಬಾಣಗಳ ಸಮೂಹಗಳಿಂದ ನಿವಾರಿಸಿಕೊಂಡನು. ಧರ್ಮರಾಜನು ಪ್ರಯೋಗಿಸಿದ ಶತಘ್ನಿಯನ್ನೂ ಎರಡು ಬಾಣಗಳಿಂದ ಶಲ್ಯನು ಕತ್ತರಿಸಿ ಪಾಂಡುಪುತ್ರರು ನೋಡುತ್ತಿದ್ದಂತೆಯೇ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಶತ್ರುವು ವಿಜಯದ ಹಾದಿಯಲ್ಲಿರುವುದು ಸಾತ್ಯಕಿಗೆ ಸಹಿಸ ಲಾಗಲಿಲ್ಲ. ಕ್ರೋಧಮೂರ್ಛಿತನಾಗಿದ್ದ ಸಾತ್ಯಕಿಯು ಮತ್ತೊಂದು ಧನು ಸ್ಸನ್ನೆತ್ತಿಕೊಂಡು ಎರಡು ಬಾಣಗಳಿಂದ ಮದ್ರೇಶ್ವರನನ್ನು ಪ್ರಹರಿಸಿ, ಮೂರು ಬಾಣಗಳಿಂದ ಅವನ ಸಾರಥಿಯನ್ನೂ ಪ್ರಹರಿಸಿದನು. ಅದರಿಂದ ಅತ್ಯಂತಕ್ರುದ್ಧನಾದ ಶಲ್ಯನು ತನ್ನ ಎದುರಾಳಿಗಳೆಲ್ಲರನ್ನೂ–ಮಾವಟಿಗನು ಅಂಕುಶಗಳಿಂದ ಮಹಾಗಜಗಳನ್ನು ಪ್ರಹರಿಸುವಂತೆ–ಹತ್ತು ಬಾಣಗಳಿಂದ ಪ್ರಹರಿಸಿದನು. ಮಹಾರಾಜನಾದ ಶಲ್ಯನಿಂದ ಬಾರಿ-ಬಾರಿಗೂ ತಡೆಯಲ್ಪಡು ತ್ತಿದ್ದ ಶತ್ರುನಿಷೂದನರಾದ ಪಾಂಡವಮಹಾರಥರಿಗೆ ಮಹಾವೀರನಾದ ಶಲ್ಯನ ಎದುರಿನಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ. ದುರ್ಯೋಧನನು ಶಲ್ಯನ ಪರಾಕ್ರಮ

ವನ್ನು ನೋಡಿ, ಪಾಂಡವರೂ, ಪಾಂಚಾಲ-ಸೃಂಜಯರೂ ಶಲ್ಯನಿಂದ ಹತರಾದರೆಂದೇ ಭಾವಿಸಿದನು. ಅನಂತರ ಪ್ರತಾಪವಂತನಾದ ಮಹಾಬಾಹುವಾದ ಭೀಮಸೇನನು ಪ್ರಾಣಗಳ ಮೇಲಿನ ವ್ಯಾಮೋಹವನ್ನು ಮನಸ್ಸಿನಿಂದ ಸಂಪೂರ್ಣವಾಗಿ ತೊರೆದು ಶಲ್ಯನೊಡನೆ ಯುದ್ಧಮಾಡಲು ಉಪಕ್ರಮಿಸಿದನು. ನಕುಲ-ಸಹದೇವರೂ, ಮಹಾರಥನಾದ ಸಾತ್ಯಕಿಯೂ ಶಲ್ಯನನ್ನು ಸುತ್ತುವರಿದು ಬಾಣಗಳಿಂದ ಮುಚ್ಚಿದರು. ನಾಲ್ವರು ಮಹಾಧನುಷ್ಮಂತರಾದ ಪಾಂಡವಮಹಾರಥರಿಂದ ಸುತ್ತುವರಿಯಲ್ಪಟ್ಟಿದ್ದ ಪ್ರತಾಪವಂತನಾದ ಮದ್ರರಾಜನು ಅವರೆಲ್ಲರನ್ನೂ ಏಕಕಾಲದಲ್ಲಿ ಎದುರಿಸಿ ಯುದ್ಧಮಾಡಿದನು. ಅನಂತರ ಧರ್ಮನ ಮಗನಾದ ಯುಧಿಷ್ಠಿರರಾಜನು ಮದ್ರರಾಜನ ಚಕ್ರರಕ್ಷಕನನ್ನು ಬಹಳಬೇಗ ಕ್ಷುರಪ್ರದಿಂದ ಸಂಹರಿಸಿದನು. ಮಹಾರಥನಾದ ಚಕ್ರರಕ್ಷಕನು ಯುಧಿಷ್ಠಿರನಿಂದ ಹತನಾಗಲಾಗಿ ಬಲಿಷ್ಠನಾದ ಮದ್ರರಾಜನು ಪಾಂಡವರ ಕಡೆಯ ಸೈನಿಕರನ್ನು ಬಾಣಗಳಿಂದ ಆಚ್ಛಾದಿಸಿದನು. ತನ್ನ ಸೈನಿಕರು ಶಲ್ಯನ ಬಾಣಗಳಿಂದ ಮುಚ್ಚಲ್ಪಟ್ಟಿರುವುದನ್ನು ನೋಡಿ ಧರ್ಮಪುತ್ರನಾದ ಯುಧಿಷ್ಠಿರನು ಚಿಂತಾ ಮಗ್ನನಾದನು.

**ಕಥಂ ನು ಸಮರೇ ಶಕ್ಯಂ ತನ್ಮಾಧವವಚೋ ಮಹತ್ ।**
**ನ ಹಿ ಕ್ರುದ್ಧೋ ರಣೇ ರಾಜಾ ಕ್ಷಪಯೇತ ಬಲಂ ಮಮ ॥೩೮॥**

"ಯುದ್ಧವಿಷಯದಲ್ಲಿ ಶ್ರೀಕೃಷ್ಣನು ಹೇಳಿರುವ ಮಹತ್ತ್ವಪೂರ್ಣವಾದ ಮಾತು (ವಿಜಯವು) ಹೇಗೆತಾನೇ ಸಾಧಿಸಲ್ಪಡುತ್ತದೆ? ಕ್ರುದ್ಧನಾದ ಶಲ್ಯರಾಜನು ಈ ಯುದ್ಧದಲ್ಲಿ ನನ್ನ ಸೈನ್ಯವನ್ನು ಸಂಪೂರ್ಣವಾಗಿ ವಿನಾಶಮಾಡದಿರುವನೇ?"

ಅನಂತರ ರಥ-ಗಜಾಶ್ವಸೈನ್ಯಸಮೇತರಾದ ಪಾಂಡವರು ಮದ್ರರಾಜನನ್ನು ಎಲ್ಲ ಕಡೆಗಳಿಂದಲೂ ಪೀಡಿಸುತ್ತಾ ಅವನ ಮೇಲೆ ದಾಳಿನಡೆಸಿದರು. ದೊಡ್ಡ-ದೊಡ್ಡ ಮೇಘಗಳನ್ನು ಬಿರುಗಾಳಿಯು ಚದುರಿಸಿಬಿಡುವಂತೆ–ತನ್ನ ಮೇಲೆ ಬೀಳುತ್ತಿದ್ದ ಅನೇಕಪ್ರಕಾರವಾದ ಆಯುಧಗಳಿಂದ ಕೂಡಿರುವ ಶಸ್ತ್ರವೃಷ್ಟಿಯನ್ನೂ ಶಲ್ಯರಾಜನು ಧ್ವಂಸಮಾಡಿದನು. ಮಿಡತೆಗಳ ಸಮೂಹಗಳೋಪಾದಿಯಲ್ಲಿ ಶಲ್ಯನಿಂದ ಬಿಡಲ್ಪಟ್ಟು ಆಕಾಶದಲ್ಲಿ ವ್ಯಾಪ್ತವಾಗಿದ್ದ,

ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಬಾಣಗಳ ವೃಷ್ಟಿಯನ್ನು ನಾವೂ ನೋಡುತ್ತಿದ್ದೆವು. ಮದ್ರರಾಜನಿಂದ ಬಿಡಲ್ಪಟ್ಟ ಆ ಬಾಣಗಳು ಮಿಡತೆಗಳ ಸಮೂಹಗಳೋಪಾದಿಯಲ್ಲಿ ರಣಾಂಗಣದ ಸುತ್ತಲೂ ಬೀಳುತ್ತಿದ್ದುದು ಕಂಡುಬಂದಿತು. ಮದ್ರರಾಜನ ಧನುಸ್ಸಿನಿಂದ ಮುಕ್ತವಾದ ಸುವರ್ಣಭೂಷಿತವಾದ ಬಾಣಗಳಿಂದ ಆಕಾಶವು ಅಂತರರಹಿತವಾಯಿತು. (ಸ್ವಲ್ಪವಾದರೂ ಸ್ಥಳಾವಕಾಶವೇ ಇಲ್ಲದ ರೀತಿಯಲ್ಲಿ ಬಾಣಗಳು ಆಕಾಶದಲ್ಲಿ ತುಂಬಿಕೊಂಡಿದ್ದುವು.) ಶಲ್ಯನು ಬಿಡುತ್ತಿದ್ದ ಬಾಣಗಳಿಂದ ಮಹತ್ತರವಾದ ಕತ್ತಲೆಯು ಸರ್ವತ್ರ ವ್ಯಾಪ್ತವಾಗಲಾಗಿ, ನಮಗಾಗಲೀ, ಪಾಂಡವರಿಗಾಗಲೀ–ಯಾವುದೊಂದೂ ಕಾಣುತ್ತಲೇ ಇರಲಿಲ್ಲ. ಬಲಿಷ್ಠನಾದ ಮದ್ರರಾಜನ ಹಸ್ತಲಾಘವದ ಪರಿಣಾಮದಿಂದ ಉಂಟಾದ ಬಾಣಗಳ ವೃಷ್ಟಿಯಿಂದ, ಪಾಂಡವರ ಸಮುದ್ರರೂಪವಾದ ಮಹಾಸೈನ್ಯವು ಕಂಪನಗೊಳಿಸಲ್ಪಡುತ್ತಿರುವುದನ್ನು ಕಂಡು ದೇವ-ಗಂಧರ್ವ-ದಾನವರು ಬಹಳವಾಗಿ ಅಚ್ಚರಿಗೊಂಡರು. ಶಲ್ಯನು ತನ್ನನ್ನು ಗೆಲ್ಲುವ ಸಲುವಾಗಿ ಎಲ್ಲ ಕಡೆಗಳಿಂದಲೂ ಬಹಳವಾಗಿ ಪ್ರಯತ್ನಿಸುತ್ತಿದ್ದ ಪಾಂಡವಯೋಧರನ್ನು ಬಾಣಗಳಿಂದ ಆಚ್ಛಾದಿಸಿ, ಅನಂತರ ಯುಧಿಷ್ಠಿರನನ್ನೂ ಬಾಣಗಳ ಸಮೂಹಗಳಿಂದ ಮುಚ್ಚಿ ಪುನಃ ಪುನಃ ಸಿಂಹನಾದಗಳನ್ನು ಮಾಡುತ್ತಿದ್ದನು. ಶಲ್ಯನ ಬಾಣಗಳಿಂದ ಆಚ್ಛಾದಿತರಾದ ಪಾಂಡವಮಹಾರಥರು, ಮಹಾರಥನಾದ ಶಲ್ಯನನ್ನು ಎದುರಿಸಿ ಯುದ್ಧಮಾಡಲು ಸಮರ್ಥರಾಗಲಿಲ್ಲ. ಆದರೂ ಧರ್ಮರಾಜ ಪುರಃಸರರಾದ, ಭೀಮಸೇನಪ್ರಮುಖರಾದ ಮಹಾರಥರು ಸಮರಶೋಭಿ ಯಾದ ಶಲ್ಯನನ್ನು ಬಿಟ್ಟು ಹಿಂದಕ್ಕೆ ಸರಿಯಲಿಲ್ಲ.”

೧೩ನೆಯ ಅಧ್ಯಾಯವು ಮುಗಿಯಿತು.

೧೪ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಅರ್ಜುನಾಶ್ವತ್ಥಾಮರ ಯುದ್ಧ: ಅಶ್ವತ್ಥಾಮನಿಂದ ಪಾಂಚಾಲವೀರನಾದ ಸುರಥನ ಸಂಹಾರ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಮತ್ತೊಂದು ವಿಭಾಗದಲ್ಲಿ ಅರ್ಜುನನಿಗೂ–ಅಶ್ವ

ತ್ಥಾಮನಿಗೂ ಘೋರವಾದ ಯುದ್ಧವು ನಡೆಯುತ್ತಿದ್ದಿತು. ಅಶ್ವತ್ಥಾಮನು ಲೋಹಮಯವಾದ ಅನೇಕಬಾಣಗಳಿಂದ ಅರ್ಜುನನನ್ನು ಗಾಯಗೊಳಿಸಿದನು. ಅಶ್ವತ್ಥಾಮನನ್ನೇ ಅನುಸರಿಸಿ ಯುದ್ಧಮಾಡುತ್ತಿದ್ದ ತ್ರಿಗರ್ತ ಮಹಾರಥರೂ ನಿಶಿತವಾದ ಬಾಣಗಳಿಂದ ಅರ್ಜುನನನ್ನು ಗಾಯಗೊಳಿಸಿದರು. ಅದಕ್ಕೆ ಪ್ರತಿಯಾಗಿ ಅರ್ಜುನನು ಮೂರು ಶಿಲೀಮುಖಗಳಿಂದ ಅಶ್ವತ್ಥಾಮನನ್ನು ಪ್ರಹರಿಸಿ ಮಹಾಧನುಷ್ಮಂತರಾದ ಇತರ ಯೋಧರನ್ನೂ ಎರಡೆರಡು ಬಾಣಗಳಿಂದ ಪ್ರಹರಿಸಿದನು. ಪುನಃ ಪಾರ್ಥನು ಅವರೆಲ್ಲರನ್ನೂ ಬಾಣಗಳ ವೃಷ್ಟಿಯಿಂದ ಮುಚ್ಚಿದನು. ನಿನ್ನ ಸೈನಿಕರು ಅರ್ಜುನನ ನಿಶಿತವಾದ ಬಾಣಗಳಿಂದ ಪ್ರಹೃತರಾಗಿ, ಮುಳ್ಳುಗಳೋಪಾದಿಯಲ್ಲಿ ಬಾಣಗಳು ಶರೀರಗಳಲ್ಲಿ ನಾಟಿಕೊಂಡಿದ್ದರೂ ಪಾರ್ಥನನ್ನು ಬಿಟ್ಟು ಕದಲಲಿಲ್ಲ. ಅಶ್ವತ್ಥಾಮಪುರಃಸರರಾದ ಮಹಾರಥರು ರಥಗಳ ಸಮೂಹಗಳಿಂದ ಅರ್ಜುನನನ್ನು ಸುತ್ತುಗಟ್ಟಿ ಅವನೊಡನೆ ಯುದ್ಧಮಾಡುತ್ತಿದ್ದರು. ಆ ಮಹಾರಥರಿಂದ ಬಿಡಲ್ಪಡುತ್ತಿದ್ದ ಸುವರ್ಣಭೂಷಿತವಾದ ಬಾಣಗಳು ಅರ್ಜುನನ ರಥದ ಪೀಠಪ್ರದೇಶವನ್ನು ಬಹಳ ಬೇಗ ತುಂಬಿಬಿಟ್ಟುವು. ಸರ್ವಧನುರ್ಧಾರಿಗಳಲ್ಲಿಯೂ ಶ್ರೇಷ್ಠರಾದ, ಮಹಾಧನುಷ್ಮಂತರಾದ ಕೃಷ್ಣಾರ್ಜುನರು ತಾವು ಬಿಟ್ಟ ಬಾಣಗಳಿಂದ ಕ್ಷತ-ವಿಕ್ಷತವಾದ ಶರೀರವುಳ್ಳವರಾಗಿರುವುದನ್ನು ಕಂಡು ಯುದ್ಧದುರ್ಮದರಾದ ಆ ಮಹಾರಥರು ಅತ್ಯಂತಪ್ರಹೃಷ್ಟರಾದರು. ಅರ್ಜುನನ ರಥದ ಮೂಕಿ, ಚಕ್ರಗಳು, ಹಗ್ಗಗಳು, ನೊಗ, ತೋಳುಮರ–ಎಲ್ಲವೂ ಬಾಣಮಯವಾದುವು. ಆ ಸಮಯದಲ್ಲಿ ನಿನ್ನ ಕಡೆಯ ಯೋಧರು ಅರ್ಜುನನಿಗೆ ಕೊಟ್ಟ ಉಪಟಳವು ಅಭೂತಪೂರ್ವವಾಗಿದ್ದಿತು. ಅರ್ಜುನನು ಅಂತಹ ಸ್ಥಿತಿಯಲ್ಲಿದ್ದುದನ್ನು ನಾವು ಅದುವರೆಗೆ ಕಂಡೂ ಇರಲಿಲ್ಲ: ಕೇಳಿಯೂ ಇರಲಿಲ್ಲ. ಚಿತ್ರವಾದ ಮೂಲಭಾಗಗಳನ್ನು ಹೊಂದಿದ್ದ, ನಿಶಿತವಾದ ಬಾಣಗಳಿಂದ ಸರ್ವತ್ರವ್ಯಾಪ್ತವಾಗಿದ್ದ ಅರ್ಜುನನ ರಥವು ನೂರಾರು ಪಂಜುಗಳಿಂದ ಕೂಡಿ ಉರಿಯುತ್ತಿರುವ ವಿಮಾನದಂತೆಯೇ ಕಾಣುತ್ತಿದ್ದಿತು. ಬಳಿಕ ಅರ್ಜುನನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ –ಮೇಘವು ಜಲವೃಷ್ಟಿಯಿಂದ ಪರ್ವತವನ್ನು ಮುಚ್ಚಿಬಿಡುವಂತೆ–ಕೌರವಸೈನ್ಯವನ್ನು ಮುಚ್ಚಿದನು. ಪಾರ್ಥನಾಮಾಂಕಿತವಾದ ಬಾಣಗಳಿಂದ ಪ್ರಹರಿಸಲ್ಪಡು

ತ್ತಿದ್ದ ಕೌರವಸೈನಿಕರು ಅರ್ಜುನನನ್ನು ಬಾಣರೂಪದಲ್ಲಿಯೇ ಕಾಣುತ್ತಾ ಸರ್ವವೂ ಪಾರ್ಥಮಯವಾಗಿಬಿಟ್ಟಿರುವುದೆಂದೇ ಭಾವಿಸಿದರು. ಅಗ್ನಿಯ ರೂಪನಾಗಿದ್ದ ಅರ್ಜುನನು ಕೌರವಸೈನ್ಯವೆಂಬ ಕಟ್ಟಿಗೆಯನ್ನು ದಹಿಸಿದನು. ಕೋಪದಿಂದ ಬಿಡಲ್ಪಟ್ಟು ವೇಗಪೂರ್ವಕವಾಗಿ ಹೊರಬರುತ್ತಿದ್ದ ಬಾಣಗಳೇ ಅಗ್ನಿಯ ಜ್ವಾಲೆಗಳ ರೂಪದಲ್ಲಿದ್ದುವು. ಧನುಸ್ಸಿನ ಟೇಂಕಾರಶಬ್ದವೇ ಮಹಾವಾಯುವಿನ ರೂಪದಲ್ಲಿದ್ದಿತು. (ಅರ್ಜುನನೆಂಬ ಅಗ್ನಿಯು ಧನುಸ್ಸಿನಿಂದ ವಾಯುರೂಪವಾದ ಶಿಂಜಿನಿಯ ಶಬ್ದದೊಡನೆ ಹೊರಟ ಜ್ವಾಲಾರೂಪವಾದ ಬಾಣಗಳಿಂದ ಇಂಧನರೂಪವಾದ ಸೈನಿಕರನ್ನು ದಹಿಸಿದನು.) ಪಾರ್ಥನ ರಥಮಾರ್ಗದಲ್ಲಿ (ಅವನ ಬಾಣಾಘಾತಕ್ಕೆ ಸಿಕ್ಕಿ ವಿಧ್ವಸ್ತವಾದ) ಚಕ್ರಗಳು, ನೊಗಗಳು, ತ್ರಿವೇಣುಗಳು, ಅಚ್ಚುಮರಗಳು, ಹಗ್ಗಗಳು, ಲಗಾಮುಗಳು, ಚಾವಟಿಗಳು, ಕುಂಡಲಗಳನ್ನೂ– ಶಿರಸ್ತ್ರಾಣಗಳನ್ನೂ ಧರಿಸಿರುವ ಶಿರಸ್ಸುಗಳು, ಭುಜಗಳು, ಹೆಗಲುಗಳು, ಛತ್ರ–ವ್ಯಜನಗಳು, ಕಿರೀಟಗಳು ರಾಶಿ-ರಾಶಿಯಾಗಿ ಬಿದ್ದಿರುವುದು ಕಂಡುಬಂದಿತು.

ಕ್ರುದ್ಧನಾದ ಪಾರ್ಥನ ರಥಮಾರ್ಗದಲ್ಲಿ ಮಾಂಸ-ರಕ್ತಗಳ ಮಿಶ್ರಣ ದಿಂದುಂಟಾದ ಕೆಸರಿನಿಂದ ವ್ಯಾಪ್ತವಾಗಿದ್ದ ಭೂಮಿಯು ತಿರುಗಾಡಲು ದುರ್ಗಮವಾಗಿದ್ದಿತು. ರುದ್ರದೇವನ ಆಟದ ಮೈದಾನದಂತೆ (ಶ್ಮಶಾನದಂತೆ) ಆ ರಣಭೂಮಿಯು ಹೇಡಿಗಳಿಗೆ ಭಯದಾಯಕವೂ– ಶೂರರಿಗೆ ಹರ್ಷದಾಯಕವೂ ಆಗಿದ್ದಿತು. ಪರಂತಪನಾದ ಪಾರ್ಥನು ಆಗಿನ ಯುದ್ಧ ದಲ್ಲಿ ಆವರಣಸಹಿತವಾದ ಎರಡು ಸಾವಿರ ರಥಗಳನ್ನು ಧ್ವಂಸಮಾಡಿ ಧೂಮರಹಿತನಾದ ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಿದ್ದನು. ಯಾವ ರೀತಿಯಲ್ಲಿ ಚರಾಚರಜಗತ್ತನ್ನೂ ಭಸ್ಮೀಭೂತವನ್ನಾಗಿ ಮಾಡಿದನಂತರ ಅಗ್ನಿದೇವನು ಧೂಮರಹಿತನಾಗುತ್ತಾನೆಯೋ–ಅದೇ ರೀತಿಯಲ್ಲಿ ಅರ್ಜು ನನೂ ಶತ್ರುಗಳೆಲ್ಲರನ್ನೂ ಸಂಹರಿಸಿ ದೇದೀಪ್ಯಮಾನನಾಗಿ ವಿರಾಜಿಸಿದನು.

ಅಶ್ವತ್ಥಾಮನು, ಯುದ್ಧದಲ್ಲಿ ಅರ್ಜುನನು ತೋರಿಸಿದ ಪರಾಕ್ರಮ ವನ್ನು ನೋಡಿ ಎತ್ತರವಾಗಿದ್ದ ಧ್ವಜದಿಂದ ಕೂಡಿದ್ದ ರಥದಲ್ಲಿ ಕುಳಿತು ಬಾಣಗಳ ಪ್ರಯೋಗದಿಂದ ಅರ್ಜುನನನ್ನು ತಡೆದನು. ಅವರಿಬ್ಬರೂ ಪುರುಷ

ಶ್ರೇಷ್ಠರಾಗಿದ್ದರು. ಇಬ್ಬರೂ ಎಲ್ಲ ಧನುರ್ಧಾರಿಗಳಲ್ಲಿಯೂ ಶ್ರೇಷ್ಠರಾಗಿದ್ದರು. ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ಇಬ್ಬರೂ ಆ ಸಮಯದಲ್ಲಿ ಪರಸ್ಪರವಾಗಿ ಸಂಘರ್ಷಿಸಿದರು. ವರ್ಷರ್ತುವಿನಲ್ಲಿ ಎರಡು ಮಹಾಮೇಘಗಳು ಅಪಾರವಾದ ವೃಷ್ಟಿಯನ್ನು ಸುರಿಸುವಂತೆ–ಅಶ್ವತ್ಥಾಮ-ಪಾರ್ಥರು ಸುದಾರುಣವಾದ ಬಾಣಗಳ ಮಳೆಗರೆದರು. ಒಬ್ಬರು ಮತ್ತೊಬ್ಬರೊಡನೆ ಧನುರ್ವಿದ್ಯೆಯಲ್ಲಿ ಸ್ಪರ್ಧಿಸುತ್ತಿದ್ದರು. ಎರಡು ಗೂಳಿಗಳು ಕೋಡುಗಳಿಂದ ಪರಸ್ಪರವಾಗಿ ತಿವಿದಾಡುವಂತೆ–ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಗಾಯಗೊಳಿಸಿದರು. ಅವರಿಬ್ಬರ ಯುದ್ಧವು ಬಹಳ ಹೊತ್ತಿನವರೆಗೆ ಏರು-ಪೇರುಗಳಿಲ್ಲದೇ ಸಮ-ಸಮವಾಗಿಯೇ ಇದ್ದಿತು. ಘೋರತರವಾದ ಶಸ್ತ್ರಗಳ ಸಂಘರ್ಷಣೆಯು ಪುನಃ ಅಲ್ಲಿ ಪ್ರಾರಂಭವಾಯಿತು. ಬಳಿಕ ಅಶ್ವತ್ಥಾಮನು ಸುವರ್ಣಮಯವಾದ ಮೂಲ ಭಾಗಗಳನ್ನು ಹೊಂದಿದ್ದ, ನಿಶಿತವಾಗಿ ಮಾಡಲ್ಪಟ್ಟಿದ್ದ ಹನ್ನೆರಡು ಬಾಣಗಳಿಂದ ಅರ್ಜುನನನ್ನೂ–ಹತ್ತು ಬಾಣಗಳಿಂದ ವಾಸುದೇವನನ್ನೂ ಪ್ರಹರಿಸಿದನು. ಆ ಮಹಾಯುದ್ಧದಲ್ಲಿ ಅರ್ಜುನನು ಮುಹೂರ್ತಕಾಲ ಗುರುಪುತ್ರನಾದ ಅಶ್ವತ್ಥಾಮನನ್ನು ಹೆಚ್ಚಿನ ಸಂತೋಷದಿಂದಲೇ ಗೌರವಿಸುತ್ತಿದ್ದು, ಅನಂತರ ಗಾಂಡೀವಧನುಸ್ಸನ್ನು ಸುದೀರ್ಘವಾಗಿ ಸೆಳೆಯಲು ಪ್ರಾರಂಭಿಸಿದನು. ಸ್ವಲ್ಪಹೊತ್ತಿನಲ್ಲಿಯೇ ಅರ್ಜುನನು ಅಶ್ವತ್ಥಾಮನನ್ನು ಅಶ್ವ-ಸೂತ-ರಥಗಳಿಂದ ವಿಹೀನನನ್ನಾಗಿ ಮಾಡಿದನು. ಅಶ್ವತ್ಥಾಮನನ್ನು ಮೃದುಪೂರ್ವಕವಾಗಿಯೇ ಪುನಃ ಪುನಃ ಪ್ರಹರಿಸುತ್ತಿದ್ದನು. ಹತಾಶ್ವನಾದ ದ್ರೋಣಪುತ್ರನು ರಥದ ಮೇಲೆಯೇ ನಿಂತು ಲೋಹಮಯವಾದ, ಅತಿಭಯಂಕರವಾದ, ಪರಿಘದಂತಿದ್ದ ಮುಸಲಾಯುಧವನ್ನು ಅರ್ಜುನನ ಕಡೆಗೆ ರಭಸದಿಂದ ಎಸೆದನು. ಶತ್ರುವಿನಾಶಕನಾದ ಅರ್ಜುನನು ತನ್ನ ಮೇಲೆ ರಭಸದಿಂದ ಬೀಳುವುದರಲ್ಲಿದ್ದ, ಸುವರ್ಣದ ಪಟ್ಟಿಯಿಂದ ವಿಭೂಷಿತವಾಗಿದ್ದ ಮುಸಲಾಯುಧವನ್ನು ಏಳು ಪ್ರಕಾರವಾಗಿ ಕತ್ತರಿಸಿದನು. ತಾನು ಪ್ರಯೋಗಿಸಿದ ಮುಸಲಾಯುಧವು ಛಿನ್ನ-ಭಿನ್ನವಾದುದನ್ನು ನೋಡಿ ಮಹಾಕೋಪಿಯಾದ ಅಶ್ವತ್ಥಾಮನು ಪರ್ವತಶಿಖರಸದೃಶವಾದ, ಘೋರರೂಪವಾದ ಪರಿಘಾಯುಧವನ್ನು ಎತ್ತಿಕೊಂಡನು. ಯುದ್ಧವಿಶಾರದನಾದ ಅಶ್ವತ್ಥಾಮನು ಆ ಪರಿಘಾಯುಧವನ್ನು

ರಭಸದಿಂದ ಅರ್ಜುನನ ಮೇಲೆ ಪ್ರಯೋಗಿಸಿದನು. ಕೋಪಗೊಂಡ ಯಮರಾಜನಂತೆ ಬಹಳ ಭಯಂಕರವಾಗಿ ಕಾಣುತ್ತಿದ್ದ ಪರಿಘಾಯುಧವು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಅರ್ಜುನನು ಐದು ಶ್ರೇಷ್ಠವಾದ ಬಾಣಗಳಿಂದ ಆ ಪರಿಘಾಯುಧವನ್ನು ಅತ್ಯಂತತ್ವರೆಯಿಂದ ಕತ್ತರಿಸಿದನು. ಮಹಾಯುದ್ಧದಲ್ಲಿ ಪಾರ್ಥನ ಬಾಣಗಳಿಂದ ಕತ್ತರಿಸಲ್ಪಟ್ಟ ಆ ಮಹಾಪರಿಘಾಯುಧವು ಭಗ್ನವಾಗಿ ಭೂಪಾಲರ ಹೃದಯಗಳನ್ನೂ ಸೀಳುತ್ತದೆಯೋ ಎಂಬಂತೆ ಶಬ್ದಮಾಡುತ್ತಾ ಭೂಮಿಯ ಮೇಲೆ ಬಿದ್ದಿತು. ಅರ್ಜುನನು ಮೂರು ಬೇರೆಯ ಭಲ್ಲಗಳಿಂದ ಅಶ್ವತ್ಥಾಮನನ್ನು ಪುನಃ ಪ್ರಹರಿಸಿದನು. ಬಲಿಷ್ಠನಾದ ಮಹಾತ್ಮನಾದ ಅರ್ಜುನನ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದರೂ ತನ್ನ ಪೌರುಷದ ವಿಷಯದಲ್ಲಿ ಶ್ರದ್ಧೆಯನ್ನಿಟ್ಟಿದ್ದ ಅಶ್ವತ್ಥಾಮನು ಸ್ವಲ್ಪವಾದರೂ ವಿಚಲಿತನಾಗಲಿಲ್ಲ.

ಅನಂತರ ಅಶ್ವತ್ಥಾಮನು ಎಲ್ಲ ಕ್ಷತ್ರಿಯರೂ ನೋಡುತ್ತಿದ್ದಂತೆಯೇ ಮಹಾರಥನಾದ ಸುರಥನನ್ನು ಬಾಣಗಳಿಂದ ಆಚ್ಛಾದಿಸಿದನು. ಪಾಂಚಾಲರ ಮಹಾರಥನಾದ ಸುರಥನು ಮೇಘದ ಗರ್ಜನೆಗೆ ಸಮಾನವಾದ ಶಬ್ದದಿಂದ ಕೂಡಿದ್ದ ರಥದ ಮೂಲಕವಾಗಿ ಅಶ್ವತ್ಥಾಮನನ್ನೇ ಆಕ್ರಮಿಸಿದನು. ಸರ್ವಪ್ರಕಾರವಾದ ಭಾರವನ್ನೂ ಸಹಿಸುವ, ಸುದೃಢವಾದ ಮತ್ತು ಶ್ರೇಷ್ಠವಾದ ಧನುಸ್ಸನ್ನು ಸುದೀರ್ಘವಾಗಿ ಸೆಳೆಯುತ್ತಾ ಸರ್ಪಾಗ್ನಿಸದೃಶವಾದ ಬಾಣಗಳಿಂದ ಅಶ್ವತ್ಥಾಮನನ್ನು ಮುಚ್ಚಿದನು. ಮಹಾರಥನಾದ ಸುರಥನು ಕ್ರುದ್ಧನಾಗಿ ತನ್ನ ಮೇಲೆ ಬೀಳಲು ರಭಸದಿಂದ ಬರುತ್ತಿರುವುದನ್ನು ಕಂಡು–ದಂಡದಿಂದ ಪೆಟ್ಟುತಿಂದ ಸರ್ಪದಂತೆ–ದ್ರೌಣಿಯು ಅತಿಕುಪಿತನಾದನು. ಹುಬ್ಬನ್ನು ತ್ರಿವಳಿಯನ್ನಾಗಿಸಿ (ಹುಬ್ಬನ್ನು ಗಂಟಿಕ್ಕಿ), ಕಟವಾಯಿಗಳನ್ನು ನೆಕ್ಕುತ್ತಾ, ಸುರಥನನ್ನು ಕೋಪದಿಂದ ದಿಟ್ಟಿಸಿನೋಡುತ್ತಾ ಧನುಸ್ಸಿನ ಶಿಂಜಿನಿಯನ್ನು ತೀಡಿ, ಯಮದಂಡದ ಕಾಂತಿಯಂತೆ ಕಾಂತಿಯುಕ್ತವಾದ ಸುತೀಕ್ಷ್ಣವಾದ ನಾರಾಚವನ್ನು ಸುರಥನ ಮೇಲೆ ಪ್ರಯೋಗಿಸಿದನು. ಇಂದ್ರನಿಂದ ಪ್ರಮುಕ್ತವಾದ ವಜ್ರಾಯುಧವು ಭೂಮಿಯನ್ನು ಭೇದಿಸಿಕೊಂಡು ಹೋಗುವಂತೆ–ಅಶ್ವತ್ಥಾಮನಿಂದ ಪ್ರಮುಕ್ತವಾದ ನಾರಾಚವು ಸುರಥನ ಹೃದಯವನ್ನು ಭೇದಿಸಿಕೊಂಡು ಭೂಮಿಯನ್ನು ಹೊಕ್ಕಿತು.

ವಜ್ರಾಯುಧದ ಪ್ರಹಾರದಿಂದ ಭಿನ್ನವಾದ ಪರ್ವತದ ಶಿಖರವು ಕೆಳಕ್ಕೆ ಬೀಳುವಂತೆ–ಅಶ್ವತ್ಥಾಮನ ನಾರಾಚದಿಂದ ಪ್ರಹೃತನಾದ ಸುರಥನು ಭಗ್ನನಾಗಿ ಭೂಮಿಯಲ್ಲಿ ಬಿದ್ದನು. ವೀರನಾದ ಸುರಥನು ಹತನಾಗಲಾಗಿ, ಪ್ರತಾಪವಂತನಾದ, ರಥಿಗಳಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ಸುರಥನ ರಥವನ್ನೇ ಬಹಳ ಬೇಗ ಹತ್ತಿ ಕುಳಿತನು. ಬಳಿಕ ಯುದ್ಧದುರ್ಮದನಾದ ಅಶ್ವತ್ಥಾಮನು ಯುದ್ಧಸನ್ನದ್ಧನಾಗಿ ಸಂಶಪ್ತಕರಿಂದಲೂ ಪರಿವೃತನಾಗಿ ಪುನಃ ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದನು. ಸೂರ್ಯನು ನಡುನೆತ್ತಿಗೆ ಬರಲಾಗಿ, ಅರ್ಜುನನಿಗೂ ಮತ್ತು ಅವನ ಶತ್ರುಗಳಿಗೂ ಯಮನ ರಾಷ್ಟ್ರದ ಜನಸಂಖ್ಯೆಯನ್ನು ಹೆಚ್ಚಿಸುವ ಘೋರವಾದ ಯುದ್ಧವು ಪ್ರಾರಂಭವಾಯಿತು. ಕೌರವಸೈನಿಕರ ಅದ್ಭುತಪರಾಕ್ರಮವನ್ನು ನೋಡಿದ ನಾವು ಮತ್ತೊಂದು ಆಶ್ಚರ್ಯದ ಸಂಗತಿಯನ್ನು ಅಲ್ಲಿ ಕಂಡೆವು. ವೀರನಾದ ಅರ್ಜುನನೊಬ್ಬನೇ ಏಕಕಾಲದಲ್ಲಿ ಅನೇಕ ವೀರಯೋಧರೊಡನೆ ಯುದ್ಧಮಾಡುತ್ತಿದ್ದನು. ಅದು ನಮಗೆ ಅತ್ಯಾಶ್ಚರ್ಯಕರವಾಗಿ ಕಂಡಿತು. ದೊಡ್ಡದಾದ ದೈತ್ಯಸೈನ್ಯದೊಡನೆ ಇಂದ್ರನೊಬ್ಬನೇ ಹಿಂದೆ ಯುದ್ಧಮಾಡಿದಂತೆ–ಬಹುಸಂಖ್ಯಾತರಾದ ಕೌರವಯೋಧರೊಡನೆ ಅರ್ಜುನನೊಬ್ಬನೇ ಯುದ್ಧಮಾಡುತ್ತಿದ್ದನು. ಆಗಿನ ಯುದ್ಧವು ಸುಘೋರವಾದ ಮಹಾಯುದ್ಧವಾಗಿ ಪರಿಣಮಿಸಿತು."

೧೪ನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ದುರ್ಯೋಧನ-ಧೃಷ್ಟದ್ಯುಮ್ನರಿಗೂ ಅರ್ಜುನಾಶ್ವತ್ಥಾಮರಿಗೂ ದ್ವಂದ್ವಯುದ್ಧ: ಶಲ್ಯನೊಡನೆ ನಕುಲ-ಸಾತ್ಯಕಿ ಮೊದಲಾದವರ ಯುದ್ಧ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಧೃಷ್ಟದ್ಯುಮ್ನ-ದುರ್ಯೋಧನರು ಬಾಣ, ಶಕ್ತ್ಯಾಯುಧ–ಇವೇ ಮುಂತಾದ ಆಯುಧಗಳಿಂದ ಸಮಾಕುಲವಾದ ಭಯಂಕರ

ವಾದ ಯುದ್ಧವನ್ನು ಮಾಡಿದರು. ವರ್ಷಾಕಾಲದಲ್ಲಿ ಮೇಘಗಳಿಂದ ಜಲಧಾರೆಗಳಾಗುವಂತೆ–ಅವರಿಬ್ಬರೂ ಯುದ್ಧಮಾಡುತ್ತಿದ್ದಾಗ ಎರಡು ಕಡೆಗಳಿಂದಲೂ ಸಾವಿರಾರು ಸಂಖ್ಯೆಯಲ್ಲಿ ಬಾಣಗಳ ವರ್ಷಗಳಾಗುತ್ತಿದ್ದುವು. ದುರ್ಯೋಧನನು ದ್ರೋಣಹಂತಕನಾದ, ಉಗ್ರಬಾಣನಾದ ಧೃಷ್ಟದ್ಯುಮ್ನನನ್ನು ಶೀಘ್ರವಾಗಿ ಹೋಗುವ ಐದು ಬಾಣಗಳಿಂದ ಪ್ರಹರಿಸಿ, ಪುನಃ ಏಳು ಬಾಣಗಳಿಂದಲೂ ಪ್ರಹರಿಸಿದನು. ದೃಢವಿಕ್ರಮನಾದ, ಬಲಿಷ್ಠನಾದ ಧೃಷ್ಟದ್ಯುಮ್ನನು ಎಪ್ಪತ್ತು ಬಾಣಗಳಿಂದ ದುರ್ಯೋಧನನನ್ನು ಪೀಡಿಸಿದನು. ದುರ್ಯೋಧನರಾಜನು ಧೃಷ್ಟದ್ಯುಮ್ನನಿಂದ ಪೀಡಿತನಾದುದನ್ನು ನೋಡಿ ಅವನ ಸಹೋದರರು ವಿಶಾಲವಾದ ಸೈನ್ಯದೊಡನೆ ಧೃಷ್ಟದ್ಯುಮ್ನನನ್ನು ಆಕ್ರಮಿಸಿದರು. ಸುತ್ತಲೂ ಅತಿರಥ-ಮಹಾರಥರಿಂದ ಆಕ್ರಮಿಸಲ್ಪಟ್ಟಿದ್ದ, ಶೂರನಾದ ಧೃಷ್ಟದ್ಯುಮ್ನನು ಬಾಣಪ್ರಯೋಗದಲ್ಲಿ ತನ್ನ ಕೈಚಳಕವನ್ನು ತೋರಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದನು.

ಶಿಖಂಡಿಯು ಪ್ರಭದ್ರಕಸೈನಿಕರಿಂದ ಕೂಡಿದವನಾಗಿ ಧನುಷ್ಮಂತರಾದ, ಮಹಾರಥರಾದ ಕೃಪ-ಕೃತವರ್ಮರೊಡನೆ ಯುದ್ಧದಲ್ಲಿ ತೊಡಗಿದನು. ಅಲ್ಲಿಯೂ ಸಹ ಪ್ರಾಣಗಳ ಹಂಗನ್ನೇ ತೊರೆದು, ಪ್ರಾಣಗಳನ್ನೇ ಪಣವನ್ನಾಗಿಟ್ಟು ಯುದ್ಧರೂಪವಾದ ಜೂಜಿನಲ್ಲಿ ತೊಡಗಿದ್ದ ಎರಡೂ ಪಕ್ಷಗಳ ನಡುವೆ ಭಯಂಕರವಾದ ಮಹಾಯುದ್ಧವೇ ನಡೆಯಿತು. ಶಲ್ಯನು ಎಲ್ಲ ದಿಕ್ಕುಗಳಲ್ಲಿಯೂ ಬಾಣಗಳ ಮಳೆಗರೆಯುತ್ತಾ ಸಾತ್ಯಕಿ-ವೃಕೋದರರಿಂದ ಕೂಡಿದ ಪಾಂಡವರ ಸೈನ್ಯವನ್ನು ಬಹಳವಾಗಿ ಪೀಡಿಸುತ್ತಿದ್ದನು. ಹಾಗೆಯೇ ಯಮಳರಾದ, ಯಮಸದೃಶಪರಾಕ್ರಮರಾದ ನಕುಲ-ಸಹದೇವರನ್ನೂ ಎದುರಿಸಿ ತನ್ನ ವೀರ್ಯ-ಪರಾಕ್ರಮಗಳಿಂದಲೂ, ಅಸ್ತ್ರಬಲದಿಂದಲೂ ಹೋರಾಡಿದನು. ಆ ಮಹಾಯುದ್ಧದಲ್ಲಿ ಶಲ್ಯನ ಬಾಣಗಳಿಂದ ಪೀಡಿಸಲ್ಪಡುತ್ತಿದ್ದ ಕೆಲವು ಪಾಂಡವಮಹಾರಥರು ಆ ಸಮಯದಲ್ಲಿ ತಮ್ಮ ರಕ್ಷಕನನ್ನೇ ಕಾಣದೇಹೋದರು. ಧರ್ಮರಾಜನೂ ಶಲ್ಯನಿಂದ ಪೀಡಿಸಲ್ಪಡುತ್ತಿರಲಾಗಿ ಶೂರನಾದ, ಮಾತೃನಂದನನಾದ ನಕುಲನು ಸೋದರಮಾವನಾದ ಶಲ್ಯನನ್ನು ವೇಗದಿಂದ ಆಕ್ರಮಿಸಿದನು. ಶತ್ರುವೀರಹಂತಕನಾದ ನಕುಲನು ಯುದ್ಧದಲ್ಲಿ ಶಲ್ಯನನ್ನು ಬಾಣಗಳಿಂದ ಆಚ್ಛಾದಿಸಿ ನಸುನಗುತ್ತಾ

ಪುನಃ ಹತ್ತು ಬಾಣಗಳಿಂದ ಶಲ್ಯನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಆ ಎಲ್ಲ ಬಾಣಗಳೂ ಲೋಹನಿರ್ಮಿತವಾಗಿದ್ದುವು. ಕಮ್ಮಾರನಿಂದ ಹದಮಾಡಲ್ಪಟ್ಟಿದ್ದುವು. ಸುವರ್ಣದ ಮೂಲಭಾಗಗಳನ್ನು ಹೊಂದಿದ್ದುವು. ಮಸೆಗಲ್ಲಿನಲ್ಲಿ ಉಜ್ಜಲ್ಪಟ್ಟಿದ್ದುವು. ಧನುಸ್ಸೆಂಬ ಯಂತ್ರದಿಂದ ಬಿಡಲ್ಪಟ್ಟಿದ್ದುವು. ಮಹಾತ್ಮನಾದ ಸೋದರಳಿಯನಿಂದ ಪೀಡಿಸಲ್ಪಟ್ಟ ಶಲ್ಯನು ಬಗ್ಗಿದ ಗಿಣ್ಣುಗಳಿದ್ದ ಅನೇಕಬಾಣಗಳಿಂದ ನಕುಲನನ್ನು ಗಾಯಗೊಳಿಸಿದನು. ಅನಂತರ ಯುಧಿಷ್ಠಿರ-ಭೀಮಸೇನ-ಸಾತ್ಯಕಿ-ಸಹದೇವರು ಮದ್ರರಾಜನನ್ನು ಪುನಃ ಆಕ್ರಮಿಸಿದರು. ಕೌರವಸೇನಾಪತಿಯಾದ ಶತ್ರುಜಿತನಾದ ಶಲ್ಯನು ರಥಗಳ ಗಡ-ಗಡಾ ಶಬ್ದಗಳಿಂದ ದಿಕ್ಕುಗಳನ್ನೂ, ಉಪದಿಕ್ಕುಗಳನ್ನೂ ತುಂಬುತ್ತಾ ಭೂಮಿಯನ್ನೇ ನಡುಗಿಸುತ್ತಾ ತನ್ನ ಮೇಲೆ ಬೀಳಲು ಬರುತ್ತಿದ್ದ ಪಾಂಡವ ಪ್ರಮುಖರನ್ನು ಮುಂದೆ ಹೋಗದಂತೆ ತಡೆದು ನಿಲ್ಲಿಸಿದನು. ಬಳಿಕ ಶಲ್ಯನು ಯುಧಿಷ್ಠಿರನನ್ನು ಮೂರು ಬಾಣಗಳಿಂದಲೂ, ಭೀಮಸೇನನನ್ನು ಐದು ಬಾಣಗಳಿಂದಲೂ, ಸಾತ್ಯಕಿಯನ್ನು ನೂರು ಬಾಣಗಳಿಂದಲೂ, ಸಹದೇವನನ್ನು ಮೂರು ಬಾಣಗಳಿಂದಲೂ ಪ್ರಹರಿಸಿದನು. ಅನಂತರ ಮದ್ರೇಶ್ವರನು ಮಹಾತ್ಮನಾದ ನಕುಲನ ಬಾಣಸಹಿತವಾದ ಧನುಸ್ಸನ್ನು ಕ್ಷುರಪ್ರದಿಂದ ಕತ್ತರಿಸಿದನು. ಶಲ್ಯನ ಬಾಣಗಳಿಂದ ಕತ್ತರಿಸಲ್ಪಟ್ಟ ಆ ಧನುಸ್ಸು ಹಲವಾರು ತುಂಡುಗಳಾಗಿ ರಣಭೂಮಿಯಲ್ಲಿ ಚದುರಿದಂತೆ ಬಿದ್ದುಹೋಯಿತು. ಒಡನೆಯೇ ಮಹಾರಥನಾದ ಮಾದ್ರೀಪುತ್ರನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಮದ್ರರಾಜನ ರಥವನ್ನು ಬಾಣಗಳಿಂದ ಬಹಳ ಬೇಗ ತುಂಬಿಬಿಟ್ಟನು. ಯುಧಿಷ್ಠಿರ-ಸಹದೇವರು ಹತ್ತು-ಹತ್ತು ಬಾಣಗಳಿಂದ ಮದ್ರೇಶನ ವಕ್ಷಃಸ್ಥಳವನ್ನು ಪ್ರಹರಿಸಿದರು. ಭೀಮಸೇನನು ಅರುವತ್ತು ಬಾಣಗಳಿಂದಲೂ, ಸಾತ್ಯಕಿಯು ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಹತ್ತು ಬಾಣಗಳಿಂದಲೂ ಶಲ್ಯನನ್ನು ವೇಗಪೂರ್ವಕವಾಗಿ ಪ್ರಹರಿಸಿದರು. ಅದರಿಂದ ಪರಮಕ್ರುದ್ಧನಾದ ಮದ್ರರಾಜನು ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿದನು. ಪುನಃ ಎಪ್ಪತ್ತು ಬಾಣಗಳಿಂದಲೂ ಅವನನ್ನು ಪ್ರಹರಿಸಿದನು. ಅನಂತರ ಮದ್ರರಾಜನು ಬಾಣಸಹಿತವಾದ

ಸಾತ್ಯಕಿಯ ಧನುಸ್ಸನ್ನು ಅವನ ಮುಷ್ಟಿಯ ಪ್ರದೇಶದಲ್ಲಿ ಕತ್ತರಿಸಿದನು. ಅವನ ನಾಲ್ಕು ಕುದುರೆಗಳನ್ನೂ ಮೃತ್ಯುವಿಗರ್ಪಿಸಿದನು. ಹೀಗೆ ಮಹಾರಥನಾದ ಶಲ್ಯನು ಸಾತ್ಯಕಿಯನ್ನು ರಥಹೀನನನ್ನಾಗಿ ಮಾಡಿ ಪುನಃ ನೂರು ಬಾಣಗಳಿಂದ ಶರೀರಾದ್ಯಂತವಾಗಿ ಗಾಯಗೊಳಿಸಿದನು. ಅಷ್ಟು ಮಾತ್ರವಲ್ಲದೇ ಶಲ್ಯನು ಕ್ರುದ್ಧರಾಗಿದ್ದ ನಕುಲ-ಸಹದೇವರನ್ನೂ, ಭೀಮಸೇನ-ಯುಧಿಷ್ಠಿರರನ್ನೂ ಹತ್ತು ಬಾಣಗಳಿಂದ ಗಾಯಗೊಳಿಸಿದನು. ಆ ಯುದ್ಧದಲ್ಲಿ ನಾವು ಮದ್ರರಾಜನ ಅದ್ಭುತಪರಾಕ್ರಮವನ್ನು ನೋಡಿದೆವು. ಎಲ್ಲ ಪಾಂಡವರೂ ಒಟ್ಟಾಗಿ ಸೇರಿ ಯುದ್ಧಮಾಡುತ್ತಿದ್ದರೂ ಶಲ್ಯನನ್ನು ಯುದ್ಧದಿಂದ ಹಿಮ್ಮೆಟ್ಟಿಸಲು ಅವರಿಗೆ ಸಾಧ್ಯವಾಗಲಿಲ್ಲ. ಸತ್ಯವಿಕ್ರಮನಾದ ಸಾತ್ಯಕಿಯು ಬೇರೊಂದು ರಥದಲ್ಲಿ ಕುಳಿತು ಮದ್ರರಾಜನ ಹಿಡಿತಕ್ಕೆ ಸಿಕ್ಕಿಕೊಂಡು ಪೀಡಿಸಲ್ಪಡುತ್ತಿದ್ದ ಪಾಂಡವರನ್ನು ನೋಡಿ ಅತ್ಯಂತವೇಗದಿಂದ ಮದ್ರಾಧಿಪತಿಯ ಬಳಿಗೆ ಧಾವಿಸಿದನು. ಸಮಿತಿಶೋಭನನಾದ ಶಲ್ಯನು ಸಾತ್ಯಕಿಯ ರಥವು ತನ್ನ ಸಮೀಪಕ್ಕೆ ವೇಗವಾಗಿ ಬರುತ್ತಿರುವುದನ್ನು ಕಂಡು–ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯನ್ನು ಎದುರಿಸುವಂತೆ–ರಥಸ್ಥನಾಗಿಯೇ ಸಾತ್ಯಕಿಯನ್ನು ಎದುರಿಸಿದನು. ಶೂರನಾದ ಸಾತ್ಯಕಿಗೂ ಮತ್ತು ಮದ್ರಾಧಿಪನಾದ ಶಲ್ಯನಿಗೂ ನಡೆದ ಆಗಿನ ಸಮರವು–ಹಿಂದೆ ಶಂಬರಾಸುರನಿಗೂ ಇಂದ್ರನಿಗೂ ನಡೆದ ಯುದ್ಧದಂತೆ–ಭೀಕರವೂ ಪರಮಾದ್ಭುತವೂ ಆಗಿದ್ದಿತು. ಮದ್ರರಾಜನು ರಣಾಂಗಣದಲ್ಲಿ ತನ್ನನ್ನೇ ಪ್ರತೀಕ್ಷಿಸುತ್ತಾ ನಿಂತಿರುವುದನ್ನು ಗಮನಿಸಿದ ಸಾತ್ಯಕಿಯು ಹತ್ತು ಬಾಣಗಳಿಂದ ಅವನನ್ನು ಪ್ರಹರಿಸಿ ನಿಲ್ಲು-ನಿಲ್ಲೆಂದು ಕೂಗಿ ಹೇಳಿದನು. ಮಹಾತ್ಮನಾದ ಸಾತ್ಯಕಿಯ ಬಾಣಗಳಿಂದ ಬಹಳವಾಗಿ ಗಾಯಗೊಂಡ ಮದ್ರರಾಜನು ಸಾತ್ಯಕಿಯನ್ನು ಚಿತ್ರಿತವಾದ ಮೂಲಭಾಗಗಳನ್ನು ಹೊಂದಿದ್ದ ನಿಶಿತವಾದ ಬಾಣಗಳಿಂದ ಪ್ರತಿಯಾಗಿ ಪ್ರಹರಿಸಿದನು. ಅನಂತರ ಮಹಾಧನುಷ್ಮಂತರಾದ ಪಾರ್ಥರು ಸಾತ್ಯಕಿಯೊಡನೆ ಯುದ್ಧದಲ್ಲಿ ತೊಡಗಿದ್ದ ಸೋದರಮಾವನನ್ನು ಸಂಹರಿಸುವ ಇಚ್ಛೆಯಿಂದ ರಥಗಳ ಮೂಲಕವಾಗಿ ಪುನಃ ಶಲ್ಯನನ್ನೇ ಆಕ್ರಮಿಸಿದರು.

ಪುನಃ ಅಲ್ಲಿ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಸಿಂಹಕ್ಕೆ ಸಮಾನವಾಗಿ ಗರ್ಜನೆಮಾಡುತ್ತಾ ಯುದ್ಧಮಾಡುತ್ತಿದ್ದ ಶೂರರ ರಕ್ತವನ್ನು ನೀರಿನಂತೆ ಚೆಲ್ಲಾಡಿಸುವ ಘೋರಯುದ್ಧವು ನಡೆಯಿತು. ಏಕಮಾಂಸಾಪೇಕ್ಷಿಗಳಾದ ಸಿಂಹಗಳ ನಡುವೆ ಗರ್ಜನೆಗಳೂ, ಪ್ರಹಾರ-ಪ್ರತಿಪ್ರಹಾರಗಳೂ ಆಗುವಂತೆ–ಯುದ್ಧಸ್ಥಳದಲ್ಲಿ ಉಭಯಪಕ್ಷಗಳ ವೀರರ ನಡುವೆ ಗರ್ಜನೆಗಳೂ, ಪ್ರಹಾರ-ಪ್ರತಿಪ್ರಹಾರಗಳೂ ನಡೆಯುತ್ತಿದ್ದುವು. ಎರಡು ಪಕ್ಷಗಳವರೂ ಬಿಡುತ್ತಿದ್ದ ಸಾವಿರಾರು ಬಾಣಗಳಿಂದ ಭೂಮಿಯು ಆಚ್ಛಾದಿತವಾಯಿತು. ಅಂತರಿಕ್ಷವೂ ಬಹಳ ಬೇಗ ಬಾಣಮಯವೇ ಆಗಿಹೋಯಿತು. ಮಹಾತ್ಮರಾದ ಉಭಯಪಕ್ಷಗಳ ಯೋಧರಿಂದ ಬಿಡಲ್ಪಟ್ಟ ಬಾಣಗಳಿಂದ ಅಲ್ಲಿ ಬಹಳ ಬೇಗ ಬಾಣಾಂಧಕಾರವು ಕವಿಯಿತು. ಅದು ಮೇಘಗಳ ಛಾಯೆಯಂತೆಯೇ (ನೆರಳಿನಂತೆ) ಕಾಣುತ್ತಿದ್ದಿತು. ಯೋಧರಿಂದ ಬಿಡಲ್ಪಡುತ್ತಿದ್ದ, ಪೊರೆಯನ್ನು ಕಳಚಿದ ಸರ್ಪಗಳಂತೆಯೇ ಇದ್ದ, ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಹೊಳೆಯುತ್ತಿದ್ದ ಬಾಣಗಳಿಂದ ಎಲ್ಲ ದಿಕ್ಕುಗಳೂ ಬೆಳಗಿದುವು. ಶತ್ರುನಾಶಕನಾದ ಶಲ್ಯನು ಅಲ್ಲಿ ಪರಮಾದ್ಭುತವಾದ ಸಾಹಸಕಾರ್ಯವೊಂದನ್ನು ಮಾಡಿದನು. ಅದೇನೆಂದರೆ: ಶಲ್ಯನು ಏಕಾಕಿಯಾಗಿಯೇ ಬಹುಸಂಖ್ಯಾತರಾದ ಮಹಾರಥರನ್ನು ಎದುರಿಸಿ ಯುದ್ಧಮಾಡುತ್ತಿದ್ದನು. ಮದ್ರರಾಜನ ಭುಜಗಳಿಂದ ಪ್ರಮುಕ್ತವಾಗಿ ಭೂಮಿಯ ಮೇಲೆ ಬೀಳುತ್ತಿದ್ದ ರಣಹದ್ದಿನ ಮತ್ತು ನವಿಲಿನ ರೆಕ್ಕೆಗಳನ್ನು ಹೊಂದಿದ್ದ ಘೋರವಾದ ಬಾಣಗಳಿಂದ ರಣಭೂಮಿಯೇ ತುಂಬಿಹೋಯಿತು. ಹಿಂದೆ ಅಸುರರನ್ನು ವಿನಾಶಗೊಳಿಸುವ ಸಮಯದಲ್ಲಿ ಇಂದ್ರನ ರಥವು ಸಂಚರಿಸುತ್ತಿದ್ದಂತೆ–ಆ ಸಮರಾಂಗಣದಲ್ಲಿ ಶಲ್ಯನ ರಥವು ಯಥಾಪೂರ್ವವಾಗಿ ಸರ್ವತ್ರ ಸಂಚರಿಸುತ್ತಿದ್ದುದನ್ನು ನಾವು ನೋಡಿದೆವು."

ಹದಿನೈದನೆಯ ಅಧ್ಯಾಯವು ಮುಗಿಯಿತು.

# ಪಾಂಡವರ ಸೈನಿಕರಿಗೂ–ಕೌರವರ ಸೈನಿಕರಿಗೂ ದ್ವಂದ್ವಯುದ್ಧ: ಭೀಮಸೇನನು ದುರ್ಯೋಧನನನ್ನೂ–ಧರ್ಮರಾಜನು ಶಲ್ಯನನ್ನೂ ಪರಾಜಯಗೊಳಿಸಿದುದು

ಸಂಜಯನು ಯುದ್ಧದ ಭೀಕರತೆಯನ್ನು ವರ್ಣಿಸುತ್ತಾ ಹೇಳುತ್ತಾನೆ:

"ಮಹಾರಾಜ! ಮದ್ರರಾಜಪುರಃಸರರಾದ ನಿನ್ನ ಸೈನಿಕರು ಪುನಃ ಪಾಂಡವರನ್ನು ಮಹಾವೇಗದಿಂದ ಆಕ್ರಮಿಸಿದರು. ಯದ್ಯಪಿ ನಿನ್ನ ಕಡೆಯ ರಣೋತ್ಸಾಹಿಗಳಾದ ಸೈನಿಕರು ಪಾಂಡವರಿಂದ ಪೀಡಿಸಲ್ಪಡುತ್ತಿದ್ದರೂ ಸೈನ್ಯಬಾಹುಳ್ಯವಿದ್ದುದರಿಂದ ಯುದ್ಧದಲ್ಲಿ ಮುನ್ನುಗ್ಗಿಹೋಗಿ ಪಾಂಡವ ಸೈನಿಕರನ್ನು ಸಮ್ಮರ್ದಿಸಿದರು. ಕೌರವಸೈನಿಕರಿಂದ ಪೀಡಿಸಲ್ಪಡುತ್ತಿದ್ದ ಪಾಂಡವಸೈನಿಕರು ಭೀಮಸೇನನಿಂದ ತಡೆಯಲ್ಪಟ್ಟರೂ ಕೃಷ್ಣಾರ್ಜುನರು ನೋಡುತ್ತಿದ್ದಂತೆಯೇ ರಣರಂಗದಲ್ಲಿ ನಿಲ್ಲಲಾಗದೆ ಪಲಾಯನಮಾಡತೊಡಗಿದರು. ಅದರಿಂದ ಕ್ರುದ್ಧನಾದ ಅರ್ಜುನನು ಅನುಯಾಯಿಗಳಿಂದೊಡಗೂಡಿದ ಕೃಪರನ್ನೂ–ಕೃತವರ್ಮನನ್ನೂ ಬಾಣಗಳ ಸಮೂಹಗಳಿಂದ ಮುಚ್ಚಿದನು. ಸಹದೇವನು ಸೈನ್ಯಸಮೇತನಾದ ಶಕುನಿಯನ್ನು ಬಾಣಗಳಿಂದ ಕವಿದನು. ನಕುಲನು ಪಕ್ಕದಲ್ಲಿಯೇ ನಿಂತು ಶಲ್ಯನ ಕಡೆಗೇ ನೋಡುತ್ತಿದ್ದನು. ದ್ರೌಪದಿಯ ಮಕ್ಕಳು ಮುನ್ನುಗ್ಗಿಬರುತ್ತಿದ್ದ ಕೌರವರ ಕಡೆಯ ಅನೇಕ ರಾಜರನ್ನು ತಡೆದರು. ಪಾಂಚಾಲರಾಜಕುಮಾರನಾದ ಶಿಖಂಡಿಯು ಅಶ್ವತ್ಥಾಮನನ್ನು ತಡೆದನು. ಭೀಮಸೇನನು ಗದಾಪಾಣಿಯಾಗಿ ದುರ್ಯೋಧನರಾಜನನ್ನು ತಡೆದು ನಿಲ್ಲಿಸಿದನು. ಸೇನಾಸಹಿತನಾದ ಯುಧಿಷ್ಠಿರನು ಶಲ್ಯನನ್ನು ನಿರೋಧಿಸಿದನು. ಅನಂತರ ಯುದ್ಧದಿಂದ ಹಿಂದಿರುಗದೇ ಇರತಕ್ಕ ನಿನ್ನ ಕಡೆಯ ಮತ್ತು ಶತ್ರುಪಕ್ಷದ ಸೈನಿಕರು ಅಲ್ಲಲ್ಲಿಯೇ ಯುದ್ಧದಲ್ಲಿ ತೊಡಗಿದರು. ಅಲ್ಲಿ ನಾನು ಶಲ್ಯನ ಮಹತ್ತ್ವಪೂರ್ಣವಾದ ಸಾಹಸಕಾರ್ಯವನ್ನು ನೋಡಿದೆನು. ಶಲ್ಯನೊಬ್ಬನೇ ಪಾಂಡವರ ಸರ್ವಸೈನ್ಯಗಳನ್ನೂ ಎದುರಿಸಿ ಯುದ್ಧ

ಮಾಡುತ್ತಿದ್ದನು. ಚಂದ್ರಗ್ರಹದ ಸಮೀಪದಲ್ಲಿ ಶನೈಶ್ಚರಗ್ರಹವು ಕಾಣಿಸಿಕೊಳ್ಳುವಂತೆ–ಯುಧಿಷ್ಠಿರನ ಸಮೀಪದಲ್ಲಿ ಶಲ್ಯನು ಕಾಣಿಸಿ ಕೊಂಡನು. ಸರ್ಪೋಪಮವಾದ ಬಾಣಗಳಿಂದ ಯುಧಿಷ್ಠಿರನನ್ನು ಬಹಳ ವಾಗಿ ಪೀಡಿಸಿ ಅನಂತರ ಭೀಮನ ಬಳಿಗೆ ಹೋಗಿ ಅವನನ್ನೂ ಬಾಣಗಳ ವೃಷ್ಟಿಯಿಂದ ಮುಚ್ಚಿದನು. ಶಲ್ಯನ ಹಸ್ತಲಾಘವವನ್ನೂ–ಅಸ್ತ್ರವಿದ್ಯೆಯಲ್ಲಿ ಅವನಿಗಿದ್ದ ಪಾಂಡಿತ್ಯವನ್ನೂ ನೋಡಿ ನಿನ್ನ ಕಡೆಯ ಸೈನಿಕರೂ ಮತ್ತು ಶತ್ರುಪಕ್ಷದ ಸೈನಿಕರೂ ಅವನನ್ನು ಬಹಳವಾಗಿ ಶ್ಲಾಘಿಸಿದರು. ಶಲ್ಯನಿಂದ ಸತತವಾಗಿ ಪೀಡಿಸಲ್ಪಡುತ್ತಿದ್ದ ಪಾಂಡವಸೈನಿಕರು ಕ್ಷತ-ವಿಕ್ಷತರಾಗಿ ಯುಧಿಷ್ಠಿರನು ಕೂಗಿಕೊಳ್ಳುತ್ತಿದ್ದರೂ ರಣಾಂಗಣವನ್ನು ಬಿಟ್ಟು ಹೋಗುತ್ತಿದ್ದರು. ಮದ್ರರಾಜನಿಂದ ತನ್ನ ಕಡೆಯ ಸೈನಿಕರು ವಧಿಸಲ್ಪಡುತ್ತಿರಲಾಗಿ ಯುಧಿಷ್ಠಿರನು ಕೋಪಾವಿಷ್ಟನಾದನು. ಮಹಾರಥ ನಾದ ಯುಧಿಷ್ಠಿರನು ಪೌರುಷವನ್ನು ಆಶ್ರಯಿಸಿ–'ಜಯೋ ವಾಸ್ತು ವಧೋ ವಾಸ್ತು–ಜಯವಾದರೂ ಲಭಿಸಲಿ; ವಧೆಯಾದರೂ ಆಗಿ ಹೋಗಲಿ'– ಎಂಬ ನಿಶ್ಚಯಬುದ್ಧಿಯಿಂದ ಮದ್ರರಾಜನನ್ನು ಬಾಣಗಳಿಂದ ಪ್ರಹರಿಸಿದನು. ಅನಂತರ ಯುಧಿಷ್ಠಿರನು ತನ್ನ ಸಹೋದರರನ್ನೂ, ಶ್ರೀಕೃಷ್ಣನನ್ನೂ, ಸಾತ್ಯಕಿಯನ್ನೂ ಮತ್ತು ಇತರ ಎಲ್ಲ ಯೋಧರನ್ನೂ ಆಹ್ವಾನಿಸಿ ಹೇಳಿದನು:

**ಭೀಷ್ಮೋ ದ್ರೋಣಶ್ಚ ಕರ್ಣಶ್ಚ ಯೇ ಚಾನ್ಯೇ ಪೃಥಿವೀಕ್ಷಿತಃ ।**
**ಕೌರವಾರ್ಥೇ ಪರಾಕ್ರಾನ್ತಾಃ ಸಂಗ್ರಾಮೇ ನಿಧನಂ ಗತಾಃ ।**
**ಯಥಾಭಾಗಂ ಯಥೋತ್ಸಾಹಂ ಭವನ್ತಃ ಕೃತಪೌರುಷಾಃ ॥೧೭॥**

**ಭಾಗೋಽವಶಿಷ್ಟ ಏಕೋಽಯಂ ಮಮ ಶಲ್ಯೋ ಮಹಾರಥಃ ।**
**ಸೋಽಹಮದ್ಯ ಯುಧಾ ಜೇತುಮಾಶಂಸೇ ಮದ್ರಕಾಧಿಪಮ್ ॥೧೮॥**

"ಬಂಧುಗಳೇ! ದುರ್ಯೋಧನನ ಸಲುವಾಗಿ ಅತುಲಪರಾಕ್ರಮದಿಂದ ಯುದ್ಧಮಾಡಿದ ಭೀಷ್ಮ-ದ್ರೋಣ-ಕರ್ಣರೂ ಮತ್ತು ಇತರ ಅನೇಕ ಪೃಥಿವೀಪಾಲರೂ ಸಂಗ್ರಾಮದಲ್ಲಿ ನಿಧನಹೊಂದಿದರು. ನೀವಾದರೂ ನಿಮ-ನಿಮಗೆ ಹಂಚಿಕೊಟ್ಟ ಭಾಗಗಳೊಡನೆ (ವೀರರೊಡನೆ) ಉತ್ಸಾಹಪೂರ್ಣ ರಾಗಿ ಪೌರುಷವನ್ನೂ ಪ್ರದರ್ಶಿಸುತ್ತಾ ಯುದ್ಧಮಾಡಿ ಅವರೆಲ್ಲರನ್ನೂ ಪರಾ ಜಯಗೊಳಿಸಿರುವಿರಿ. ನನ್ನ ಭಾಗವಾಗಿ ಮಹಾರಥನಾದ ಶಲ್ಯನೊಬ್ಬನು

ಮಾತ್ರ ಉಳಿದಿರುತ್ತಾನೆ. ಮಹಾರಥನಾದ ಮದ್ರಾಧಿಪನನ್ನು ನಾನೀಗ ಜಯಿಸಲು ನಿಶ್ಚಯಿಸಿದ್ದೇನೆ.

ಈ ಸಂಬಂಧವಾಗಿ ನನ್ನ ಮನಸ್ಸಿನಲ್ಲಿರುವುದನ್ನು ನಾನು ಹೇಳಿಬಿಡುತ್ತೇನೆ; ಎಲ್ಲರೂ ಕೇಳಿರಿ. ಇಂದ್ರನಿಂದಲೂ ಯುದ್ಧದಲ್ಲಿ ಗೆಲ್ಲಲು ಅಶಕ್ಯರಾದ,



ಶೂರಸಮ್ಮತರಾದ, ವೀರರಾದ, ಮಾದ್ರಿಯ ಮಕ್ಕಳಾದ ಈ ನಕುಲ-ಸಹದೇವರು ನನ್ನ ಚಕ್ರಗಳ ರಕ್ಷಕರಾಗಿರಲಿ. ಕ್ಷತ್ರಧರ್ಮವನ್ನು ಪುರಸ್ಕರಿಸಿರುವ, ಸಮ್ಮಾನಾರ್ಹರಾದ, ಸತ್ಯಪ್ರತಿಜ್ಞರಾದ ಈ ನಕುಲ-ಸಹದೇವರು ನನ್ನ ಸಲುವಾಗಿ ಯುದ್ಧದಲ್ಲಿ ಸೋದರಮಾವನಾದ ಶಲ್ಯನನ್ನು ಎದುರಿಸಿ ಒಳ್ಳೆಯ ರೀತಿಯಲ್ಲಿ ಯುದ್ಧಮಾಡುತ್ತಾರೆ. ಇಂದಿನ ಯುದ್ಧದಲ್ಲಿ ನನ್ನನ್ನಾ

ದರೂ ಶಲ್ಯನು ಸಂಹರಿಸುತ್ತಾನೆ. ನಾನಾದರೂ ಅವನನ್ನು ಸಂಹರಿಸುತ್ತೇನೆ. ನಿಮಗೆ ಮಂಗಳವಾಗಲಿ. ವಿಶ್ವವಿಖ್ಯಾತರಾದ ವೀರರೇ! ನಾನು ಹೇಳಿದ ಸತ್ಯವಚನವನ್ನು ನೀವೆಲ್ಲರೂ ಮನಸ್ಸಿಗೆ ತೆಗೆದುಕೊಳ್ಳಿರಿ. ಪಾರ್ಥಿವರೇ! ಕ್ಷತ್ರಧರ್ಮಾನುಸಾರವಾಗಿ ನಾನೀಗ ನನ್ನ ಭಾಗದ ಕಾರ್ಯವನ್ನು ಪೂರ್ಣಗೊಳಿಸುವ ಸಂಕಲ್ಪಮಾಡಿ ವಿಜಯಕ್ಕಾಗಲೀ ಅಥವಾ ವಧೆಗಾಗಲೀ ಸೋದರಮಾವನೊಡನೆ ಯುದ್ಧಮಾಡುತ್ತೇನೆ. ಆದುದರಿಂದ ರಥವನ್ನು ಸಜ್ಜುಗೊಳಿಸುವ ರಥಯೋಜಕರು ಬಹಳ ಬೇಗ ಶಾಸ್ತ್ರವಿಧಿಗೆ ಅನುಸಾರ ವಾಗಿ ಅಧಿಕಸಂಖ್ಯೆಯ ಶಸ್ತ್ರಗಳಿಂದಲೂ ಅವಶ್ಯಕವಾದ ಉಪಕರಣ ಗಳಿಂದಲೂ ನನ್ನ ರಥವನ್ನು ಸಜ್ಜುಗೊಳಿಸಲಿ. ನಕುಲ- ಸಹದೇವರೇ ಅಲ್ಲದೇ ಶೈನೇಯನು ನನ್ನ ರಥದ ಬಲಭಾಗದ ಚಕ್ರವನ್ನೂ, ಧೃಷ್ಟದ್ಯುಮ್ನನು ಎಡಭಾಗದ ಚಕ್ರವನ್ನೂ ರಕ್ಷಿಸಲಿ. ನನ್ನ ರಥದ ಹಿಂಭಾಗದಲ್ಲಿ ಧನಂಜಯನಿರಲಿ. ಶಸ್ತ್ರಧಾರಿಗಳಲ್ಲಿಯೇ ಶ್ರೇಷ್ಠನಾದ ಭೀಮಸೇನನು ನನ್ನ ಮುಂದಿರಲಿ. ಈ ವಿಧವಾದ ವ್ಯವಸ್ಥೆಯಿಂದ ನಾನು ಮಹಾಯುದ್ಧದಲ್ಲಿ ಶಲ್ಯನಿಗಿಂತಲೂ ಅಧಿಕನಾಗುತ್ತೇನೆ."

ಮಹಾರಾಜ! ಯುಧಿಷ್ಠಿರನು ತನ್ನ ಕಡೆಯ ಯೋಧರನ್ನು ಉದ್ದೇಶಿಸಿ ಹೀಗೆ ಹೇಳಿದನಂತರ ರಾಜನ ಹಿತಚಿಂತಕರಾದ ಅವರೆಲ್ಲರೂ ಅವನು ಹೇಳಿದಂತೆಯೇ ಮಾಡಿದರು. ಯುಧಿಷ್ಠಿರನ ಮಾತುಗಳಿಂದ ಪಾಂಚಾಲ- ಸೋಮಕ-ಮತ್ಸ್ಯಸೈನಿಕರಿಗೆ ಪರಮಾನಂದವುಂಟಾಯಿತು. ಯುಧಿಷ್ಠಿರನು ತಾನು ಹೇಳಿದಂತೆ ಪ್ರತಿಜ್ಞೆಮಾಡಿ ಶಲ್ಯನನ್ನು ಆಕ್ರಮಿಸಿದನು. ಆ ಸಮಯ ದಲ್ಲಿ ಪಾಂಚಾಲಯೋಧರು ಶಂಖಗಳನ್ನೂದಿದರು; ಭೇರಿಗಳನ್ನು ಬಾರಿಸಿ ದರು; ನೂರಾರು ರಣವಾದ್ಯಗಳನ್ನು ಮೊಳಗಿಸಿದರು; ಸಿಂಹನಾದಗಳನ್ನೂ ಮಾಡಿದರು. ಕುರುಕುಲದ ಶ್ರೇಷ್ಠಯೋಧರು (ಪಾಂಡವಯೋಧರು) ಕೋಪಾವಿಷ್ಟರಾಗಿ ಹರ್ಷನಿನಾದಗಳೊಡನೆ ವೇಗಶಾಲಿಯಾದ ಶಲ್ಯನನ್ನು ಆಕ್ರಮಿಸಿದರು. ಆನೆಗಳ ಮೇಲಿದ್ದ ಗಂಟೆಗಳ- ಗಣ-ಗಣಾ ಶಬ್ದಗಳಿಂದಲೂ, ಶಂಖಧ್ವನಿಗಳಿಂದಲೂ, ವಾದ್ಯಗಳ ಘೋಷಗಳಿಂದಲೂ ಭೂಮಿಯನ್ನೇ ಶಬ್ದಾಯಮಾನವನ್ನಾಗಿ ಮಾಡುತ್ತಾ ಪಾಂಡವಯೋಧರು ಶಲ್ಯನನ್ನು ಆಕ್ರಮಿಸಿದರು.

ಉದಯಾಚಲಾಸ್ತಾಚಲಗಳು ಮಹಾಮೇಘಗಳನ್ನು ತಡೆದು ನಿಲ್ಲಿಸುವಂತೆ–ವೀರ್ಯವಂತರಾದ ದುರ್ಯೋಧನ-ಶಲ್ಯರು ರಭಸದಿಂದ ಬರುತ್ತಿದ್ದ ಪಾಂಡವಯೋಧರನ್ನು ತಡೆದು ನಿಲ್ಲಿಸಿದರು. ಹಿಂದೆ ಇಂದ್ರನು ಶಂಬರಾಸುರನ ಮೇಲೆ ಬಾಣಗಳ ಮಳೆಗರೆದಂತೆ–ಸಮರಶ್ಲಾಘಿಯಾದ ಶಲ್ಯನು ಅರಿಂದಮನಾದ ಧರ್ಮಪುತ್ರನ ಮೇಲೆ ಬಾಣಗಳ ಮಳೆಗರೆದನು. ಅದೇ ರೀತಿಯಲ್ಲಿ ಕುರುರಾಜನಾದ ಮಹಾತ್ಮನಾದ ಯುಧಿಷ್ಠಿರನೂ ಸುಂದರವಾದ ಧನುಸ್ಸನ್ನು ಹಿಡಿದು ದ್ರೋಣೋಪದಿಷ್ಟವಾದ ವಿಧ-ವಿಧವಾದ ಮಹಾಸ್ತ್ರಗಳನ್ನು ಪ್ರದರ್ಶಿಸುತ್ತಾ ಶೀಘ್ರತಾಪೂರ್ವಕವಾಗಿ, ವಿಚಿತ್ರವಾದ ರೀತಿಯಲ್ಲಿ ಸುಷ್ಠುವಾಗಿ ಬಾಣಗಳ ಮಳೆಗರೆದನು. ಧರ್ಮರಾಜನು ರಣಾಂಗಣದಲ್ಲಿ ಸಂಚರಿಸುತ್ತಿದ್ದಾಗ ಯಾರೂ ಅವನ ಗಮನದಲ್ಲಿ ಯಾವ ದೋಷವನ್ನೂ ಕಾಣಲಿಲ್ಲ. ಮಾಂಸದ ಲೋಭದಿಂದ ಪರಸ್ಪರವಾಗಿ ಹೋರಾಡುವ ಎರಡು ಶಾರ್ದೂಲಗಳಂತೆ–ಶಲ್ಯ-ಧರ್ಮರಿಬ್ಬರೂ ನಾನಾ ವಿಧವಾದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಕ್ಷತ-ವಿಕ್ಷತಗೊಳಿಸುತ್ತಿದ್ದರು.

ಭೀಮಸೇನನು ಯುದ್ಧಕುಶಲನಾದ ನಿನ್ನ ಮಗನೊಡನೆ ಯುದ್ಧದಲ್ಲಿ ತೊಡಗಿದನು. ಪಾಂಚಾಲ್ಯನಾದ ಧೃಷ್ಟದ್ಯುಮ್ನ, ಸಾತ್ಯಕಿ, ನಕುಲ-ಸಹದೇವ–ಇವರೆಲ್ಲರೂ ಶಕುನಿಪ್ರಮುಖರಾದ ವೀರರನ್ನು ಎದುರಿಸಿ ಯುದ್ಧಮಾಡುತ್ತಿದ್ದರು. ಮಹಾರಾಜ! ನಿನ್ನ ದುರ್ಮಂತ್ರಿತ್ವದ ಫಲವಾಗಿ ವಿಜಯೇಚ್ಛುಗಳಾದ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಭಯಂಕರವಾದ ಯುದ್ಧವು ಪುನಃ ಪ್ರಾರಂಭವಾಯಿತು.

ದುರ್ಯೋಧನನು ಘೋಷಣೆಮಾಡುತ್ತಾ ಬಗ್ಗಿದ ಗಿಣ್ಣೆದ್ದ ಬಾಣದಿಂದ ಸುವರ್ಣಭೂಷಿತವಾಗಿದ್ದ ಭೀಮಸೇನನ ಧ್ವಜವನ್ನು ಕತ್ತರಿಸಿದನು. ಸಣ್ಣ-ಸಣ್ಣ ಗಂಟೆಗಳ ಸಮೂಹದಿಂದ ಯುಕ್ತವಾಗಿದ್ದ, ನೋಡಲು ಬಹಳ ಸುಂದರವಾಗಿದ್ದ, ಸುಮನೋಹರವಾಗಿದ್ದ ಆ ಧ್ವಜವು ಭೀಮಸೇನನು ನೋಡುತ್ತಿದ್ದಂತೆಯೇ ಕೆಳಕ್ಕೆ ಬಿದ್ದಿತು. ಪುನಃ ನರಾಧಿಪನಾದ ದುರ್ಯೋಧನನು ಕರಿಕರೋಪಮವಾದ ಭೀಮಸೇನನ ಚಿತ್ರಧನುಸ್ಸನ್ನು ನಿಶಿತವಾದ ಅಲುಗಿನಿಂದ ಕೂಡಿದ್ದ ಕ್ಷುರದಿಂದ ಕತ್ತರಿಸಿದನು. ಧನುಸ್ಸಿನಿಂದ ವಿಹೀನನಾಗಿದ್ದ, ಮಹಾತೇಜಸ್ಸಿನಿಂದ ಕೂಡಿದ್ದ ಭೀಮಸೇನನು

ರಥಶಕ್ತಿಯಿಂದ ನಿನ್ನ ಮಗನ ವಕ್ಷಃಸ್ಥಳದಲ್ಲಿ ಬಲಪೂರ್ವಕವಾಗಿ ಪ್ರಹರಿಸಿದನು. ಒಡನೆಯೇ ನಿನ್ನ ಮಗನು ವಿಮೋಹಗೊಂಡವನಾಗಿ ಪೀಠದ ಪಕ್ಕಕ್ಕೆ ಸರಿದು ಕುಳಿತನು. ದುರ್ಯೋಧನನು ಮೂರ್ಛಿತನಾಗಲಾಗಿ ಪುನಃ ಭೀಮಸೇನನು ಕ್ಷುರಪ್ರದಿಂದ ದುರ್ಯೋಧನನ ಸಾರಥಿಯ ತಲೆಯನ್ನು ಶರೀರದಿಂದ ಪ್ರತ್ಯೇಕಿಸಿದನು. ಸೂತನು ಹತನಾಗಿ ಕೆಳಗೆ ಬೀಳು



ತ್ತಲೇ ಅನಿಯಂತ್ರಿತವಾದ ಕುದುರೆಗಳು ರಥವನ್ನೆಳೆದುಕೊಂಡು ಅವುಗಳಿಗೆ ಇಷ್ಟಬಂದ ಕಡೆಗೆ ಓಡಿಹೋದುವು. ಅದನ್ನು ನೋಡಿದ ಸೈನಿಕರು ಹಾಹಾಕಾರಮಾಡಿದರು. ದುರ್ಯೋಧನನ ರಕ್ಷಣಾರ್ಥವಾಗಿ ಮಹಾರಥನಾದ ಅಶ್ವತ್ಥಾಮನೂ, ಕೃಪ-ಕೃತವರ್ಮರೂ ಧಾವಿಸಿ ಬಂದರು. ಕುರುಸೈನ್ಯವು ಅಸ್ತವ್ಯಸ್ತಗೊಳ್ಳಲಾಗಿ ದುರ್ಯೋಧನನ ಅನುಯಾಯಿಗಳು ಭಯಗ್ರಸ್ತ

ರಾದರು. ಆ ಸಮಯದಲ್ಲಿ ಗಾಂಡೀವಧನ್ವನಾದ ಅರ್ಜುನನು ಧನುಸ್ಸನ್ನು ಟೇಂಕರಿಸುತ್ತಾ ಅವರೆಲ್ಲರನ್ನೂ ಬಾಣಗಳಿಂದ ಸಂಹರಿಸಿದನು. ಇತ್ತಲಾಗಿ ಅಸಹನೆಯಿಂದ ಕೂಡಿದ್ದ ಯುಧಿಷ್ಠಿರನು ಮನೋವೇಗಯುಕ್ತವಾದ, ದಂತದ ಬಣ್ಣದಂತೆ ಬಿಳಿಯ ಬಣ್ಣದ ಕುದುರೆಗಳನ್ನು ತಾನೇ ನಿಯಂತ್ರಿಸುತ್ತಾ ಮದ್ರೇಶನಾದ ಶಲ್ಯನನ್ನು ಆಕ್ರಮಿಸಿದನು. ಆಗ ಕುಂತೀಪುತ್ರನಾದ ಯುಧಿಷ್ಠಿರನಲ್ಲಿ ನಾವು ಪರಮಾಶ್ಚರ್ಯಕರವಾದ ಬದಲಾವಣೆಯನ್ನು ಗಮನಿಸಿದೆವು. ಅದಕ್ಕೆ ಮೊದಲು ಮೃದುಸ್ವಭಾವದವನೂ–ಜಿತೇಂದ್ರಿಯನೂ ಆಗಿದ್ದ ಯುಧಿಷ್ಠಿರನು ಕಠೋರಸ್ವಭಾವದವನಾದನು. ಕೌಂತೇಯನು ಕಣ್ಣುಗಳನ್ನರಳಿಸಿಕೊಂಡು ಕೋಪದಿಂದ ಕಂಪಿಸುತ್ತಾ ನಿಶಿತವಾದ ಬಾಣಗಳಿಂದ ನೂರಾರು-ಸಾವಿರಾರು ಯೋಧರನ್ನು ಸಂಹರಿಸಿದನು. ಇಂದ್ರನು ಉತ್ತಮವಾದ ವಜ್ರಾಯುಧಪ್ರಹಾರಗಳಿಂದ ಪರ್ವತಗಳನ್ನು ಕೆಳಗುರುಳಿಸಿದಂತೆ–ಪಾಂಡವಜ್ಯೇಷ್ಠನಾದ ಯುಧಿಷ್ಠಿರನು ಯಾವ ಯಾವ ಸೈನ್ಯವನ್ನು ಎದುರಿಸುತ್ತಿದ್ದನೋ–ಆಯಾ ಸೈನ್ಯಗಳನ್ನು ಬಾಣಗಳಿಂದ ಧ್ವಂಸಮಾಡುತ್ತಿದ್ದನು. ಪ್ರಬಲವಾದ ಗಾಳಿಯು ಮೇಘಗಳನ್ನು ಛಿನ್ನ-ಭಿನ್ನಗೊಳಿಸುವಂತೆ ಬಲಿಷ್ಠನಾದ ಯುಧಿಷ್ಠಿರನು ಏಕಾಕಿಯಾಗಿ ಅಶ್ವ-ಸಾರಥಿ-ಧ್ವಜ-ರಥಗಳಿಂದ ಯುಕ್ತರಾಗಿದ್ದ ಅನೇಕರಥಿಕರನ್ನು ಧ್ವಂಸಮಾಡುತ್ತಾ, ಕೆಳಕ್ಕೆ ಬೀಳಿಸುತ್ತಾ ರಣರಂಗದಲ್ಲಿ ಯುದ್ಧವೆಂಬ ಆಟವಾಡುತ್ತಿದ್ದನು. ಕ್ರುದ್ಧನಾದ ರುದ್ರನು ಪಶುಗಳನ್ನು ಸಂಹರಿಸುವಂತೆ– ಕ್ರುದ್ಧನಾದ ಯುಧಿಷ್ಠಿರನು ಕುದುರೆಸವಾರರನ್ನೂ, ಕುದುರೆಗಳನ್ನೂ, ಪದಾತಿಗಳನ್ನೂ ಸಾವಿರಾರು ತುಂಡುಗಳನ್ನಾಗಿ ಮಾಡಿ ಧ್ವಂಸಮಾಡಿದನು. ಬಾಣಗಳ ವೃಷ್ಟಿಯಿಂದ ರಣರಂಗವನ್ನೇ ಶೂನ್ಯಗೊಳಿಸಿ (ರಣರಂಗದಲ್ಲಿದ್ದ ಸೈನಿಕರೆಲ್ಲರನ್ನೂ ಸಂಹರಿಸಿ)–'ತಿಷ್ಠ ಶಲ್ಯ! ತಿಷ್ಠ!– ನಿಲ್ಲು ಶಲ್ಯನೇ! ನಿಲ್ಲು'–ಎಂದು ಕೂಗುತ್ತಾ ಯುಧಿಷ್ಠಿರನು ಮದ್ರೇಶನನ್ನು ಆಕ್ರಮಿಸಿದನು. ಭಯಂಕರ ಕರ್ಮನಾದ ಯುಧಿಷ್ಠಿರನು ಯುದ್ಧದಲ್ಲಿ ತೋರಿಸಿದ ಅತುಲಪರಾಕ್ರಮವನ್ನು ಕಂಡು ನಿನ್ನ ಸೈನಿಕರೆಲ್ಲರೂ ಭಯದಿಂದ ನಡುಗಿದರು. ಆದರೆ ಶಲ್ಯನೊಬ್ಬನು ಮಾತ್ರ ಧೈರ್ಯದಿಂದ ಯುಧಿಷ್ಠಿರನನ್ನು ಎದುರಿಸಿ ನಿಂತನು. ಅತ್ಯಂತಕುಪಿತರಾಗಿದ್ದ ಶಲ್ಯ-ಧರ್ಮಜರು ಶಂಖಗಳನ್ನೂದಿ ಒಬ್ಬರು

ಮತ್ತೊಬ್ಬರನ್ನು ಯುದ್ಧಕ್ಕಾಗಿ ಆಹ್ವಾನಿಸುತ್ತಾ, ವೀರಗರ್ಜನೆಗಳಿಂದ ಒಬ್ಬರು ಮತ್ತೊಬ್ಬರನ್ನು ಭಯಪಡಿಸುತ್ತಾ ಭೀಕರಯುದ್ಧದಲ್ಲಿ ತೊಡಗಿದರು. ಶಲ್ಯನು ಬಾಣಗಳ ಸುರಿಸುವಿಕೆಯಿಂದ ಯುಧಿಷ್ಠಿರನನ್ನು ಬಹಳವಾಗಿ ಪೀಡಿಸಿದನು. ಅದಕ್ಕೆ ಪ್ರತಿಯಾಗಿ ಕೌಂತೇಯನೂ ಮದ್ರರಾಜನನ್ನು ಬಾಣಗಳಿಂದ ಮುಚ್ಚಿದನು. ಪರಸ್ಪರವಾಗಿ ಬಿಡುತ್ತಿದ್ದ, ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ ಗಾಯಗೊಂಡ ಮದ್ರರಾಜ-ಯುಧಿಷ್ಠಿರರು ಶರೀರಗಳಿಂದ ರಕ್ತದ ಕೋಡಿಯನ್ನೇ ಹರಿಸುತ್ತಿರುವಂತೆ ಕಾಣುತ್ತಿದ್ದರು. ರಕ್ತದಿಂದ ತೋಯ್ದುಹೋಗಿದ್ದ ಅವರು–ವಸಂತಕಾಲದಲ್ಲಿ ಹೂಗಳಿಂದ ವ್ಯಾಪ್ತವಾದ ಮುತ್ತುಗದ ಮರಗಳಂತೆಯೇ ಕಾಣುತ್ತಿದ್ದರು. ಪ್ರಾಣಗಳನ್ನೇ ಪಣವನ್ನಾಗಿಟ್ಟು ಯುದ್ಧವೆಂಬ ಜೂಜಾಡುತ್ತಿದ್ದ, ಯುದ್ಧದುರ್ಮದರಾದ, ಮಹಾತ್ಮರಾದ, ದೇದೀಪ್ಯಮಾನರಾಗಿ ಕಾಣುತ್ತಿದ್ದ ಶಲ್ಯ-ಧರ್ಮಜರನ್ನು ನೋಡುತ್ತಿದ್ದ ಎಲ್ಲ ಸೈನಿಕರೂ ಅವರಿಬ್ಬರಲ್ಲಿ ಯಾರು ಜಯಗಳಿಸುವರೆಂಬ ವಿಷಯದಲ್ಲಿ ಯಾವ ವಿಧವಾದ ನಿರ್ಧಾರಕ್ಕೂ ಬರಲಿಲ್ಲ.

**ಹತ್ವಾ ಮದ್ರಾಧಿಪಂ ಪಾರ್ಥೋ ಭೋಕ್ಷ್ಯತೇಽದ್ಯ ವಸುನ್ಧರಾಮ್ ।**
**ಶಲ್ಯೋ ವಾ ಪಾಣ್ಡವಂ ಹತ್ವಾ ದದ್ಯಾದ್ದುರ್ಯೋಧನಾಯ ಗಾಮ್ ।**
**ಇತೀವ ನಿಶ್ಚಯೋ ನಾಭೂದ್ಯೋಧಾನಾಂ ತತ್ರ ಭಾರತ ॥೬೦॥**

ಭಾರತ! ಯುಧಿಷ್ಠಿರನು ಮದ್ರಾಧಿಪತಿಯನ್ನು ಸಂಹರಿಸಿ ವಸುಂಧರೆಯನ್ನು ಉಪಭುಂಜಿಸುತ್ತಾನೆಯೋ ಅಥವಾ ಶಲ್ಯನು ಪಾಂಡವನನ್ನು ಸಂಹರಿಸಿ ಈ ಭೂಮಂಡಲವನ್ನು ದುರ್ಯೋಧನನಿಗೊಪ್ಪಿಸುತ್ತಾನೆಯೋ– ಈ ಎರಡರಲ್ಲಿ ಯಾವುದು ನಡೆಯುತ್ತದೆಂಬುದನ್ನು ನಿಶ್ಚಯಿಸಿ ಹೇಳಲು ಯೋಧರಾರಿಗೂ ಸಾಧ್ಯವಾಗಲಿಲ್ಲ. ಆದರೆ ಯುದ್ಧಮಾಡುತ್ತಿದ್ದ ಯುಧಿಷ್ಠಿರನಿಗೆ ಎಲ್ಲವೂ ಪ್ರದಕ್ಷಿಣವಾಗಿಯೇ (ಅನುಕೂಲವಾಗಿಯೇ) ಪರಿಣಮಿಸುತ್ತಿದ್ದಿತು. ಅನಂತರ ಶಲ್ಯನು ಯುಧಿಷ್ಠಿರನ ಮೇಲೆ ನೂರು ಬಾಣಗಳನ್ನು ಪ್ರಯೋಗಿಸಿದನು. ಧರ್ಮಜನ ಧನುಸ್ಸನ್ನೂ ನಿಶಿತವಾದ ಅಗ್ರಭಾಗದಿಂದ ಕೂಡಿದ್ದ ಬಾಣದಿಂದ ಕತ್ತರಿಸಿದನು. ಒಡನೆಯೇ ಯುಧಿಷ್ಠಿರನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಶಲ್ಯನನ್ನು ಮುನ್ನೂರು ಬಾಣ

ಗಳಿಂದ ಪ್ರಹರಿಸಿ ಅವನ ಧನುಸ್ಸನ್ನೂ ಕ್ಷುರದಿಂದ ಕತ್ತರಿಸಿದನು. ಅನಂತರ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಶಲ್ಯನ ರಥದಲ್ಲಿದ್ದ ನಾಲ್ಕು ಕುದುರೆಗಳನ್ನೂ ಸಂಹರಿಸಿದನು. ಅತ್ಯಂತನಿಶಿತವಾದ ಅಗ್ರಭಾಗಗಳಿಂದ ಕೂಡಿದ್ದ ಎರಡು ಬಾಣಗಳಿಂದ ಶಲ್ಯನ ಇಬ್ಬರು ಪಾರ್ಶ್ವರಕ್ಷಕರನ್ನೂ ಸಂಹರಿಸಿದನು. ದೇದೀಪ್ಯಮಾನವಾಗಿದ್ದ, ಹೊಂಬಣ್ಣದ, ನಿಶಿತವಾಗಿದ್ದ ಭಲ್ಲದಿಂದ ತನ್ನೆದುರಾಗಿ ನಿಂತು ಯುದ್ಧಮಾಡುತ್ತಿದ್ದ ಶಲ್ಯನ ಧ್ವಜವನ್ನೂ ಕತ್ತರಿಸಿದನು. ಅದನ್ನು ನೋಡಿದ ದುರ್ಯೋಧನನ ಸೈನ್ಯವು ಭಗ್ನವಾಗಿ ಹೋಯಿತು. ಯುಧಿಷ್ಠಿರನು ಮದ್ರಾಧಿಪತಿಯನ್ನು ಅಂತಹ ದುರವಸ್ಥೆಗೆ ಈಡುಮಾಡಿದುದನ್ನು ನೋಡಿದ ಅಶ್ವತ್ಥಾಮನು ಧಾವಿಸಿ ಹೋಗಿ ಶಲ್ಯನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಶೀಘ್ರವಾಗಿ ರಣರಂಗದಿಂದ ದೂರಸರಿದನು. ಅವರನ್ನೇ ಹಿಂಬಾಲಿಸಿ ಹೋದ ಯುಧಿಷ್ಠಿರನು ಸ್ವಲ್ಪ ಹೊತ್ತು ಗರ್ಜನೆಮಾಡುತ್ತಲೇ ಇದ್ದನು. ಆ ವೇಳೆಗೆ ಮದ್ರಾಧಿಪನು ಬೇರೊಂದು ರಥದಲ್ಲಿ ಮಂದಸ್ಮಿತವಾಗಿ ಕುಳಿತಿದ್ದನು. ಆ ರಥವು ವಿಧಿವತ್ತಾಗಿ ನಿರ್ಮಿಸಲ್ಪಟ್ಟಿದ್ದಿತು. ಶುಭ್ರವಾಗಿದ್ದಿತು. ಮೇಘದ ಗರ್ಜನೆಗೆ ಅನುರೂಪವಾದ ಗಂಭೀರಧ್ವನಿಯಿಂದ ಕೂಡಿದ್ದಿತು. ಯಂತ್ರೋಪಕರಣಗಳಿಂದ ಸಜ್ಜಾಗಿದ್ದಿತು. ಶತ್ರುಗಳಿಗೆ ರೋಮಾಂಚನವನ್ನುಂಟು ಮಾಡುವುದಾಗಿದ್ದಿತು. ಅಂತಹ ಅಮೋಘವಾದ ರಥದಲ್ಲಿ ಶಲ್ಯನು ಕುಳಿತಿದ್ದನು."

೧೬ನೆಯ ಅಧ್ಯಾಯವು ಮುಗಿಯಿತು.

೧೭ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ)

## ಭೀಮಸೇನನು ಶಲ್ಯನ ಕುದುರೆಗಳನ್ನೂ ಮತ್ತು ಸಾರಥಿಯನ್ನೂ ಸಂಹರಿಸಿದುದು: ಯುಧಿಷ್ಠಿರನು ಶಲ್ಯನನ್ನೂ ಮತ್ತು ಅವನ ತಮ್ಮನನ್ನೂ ಸಂಹರಿಸಿದುದು: ಕೃತವರ್ಮನ ಪರಾಜಯ

ಸಂಜಯನು ಶಲ್ಯನ ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಮದ್ರಾಧಿಪತಿಯು ಬಲವತ್ತರವಾಗಿಯೂ–ವೇಗವತ್ತರವಾಗಿಯೂ ಇದ್ದ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಬಾಣಗಳಿಂದ

ಯುಧಿಷ್ಠಿರನನ್ನು ಗಾಯಗೊಳಿಸಿ ಸಿಂಹನಾದವನ್ನು ಮಾಡಿದನು. ಕ್ಷತ್ರಿಯರ್ಷಭನಾದ, ಅಮೇಯಾತ್ಮನಾದ ಶಲ್ಯನು–ವೃಷ್ಟಿಮಂತನಾದ ಪರ್ಜನ್ಯನಂತೆ–ಪಾಂಡವರ ಪಕ್ಷದಲ್ಲಿದ್ದ ಕ್ಷತ್ರಿಯರನ್ನೂ ಬಾಣಗಳ ವೃಷ್ಟಿಯಿಂದ ಅಭಿಷೇಚಿಸಿದನು. ಸಾತ್ಯಕಿಯನ್ನು ಹತ್ತು ಬಾಣಗಳಿಂದಲೂ, ಭೀಮಸೇನನನ್ನು ಮೂರು ಬಾಣಗಳಿಂದಲೂ, ಸಹದೇವನನ್ನು ಮೂರು ಬಾಣಗಳಿಂದಲೂ ಪ್ರಹರಿಸಿ ಅನೇಕ ಬಾಣಗಳಿಂದ ಯುಧಿಷ್ಠಿರನನ್ನೂ ಪುನಃ ಪೀಡಿಸಿದನು. ಪಂಜುಗಳಿಂದ ಆನೆಗಳನ್ನು ಪೀಡಿಸುವಂತೆ–ಶಲ್ಯನು ಅಶ್ವ-ರಥ-ಕೂಬರಸಹಿತರಾದ ಮಹಾಧನುಷ್ಮಂತರಾದ ಅನ್ಯಯೋಧರನ್ನೂ ಬಾಣಗಳಿಂದ ಪೀಡಿಸತೊಡಗಿದನು. ರಥಿಗಳಲ್ಲಿ ಶ್ರೇಷ್ಠನಾದ ಶಲ್ಯನು–ಆನೆಗಳನ್ನೂ, ಮಾವಟಿಗರನ್ನೂ, ಕುದುರೆಗಳನ್ನೂ, ಕುದುರೆಸವಾರರನ್ನೂ ರಥಿಗಳಿಂದ ಯುಕ್ತವಾಗಿರುವ ರಥಗಳನ್ನೂ ಧ್ವಂಸಮಾಡಿದನು. ಯಜ್ಞವೇದಿಯನ್ನು ದರ್ಭೆಗಳಿಂದ ಆಸ್ತರಣಮಾಡುವಂತೆ–ಆಯುಧಗಳಿಂದ ಸಹಿತವಾದ ಭುಜಗಳನ್ನೂ, ಧ್ವಜಗಳನ್ನೂ ಕತ್ತರಿಸಿ ರಣರಂಗವನ್ನು ಅಸುನೀಗಿದ ಯೋಧರಿಂದ ತುಂಬಿಬಿಟ್ಟನು. ಈ ರೀತಿಯಲ್ಲಿ ಮೃತ್ಯು ಮತ್ತು ಅಂತಕರಂತೆ ಶತ್ರುಪಕ್ಷದ ಸೈನಿಕರನ್ನು ಸತತವಾಗಿ ಸಂಹಾರಮಾಡುತ್ತಿದ್ದ ಶಲ್ಯನನ್ನು ಸಂಕ್ರುದ್ಧರಾದ ಪಾಂಡು-ಪಾಂಚಾಲ-ಸೋಮಕರು ಸುತ್ತುವರಿದರು. ಭೀಮಸೇನ, ಶಿನಿಯ ಪೌತ್ರನಾದ ಸಾತ್ಯಕಿ, ಪುರುಷಶ್ರೇಷ್ಠರಾದ–ಮಾದ್ರಿಯ ಮಕ್ಕಳಾದ ನಕುಲ-ಸಹದೇವರು–ಇವರೆಲ್ಲರೂ ಭೀಮಬಲನಾದ ಯುಧಿಷ್ಠಿರರಾಜನೊಡನೆ ಯುದ್ಧದಲ್ಲಿ ಸಮಾಸಕ್ತನಾಗಿದ್ದ ಸಮರ್ಥಶಾಲಿಯಾದ ಶಲ್ಯನನ್ನು ಯುದ್ಧಕ್ಕೆ ಪ್ರತ್ಯೇಕವಾಗಿ ಆಹ್ವಾನಿಸತೊಡಗಿದರು. ಅನಂತರ ಶೂರರಾದ, ವೀರರಾದ ಪಾಂಡವಯೋಧರು ಯೋಧಶ್ರೇಷ್ಠನಾದ, ನರೇಶ್ವರನಾದ ಶಲ್ಯನನ್ನು ಸಂಧಿಸಿ ಮುನ್ನುಗ್ಗಿಹೋಗದಂತೆ ಅವನನ್ನು ತಡೆದು ಭಯಂಕರವೇಗದಿಂದ ಕೂಡಿದ್ದ ಬಾಣಗಳಿಂದ ಗಾಯಗೊಳಿಸಿದರು. ಭೀಮಸೇನ-ನಕುಲ-ಸಹದೇವ-ಸಾತ್ಯಕಿಯರಿಂದ ರಕ್ಷಿಸಲ್ಪಡುತ್ತಿದ್ದ ಧರ್ಮರಾಜನು ಭಯಂಕರವೇಗದಿಂದ ಕೂಡಿದ್ದ ಬಾಣಗಳಿಂದ ಶಲ್ಯನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ರಣಾಂಗಣದಲ್ಲಿ ಮದ್ರಾಧಿಪತಿಯು ಧರ್ಮಜನ ಬಾಣಗಳಿಂದ ಗಾಯಗೊಂಡುದನ್ನು ನೋಡಿ ನಿನ್ನ ಕಡೆಯ

ಶ್ರೇಷ್ಠರಾದ ರಥಸೈನಿಕರು ದುರ್ಯೋಧನನ ಆಜ್ಞೆಯಂತೆ ಸಜ್ಜಾಗಿ ಮುನ್ನಡೆದು ಶಲ್ಯನನ್ನು ಸುತ್ತುವರಿದು ನಿಂತರು.

ಅನಂತರ ಮದ್ರಾಧಿಪನಾದ ಶಲ್ಯನು ಬಹಳ ಬೇಗ ಯುಧಿಷ್ಠಿರನನ್ನು ಏಳು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಮಹಾತ್ಮನಾದ ಯುಧಿಷ್ಠಿರನು ಭಯಂಕರವಾದ ಆ ಮಹಾಯುದ್ಧದಲ್ಲಿ ಶಲ್ಯನನ್ನು ಒಂಬತ್ತು ಬಾಣಗಳಿಂದ ಗಾಯಗೊಳಿಸಿದನು. ಮಹಾರಥರಾದ ಶಲ್ಯ-ಯುಧಿಷ್ಠಿರರು ಕಿವಿಯ ತುದಿಯವರೆಗೂ ಸೆಳೆದುಬಿಡಲ್ಪಡುತ್ತಿದ್ದ, ಎಣ್ಣೆಯಿಂದ ಹದಮಾಡಲ್ಪಟ್ಟಿದ್ದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಆಚ್ಛಾದಿಸಿದರು. ಮಹಾರಥರಾದ, ಪರಸ್ಪರವಾಗಿ ಛಿದ್ರಾನ್ವೇಷಣದಲ್ಲಿಯೇ ಆಸಕ್ತರಾಗಿದ್ದ, ನೃಪಶ್ರೇಷ್ಠರಾದ, ಮಹಾಬಲಿಷ್ಠರಾದ, ಶತ್ರುಗಳಿಂದ ಎದುರಿಸಲು ಅಸಾಧ್ಯರಾದ ಶಲ್ಯ-ಧರ್ಮರಾಜರು ಬಾಣಗಳ ಮೂಲಕವಾಗಿ ಒಬ್ಬರು ಮತ್ತೊಬ್ಬರನ್ನು ಗಾಯಗೊಳಿಸುತ್ತಿದ್ದರು. ಪರಸ್ಪರವಾಗಿ ಬಾಣ ಸಮೂಹಗಳ ವೃಷ್ಟಿಯಿಂದ ಆಚ್ಛಾದಿತರಾಗುತ್ತಿದ್ದ ಮಹಾತ್ಮರಾದ ಶಲ್ಯ-ಯುಧಿಷ್ಠಿರರ ಧನುಸ್ಸುಗಳ ಶಿಂಜಿನೀಶಬ್ದವು (ಟೇಂಕಾರಶಬ್ದವು) ವಜ್ರಾಯುಧದ (ಸಿಡಿಲಿನ) ಗರ್ಜನೆಗೆ ಸಮಾನವಾಗಿದ್ದಿತು. ಮಾಂಸದ ಲೋಭದಿಂದ ಮಹಾವನದಲ್ಲಿ ಸಂಚರಿಸುವ ವ್ಯಾಘ್ರದ ಮರಿಗಳಂತಿದ್ದ ಮತ್ತು ದಂತಗಳಿಂದ ಕೂಡಿದ ಶ್ರೇಷ್ಠವಾದ ಆನೆಗಳಂತೆ ದೃಪ್ತರಾಗಿದ್ದ ಶಲ್ಯ-ಯುಧಿಷ್ಠಿರರು ಪರಸ್ಪರವಾಗಿ ಬಾಣಗಳಿಂದ ಒಬ್ಬರನ್ನು ಮತ್ತೊಬ್ಬರು ಕ್ಷತ-ವಿಕ್ಷತಗೊಳಿಸುತ್ತಿದ್ದರು. ಬಳಿಕ ಮಹಾತ್ಮನಾದ ಮದ್ರಾಧಿಪತಿಯು ಸೂರ್ಯಾಗ್ನಿಗಳ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಬಾಣದಿಂದ ವೀರನಾದ, ಮಹಾವೇಗಯುಕ್ತನಾದ, ಭೀಮಬಲನಾದ ಯುಧಿಷ್ಠಿರನನ್ನು ಬಲಪೂರ್ವಕವಾಗಿ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಶಲ್ಯನು ಬಿಟ್ಟ ಬಾಣದಿಂದ ಬಹಳವಾಗಿ ಗಾಯಗೊಂಡ ಯುಧಿಷ್ಠಿರನೂ ಸುಪ್ರಮುಕ್ತವಾದ ಬಾಣದಿಂದ ಮಹಾತ್ಮನಾದ ಮದ್ರಾಧಿಪತಿಯನ್ನು ಪ್ರಹರಿಸಿದನು. (ಶಲ್ಯನು ಮೂರ್ಛಿತನಾದುದನ್ನು ಕಂಡು) ಕುರುಶ್ರೇಷ್ಠನಾದ ಯುಧಿಷ್ಠಿರನು ಆನಂದತುಂದಿಲನಾದನು. ಸ್ವಲ್ಪಹೊತ್ತು ಕಳೆದ

ನಂತರ ಇಂದ್ರಸದೃಶಪ್ರಭಾವನಾದ, ಪಾರ್ಥಿವೇಂದ್ರನಾದ ಶಲ್ಯನು ಮೂರ್ಛೆಯಿಂದ ಎಚ್ಚರಗೊಂಡು ಕ್ರೋಧದಿಂದ ಕೆಂಗಣ್ಣನಾಗಿ ನಿಶಿತವಾದ ನೂರು ಬಾಣಗಳಿಂದ ಪಾರ್ಥನನ್ನು ಬಹಳ ಬೇಗ ಪ್ರಹರಿಸಿದನು. ಮಹಾತ್ಮನಾದ ಧರ್ಮಪುತ್ರನು ಕೋಪದಿಂದ ಪ್ರತೀಕಾರಮಾಡಲು ತ್ವರೆಮಾಡುತ್ತಾ ಒಂಬತ್ತು ಬಾಣಗಳಿಂದ ಶಲ್ಯನ ವಕ್ಷಃಸ್ಥಳವನ್ನೂ ಮತ್ತು ಸುವರ್ಣಮಯವಾಗಿದ್ದ ಕವಚವನ್ನೂ ಭೇದಿಸಿ ಪುನಃ ಆರು ಬಾಣಗಳಿಂದ ಶಲ್ಯನನ್ನೂ ಪ್ರಹರಿಸಿದನು. ಬಳಿಕ ಮದ್ರಾಧಿಪತಿಯು ಸುದೀರ್ಘವಾಗಿ ಧನುಸ್ಸನ್ನು ಸೆಳೆದು ಅನೇಕಬಾಣಗಳನ್ನು ಧರ್ಮಜನ ಮೇಲೆ ಸುರಿಸಿದನು. ಮತ್ತೆರಡು ಬಾಣಗಳಿಂದ ಕುರುಪುಂಗವನಾದ ಯುಧಿಷ್ಠಿರರಾಜನ ಧನುಸ್ಸನ್ನೂ ಕತ್ತರಿಸಿದನು. ಮರುಕ್ಷಣದಲ್ಲಿಯೇ ಮಹಾತ್ಮನಾದ ಯುಧಿಷ್ಠಿರನು ನೂತನವಾದ ಉಗ್ರತರವಾದ ಧನುಸ್ಸನ್ನೆತ್ತಿಕೊಂಡು–ಮಹೇಂದ್ರನು ನಮುಚಿಯನ್ನು ನಿಶಿತವಾದ ಅಗ್ರಭಾಗಗಳುಳ್ಳ ಬಾಣಗಳಿಂದ ಪ್ರಹರಿಸಿದಂತೆ–ಶಲ್ಯನನ್ನು ಶರೀರಾದ್ಯಂತವಾಗಿ ಬಾಣಗಳಿಂದ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಮಹಾತ್ಮನಾದ ಶಲ್ಯನು ಒಂಬತ್ತು ಬಾಣಗಳಿಂದ ಸುವರ್ಣಮಯವಾದ ಮತ್ತು ಸುದೃಢವಾದ ಭೀಮ-ಯುಧಿಷ್ಠಿರರ ಕವಚಗಳನ್ನು ಕತ್ತರಿಸಿ ಅವರಿಬ್ಬರ ಭುಜಗಳನ್ನೂ ಸೀಳಿದನು. ಅಗ್ನಿಯ ಮತ್ತು ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಮತ್ತೊಂದು ಕ್ಷುರದಿಂದ ಯುಧಿಷ್ಠಿರರಾಜನ ಧನುಸ್ಸನ್ನೂ ಧ್ವಂಸಮಾಡಿದನು. ಕೃಪರೂ ಸಹ ಯುಧಿಷ್ಠಿರನ ಸೂತನನ್ನು ಆರು ಬಾಣಗಳಿಂದ ಪ್ರಹರಿಸಿದರು. ಆ ಸೂತನು ಅವನಿಗೆ ಅಭಿಮುಖನಾಗಿಯೇ ಭೂಮಿಯ ಮೇಲೆ ಬಿದ್ದನು. ಮರುಕ್ಷಣದಲ್ಲಿಯೇ ಮದ್ರಾಧಿಪತಿಯು ನಾಲ್ಕು ಬಾಣಗಳಿಂದ ಯುಧಿಷ್ಠಿರನ ನಾಲ್ಕು ಕುದುರೆಗಳನ್ನು ಸಂಹರಿಸಿದನು. ಮಹಾತ್ಮನಾದ ಶಲ್ಯನು ಧರ್ಮರಾಜನ ರಥದ ಕುದುರೆಗಳನ್ನು ಸಂಹರಿಸಿ ಕೂಡಲೇ ಧರ್ಮರಾಜನ ಕಡೆಯ ಯೋಧರನ್ನೂ ಅಪಾರಸಂಖ್ಯೆಯಲ್ಲಿ ವಿನಾಶಗೊಳಿಸಿದನು. ಮದ್ರಾಧಿಪತಿಯಾದ ಶಲ್ಯನು ಯುಧಿಷ್ಠಿರರಾಜನಿಗೆ ಅಂತಹ ದುರವಸ್ಥೆಯನ್ನುಂಟುಮಾಡಲಾಗಿ ಮಹಾತ್ಮನಾದ ಭೀಮಸೇನನು ವೇಗವಂತನಾದ ಮದ್ರಾಧಿಪತಿಯ ಧನುಸ್ಸನ್ನು ಒಂದು ಬಾಣದಿಂದ ಕತ್ತರಿಸಿ, ಮತ್ತೆರಡು ಬಾಣ

ಗಳಿಂದ ನರೇಂದ್ರನಾದ ಶಲ್ಯನನ್ನೂ ಬಹಳವಾಗಿ ಗಾಯಗೊಳಿಸಿದನು. ಕುಪಿತನಾಗಿದ್ದ ಭೀಮಸೇನನು ಪ್ರಯತ್ನಪೂರ್ವಕವಾಗಿ ಮತ್ತೊಂದು ಬಾಣದಿಂದ ಶಲ್ಯನ ಸಾರಥಿಯ ಶಿರಸ್ಸನ್ನು ಪ್ರತ್ಯೇಕಿಸಿದನು. ಭೀಮ



ಸೇನನು ಅತ್ಯಂತಶೀಘ್ರವಾಗಿ ಶಲ್ಯನ ರಥದಲ್ಲಿದ್ದ ನಾಲ್ಕು ಕುದುರೆಗಳನ್ನು ಸಂಹರಿಸಿದನು. ಸರ್ವಧನುಷ್ಮಂತರಲ್ಲಿಯೇ ಶ್ರೇಷ್ಠನಾದ ಭೀಮಸೇನನು ಯುದ್ಧದಲ್ಲಿ ಅತಿವೇಗವಾಗಿ ಸಂಚರಿಸುತ್ತಿದ್ದ ಏಕಾಕಿಯಾಗಿದ್ದ ಶಲ್ಯನನ್ನು ನೂರು ಬಾಣಗಳಿಂದ ಮುಚ್ಚಿದನು. ಮಾದ್ರಿಯ ಮಗನಾದ ಸಹ

ದೇವನೂ ಭೀಮನಂತೆಯೇ ಅನೇಕ ಬಾಣಗಳಿಂದ ಮದ್ರರಾಜನನ್ನು ಪ್ರಹರಿಸಿದನು.*

ತಾನೂ ಮತ್ತು ಸಹದೇವನೂ ಪ್ರಯೋಗಿಸಿದ ಬಾಣಗಳಿಂದ ಶಲ್ಯನು ವಿಮೋಹಿತನಾದುದನ್ನು ಕಂಡು ಭೀಮಸೇನನು ಬಾಣಗಳಿಂದ ಶಲ್ಯನ ಕವಚವನ್ನು ಕತ್ತರಿಸಿದನು. ಭೀಮಸೇನನಿಂದ ಕತ್ತರಿಸಲ್ಪಟ್ಟ ಕವಚದಿಂದ ಕೂಡಿದ್ದ ಮಹಾತ್ಮನಾದ ಮದ್ರಾಧಿಪತಿಯು ಸಹಸ್ರನಕ್ಷತ್ರಚಿಹ್ನೆಗಳಿಂದ ಯುಕ್ತವಾದ ಗುರಾಣಿಯನ್ನೂ ಮತ್ತು ಕತ್ತಿಯನ್ನೂ ಹಿಡಿದುಕೊಂಡು ರಥದಿಂದ ಧುಮುಕಿ ಯುಧಿಷ್ಠಿರನ ಕಡೆಗೆ ಧಾವಿಸಿದನು. ಭೀಮಬಲನಾದ ಶಲ್ಯನು ಅಡ್ಡಲಾಗಿ ಬಂದ ನಕುಲನ ರಥದ ಈಷಾದಂಡವನ್ನು ಕತ್ತರಿಸಿ ಯುಧಿಷ್ಠಿರನನ್ನು ಆಕ್ರಮಿಸಿದನು. ಕ್ರುದ್ಧನಾದ ಯಮರಾಜನಂತೆಯೇ ಮುಂದೆ-ಮುಂದೆ ನೆಗೆದುಕೊಂಡು ಬರುತ್ತಿದ್ದ ಶಲ್ಯರಾಜನನ್ನು ಧೃಷ್ಟದ್ಯುಮ್ನ, ದ್ರೌಪದಿಯ ಮಕ್ಕಳು, ಶಿಖಂಡೀ, ಸಾತ್ಯಕಿ–ಇವರೆಲ್ಲರೂ ಒಡನೆಯೇ ಸುತ್ತುಗಟ್ಟಿದರು. ಮಹಾತ್ಮನಾದ ಭೀಮಸೇನನು ಒಂಬತ್ತು ಪೃಷತ್ಕಗಳಿಂದ ಶಲ್ಯನ ಅಪ್ರತಿಮವಾದ ಗುರಾಣಿಯನ್ನು ಕತ್ತರಿಸಿದನು. ಪ್ರಹೃಷ್ಟನಾದ ಭೀಮಸೇನನು ನಿನ್ನ ಸೈನ್ಯದ ಮಧ್ಯದಲ್ಲಿ ಗರ್ಜನೆಮಾಡುತ್ತಾ ಶಲ್ಯನು ಹಿಡಿದಿದ್ದ ಕತ್ತಿಯನ್ನು ಭಲ್ಲಗಳಿಂದ ಅವನ ಮುಷ್ಟಿಯ ಪ್ರದೇಶದಲ್ಲಿ ಕತ್ತರಿಸಿದನು. ಭೀಮನ ಅಂತಹ ಮಹಾಸಾಹಸಕಾರ್ಯವನ್ನು ನೋಡಿ ಪಾಂಡವರ ಕಡೆಯ ಶ್ರೇಷ್ಠರಥಿಕರು ನಗುತ್ತಾ ಗಟ್ಟಿಯಾಗಿ ಸಿಂಹನಾದಗಳನ್ನು ಮಾಡಿದರು; ಚಂದ್ರಸದೃಶವಾದ ಶಂಖಗಳನ್ನು ಊದಿದರು. ಎದುರಿಸಲು ಅಸಾಧ್ಯವಾಗಿದ್ದ ಕೌರವಸೈನ್ಯವು ಅಂತಹ ಭಯಂಕರವಾದ ಶಬ್ದಗಳಿಂದ ಸಂತಪ್ತವಾಗಿ ವಿಷಣ್ಣವಾಯಿತು;

---

*೨೭ ಮತ್ತು ೨೮ನೆಯ ಶ್ಲೋಕಗಳು ವಿರೋಧಾಭಾಸಗಳಿಂದ ಕೂಡಿವೆ. ಭೀಮಸೇನನು ಶಲ್ಯನ ಕುದುರೆಗಳನ್ನೂ ಮತ್ತು ಸೂತನನ್ನೂ ಸಂಹರಿಸಿದ ನಂತರ ಶಲ್ಯನು ರಣಾಂಗಣದಲ್ಲಿ ವೇಗವಾಗಿ ಸಂಚರಿಸುವ ಸಾಧ್ಯತೆಯೇ ಇಲ್ಲ. ಅವನು ಬೇರೆಯ ರಥದಲ್ಲಿ ಕುಳಿತುದೂ ಈ ಮಧ್ಯದಲ್ಲಿ ಬಂದಿರುವುದಿಲ್ಲ. 'ನೂತನರಥದಲ್ಲಿ ಕುಳಿತು' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಈ ಎರಡು ಶ್ಲೋಕಗಳೂ ಎಲ್ಲ ಪುಸ್ತಕಗಳಲ್ಲಿಯೂ ಯಥಾವತ್ತಾಗಿಯೇ ಇವೆ.

ಮೃತಕಲ್ಪವಾಯಿತು. ರಕ್ತದಿಂದ ತೋಯ್ದುಹೋದ ಅವಯವಗಳಿಂದ ಕೂಡಿದ್ದ ಆ ಸೈನ್ಯವು ದಿಕ್ಕುಗಾಣದೇ ಸ್ತಬ್ಧವಾಗಿ ನಿಂತುಬಿಟ್ಟಿತು. ಭೀಮನೇ ಮೊದಲಾದ ಪಾಂಡವಯೋಧಮುಖ್ಯರ ಬಾಣಗಳಿಂದ ಆಚ್ಛಾದಿತನಾಗಿದ್ದ ಮದ್ರರಾಜನು–ಮೃಗದ ಸಲುವಾಗಿ ಸಿಂಹವು ಓಡಿಹೋಗುವಂತೆ–ಬಹಳ ಶೀಘ್ರವಾಗಿ ಯುಧಿಷ್ಠಿರನ ಸಮೀಪಕ್ಕೆ ಧಾವಿಸಿದನು. ಕುದುರೆಗಳಿಂದಲೂ–ಸೂತನಿಂದಲೂ ವಿಹೀನನಾಗಿದ್ದ, ಕ್ರೋಧದಿಂದ ಉದ್ದೀಪ್ತನಾಗಿದ್ದ ಧರ್ಮರಾಜನು ಪ್ರಜ್ವಲಿಸುವ ಅಗ್ನಿಯಂತೆಯೇ ಕಾಣುತ್ತಿದ್ದನು. ಮದ್ರಾಧಿಪತಿಯು ತನ್ನ ಬಳಿಗೆ ವೇಗವಾಗಿ ಬರುತ್ತಿರುವುದನ್ನು ನೋಡಿ ಯುಧಿಷ್ಠಿರನು ಬಲಪೂರ್ವಕವಾಗಿ ಅವನನ್ನು ಆಕ್ರಮಿಸಿದನು. ಆ ಸಮಯದಲ್ಲಿ ಸೂತಾಶ್ವರಹಿತನಾಗಿದ್ದ ಧರ್ಮರಾಜನು ಶ್ರೀಕೃಷ್ಣನು ಹೇಳಿದ್ದ ಮಾತನ್ನು ಸ್ಮರಣೆಗೆ ತಂದುಕೊಂಡು ಶಲ್ಯನ ವಿನಾಶಕ್ಕಾಗಿ ದೃಢನಿಶ್ಚಯ ಮಾಡಿದನು. ಸೂತಾಶ್ವಗಳಿಂದ ವಿಹೀನನಾಗಿದ್ದ, ರಥದಲ್ಲಿ ನಿಂತಿದ್ದ ಧರ್ಮಜನು ಶಲ್ಯನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸುವ ಇಚ್ಛೆಯಿಂದಿದ್ದನು. ಮಹಾತ್ಮನಾದ ಶಲ್ಯನು ಮಾಡಿದ ಸಾಹಸಕರ್ಮಗಳೆಲ್ಲವನ್ನೂ ಮಹಾತ್ಮನಾದ ಧರ್ಮಜನು ನೋಡಿದ್ದನು ಮತ್ತು ಕೇಳಿದ್ದನು. ಅಂದಿನ ಮಹಾಯುದ್ಧದಲ್ಲಿ ತನ್ನ ಭಾಗವು ಉಳಿದಿರುವುದೆಂಬುದನ್ನು ಯುಧಿಷ್ಠಿರನು ಮನಗಂಡು ಶಲ್ಯನನ್ನು ವಧಿಸಬೇಕೆಂದು ಮನಸ್ಸುಮಾಡಿ ಇಂದ್ರಾವರಜನಾದ ಶ್ರೀಕೃಷ್ಣನು ಹೇಳಿದಂತೆಯೇ ಮಾಡಿದನು. ಅನಂತರ ಧರ್ಮರಾಜನು ಮಣಿಗಳಿಂದ ಸಮಲಂಕೃತವಾಗಿದ್ದ, ಸುವರ್ಣಮಯವಾದ ದಂಡದಿಂದ ಕೂಡಿದ್ದ, ಚಿನ್ನದಂತೆ ಪ್ರಕಾಶಮಾನವಾಗಿದ್ದ ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದುಕೊಂಡನು. ಪ್ರದೀಪ್ತವಾಗಿದ್ದ ಕಣ್ಣುಗಳನ್ನು ಚೆನ್ನಾಗಿ ಅರಳಿಸಿ ಕೋಪಗೊಂಡ ಮನಸ್ಸಿನಿಂದ ಶಲ್ಯರಾಜನನ್ನೊಮ್ಮೆ ದುರುಗುಟ್ಟಿಕೊಂಡು ನೋಡಿದನು. ಕೌರವೇಶ್ವರ! ಪಾಪರಹಿತನಾದ, ಪೂತಾತ್ಮನಾದ, ಕಲ್ಮಷರಹಿತನಾದ ಯುಧಿಷ್ಠಿರನು ರೋಷಪೂರ್ಣನಾಗಿ ದಿಟ್ಟಿಸಿ ನೋಡಿದರೂ ಮದ್ರೇಶ್ವರನು ಭಸ್ಮೀಭೂತನಾಗಲಿಲ್ಲ. ಅದು ನಿಶ್ಚಯವಾಗಿಯೂ ನನಗೆ ಪರಮಾದ್ಭುತವಾಗಿ ಕಂಡಿತು. ಅನಂತರ ಕುರುಪ್ರವೀರನಾದ ಮಹಾತ್ಮನಾದ, ಯುಧಿಷ್ಠಿರನು ಸುಂದರವಾಗಿದ್ದ, ಭಯಂಕರವಾದ ದಂಡದಿಂದ ಕೂಡಿದ್ದ,

ಶ್ರೇಷ್ಠವಾದ ಮಣಿರತ್ನಗಳನ್ನೊಳಗೊಂಡು ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದ ಶಕ್ತ್ಯಾಯುಧವನ್ನು ಬಹಳ ಶೀಘ್ರವಾಗಿ ಮದ್ರಾಧಿಪತಿಯ ಮೇಲೆ ಪ್ರಯೋಗಿಸಿದನು. ಬಲಪೂರ್ವಕವಾಗಿ ಯುಧಿಷ್ಠಿರನಿಂದ ಪ್ರಮುಕ್ತವಾದ ಪ್ರದೀಪ್ತವಾದ, ಬೆಂಕಿಯ ಕಿಡಿಗಳಿಂದ ಯುಕ್ತವಾಗಿದ್ದ, ಬಹಳ ಶೀಘ್ರವಾಗಿ ಶಲ್ಯನ ಮೇಲೆ ಬೀಳುತ್ತಿದ್ದ, ಪ್ರಳಯಕಾಲದಲ್ಲಿ ಆಕಾಶದಿಂದ ಬೀಳುವ ಮಹೋಲ್ಕೆಯಂತೆಯೇ ಕಾಣುತ್ತಿದ್ದ ಆ ಶಕ್ತ್ಯಾಯುಧವನ್ನು ಅಲ್ಲಿ ಸೇರಿದ್ದ ಎಲ್ಲ ಕುರುಗಳೂ ವೀಕ್ಷಿಸಿದರು. ಪಾಶವನ್ನು ಕೈಯಲ್ಲಿ ಹಿಡಿದಿರುವ ಕಾಳರಾತ್ರಿಯಂತೆಯೇ ಕಾಣುತ್ತಿದ್ದ, ಯಮರಾಜನ ದಾದಿಯಂತೆ ಉಗ್ರವಾದ ರೂಪದಿಂದ ಕೂಡಿದ್ದ, ಬ್ರಹ್ಮದಂಡಸದೃಶವಾಗಿದ್ದ, ಅಮೋಘವಾಗಿದ್ದ ಶಕ್ತ್ಯಾಯುಧವನ್ನು ಧರ್ಮರಾಜನು ಪ್ರಯತ್ನಪೂರ್ವಕವಾಗಿ ಶಲ್ಯನ ಮೇಲೆ ಪ್ರಯೋಗಿಸಿದನು. ಪಾಂಡವರಿಂದ ಗಂಧ, ಮಾಲೆ, ಶ್ರೇಷ್ಠವಾದ ಆಸನ, ಪಾನ-ಭೋಜನಾದಿಗಳಿಂದ ಪ್ರಯತ್ನಪೂರ್ವಕವಾಗಿ ಅರ್ಚಿಸಲ್ಪಡುತ್ತಿದ್ದ, ಪ್ರಳಯಕಾಲದ ಅಗ್ನಿಗೆ ಸಮಾನವಾಗಿದ್ದ, ಪ್ರಜ್ವಲಿಸುತ್ತಿದ್ದ, ಅಥರ್ವಾಂಗಿರಸಮಂತ್ರಗಳಿಂದ ಅಭಿಮಂತ್ರಿತಳಾದ ಕೃತ್ಯೆಯಂತೆ ಅತ್ಯುಗ್ರವಾಗಿದ್ದ ಶಕ್ತ್ಯಾಯುಧವನ್ನು ಯುಧಿಷ್ಠಿರನು ಶಲ್ಯನ ಮೇಲೆ ಪ್ರಯೋಗಿಸಿದನು. ಆ ಶಕ್ತ್ಯಾಯುಧವು ಈಶಾನನ ಸಲುವಾಗಿ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟಿದ್ದಿತು. ಅದು ಶತ್ರುಗಳ ಪ್ರಾಣಗಳನ್ನೂ ಮತ್ತು ದೇಹಗಳನ್ನೂ ಭಕ್ಷಿಸುವುದಾಗಿದ್ದಿತು. ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಮತ್ತು ನೀರಿನಲ್ಲಿಯೂ ವಾಸಮಾಡುವ ಪ್ರಾಣಿಗಳನ್ನು ಬಲಾತ್ಕಾರವಾಗಿ ಸೆಳೆದು ಸಂಹರಿಸಲೂ ಆ ಶಕ್ತಿಗೆ ಸಾಮರ್ಥ್ಯವಿದ್ದಿತು. ಆ ಶಕ್ತ್ಯಾಯುಧದಲ್ಲಿ ಚಿಕ್ಕ-ಚಿಕ್ಕ ಗಂಟೆಗಳಿದ್ದುವು: ಪತಾಕೆಗಳಿದ್ದುವು; ಮಣಿ-ವಜ್ರಗಳಿದ್ದುವು; ವೈಡೂರ್ಯದಿಂದ ಅದು ಚಿತ್ರಿತವಾಗಿದ್ದಿತು. ಸುವರ್ಣಮಯವಾದ ದಂಡದಿಂದ ಕೂಡಿದ್ದಿತು. ತ್ವಷ್ಟೃಪ್ರಜಾಪತಿಯು (ವಿಶ್ವಕರ್ಮನು) ಆ ಶಕ್ತ್ಯಾಯುಧವನ್ನು ಅತ್ಯಂತಪ್ರಯತ್ನದಿಂದಲೂ, ಯಥೋಚಿತವಾದ ನಿಯಮಾನುಷ್ಠಾನಗಳಿಂದಲೂ ನಿರ್ಮಿಸಿದ್ದನು. ಬ್ರಹ್ಮದ್ವೇಷಿಗಳನ್ನು ವಿನಾಶಗೊಳಿಸುವುದಾಗಿದ್ದ, ಅಮೋಘವಾದ ಆ ಶಕ್ತ್ಯಾಯುಧ

ವನ್ನು ಯುಧಿಷ್ಠಿರನು ಶಲ್ಯನ ಮೇಲೆ ಪ್ರಯೋಗಿಸಿದನು. ಯುಧಿಷ್ಠಿರನ ಬಲದಿಂದಲೂ ಮತ್ತು ಪ್ರಯತ್ನದಿಂದಲೂ ಎಸೆಯಲ್ಪಟ್ಟ ಆ ಶಕ್ತ್ಯಾಯುಧವು ಅತ್ಯಂತವೇಗವಾಗಿ ಹೋಗುತ್ತಿದ್ದಿತು. ಯುಧಿಷ್ಠಿರನು ಪ್ರಯತ್ನಪೂರ್ವಕವಾಗಿ ಆ ಶಕ್ತ್ಯಾಯುಧವನ್ನು ಘೋರವಾದ ಮಂತ್ರಗಳಿಂದ ಅಭಿಮಂತ್ರಿಸಿದ್ದನು. ಮದ್ರಾಧಿಪತಿಯ ವಧೆಯ ಸಲುವಾಗಿಯೇ ಆ ಸಮಯದಲ್ಲಿ ಯುಧಿಷ್ಠಿರನು ಆ ಶಕ್ತ್ಯಾಯುಧವನ್ನು ಶ್ರೇಷ್ಠವಾದ ಮಾರ್ಗದಲ್ಲಿ (ಉತ್ತಮರೀತಿಯಲ್ಲಿ) ಪ್ರಯೋಗಿಸಿದನು. ರುದ್ರದೇವನು ಅಂಧಕಾಸುರನ ಸಂಹಾರದ ಸಲುವಾಗಿ ಅವನನ್ನು ಕೊನೆಗಾಣಿಸುವ ಸಾಮರ್ಥ್ಯವಿದ್ದ ಬಾಣವನ್ನು ಪ್ರಯೋಗಿಸಿದಂತೆ– ಕೋಪದಿಂದ ನೃತ್ಯಮಾಡುತ್ತಿರುವನೋ ಎಂಬಂತೆ ಕಾಣುತ್ತಿದ್ದ ಧರ್ಮಜನು ಸುಂದರವಾದ ಹಸ್ತವನ್ನು ಹೊಂದಿದ್ದ ತನ್ನ ಸುದೃಢವಾದ ತೋಳನ್ನು ಪ್ರಸರಿಸಿ **'ಹತೋಽಸಿ** ಪಾಪ! ಪಾಪಿಷ್ಠನೇ! ನೀನೀಗ ಹತನಾದೆ'–ಎಂದು ಗರ್ಜಿಸುತ್ತಾ ಶಕ್ತ್ಯಾಯುಧವನ್ನು ಶಲ್ಯನ ಮೇಲೆ ಪ್ರಯೋಗಿಸಿದನು. ಸರ್ವಶಕ್ತಿಯನ್ನೂ ಯೋಜಿಸಿ ಯುಧಿಷ್ಠಿರನಿಂದ ಪ್ರಯೋಗಿಸಲ್ಪಟ್ಟ, ಯಾರಿಂದಲೂ ತಡೆಯಲಾಗದಷ್ಟು ವೀರ್ಯಸಂಪನ್ನವಾಗಿದ್ದ, ಉತ್ತಮವಾದ ಆ ಶಕ್ತ್ಯಾಯುಧವನ್ನು ಪ್ರತಿಗ್ರಹಿಸುವ ಸಲುವಾಗಿ–ಅಗ್ನಿದೇವನು ಚೆನ್ನಾಗಿ ಹೋಮಮಾಡಿದ ಆಜ್ಯಧಾರೆಯನ್ನು ಸ್ವೀಕರಿಸುವಾಗ ಚಟಪಟಗುಟ್ಟುವಂತೆ– ಶಲ್ಯನೂ ಚಡಪಡಿಸಿದನು. (ಶಕ್ತ್ಯಾಯುಧದ ಆಘಾತವನ್ನು ಸಹಿಸಲಾಗದೇ ಪರಿತಪಿಸಿದನು.)

ಆ ಶಕ್ತ್ಯಾಯುಧವು ಶಲ್ಯನ ಮರ್ಮಸ್ಥಳಗಳನ್ನು ಸೀಳಿ, ಶುಭ್ರ ವಾಗಿದ್ದ ಮತ್ತು ವಿಶಾಲವಾಗಿದ್ದ ವಕ್ಷಃಸ್ಥಳವನ್ನೂ ಭೇದಿಸಿ, ಸರ್ವತ್ರ ವ್ಯಾಪಿ ಸಿದ್ದ ಶಲ್ಯರಾಜನ ಯಶಸ್ಸನ್ನು ದಹಿಸುತ್ತಾ, ಯಾವ ವಿಧವಾದ ತಡೆಯೂ ಇಲ್ಲದೇ ನೀರನ್ನು ಪ್ರವೇಶಿಸುವಂತೆ–ಭೂಮಿಯೊಳಗೆ ಸೇರಿಕೊಂಡಿತು. ಮೂಗು, ಕಣ್ಣುಗಳು, ಕಿವಿಗಳು ಮತ್ತು ಮುಖಗಳಿಂದ ಹೊರಹೊರಟ ರಕ್ತದಿಂದಲೂ ಮತ್ತು ಗಾಯಗಳಿಂದ ಸ್ರವಿಸುತ್ತಿದ್ದ ರಕ್ತದಿಂದಲೂ ಸಂಪೂರ್ಣವಾಗಿ ತೋಯ್ದುಹೋದ ಶರೀರನಾಗಿದ್ದ ಶಲ್ಯನು, ಕಾರ್ತಿಕೇಯನ ಶಕ್ತ್ಯಾಯುಧದಿಂದ ಪ್ರಹರಿಸಲ್ಪಟ್ಟ, ಗೈರಿಕಾದಿಧಾತುಗಳಿಂದ ಮಿಶ್ರವಾದ ನೀರನ್ನು ಸ್ರವಿಸುತ್ತಿರುವ ಕ್ರೌಂಚಮಹಾಪರ್ವತದಂತಿದ್ದನು. ಕುರುನಂದನ

ನಾದ ಭೀಮಸೇನನಿಂದ ಕತ್ತರಿಸಲ್ಪಟ್ಟ ಕವಚವುಳ್ಳವನಾಗಿದ್ದ, ಇಂದ್ರನ ವಾಹನವಾದ ಐರಾವತದಂತೆ ಮಹಾಕಾಯನಾಗಿದ್ದ, ಮಹಾತ್ಮನಾದ ಶಲ್ಯ ರಾಜನು ಎರಡು ತೋಳುಗಳನ್ನು ಪ್ರಸರಿಸಿ, ವಜ್ರಾಹತವಾದ ಪರ್ವತ ಶಿಖರವು ಕೆಳಕ್ಕೆ ಬೀಳುವಂತೆ–ರಥದಿಂದ ಭೂಮಿಯ ಮೇಲೆ ಬಿದ್ದನು.



ಮದ್ರರಾಜನಾದ ಶಲ್ಯನು ಧರ್ಮಜನ ಮುಂಭಾಗದಲ್ಲಿಯೇ–ಎತ್ತರವಾದ ಇಂದ್ರಧ್ವಜವು ಬೀಳುವಂತೆ–ಭೂಮಿಯ ಮೇಲೆ ಬಿದ್ದನು. ಶಲ್ಯನ ಅವಯವಗಳೆಲ್ಲವೂ ಕ್ಷತ-ವಿಕ್ಷತವಾಗಿದ್ದುವು. ಅವನ ಶರೀರವು ರಕ್ತದಿಂದ ಸಂಪೂರ್ಣವಾಗಿ ತೋಯ್ದುಹೋಗಿದ್ದಿತು. ಎದೆಯನ್ನು ತಬ್ಬಿಕೊಳ್ಳಲು ಧಾವಿಸಿ ಬರುವ ಪತಿಯನ್ನು ಪ್ರಿಯಕಾಂತೆಯು ಆದರಪೂರ್ವಕವಾಗಿ ಪರಿ

ಗ್ರಹಿಸುವಂತೆ–ತನ್ನ ಮೇಲೆ ಬಿದ್ದ ನರಪುಂಗವನಾದ ಶಲ್ಯನನ್ನು ಭೂದೇವಿಯು ಮರ್ಯಾದೆಯೊಡನೆ ಸ್ವೀಕರಿಸಿದಳು. ಪ್ರಿಯತಮೆಯಾದ ಕಾಂತೆಯಂತಿದ್ದ ವಸುಂಧರೆಯನ್ನು ಚಿರಕಾಲದವರೆಗೆ ಉಪಭುಂಜಿಸಿ ಬಳಿಕ ಅವಳನ್ನು ತನ್ನ ಸರ್ವಾಂಗಗಳಿಂದಲೂ ಆಲಿಂಗನೆಮಾಡಿಕೊಂಡು ಮಲಗಿರುವನೋ–ಎಂಬಂತೆ ಶಲ್ಯರಾಜನು ಕಾಣುತ್ತಿದ್ದನು. ಧರ್ಮಮೂಲವಾದ ಯುದ್ಧದಲ್ಲಿ ಧರ್ಮಾತ್ಮನಾದ ಯುಧಿಷ್ಠಿರನಿಂದ ಹತನಾದ ಶಲ್ಯನು–ಯಜ್ಞದಲ್ಲಿ ವಿಧಿಪೂರ್ವಕವಾದ ಆಜ್ಯಾಹುತಿಯನ್ನು ಪಡೆದು ಪೂಜಾದಿಗಳಿಂದ ಆರಾಧಿಸಲ್ಪಟ್ಟು ಪ್ರಶಾಂತನಾಗುವ ಅಗ್ನಿಯಂತೆ ಶಾಂತನಾದನು. ಶಕ್ತ್ಯಾಯುಧಪ್ರಹಾರದಿಂದ ಶಲ್ಯನ ಹೃದಯವು ಭಗ್ನವಾಗಿಹೋಗಿದ್ದಿತು. ಅವನ ಆಯುಧ-ಧ್ವಜಗಳೂ ಛಿನ್ನ-ಭಿನ್ನವಾಗಿ ರಣಾಂಗಣದಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಶಲ್ಯನು ಶಾಂತನಾಗಿಹೋಗಿದ್ದರೂ (ಪ್ರಾಣಹೀನನಾಗಿದ್ದರೂ) ಅವನನ್ನು ಲಕ್ಷ್ಮಿಯು (ಕಾಂತಿಯು) ಬಿಟ್ಟುಹೋಗಲಿಲ್ಲ.

ಅನಂತರ ಯುಧಿಷ್ಠಿರನು ಇಂದ್ರಧನುಸ್ಸಿನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಧನುಸ್ಸನ್ನೆತ್ತಿಕೊಂಡು–ಪಕ್ಷಿರಾಜನಾದ ಗರುಡನು ಸರ್ಪಗಳನ್ನು ವಿನಾಶಗೊಳಿಸುವಂತೆ–ಶತ್ರುಗಳನ್ನು ಯುದ್ಧದಲ್ಲಿ ಧ್ವಂಸ ಮಾಡಿದನು. ಶತ್ರುಗಳ ಶರೀರಗಳನ್ನು ಸುನಿಶಿತವಾದ ಭಲ್ಲಗಳಿಂದ ಕ್ಷಣಮಾತ್ರದಲ್ಲಿ ವಿನಾಶಗೊಳಿಸಿದನು. ಯುಧಿಷ್ಠಿರನ ಬಾಣಗಳ ಸಮೂಹಗಳಿಂದ ಆಚ್ಛಾದಿತರಾದ ನಿನ್ನ ಸೈನಿಕರು ಕಣ್ಣುಗಳನ್ನು ಮುಚ್ಚಿಕೊಂಡರು. ಪರಸ್ಪರ ಸಂಘರ್ಷಣೆಯಿಂದ ಅವರು ಬಹಳವಾಗಿ ಗಾಯಗೊಂಡರು. ದೇಹಗಳಿಂದ ರಕ್ತವನ್ನು ಸುರಿಸುತ್ತಾ ಆಯುಧಗಳಿಂದಲೂ ಪ್ರಾಣಗಳಿಂದಲೂ ವಿಹೀನರಾಗಿಹೋದರು.

ಮಹಾರಾಜ! ಶಲ್ಯನು ಹತನಾಗಿ ಕೆಳಗೆ ಬೀಳಲಾಗಿ, ಎಲ್ಲ ಗುಣ ಗಳಿಂದಲೂ ಅಣ್ಣನಾದ ಶಲ್ಯನಿಗೆ ಅನುರೂಪನಾಗಿದ್ದ, ಯುವಕನಾಗಿದ್ದ, ರಥಿಯಾಗಿದ್ದ ಶಲ್ಯಾನುಜನು ಯುಧಿಷ್ಠಿರನನ್ನು ಆಕ್ರಮಿಸಿದನು. ಮೃತ ನಾದ ಅಣ್ಣನಿಗೆ ಗೌರವವನ್ನು ತೋರಿಸುವ ಸಲುವಾಗಿ (ಭ್ರಾತೃ ಹಂತಕನಿಗೆ ಪ್ರತೀಕಾರಮಾಡಲು) ಯುದ್ಧದುರ್ಮದನಾದ, ನರಶ್ರೇಷ್ಠ ನಾದ ಶಲ್ಯಾನುಜನು ಅನೇಕ ನಾರಾಚಗಳಿಂದ ಯುಧಿಷ್ಠಿರನನ್ನು

ಗಾಯಗೊಳಿಸಿದನು. ಧರ್ಮರಾಜನು ಅತ್ಯಂತಶೀಘ್ರವಾಗಿ ಶಲ್ಯನ ತಮ್ಮನನ್ನು ಆರು ಬಾಣಗಳಿಂದ ಪ್ರಹರಿಸಿದನು. ಎರಡು ಕ್ಷುರಗಳಿಂದ ಅವನ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿದನು. ಅನಂತರ ಪ್ರದೀಪ್ತವಾಗಿದ್ದ, ಸುದೃಢವಾಗಿದ್ದ, ನಿಶಿತವಾಗಿದ್ದ ಭಲ್ಲದಿಂದ ತನ್ನ ಮುಂದಿದ್ದ ಶಲ್ಯಾನುಜನ ಶಿರಸ್ಸನ್ನು ಕತ್ತರಿಸಿದನು. ಪುಣ್ಯವು ಮುಗಿದುಹೋದನಂತರ



ಸ್ವರ್ಗದಿಂದ ಭ್ರಷ್ಟನಾಗಿ ಕೆಳಕ್ಕೆ ಬೀಳುವ ಜೀವದೋಪಾದಿಯಲ್ಲಿ– ಕುಂಡಲಸಹಿತವಾದ ಶಲ್ಯಾನುಜನ ಶಿರಸ್ಸು ರಥದಿಂದ ಕೆಳಕ್ಕೆ ಬೀಳುತ್ತಿರುವುದು ಕಂಡುಬಂದಿತು. ಶಿರಸ್ಸಿನಿಂದ ವಿಹೀನನಾಗಿದ್ದ ಅವನ ಶರೀರವೂ (ಮುಂಡವು) ರಥದಿಂದ ಕೆಳಕ್ಕೆ ಬಿದ್ದಿತು. ರಕ್ತದಿಂದ ತೋಯ್ದುಹೋಗಿದ್ದ,

ಕತ್ತರಿಸಲ್ಪಟ್ಟ ತಲೆಯುಳ್ಳ ಶಲ್ಯಾನುಜನ ಶರೀರವು ರಥದಿಂದ ಕೆಳಕ್ಕೆ ಬಿದ್ದುದನ್ನು ನೋಡಿದೊಡನೆಯೇ ಕೌರವಸೈನ್ಯವು ಭಗ್ನವಾಗಿ ಹೋಯಿತು. ವಿಚಿತ್ರವಾದ ಕವಚವನ್ನು ಧರಿಸಿದ್ದ ಮದ್ರರಾಜಾನುಜನು ಹತನಾಗಲಾಗಿ ಕುರುಯೋಧರು ಹಾಹಾಕಾರಮಾಡುತ್ತಾ ಪಲಾಯನಮಾಡಿದರು. ಶಲ್ಯಾನುಜನು ಹತನಾದುದನ್ನು ಕಂಡು ಧೂಳಿನಿಂದ ಧೂಸರಿತರಾಗಿದ್ದ ನಿನ್ನ ಕಡೆಯ ಸೈನಿಕರು ಪಾಂಡವರ ಭಯದಿಂದಾಗಿ ಜೀವದಾಸೆಯನ್ನು ತೊರೆದು ಗಾಬರಿಗೊಂಡರು. ಹಾಗೆ ಭಯಪಟ್ಟುಕೊಂಡು ಓಡಿಹೋಗುತ್ತಿದ್ದ ಕೌರವಸೈನಿಕರನ್ನು ಶಿನಿಯ ಮೊಮ್ಮಗನಾದ ಸಾತ್ಯಕಿಯು ಬಾಣಗಳನ್ನು ಸುರಿಸುತ್ತಾ ಹಿಂಬಾಲಿಸಿದನು. ಮಹಾಧನುಷ್ಮಂತನಾದ, ದುರ್ಜಯನಾದ, ದುರಾಸದನಾದ ಸಾತ್ಯಕಿಯು ಕೌರವಸೈನ್ಯದ ಮೇಲೆ ದಾಳಿಮಾಡಲು ಬರುತ್ತಿರುವುದನ್ನು ಕಂಡು ಹಾರ್ದಿಕ್ಯನು ಸ್ವಲ್ಪವಾದರೂ ಭಯವೇ ಇಲ್ಲದವನಂತೆ ಅತ್ಯಂತತ್ವರೆಯಿಂದ ಸಾತ್ಯಕಿಯನ್ನು ಎದುರಿಸಿ ನಿಂತನು. ಶ್ರೇಷ್ಠವಾದ ಕುದುರೆಗಳನ್ನು ಹೊಂದಿದ್ದ, ಮಹಾತ್ಮರಾದ, ವೃಷ್ಣಿವೀರರಾದ ಸಾತ್ಯಕಿ, ಕೃತವರ್ಮರು ಬಲೋನ್ಮತ್ತವಾದ ಎರಡು ಸಿಂಹಗಳಂತೆಯೇ ಪರಸ್ಪರವಾಗಿ ಸಂಘರ್ಷಿಸಿದರು. ಸೂರ್ಯಸಮಾನತೇಜಸ್ವಿಗಳಾದ ಶೈನೇಯ-ಕೃತವರ್ಮರು ಸೂರ್ಯನ ಕಿರಣಗಳೋಪಾದಿಯಲ್ಲಿ ನಿರ್ಮಲವಾಗಿಯೂ ಮತ್ತು ಕಾಂತಿಯುಕ್ತವಾಗಿಯೂ ಇದ್ದ ಬಾಣಗಳಿಂದ ಪರಸ್ಪರವಾಗಿ ಆಚ್ಛಾದಿಸಿದರು.

ವೃಷ್ಣಿಸಿಂಹರಾದ ಸಾತ್ಯಕಿ-ಕೃತವರ್ಮರ ಧನುಸ್ಸುಗಳಿಂದ ಬಲ ಪೂರ್ವಕವಾಗಿ ಬಿಡಲ್ಪಡುತ್ತಿದ್ದ ಶೀಘ್ರಗಾಮಿಗಳಾದ ಬಾಣಗಳು–ಪತಂಗದ ಹುಳುಗಳೋಪಾದಿಯಲ್ಲಿ ಆಕಾಶದಲ್ಲಿ ವ್ಯಾಪಿಸುತ್ತಿದ್ದುದನ್ನು ನಾವು ನೋಡಿ ದೆವು. ಹಾರ್ದಿಕ್ಯನು ಸಾತ್ಯಕಿಯನ್ನು ಹತ್ತು ಬಾಣಗಳಿಂದ ಪ್ರಹರಿಸಿ, ಅವನ ಕುದುರೆಗಳನ್ನೂ ಮೂರು ಬಾಣಗಳಿಂದ ಗಾಯಗೊಳಿಸಿದನು. ಅನಂತರ ಬಗ್ಗಿದ ಗಿಣ್ಣೆದ್ದ ಒಂದು ಬಾಣದಿಂದ ಸಾತ್ಯಕಿಯ ಧನುಸ್ಸನ್ನೂ ಕತ್ತರಿಸಿದನು. ಶಿನಿಪುಂಗವನು–ಹಾರ್ದಿಕ್ಯನಿಂದ ಕತ್ತರಿಸಲ್ಪಟ್ಟ ಶ್ರೇಷ್ಠ ವಾದ ಆ ಧನುಸ್ಸನ್ನು ವಿಸರ್ಜಿಸಿ ಅತ್ಯಂತವೇಗಯುಕ್ತವಾದ ಮತ್ತೊಂದು ಧನುಸ್ಸನ್ನು ಬಹಳ ಬೇಗ ಕೈಗೆತ್ತಿಕೊಂಡನು. ಸರ್ವಧನುಷ್ಮಂತರಲ್ಲಿಯೂ

ವರಿಷ್ಠನಾದ ಸಾತ್ಯಕಿಯು ಶ್ರೇಷ್ಠವಾದ ಆ ಧನುಸ್ಸನ್ನು ಕೈಗೆತ್ತಿಕೊಂಡು ಹತ್ತು ಬಾಣಗಳಿಂದ ಹಾರ್ದಿಕ್ಯನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅನಂತರ ಸುಪ್ರಮುಕ್ತವಾದ ಭಲ್ಲಗಳಿಂದ ಹಾರ್ದಿಕ್ಯನ ರಥದ ನೊಗವನ್ನೂ ಮತ್ತು ಈಷಾದಂಡವನ್ನೂ ಕತ್ತರಿಸಿ, ಬಹಳಬೇಗ ರಥದ ಕುದುರೆಗಳನ್ನೂ ಇಬ್ಬರು ಪಾರ್ಶ್ವರಕ್ಷಕರನ್ನೂ ಸಂಹರಿಸಿದನು. ಶರದ್ವಂತನ ಮಕ್ಕಳಾದ, ವೀರ್ಯವಂತರಾದ ಕೃಪರು, ಕೃತವರ್ಮನು ರಥಹೀನನಾದುದನ್ನು ಕಂಡು ತಮ್ಮ ರಥದಲ್ಲಿ ಅವನನ್ನು ಕುಳ್ಳಿರಿಸಿಕೊಂಡು ರಣರಂಗದಿಂದ ಬಹಳ ದೂರಕ್ಕೆ ಹೊರಟುಹೋದರು. ಮದ್ರರಾಜನು ಹತನಾಗಲಾಗಿ, ಕೃತವರ್ಮನೂ ರಥಹೀನನಾಗಲಾಗಿ, ದುರ್ಯೋಧನನ ಚತುರಂಗಬಲವೂ ಪುನಃ ಯುದ್ಧದಿಂದ ಹಿಮ್ಮೆಟ್ಟಿತು. ಆದರೆ ಆ ಸಮಯದಲ್ಲಿ ಸೈನ್ಯವು ಧೂಳಿನಿಂದ ಆವೃತವಾಗಿದ್ದುದರಿಂದ ದುರ್ಯೋಧನನ ಸೈನ್ಯವು ಪರಾಙ್ಮುಖವಾದುದು ಶತ್ರುಗಳಿಗೆ ಗೋಚರಿಸಲಿಲ್ಲ. ಸೈನಿಕರಲ್ಲಿ ಬಹುಭಾಗ ಹತರಾಗಿಯೇ ಹೋಗಿದ್ದರು. ಆದುದರಿಂದ ಉಳಿದವರು ಸ್ವಾಭಾವಿಕವಾಗಿಯೇ ಯುದ್ಧದಿಂದ ಹಿಮ್ಮೆಟ್ಟಿದರು. ಪುರುಷರ್ಷಭನೇ! ಭಯಂಕರಾಕಾರವಾಗಿ ಎದ್ದಿದ್ದ ಧೂಳು ಸ್ವಲ್ಪಹೊತ್ತಿನಲ್ಲಿಯೇ ವಿಧ-ವಿಧವಾದ ರಕ್ತಸ್ರಾವಗಳಿಂದ ಉಪಶಮನಗೊಂಡುದನ್ನು ನಾವು ನೋಡಿದೆವು. ಆ ಸಮಯದಲ್ಲಿ ತನ್ನ ಸೈನ್ಯವು ಯುದ್ಧರಂಗದಿಂದ ದೂರಸರಿಯುತ್ತಿರುವುದನ್ನು ನೋಡಿ ದುರ್ಯೋಧನನು ಬಹಳ ವೇಗವಾಗಿ ತನ್ನ ಮೇಲೆ ಬೀಳಲು ಬರುತ್ತಿದ್ದ ಪಾರ್ಥರನ್ನು ಏಕಾಕಿಯಾಗಿಯೇ ತಡೆದು ನಿಲ್ಲಿಸಿದನು. ರಥಸಹಿತರಾದ (ರಥಗಳಲ್ಲಿ ಬಂದಿದ್ದ) ಪಾಂಡವರನ್ನೂ, ದ್ರುಪದನ ಮಗನಾದ ಧೃಷ್ಟದ್ಯುಮ್ನನನ್ನೂ, ದುರ್ಧರ್ಷನಾದ ಆನರ್ತರಾಜನನ್ನೂ ನೋಡಿ ಅವರೆಲ್ಲರನ್ನೂ ನಿಶಿತವಾದ ಬಾಣಗಳಿಂದ ನಿರೋಧಿಸಿದನು. ಮರಣಧರ್ಮವಿರುವ ಮನುಷ್ಯರು ತಮ್ಮನ್ನೊಯ್ಯಲು ಬರುವ ಮೃತ್ಯುವನ್ನು ಅತಿಕ್ರಮಿಸಿ ಹೋಗಲಾಗದಂತೆ–ಶತ್ರುಪಕ್ಷದ ಸೈನಿಕರಾರೂ ಆ ಸಮಯದಲ್ಲಿ ದುರ್ಯೋಧನನನ್ನು ಅತಿಕ್ರಮಿಸಿ ಹೋಗಲಾಗಲಿಲ್ಲ. ಆ ಸಮಯಕ್ಕೆ ಸರಿಯಾಗಿ ಹಾರ್ದಿಕ್ಯನೂ ಮತ್ತೊಂದು ರಥದಲ್ಲಿ ಕುಳಿತು ಯುದ್ಧಭೂಮಿಗೆ ಹಿಂದಿರುಗಿದನು. ಅನಂತರ ಯುಧಿಷ್ಠಿರ ರಾಜನು ತ್ವರೆಯಿಂದ ನಿಶಿತವಾದ ನಾಲ್ಕು ಬಾಣಗಳಿಂದ ಕೃತವರ್ಮನ

ನಾಲ್ಕು ಕುದುರೆಗಳನ್ನೂ ಸಂಹರಿಸಿದನು. ನಿಶಿತವಾದ ಅಲುಗಿನಿಂದ ಕೂಡಿದ್ದ ಆರು ಭಲ್ಲಗಳಿಂದ ಕೃಪರನ್ನೂ ಗಾಯಗೊಳಿಸಿದನು.

ಯುಧಿಷ್ಠಿರರಾಜನಿಂದ ಅಶ್ವಹೀನನಾಗಿಯೂ, ರಥಹೀನನಾಗಿಯೂ ಮಾಡಲ್ಪಟ್ಟಿದ್ದ ಹಾರ್ದಿಕ್ಯನನ್ನು ಅಶ್ವತ್ಥಾಮನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಯುಧಿಷ್ಠಿರನ ಸಮೀಪದಿಂದ ಬಹಳ ದೂರಕ್ಕೆ ಕರೆದೊಯ್ದನು. ಬಳಿಕ ಕೃಪರು ಯುಧಿಷ್ಠಿರನನ್ನು ಆರು ಬಾಣಗಳಿಂದ ಗಾಯಗೊಳಿಸಿದರು. ನಿಶಿತವಾದ ಎಂಟು ಶಿಲೀಮುಖಗಳಿಂದ ಯುಧಿಷ್ಠಿರನ ಕುದುರೆಗಳನ್ನೂ ಗಾಯಗೊಳಿಸಿದರು. ಮಹಾರಾಜ! ಪುತ್ರಸಹಿತನಾದ ನಿನ್ನ ದುರ್ಮಂತ್ರಣದ ಕಾರಣದಿಂದಾಗಿ ಯುದ್ಧದ ಕೊನೆಯು ಈ ರೀತಿಯಲ್ಲಿ ಮುಗಿಯಿತು.

ಕುರುಪುಂಗವನಾದ ಯುಧಿಷ್ಠಿರನು ಸಂಗ್ರಾಮದ ಮಧ್ಯದಲ್ಲಿ ಧನುಷ್ಮಂತರಲ್ಲಿ ಶ್ರೇಷ್ಠನಾದ ಶಲ್ಯನನ್ನು ಸಂಹರಿಸಲಾಗಿ, ಒಟ್ಟಾಗಿ ಸೇರಿದ ಪಾರ್ಥರು ಶಲ್ಯನು ಹತನಾಗಿ ಬಿದ್ದಿರುವುದನ್ನು ನೋಡಿ ಪರಮಹೃಷ್ಟ ರಾಗಿ ವಿಜಯಸೂಚಕವಾಗಿ ಶಂಖಗಳನ್ನೂದಿದರು. ಹಿಂದೆ ವೃತ್ರಾಸುರನ ವಧೆಯಾದ ಬಳಿಕ ದೇವತೆಗಳು ದೇವೇಂದ್ರನನ್ನು ಪ್ರಶಂಸೆಮಾಡಿದಂತೆ– ಪಾಂಡವರು ರಣಭೂಮಿಯಲ್ಲಿ ಶಲ್ಯನ ವಧೆಯಾದನಂತರ ಯುಧಿಷ್ಠಿರನನ್ನು ಪ್ರಶಂಸಿಸಿದರು. ಎಲ್ಲರೂ ಸಂಘಟಿತರಾಗಿ ಭೂಮಂಡಲವನ್ನೇ ತಮ್ಮ ಜಯಘೋಷಗಳಿಂದ ಪ್ರತಿಧ್ವನಿಸುತ್ತಾ ನಾನಾವಿಧವಾದ ರಣವಾದ್ಯಗಳ ಶಬ್ದಗಳನ್ನೂ ಮಾಡಿದರು."

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ)

## ಮದ್ರರಾಜನ ಅನುಯಾಯಿಗಳ ವಧೆ: ಕೌರವಸೈನಿಕರ ಪಲಾಯನ

ಸಂಜಯನು ಶಲ್ಯನ ನಿಧನಾನಂತರದ ಪ್ರಕರಣಗಳನ್ನು ವಿವರಿಸುತ್ತಾನೆ:

"ಮಹಾರಾಜ! ಶಲ್ಯನು ಹತನಾದನಂತರ ಅವನ ಅನುಯಾಯಿಗಳಾದ ಏಳು ನೂರು ಮಂದಿ ರಥಿಗಳು ಕೌರವರ ಮಹಾಸೈನ್ಯವನ್ನು ಬಿಟ್ಟು ಪಾಂಡವರನ್ನು ಕೊಲ್ಲಲು ಹೊರಟರು. ದುರ್ಯೋಧನನು ಪರ್ವತಸದೃಶವಾಗಿದ್ದ ಆನೆಯ ಮೇಲೆ ಕುಳಿತಿದ್ದನು. ಅವನ ತಲೆಯ ಮೇಲೆ ಶ್ವೇತಚ್ಛತ್ರವಿದ್ದಿತು. ಸೇವಕರು ಎರಡು ಕಡೆಗಳಲ್ಲಿಯೂ ಚಾಮರಗಳನ್ನು ಬೀಸು



ತ್ತಿದ್ದರು. ಮದ್ರದೇಶದ ರಥಿಗಳು ಹೊರಟುದನ್ನು ನೋಡಿದ ದುರ್ಯೋಧನನು ನ ಗನ್ತವ್ಯಂ-ನ ಗನ್ತವ್ಯಂ' 'ಹೋಗಬೇಡಿರಿ-ಹೋಗಬೇಡಿರಿ'– ಎಂದು ಹೇಳುತ್ತಾ ಅವರನ್ನು ತಡೆಯಲು ಯತ್ನಿಸಿದನು. ದುರ್ಯೋಧನನಿಂದ ಬಾರಿ-ಬಾರಿಗೂ ತಡೆಯಲ್ಪಡುತ್ತಿದ್ದರೂ ಆ ಮದ್ರವೀರರು ಯುಧಿಷ್ಠಿರ

ನನ್ನು ಸಂಹರಿಸುವ ಇಚ್ಛೆಯಿಂದ ಪಾಂಡವರ ಸೈನ್ಯವನ್ನು ಪ್ರವೇಶಿಸಿದರು. ಮದ್ರದೇಶದ ಆ ಶೂರರು ಯುದ್ಧಮಾಡಲು ದೃಢನಿಶ್ಚಯವನ್ನೇ ಮಾಡಿದವ ರಾಗಿ ಗಟ್ಟಿಯಾಗಿ ಧನುಷ್ಟೇಂಕಾರಗಳನ್ನು ಮಾಡುತ್ತಾ ಪಾಂಡವರೊಡನೆ ಯುದ್ಧದಲ್ಲಿ ತೊಡಗಿದರು. ಶಲ್ಯನು ಹತನಾದುದನ್ನೂ, ಮದ್ರರಾಜನಿಗೆ ಪ್ರಿಯವನ್ನುಂಟುಮಾಡುವುದರಲ್ಲಿ ಆಸಕ್ತರಾದ ಮದ್ರಕಮಹಾರಥರಿಂದ ಧರ್ಮರಾಜನು ಪೀಡಿಸಲ್ಪಡುತ್ತಿರುವನೆಂಬುದನ್ನೂ ಕೇಳಿ, ಮಹಾರಥನಾದ ಪಾರ್ಥನು ರಥಘೋಷದಿಂದ ಎಲ್ಲ ದಿಕ್ಕುಗಳನ್ನೂ ತುಂಬುತ್ತಾ ಗಾಂಡೀವ ಧನುಸ್ಸನ್ನು ಟೇಂಕರಿಸುತ್ತಾ ಅಲ್ಲಿಗೆ ಆಗಮಿಸಿದನು. ಅನಂತರ ಅರ್ಜುನ, ಭೀಮ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು, ನರವ್ಯಾಘ್ರನಾದ ಸಾತ್ಯಕಿ, ದ್ರೌಪದಿಯ ಮಕ್ಕಳು, ಧೃಷ್ಟದ್ಯುಮ್ನ, ಶಿಖಂಡೀ, ಸೋಮಕರಿಂದ ಕೂಡಿದ ಪಾಂಚಾಲರು-ಇವರೆಲ್ಲರೂ ಯುಧಿಷ್ಠಿರನನ್ನು ರಕ್ಷಿಸುವ ಇಚ್ಛೆ ಯಿಂದ ಅವನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದರು. ಯುಧಿಷ್ಠಿರನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದು ನಿಂತಿದ್ದ ಪುರುಷರ್ಷಭರಾದ ಪಾಂಡ ವರು-ಮೊಸಳೆಗಳು ಸಮುದ್ರವನ್ನು ಕ್ಷೋಭೆಗೊಳಿಸುವಂತೆ-ಮದ್ರಸೈನ್ಯವನ್ನು ಕ್ಷೋಭೆಗೊಳಿಸುತ್ತಿದ್ದರು. ಸುಂಟರಗಾಳಿಯು ವೃಕ್ಷಗಳನ್ನು ಅಳ್ಳಾಡಿ ಸುವಂತೆ-ಪಾಂಡವರು ಆ ಸೈನ್ಯವನ್ನು ಕಂಪನಗೊಳಿಸುತ್ತಿದ್ದರು. ಪೂರ್ವದಿಕ್ಕಿನ ಗಾಳಿಯಿಂದ ಮಹಾನದಿಯಾದ ಗಂಗೆಯು ಅಲ್ಲೋಲ-ಕಲ್ಲೋಲ ವಾಗುವಂತೆ–ಆ ಮದ್ರಸೈನಿಕರಿಂದ ಪಾಂಡವರ ಸೈನ್ಯವೂ ಅಲ್ಲೋಲ-ಕಲ್ಲೋಲಗೊಂಡಿತು.

ಬಹುಸಂಖ್ಯಾತರಾಗಿದ್ದ ಮಹಾತ್ಮರಾದ ಮದ್ರಕಮಹಾರಥರು ಪಾಂಡವರ ವಿಶಾಲವಾದ ಸೈನ್ಯವನ್ನು ಮಥಿಸುತ್ತಾ 'ಕ್ವ ಸ ರಾಜಾ ಯುಧಿಷ್ಠಿರಃ! ಆ ಯುಧಿಷ್ಠಿರ ರಾಜನೆಲ್ಲಿ ಹೋದನು? ಭ್ರಾತರೋ ವಾಸ್ಯ ತೇ ಶೂರಾಃ ದೃಶ್ಯನ್ತೇ ನೇಹ ಕೇನ ಚ-ಶೂರರಾದ ಅವನ ಅನುಜರಾದರೂ ಯಾವ ಕಾರಣದಿಂದ ನಮಗೆ ಈಗ ಕಾಣಿಸುತ್ತಿಲ್ಲ? ಅವರು ಎಲ್ಲಿ ಹೋದರು?'–ಎಂಬುದಾಗಿ ಕೂಗಿಕೊಳ್ಳುತ್ತಿದ್ದರು. 'ಧೃಷ್ಟ ದ್ಯುಮ್ನ, ಸಾತ್ಯಕಿ, ದ್ರೌಪದಿಯ ಮಕ್ಕಳು, ಮಹಾವೀರರಾದ ಪಾಂಚಾಲರು, ಮಹಾರಥನಾದ ಶಿಖಂಡೀ–ಇವರೆಲ್ಲರೂ ತಪ್ಪಿಸಿಕೊಂಡು ಎಲ್ಲಿಗೆ

ಹೊರಟುಹೋದರು?' ಎಂಬುದಾಗಿಯೂ ಅವರು ಕೂಗಿಕೊಳ್ಳುತ್ತಿದ್ದರು. ಹೀಗೆ ಕೂಗಿಕೊಳ್ಳುತ್ತಿದ್ದ ಮದ್ರರಾಜನ ಅನುಯಾಯಿಗಳಾದ ರಥಿಗಳನ್ನು ಸಾತ್ಯಕಿಯೂ ಮತ್ತು ಮಹಾರಥರಾದ ದ್ರೌಪದಿಯ ಮಕ್ಕಳೂ ಧ್ವಂಸ ಮಾಡಲು ಉಪಕ್ರಮಿಸಿದರು. ಆ ರಥಿಗಳಲ್ಲಿ ಕೆಲವರ ರಥಚಕ್ರಗಳು ಹಾಳಾದುವು. ಕೆಲವರ ಧ್ವಜಗಳು ಛಿನ್ನ-ಭಿನ್ನಗೊಂಡುವು. ಹೀಗೆ ನಿನ್ನ ಕಡೆಯ ಸೈನಿಕರು ಶತ್ರುಗಳಿಂದ ಹತರಾಗುತ್ತಿದ್ದುದು ಕಂಡುಬಂದಿತು. ಸುತ್ತಲೂ ಪಾಂಡವಯೋಧರು ಯುದ್ಧದಲ್ಲಿ ತೊಡಗಿರುವುದನ್ನು ನೋಡಿ ದುರ್ಯೋಧನನು ಮುನ್ನುಗ್ಗಿ ಹೋಗದಂತೆ ಯೋಧರನ್ನು ತಡೆಯುತ್ತಿದ್ದರೂ ಅವರು ವೇಗವಾಗಿ ಮುನ್ನುಗ್ಗಿ ಹೋಗುತ್ತಲೇ ಇದ್ದರು. ದುರ್ಯೋಧನನು ಆ ಯೋಧರನ್ನು ಸಾಂತ್ವನದ ಮಾತುಗಳಿಂದ ಮುನ್ನುಗ್ಗಿ ಹೋಗದಂತೆ ತಡೆಯುತ್ತಿದ್ದನು. ಆದರೆ ಅಲ್ಲಿದ್ದ ಯಾವ ಮಹಾರಥರೂ ಅವನ ಆಜ್ಞೆಯಂತೆ ನಡೆದುಕೊಳ್ಳುತ್ತಿರಲಿಲ್ಲ. ಅನಂತರ ವಚನಪಟುವಾದ ಗಾಂಧಾರರಾಜನ ಮಗನಾದ ಶಕುನಿಯು ದುರ್ಯೋಧನನೊಡನೆ ಹೇಳಿದನು:

"ದುರ್ಯೋಧನ! ನಾವು ನೋಡುತ್ತಿರುವಂತೆಯೇ ಮದ್ರಸೈನ್ಯವು ಶತ್ರುಗಳಿಂದ ಕೊಲ್ಲಲ್ಪಡುತ್ತಿದೆಯಲ್ಲವೇ? ನೀನು ಇಲ್ಲಿಯೇ ನಿಂತಿರುವಾಗ ಹೀಗಾಗುವುದು ಖಂಡಿತವಾಗಿಯೂ ಯುಕ್ತವೆನಿಸುವುದಿಲ್ಲ. 'ಸಹಿತೈಶ್ಚಾಪಿ ಯೋದ್ಧವ್ಯಂ–ನಾವೆಲ್ಲರೂ ಒಟ್ಟಾಗಿ ಸೇರಿಯೇ ಯುದ್ಧಮಾಡಬೇಕು'– ಎಂಬ ನಿಯಮವನ್ನು ನಾವೇ ಮಾಡಿಕೊಂಡಿರುವೆವು. ಹೀಗಿರುವಾಗ ಶತ್ರುಗಳಿಂದ ಮದ್ರಸೈನ್ಯವು ಸತತವಾಗಿ ವಧಿಸಲ್ಪಡುತ್ತಿದ್ದರೂ ಸಹಿಸಿಕೊಂಡು ಏತಕ್ಕಾಗಿ ಸುಮ್ಮನಿರುವೆ?"

"ಗಾಂಧಾರರಾಜ! ಮುನುಗ್ಗಿ ಹೋಗಕೂಡದೆಂದು ಮದ್ರಸೈನಿಕರನ್ನು ನಾನು ಈ ಹಿಂದೆಯೇ ತಡೆದೆನು. ಆದರೆ ನನ್ನ ಮಾತಿನಂತೆ ಯಾರೂ ನಡೆದುಕೊಳ್ಳಲಿಲ್ಲ. ಪಾಂಡವಸೈನ್ಯದೊಳಗೆ ನುಗ್ಗಿ ಹೋಗಿರುವ ಅವರೆಲ್ಲರೂ ಪ್ರಾಯಶಃ ಹತರೇ ಆಗಿದ್ದಾರೆ."

"ದುರ್ಯೋಧನ! ಕ್ರೋಧಾಭಿಭೂತರಾದ ವೀರರು ಯುದ್ಧ ಸಮಯದಲ್ಲಿ ಸಾಮಾನ್ಯವಾಗಿ ಒಡೆಯನ ಆಜ್ಞೆಯನ್ನು ಪರಿಪಾಲಿಸುವುದಿಲ್ಲ.

ಆದುದರಿಂದ ಈ ಸಮಯದಲ್ಲಿ ಅವರ ಮೇಲೆ ಕೋಪಗೊಳ್ಳುವುದು ಉಚಿತವಲ್ಲ. ಆಜ್ಞೆಯನ್ನು ಮೀರಿ ನಡೆದುಕೊಂಡರೆಂಬ ಕಾರಣದಿಂದ ಅವರನ್ನು ಉಪೇಕ್ಷಿಸುವ ಕಾಲವೂ ಇದಲ್ಲ. ಮಹಾಧನುಷ್ಮಂತರಾದ ಶಲ್ಯಾನುಯಾಯಿಗಳನ್ನು ರಕ್ಷಿಸಲು ಗಜಾಶ್ವ-ರಥಸೈನ್ಯಗಳೊಡನೆ ನಾವೆಲ್ಲರೂ ಸಂಘಟಿತರಾಗಿ ಹೋಗೋಣ. ಮಹಾಪ್ರಯತ್ನದಿಂದಲಾದರೂ ನಾವು ಪರಸ್ಪರವಾಗಿ ರಕ್ಷಣೆಯನ್ನು ಮಾಡಿಕೊಳ್ಳೋಣ.”



ಮಹಾರಾಜ! ಹೀಗೆ ಪರಸ್ಪರವಾಗಿ ಸಮಾಲೋಚಿಸಿ ಎಲ್ಲರೂ ಮದ್ರಸೈನಿಕರಿದ್ದೆಡೆಗೆ ತೆರಳಿದರು.

ಶಕುನಿಯಿಂದ ಹೀಗೆ ಹೇಳಲ್ಪಟ್ಟ ದುರ್ಯೋಧನರಾಜನೂ ವಿಶಾಲವಾದ ಸೈನ್ಯದಿಂದ ಪರಿವೃತನಾಗಿ ಸಿಂಹನಾದಮಾಡುತ್ತಾ ಭೂಮಿ

ಯನ್ನೇ ನಡುಗಿಸುವನೋ ಎಂಬಂತೆ ಮದ್ರಸೈನಿಕರು ಪಾಂಡವರೊಡನೆ ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಹೋದನು. 'ಕೊಲ್ಲಿರಿ! ಗಾಯಗೊಳಿಸಿರಿ! ಬಂಧಿಸಿರಿ! ಪ್ರಹರಿಸಿರಿ! ಕತ್ತರಿಸಿರಿ!'–ಇವೇ ಮೊದಲಾದ ಭಯಂಕರವಾದ ವೀರೋಕ್ತಿಗಳು ನಿನ್ನ ಸೈನ್ಯದಲ್ಲಿ ಕೇಳಿಬರುತ್ತಿದ್ದುವು. ಮದ್ರರಾಜನ ಅನುಯಾಯಿಗಳು ಸಂಘಟಿತರಾಗಿ ಯುದ್ಧಮಾಡಲು ಬಂದುದನ್ನು ಕಂಡು ಪಾಂಡವರು ಮಧ್ಯಮಗುಲ್ಮದ (ಸೈನ್ಯದ) ಆಶ್ರಯವನ್ನು ಪಡೆದು ಅವರನ್ನು ಎದುರಿಸಿದರು. ಕೈಗೆ-ಕೈಮಿಲಾಯಿಸಿ ನಡೆದ ಆ ಯುದ್ಧದಲ್ಲಿ ಕೇವಲ ಮುಹೂರ್ತಕಾಲದಲ್ಲಿ ಮದ್ರರಾಜನ ಅನುಯಾಯಿಗಳು ಹತರಾದುದು ಕಂಡುಬಂದಿತು. ನಾವೆಲ್ಲರೂ ಅಲ್ಲಿಗೆ ಹೋಗುವುದರೊಳಗಾಗಿಯೇ ವೇಗಶಾಲಿಗಳಾದ ಮದ್ರಯೋಧರು ಹತರಾಗಿದ್ದರು. ಅದರಿಂದ ಶತ್ರುಪಕ್ಷದವರು ಪರಮಹೃಷ್ಟರಾಗಿ ಒಟ್ಟಾಗಿ ಸೇರಿ ಕಿಲಕಿಲಾ ಶಬ್ದಗಳನ್ನು ಮಾಡುತ್ತಿದ್ದರು. ಎಲ್ಲ ಕಡೆಗಳಲ್ಲಿಯೂ ಮುಂಡಗಳು ಎದ್ದು ಕುಣಿಯುತ್ತಿದ್ದುದು ಕಂಡುಬಂದಿತು. ಸೂರ್ಯಮಂಡಲದ ಮಧ್ಯಭಾಗದಿಂದ ದೊಡ್ಡದಾದೊಂದು ಉಲ್ಕೆಯು ಕೆಳಕ್ಕೆ ಬಿದ್ದಿತು. ಮುರಿದುಹೋಗಿದ್ದ ರಥದಿಂದಲೂ, ನೊಗಗಳಿಂದಲೂ, ಅಚ್ಚುಮರಗಳಿಂದಲೂ, ಹತರಾಗಿದ್ದ ಮಹಾರಥರಿಂದಲೂ, ಅಸುನೀಗಿ ಕೆಳಗೆ ಬಿದ್ದಿದ್ದ ಕುದುರೆಗಳಿಂದಲೂ ರಣಭೂಮಿಯು ಮುಚ್ಚಿಹೋಗಿದ್ದಿತು. ಅನೇಕ ಯೋಧರು, ರಥದ ನೊಗಕ್ಕೆ ಬಂಧಿಸಲ್ಪಟ್ಟಿದ್ದ ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಕುದುರೆಗಳಿಂದ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಎಳೆಯಲ್ಪಡುತ್ತಿದ್ದುದು ಕಂಡುಬಂದಿತು. ಕೆಲವು ಕುದುರೆಗಳು ಭಗ್ನವಾಗಿಹೋಗಿದ್ದ ಚಕ್ರಗಳುಳ್ಳ ರಥಗಳನ್ನೇ ಎಳೆದುಕೊಂಡು ರಣಾಂಗಣದಲ್ಲಿ ತಿರುಗುತ್ತಿದ್ದುವು. ಕೆಲವು ಕುದುರೆಗಳು ಭಗ್ನವಾದ ರಥಗಳ ಅರ್ಧಭಾಗಗಳನ್ನೇ ಎಳೆದುಕೊಂಡು ಹತ್ತು ದಿಕ್ಕುಗಳಲ್ಲಿಯೂ ಪರಿಭ್ರಮಿಸುತ್ತಿದ್ದುವು. ನೊಗಪಟ್ಟಿಗಳಿಗೆ ಸಿಕ್ಕಿಹಾಕಿಕೊಂಡಿದ್ದ ಕುದುರೆಗಳೂ ಅಲ್ಲಲ್ಲಿ ಕಾಣಿಸುತ್ತಿದ್ದುವು. ನರಶ್ರೇಷ್ಠರಾದ ರಥಿಗಳು–ಪುಣ್ಯವು ಕ್ಷಯಿಸಿದನಂತರ ಆಕಾಶದಿಂದ ಚ್ಯುತರಾಗುವ ಸಿದ್ಧರೋಪಾದಿಯಲ್ಲಿ–ರಥ ಗಳಿಂದ ಕೆಳಕ್ಕೆ ಬೀಳುತ್ತಿದ್ದುದು ಅಲ್ಲಲ್ಲಿ ಗೋಚರಿಸುತ್ತಿದ್ದಿತು.

ಶೂರನಾದ ಮದ್ರರಾಜನ ಅನುಯಾಯಿಗಳೂ ಹತರಾಗಲಾಗಿ

ಪ್ರಹಾರಕುಶಲರಾದ, ವಿಜಯೇಚ್ಛುಗಳಾದ ಪಾಂಡವಮಹಾರಥರು, ಅವರ ಮೇಲೆ ಆಕ್ರಮಣನಡೆಸಲು ಹೋಗುತ್ತಿದ್ದ ನಮ್ಮನ್ನು ನೋಡಿ ಶಂಖಧ್ವನಿಗಳಿಂದ ಸಮ್ಮಿಶ್ರವಾದ ಬಾಣಗಳ 'ಸೊಯ್' ಎಂಬ ಶಬ್ದದೊಡನೆ ವೇಗವಾಗಿ ನಮ್ಮ ಮೇಲೆ ಬೀಳಲು ಬಂದರು. ಲಕ್ಷ್ಯಭೇದನದಲ್ಲಿ ಸಿದ್ಧಹಸ್ತರಾದ ಪ್ರಹಾರಕುಶಲರಾದ ಪಾಂಡವಯೋಧರು ನಮ್ಮ ಸಮೀಪಕ್ಕೆ ಪುನಃ ಬಂದು ಧನುಸ್ಸುಗಳನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಸಿಂಹನಾದಗಳನ್ನು ಮಾಡಿದರು. ಮದ್ರರಾಜನ ಆ ಮಹಾಸೈನ್ಯವು ಹತವಾದುದನ್ನೂ ಆ ಮೊದಲೇ ಮದ್ರರಾಜನೂ ಶತ್ರುಗಳಿಂದ ಸಂಹರಿಸಲ್ಪಟ್ಟುದನ್ನೂ ನೋಡಿ ದುರ್ಯೋಧನನ ಸೈನ್ಯವು ಪುನಃ ಯುದ್ಧದಿಂದ ಹಿಮ್ಮೆಟ್ಟಿತು. ವಿಜಯೋಲ್ಲಸಿತರಾದ ದೃಢಧನ್ವಿಗಳಾದ ಪಾಂಡವರಿಂದ ಪೀಡಿಸಲ್ಪಟ್ಟು ಸಂಭ್ರಾಂತವಾಗಿದ್ದ ಕೌರವರ ಸೈನ್ಯವು ಗಾಬರಿಗೊಂಡು ದಿಕ್ಕು-ದಿಕ್ಕುಗಳಿಗೂ ಪಲಾಯನಮಾಡಿತು."

೧೮ನೆಯ ಅಧ್ಯಾಯವು ಮುಗಿಯಿತು.

೧೯ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಪಾಂಡವಸೈನಿಕರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾ ಪಾಂಡವರನ್ನು ಪ್ರಶಂಸಿಸಿದುದು: ಧೃತರಾಷ್ಟ್ರನನ್ನು ನಿಂದಿಸಿದುದು: ಕೌರವಸೈನ್ಯದ ಪಲಾಯನ: ಭೀಮಸೇನನು ಇಪ್ಪತ್ತೊಂದು ಸಾವಿರ ಪದಾತಿಗಳನ್ನು ಸಂಹರಿಸಿದುದು: ದುರ್ಯೋಧನನು ತನ್ನ ಸೈನಿಕರನ್ನು ಪ್ರೋತ್ಸಾಹಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ:

"ಮಹಾರಾಜ! ಮಹಾರಥನಾದ ದುರ್ಧರ್ಷನಾದ ಮದ್ರರಾಜನು ಯುದ್ಧದಲ್ಲಿ ಹತನಾಗಲಾಗಿ, ನಿನ್ನ ಕಡೆಯ ಸೈನಿಕರೂ ಮತ್ತು ನಿನ್ನ ಮಕ್ಕಳೂ ಪ್ರಾಯಶಃ ಯುದ್ಧದಿಂದ ಹಿಮ್ಮೆಟ್ಟಿದರು. ಅಗಾಧವಾದ ಮಹಾಸಾಗರದಲ್ಲಿ ನಾವೆಯು ಭಗ್ನವಾಗಲಾಗಿ ನೌಕೆಯಿಂದ ರಹಿತವಾದ ಅಪಾರವಾದ ಸಮುದ್ರವನ್ನು ದಾಟಲಿಚ್ಛಿಸಿದ ವ್ಯಾಪಾರಿಗಳು ದಿಕ್ಕುಗಾಣದೇ

ವ್ಯಾಕುಲಗೊಳ್ಳುವಂತೆ–ಅಪಾರವಾದ ಯುದ್ಧಸಾಗರದಲ್ಲಿ ಕೌರವಸೈನಿಕರಿಗೆ ನೌಕೆಯ ರೂಪದಲ್ಲಿದ್ದ ಮದ್ರರಾಜನು ಮಹಾತ್ಮನಾದ ಯುಧಿಷ್ಠಿರನಿಂದ ಹತನಾಗಲಾಗಿ ಬಾಣಗಳಿಂದ ಕ್ಷತ-ವಿಕ್ಷತರಾದ ಕೌರವಸೈನಿಕರು ಭಯಗ್ರಸ್ತ ರಾದರು. ಸಿಂಹದಿಂದ ಪೀಡಿಸಲ್ಪಟ್ಟ ಮೃಗಗಳಂತೆಯೂ–ಮುರಿದು ಹೋಗಿರುವ ಕೊಂಬುಗಳುಳ್ಳ ಎತ್ತುಗಳಂತೆಯೂ-ನಾಶವಾದ ದಂತಗಳುಳ್ಳ ಆನೆಗಳಂತೆಯೂ–ಮದ್ರರಾಜನನ್ನು ಕಳೆದುಕೊಂಡಿದ್ದ ನಿನ್ನ ಸೈನಿಕರು ಅನಾಥರಂತಾಗಿ ನಾಯಕನೊಬ್ಬನನ್ನು ಪಡೆದುಕೊಳ್ಳುವ ಇಚ್ಛೆಯುಳ್ಳವರಾಗಿದ್ದರು. ಅಜಾತಶತ್ರುವಾದ ಯುಧಿಷ್ಠಿರನಿಂದ ಪರಾಜಿತ ರಾದ ನಾವು ಮಧ್ಯಾಹ್ನಸಮಯದಲ್ಲಿ ಯುದ್ಧಭೂಮಿಯಿಂದ ಪಲಾಯನ ಮಾಡಿದೆವು. ಶಲ್ಯನು ಹತನಾದ ಮೇಲೆ ಸೈನ್ಯಗಳನ್ನು ಸಂಘಟಿಸುವುದ ಕ್ಕಾಗಲೀ–ಯುದ್ಧದಲ್ಲಿ ಪರಾಕ್ರಮವನ್ನು ತೋರಿಸುವುದಕ್ಕಾಗಲೀ ನಮ್ಮ ಕಡೆಯ ಯಾವ ಒಬ್ಬ ಯೋಧನಿಗೂ ಉತ್ಸಾಹವೇ ಇರಲಿಲ್ಲ. ಭೀಷ್ಮ-ದ್ರೋಣ-ಸೂತಪುತ್ರರು ಹತರಾದಾಗ ನಿನ್ನ ಕಡೆಯ ಸೈನಿಕರಿಗೆ ಯಾವ ವಿಧವಾದ ಭಯವೂ ಮತ್ತು ದುಃಖವೂ ಉಂಟಾಗಿದ್ದಿತೋ–ಅದೇ ವಿಧ ವಾದ ಭಯವೂ ಮತ್ತು ದುಃಖವೂ ಶಲ್ಯನು ಹತನಾದನಂತರವೂ ನಿನ್ನ ಕಡೆಯ ಸೈನಿಕರಿಗೆ ಪುನಃ ಉಂಟಾಯಿತು. ಪ್ರಮುಖಯೋಧರನ್ನು ಕಳೆದುಕೊಂಡಿದ್ದ ನಿನ್ನ ಕಡೆಯ ಸೈನಿಕರು ಮಹಾರಥನಾದ ಶಲ್ಯನೂ ಹತನಾಗಲಾಗಿ ಶತ್ರುಗಳ ನಿಶಿತವಾದ ಬಾಣಗಳಿಂದ ಕತ್ತರಿಸಲ್ಪಟ್ಟು ವಿಜಯ ದಲ್ಲಿ ಸಂಪೂರ್ಣವಾಗಿ ನಿರಾಶೆಗೊಂಡರು. ಮಹಾರಾಜ! ಮದ್ರರಾಜನು ಹತನಾಗಲಾಗಿ ನಿನ್ನ ಕಡೆಯ ಯೋಧರೆಲ್ಲರೂ ಭಯದಿಂದ ಪಲಾಯನ ಮಾಡತೊಡಗಿದರು. ಕೆಲವು ಮಹಾರಥರು ಕುದುರೆಗಳನ್ನೂ, ಕೆಲವರು ಆನೆಗಳನ್ನೂ, ಕೆಲವರು ರಥಗಳನ್ನೂ ಹತ್ತಿಕೊಂಡು ಅತ್ಯಂತವೇಗದಿಂದ ಓಡಿಹೋದರು. ಪದಾತಿಸೈನಿಕರೂ ನಾಗಾಲೋಟದಿಂದ ಓಡಿಹೋದರು. ಶತ್ರುಗಳನ್ನು ಪ್ರಹರಿಸುವುದರಲ್ಲಿ ಸುಶಿಕ್ಷಿತವಾಗಿದ್ದ, ಪರ್ವತೋಪಮವಾಗಿದ್ದ ಎರಡು ಸಾವಿರ ಆನೆಗಳು ಮಾವಟಿಗರ ಅಂಕುಶಗಳಿಂದಲೂ ಅಂಗುಷಗಳಿಂದಲೂ ಪ್ರಚೋದಿಸಲ್ಪಟ್ಟು ತೀವ್ರಗತಿಯಿಂದ ಓಡಿ

ಹೋದುವು. ನಿನ್ನ ಸೈನಿಕರೂ ರಣಾಂಗಣದಿಂದ ದಿಕ್ಕಾಪಾಲಾಗಿ ಓಡಿ ಹೋಗುತ್ತಿದ್ದರು. ಹಾಗೆ ಓಡಿಹೋಗುತ್ತಿದ್ದವರಲ್ಲಿ ಬಾಣಗಳ ಪ್ರಹಾರದಿಂದ ಕ್ಷತ-ವಿಕ್ಷತರಾಗಿ ನಿಟ್ಟುಸಿರುಬಿಡುತ್ತಾ ಓಡಿಹೋಗುತ್ತಿದ್ದವರನ್ನೂ ನಾವು ಕಂಡೆವು. ಹತೋತ್ಸಾಹರಾದ, ಪರಾಜಿತರಾದ, ಹತಾಶರಾಗಿ ಓಡಿ ಹೋಗುತ್ತಿದ್ದ ಕೌರವರ ಸೈನಿಕರನ್ನು ನೋಡಿ ವಿಜಯೇಚ್ಛುಗಳಾದ ಪಾಂಡು-ಪಾಂಚಾಲಸೈನಿಕರು ಅವರನ್ನು ಹಿಂಬಾಲಿಸಿ ಹೋದರು. ಬಾಣಗಳ 'ಸೊಯ್' ಎಂಬ ಶಬ್ದಗಳೂ, ಶೂರರ ಪುಷ್ಕಳವಾದ ಸಿಂಹನಾದಗಳೂ, ಶಂಖಧ್ವನಿಗಳೂ ಸರ್ವತ್ರ ಕೇಳಿಬರುತ್ತಿದ್ದು ಭಯಂಕರವಾದ ವಾತಾವರಣ ವುಂಟಾಯಿತು. ಕೌರವಸೈನ್ಯವು ಭಯದಿಂದ ನಡುಗುತ್ತಾ ಓಡಿ ಹೋಗುತ್ತಿರುವುದನ್ನು ಕಂಡು ಪಾಂಚಾಲಸೈನಿಕರು ಪಾಂಡವರ ಸೈನಿಕರೊಡನೆ ಅನ್ಯೋನ್ಯವಾಗಿ ಮಾತನಾಡಿಕೊಂಡರು.

**ಅದ್ಯ ರಾಜಾ ಸತ್ಯಧೃತಿರ್ಹತಾಮಿತ್ರೋ ಯುಧಿಷ್ಠಿರಃ ।**
**ಅದ್ಯ ದುರ್ಯೋಧನೋ ಹೀನೋ ದೀಪ್ತಾಯಾ ನೃಪತಿಶ್ರಿಯಃ ॥**

"ಇಂದು ಸತ್ಯಪರಾಯಣನಾದ ಯುಧಿಷ್ಠಿರರಾಜನು ಶತ್ರುಹೀನ ನಾದನು. ಇಂದು ದುರ್ಯೋಧನನು ಪ್ರದೀಪ್ತವಾದ ರಾಜ್ಯಶ್ರೀಯಿಂದ ಭ್ರಷ್ಟನಾದನು."

"ಇಂದು ಜನೇಶ್ವರನಾದ ಧೃತರಾಷ್ಟ್ರನು ಪುತ್ರನು ಹತನಾದುದನ್ನು ಕೇಳಿ ವ್ಯಾಕುಲನಾಗಿ ಭೂಮಿಯಲ್ಲಿ ಬಿದ್ದು ಸಂಕಟವನ್ನನುಭವಿಸಲಿ."

"ಅರ್ಜುನನು ಎಲ್ಲ ಧನುಷ್ಮಂತರಲ್ಲಿಯೂ ಹೆಚ್ಚು ಸಮರ್ಥನಾದವ ನೆಂಬುದನ್ನು ಇಂದು ಧೃತರಾಷ್ಟ್ರನು ತಿಳಿದುಕೊಳ್ಳಲಿ. ಪಾಪಿಷ್ಠನಾದ ಮತ್ತು ದುರ್ಬುದ್ಧಿಯವನಾದ ಧೃತರಾಷ್ಟ್ರನಿಂದು ತನ್ನನ್ನು ತಾನೇ ನಿಂದಿಸಿ ಕೊಳ್ಳುತ್ತಾನೆ. ವಿದುರನು ಹೇಳಿದ ಹಿತಕರವೂ ಮತ್ತು ಸತ್ಯವೂ ಆಗಿದ್ದ ಮಾತನ್ನಿಂದು ಅವನು ಸ್ಮರಿಸಿಕೊಳ್ಳಲಿ. ಇಂದಿನಿಂದಲೇ ಧೃತರಾಷ್ಟ್ರನು ಯುಧಿಷ್ಠಿರನ ವಿಷಯದಲ್ಲಿ ದಾಸನಂತೆ ವರ್ತಿಸುತ್ತಾ, ಪಾಂಡುವಿನ ಮಕ್ಕಳು ಈ ಹಿಂದೆ ಎಂತಹ ದುಃಖವನ್ನು ಅನುಭವಿಸಿದರೆಂಬುದನ್ನು ಅರಿತುಕೊಳ್ಳಲಿ. ಮಹೀಪತಿಯಾದ ಧೃತರಾಷ್ಟ್ರನು ಇಂದು ಶ್ರೀಕೃಷ್ಣನ ಮಾಹಾತ್ಮ್ಯವನ್ನು

ಅರಿತುಕೊಳ್ಳಲಿ. ಅರ್ಜುನನ ಗಾಂಡೀವಧನುಸ್ಸಿನ ಟೇಂಕಾರಶಬ್ದವು ಮಹಾಘೋರವೆಂಬುದನ್ನು ತಿಳಿದುಕೊಳ್ಳಲಿ. ಯುದ್ಧದಲ್ಲಿ ಅರ್ಜುನನಿಗಿರುವ ಅಸ್ತ್ರಬಲ ಮತ್ತು ಬಾಹುಬಲಗಳು ಎಷ್ಟು ಅದ್ಭುತವಾದುವುಗಳೆಂಬುದನ್ನೂ ಅರಿಯಲಿ. ಬಲಾಸುರನು ಶಕ್ರನಿಂದ ಹತನಾದಂತೆ–ಯುದ್ಧದಲ್ಲಿ ದುರ್ಯೋಧನನು ಭೀಮನಿಂದ ಹತನಾದ ನಂತರ ಮಹಾತ್ಮನಾದ ಭೀಮಸೇನನ ಬಲವು ಎಷ್ಟು ಭಯಂಕರವೆಂಬುದನ್ನು ಅವನು ತಿಳಿದುಕೊಳ್ಳುವನು. ದುಃಶಾಸನನ ವಧೆಯ ಸಮಯದಲ್ಲಿ ಭೀಮಸೇನನು ಎಂತಹ ಅದ್ಭುತವಾದ ಸಾಹಸಕಾರ್ಯವನ್ನು ಮಾಡಿದನೋ–ಅಂತಹ ಸಾಹಸಕಾರ್ಯವನ್ನು ಮಹಾಬಲನಾದ ಭೀಮನೊಬ್ಬನಲ್ಲದೇ ಮತ್ತಾರೂ ಮಾಡಲಾರರು. ದೇವತೆಗಳಿಂದಲೂ ಸುದುಃಸಹನಾದ ಶಲ್ಯನು ಹತನಾದನೆಂಬುದನ್ನು ಕೇಳಿದನಂತರ ಧೃತರಾಷ್ಟ್ರನು ಪಾಂಡವಜ್ಯೇಷ್ಠನಾದ ಯುಧಿಷ್ಠಿರನ ಪರಾಕ್ರಮ ವೆಷ್ಟೆಂಬುದನ್ನು ಮನಗಾಣಲಿ. ಇಂದಿನ ಯುದ್ಧದಲ್ಲಿ ವೀರನಾದ ಶಕುನಿಯೂ ಮತ್ತು ಇತರ ಪ್ರಮುಖವೀರರೂ ಹತರಾದನಂತರ ಮಾದ್ರಿಯ ಮಕ್ಕಳಾದ ನಕುಲ-ಸಹದೇವರೂ ಸಂಗ್ರಾಮದಲ್ಲಿ ಸುದುಃಸಹರೆಂಬುದನ್ನೂ ಧೃತರಾಷ್ಟ್ರನು ತಿಳಿದುಕೊಳ್ಳುವನು.

**ಕಥಂ ಜಯೋ ನ ತೇಷಾಂ ಸ್ಯಾದ್ಯೇಷಾಂ ಯೋದ್ಧಾ ಧನಂಜಯಃ ।**
**ಸಾತ್ಯಕಿರ್ಭೀಮಸೇನಶ್ಚ ಧೃಷ್ಟದ್ಯುಮ್ನಶ್ಚ ಪಾರ್ಷತಃ ॥೨೫॥**

**ದ್ರೌಪದ್ಯಾಸ್ತನಯಾಃ ಪಞ್ಚ ಮಾದ್ರೀಪುತ್ರೌ ಚ ಪಾಣ್ಡವೌ ।**
**ಶಿಖಣ್ಡೀ ಚ ಮಹೇಷ್ವಾಸೋ ರಾಜಾ ಚೈವ ಯುಧಿಷ್ಠಿರಃ ॥೨೬॥**

ಯಾರ ಸಲುವಾಗಿ ಧನಂಜಯ, ಸಾತ್ಯಕಿ, ಭೀಮಸೇನ, ಧೃಷ್ಟದ್ಯುಮ್ನ, ದ್ರೌಪದಿಯ ಐವರು ಮಕ್ಕಳು, ನಕುಲ-ಸಹದೇವರು, ಮಹಾಧನುಷ್ಮಂತನಾದ ಶಿಖಂಡೀ ಮತ್ತು ರಾಜನಾದ ಯುಧಿಷ್ಠಿರ–ಇವರು ಯುದ್ಧಮಾಡುತ್ತಾರೆಯೋ ಅವರಿಗೆ ವಿಜಯವು ಏಕೆ ಲಭಿಸುವುದಿಲ್ಲ?

**ಯೇಷಾಂ ಚ ಜಗತೀ ನಾಥೋ ನಾಥಃ ಕೃಷ್ಣೋ ಜನಾರ್ದನಃ ।**
**ಕಥಂ ತೇಷಾಂ ಜಯೋ ನ ಸ್ಯಾದ್ಯೇಷಾಂ ಧರ್ಮೋ ವ್ಯಪಾಶ್ರಯಃ॥**

ಪ್ರಪಂಚಕ್ಕೇ ನಾಥನಾಗಿರುವ ಜನಾರ್ದನನಾದ ಶ್ರೀಕೃಷ್ಣನೇ ಯಾರಿಗೆ ನಾಥನಾಗಿರುವನೋ, ಯಾರು ಧರ್ಮವನ್ನೇ ಆಶ್ರಯಿಸಿರುವರೋ–ಅಂತ ಹವರಿಗೆ ಜಯವು ಏಕೆ ಲಭಿಸುವುದಿಲ್ಲ?

ಭೀಷ್ಮನನ್ನೂ, ದ್ರೋಣರನ್ನೂ, ಕರ್ಣನನ್ನೂ, ಮದ್ರಾಧಿಪತಿಯಾದ ಶಲ್ಯನನ್ನೂ, ಇವರೇ ಅಲ್ಲದೇ ಇನ್ನೂ ಅನೇಕರಾಜರನ್ನೂ, ನೂರಾರು-ಸಾವಿರಾರು ವೀರಯೋಧರನ್ನೂ ಯುದ್ಧದಲ್ಲಿ ಜಯಿಸಲು–ಸತ್ಯಕ್ಕೂ, ಯಶಸ್ಸಿಗೂ ನಿಧಿಪ್ರಾಯನಾದ ಹೃಷೀಕೇಶನನ್ನೇ ರಕ್ಷಕನನ್ನಾಗಿ ಹೊಂದಿರುವ ಕುಂತಿಯ ಮಗನಾದ ಯುಧಿಷ್ಠಿರನೊಬ್ಬನನ್ನು ಬಿಟ್ಟು ಮತ್ತಾರಿಗೆ ತಾನೇ ಸಾಧ್ಯವಾಗುತ್ತಿದ್ದಿತು?"

ಇವೇ ಮುಂತಾಗಿ ಮಾತನಾಡುತ್ತಾ ಮಹಾನಂದದಿಂದ ಯುಕ್ತರಾಗಿದ್ದ ಸೃಂಜಯಯೋಧರು ಪಲಾಯನಮಾಡುತ್ತಿದ್ದ ನಿನ್ನ ಕಡೆಯ ಸೈನಿಕರನ್ನು ಅಟ್ಟಿಸಿಕೊಂಡು ಹೋಗುತ್ತಿದ್ದರು.

ಅನಂತರ ವೀರ್ಯವಂತನಾದ ಧನಂಜಯನು ನಿನ್ನ ರಥಸೈನ್ಯವನ್ನು ಆಕ್ರಮಿಸಿದನು. ಮಾದ್ರಿಯ ಮಕ್ಕಳಾದ ನಕುಲ-ಸಹದೇವರೂ ಮತ್ತು ಮಹಾರಥನಾದ ಸಾತ್ಯಕಿಯೂ ಶಕುನಿಯನ್ನು ಆಕ್ರಮಿಸಿದರು. ಭೀಮಸೇನನ ಭಯದಿಂದ ಪೀಡಿತರಾಗಿ ಪಲಾಯನಮಾಡುತ್ತಿದ್ದ ತನ್ನ ಕಡೆಯ ಸೈನಿಕರನ್ನು ನೋಡುತ್ತಿದ್ದ ದುರ್ಯೋಧನನು ವಿಜಯಾಪೇಕ್ಷೆ ಯಿಂದ ತನ್ನ ಸೂತನನ್ನು ಕುರಿತು ಹೇಳಿದನು:

"ಸೂತ! ಧನುಷ್ಪಾಣಿಯಾಗಿ ಇಲ್ಲಿ ನಿಂತಿರುವ ನನ್ನನ್ನು ಅತಿಕ್ರಮಿಸಿ ಹೋಗಲು ಪಾರ್ಥನು ಪ್ರಯತ್ನಿಸುತ್ತಿದ್ದಾನೆ. ಆದುದರಿಂದ ನೀನು ನನ್ನ ಕುದುರೆಗಳನ್ನು ಎಲ್ಲ ಸೈನಿಕರ ಹಿಂಭಾಗಕ್ಕೆ ನಡೆಸಿಕೊಂಡು ಹೋಗು. ನಾನು ಸೇನೆಯ ಪೃಷ್ಠಭಾಗದಲ್ಲಿ ನಿಂತು ಯುದ್ಧಮಾಡುತ್ತಿರುವ ಸಮಯ ದಲ್ಲಿ–ಸಮುದ್ರವು ತೀರಪ್ರದೇಶವನ್ನು ಅತಿಕ್ರಮಿಸಿ ಹೋಗದಂತೆ–ಅರ್ಜು ನನು ಯಾವುದೇ ಕಡೆಯಿಂದಾಗಲೀ ನನ್ನನ್ನು ಅತಿಕ್ರಮಿಸಿಹೋಗುವ ಸಾಹಸ ಮಾಡಲಾರನು. ನಮ್ಮ ಸೈನ್ಯವು ಪಾಂಡವರಿಂದ ಆಕ್ರಮಿಸಲ್ಪಡುತ್ತಿರುವು ದನ್ನು ನೋಡು, ಸೂತ! ಸೈನ್ಯಗಳ ಓಡಾಟಗಳಿಂದ ಸಮುದ್ಭೂತವಾದ

ಧೂಳಿಯು ಸರ್ವತ್ರ ವ್ಯಾಪ್ತವಾಗಿರುವುದನ್ನಾದರೂ ನೋಡು. ಭಯಂಕರವಾದ ಘೋರತರವಾದ, ಬಾರಿ-ಬಾರಿಗೂ ಮಾಡುತ್ತಿರುವ ಸಿಂಹನಾದಗಳನ್ನೂ ಕೇಳುತ್ತಿರುವೆಯಲ್ಲವೇ? ನಿಧಾನವಾಗಿ ಕುದುರೆಗಳನ್ನು ನಡೆಸಿಕೊಂಡು ಹೋಗು. ಸೇನೆಯ ಹಿಂಭಾಗಕ್ಕೆ ಹೋಗಿ ನಿಲ್ಲು. ನಾನು ಸಮರಾಂಗಣದಲ್ಲಿ ಯುದ್ಧಸನ್ನದ್ಧನಾಗಿ ನಿಂತುದೇ ಆದರೆ–ಪಾಂಡವರನ್ನು ತಡೆದುದೇ ಆದರೆ–ನನ್ನ ಸೈನಿಕರು ಪುನಃ ಯುದ್ಧಕ್ಕೆ ಹಿಂದಿರುಗುತ್ತಾರೆ ಮತ್ತು ತಮ್ಮ ಶಕ್ತಿಯೆಲ್ಲವನ್ನೂ ಯೋಜಿಸಿ ಯುದ್ಧವನ್ನೂ ಮಾಡುತ್ತಾರೆ."

ಮಹಾರಾಜ! ನಿನ್ನ ಮಗನ ವೀರೋಚಿತವಾದ ಮತ್ತು ಶ್ರೇಷ್ಠವಾದ ಮಾತನ್ನು ಕೇಳಿ ಸಾರಥಿಯು ಸುವರ್ಣಭೂಷಿತವಾದ ಕುದುರೆಗಳನ್ನು ಮೆಲ್ಲ-ಮೆಲ್ಲನೆ ಮುಂದಕ್ಕೆ ನಡೆಸಿದನು. ಗಜಾಶ್ವ-ರಥಸೈನಿಕರಿಂದ ವಿಹೀನ ರಾಗಿದ್ದ, ತಮ್ಮ ಜೀವಿತದ ಮೇಲಿನ ಆಸೆಯನ್ನೇ ಸಂಪೂರ್ಣವಾಗಿ ತೊರೆದಿದ್ದ, ಇಪ್ಪತ್ತೊಂದು ಸಾವಿರ ಪದಾತಿಗಳು ಯುದ್ಧಮಾಡಲು ಸಜ್ಜಾಗಿ ನಿಂತಿದ್ದರು. ನಾನಾದೇಶಗಳಲ್ಲಿ ಹುಟ್ಟಿದ್ದ, ನಾನಾನಗರಗಳಲ್ಲಿ ವಾಸಮಾಡು ತ್ತಿದ್ದ ಯೋಧರು ಮಹಾಯಶಸ್ಸನ್ನು ಗಳಿಸಿಕೊಳ್ಳಬೇಕೆಂಬ ಅಭಿಲಾಷೆಯಿಂದ ಯುದ್ಧಸನ್ನದ್ಧರಾಗಿ ನಿಂತಿದ್ದರು. ಪರಮಹೃಷ್ಟರಾಗಿ ಒಬ್ಬರು ಮತ್ತೊಬ್ಬರ ಮೇಲೆ ಆಕ್ರಮಣ ನಡೆಸುತ್ತಿದ್ದ ಎರಡೂ ಪಕ್ಷಗಳ ಯೋಧರ ಮಹಾಸಂಘರ್ಷವು ಘೋರರೂಪವೂ, ಭಯಾನಕವೂ ಆಗಿದ್ದಿತು. ಭೀಮಸೇನನೂ ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನನೂ ಚತುರಂಗಬಲದಿಂದ ಕೂಡಿದವರಾಗಿ ನಾನಾದೇಶಗಳಿಂದ ಆಗಮಿಸಿದ್ದ ಸೈನಿಕ ರನ್ನು ಆಕ್ರಮಿಸಿದರು. ಆ ರಣಾಂಗಣದಲ್ಲಿ ಇತರ ಪದಾತಿಸೈನಿಕರು ಹರ್ಷೋತ್ಸಾಹಗಳಿಂದ ಕೂಡಿದವರಾಗಿ ಭುಜಗಳನ್ನು ತಟ್ಟಿಕೊಳ್ಳುತ್ತಾ ಸಿಂಹನಾದಗಳನ್ನು ಮಾಡುತ್ತಾ ವೀರರ ಲೋಕಗಳಿಗೆ ಹೋಗುವ ಇಚ್ಛೆ ಯಿಂದ ಭೀಮಸೇನನನ್ನೇ ಆಕ್ರಮಿಸಿದರು. ರೋಷಪೂರ್ಣರಾಗಿದ್ದ, ಯುದ್ಧ ದುರ್ಮದರಾಗಿದ್ದ ದುರ್ಯೋಧನನ ಸೈನಿಕರು ಭೀಮಸೇನನ ಬಳಿಗೆ ಬಂದು ಸಿಂಹನಾದಗಳನ್ನು ಮಾಡತೊಡಗಿದರು. ಬೇರೆ ಯಾವ ಮಾತನ್ನೂ ಆಡುತ್ತಿರ ಲಿಲ್ಲ. ಪದಾತಿಸೈನಿಕರು ಭೀಮಸೇನನನ್ನು ಸುತ್ತುವರಿದು ಎಲ್ಲ ಕಡೆಗಳಿಂದಲೂ ಪ್ರಹರಿಸುತ್ತಿದ್ದರು. ಪದಾತಿಸಮೂಹಗಳಿಂದ ಪರಿವೃತನಾಗಿ ಅಸ್ತ್ರ-ಶಸ್ತ್ರಾದಿ

ಗಳ ಮೂಲಕವಾಗಿ ಅವರಿಂದ ಪ್ರಹರಿಸಲ್ಪಡುತ್ತಿದ್ದರೂ ಭೀಮಸೇನನು ಮೈನಾಕಪರ್ವತದೋಪಾದಿಯಲ್ಲಿ ತಾನಿದ್ದ ಸ್ಥಳದಿಂದ ವಿಚಲಿತನಾಗಲಿಲ್ಲ. ಭೀಮಸೇನನ ರಥವನ್ನು ವಶಪಡಿಸಿಕೊಳ್ಳಲು ಪ್ರವೃತ್ತರಾಗಿದ್ದ ಪರಮ ಕ್ರುದ್ಧರಾಗಿದ್ದ ಪದಾತಿಸೈನಿಕರು ಇತರ ಯಾವ ಯೋಧರೂ ಮುಂದೆ ಬಾರದಂತೆ ತಡೆದು ನಿಲ್ಲಿಸಿದರು. ಪದಾತಿಸೈನಿಕರಿಂದ ಸುತ್ತುವರಿಯಲ್ಪಟ್ಟಿದ್ದ ಭೀಮಸೇನನು ಬಹಳವಾಗಿ ಕೋಪಗೊಂಡನು. ಆಗ ಭೀಮಸೇನನು ಬಹಳ ಬೇಗ ರಥದಿಂದಿಳಿದು, ತಾನೂ ಪದಾತಿಯೇ ಆಗಿ, ಸುವರ್ಣದ ಪಟ್ಟಿಯಿಂದ ಆಚ್ಛಾದಿತವಾಗಿದ್ದ ಮಹಾಗದೆಯನ್ನು ಕೈಗೆತ್ತಿಕೊಂಡು–ದಂಡಪಾಣಿಯಾದ ಯಮನೋಪಾದಿಯಲ್ಲಿ–ನಿನ್ನ ಕಡೆಯ ಪದಾತಿಸೈನಿಕರನ್ನು ಸಂಹರಿಸತೊಡಗಿದನು. ಪುರುಷರ್ಷಭನಾದ ಭೀಮಸೇನನು ರಥಾಶ್ವಗಳಿಂದ ವಿಹೀನರಾಗಿದ್ದ ಇಪ್ಪತ್ತೊಂದು ಸಾವಿರ ಪದಾತಿಸೈನಿಕರನ್ನೂ ಸಂಹರಿಸಿ ನೆಲಕ್ಕುರುಳಿಸಿದನು. ಸತ್ಯಪರಾಕ್ರಮನಾದ ಭೀಮಸೇನನು ಪದಾತಿಸೈನ್ಯವನ್ನು ಬಹಳ ಬೇಗ ಸಂಹರಿಸಿ ಧೃಷ್ಟದ್ಯುಮ್ನಪುರಸ್ಸರನಾಗಿ ಕಾಣಿಸಿಕೊಂಡನು. ಹತರಾದ ಪದಾತಿಸೈನಿಕರು ರಕ್ತದಿಂದ ತೋಯ್ದವರಾಗಿ–ಸುಪುಷ್ಪಿತವಾದ ಕರ್ಣಿಕಾರ ವೃಕ್ಷಗಳು ಬಿರುಗಾಳಿಯಿಂದ ಭಗ್ನವಾಗಿ ನೆಲದ ಮೇಲೆ ಬೀಳುವಂತೆ–ಭೂಮಿಯಲ್ಲಿ ಮಲಗಿದರು. ನಾನಾವಿಧವಾದ ಶಸ್ತ್ರಗಳಿಂದ ಸಮಾಯುಕ್ತರಾಗಿದ್ದ, ನಾನಾವಿಧವಾದ ಕುಂಡಲಗಳನ್ನು ಧರಿಸಿದ್ದ, ನಾನಾದೇಶಗಳಿಂದ ಆಗಮಿಸಿದ್ದ, ನಾನಾಜಾತಿಗಳಿಗೆ ಸೇರಿದ ಪದಾತಿಸೈನಿಕರು ಅಲ್ಲಿ ಹತರಾಗಿ ಹೋದರು. ಧ್ವಜ ಮತ್ತು ಪತಾಕೆಗಳಿಂದ ಆಚ್ಛಾದಿತವಾಗಿದ್ದ ಪದಾತಿಗಳ ಆ ವಿಶಾಲ ಸೈನ್ಯವು ಭೀಮಸೇನನಿಂದ ತುಂಡು-ತುಂಡುಗಳಾಗಿ ಕತ್ತರಿಸಲ್ಪಟ್ಟು ರೌದ್ರಾಕಾರವೂ, ಘೋರರೂಪವೂ, ಭಯಾವಹವೂ ಆಗಿದ್ದಿತು. ಯುಧಿಷ್ಠಿರ ಪುರಃಸರರಾದ, ಸೈನ್ಯಸಮೇತರಾದ ಮಹಾರಥರು ಮಹಾತ್ಮರಾದ ದುರ್ಯೋಧನನನ್ನು ಆಕ್ರಮಿಸಿದರು. ಮಹಾಧನುಷ್ಮಂತರಾದ ಪಾಂಡವ ಯೋಧರು, ನಿನ್ನ ಕಡೆಯ ಸೈನಿಕರು ಪರಾಙ್ಮುಖರಾಗುತ್ತಿರುವುದನ್ನು ಕಂಡು ನಿನ್ನ ಮಗನ ಕಡೆಗೆ ನೇರವಾಗಿ ನುಗ್ಗಿಹೋದರು. ಆದರೆ ತೀರಪ್ರದೇಶವು ತನ್ನನ್ನು ಅತಿಕ್ರಮಿಸಿ ಹೋಗಲು ಸಮುದ್ರಕ್ಕೆ ಅವಕಾಶವೀಯದಂತೆ–ದುರ್ಯೋಧನನು ತನ್ನನ್ನು ಅತಿಕ್ರಮಿಸಿ ಹೋಗಲು ಪಾಂಡವರಿಗೆ ಅವಕಾಶ

ವೀಯಲಿಲ್ಲ. ಆ ಸಮಯದಲ್ಲಿ ನಾವು ನಿನ್ನ ಮಗನ ಪರಮಾದ್ಭುತವಾದ ಪೌರುಷವನ್ನು ನೋಡಿದೆವು. ಏಕಾಕಿಯಾಗಿ ನಿಂತಿದ್ದ ದುರ್ಯೋಧನನನ್ನು ಅತಿಕ್ರಮಿಸಿಹೋಗಲು ಸಂಘಟಿತರಾಗಿದ್ದ ಪಾರ್ಥರಿಗೂ ಸಾಧ್ಯವಾಗಲಿಲ್ಲ. ದುರ್ಯೋಧನನು ಬಹಳ ದೂರ ಹೋಗದಿದ್ದ, ಪಲಾಯನಮಾಡಲು ನಿಶ್ಚಯಿಸಿದ್ದ, ಪಾಂಡವರ ಬಾಣಗಳಿಂದ ಕ್ಷತ-ವಿಕ್ಷತವಾಗಿದ್ದ ತನ್ನ ಸೈನ್ಯವನ್ನು ಸಂಬೋಧಿಸಿ ಹೇಳಿದನು:



"ಯೋಧರೇ! ಪೃಥಿವಿಯಲ್ಲಾಗಲೀ–ಪರ್ವತದಲ್ಲಾಗಲೀ ನೀವು ಎಲ್ಲಿಗೆ ಹೋದರೂ–ನಿಮ್ಮನ್ನು ಪಾಂಡವರು ಸಂಹರಿಸಲಾಗದ ಸ್ಥಳವನ್ನೇ ನಾನು ಕಾಣದವನಾಗಿದ್ದೇನೆ. ಹೀಗಿರುವಾಗ ನೀವು ಇಲ್ಲಿಂದ ಪಲಾಯನ ಮಾಡುವುದರಲ್ಲಿ ಹೆಚ್ಚಿನ ಪ್ರಯೋಜನವೇನಿದೆ? ಕೃಷ್ಣಾರ್ಜುನರು ಬಹಳ

ವಾಗಿ ಗಾಯಗೊಂಡಿದ್ದಾರೆ. ಪಾಂಡವರ ಸೈನ್ಯವೂ ಅಲ್ಪಬಲವಾಗಿದೆ. ನಾವೆಲ್ಲರೂ ಸಂಘಟಿತರಾಗಿ ಯುದ್ಧಮಾಡಿದರೆ ನಮಗೇ ಗೆಲುವು ನಿಶ್ಚಯವಾಗಿ ಲಭಿಸಬಹುದು. ನೀವು ಪಾಂಡವರಿಗೆ ಅಪ್ರಿಯವಾದ ಕಾರ್ಯವನ್ನೇನೋ ಮಾಡಿರುವಿರಿ. ನೀವು ಪ್ರತ್ಯೇಕ-ಪ್ರತ್ಯೇಕವಾಗಿ ಪಲಾಯನ ಮಾಡಿದ್ದೇ ಆದರೆ ಪಾಂಡವರು ನಿಮ್ಮನ್ನು ಬೆನ್ನಟ್ಟಿ ಬಂದು ಸಂಹರಿಸುತ್ತಾರೆ. ಇಂತಹ ಸಂದರ್ಭದಲ್ಲಿ 'ಶ್ರೇಯಾನ್ನಃ ಸಮರೇ ವಧಃ' ಯುದ್ಧದಲ್ಲಿ ಸಾಯುವುದೇ ನಮಗೆ ಶ್ರೇಯಸ್ಕರವಾದುದು. ಇಲ್ಲಿಗೆ ಆಗಮಿಸಿರುವ ಎಲ್ಲ ಕ್ಷತ್ರಿಯರೂ ನನ್ನ ಈ ಮಾತುಗಳನ್ನು ಕೇಳಲಿ. ಯಮಧರ್ಮರಾಜನು ಶೂರನನ್ನೂ ಮತ್ತು ಭೀರುವನ್ನೂ ಯಾವ ವಿಧವಾದ ತಾರತಮ್ಯವೂ ಇಲ್ಲದೇ ಸಂಹಾರಮಾಡುತ್ತಾನೆ. ಹೀಗಿರುವಾಗ ತಾನು ನಿಜವಾದ ಕ್ಷತ್ರಿಯನೆಂದು ಹೇಳಿಕೊಳ್ಳುವ ಯಾವ ಮೂಢಪುರುಷನು ತಾನೇ ಯುದ್ಧಮಾಡಲು ಇಚ್ಛಿಪಡುವುದಿಲ್ಲ? ಆದುದರಿಂದ ಕ್ರುದ್ಧನಾದ ಭೀಮಸೇನನ ಸಮ್ಮುಖದಲ್ಲಿ ನಿಲ್ಲುವುದೇ ನಮಗೆ ಅತ್ಯಂತಶ್ರೇಯಸ್ಕರವಾದ ಮಾರ್ಗವಾಗಿದೆ. ಕ್ಷತ್ರಧರ್ಮವನ್ನವಲಂಬಿಸಿ ಯುದ್ಧಮಾಡುವ ವೀರರಿಗೆ ಯುದ್ಧದಲ್ಲಿ ಲಭಿಸುವ ಮೃತ್ಯುವು ಅತ್ಯಂತಸುಖಕರವಾದುದು.

**ಮರ್ತ್ಯೇನಾವಶ್ಯಮರ್ತವ್ಯಂ ಗೃಹೇಷ್ವಪಿ ಕದಾಚನ ।**
**ಯುಧ್ಯತಃ ಕ್ಷತ್ರಧರ್ಮೇಣ ಮೃತ್ಯುರೇಷ ಸನಾತನಃ ॥೬೪॥**

ಮರಣಧರ್ಮವಿರತಕ್ಕವನು ಎಂದಾದರೊಂದು ದಿನ ಸಾಯಲೇಬೇಕಾಗುವುದು. ಮನೆಯಲ್ಲಿಯೇ ಇದ್ದರೂ ಅವನಿಗೆ ಮೃತ್ಯುವಿನಿಂದ ಬಿಡುಗಡೆಯಿಲ್ಲ. ಆದುದರಿಂದ ಕ್ಷತ್ರಿಯಧರ್ಮಾನುಸಾರವಾಗಿ ಯುದ್ಧಮಾಡುತ್ತಿರುವಾಗ ಯಾವ ಮೃತ್ಯುವು ಪ್ರಾಪ್ತವಾಗುತ್ತದೆಯೋ– ಅಂತಹ ಮೃತ್ಯುವೇ ಕ್ಷತ್ರಿಯನಿಗೆ ಸನಾತನ (ಧರ್ಮೋಕ್ತ) ಮೃತ್ಯುವಾಗಿದೆ. (ಇದು ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಸಾವಿನ ಮಾರ್ಗವಾಗಿದೆ.)

ವೀರಪುರುಷನಾದವನು ಶತ್ರುವನ್ನು ಸಂಹಾರಮಾಡಿ ವಿಜಯಿಯಾದರೆ–ಇಲ್ಲಿಯೇ ಸುಖೋಪಭೋಗಗಳನ್ನು ಅನುಭವಿಸುತ್ತಾನೆ. ಒಂದುವೇಳೆ ಶತ್ರುವಿನಿಂದ ಹತನಾದರೆ–ಪರಲೋಕಕ್ಕೆ ಹೋಗಿ ಮಹಾಫಲಕ್ಕೆ ಭಾಗಿಯಾಗುತ್ತಾನೆ. ಕೌರವರೇ! ಆದುದರಿಂದ ಸ್ವರ್ಗಪ್ರಾಪ್ತಿಗೆ ಯುದ್ಧ

ಧರ್ಮಕ್ಕಿಂತಲೂ ಶ್ರೇಯಸ್ಕರವಾದ ಬೇರೊಂದು ಮಾರ್ಗವಿಲ್ಲ. ಯುದ್ಧದಲ್ಲಿ ಮರಣಹೊಂದುವ ವೀರಪುರುಷನು ಅತ್ಯಲ್ಪಕಾಲದಲ್ಲಿಯೇ ಸುದುರ್ಲಭವಾದ ಪುಣ್ಯಲೋಕಗಳಿಗೆ ಹೋಗಿ ಮನಸೋದ್ದಿಷ್ಟವಾದ ಸುಖೋಪಭೋಗಗಳನ್ನು ಪಡೆದುಕೊಳ್ಳುತ್ತಾನೆ."

ಮಹಾರಾಜ! ಕುರುಯೋಧರು ದುರ್ಯೋಧನನ ಮಾತುಗಳನ್ನು ಕೇಳಿ ಅವನನ್ನು ಯಥೋಚಿತವಾಗಿ ಗೌರವಿಸಿ ಸಂಹಾರಶೀಲರಾದ ಪಾಂಡವರ ಬಳಿಗೆ ಪುನಃ ಹಿಂದಿರುಗಿದರು. ಕೌರವಸೈನಿಕರಿನ್ನೂ ಬರುತ್ತಿರುವಾಗಲೇ ಪ್ರಹಾರಕುಶಲರಾದ, ವಿಜಯೇಚ್ಛುಗಳಾದ, ಮಹಾಕೋಪಿಷ್ಠರಾಗಿದ್ದ ಪಾಂಡವರು ತಮ್ಮ ಸೈನಿಕರನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿ, ಕೌರವಸೈನಿಕರನ್ನು ಎದುರಿಸಿದರು. ವೀರ್ಯವಂತನಾದ ಧನಂಜಯನು ತ್ರೈಲೋಕ್ಯ ವಿಖ್ಯಾತವಾದ ಗಾಂಡೀವಧನುಸ್ಸನ್ನು ಟೇಂಕರಿಸುತ್ತಾ ರಥದ ಮೂಲಕವಾಗಿ ಅಲ್ಲಿಗೆ ಆಗಮಿಸಿದನು. ಮಹಾಬಲನಾದ ಸಾತ್ಯಕಿಯೂ ಮತ್ತು ಮಾದ್ರಿಯ ಮಕ್ಕಳಾದ ನಕುಲ-ಸಹದೇವರೂ ಪರಮಹೃಷ್ಟರಾಗಿ ಶಕುನಿಯನ್ನೂ ಮತ್ತು ನಿನ್ನ ಸೈನ್ಯವನ್ನೂ ಬಹಳ ವೇಗವಾಗಿ ಪ್ರಯತ್ನಪೂರ್ವಕವಾಗಿ ಆಕ್ರಮಿಸಿದರು."

೧೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಧೃಷ್ಟದ್ಯುಮ್ನನು ಶಾಲ್ವರಾಜನ ಆನೆಯನ್ನೂ-ಸಾತ್ಯಕಿಯು ಶಾಲ್ವನನ್ನೂ ಸಂಹರಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ನಿನ್ನ ಕಡೆಯ ಸೈನಿಕರು ಯುದ್ಧಕ್ಕೆ ಹಿಂದಿರುಗಲಾಗಿ, ಮ್ಲೇಚ್ಛಗಣಾಧಿಪನಾದ ಶಾಲ್ವನು ಪರಮಕ್ರುದ್ಧನಾಗಿ ಪರ್ವತೋಪಮವಾಗಿದ್ದ, ಮದೋದಕವನ್ನು ಸುರಿಸುತ್ತಿದ್ದ, ಚೆನ್ನಾಗಿ ಕೊಬ್ಬಿದ್ದ, ಇಂದ್ರನ ಐರಾವತಕ್ಕೆ ಸಮಾನವಾಗಿದ್ದ, ಶತ್ರುಗಳ ಸಮೂಹವನ್ನು ಮರ್ದನ ಮಾಡುವುದಾಗಿದ್ದ ದೊಡ್ಡದಾದ ಆನೆಯ ಮೇಲೆ ಕುಳಿತು ಪಾಂಡವಮಹಾಸೈನ್ಯವನ್ನು ಆಕ್ರಮಿಸಿದನು. ಆ ಆನೆಯು ಮಹಾಭದ್ರವೆಂಬ ಗಜರಾಜನ

ಕುಲದಲ್ಲಿ ಹುಟ್ಟಿದ್ದಿತು. ಧೃತರಾಷ್ಟ್ರನ ಮಗನಾದ ದುರ್ಯೋಧನನು ಅನುದಿನವೂ ಅದನ್ನು ಲಾಲಿಸಿ ಪೋಷಿಸುತ್ತಿದ್ದನು. ಗಜಲಕ್ಷಣಶಾಸ್ತ್ರವನ್ನು ತಿಳಿದಿದ್ದ ಮಹಾಯೋಧರು ಆ ಆನೆಯನ್ನು ಸವಾರಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ರಾಜಶ್ರೇಷ್ಠನಾದ ಶಾಲ್ವನು ಆ ಆನೆಯ ಮೇಲೆ ಕುಳಿತು–ರಾತ್ರಿಯು ಕಳೆದನಂತರ ಉದಯಾಚಲಸ್ಥನಾಗುವ ಸೂರ್ಯದೇವನಂತೆಯೇ-ಪ್ರಕಾಶಿಸಿದನು. ಶ್ರೇಷ್ಠವಾದ ಆ ಆನೆಯ ಮೇಲೆ ಕುಳಿತಿದ್ದ ಶಾಲ್ವರಾಜನು ಸಂಘಟಿತರಾಗಿ ಯುದ್ಧದಲ್ಲಿ ತೊಡಗಿದ್ದ ಪಾಂಡುವಿನ ಮಕ್ಕಳನ್ನು ಆಕ್ರಮಿಸಿದನು. ಮಹೇಂದ್ರನ ವಜ್ರಾಯುಧಸದೃಶವಾಗಿದ್ದ, ಘೋರವಾಗಿದ್ದ, ನಿಶಿತವಾಗಿದ್ದ, ವೇಗಯುಕ್ತವಾಗಿದ್ದ ಪೃಷತ್ಕಗಳಿಂದ ಪಾಂಡವರ ಸೈನ್ಯವನ್ನು ಸೀಳಲು ಉಪಕ್ರಮಿಸಿದನು. ಯಾವ ರೀತಿಯಲ್ಲಿ ಪೂರ್ವಕಾಲದಲ್ಲಿ ಐರಾವತದ ಮೇಲೆ ಕುಳಿತು ದೈತ್ಯಸೈನ್ಯವನ್ನು ಸಂಹರಿಸುತ್ತಿದ್ದ ವಜ್ರಧರನಾದ ಇಂದ್ರನ ಬಾಣಗಳ ಪ್ರಯೋಗಗಳಲ್ಲಿ ಮತ್ತು ದೈತ್ಯರ ಸಂಹಾರದಲ್ಲಿ ದೇವತೆಗಳಾಗಲೀ–ದೈತ್ಯರಾಗಲೀ ಯಾವ ವಿಧವಾದ ಅಂತರವನ್ನೂ ಕಾಣುತ್ತಿರಲಿಲ್ಲವೋ–ಅದೇ ರೀತಿಯಲ್ಲಿ ಶಾಲ್ವನ ಬಾಣಪ್ರಯೋಗ ಮತ್ತು ಸೈನಿಕರನ್ನು ಯಮಾಲಯಕ್ಕೆ ಕಳುಹಿಸುವಿಕೆ–ಈ ಎರಡು ಕ್ರಿಯೆಗಳಲ್ಲಿಯೂ ನಮ್ಮ ಕಡೆಯ ಯೋಧರಾಗಲೀ-ಶತ್ರುಪಕ್ಷದ ಯೋಧರಾಗಲೀ ಯಾವ ವಿಧವಾದ ಅಂತರವನ್ನೂ ಕಾಣುತ್ತಿರಲಿಲ್ಲ. (ಬಾಣಗಳು ಧನುಸ್ಸಿನಿಂದ ಹೊರಬರುತ್ತಿರುವುದು ಮತ್ತು ಶತ್ರುಗಳು ಸತ್ತುಬೀಳುತ್ತಿರುವುದು–ಇಷ್ಟುಮಾತ್ರವೇ ದೃಷ್ಟಿಗೆ ಗೋಚರಿಸುತ್ತಿದ್ದಿತು. ಶಾಲ್ವನು ಅಷ್ಟು ವೇಗದಿಂದ ಬಾಣಗಳನ್ನು ಪ್ರಯೋಗಮಾಡುತ್ತಿದ್ದನು.) ಇಂದ್ರನ ಐರಾವತಸದೃಶವಾಗಿದ್ದ ಶಾಲ್ವರಾಜನ ಆ ಮಹಾಗಜವು ರಣಭೂಮಿಯಲ್ಲಿ ಏಕಾಕಿಯಾಗಿ ಸಂಚರಿಸುತ್ತಿದ್ದರೂ ಪಾಂಡವ-ಸೋಮಕ-ಸೃಂಜಯರು ತಮ್ಮ ಸುತ್ತಲೂ ಸಾವಿರಾರು ಆನೆಗಳು ತಿರುಗುತ್ತಿರುವಂತೆ ಕಂಡರು. (ಅಷ್ಟು ವೇಗವಾಗಿ ಆ ಆನೆಯು ರಣಾಂಗಣದ ಸುತ್ತಲೂ ಸಂಚರಿಸುತ್ತಿದ್ದಿತು.) ಆ ಮಹಾಗಜದಿಂದ ಓಡಿಸಲ್ಪಡುತ್ತಿದ್ದ ಶತ್ರುಗಳ ಸೈನ್ಯವು ಎಲ್ಲ ಕಡೆಗಳಿಂದಲೂ ಆ ಆನೆಯಿಂದಲೇ ಸುತ್ತುವರಿಯಲ್ಪಟ್ಟಂತೆ ಕಾಣುತ್ತಿದ್ದಿತು. ಆನೆಯ ಭಯದಿಂದಾಗಿ ಪಾಂಡವ-ಸೃಂಜಯಸೈನಿಕರು ಸಮರಭೂಮಿಯಲ್ಲಿ ನಿಲ್ಲ

ಲಾಗಲಿಲ್ಲ. ಹಾಗೆ ಪಾಂಡವರ ಸೈನಿಕರು ಆನೆಯ ಭಯದಿಂದ ಓಡಿಹೋಗುತ್ತಿದ್ದಾಗ ತಮ್ಮ ಕಡೆಯವರನ್ನೇ ತುಳಿದು ಪರಸ್ಪರವಾಗಿ ಗಾಯಗೊಳ್ಳುತ್ತಿದ್ದರು. ಮ್ಲೇಚ್ಛರಾಜನಾದ ಶಾಲ್ವನಿಂದ ಪಾಂಡವರ ವಿಶಾಲಸೈನ್ಯವು ಬಹಳ ಬೇಗ ಭಗ್ನವಾಯಿತು. ಶಾಲ್ವನ ಆನೆಯ ವೇಗವನ್ನು ತಡೆದುಕೊಳ್ಳಲಾಗದಿದ್ದ ಪಾಂಡವರ ಸೈನ್ಯವು ನಾಲ್ಕು ದಿಕ್ಕುಗಳಿಗೂ ಪಲಾಯನ ಮಾಡಿತು. ಅತ್ಯಂತವೇಗಶಾಲಿಯಾಗಿದ್ದ ಪಾಂಡವರ ಆ ಮಹಾಸೈನ್ಯವು ಭಗ್ನವಾದುದನ್ನು ಕಂಡು ನಿನ್ನ ಕಡೆಯ ಯೋಧಮುಖ್ಯರು ನರಾಧಿಪನಾದ ಶಾಲ್ವನನ್ನು ಪ್ರಶಂಸೆಮಾಡುತ್ತಾ ಚಂದ್ರಸದೃಶವಾದ ಶಂಖಗಳನ್ನು ಗಟ್ಟಿಯಾಗಿ ಊದಿದರು. ಕೌರವರು ಶಂಖಧ್ವನಿಗಳೊಡನೆ ಹರ್ಷದಿಂದ ಮಾಡಿದ ಸಿಂಹನಾದಗಳನ್ನು ಕೇಳಿ ಪಾಂಡವ-ಸೃಂಜಯರ ಸೇನಾಪತಿಯಾದ, ಪಾಂಚಾಲಪುತ್ರನಾದ ಧೃಷ್ಟದ್ಯುಮ್ನನು ಕೋಪಗೊಂಡನು. ಅವನು ಅವರು ಮಾಡಿದ ಸಿಂಹನಾದಗಳನ್ನೂ–ಶಂಖಧ್ವನಿಗಳನ್ನೂ ಸಹಿಸಿಕೊಳ್ಳಲಿಲ್ಲ. ಜಂಭಾಸುರನು ಶಕ್ರನೊಡನೆ ಯುದ್ಧಮಾಡಲು ಹೋದಾಗ ಇಂದ್ರನ ವಾಹನವಾದ ಗಜಶ್ರೇಷ್ಠವಾದ ಐರಾವತವನ್ನು ಎದುರಿಸಿದಂತೆ–ಮಹಾತ್ಮನಾದ ಧೃಷ್ಟದ್ಯುಮ್ನನು ವಿಜಯಗಳಿಸಲು ತ್ವರೆಮಾಡುತ್ತಾ ಶಾಲ್ವರಾಜನ ಆನೆಯನ್ನು ಎದುರಿಸಿದನು. ರಾಜಶ್ರೇಷ್ಠನಾದ ಶಾಲ್ವನು ತನ್ನ ಮೇಲೆ ಬೀಳಲು ವೇಗವಾಗಿ ಬರುತ್ತಿದ್ದ ಪಾಂಚಾಲಪುತ್ರನಾದ ಧೃಷ್ಟದ್ಯುಮ್ನನನ್ನು ನೋಡಿ ದ್ರುಪದನ ಮಗನ ವಧೆಯ ಸಲುವಾಗಿ ಬಹಳ ಬೇಗ ತನ್ನ ಆನೆಯನ್ನು ಅವನ ಕಡೆಗೆ ನುಗ್ಗಿಸಿದನು. ಧೃಷ್ಟದ್ಯುಮ್ನನು ತನ್ನ ಮೇಲೆ ಬೀಳಲು ವೇಗದಿಂದ ಬರುತ್ತಿದ್ದ ನಾಗೇಂದ್ರನನ್ನು ಅಗ್ನಿಗೆ ಸಮಾನವಾಗಿ ಪ್ರಜ್ವಲಿಸುತ್ತಿದ್ದ, ಕಮ್ಮಾರರಿಂದ ಹದಮಾಡಲ್ಪಟ್ಟಿದ್ದ, ನಿಶಿತವಾಗಿದ್ದ, ಉಗ್ರವಾದ ವೇಗದಿಂದ ಕೂಡಿದ್ದ, ಶ್ರೇಷ್ಠವಾದ ಮೂರು ನಾರಾಚಗಳಿಂದ ಗಾಯಗೊಳಿಸಿದನು. ಪುನಃ ಮಹಾತ್ಮನಾದ ಪಾರ್ಷತನು ಇನ್ನೂ ಐದುನೂರು ಶ್ರೇಷ್ಠವಾದ ನಾರಾಚಗಳನ್ನು ಆನೆಯ ಕುಂಭಸ್ಥಳದಲ್ಲಿ ಪ್ರಯೋಗಿಸಿದನು. ಆ ಬಾಣಗಳಿಂದ ಬಹಳವಾಗಿ ಗಾಯಗೊಂಡ ಶ್ರೇಷ್ಠವಾದ ಆ ಆನೆಯು ಯುದ್ಧದಿಂದ ಹಿಮ್ಮೆಟ್ಟಿ ಓಡಿಹೋಯಿತು. ತನ್ನ ಆನೆಯು ಧೃಷ್ಟದ್ಯುಮ್ನನ ಬಾಣಗಳಿಂದ ಬಹಳವಾಗಿ ಗಾಯಗೊಂಡು ಯುದ್ಧದಿಂದ

ಪರಾಙ್ಮುಖವಾಗುತ್ತಿದ್ದುದನ್ನು ನೋಡಿ ಶಾಲ್ವನು ಚಾವಟಿಯ ಪ್ರಹಾರ ಗಳಿಂದಲೂ, ಅಂಕುಶದ ತಿವಿತಗಳಿಂದಲೂ ಆ ಆನೆಯನ್ನು ಹಿಂದಕ್ಕೆ ತಿರುಗಿಸಿ ಪಾಂಚಾಲರಾಜನ ರಥದ ಕಡೆಗೆ ಪುನಃ ಓಡಿಸಿಕೊಂಡು ಹೋದನು. ಆನೆಯು ಬಹಳ ವೇಗವಾಗಿ ತನ್ನ ರಥದ ಕಡೆಗೆ ಬರುತ್ತಿರುವುದನ್ನು ಕಂಡು ವೀರನಾದ ಧೃಷ್ಟದ್ಯುಮ್ನನು ಗದೆಯನ್ನು ಶೀಘ್ರವಾಗಿ ಕೈಗೆತ್ತಿಕೊಂಡು ಮಹಾವೇಗ ದಿಂದ ರಥದಿಂದ ಧುಮುಕಿ ಭೂಮಿಯನ್ನು ಆಶ್ರಯಿಸಿದನು. ಆ ಸಮಯ ದಲ್ಲಿ ಅವನ ಶರೀರವು ಭಯದಿಂದ ವ್ಯಾಕುಲವಾಯಿತು. ಧೃಷ್ಟದ್ಯುಮ್ನನ ರಥದ ಬಳಿಗೆ ಮಹಾವೇಗದಿಂದ ಬಂದ ಆ ಆನೆಯು ಸುವರ್ಣಭೂಷಿತವಾಗಿದ್ದ, ಅಶ್ವ-ಸೂತಸಹಿತವಾಗಿದ್ದ ಆ ರಥವನ್ನು ಬಹಳ ಬೇಗ ಧ್ವಂಸಮಾಡಿ, ಸೊಂಡಿಲಿನಿಂದ ರಥವನ್ನು ಮೇಲಕ್ಕೆತ್ತಿ ಗಟ್ಟಿಯಾಗಿ ಗರ್ಜನೆಮಾಡುತ್ತಾ ನೆಲಕ್ಕೆ ಅಪ್ಪಳಿಸಿತು. ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನನು ಶಾಲ್ವನ ಶ್ರೇಷ್ಠವಾದ ಆನೆಯಿಂದ ಪೀಡಿಸಲ್ಪಡುತ್ತಿರುವುದನ್ನು ಕಂಡು ಭೀಮ-ಶಿಖಂಡಿ-ಸಾತ್ಯಕಿಯರು ಅತ್ಯಂತವೇಗದಿಂದ ಆನೆಯ ಕಡೆಗೆ ಓಡಿ ದರು. ಭೀಮಪ್ರಮುಖರಾದ ಪಾಂಡವಯೋಧರು ಎಲ್ಲ ಕಡೆಗಳಲ್ಲಿಯೂ ಆಕ್ರಮಣನಡೆಸುತ್ತಿದ್ದ ಆನೆಯ ವೇಗವನ್ನು ಬಾಣಗಳ ಪ್ರಯೋಗದಿಂದ ಬಹಳ ಬೇಗ ತಡೆದರು. ಮಹಾರಥರಿಂದ ಆಕ್ರಮಿಸಲ್ಪಟ್ಟ ಆ ಮಹಾಗಜವು ಮುನ್ನಡೆಯಲಾಗದಂತೆ ನಿರೋಧಿಸಲ್ಪಟ್ಟು ಮುಂದೇನು ಮಾಡಬೇಕೆಂಬು ದನ್ನೇ ತಿಳಿಯದೆ ನಡುಗತೊಡಗಿತು. ಸೂರ್ಯನು ಕಿರಣಗಳ ಸಮೂಹ ಗಳನ್ನು ಸುತ್ತಲೂ ಪ್ರಸರಿಸುವಂತೆ–ಆ ಸಮಯದಲ್ಲಿ ಶಾಲ್ವರಾಜನು ಪಾಂಡವಯೋಧರ ಮೇಲೆ ಬಾಣಗಳ ಮಳೆಗರೆದನು. ಆ ಬಾಣಗಳಿಂದ ಗಾಯಗೊಂಡ ಪಾಂಡವರಥಿಗಳು ಗುಂಪು-ಗುಂಪಾಗಿ ಅತ್ತಿತ್ತ ಪಲಾಯನ ಮಾಡತೊಡಗಿದರು. ಶಾಲ್ವನ ಆ ಮಹಾಸಾಹಸಕಾರ್ಯವನ್ನು ಎಲ್ಲ ಪಾಂಚಾಲಪುತ್ರರೂ ಮತ್ತು ಸೃಂಜಯರೂ ನೋಡಿ ಹಾಹಾಕಾರಗಳಿಂದ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಿದ್ದರು. ಪಾಂಡವ ಯೋಧಶ್ರೇಷ್ಠರು ಪುನಃ ಧೈರ್ಯಮಾಡಿ ಆ ಆನೆಯನ್ನು ಎಲ್ಲ ಕಡೆ ಗಳಿಂದಲೂ ಮುತ್ತಿದರು. ಆ ಸಮಯದಲ್ಲಿ ಶತ್ರುಘಾತಿಯಾದ, ಶೂರವರ ನಾದ, ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನನು ಪರ್ವತಶಿಖರ

ಸದೃಶವಾಗಿದ್ದ ಗದೆಯನ್ನು ಬಹಳ ಬೇಗ ಕೈಯಲ್ಲೆತ್ತಿಕೊಂಡು ಅತಿಶೀಘ್ರವಾಗಿ ಆ ಮಹಾಗಜವನ್ನು ಅನುಸರಿಸಿದನು. ಅನಂತರ ಪಾಂಚಾಲರಾಜನ ಮಗನಾದ ವೇಗವಂತನಾದ ಧೃಷ್ಟದ್ಯುಮ್ನನು–ಜಲಧಾರೆಯನ್ನು ಸುರಿಸುತ್ತಿದ್ದ, ಪರ್ವತೋಪಮವಾಗಿದ್ದ ಆನೆಯನ್ನು ರಭಸದಿಂದ ತಿರುಗುತ್ತಿದ್ದ ಕೈಯಲ್ಲಿದ್ದ ಗದೆಯಿಂದ ಪ್ರಹರಿಸಿದನು. ಗದೆಯ ಪ್ರಹಾರದಿಂದ ಆನೆಯ



ಕುಂಭಸ್ಥಳವು ಒಡೆದುಹೋಯಿತು. ಪರ್ವತೋಪಮವಾಗಿದ್ದ ಆ ಆನೆಯು ಮುಖದಿಂದ ಹೇರಳವಾಗಿ ರಕ್ತವನ್ನು ಕಕ್ಕುತ್ತಾ ಗಟ್ಟಿಯಾಗಿ ಚೀತ್ಕಾರ ಮಾಡಿ–ಭೂಕಂಪದಿಂದ ವಿಚಲಿತವಾದ ಪರ್ವತದೋಪಾದಿಯಲ್ಲಿ ಕೆಳಕ್ಕೆ ಬಿದ್ದಿತು. ಮಹಾಗಜವು ಗದಾಪ್ರಹಾರದಿಂದ ಕೆಳಕ್ಕೆ ಬೀಳಲಾಗಿ, ನಿನ್ನ

ಕಡೆಯ ಸೈನಿಕರು ಹಾಹಾಕಾರಮಾಡುತ್ತಿರಲಾಗಿ, ಶಿನಿಶ್ರೇಷ್ಠನಾದ ಸಾತ್ಯಕಿಯು ನಿಶಿತವಾದ ಭಲ್ಲದಿಂದ ಶಾಲ್ವರಾಜನ ಶಿರಸ್ಸನ್ನು ಕತ್ತರಿಸಿಬಿಟ್ಟನು. ದೇವಾಧಿಪತಿಯಾದ ಇಂದ್ರನಿಂದ ಪ್ರಚೋದಿತವಾದ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತದ ಶಿಖರದೋಪಾದಿಯಲ್ಲಿ–ಸಾತ್ಯಕಿಯಿಂದ ಕತ್ತರಿಸಲ್ಪಟ್ಟ ತಲೆಯುಳ್ಳ ಶಾಲ್ವರಾಜನು ಮಹಾಗಜದೊಡನೆ ಭೂಮಿಯಲ್ಲಿ ಬಿದ್ದನು."

೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಸಾತ್ಯಕಿಯು ಕ್ಷೇಮಧೂರ್ತಿಯನ್ನು ವಧಿಸಿದುದು: ಕೃತವರ್ಮನ ಪರಾಜಯ: ಕೌರವಸೈನ್ಯದ ಪಲಾಯನ

ಸಂಜಯನು ಹೇಳುತ್ತಾನೆ:

"ಮಹಾರಾಜ! ಆಹವಶೋಭಿಯಾದ, ಶೂರನಾದ ಶಾಲ್ವನು ಹತನಾಗಲಾಗಿ, ಬಿರುಗಾಳಿಯಿಂದ ಮಹಾವೃಕ್ಷವು ಮುರಿದು ಬೀಳುವಂತೆ–ನಿನ್ನ ಸೈನ್ಯವು ಬಹಳ ಬೇಗ ವಿಧ್ವಸ್ತವಾಯಿತು. ಮಹಾರಥನಾದ, ಮಹಾಬಲನಾದ ಮತ್ತು ಶೂರನಾದ ಕೃತವರ್ಮನು ನಮ್ಮ ಸೈನ್ಯವು ಭಗ್ನವಾದುದನ್ನು ಕಂಡು ಶತ್ರುಗಳ ಸೈನ್ಯವನ್ನು ಎದುರಿಸಿದನು. ಶತ್ರುಗಳ ಬಾಣಗಳಿಂದ ಆವರಿಸಲ್ಪಟ್ಟಿದ್ದರೂ–ಮಳೆಯ ಧಾರೆಗಳಿಂದ ಆವರಿಸಲ್ಪಟ್ಟ ಬೆಟ್ಟವು ಕದಲದೇ ನಿಂತಿರುವಂತೆ–ಸುಸ್ಥಿರನಾಗಿ ನಿಂತಿರುವ ಕೃತವರ್ಮನನ್ನು ಯುದ್ಧಭೂಮಿಯಲ್ಲಿ ನೋಡಿ ನಿನ್ನ ಕಡೆಯ ಯೋಧರು ಪುನಃ ಯುದ್ಧಕ್ಕೆ ಹಿಂದಿರುಗಿದರು. ಅನಂತರ ಯುದ್ಧಮಾಡಬೇಕೆಂಬ ನಿರ್ಧಾರದಿಂದ ಮೃತ್ಯುವನ್ನೇ ಹಿಂದಿರುಗುವ ಸ್ಥಾನವನ್ನಾಗಿ ಮಾಡಿಕೊಂಡು ರಣಾಂಗಣಕ್ಕೆ ಹಿಂದಿರುಗಿದ ನಿನ್ನ ಕಡೆಯ ಯೋಧರಿಗೂ ಮತ್ತು ಪಾಂಡವರ ಕಡೆಯ ಯೋಧರಿಗೂ ಯುದ್ಧವು ಪ್ರಾರಂಭವಾಯಿತು. ಮಹಾರಾಜ! ಆ ಸಮಯದಲ್ಲಿ ಕೃತವರ್ಮನಿಗೂ ಮತ್ತು ಪಾಂಡವರಿಗೂ ಆಶ್ಚರ್ಯಕರವಾದ ರೀತಿಯಲ್ಲಿ ಯುದ್ಧವು ನಡೆಯುತ್ತಿದ್ದಿತು. ದುರಾಸದವಾದ ಪಾಂಡವ ಸೇನೆಯನ್ನು ಕೃತವರ್ಮನೊಬ್ಬನೇ ತಡೆದು ಅವರೊಡನೆ ಯುದ್ಧಮಾಡು

ತ್ತಿದ್ದನು. ಕೃತವರ್ಮನು ಅತ್ಯಂತದುಷ್ಕರವಾದ ಕಾರ್ಯಮಾಡುತ್ತಿರುವು ದನ್ನು ನೋಡಿ ಪರಸ್ಪರಹಿತೈಷಿಗಳಾಗಿದ್ದ ಕೌರವಸೈನಿಕರು–ಅತ್ಯಂತ ಪ್ರಹೃಷ್ಟರಾಗಿ ಮಾಡುತ್ತಿದ್ದ ಮಹಾಸಿಂಹನಾದಗಳು ಆಕಾಶವನ್ನೂ ಮುಟ್ಟುವುದಾಗಿದ್ದುವು. ಆ ಮಹಾಸಿಂಹನಾದಗಳ ಶಬ್ದವನ್ನು ಕೇಳಿಯೇ ಪಾಂಚಾಲಸೈನಿಕರು ಭಯಗೊಂಡರು. ಆ ಸಮಯದಲ್ಲಿ ಶಿನಿಯ ಮೊಮ್ಮಗ ನಾದ ಸಾತ್ಯಕಿಯು ಶತ್ರುಗಳನ್ನು ಎದುರಿಸುವ ಸಲುವಾಗಿ ಅಲ್ಲಿಗೆ ಬಂದನು. ಅವನು ಸಮರಾಂಗಣಕ್ಕೆ ಬಂದೊಡನೆಯೇ ಮಹಾಬಲನಾದ ಕ್ಷೇಮಧೂರ್ತಿ ರಾಜನನ್ನು ನಿಶಿತವಾದ ಏಳು ಬಾಣಗಳಿಂದ ಪ್ರಹರಿಸಿ ಯಮಾಲಯಕ್ಕೆ ಕಳುಹಿಸಿಕೊಟ್ಟನು. ಧೀಮಂತನಾದ ಕೃತವರ್ಮನು ನಿಶಿತವಾದ ಬಾಣ ಗಳನ್ನು ಸುರಿಸುತ್ತಾ ತನ್ನ ಕಡೆಗೆ ಬರುತ್ತಿದ್ದ ಮಹಾಬಾಹುವಾದ ಶಿನಿಶ್ರೇಷ್ಠ ನನ್ನು ಅತ್ಯಂತವೇಗದಿಂದ ಎದುರಿಸಿದನು. ಮಹಾವೀರ್ಯರಾದ, ಧನುಷ್ಮಂತ ರಾದ, ರಥಿಶ್ರೇಷ್ಠರಾದ, ಶ್ರೇಷ್ಠವಾದ ಶಸ್ತ್ರಗಳನ್ನು ಧರಿಸಿದ್ದ ಸಾತ್ಯಕಿ-ಕೃತ ವರ್ಮರು ಪರಸ್ಪರವಾಗಿ ಒಬ್ಬರನ್ನೊಬ್ಬರು ಪ್ರಹರಿಸಲು ಉಪಕ್ರಮಿಸಿದರು. ಪಾಂಡವ-ಪಾಂಚಾಲರೂ, ಇತರ ನೃಪಶ್ರೇಷ್ಠರೂ ಮತ್ತು ಯೋಧರೂ ಸಾತ್ಯಕಿ-ಕೃತವರ್ಮರ ಸುಘೋರವಾದ ಸಂಘರ್ಷದ ಪ್ರೇಕ್ಷಕರಾದರು. ವೃಷ್ಣ್ಯಂಧಕಮಹಾರಥರು ಪ್ರಹೃಷ್ಟವಾದ ಎರಡು ಆನೆಗಳಂತೆ ನಾರಾಚ ಗಳಿಂದಲೂ, ವತ್ಸದಂತಗಳಿಂದಲೂ ಪರಸ್ಪರವಾಗಿ ಪ್ರಹರಿಸತೊಡಗಿದರು. ಹಾರ್ದಿಕ್ಯ-ಶಿನಿಪುಂಗವರು ವಿಧ-ವಿಧವಾದ ನಡಿಗೆಗಳನ್ನಿಡುತ್ತಾ (ರಥವನ್ನು ವಿಧ-ವಿಧವಾಗಿ ಸಂಚಾಲಿಸುತ್ತಾ) ಒಬ್ಬರು ಮತ್ತೊಬ್ಬರ ಮೇಲೆ ಸುರಿಸು ತ್ತಿದ್ದ ಬಾಣಗಳ ವೃಷ್ಟಿಯಿಂದ ಇಬ್ಬರೂ ಅಂತರ್ಹಿತರಾಗುತ್ತಿದ್ದರು. ವೃಷ್ಣಿ ಶ್ರೇಷ್ಠರ ಧನುಸ್ಸಿನ ವೇಗ ಮತ್ತು ಬಲದೊಡನೆ ಹೊರಬರುತ್ತಿದ್ದ ಶೀಘ್ರ ವಾಗಿ ಹೋಗುವ ಬಾಣಗಳನ್ನು ನಾವು ಮಿಡತೆಗಳ ಸಮೂಹಗಳೋಪಾದಿ ಯಲ್ಲಿ ಆಕಾಶದಲ್ಲಿ ಕಾಣುತ್ತಿದ್ದೆವು. ಕೃತವರ್ಮನು ಅದ್ವಿತೀಯವೀರನಾದ, ಸತ್ಯಪರಾಕ್ರಮಿಯಾದ ಸಾತ್ಯಕಿಯನ್ನು ಸಮೀಪಿಸಿ ನಿಶಿತವಾದ ಬಾಣ ಗಳಿಂದ ಪ್ರಹರಿಸಿದನು. ನಾಲ್ಕು ಬಾಣಗಳಿಂದ ಅವನ ನಾಲ್ಕು ಕುದುರೆ ಗಳನ್ನು ಗಾಯಗೊಳಿಸಿದನು. ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ಸಂಕ್ರುದ್ಧನಾದ ದೀರ್ಘಬಾಹುವಾದ ಸಾತ್ಯಕಿಯು ಉತ್ತಮವಾದ ಎಂಟು

ಬಾಣಗಳಿಂದ ಕೃತವರ್ಮನನ್ನು ಪ್ರಹರಿಸಿದನು. ಬಳಿಕ ಕೃತವರ್ಮನು ಸುದೀರ್ಘವಾಗಿ ಸೆಳೆದುಬಿಟ್ಟ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಮೂರು ಬಾಣಗಳಿಂದ ಸಾತ್ಯಕಿಯನ್ನು ಗಾಯಗೊಳಿಸಿ, ಮತ್ತೊಂದು ಬಾಣದಿಂದ ಅವನ ಧನುಸ್ಸನ್ನೂ ಕತ್ತರಿಸಿದನು. ಶಿನಿಪುಂಗವನು ಕೃತವರ್ಮನಿಂದ ಕತ್ತರಿಸಲ್ಪಟ್ಟ ಶ್ರೇಷ್ಠವಾದ ಆ ಧನುಸ್ಸನ್ನು ಕೆಳಗಿಟ್ಟು ಬಾಣದಿಂದ ಯುಕ್ತ ವಾಗಿದ್ದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡನು. ಸರ್ವಧನುಷ್ಮಂತರಲ್ಲಿಯೂ ಶ್ರೇಷ್ಠನಾದ, ಮಹಾವೀರ್ಯನಾದ, ಮಹಾಬಲನಾದ, ಕುಪಿತನಾಗಿದ್ದ, ಅತಿರಥನಾದ ಸಾತ್ಯಕಿಯು ಕೃತವರ್ಮನಿಂದಾದ ಧನುಶ್ಛೇದನವನ್ನು ಸಹಿಸಲಾರದೇ ಶ್ರೇಷ್ಠವಾದ ನೂತನ ಧನುಸ್ಸನ್ನು ಕೈಗೆತ್ತಿಕೊಂಡು ಶಿಂಜಿನಿಯನ್ನು ಬಿಗಿದು ಸಜ್ಜುಗೊಳಿಸಿ ಬಹಳ ಶೀಘ್ರವಾಗಿ ಕೃತವರ್ಮನನ್ನು ಆಕ್ರಮಿಸಿದನು. ಅನಂತರ ಶಿನಿಪುಂಗವನು ಸುನಿಶಿತವಾದ ಹತ್ತು ಬಾಣಗಳಿಂದ ಕೃತವರ್ಮನ ಧ್ವಜವನ್ನು ಕತ್ತರಿಸಿ, ಸೂತನನ್ನೂ ಮತ್ತು ಕುದುರೆಗಳನ್ನೂ ಸಂಹರಿಸಿದನು. ಬಳಿಕ ಮಹಾಧನುಷ್ಮಂತನಾದ, ಮಹಾರಥನಾದ ಕೃತವರ್ಮನು ಸುವರ್ಣಭೂಷಿತವಾದ ತನ್ನ ರಥವು ಸೂತನಿಂದಲೂ ಮತ್ತು ಕುದುರೆಗಳಿಂದಲೂ ವಿಹೀನವಾದುದನ್ನು ಕಂಡು ಅತ್ಯಂತರೋಷಾವಿಷ್ಟನಾಗಿ ಸಾತ್ಯಕಿಯನ್ನು ಸಂಹರಿಸಲಿಚ್ಛಿಸಿ ಶೂಲವನ್ನೆತ್ತಿಕೊಂಡು ಭುಜಬಲವೇಗದಿಂದ ಆ ಶೂಲವನ್ನು ಸಾತ್ಯಕಿಯ ಕಡೆಗೆ ಎಸೆದನು. ಸಾತ್ಯಕಿಯು ಬಹಳ ರಭಸದಿಂದ ತನ್ನ ಕಡೆಗೆ ಬರುತ್ತಿದ್ದ ಆ ಶೂಲವನ್ನು ನಿಶಿತವಾದ ಬಾಣಗಳಿಂದ ಕತ್ತರಿಸಿ ತುಂಡು-ತುಂಡುಗಳನ್ನಾಗಿ ಮಾಡಿ ಕೃತವರ್ಮನನ್ನು ಮೋಹಗೊಳಿಸುತ್ತಿರುವನೋ ಎಂಬಂತೆ ನೆಲದ ಮೇಲೆ ಬೀಳಿಸಿದನು. ಬಳಿಕ ಸಾತ್ಯಕಿಯು ಕೃತವರ್ಮನನ್ನು ಭಲ್ಲದಿಂದ ಅವನ ವಕ್ಷಃಸ್ಥಳದಲ್ಲಿ ಪುನಃ ಪ್ರಹರಿಸಿದನು. ಸಾತ್ಯಕಿಯಿಂದ ಹತಾಶ್ವನೂ ಹತಸಾರಥಿಯೂ ಆಗಿದ್ದ ಕೃತವರ್ಮನು ರಥದಿಂದ ಧುಮುಕಿ ಭೂಮಿಯ ಮೇಲೆ ನಿಂತುಕೊಂಡನು. ದ್ವೈರಥಯುದ್ಧದಲ್ಲಿ ಸಾತ್ಯಕಿಯಿಂದ ಕೃತವರ್ಮನು ರಥಹೀನನಾಗಲಾಗಿ, ನಿನ್ನ ಎಲ್ಲ ಸೈನಿಕರ ಮನಸ್ಸನ್ನೂ ಭಯವು ಆವರಿಸಿತು. ನಿನ್ನ ಮಗ ದುರ್ಯೋಧನನಿಗೂ ಬಹಳ ವಿಷಾದವಾಯಿತು. ಕೃತವರ್ಮನು ಹತಾಶ್ವನೂ ಹತಸೂತನೂ ಆಗಿರುವುದನ್ನು ಕಂಡು ಕೃಪರು ಸಾತ್ಯಕಿಯನ್ನು ಸಂಹರಿಸುವ ಇಚ್ಛೆಯಿಂದ

ಅಲ್ಲಿಗೆ ಧಾವಿಸಿಬಂದರು. ಎಲ್ಲ ಧನುಷ್ಮಂತರೂ ನೋಡುತ್ತಿರುವಂತೆಯೇ ಕೃಪರು ಮಹಾಬಾಹುವಾದ ಕೃತವರ್ಮನನ್ನು ತಮ್ಮ ರಥದಲ್ಲಿ ಕುಳ್ಳಿರಿಸಿ ಕೊಂಡು ಬಹಳ ಬೇಗ ರಣರಂಗದಿಂದ ಅವನನ್ನು ಬಹಳ ದೂರಕ್ಕೆ ಕರೆದು ಕೊಂಡು ಹೋದರು. ಶೈನೇಯನು ಯುದ್ಧಸನ್ನದ್ಧನಾಗಿ ರಣಾಂಗಣದಲ್ಲಿ ನಿಂತಿರಲಾಗಿ, ಕೃತವರ್ಮನು ರಥಹೀನನಾಗಲಾಗಿ, ದುರ್ಯೋಧನನ ಚತುರಂಗಬಲವೂ ಪುನಃ ಪರಾಙ್ಮುಖವಾಯಿತು. ಸೈನ್ಯದ ಓಡಾಟಗಳಿಂದ ಉದ್ಭೂತವಾದ ಧೂಳಿಯಿಂದ ಧೂಸರಿತರಾಗಿದ್ದುದರಿಂದ ಪಾಂಡವರ ಕಡೆಯ ಸೈನಿಕರು, ನಮ್ಮ ಕಡೆಯ ಸೈನಿಕರು ಪಲಾಯನಮಾಡಿದುದನ್ನು ತಿಳಿಯದೇ ಹೋದರು. ದುರ್ಯೋಧನನೊಬ್ಬನ ಹೊರತಾಗಿ ನಿನ್ನ ಕಡೆಯ ಸೈನಿಕರೆಲ್ಲರೂ ಪಲಾಯನಮಾಡಿದರು. ದುರ್ಯೋಧನನು ತನ್ನ ಸೈನ್ಯವು ತನ್ನ ಸಮೀಪದಲ್ಲಿಯೇ ಓಡಿಹೋಗುತ್ತಿರುವುದನ್ನು ನೋಡಿ ತಾನೊಬ್ಬನೇ ಅತ್ಯಂತ ವೇಗದಿಂದ ಶತ್ರುಗಳನ್ನು ಆಕ್ರಮಿಸಿದನು ಮತ್ತು ಅವರೆಲ್ಲರನ್ನೂ ತಾನೊಬ್ಬನೇ ತಡೆದನು. ಸ್ವಲ್ಪವಾದರೂ ಗಾಬರಿಗೊಳ್ಳದ, ದುರ್ಧರ್ಷನಾದ, ಮಹಾಬಲನಾದ, ಕ್ರುದ್ಧನಾಗಿದ್ದ ನಿನ್ನ ಪುತ್ರನು ಐವರು ಪಾಂಡವರನ್ನೂ, ದ್ರುಪದನ ಮಗನಾದ ಧೃಷ್ಟದ್ಯುಮ್ನನನ್ನೂ, ಶಿಖಂಡಿಯನ್ನೂ, ದ್ರೌಪದಿಯ ಐವರು ಮಕ್ಕಳನ್ನೂ, ಪಾಂಚಾಲಯೋಧರನ್ನೂ, ಕೇಕಯ-ಸೋಮಕ-ಸೃಂಜಯರನ್ನೂ ಬಾಣಗಳಿಂದ ಮುಚ್ಚಿದನು ಮತ್ತು ಪ್ರಯತ್ನಪೂರ್ವಕವಾಗಿ ರಣಾಂಗಣದಲ್ಲಿ ಸ್ಥಿರನಾಗಿ ನಿಂತಿದ್ದನು. ಯಾವ ರೀತಿಯಲ್ಲಿ ಯಜ್ಞದಲ್ಲಿ ಮಂತ್ರಪೂತವಾದ ಮಹಾಗ್ನಿಯು ಪ್ರಕಾಶ ಮಾನವಾಗಿರುತ್ತದೆಯೋ–ಅದೇ ರೀತಿಯಲ್ಲಿ ದುರ್ಯೋಧನರಾಜನೂ ಸಂಗ್ರಾಮಭೂಮಿಯಲ್ಲಿ ಸರ್ವತ್ರ ಪ್ರಕಾಶಮಾನನಾಗಿ ಕಾಣುತ್ತಿದ್ದನು. ಮರಣಧರ್ಮವಿರುವ ಮನುಷ್ಯರು ಮೃತ್ಯುವನ್ನು ಉಲ್ಲಂಘಿಸಲಾಗದಂತೆ– ಶತ್ರುಸೈನಿಕರು ದುರ್ಯೋಧನನನ್ನು ಉಲ್ಲಂಘಿಸಲಾಗಲಿಲ್ಲ. ರಣಾಂಗಣ ದಿಂದ ಹೊರಟುಹೋಗಿದ್ದ ಕೃತವರ್ಮನೂ ಮತ್ತೊಂದು ರಥದಲ್ಲಿ ಕುಳಿತು ಸಮರಾಂಗಣಕ್ಕೆ ಪುನಃ ಆಗಮಿಸಿದನು.”

೨೧ನೆಯ ಅಧ್ಯಾಯವು ಮುಗಿಯಿತು.

——

# ದುರ್ಯೋಧನನ ಪರಾಕ್ರಮ: ಎರಡೂ ಪಕ್ಷಗಳ ನಡುವೆ ಘೋರಯುದ್ಧ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

“ಯುಧಿಷ್ಠಿರ! ರಥಿಗಳಲ್ಲಿ ಶ್ರೇಷ್ಠನಾದ, ರಥದಲ್ಲಿ ಕುಳಿತಿದ್ದ ನಿನ್ನ ಮಗ ದುರ್ಯೋಧನನು ಪ್ರತಾಪವಂತನಾದ ರುದ್ರನಂತೆ ಶತ್ರುಗಳಿಗೆ ದುಃಸಹನಾಗಿದ್ದನು. ಅವನು ಬಿಡುತ್ತಿದ್ದ ಸಾವಿರಾರು ಬಾಣಗಳಿಂದ ಭೂಮಿಯೇ ಮುಚ್ಚಿಹೋಯಿತು. ಪರ್ಜನ್ಯನು ಜಲಧಾರೆಗಳಿಂದ ಪರ್ವತವನ್ನು ಅಭಿಷೇಚಿಸುವಂತೆ–ದುರ್ಯೋಧನನು ಶತ್ರುಗಳನ್ನು ಬಾಣಗಳ ವೃಷ್ಟಿಯಿಂದ ಅಭಿಷೇಚಿಸಿದನು. ಪಾಂಡವರ ವಿಶಾಲವಾದ ಸೇನಾಸಮುದ್ರದಲ್ಲಿ ದುರ್ಯೋಧನನ ಬಾಣಗಳಿಂದ ಕ್ಷತ-ವಿಕ್ಷತವಾಗದಿದ್ದ ಒಂದು ಕುದುರೆಯಾಗಲೀ, ಒಂದು ಆನೆಯಾಗಲೀ. ಒಂದು ರಥವಾಗಲೀ, ಒಬ್ಬ ಪದಾತಿಯಾಗಲೀ–ಇರಲಿಲ್ಲ. ನಾನು ಸಮರಾಂಗಣದಲ್ಲಿ ಯಾವ ಯಾವ ಯೋಧನನ್ನು ನೋಡುತ್ತಿದ್ದೆನೋ–ಆ ಯೋಧರಲ್ಲಿ ಪ್ರತಿಯೊಬ್ಬನೂ ನಿನ್ನ ಮಗನ ಬಾಣಗಳಿಂದ ಕ್ಷತನಾಗಿಯೇ ಇರುತ್ತಿದ್ದನು. ಯಾವ ರೀತಿಯಲ್ಲಿ ಸೈನ್ಯದ ಓಡಾಟಗಳಿಂದ ಉದ್ಭೂತವಾದ ಧೂಳಿಯಿಂದ ಸಂಪೂರ್ಣಸೈನ್ಯವೇ ಮುಚ್ಚಲ್ಪಡುತ್ತದೆಯೋ–ಅದೇ ರೀತಿಯಲ್ಲಿ ವಿಶಾಲವಾದ ಪಾಂಡವಸೈನ್ಯವು ಮಹಾತ್ಮನಾದ ದುರ್ಯೋಧನನ ಬಾಣಗಳಿಂದ ಆಚ್ಛಾದಿತವಾಗಿದ್ದಿತು. ಅತಿಶೀಘ್ರವಾಗಿ ಬಾಣಗಳನ್ನು ಬಿಡುವ, ಧನುಷ್ಮಂತನಾದ ದುರ್ಯೋಧನನು ಸಮರಭೂಮಿಯನ್ನೇ ಬಾಣಮಯವನ್ನಾಗಿ ಮಾಡಿದುದನ್ನು ನಾವು ನೋಡಿದೆವು. ನಿನ್ನ ಕಡೆಯಲ್ಲಿಯೂ ಮತ್ತು ಶತ್ರುಗಳ ಕಡೆಯಲ್ಲಿಯೂ ಇದ್ದ ಸಾವಿರಾರು ಯೋಧರಲ್ಲಿ ದುರ್ಯೋಧನನೊಬ್ಬನೇ ವೀರಪುರುಷನೆಂಬುದು ನನ್ನ ಅಭಿಪ್ರಾಯವಾಗಿದ್ದಿತು. ನಿನ್ನ ಮಗನ ಅದ್ಭುತಪರಾಕ್ರಮವನ್ನು ನಾವು ಆ ಸಮಯದಲ್ಲಿ ಅಲ್ಲಿ ನೋಡಿದೆವು. ಪಾರ್ಥರೆಲ್ಲರೂ ಒಟ್ಟಾಗಿ ಸೇರಿ ಸೆಣಸಲು ಬಂದರೂ ದುರ್ಯೋಧನನೊಬ್ಬನನ್ನು ಎದುರಿಸಲಾರದೇ ಹೋದರು. ಆ ಸಮಯದಲ್ಲಿ ದುರ್ಯೋಧನನು ಯುಧಿಷ್ಠಿರನನ್ನು ನೂರು ಬಾಣಗಳಿಂದ

ಪ್ರಹರಿಸಿದನು. ಭೀಮಸೇನನನ್ನು ಎಪ್ಪತ್ತು ಬಾಣಗಳಿಂದಲೂ, ಸಹದೇವನನ್ನು ಐದು ಬಾಣಗಳಿಂದಲೂ, ನಕುಲನನ್ನು ಅರುವತ್ತುನಾಲ್ಕು ಬಾಣಗಳಿಂದಲೂ, ಧೃಷ್ಟದ್ಯುಮ್ನನನ್ನು ಐದು ಬಾಣಗಳಿಂದಲೂ, ದ್ರೌಪದಿಯ ಮಕ್ಕಳನ್ನು ಏಳು ಬಾಣಗಳಿಂದಲೂ, ಸಾತ್ಯಕಿಯನ್ನು ಮೂರು ಬಾಣಗಳಿಂದಲೂ ಪ್ರಹರಿಸಿ, ಒಂದು ಭಲ್ಲದಿಂದ ಸಹದೇವನ ಧನುಸ್ಸನ್ನೂ ಕತ್ತರಿಸಿದನು. ಪ್ರತಾಪವಂತನಾದ ಮಾದ್ರಿಯ ಮಗನು, ಕತ್ತರಿಸಿ ಹೋಗಿದ್ದ ಆ ಧನುಸ್ಸನ್ನು ಬಿಸುಟು ಮತ್ತೊಂದು ಮಹಾಧನುಸ್ಸನ್ನು ಕೈಗೆತ್ತಿಕೊಂಡು ದುರ್ಯೋಧನನನ್ನು ಆಕ್ರಮಿಸುತ್ತಾ ಹತ್ತು ಬಾಣಗಳಿಂದ ಅವನನ್ನು ಗಾಯಗೊಳಿಸಿದನು. ಅನಂತರ ಮಹಾಧನುಷ್ಮಂತನಾದ ವೀರನಾದ ನಕುಲನು ದುರ್ಯೋಧನನನ್ನು ಸುಘೋರವಾದ ಒಂಬತ್ತು ಬಾಣಗಳಿಂದ ಪ್ರಹರಿಸಿ ಗಟ್ಟಿಯಾಗಿ ಗರ್ಜಿಸಿದನು. ಸಾತ್ಯಕಿಯು ಬಗ್ಗಿದ ಗಿಣ್ಣೆದ್ದ ಒಂದು ಬಾಣದಿಂದ ರಾಜನನ್ನು ಪ್ರಹರಿಸಿದನು. ದ್ರೌಪದಿಯ ಮಕ್ಕಳು ಎಪ್ಪತ್ತುಮೂರು ಬಾಣಗಳಿಂದಲೂ, ಯುಧಿಷ್ಠಿರನು ಐದು ಬಾಣಗಳಿಂದಲೂ, ಭೀಮಸೇನನು ಎಂಬತ್ತು ಬಾಣಗಳಿಂದಲೂ ದುರ್ಯೋಧನರಾಜನನ್ನು ಪ್ರಹರಿಸಿದರು. ಎಲ್ಲ ಸೈನಿಕರೂ ನೋಡುತ್ತಿರುವಂತೆಯೇ ಮಹಾತ್ಮರಾದ ಪಾಂಡವರು ಎಲ್ಲ ಕಡೆಗಳಿಂದಲೂ ಬಾಣಗಳ ವೃಷ್ಟಿಯನ್ನೇ ದುರ್ಯೋಧನನ ಮೇಲೆ ಸುರಿಸುತ್ತಿದ್ದರೂ ಮಹಾರಾಜನು ವಿಚಲಿತನಾಗಲಿಲ್ಲ. ಬಾಣಗಳನ್ನು ಬಿಡುವುದರಲ್ಲಿ ಮಹಾತ್ಮನಾದ ದುರ್ಯೋಧನನ ಹಸ್ತಲಾಘವ, ಸೊಗಸಾದ ಅಸ್ತ್ರಸಂಚಾಲನ ಮತ್ತು ಪರಾಕ್ರಮ–ಇವುಗಳು ವಿಶ್ವದ ಎಲ್ಲ ಪ್ರಾಣಿಗಳ ಲಾಘವ-ಸೌಷ್ಠವ-ವೀರ್ಯಗಳನ್ನೂ ಮೀರಿಸಿರುವುದನ್ನು ಎಲ್ಲ ಮಾನವರೂ ನೋಡಿದರು. ದುರ್ಯೋಧನನ ಕಡೆಯ ಯೋಧರು ಅವನಿಂದ ಸ್ವಲ್ಪದೂರ ಮಾತ್ರವೇ ಹೋಗಿದ್ದು ರಾಜನ ಪರಾಕ್ರಮವನ್ನು ನೋಡಿ ಕವಚಧಾರಿಗಳಾಗಿ ರಣರಂಗಕ್ಕೆ ಹಿಂದಿರುಗಿ ಬಂದರು. ವರ್ಷಾಕಾಲದಲ್ಲಿ ಕ್ಷೋಭೆಗೊಂಡ ಸಮುದ್ರದ ಭೋರ್ಗರೆಯುವ ಶಬ್ದದಂತೆ–ಯುದ್ಧಮಾಡಲು ಹಿಂದಿರುಗಿಬಂದ ಸೈನಿಕರ ಘೋರವಾದ ಮತ್ತು ಭಯಂಕರವಾದ ಕೋಲಾಹಲಶಬ್ದವಿದ್ದಿತು. ಮಹಾಧನುಷ್ಮಂತರಾದ ಕುರುಯೋಧರು ಅಪರಾಜಿತನಾದ ದುರ್ಯೋಧನನ ಬಳಿಗೆ ಬಂದು ಸಂಹಾರ

ಪ್ರಿಯರಾದ ಪಾಂಡವರನ್ನು ಆಕ್ರಮಿಸಿದರು. ಕ್ರುದ್ಧನಾದ ಅಶ್ವತ್ಥಾಮನು ಯುದ್ಧದಲ್ಲಿ ಬಾಣಗಳಿಂದ ಭೀಮಸೇನನನ್ನು ತಡೆದನು. ಎಲ್ಲ ದಿಕ್ಕುಗಳಿಗೂ ಪ್ರಹರಿಸಿದ ನಾನಾವಿಧವಾದ ಬಾಣಗಳಿಂದ ಆಚ್ಛಾದಿತರಾಗಿದ್ದ ವೀರರಾರೂ ಕಾಣುತ್ತಿರಲಿಲ್ಲ. ಪೂರ್ವ-ಪಶ್ಚಿಮಾದಿ ದಿಕ್ಕುಗಳೇ ತಿಳಿಯಲಿಲ್ಲ. ಹೀಗಿರುವಾಗ ಆಗ್ನೇಯ-ವಾಯವ್ಯಾದಿ ಉಪದಿಕ್ಕುಗಳನ್ನು ತಿಳಿಯಲು ಹೇಗೆ ತಾನೇ ಸಾಧ್ಯ? ಪೆಟ್ಟಿಗೆ-ಪೆಟ್ಟುಕೊಡುವುದರಲ್ಲಿ ವಿಶೇಷವಾದ ಆಸಕ್ತಿಯುಳ್ಳವರಾಗಿದ್ದ, ಶತ್ರುಗಳಿಂದ ದುಃಸಹರಾಗಿದ್ದ, ಕ್ರೂರಕರ್ಮರಾದ ಭೀಮಸೇನಾಶ್ವತ್ಥಾಮರು ಮಹಾಭಯಂಕರವಾದ ರೀತಿಯಲ್ಲಿ ಯುದ್ಧಮಾಡುತ್ತಿದ್ದರು. ಶಿಂಜಿನಿಯನ್ನು ಬಾರಿ-ಬಾರಿಗೂ ಸೆಳೆಯುತ್ತಿದ್ದುದರಿಂದ ಅವರ ಕೈಚರ್ಮವು ಜಡ್ಡುಗಟ್ಟಿಹೋಗಿ ಬಹಳ ಕಠಿನವಾಗಿದ್ದಿತು. ತಮ್ಮ ಸತತವಾದ ಬಾಣಪ್ರಯೋಗಗಳಿಂದ ಎಲ್ಲ ದಿಕ್ಕುಗಳನ್ನೂ ಅವರು ಆತಂಕಪಡಿಸುತ್ತಿದ್ದರು. ಮತ್ತೊಂದು ವಿಭಾಗದಲ್ಲಿ ಶಕುನಿಯು ಯುಧಿಷ್ಠಿರನನ್ನು ಬಾಣಗಳ ಪ್ರಹಾರಗಳಿಂದ ಪೀಡಿಸುತ್ತಿದ್ದನು. ಸುಬಲನ ಮಗನಾದ ಶಕುನಿಯು ಯುಧಿಷ್ಠಿರನ ರಥದ ನಾಲ್ಕು ಕುದುರೆಗಳನ್ನೂ ಸಂಹರಿಸಿ ಶತ್ರುಸೈನಿಕರನ್ನು ಕೋಪಗೊಳಿಸುತ್ತಾ ಗಟ್ಟಿಯಾಗಿ ಗರ್ಜನೆಮಾಡಿದನು. ಆ ಮಧ್ಯದಲ್ಲಿ ಪ್ರತಾಪವಂತನಾದ ಸಹದೇವನು ಅಪರಾಜಿತನಾದ ಯುಧಿಷ್ಠಿರನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ರಣಾಂಗಣದಿಂದ ಬಹಳ ದೂರಕ್ಕೆ ಕರೆದೊಯ್ದನು. ಯುಧಿಷ್ಠಿರನು ಅತ್ಯಲ್ಪ ಸಮಯದಲ್ಲಿಯೇ ಬೇರೊಂದು ರಥದಲ್ಲಿ ಕುಳಿತು ರಣಾಂಗಣಕ್ಕೆ ಬಂದು ಶಕುನಿಯನ್ನು ಎದುರಿಸಿ ಒಂಬತ್ತು ಬಾಣಗಳಿಂದ ಪ್ರಹರಿಸಿ ಪುನಃ ಐದು ಬಾಣಗಳಿಂದಲೂ ಪ್ರಹರಿಸಿದನು. ಸರ್ವಧನುಷ್ಮಂತರಲ್ಲಿಯೂ ಶ್ರೇಷ್ಠನಾದ ಯುಧಿಷ್ಠಿರನು ಆ ಸಾಹಸಕಾರ್ಯವನ್ನು ಮಾಡಿ ಗಟ್ಟಿಯಾಗಿ ಗರ್ಜಿಸಿದನು. ಶಕುನಿ-ಯುಧಿಷ್ಠಿರರ ಯುದ್ಧವು ವಿಚಿತ್ರವೂ, ಘೋರರೂಪವೂ, ಪ್ರೇಕ್ಷಕರಿಗೆ ಆನಂದದಾಯಕವೂ, ಸಿದ್ಧ-ಚಾರಣರ ಪ್ರಶಂಸೆಗೆ ಪಾತ್ರವೂ ಆಗಿದ್ದಿತು. ಮತ್ತೊಂದು ವಿಭಾಗದಲ್ಲಿ ಮಹಾತ್ಮನಾದ ಉಲೂಕನು ಯುದ್ಧದುರ್ಮದನಾದ, ಮಹಾಧನುಷ್ಮಂತನಾದ ನಕುಲನ ಸುತ್ತಲೂ ಬಾಣಗಳನ್ನು ಸುರಿಸುತ್ತಾ ಆಕ್ರಮಿಸಿದನು. ಅದೇ

ರೀತಿಯಲ್ಲಿ ಶೂರನಾದ ನಕುಲನೂ ಸುಬಲನ ಮಗನನ್ನು ಬಾಣಗಳ ದೊಡ್ಡ ವೃಷ್ಟಿಯಿಂದ ಎಲ್ಲ ಕಡೆಗಳಿಂದಲೂ ನಿರೋಧಿಸಿದನು. ಮಹಾರಥರಾದ, ಸತ್ಕುಲಪ್ರಸೂತರಾದ, ವೀರರಾದ ಉಲೂಕ-ನಕುಲರು ಮಾಡಿದುದಕ್ಕೆ ಪ್ರತಿಮಾಡುವ ಇಚ್ಛೆಯಿಂದ ಯುದ್ಧಮಾಡುತ್ತಿದ್ದುದು ಕಂಡುಬಂದಿತು. ಮತ್ತೊಂದು ವಿಭಾಗದಲ್ಲಿ ಶತ್ರುಸಂತಾಪಕನಾದ ಸಾತ್ಯಕಿಯು ಕೃತವರ್ಮನೊಡನೆ ಯುದ್ಧಮಾಡುತ್ತಾ–ಇಂದ್ರನು ಬಲಿಯೊಡನೆ ಯುದ್ಧಮಾಡುತ್ತಿದ್ದಂತೆ–ಪ್ರಕಾಶಿಸುತ್ತಿದ್ದನು. ಇತ್ತಲಾಗಿ ದುರ್ಯೋಧನನು ಯುದ್ಧದಲ್ಲಿ ಧೃಷ್ಟದ್ಯುಮ್ನನ ಧನುಸ್ಸನ್ನು ಕತ್ತರಿಸಿ ಧನುಸ್ಸಿನಿಂದ ವಿಹೀನನಾದ ಅವನನ್ನು ನಿಶಿತವಾದ ಬಾಣಗಳಿಂದ ಗಾಯಗೊಳಿಸಿದನು. ಮರುಕ್ಷಣದಲ್ಲಿಯೇ ಪಾರ್ಷತನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಎಲ್ಲ ಧನುಷ್ಮಂತರೂ ನೋಡುತ್ತಿರುವಂತೆಯೇ ದುರ್ಯೋಧನನೊಡನೆ ಅತುಲಪರಾಕ್ರಮದಿಂದ ಯುದ್ಧಮಾಡುತ್ತಿದ್ದನು. ಶ್ರೇಷ್ಠವಾದ ಸೊಂಡಿಲುಗಳನ್ನು ಹೊಂದಿರುವ, ಮದೋದಕವನ್ನು ಸುರಿಸುತ್ತಿರುವ ಎರಡು ಆನೆಗಳ ನಡುವೆ ಕಾಳಗವು ನಡೆಯುವಂತೆ–ರಣಭೂಮಿಯಲ್ಲಿ ಧೃಷ್ಟದ್ಯುಮ್ನ-ದುರ್ಯೋಧನರ ನಡುವೆ ಭಯಂಕರವಾದ ಯುದ್ಧವು ನಡೆಯಿತು.

ಮತ್ತೊಂದು ವಿಭಾಗದಲ್ಲಿ ಕ್ರುದ್ಧರಾದ ಶೂರರಾದ ಕೃಪರು ಮಹಾಬಲರಾದ ದ್ರೌಪದಿಯ ಮಕ್ಕಳನ್ನು ಬಗ್ಗಿದ ಗಿಣ್ಣುಗಳಿದ್ದ ಅನೇಕ ಬಾಣಗಳಿಂದ ಗಾಯಗೊಳಿಸಿದರು. ದೇಹಧಾರಿಯಾದ ಜೀವಾತ್ಮನಿಗೂ ಮತ್ತು ಪಂಚೇಂದ್ರಿಯಗಳಿಗೂ ಘರ್ಷಣೆಯು ನಡೆಯುವಂತೆ–ಕೃಪರಿಗೂ ಮತ್ತು ಪ್ರತಿವಿಂಧ್ಯಾದಿ ದ್ರೌಪದಿಯ ಐವರು ಮಕ್ಕಳಿಗೂ ಘೋರರೂಪವಾದ, ಅನಿವಾರ್ಯವಾದ, ಯುದ್ಧಮರ್ಯಾದೆಯನ್ನೇ ಮೀರಿದ ಸಂಗ್ರಾಮವು ನಡೆಯುತ್ತಿದ್ದಿತು.

ಇಂದ್ರಿಯಗಳು ಮೂಢನಾದ ಮನುಷ್ಯನನ್ನು ಪೀಡಿಸುವಂತೆ–ಆ ಐವರು ದ್ರೌಪದಿಯ ಮಕ್ಕಳೂ ಕೃಪರನ್ನು ಬಹಳವಾಗಿ ಪೀಡಿಸತೊಡಗಿದರು. ಕೃಪರಾದರೋ ಪರಮಕ್ರುದ್ಧರಾಗಿ ಪ್ರತಿಪ್ರಹಾರಗಳಿಂದ ಯುದ್ಧ

ವನ್ನು ಮುಂದುವರಿಸಿದರು. ಬಾರಿ-ಬಾರಿಗೂ ಉಲ್ಬಣಗೊಂಡು ವಿಷಯಗಳನ್ನು ಅಪೇಕ್ಷಿಸುವ ಇಂದ್ರಿಯಗಳಿಗೂ-ಜೀವಾತ್ಮನಿಗೂ ಸಂಘರ್ಷಣೆಯಾಗುವಂತೆ–ಕೃಪರಿಗೂ ಮತ್ತು ದ್ರೌಪದಿಯ ಮಕ್ಕಳಿಗೂ ವಿಚಿತ್ರವಾದ ರೀತಿಯಲ್ಲಿ ಯುದ್ಧವು ನಡೆಯುತ್ತಿದ್ದಿತು. ಪದಾತಿಗಳು-ಪದಾತಿಗಳೊಡನೆಯೂ, ಆನೆಗಳು–ಆನೆಗಳೊಡನೆಯೂ, ಕುದುರೆಗಳು ಕುದುರೆಗಳೊಡನೆಯೂ, ರಥಿಗಳು-ರಥಿಗಳೊಡನೆಯೂ ಯುದ್ಧದಲ್ಲಿ ತೊಡಗಿದ್ದರು. ಪಾಂಡವ-ಕೌರವ ಸೈನಿಕರ ನಡುವೆ ಘೋರರೂಪವಾದ ಸಾಮೂಹಿಕಯುದ್ಧವು ಪುನಃ ಪ್ರಾರಂಭವಾಯಿತು. ಅದು ಬಹಳ ವಿಚಿತ್ರವಾದ, ಘೋರವಾದ ಮತ್ತು ರೌದ್ರವಾದ ಯುದ್ಧವಾಗಿದ್ದಿತು. ಹೀಗೆ ಘೋರವಾದ ಯುದ್ಧಗಳು ಆ ಸಮಯದಲ್ಲಿ ಅನೇಕವಾಗಿ ನಡೆದುವು. ಅರಿಂದಮರಾದ ಉಭಯಪಕ್ಷಗಳ ಯೋಧರೂ ಆ ಸಮರಾಂಗಣದಲ್ಲಿ ಪರಸ್ಪರವಾಗಿ ಎದುರಿಸುತ್ತಾ ಸಿಂಹನಾದಗಳನ್ನು ಮಾಡುತ್ತಿದ್ದರು ಮತ್ತು ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಅವರ ವಾಹನಗಳ ಸಂಚಾರದಿಂದಲೂ, ಗಾಳಿಯಿಂದಲೂ ಉಂಟಾದ ಮತ್ತು ಒಂದು ಕಡೆಯಿಂದ ಮತ್ತೊಂದು ಕಡೆಗೆ ಧಾವಿಸುತ್ತಿದ್ದ ಅಶ್ವ-ಪದಾತಿಸೈನಿಕರಿಂದಲೂ ಮೇಲಕ್ಕೆಬ್ಬಿಸಲ್ಪಟ್ಟ ಧೂಳಿಯು ತೀವ್ರವಾಗಿ ಸರ್ವತ್ರ ಹರಡುತ್ತಿರುವುದು ಕಂಡುಬಂದಿತು. ರಥಗಳ ಚಕ್ರಗಳಿಂದಲೂ ಆನೆಗಳ ನಿಃಶ್ವಾಸಗಳಿಂದಲೂ ಉದ್ಧೂತವಾದ ಧೂಳಿಯು ಸಂಧ್ಯಾಕಾಲದ ಮೇಘಸದೃಶವಾಗಿದ್ದು ಸೂರ್ಯನಮಾರ್ಗದಲ್ಲಿ ಹೋಗುತ್ತಿದ್ದಿತು. (ಆಕಾಶವನ್ನೇ ಆವರಿಸಿತು.) ಮೇಘಸದೃಶವಾಗಿದ್ದ ಆ ಧೂಳಿನ ಸಂಪರ್ಕದಿಂದಾಗಿ ಸೂರ್ಯನು ಕಾಂತಿಹೀನನಾದನು. ರಣಭೂಮಿಯೂ ಮತ್ತು ಶೂರರಾದ ರಥಿಗಳೂ ಮಹಾರಜಸ್ಸಿನಿಂದ ಆಚ್ಛಾದಿತರಾದರು. ಆದರೆ ಆ ಧೂಳಿಯು ಹೆಚ್ಚು ಕಾಲ ಇರಲಿಲ್ಲ. ಭೂಮಿಯು ವೀರಯೋಧರ ರಕ್ತದಿಂದ ಸಿಕ್ತವಾಗಿ ಮುಹೂರ್ತಮಾತ್ರದಲ್ಲಿ ಯುದ್ಧಭೂಮಿಯು ರಜಸ್ಸಿನಿಂದ ವಿಹೀನವಾಯಿತು. ತೀವ್ರವಾಗಿದ್ದ ಮತ್ತು ಬಹಳ ಘೋರವಾಗಿ ಕಾಣುತ್ತಿದ್ದ ಧೂಳಿಯು ಉಪಶಮನಗೊಂಡಿತು. ಆಗ ನಾನು ಪುನಃ ಅಲ್ಲಿ ನಡೆಯುತ್ತಿದ್ದ ದ್ವಂದ್ವಯುದ್ಧಗಳನ್ನು ನೋಡಿದೆನು. ಸುದಾರುಣವಾದ ಆ ಮಧ್ಯಾಹ್ನದ ಸಮಯದಲ್ಲಿ ಬಲ ಮತ್ತು ಶ್ರೇಷ್ಠತೆಗಳಿಗೆ ಅನುಸಾರವಾಗಿ ನಡೆದ ಅನೇಕ ದ್ವಂದ್ವಯುದ್ಧಗಳನ್ನು ನಾನು ಆ ರಣಾಂಗಣದಲ್ಲಿ ಪುನಃ ಪುನಃ ನೋಡಿದೆನು.

ಯೋಧರು ತೊಟ್ಟುಕೊಂಡಿದ್ದ ಕವಚಗಳ ಉಜ್ವಲವಾದ ಪ್ರಭೆಗಳು ರಣಾಂಗಣದಲ್ಲಿ ಸರ್ವತ್ರ ಕಾಣುತ್ತಿದ್ದುವು. ಪರ್ವತದಲ್ಲಿ ಧಗ-ಧಗನೆ ಉರಿಯುತ್ತಿರುವ ಬಿದಿರುಮೆಳೆಗಳ ಕಾಡಿನಲ್ಲುಂಟಾಗುವ ಛಟ-ಛಟಾ ಶಬ್ದದಂತೆ–ರಣಾಂಗಣದ ಸುತ್ತಲೂ ಬೀಳುತ್ತಿದ್ದ ಬಾಣಗಳ ಭಯಂಕರ ಶಬ್ದವು ಕೇಳಿಬರುತ್ತಿದ್ದಿತು."

೨೨ನೆಯ ಅಧ್ಯಾಯವು ಮುಗಿಯಿತು.

——

೨೩ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಕೌರವರ ಪಕ್ಷದ ಏಳು ನೂರು ರಥಿಗಳ ವಧೆ: ಉಭಯಪಕ್ಷಗಳ ಯೋಧರ ನಡುವೆ ಯುದ್ಧಮರ್ಯಾದೆಯನ್ನೂ ಮೀರಿ ಘೋರಯುದ್ಧ: ಶಕುನಿಯ ಕೂಟಯುದ್ಧ ಮತ್ತು ಅವನ ಪರಾಜಯ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸುತ್ತಾನೆ:

"ಮಹಾರಾಜ! ಘೋರರೂಪವಾದ ಮತ್ತು ಭಯಾನಕವಾದ ಯುದ್ಧವು ನಡೆಯುತ್ತಿರಲಾಗಿ, ಪಾಂಡವರು ನಿನ್ನ ಮಗನ ಸೈನ್ಯವನ್ನು ಸಂಪೂರ್ಣವಾಗಿ ಭಗ್ನಗೊಳಿಸಿದರು. ನಿನ್ನ ಮಗನು ಆ ವಿಭಾಗದಲ್ಲಿ ಚದುರಿಹೋಗುತ್ತಿದ್ದ ಮಹಾರಥರನ್ನು ಮಹಾಪ್ರಯತ್ನದಿಂದ ತಡೆದುನಿಲ್ಲಿಸಿ ಪಾಂಡವರ ಸೈನ್ಯದೊಡನೆ ಯುದ್ಧಮಾಡುತ್ತಿದ್ದನು.

ನಿನ್ನ ಮಗನಿಗೆ ವಿಜಯವಾಗಬೇಕೆಂದು ಇಚ್ಛಿಸಿದ್ದ ಯೋಧರು ಬಹಳ ಬೇಗ ರಣಾಂಗಣಕ್ಕೆ ಹಿಂದಿರುಗಿ ಬಂದರು. ಅವರು ಯುದ್ಧಕ್ಕೆ ಹಿಂದಿರುಗಿದ ನಂತರ ಪುನಃ ಸುದಾರುಣವಾದ ಯುದ್ಧವು ಪ್ರಾರಂಭವಾಯಿತು. ನಿನ್ನ ಕಡೆಯವರಿಗೂ ಮತ್ತು ಶತ್ರುಗಳ ಕಡೆಯವರಿಗೂ ದೇವಾಸುರರ ರಣೋಪಮವಾದ ಯುದ್ಧವು ನಡೆಯುತ್ತಿದ್ದಿತು. ಆ ಸಮಯದಲ್ಲಿ ನಿನ್ನ ಸೈನ್ಯದಲ್ಲಾಗಲೀ–ಶತ್ರುಸೈನ್ಯದಲ್ಲಾಗಲೀ ಯಾರೂ ಪರಾಙ್ಮುಖರಾಗಲಿಲ್ಲ. 'ಇವರು ನಮ್ಮ ಶತ್ರುಗಳೇ ಇರಬಹುದು'–ಎಂಬ ಅನುಮಾನದಿಂದಲೂ, ಕೆಲವು

ಸಮಯಗಳಲ್ಲಿ ಯೋಧರು ತಮ್ಮ ನಾಮಧೇಯಗಳನ್ನು ಹೇಳಿಕೊಳ್ಳುತ್ತಿದ್ದುದರಿಂದಲೂ (ಸನ್ನೆಗಳಿಂದಲೂ) ಶತ್ರು-ಮಿತ್ರರನ್ನು ನಿರ್ಧರಿಸಿ ಪಾಂಡವ-ಕೌರವಯೋಧರು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಆ ಸಮಯದಲ್ಲಿ ಪರಸ್ಪರವಾಗಿ ಯುದ್ಧಮಾಡುತ್ತಿದ್ದ ಎರಡು ಪಕ್ಷಗಳಲ್ಲಿಯೂ ಬಹು ಸಂಖ್ಯಾತ ಯೋಧರ ವಿನಾಶವಾಯಿತು.

ಆಗ ಯುಧಿಷ್ಠಿರನು ಮಹಾಕೋಪಯುಕ್ತನಾಗಿ ರಾಜನಿಂದ ಯುಕ್ತರಾದ ಧಾರ್ತರಾಷ್ಟ್ರರನ್ನು ಜಯಿಸಲಿಚ್ಛಿಸಿ, ಸುವರ್ಣಮಯವಾದ ಮೂಲ ಭಾಗಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಮೂರು ಬಾಣಗಳಿಂದ ಕೃಪರನ್ನು ಪ್ರಹರಿಸಿ, ಬಳಿಕ ನಾಲ್ಕು ನಾರಾಚಗಳಿಂದ ಕೃತವರ್ಮನ ನಾಲ್ಕು ಕುದುರೆಗಳನ್ನೂ ಸಂಹರಿಸಿದನು. ಅಶ್ವತ್ಥಾಮನು ಕುದುರೆಗಳಿಂದ ವಿಹೀನನಾಗಿದ್ದ ಯಶೋವಂತನಾದ ಕೃತವರ್ಮನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ರಣರಂಗದಿಂದ ಹೊರಟುಹೋದನು. ಅನಂತರ ಶಾರದ್ವತರು ಯುಧಿಷ್ಠಿರನ ಪ್ರಹಾರಕ್ಕೆ ಪ್ರತಿಯಾಗಿ ಎಂಟು ಬಾಣಗಳಿಂದ ಅವನನ್ನು ಪ್ರಹರಿಸಿದರು. ಬಳಿಕ ದುರ್ಯೋಧನರಾಜನು ಧರ್ಮಪುತ್ರನಾದ ಯುಧಿಷ್ಠಿರನು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಏಳು ನೂರು ರಥಗಳನ್ನು ಕಳುಹಿಸಿದನು. ರಥಿಗಳಿಂದ ಯುಕ್ತವಾಗಿದ್ದ ಮನೋವೇಗ-ವಾಯುವೇಗಗಳಿಂದ ಕೂಡಿದ್ದ ಆ ರಥಗಳು ಕೌಂತೇಯನ ರಥದ ಸಮೀಪಕ್ಕೆ ಧಾವಿಸಿ ಬಂದುವು. ಆ ರಥಿಗಳು ಯುಧಿಷ್ಠಿರನನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿ–ಮೇಘಗಳು ದಿವಾಕರನನ್ನು ಮುಚ್ಚುವಂತೆ–ಬಾಣಗಳಿಂದ ಯುಧಿಷ್ಠಿರನನ್ನು ಅದೃಶ್ಯನನ್ನಾಗಿ ಮಾಡಿದರು. ಕೌರವೇಯರಥಿಗಳು ಧರ್ಮರಾಜನನ್ನು ಸುತ್ತುವರಿದು ಬಾಣಗಳ ಮಳೆಗರೆಯುತ್ತಾ ಪೀಡಿಸುತ್ತಿದ್ದುದನ್ನು ಕೋಪಾಭಿಭೂತರಾಗಿದ್ದ ಶಿಖಂಡಿಪ್ರಮುಖರಾದ ಮಹಾರಥರು ಸಹಿಸಿಕೊಳ್ಳಲಿಲ್ಲ. ಶ್ರೇಷ್ಠವಾದ ಕುದುರೆಗಳಿಂದ ಯುಕ್ತವಾಗಿದ್ದ, ಸಣ್ಣ-ಸಣ್ಣ ಗಂಟೆಗಳ ಸಮೂಹಗಳಿಂದ ಸಮಲಂಕೃತವಾಗಿದ್ದ ರಥಗಳಲ್ಲಿ ಕುಳಿತು ಕುಂತಿಯ ಮಗನಾದ ಯುಧಿಷ್ಠಿರನನ್ನು ರಕ್ಷಿಸುವ ಸಲುವಾಗಿ ಧಾವಿಸಿ ಬಂದರು. ಅನಂತರ ಪಾಂಡವರಿಗೂ ಮತ್ತು ಕೌರವರಿಗೂ ಯಮರಾಷ್ಟ್ರವನ್ನು ಅಭಿವೃದ್ಧಿಗೊಳಿಸುವ ಮಹಾಭಯಂಕರವಾದ ಯುದ್ಧವು ಪ್ರಾರಂಭ

ವಾಯಿತು. ಆ ಮಹಾಸಂಗ್ರಾಮದಲ್ಲಿ ಗಾಯಗೊಂಡ ಯೋಧರ ಶರೀರ ಗಳಿಂದ ರಕ್ತವು ನೀರಿನೋಪಾದಿಯಲ್ಲಿ ಹರಿಯುತ್ತಿದ್ದಿತು. ಪಾಂಚಾಲರಿಂದ ಕೂಡಿದ ಪಾಂಡವಯೋಧರು ಸಂಹಾರಪ್ರಿಯರಾದ ಕುರುಗಳ ಏಳು ನೂರು ರಥಿಗಳನ್ನೂ ಸಂಹರಿಸಿ ಪುನಃ ಅಳಿದುಳಿದವರನ್ನು ಮುನ್ನುಗ್ಗಿ ಬರದಂತೆ ತಡೆದರು. ಪಾಂಡವರಿಗೂ ಮತ್ತು ನಿನ್ನ ಮಗನಿಗೂ ಆ ಸಮಯದಲ್ಲಿ ಮಹಾಭಯಂಕರವಾದ ಯುದ್ಧವು ನಡೆಯಿತು. ಅಂತಹ ಯುದ್ಧವು ಹಿಂದೆ ನಡೆದಿದ್ದುದನ್ನು ನಾವು ಕಂಡೂ ಇರಲಿಲ್ಲ; ಕೇಳಿಯೂ ಇರಲಿಲ್ಲ. ಯುದ್ಧಮರ್ಯಾದೆ (ಎಲ್ಲೆ)ಯನ್ನೂ ಮೀರಿ ಮಹಾಘೋರಯುದ್ಧವು ನಡೆಯುತ್ತಿರಲಾಗಿ, ನಿನ್ನ ಕಡೆಯ ಯೋಧರೂ ಮತ್ತು ಶತ್ರುಪಕ್ಷದ ಯೋಧರೂ ಅಪಾರಸಂಖ್ಯೆಯಲ್ಲಿ ವಧಿಸಲ್ಪಡುತ್ತಿರಲಾಗಿ ಯೋಧರು ಕೋಲಾಹಲಧ್ವನಿಗಳನ್ನು ಮಾಡುತ್ತಿದ್ದರು.

ಧನುಷ್ಟಂತರ ಶಂಖಧ್ವನಿಗಳಿಂದಲೂ, ಗಟ್ಟಿಯಾದ ಸಿಂಹನಾದ ಗಳಿಂದಲೂ, ಗರ್ಜನೆಗಳಿಂದಲೂ ಸಮರಾಂಗಣವು ತುಂಬಿಹೋಗಿದ್ದಿತು. ಯುದ್ಧವು ಮರ್ಯಾದೆಯನ್ನು ಮೀರಿ ನಡೆಯಲು ಪ್ರಾರಂಭವಾಯಿತು. ವಿಜಯೇಚ್ಛುಗಳಾದ ಯೋಧರು ಮರ್ಮಸ್ಥಳಗಳಲ್ಲಿ ಗಾಯಗೊಂಡವರಾಗಿ ರಣಾಂಗಣದ ಸುತ್ತಲೂ ಓಡಾಡುತ್ತಿದ್ದರು. ಎಲ್ಲರಿಗೂ ಶೋಕವನ್ನುಂಟು ಮಾಡುವ ಸಂಹಾರಕ್ರಿಯೆಯು ರಣಭೂಮಿಯ ಎಲ್ಲ ಕಡೆಗಳಲ್ಲಿಯೂ ನಡೆ ಯುತ್ತಿದ್ದಿತು. ಬಹುಸಂಖ್ಯಾತರಾದ ಸ್ತ್ರೀಯರ ಬೈತಲೆಯ ಸಿಂಧೂರದ ಹರಣವಾಗುವುದರಲ್ಲಿದ್ದಿತು. ಹೀಗೆ ಮರ್ಯಾದಾತೀತವಾದ ಸುದಾರುಣ ವಾದ ಮಹಾಯುದ್ಧವು ನಡೆಯುತ್ತಿರಲಾಗಿ ವಿನಾಶಸೂಚಕಗಳಾದ ಸುದಾರುಣವಾದ ಉತ್ಪಾತಗಳು ಕಾಣಿಸಿಕೊಂಡುವು.

ವನ-ಪರ್ವತಗಳಿಂದ ಕೂಡಿದ ಭೂಮಿಯು ಭಯಂಕರವಾಗಿ ಶಬ್ದ ಮಾಡುತ್ತಾ ಕಂಪಿಸಿತು. ದಂಡಸಹಿತವಾದ ಮತ್ತು ಕೊಳ್ಳಿಗಳಿಂದ ಕೂಡಿದ ಉಲ್ಕೆಗಳು ಸೂರ್ಯಮಂಡಲವನ್ನು ಅಪ್ಪಳಿಸಿ ಚೆಲ್ಲಾ-ಪಿಲ್ಲಿಯಾಗಿ ಆಕಾಶ ದಿಂದ ಭೂಮಿಯ ಸುತ್ತಲೂ ಬೀಳುತ್ತಿದ್ದುವು. ಕೆಳಭಾಗದಲ್ಲಿ ಸಣ್ಣ-ಸಣ್ಣ ಕಲ್ಲುಗಳನ್ನು ಸುರಿಸುವ ಗಾಳಿಯು ಎಲ್ಲ ಕಡೆಗಳಿಂದಲೂ ಬೀಸತೊಡಗಿತು.

ಆನೆಗಳು ಕಣ್ಣೀರುಸುರಿಸುತ್ತಲಿದ್ದುವಲ್ಲದೇ ಥರ-ಥರನೆ ನಡುಗುತ್ತಿದ್ದುವು. ಅಂತಹ ಘೋರವಾದ ಮತ್ತು ದಾರುಣವಾದ ಉತ್ಪಾತಗಳನ್ನೂ ಲೆಕ್ಕಿಸದೇ ವ್ಯಥೆಯಿಂದ ರಹಿತರಾದ, ಸ್ವರ್ಗಾಪೇಕ್ಷಿಗಳಾದ ಕ್ಷತ್ರಿಯವೀರರು ಪುಣ್ಯತಮವಾದ, ರಮಣೀಯವಾದ ಕುರುಕ್ಷೇತ್ರದಲ್ಲಿ ಪುನಃ ಯುದ್ಧಮಾಡುವುದಕ್ಕೋಸ್ಕರ ಉತ್ಸಾಹಪೂರ್ಣರಾಗಿ ಸನ್ನದ್ಧರಾದರು. ಅನಂತರ ಗಾಂಧಾರ ರಾಜನ ಮಗನಾದ ಶಕುನಿಯು ಯೋಧರನ್ನು ಕುರಿತು– 'ವೀರರೇ! ನೀವು ಮುಂಭಾಗದಲ್ಲಿ ನಿಂತು ಯುದ್ಧಮಾಡಿರಿ. ನಾನು ಹಿಂದಿನಿಂದ ಪಾಂಡವರನ್ನು ಸಂಹಾರಮಾಡುತ್ತೇನೆ'–ಎಂದು ಹೇಳಿದನು.

ಶಕುನಿಯ ಸಲಹೆಯಂತೆ ನಾವು ಮುಂಭಾಗದಲ್ಲಿ ಯುದ್ಧಮಾಡಲು ಹೋದೆವು. ವೇಗವಂತರಾದ ಮದ್ರಯೋಧರೂ ಮತ್ತು ಇತರರೂ ಪರಮ ಹೃಷ್ಟರಾಗಿ ಕಿಲ-ಕಿಲಾಶಬ್ದಗಳನ್ನು ಮಾಡುತ್ತಿದ್ದರು. ಅಷ್ಟರಲ್ಲಿಯೇ ಲಕ್ಷ್ಯಭೇದನದಲ್ಲಿ ಸಿದ್ಧಹಸ್ತರಾದ, ದುರಾಸದರಾದ ಪಾಂಡವಯೋಧರು ಪುನಃ ನಮ್ಮ ಸಮೀಪಕ್ಕೆ ಬಂದು ಧನುಸ್ಸುಗಳನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಬಾಣಗಳ ಸುರಿಸುವಿಕೆಯಿಂದ ನಮ್ಮನ್ನು ಮುಚ್ಚಿಬಿಟ್ಟರು. ಸ್ವಲ್ಪಹೊತ್ತಿನಲ್ಲಿಯೇ ಶತ್ರುಗಳಿಂದ ಮದ್ರರಾಜನ ಸೈನ್ಯವು ಸಂಪೂರ್ಣವಾಗಿ ಹತವಾದುದನ್ನು ಕಂಡು ಅಳಿದುಳಿದಿದ್ದ ದುರ್ಯೋಧನನ ಸೈನಿಕರೂ ಪರಾಙ್ಮುಖರಾದರು. ಬಲಿಷ್ಠನಾದ ಗಾಂಧಾರರಾಜನು ಪಲಾಯನಪರಾಯಣರಾಗಿದ್ದ ಯೋಧರನ್ನು ಕುರಿತು ಪುನಃ ಈ ಮಾತುಗಳನ್ನು ಹೇಳಿದನು: 'ಕ್ಷತ್ರಧರ್ಮವನ್ನು ತಿಳಿಯದಿರುವ ಮೂಢರೇ! ಯುದ್ಧಮಾಡಲು ಹಿಂದಿರುಗಿರಿ ಮತ್ತು ಕೆಚ್ಚಿನಿಂದ ಯುದ್ಧಮಾಡಿರಿ. ನೀವು ಪಲಾಯನ ಮಾಡುವುದರಿಂದ ಆಗುವ ಪ್ರಯೋಜನವೇನು?'

ಮಹಾರಾಜ! ಆ ಸಮಯದಲ್ಲಿ ಗಾಂಧಾರರಾಜನಾದ ಶಕುನಿಯ ಹತ್ತಿರ ಪ್ರಾಸಯೋಧಿಗಳಾದ ಹತ್ತು ಸಾವಿರ ಅಶ್ವಸೈನಿಕರಿದ್ದರು. ಜನ ಕ್ಷಯಕರವಾದ ಆ ಮಹಾಯುದ್ಧವು ನಡೆಯುತ್ತಿರಲಾಗಿ, ಶಕುನಿಯು ಆ ವಿಶಾಲಸೈನ್ಯವನ್ನು ತನ್ನೊಡನೆ ಕರೆದುಕೊಂಡು ಪಾಂಡವರ ಸೈನ್ಯದ ಹಿಂಭಾಗಕ್ಕೆ ಹೋಗಿ ಅಲ್ಲಿ ತನ್ನ ಪರಾಕ್ರಮವನ್ನು ತೋರಿಸುತ್ತಾ ನಿಶಿತ

ವಾದ ಬಾಣಗಳಿಂದ ಅವರನ್ನು ಪ್ರಹರಿಸಿದನು. ಬಿರುಗಾಳಿಯಿಂದ ಮೋಡಗಳ ಸಮೂಹಗಳು ಛಿನ್ನ-ಭಿನ್ನವಾಗುವಂತೆ–ಶಕುನಿಯು ಬಿಟ್ಟ ಬಾಣಗಳಿಂದ ಪಾಂಡವರ ವಿಶಾಲಸೈನ್ಯವು ಭಗ್ನವಾಯಿತು. ಅನತಿ ದೂರದಲ್ಲಿಯೇ ತನ್ನ ಸೈನ್ಯವು ಭಗ್ನವಾದುದನ್ನು ನೋಡಿ ಯುಧಿಷ್ಠಿರನು ಮಹಾಬಲನಾದ ಸಹದೇವನನ್ನು ಕುರಿತು ಶಾಂತಚಿತ್ತನಾಗಿ ಹೇಳಿದನು:

"ಸಹದೇವ! ನೀನು ದ್ರೌಪದಿಯ ಮಕ್ಕಳೊಡನೆ ಹೋಗಿ ಶಕುನಿಯನ್ನು ಸಂಹರಿಸು. ನಾನು ಪಾಂಚಾಲರೊಡನೆ ಸೇರಿಕೊಂಡು ದುರ್ಯೋಧನನ ರಥಸೈನ್ಯವನ್ನು ಭಸ್ಮೀಭೂತವನ್ನಾಗಿ ಮಾಡುತ್ತೇನೆ. ಎಲ್ಲ ಗಜಸೈನಿಕರೂ, ಎಲ್ಲ ಅಶ್ವಸೈನಿಕರೂ ಮತ್ತು ಮೂರು ಸಾವಿರ ಪದಾತಿಸೈನಿಕರೂ ನಿನ್ನನ್ನು ಹಿಂಬಾಲಿಸಲಿ. ಸೈನಿಕರಿಂದ ಪರಿವೃತನಾದ ನೀನು ಶಕುನಿಯನ್ನು ಸಂಹರಿಸು."

ಮಹಾರಾಜ! ಯುಧಿಷ್ಠಿರನು ಆಜ್ಞೆಮಾಡಿದಂತೆ ಧನುಷ್ಪಾಣಿಗಳಾದ ಸವಾರರಿಂದ ಯುಕ್ತವಾದ ಏಳು ನೂರು ಆನೆಗಳೂ, ಐದು ಸಾವಿರ ಕುದುರೆಗಳೂ, ಮೂರು ಸಾವಿರ ಪದಾತಿಗಳೂ, ವೀರ್ಯವಂತನಾದ ಸಹದೇವನೂ, ದ್ರೌಪದಿಯ ಐವರು ಮಕ್ಕಳೂ–ಯುದ್ಧದುರ್ಮದನಾದ ಶಕುನಿಯನ್ನು ಆಕ್ರಮಿಸಿದರು. ಅನಂತರ ಪ್ರತಾಪವಂತನಾದ ಜಯಗೃದ್ಧಿಯಾದ ಶಕುನಿಯು ಪಾಂಡವರನ್ನು ಅತಿಕ್ರಮಿಸಿ ಹಿಂದಿನಿಂದ ಪಾಂಡವರ ಸೈನ್ಯವನ್ನು ಸಂಹಾರಮಾಡುತ್ತಿದ್ದನು. ವೇಗಶಾಲಿಗಳಾದ ಪಾಂಡವರ ಅಶ್ವಸೈನಿಕರು ಬಹಳ ಕುಪಿತರಾಗಿ ಕೌರವರ ರಥಸೈನ್ಯವನ್ನು ಅತಿಕ್ರಮಿಸಿ ಶಕುನಿಯ ಸೈನ್ಯವನ್ನು ಪ್ರವೇಶಿಸಿದರು. ಶೂರರಾದ ಅಶ್ವಸೈನಿಕರು ರಣಾಂಗಣದ ಮಧ್ಯಭಾಗದಲ್ಲಿ ನಿಂತು ಸೌಬಲನ ವಿಶಾಲಸೈನ್ಯವನ್ನು ಬಾಣಗಳ ವೃಷ್ಟಿಯಿಂದ ಮುಚ್ಚಿದರು. ನಿನ್ನ ದುರ್ಮಂತ್ರಣದ ಫಲವಾಗಿ ಪುನಃ ಭೀಕರವಾದ ಯುದ್ಧವು ಪ್ರಾರಂಭವಾಯಿತು. ಆ ಮಹಾಯುದ್ಧವು ವೀರರಿಂದ ಸಂಸೇವ್ಯವಾಗಿದ್ದಿತು ಮತ್ತು ಯೋಧರು ಶತ್ರುಗಳನ್ನು ಸಂಹರಿಸಲು ಗದೆ-ಪ್ರಾಸಗಳನ್ನು ಎತ್ತಿಹಿಡಿದಿದ್ದರು. ಧನುಸ್ಸಿನ ಟೇಂಕಾರಶಬ್ದಗಳು ಉಪಶಮನಗೊಂಡುವು. ರಥಿಗಳು ಯುದ್ಧಮಾಡುವುದನ್ನು ನಿಲ್ಲಿಸಿ ಪ್ರೇಕ್ಷಕರಾದರು. ಆ ಸಮಯದಲ್ಲಿ

ನಿನ್ನ ಕಡೆಯ ಸೈನಿಕರಿಗೂ ಶತ್ರುಪಕ್ಷದ ಸೈನಿಕರಿಗೂ ಪರಾಕ್ರಮದಲ್ಲಿ ಸ್ವಲ್ಪ ವಾದರೂ ತಾರತಮ್ಯವು ಕಾಣುತ್ತಿರಲಿಲ್ಲ. ಶೂರರ ಬಾಹುಗಳಿಂದ ವಿಸೃಷ್ಟ ವಾದ ಶಕ್ತಿಗಳು–ಆಕಾಶದಿಂದ ಬೀಳುವ ನಕ್ಷತ್ರಗಳೋಪಾದಿಯಲ್ಲಿ ದೇದೀಪ್ಯ ಮಾನವಾಗಿ ಶತ್ರುಗಳ ಮೇಲೆ ಬೀಳುತ್ತಿರುವುದನ್ನು ಕುರು-ಪಾಂಡವ ಯೋಧರು ಕಂಡರು. ಪಕ್ಷ-ಪ್ರತಿಪಕ್ಷದವರಿಂದ ಪ್ರಯುಕ್ತವಾಗಿ ಬೀಳುತ್ತಿದ್ದ ವಿಮಲವಾದ ಋಷ್ಟಿಗಳಿಂದ ಆಕಾಶವು ಆವರಿಸಲ್ಪಟ್ಟು ಅತ್ಯಂತಶೋಭಾಯ ಮಾನವಾಗಿ ಕಾಣುತ್ತಿದ್ದಿತು. ಪರಸ್ಪರವಾಗಿ ಪ್ರಯೋಗಿಸಲ್ಪಟ್ಟು ಸರ್ವತ್ರ ಬೀಳುತ್ತಿದ್ದ ಪ್ರಾಸಗಳ ಸ್ವರೂಪವು–ಆಕಾಶದಲ್ಲಿ ಹಾರಾಡುವ ಮಿಡತೆಗಳ ಸಮೂಹಗಳಂತೆಯೇ ಕಾಣುತ್ತಿದ್ದಿತು. ನೂರಾರು-ಸಾವಿರಾರು ಕುದುರೆಗಳು ರಕ್ತದಿಂದ ತೋಯ್ದುಹೋದ ಸರ್ವಾಂಗವುಳ್ಳವುಗಳಾಗಿ ಗಾಯಗೊಂಡ ಸವಾರರೊಡನೆ ರಣಭೂಮಿಯಲ್ಲಿ ಬೀಳುತ್ತಿದ್ದುವು. ಯುದ್ಧದಲ್ಲಿ ಪರಸ್ಪರ ವಾಗಿ ಸಂಘರ್ಷಿಸಿ ಒಬ್ಬರಿಂದ ಮತ್ತೊಬ್ಬರು ಪಿಂಡೀಭೂತರಾಗುತ್ತಿದ್ದರು; ಕ್ಷತ-ವಿಕ್ಷತರಾಗುತ್ತಿದ್ದರು. ಮತ್ತೆ ಕೆಲವರು ಬಲವಾಗಿ ಪ್ರಹಾರಗಳನ್ನು ತಿಂದು ಮುಖದಿಂದ ರಕ್ತವನ್ನು ಕಾರುತ್ತಿದ್ದುದೂ ಅಲ್ಲಲ್ಲಿ ಕಂಡುಬಂದಿತು. ಸೈನ್ಯದ ಓಡಾಟಗಳಿಂದ ಉದ್ಭೂತವಾದ ಧೂಳಿಯಿಂದ ಆವೃತವಾಗಿದ್ದ ಆ ಸಮರಾಂಗಣದಲ್ಲಿ ಘೋರವಾದ ಕತ್ತಲೆಯು ಕವಿಯಿತು. ಆಗ ಯುದ್ಧ ಭೂಮಿಯಿಂದ ಪಲಾಯನಮಾಡುತ್ತಿದ್ದ ಅನೇಕಯೋಧರನ್ನು ನಾನು ಕಂಡೆನು. ರಣಕ್ಷೇತ್ರವು ಸಂಪೂರ್ಣವಾಗಿ ಧೂಳಿನಿಂದ ಮುಚ್ಚಿಹೋಗಿದ್ದುದ ರಿಂದ ಅನೇಕ ಕುದುರೆಗಳೂ ಮತ್ತು ಪದಾತಿಗಳೂ ಪಲಾಯನಮಾಡು ತ್ತಿದ್ದುದನ್ನು ನೋಡಿದೆನು. ಹೀಗೆ ಓಡಿಹೋಗುತ್ತಿದ್ದಾಗ ಕೆಲವರು ತತ್ತರಿಸಿ ಭೂಮಿಯಲ್ಲಿ ಬಿದ್ದು ರಕ್ತವನ್ನೇ ವಾಂತಿಮಾಡಿಕೊಳ್ಳುತ್ತಿದ್ದರು. ಪರಸ್ಪರ ವಾಗಿ ಒಬ್ಬರ ಜುಟ್ಟನ್ನು ಮತ್ತೊಬ್ಬರು ಹಿಡಿದಿರುತ್ತಿದ್ದ ಸೈನಿಕರು ಅತ್ತಲಿತ್ತ ಅಳ್ಳಾಡಲು ಸಾಧ್ಯವಾಗದೇ ಸುಮ್ಮನಿರುತ್ತಿದ್ದರು. ಕುದುರೆಗಳ ಮೇಲೆ ಕುಳಿತಿದ್ದ ಮಹಾಬಲರಾದ ಯೋಧರು ಕುಳಿತಿದ್ದ ಸ್ಥಳದಿಂದಲೇ ಪರಸ್ಪರ ವಾಗಿ ಎಳೆದಾಡುತ್ತಿದ್ದರು. ಕೆಲವು ಸೈನಿಕರು ಮಲ್ಲರೋಪಾದಿಯಲ್ಲಿ ಮುಷ್ಟಿಯುದ್ಧಗಳನ್ನು ಮಾಡುತ್ತಾ ಪರಸ್ಪರವಾಗಿ ಒಬ್ಬರನ್ನೊಬ್ಬರು

ಗಾಯಗೊಳಿಸುತ್ತಿದ್ದರು. ಪ್ರಾಣಶೂನ್ಯರಾದ ಕೆಲವು ಕುದುರೆಸವಾರರು ಕುದುರೆಗಳಿಂದಲೇ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಎಳೆದಾಡಲ್ಪಡುತ್ತಿದ್ದರು. ವಿಜಯಾಭಿಲಾಷಿಗಳಾದ ತಾವೇ ಮಹಾಶೂರರೆಂದುಕೊಂಡಿದ್ದ ಅನೇಕ ಪುರುಷರು ಭೂಮಿಯಲ್ಲಿ ಬಿದ್ದುದು ಕಂಡುಬಂದಿತು. ರಕ್ತದಿಂದ ತೋಯ್ದು ಹೋಗಿದ್ದ, ಕತ್ತರಿಸಲ್ಪಟ್ಟ ತೋಳುಗಳಿಂದ ಕೂಡಿದ್ದ, ಕೆದರಿಹೋದ ಕೇಶ ರಾಶಿಗಳಿಂದ ಕೂಡಿದ್ದ ನೂರಾರು-ಸಾವಿರಾರು ಶರೀರಗಳಿಂದ ರಣಭೂಮಿಯು ವ್ಯಾಪ್ತವಾಗಿರುವುದು ಕಂಡುಬಂದಿತು. ಸತ್ತುಹೋದ ಸವಾರರಿಂದಲೂ ಮತ್ತು ಕುದುರೆಗಳಿಂದಲೂ ರಣಭೂಮಿಯು ಸಮಾಕುಲವಾಗಲಾಗಿ ಯಾರಿಗೂ ಕುದುರೆಯ ಮೇಲೆ ಕುಳಿತು ದೂರಪ್ರಯಾಣಮಾಡಲು ಸಾಧ್ಯ ವಾಗುತ್ತಿರಲಿಲ್ಲ. ಪರಸ್ಪರವಧೈಷಿಗಳಾಗಿದ್ದ, ರಕ್ತದಿಂದ ನೆನೆದುಹೋಗಿದ್ದ ಕವಚವುಳ್ಳವರಾಗಿದ್ದ, ಮೇಲೆತ್ತಿದ್ದ ಶಸ್ತ್ರಾಯುಧವುಳ್ಳವರಾಗಿದ್ದ, ಘೋರ ತರವಾದ ನಾನಾವಿಧವಾದ ಆಯುಧಗಳನ್ನು ಹೊಂದಿದ್ದ ಯೋಧರಿಂದಲೂ ಬಹಳ ಹತ್ತಿರದಲ್ಲಿಯೇ ನಿಂತು ಯುದ್ಧಮಾಡುತ್ತಿದ್ದ ಸೈನಿಕರಿಂದಲೂ ರಣಾಂಗಣವು ತುಂಬಿದ್ದಿತು. ಬಹುಭಾಗ ಸೈನಿಕರು ಪ್ರಾಣತೊರೆದು ರಣಾಂಗಣದಲ್ಲಿ ಬಿದ್ದಿದ್ದರು. ಸುಬಲನ ಮಗನಾದ ಶಕುನಿಯು ಮುಹೂರ್ತಕಾಲ ಯುದ್ಧಮಾಡುತ್ತಿದ್ದು ಅಳಿದುಳಿದಿದ್ದ ಆರು ಸಾವಿರ ಅಶ್ವಸೈನಿಕರಿಂದ ಸಹಿತನಾಗಿ ರಣರಂಗದಿಂದ ಪರಾಙ್ಮುಖನಾದನು. ಅದೇ ರೀತಿಯಲ್ಲಿ ಪಾಂಡವಸೈನ್ಯವೂ ರಕ್ತದಿಂದ ತೋಯ್ದುಹೋಗಿದ್ದ, ಅಳಿದುಳಿದಿದ್ದ ಆರು ಸಾವಿರ ಅಶ್ವಸೈನಿಕರೊಡನೆ ಯುದ್ಧದಿಂದ ಹಿಮ್ಮೆಟ್ಟಿತು. ಪಾಂಡವರ ವಾಹನಗಳು ಬಹಳ ಬಳಲಿದ್ದುವು. ನಿಕಟವರ್ತಿಯಾದ ಮಹಾಯುದ್ಧದಲ್ಲಿ (ಹತ್ತಿರದಲ್ಲಿಯೇ ನಿಂತು ಮಾಡುವ ಮಹಾ ಯುದ್ಧದಲ್ಲಿ) ಪ್ರಾಣಗಳನ್ನೇ ಪಣವನ್ನಾಗಿಟ್ಟು ಯುದ್ಧಮಾಡುತ್ತಿದ್ದ, ರಕ್ತದಿಂದ ತೋಯ್ದುಹೋಗಿದ್ದ ಪಾಂಡವರ ಕುದುರೆಸವಾರರು ಹೀಗೆ ಹೇಳಿದರು:

"ಅಶ್ವಸೈನಿಕರಾದ ನಾವು ರಥಿಗಳೊಡನೆ ಯುದ್ಧಮಾಡಲು ಸಾಧ್ಯವಿಲ್ಲ. ಹೀಗಿರುವಾಗ ಮಹಾಗಜಗಳೊಡನೆ ಯುದ್ಧಮಾಡಲು ನಮಗೆ ಹೇಗೆ ತಾನೇ ಸಾಧ್ಯವಾಗುತ್ತದೆ? ರಥಸೈನಿಕರನ್ನು ರಥಸೈನಿಕರೇ ಎದುರಿಸಲಿ:

ಆನೆಗಳನ್ನು ಆನೆಗಳೇ ಎದುರಿಸಿ ಯುದ್ಧಮಾಡಲಿ. ಇಲ್ಲಿಂದ ಪಲಾಯನ ಮಾಡಿದ ಶಕುನಿಯು ತನ್ನ ಸೈನ್ಯದೊಳಗೆ ಸೇರಿಕೊಂಡುಬಿಟ್ಟನು. ಸೌಬಲ ರಾಜನು ನಮ್ಮೊಡನೆ ಯುದ್ಧಮಾಡುವ ಸಲುವಾಗಿ ಖಂಡಿತವಾಗಿಯೂ ಪುನಃ ಬರುವುದಿಲ್ಲ."

ಮಹಾರಾಜ! ಅಶ್ವಸೈನಿಕರು ಹೇಳಿದ ಮಾತುಗಳನ್ನು ಕೇಳಿ ದ್ರೌಪದಿಯ ಐವರು ಮಕ್ಕಳೂ, ಮದಿಸಿದ ಮಹಾಗಜಗಳೂ ಮಹಾರಥನಾದ ಪಾಂಚಾಲ್ಯನಾದ ಧೃಷ್ಟದ್ಯುಮ್ನನಿದ್ದೆಡೆಗೆ ಹೊರಟುಹೋದರು. ಸೈನಿಕರ ಓಡಾಟಗಳಿಂದ ಮೇಘಸದೃಶವಾದ ಧೂಳಿಯು ಮೇಲೇಳಲಾಗಿ ಸಹದೇವನೂ ಏಕಾಕಿಯಾಗಿ ಯುಧಿಷ್ಠಿರನಿದ್ದೆಡೆಗೆ ಹೊರಟುಹೋದನು. ಅವರೆಲ್ಲರೂ ಹೊರಟುಹೋದನಂತರ ಸುಬಲಪುತ್ರನಾದ ಕ್ರುದ್ಧನಾದ ಶಕುನಿಯು ಆಗಮಿಸಿ ಧೃಷ್ಟದ್ಯುಮ್ನನ ಸೈನ್ಯವನ್ನು ಒಂದು ಪಕ್ಕದಿಂದ ಸಂಹರಿಸಲು ಉಪಕ್ರಮಿಸಿದನು. ಪರಸ್ಪರವಧೈಷಿಗಳಾಗಿದ್ದ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಪುನಃ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಪ್ರಾಣಗಳನ್ನೇ ಮುಡುಪಾಗಿಟ್ಟು ಯೋಧರು ಯುದ್ಧಮಾಡಲು ಉಪಕ್ರಮಿಸಿದರು. ವೀರರ ಆ ಮಹಾಸಂಘರ್ಷದಲ್ಲಿ ನೂರಾರು ಸಾವಿರಾರು ಯೋಧರು ಹತರಾಗಿ ಕೆಳಗೆ ಬಿದ್ದರು. ಉಳಿದವರು ಪರಸ್ಪರವಾಗಿ ದುರುಗುಟ್ಟಿಕೊಂಡು ನೋಡುತ್ತಿದ್ದರು. ಲೋಕಕ್ಷಯಕರವಾದ ಆ ಮಹಾಸಂಗ್ರಾಮದಲ್ಲಿ ಕತ್ತಿಗಳಿಂದ ಕತ್ತರಿಸಲ್ಪಡುತ್ತಿದ್ದ ಯೋಧರ ತಲೆಗಳು ಕೆಳಗೆ ಬಿದ್ದಾಗ–ತಾಳೇಮರದಿಂದ ತಾಳೆಯ ಹಣ್ಣುಗಳು ಬಿದ್ದಾಗ ಉಂಟಾಗುವ ಶಬ್ದದಂತೆ ಮಹಾಶಬ್ದವುಂಟಾಯಿತು. ಕ್ಷತ-ವಿಕ್ಷತವಾಗಿ ಭೂಮಿಯ ಮೇಲೆ ಬೀಳುತ್ತಿದ್ದ ಕವಚರಹಿತವಾದ ಶರೀರಗಳ, ಆಯುಧಸಹಿತವಾದ ತೋಳುಗಳ ಮತ್ತು ತೊಡೆಗಳ ದೊಡ್ಡದಾದ ಕಟ-ಕಟಾ ಶಬ್ದವು ರೋಮಾಂಚಕಾರಿಯಾಗಿದ್ದಿತು. ಮಾಂಸದ ಸಲುವಾಗಿ ಮೃಗಗಳು ಪರಸ್ಪರವಾಗಿ ಕಚ್ಚಾಡುವಂತೆ ಯೋಧರು ಯುದ್ಧದಲ್ಲಿ ನಿಶಿತವಾದ ಶಸ್ತ್ರಗಳಿಂದ ತಮ್ಮ ಸಹೋದರರನ್ನೂ, ಮಕ್ಕಳನ್ನೂ, ಸ್ನೇಹಿತರನ್ನೂ ಸಂಹಾರಮಾಡುತ್ತಾ ಕಡೆಯಲ್ಲಿ ತಾವೂ ಹತರಾಗಿ ರಣಾಂಗಣದಲ್ಲಿ ಬೀಳು

ತ್ತಿದ್ದರು. ಎರಡೂ ಪಕ್ಷಗಳ ಯೋಧರು ಪರಮಕ್ರುದ್ಧರಾಗಿ ಪರಸ್ಪರವಾಗಿ ಸಂಘರ್ಷಿಸುತ್ತಾ– 'ನಾನು ಮೊದಲು ಸಂಹರಿಸುತ್ತೇನೆ. ನಾನು ಮೊದಲು ಸಂಹರಿಸುತ್ತೇನೆ'–ಎಂದು ಸ್ಪರ್ಧಿಸುತ್ತಾ ಸಾವಿರಾರು ಸಂಖ್ಯೆಯಲ್ಲಿ ಮರಣ ಹೊಂದಿದರು. ಶತ್ರುಗಳ ಪ್ರಹಾರಗಳಿಂದ ಪ್ರಾಣಶೂನ್ಯರಾದ, ಆಸನಗಳಿಂದ ಭ್ರಷ್ಟರಾದ ಅಶ್ವಾರೋಹಿಗಳೊಡನೆ ನೂರಾರು-ಸಾವಿರಾರು ಕುದುರೆಗಳು ರಣಭೂಮಿಯಲ್ಲಿ ಬೀಳುತ್ತಿದ್ದುವು. ಮಹಾರಾಜ! ನಿನ್ನ ದುರ್ಮಂತ್ರಣದ ಫಲದಿಂದಾಗಿ–ನಡುಗುತ್ತಿದ್ದ, ಮರ್ದಿತವಾಗಿದ್ದ, ಶೀಘ್ರಗಾಮಿಗಳಾದ ಕುದುರೆಗಳ ದಾರುಣಧ್ವನಿಯು ರಣರಂಗದಲ್ಲಿ ಕೇಳಿಬರುತ್ತಿದ್ದಿತು. ಯುದ್ಧ ಸನ್ನದ್ಧರಾಗಿ ಗರ್ಜಿಸುತ್ತಿರುವ ಯೋಧರ ಶಬ್ದವೂ ಶಕ್ತಿ, ಋಷ್ಟಿ ಮತ್ತು ಪ್ರಾಸಾಯುಧಗಳ ಪ್ರಹಾರಗಳ ಭಯಂಕರಶಬ್ದವೂ ಆ ರಣರಂಗದಲ್ಲಿ ಕೇಳಿಬರುತ್ತಿದ್ದಿತು. ಬಹಳವಾಗಿ ಬಳಲಿದ್ದ, ಕುಪಿತರಾಗಿದ್ದ, ಶ್ರಾಂತವಾದ ವಾಹನಗಳುಳ್ಳವರಾಗಿದ್ದ, ಬಾಯಾರಿಕೆಯಿಂದ ಕೂಡಿದ್ದ, ನಿಶಿತವಾದ ಬಾಣಗಳಿಂದ ಕ್ಷತ-ವಿಕ್ಷತರಾಗಿದ್ದ ನಿನ್ನ ಕಡೆಯ ಸೈನಿಕರು ಪಾಂಡವರನ್ನು ಎದುರಿಸಿ ನಿಂತರು. ರಕ್ತದ ವಾಸನೆಯಿಂದ ಮತ್ತರಾಗಿದ್ದ, ಬುದ್ಧಿಗೆಟ್ಟಿದ್ದ ಅನೇಕ ಯೋಧರು ತಮ್ಮ ಸಮೀಪಕ್ಕೆ ಬರುತ್ತಿದ್ದ ತಮ್ಮ ಕಡೆಯ ಯೋಧರನ್ನೂ ಮತ್ತು ಶತ್ರುಪಕ್ಷದ ಯೋಧರನ್ನೂ ವಿವೇಚನೆಯೇ ಇಲ್ಲದೆ ಸಂಹರಿಸುತ್ತಿದ್ದರು. ವಿಜಯದ ಮೇಲೆ ಆಸೆಯನ್ನಿಟ್ಟುಕೊಂಡಿದ್ದ ಅನೇಕ ಕ್ಷತ್ರಿಯರು ಬಾಣಗಳ ವೃಷ್ಟಿಗಳಿಂದ ಆಚ್ಛಾದಿತರಾಗಿ ಪ್ರಾಣಗಳನ್ನು ತೊರೆದು ಭೂಮಿಯ ಮೇಲೆ ಬಿದ್ದಿದ್ದರು. ತೋಳ, ರಣಹದ್ದು, ಗುಳ್ಳೇನರಿ–ಇವೇ ಮೊದಲಾದ ಪ್ರಾಣಿಗಳಿಗೆ ಆನಂದದಾಯಕವಾಗಿದ್ದ, ಇತರರಿಗೆ ಮಹಾ ಭಯಂಕರವಾಗಿದ್ದ ಆ ದಿವಸದಲ್ಲಿ ನಿನ್ನ ಮಗನು ನೋಡುತ್ತಿದ್ದಂತೆಯೇ ಕೌರವಸೈನಿಕರ ಘೋರಕ್ಷಯವಾಗುತ್ತಿದ್ದಿತು. ಗತಪ್ರಾಣವಾಗಿದ್ದ ನರಾಶ್ವಗಳ ಶರೀರಗಳಿಂದ ರಣಾಂಗಣವು ಆಚ್ಛಾದಿತವಾಗಿದ್ದಿತು. ನೀರಿನ ರೂಪದಲ್ಲಿ ಹರಿಯುತ್ತಿದ್ದ ರಕ್ತದಿಂದ ರಣಭೂಮಿಯು ವಿಚಿತ್ರವೂ–ಹೇಡಿಗಳಿಗೆ ಭಯ ವರ್ಧಕವೂ ಆಗಿದ್ದಿತು. ಕತ್ತಿಗಳಿಂದಲೂ, ಪಟ್ಟಿಶಗಳಿಂದಲೂ, ಶೂಲ ಗಳಿಂದಲೂ ಪುನಃ ಪುನಃ ಕ್ಷತ-ವಿಕ್ಷತರಾಗುತ್ತಿದ್ದರೂ ನಿನ್ನ ಕಡೆಯ ಯೋಧರಾಗಲೀ, ಪಾಂಡವರ ಕಡೆಯ ಯೋಧರಾಗಲೀ ಯುದ್ಧದಿಂದ

ಹಿಮ್ಮೆಟ್ಟಲಿಲ್ಲ. ಪ್ರಾಣವಿರುವವರೆಗೂ ಶತ್ರುಗಳನ್ನು ಯಥಾಶಕ್ತಿ ಪ್ರಹರಿಸುತ್ತಾ ಶಸ್ತ್ರಾಘಾತಗಳಿಂದುಂಟಾದ ಗಾಯಗಳಿಂದ ರಕ್ತವನ್ನು ಸುರಿಸುತ್ತಾ ರಣಾಂಗಣದಲ್ಲಿ ಬಿದ್ದುಹೋಗುತ್ತಿದ್ದರು. ಒಂದು ಕಡೆಯಲ್ಲಿ ಮುಂಡವೊಂದು ಎಡಗೈಯಲ್ಲಿ ಕೂದಲಿನಿಂದ ಶಿರಸ್ಸೊಂದನ್ನು ಹಿಡಿದುಕೊಂಡಿರುವುದೂ, ಬಲಗೈಯಲ್ಲಿ ರಕ್ತದಿಂದ ತೋಯ್ದುಹೋಗಿದ್ದ ನಿಶಿತವಾದ ಕತ್ತಿಯನ್ನು ಮೇಲಕ್ಕೆತ್ತಿದ್ದುದೂ ಕಂಡುಬಂದಿತು. ಅದೇ ರೀತಿಯಲ್ಲಿ ಅನೇಕ ಕಬಂಧಗಳು ಮೇಲೆದ್ದು ನಿಂತಿರಲಾಗಿ ರಕ್ತದ ವಾಸನೆಯಿಂದಾಗಿ ಯೋಧರು ಮೋಹವಶರಾದರು. ಯುದ್ಧದ ಕೋಲಾಹಲವು ಸ್ವಲ್ಪ ಕಡಿಮೆಯಾಗುತ್ತಿರ ಲಾಗಿ ಶಕುನಿಯು ಅಳಿದುಳಿದಿದ್ದ ಸ್ವಲ್ಪವೇ ಕುದುರೆಸವಾರರೊಡನೆ ಪಾಂಡವರ ಸೈನ್ಯವನ್ನು ಪುನಃ ಆಕ್ರಮಿಸಿದನು. ವಿಜಯದಲ್ಲಿ ಬಹಳ ಆಸೆಯುಳ್ಳವ ರಾಗಿದ್ದ ಪಾಂಡವರು ಬಹಳ ತ್ವರೆಯಿಂದಲೇ ಶಕುನಿಯನ್ನು ಎದುರಿಸಿದರು. ಯುದ್ಧಪ್ರವಾಹವನ್ನು ದಾಟಲು ಇಚ್ಛಿಸಿದ್ದ ಪಾಂಡವರು ಆಯುಧಗಳನ್ನೆ ತ್ತಿದ್ದ ಗಜಾಶ್ವ-ಪದಾತಿಗಳ ಮೂಲಕವಾಗಿ ಶಕುನಿಯನ್ನು ಎಲ್ಲ ಕಡೆ ಗಳಿಂದಲೂ ಸುತ್ತುವರಿದು ಅವನನ್ನು ಮಧ್ಯದಲ್ಲಿ ಸೇರಿಸಿಕೊಂಡು, ನಾನಾ ವಿಧವಾದ ಶಸ್ತ್ರಗಳಿಂದ ಪ್ರಹರಿಸಲು ಉಪಕ್ರಮಿಸಿದರು. ಪಾಂಡವರು ಶಕುನಿಯ ಮೇಲೆ ಎಲ್ಲ ಕಡೆಗಳಿಂದಲೂ ದಾಳಿನಡೆಸುತ್ತಿರುವುದನ್ನು ನೋಡಿ ನಿನ್ನ ಕಡೆಯ ರಥಾಶ್ವ-ಗಜ-ಪದಾತಿಸೈನಿಕರು ಪಾಂಡವರನ್ನು ಆಕ್ರಮಿಸಿದರು. ಕೆಲವರು ಪದಾತಿಸೈನಿಕರು ಶತ್ರುಪಕ್ಷದ ಪದಾತಿಸೈನಿಕರೊಡನೆ ಯುದ್ಧಮಾಡುತ್ತಿದ್ದು ಶಸ್ತ್ರಗಳೆಲ್ಲವೂ ಮುಗಿದುಹೋಗಲಾಗಿ ಕಾಲು ಗಳಿಂದಲೂ, ಮುಷ್ಟಿಗಳಿಂದಲೂ ಎದುರಾಳಿಗಳನ್ನು ಪ್ರಹರಿಸಿ ಸಂಹರಿಸು ತ್ತಿದ್ದರು. ಹೀಗೆಯೇ ಯುದ್ಧವನ್ನು ಮುಂದುವರಿಸುತ್ತಾ ತಾವೂ ಗತ ಪ್ರಾಣರಾಗಿ ರಣಾಂಗಣದಲ್ಲಿ ಬಿದ್ದುಹೋಗುತ್ತಿದ್ದರು. ಪುಣ್ಯವು ಕ್ಷಯಿಸಿದ ನಂತರ ಸ್ವರ್ಗಲೋಕದ ವಿಮಾನಗಳಿಂದ ಸಿದ್ಧರು ಭ್ರಷ್ಟರಾಗಿ ಕೆಳಗೆ ಬೀಳುವಂತೆ–ರಥಿಗಳು ರಥಗಳಿಂದಲೂ, ಮಾವಟಿಗರು ಆನೆಗಳಿಂದಲೂ ಕೆಳಕ್ಕೆ ಬೀಳುತ್ತಿದ್ದರು. ಹೀಗೆ ಆ ಮಹಾಸಂಗ್ರಾಮದಲ್ಲಿ ಅನೇಕಯೋಧರು ವಿಜಯಗಳಿಸಲು ಪ್ರಯತ್ನಶೀಲರಾಗಿ ಪರಸ್ಪರವಾಗಿ ಒಬ್ಬರು ಮತ್ತೊಬ್ಬ ರನ್ನು ಸಂಹರಿಸುತ್ತಿದ್ದರು. ಇನ್ನೂ ಕೆಲವರು ವಿಜಯಗಳಿಸುವ ಸಲುವಾಗಿ

ಪಿತೃಗಳನ್ನೂ, ಸೋದರರನ್ನೂ, ಸ್ನೇಹಿತರನ್ನೂ ಮತ್ತು ಮಕ್ಕಳನ್ನೂ ಸಂಹರಿಸುತ್ತಿದ್ದರು. ಭರತಶ್ರೇಷ್ಠನೇ! ಪ್ರಾಸ-ಖಡ್ಗ ಬಾಣಗಳಿಂದ ವ್ಯಾಪ್ತವಾಗಿದ್ದ ಅತ್ಯಂತ ಭಯಂಕರವಾಗಿದ್ದ ಆ ರಣಭೂಮಿಯಲ್ಲಿ ಯುದ್ಧ ಮರ್ಯಾದೆಯನ್ನು ಮೀರಿದ ಘೋರಯುದ್ಧವು ನಡೆಯುತ್ತಿದ್ದಿತು.”

೨೩ನೆಯ ಅಧ್ಯಾಯವು ಮುಗಿಯಿತು.

——

೨೪ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಕೃಷ್ಣನ ಸಮ್ಮುಖದಲ್ಲಿ ಅರ್ಜುನನು ದುರ್ಯೋಧನನನ್ನು ನಿಂದಿಸಿದುದು: ರಥಸೈನ್ಯದ ಸಂಹಾರ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಪಾಂಡವರಿಂದ ಬಹುಸಂಖ್ಯಾತರಾದ ಕೌರವ ಯೋಧರು ಹತರಾಗಲಾಗಿ ಯುದ್ಧದ ಕೋಲಾಹಲಶಬ್ದವು ಸ್ವಲ್ಪಮಟ್ಟಿಗೆ ಅಡಗಿಹೋಯಿತು. ಹತರಾಗದೇ ಉಳಿದಿದ್ದ ಏಳು ನೂರು ಅಶ್ವಸೈನಿಕರೊಡನೆ ಶಕುನಿಯು ಯುದ್ಧದಿಂದ ಹಿಮ್ಮೆಟ್ಟಿದನು. ಶಕುನಿಯು ದುರ್ಯೋಧನನ ಸೈನ್ಯದ ಬಳಿಗೆ ತ್ವರೆಯಿಂದ ಹೋಗಿ ಅವರೊಡನೆ ಹೇಳಿದನು: ‘ಶತ್ರುದಮನರೇ! ನೀವು ಹರ್ಷೋತ್ಸಾಹಗಳಿಂದ ಕೂಡಿ ಪುನಃ ಶತ್ರುಗಳೊಡನೆ ಯುದ್ಧಮಾಡಿರಿ.’ ಹೀಗೆಂದು ಸೈನಿಕರಿಗೆ ಆದೇಶವಿತ್ತನಂತರ ಮಹಾಬಲನಾದ ದುರ್ಯೋಧನಮಹಾರಾಜನು ಎಲ್ಲಿರುವನೆಂದು ಅಲ್ಲಿದ್ದ ಕ್ಷತ್ರಿಯರನ್ನು ಪ್ರಶ್ನಿಸಿದನು.

ಶಕುನಿಯ ಮಾತನ್ನು ಕೇಳಿ ಕ್ಷತ್ರಿಯರು ಉತ್ತರಿಸಿದರು:

“ಸೌಬಲ! ಪೂರ್ಣಚಂದ್ರನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿರುವ ದೊಡ್ಡದಾದ ಶ್ವೇತಚ್ಛತ್ರವು ಈ ರಣರಂಗಮಧ್ಯದಲ್ಲಿ ಎಲ್ಲಿ ಕಾಣುತ್ತಿರುವುದೋ ಮತ್ತು ಶರೀರವನ್ನು ರಕ್ಷಿಸುವ ಕವಚವನ್ನು ತೊಟ್ಟು ಸುಸಜ್ಜಿತರಾಗಿರುವ ಮಹಾರಥರೆಲ್ಲಿರುವರೋ–ಅವರ ಮಧ್ಯದಲ್ಲಿ ಮಹಾ

ಬಲನಾದ ದುರ್ಯೋಧನನು ನಿಂತಿದ್ದಾನೆ. ಮೇಘಗಳ ಗಂಭೀರಶಬ್ದಕ್ಕೆ ಸಮಾನವಾದ ಭಯಂಕರವಾದ ಶಬ್ದವೆಲ್ಲಿ ಕೇಳುತ್ತಿರುವುದೋ–ಅಲ್ಲಿಯೇ ನಮ್ಮ ರಾಜನಿದ್ದಾನೆ. ನೀನು ಬಹಳ ಶೀಘ್ರವಾಗಿಯೇ ಅಲ್ಲಿಗೆ ಹೋಗು. ಅಲ್ಲಿ ನೀನು ದುರ್ಯೋಧನರಾಜನನ್ನು ಕಾಣುವೆ."



ಮಹಾರಾಜ! ದುರ್ಯೋಧನನ ಕಡೆಯ ಯೋಧರಿಂದ ಹೀಗೆ ಹೇಳಲ್ಪಟ್ಟ ಶಕುನಿಯು–ಚಿತ್ರಯೋಧಿಗಳಾದ ವೀರರಿಂದ ಪರಿವೃತನಾಗಿ ನಿಂತಿದ್ದ ನಿನ್ನ ಮಗನಿದ್ದೆಡೆಗೇ ತೆರಳಿದನು. ರಥಸೈನ್ಯದ ಮಧ್ಯಭಾಗದಲ್ಲಿದ್ದ ದುರ್ಯೋಧನನನ್ನು ನೋಡಿ ಶಕುನಿಯು ನಿನ್ನ ಕಡೆಯ ರಥಿಗಳೆಲ್ಲರನ್ನೂ

ಸಂತೋಷಗೊಳಿಸುತ್ತಾ ತಾನು ಕೃತಾರ್ಥನಾದೆನೆಂದೇ ಭಾವಿಸಿ ಪರಮ ಹೃಷ್ಟನಾಗಿ ದುರ್ಯೋಧನನೊಡನೆ ಹೇಳಿದನು:

"ದುರ್ಯೋಧನ! ನೀನು ಶತ್ರುಪಕ್ಷದ ರಥಸೈನ್ಯವನ್ನು ಜಯಿಸು. ನಾನು ಅಶ್ವಸೈನ್ಯವನ್ನು ಜಯಿಸಿ ಬಂದಿರುವೆನು. ಪ್ರಾಣಗಳ ಮೇಲಿನ ಹಂಗನ್ನೇ ತೊರೆದು ಯುದ್ಧಮಾಡದಿದ್ದರೆ (ಯೋಧರನ್ನು ಬಲಿಗೊಡದಿದ್ದರೆ) ಯುಧಿಷ್ಠಿರನನ್ನು ಜಯಿಸಲು ಶಕ್ಯವಾಗುವುದಿಲ್ಲ. ಯುಧಿಷ್ಠಿರನಿಂದ ಸುರಕ್ಷಿತವಾಗಿರುವ ರಥಸೈನ್ಯವನ್ನು ಧ್ವಂಸಮಾಡಿದನಂತರ ಈ ಗಜಸೈನಿಕರನ್ನೂ ಪದಾತಿಸೈನಿಕರನ್ನೂ ಸಂಹರಿಸೋಣ."

ಮಹಾರಾಜ! ಶಕುನಿಯ ಮಾತುಗಳನ್ನು ಕೇಳಿ ವಿಜಯದ ಮೇಲೆ ಆಸೆಯನ್ನಿಟ್ಟುಕೊಂಡಿದ್ದ ನಿನ್ನ ಕಡೆಯ ಯೋಧರು ಪರಮಹೃಷ್ಟರಾಗಿ ಪಾಂಡವರ ಸೈನ್ಯದ ಮೇಲೆ ಆಕ್ರಮಣವನ್ನು ನಡೆಸಿದರು. ಎಲ್ಲರ ಬತ್ತಳಿಕೆಗಳೂ ಬಾಯಿ ತೆಗೆದುಕೊಂಡೇ ಇದ್ದುವು. ಎಲ್ಲರೂ ಧನುಸ್ಸುಗಳನ್ನು ಹಿಡಿದಿದ್ದರು. ಧನುಸ್ಸುಗಳನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಸಿಂಹನಾದಗಳನ್ನೂ ಮಾಡಿದರು. ಪುನಃ ಅಲ್ಲಿ ಧನುಸ್ಸುಗಳ ಟೇಂಕಾರ ಶಬ್ದವೂ–ಸುಪ್ರಮುಕ್ತವಾದ ಬಾಣಗಳ ಸುದಾರುಣವಾದ 'ಸೊಯ್' ಎಂಬ ಶಬ್ದವೂ ಕೇಳಿಬಂದಿತು. ಧನುಸ್ಸುಗಳನ್ನೆತ್ತಿಕೊಂಡು ವೇಗವಾಗಿ ತನ್ನ ಸಮೀಪಕ್ಕೆ ಬಂದ ದುರ್ಯೋಧನನ ಕಡೆಯ ಯೋಧರನ್ನು ನೋಡಿ ಕುಂತಿಯ ಮಗನಾದ ಧನಂಜಯನು ದೇವಕಿಯ ಮಗನಾದ ಶ್ರೀಕೃಷ್ಣನೊಡನೆ ಹೇಳಿದನು:

"ಜನಾರ್ದನ! ನೀನೀಗ ಶಾಂತಚಿತ್ತನಾಗಿ ಕುದುರೆಗಳನ್ನು ನಡೆಸು. ಸಮುದ್ರಪ್ರಾಯವಾಗಿರುವ ಈ ಸೈನ್ಯದೊಳಗೆ ರಥವನ್ನು ನುಗ್ಗಿಸು. ನಿಶಿತ ವಾದ ಬಾಣಗಳಿಂದ ಶತ್ರುಗಳನ್ನು ಕಡೆಗಾಣಿಸಿಬಿಡುತ್ತೇನೆ. ಪರಸ್ಪರವಾಗಿ ಎದುರಿಸಿ ನಡೆಸುತ್ತಿರುವ ಈ ಮಹಾಯುದ್ಧದ ಹದಿನೆಂಟನೆಯ ದಿವಸವಿದು. ಅಪಾರಸಂಖ್ಯೆಯಲ್ಲಿದ್ದ ಈ ಮಹಾತ್ಮರ (ಕೌರವ-ಪಾಂಡವರ) ಸೈನ್ಯವು ಈ ವೇಳೆಗಾಗಲೇ ಯುದ್ಧದಲ್ಲಿ ನಾಶಹೊಂದಿದೆ. ದೈವವು (ಅದೃಷ್ಟವು) ಯಾವ ರೀತಿಯಲ್ಲಿರುವುದೆಂಬುದನ್ನಾದರೂ ನೋಡು, ಕೃಷ್ಣ! ದುರ್ಯೋ

ಧನನ ಸೈನ್ಯವು ಸಮುದ್ರಸದೃಶವಾಗಿದ್ದಿತು. ನಮ್ಮೊಡನೆ ಯುದ್ಧದಲ್ಲಿ ತೊಡಗಿ ಆ ಮಹಾಸೈನ್ಯವಿಂದು ಗೋಷ್ಪಾದದಷ್ಟಾಗಿದೆ.

**ಹತೇ ಭೀಷ್ಮೇ ತು ಸಂದಧ್ಯಾಚ್ಛಿವಂ ಸ್ಯಾದಿಹ ಮಾಧವ ।**
**ನ ಚ ತತ್ಕೃತವಾನ್ಮೂಢೋ ಧಾರ್ತರಾಷ್ಟ್ರಃ ಸುಬಾಲಿಶಃ ॥೨೦॥**

ಮಾಧವ! ಭೀಷ್ಮನ ಅವಸಾನವಾದನಂತರವಾದರೂ ದುರ್ಯೋಧನನು ಸಂಧಿಮಾಡಿಕೊಂಡಿದ್ದರೆ ಅದರಿಂದ ಎಲ್ಲರಿಗೂ ಕಲ್ಯಾಣವೇ ಉಂಟಾಗುತ್ತಿದ್ದಿತು. ಆದರೆ ಮೂರ್ಖನಾದ, ಬಾಲಬುದ್ಧಿಯವನಾದ ದುರ್ಯೋಧನನು ಹಾಗೆ ಮಾಡಲಿಲ್ಲ.

ಮಾಧವ! ಭೀಷ್ಮನು ದುರ್ಯೋಧನನಿಗೆ ಸತ್ಯವಾದ ಮತ್ತು ಹಿತವಾದ ಮಾತನ್ನೇ ಹೇಳಿದನು. ಬುದ್ಧಿಹೀನನಾದ ದುರ್ಯೋಧನನು ಅವನ ಆ ಮಾತಿನಂತೆ ನಡೆದುಕೊಳ್ಳಲಿಲ್ಲ. ಭಯಂಕರವಾದ ಅಂದಿನ ಮಹಾ ಯುದ್ಧದಲ್ಲಿ ಭೀಷ್ಮನು ರಥದಿಂದ ಚ್ಯುತನಾಗಿ ಭೂಮಿಯ ಮೇಲೆ ಬಿದ್ದ ನಂತರವಾದರೂ ಯುದ್ಧವು ನಿಂತುಹೋಗಬೇಕಾಗಿದ್ದಿತು. ಮುಂದೆ ಯಾವ ಕಾರಣದಿಂದ ಯುದ್ಧವು ಮುಂದುವರಿಯಿತೆಂಬುದನ್ನು ನಾನು ತಿಳಿಯುತ್ತಿಲ್ಲ. ಶಂತನುವಿನ ಮಗನಾದ ಭೀಷ್ಮನು ನೆಲಕ್ಕೆ ಬಿದ್ದನಂತರವೂ ಯುದ್ಧವನ್ನು ಮುಂದುವರಿಸಿದ ಧೃತರಾಷ್ಟ್ರನ ಮಕ್ಕಳನ್ನು ನಾನು ಸರ್ವಥಾ ಮೂಢರೆಂದೂ–ಬಾಲಬುದ್ಧಿಯವರೆಂದೂ ಭಾವಿಸುತ್ತೇನೆ. ಬ್ರಹ್ಮವಿದರಲ್ಲಿ ಶ್ರೇಷ್ಠರಾದ ದ್ರೋಣರು ಮತ್ತು ರಾಧೇಯ-ವಿಕರ್ಣರು ಹತರಾದನಂತರವೂ ಈ ಸಂಹಾರಕಾರ್ಯವು ನಿಲ್ಲಲೇ ಇಲ್ಲ. ಪುತ್ರಸಹಿತನಾದ, ನರಶ್ರೇಷ್ಠನಾದ ಕರ್ಣನು ಹತನಾದನಂತರ ಕೌರವಸೈನ್ಯದಲ್ಲಿ ಸ್ವಲ್ಪಭಾಗ ಮಾತ್ರವೇ ಉಳಿದಿತ್ತು. ಕೌರವರ ಬಲವು ಸಂಪೂರ್ಣವಾಗಿ ಕುಗ್ಗಿಹೋಗಿದ್ದರೂ ಈ ಸಂಹಾರಕಾರ್ಯವು ಉಪಶಮನವಾಗಲೇ ಇಲ್ಲ. ಶ್ರುತಾಯುಷ, ವೀರನಾದ ಜಲಸಂಧ, ಪೌರವ, ಶ್ರುತಾಯುಧರಾಜ–ಇವರೆಲ್ಲರೂ ಹತರಾದ ನಂತರವೂ ಸಂಹಾರಕಾರ್ಯವು ಉಪಶಮನಹೊಂದಲಿಲ್ಲ.

ಭೂರಿಶ್ರವಸ, ಶಲ್ಯ, ಶಾಲ್ವ, ಅವಂತೀವೀರರು ಹತರಾದನಂತರವೂ ಈ ಸಂಹಾರಕಾರ್ಯವು ಉಪಶಮನಹೊಂದಲೇ ಇಲ್ಲ. ಭಗದತ್ತ,

ಕಾಂಬೋಜರಾಜನಾದ ಶೂರನಾದ ಸುದಕ್ಷಿಣ, ಸುದಾರುಣನಾದ ದುಃಶಾಸನ–ಇವರು ಹತರಾದನಂತರವೂ ಈ ಸಂಹಾರಕಾರ್ಯವು ನಿಲ್ಲಲೇ ಇಲ್ಲ. ಬೇರೆ-ಬೇರೆ ದೇಶಗಳಿಂದ ಆಗಮಿಸಿದ್ದ, ಶೂರರಾದ, ಬಲಿಷ್ಠರಾಗಿದ್ದ ಮಂಡಲೇಶ್ವರರು ಹತರಾದುದನ್ನು ನೋಡಿಯೂ ಈ ಸಂಹಾರಕಾರ್ಯವು ಉಪಶಮನಗೊಳ್ಳಲು ದುರ್ಯೋಧನನು ಅವಕಾಶವನ್ನೀಯಲಿಲ್ಲ. ಭೀಮ ಸೇನನಿಂದ ಹತರಾಗಿ ಕೆಳಕ್ಕೆ ಬೀಳುತ್ತಿದ್ದ ಅಕ್ಷೌಹಿಣೀಸೈನ್ಯದ ನಾಯಕರನ್ನು ನೋಡಿಯೂ ಮೋಹದಿಂದಲೋ ಅಥವಾ ಲೋಭದಿಂದಲೋ ಈ ಸಂಹಾರ ಕಾರ್ಯವು ಮುಂದುವರಿಯಿತೇ ಹೊರತು ನಿಲ್ಲಲೇ ಇಲ್ಲ. ದುರ್ಯೋಧನ ನೊಬ್ಬನ ಹೊರತಾಗಿ ರಾಜಕುಲದಲ್ಲಿ ಹುಟ್ಟಿದ, ಅದರಲ್ಲಿಯೂ ಸುಪ್ರಸಿದ್ಧ ವಾದ ಕೌರವಕುಲದಲ್ಲಿ ಜನ್ಮತಾಳಿದ ಯಾವನು ತಾನೇ ತನ್ನ ಬಂಧು ಗಳೊಡನೆ ನಿರರ್ಥಕವಾದ ಇಂತಹ ವೈರವನ್ನು ಕಟ್ಟಿಕೊಳ್ಳುತ್ತಾನೆ? ಗುಣ ದಲ್ಲಿಯೂ, ಬಲದಲ್ಲಿಯೂ ಮತ್ತು ಶೌರ್ಯದಲ್ಲಿಯೂ ಶತ್ರುಗಳು ತನ ಗಿಂತಲೂ ಅಧಿಕರಾದವರೆಂದು ತಿಳಿದನಂತರವೂ, ತನಗೆ ಹಿತವಾದ ಮಾರ್ಗವು ಯಾವುದು? ಯಾವ ಮಾರ್ಗವನ್ನು ಅನುಸರಿಸುವುದರಿಂದ ತನಗೆ ಅಹಿತ ವಾಗುತ್ತದೆ?–ಎಂಬುದನ್ನು ತಿಳಿದೂ ಸಹ ಪ್ರಾಜ್ಞನಾದ ಮತ್ತು ಮೂರ್ಖ ನಲ್ಲದ ಯಾವನು ತಾನೇ ತನಗಿಂತಲೂ ಎಲ್ಲದರಲ್ಲಿಯೂ ವಿಶಿಷ್ಟರಾದವ ರೊಡನೆ ಯುದ್ಧಕ್ಕೆ ಹೋಗುತ್ತಾನೆ? ಮಾಧವ! ನೀನೇ ದುರ್ಯೋಧನನಿಗೆ ಹಿತವಾದ ಮಾತುಗಳನ್ನು ಹೇಳಿದರೂ ಪಾಂಡವರೊಡನೆ ಸಂಧಿಮಾಡಿ ಕೊಳ್ಳಲು ಅವನಿಗೆ ಮನಸ್ಸು ಬರಲೇ ಇಲ್ಲ. ಹೀಗಿರುವಾಗ ಅವನು ಬೇರೆ ಯವರ ಮಾತನ್ನು ಹೇಗೆ ತಾನೇ ಕೇಳಿಯಾನು? ಸಂಧಿಗಾಗಿ ವೀರನಾದ ಭೀಷ್ಮ, ದ್ರೋಣರು, ವಿದುರ–ಇವರೆಲ್ಲರೂ ಹೇಳಿದ ಹಿತೋಪದೇಶಗಳನ್ನೂ ಅವನು ತಿರಸ್ಕರಿಸಿಬಿಟ್ಟನು. ಈಗ ಅವನಿಗೆ ಯಾವ ಔಷಧವಿದೆ? ಜನಾರ್ದನ! ದುರ್ಯೋಧನನು ತನ್ನ ಮೌಢ್ಯದಿಂದಲೇ ವೃದ್ಧನಾದ ತಂದೆಯ ಮಾತನ್ನೂ ತಿರಸ್ಕರಿಸಿದನು. ಯಾವಾಗಲೂ ಹಿತವಾದ ಮಾತುಗಳನ್ನೇ ಆಡುತ್ತಿದ್ದ ತಾಯಿಯ ಮಾತನ್ನೂ ಗೌರವಿಸದೇ ತಿರಸ್ಕರಿಸಿದನು. ತಂದೆ-ತಾಯಿಗಳ ಮಾತೇ ಅವನಿಗೆ ಪಥ್ಯವಾಗದಿದ್ದ ಮೇಲೆ ಬೇರೆ ಯಾರ ಮಾತು ಅವನಿಗೆ ರುಚಿಸುತ್ತದೆ?

**ಕುಲಾನ್ತಕರಣೋ ವ್ಯಕ್ತಂ ಜಾತ ಏಷ ಜನಾರ್ದನ ।**
**ತಥಾಸ್ಯ ದೃಶ್ಯತೇ ಚೇಷ್ಟಾ ನೀತಿಶ್ಚೈವ ವಿಶಾಂಪತೇ ॥೩೭॥**

ಜನಾರ್ದನ! ನಿಶ್ಚಯವಾಗಿಯೂ ಇವನು ತನ್ನ ಕುಲವನ್ನು ಸಂಪೂರ್ಣವಾಗಿ ವಿನಾಶಮಾಡಲೆಂದೇ ಹುಟ್ಟಿದ್ದಾನೆ. ಅದಕ್ಕೆ ಅನುಸಾರವಾಗಿಯೇ ಇವನ ನಡೆ ಮತ್ತು ನೀತಿಗಳೂ ಇವೆ.

**ನೈಷ ದಾಸ್ಯತಿ ನೋ ರಾಜ್ಯಮಿತಿ ಮೇ ಮತಿರಚ್ಯುತ ।**
**ಉಕ್ತೋಽಹಂ ಬಹುಶಸ್ತಾತ ವಿದುರೇಣ ಮಹಾತ್ಮನಾ ।**
**ನ ಜೀವನ್ದಾಸ್ಯತೇ ಭಾಗಂ ಧಾರ್ತರಾಷ್ಟ್ರಸ್ತು ಮಾನದ ॥೩೯॥**

ಅಚ್ಯುತ! ದುರ್ಯೋಧನನು ಈಗಲೂ ನಮಗೆ ರಾಜ್ಯವನ್ನು ಕೊಡಲಾರನೆಂಬುದೇ ನನ್ನ ಅಭಿಪ್ರಾಯವಾಗಿದೆ. ಮಾನದನೇ! 'ಜೀವಂತನಾಗಿರುವಾಗ ದುರ್ಯೋಧನನು ರಾಜ್ಯದ ಭಾಗವನ್ನು ಕೊಡುವುದಿಲ್ಲ'– ಎಂಬುದಾಗಿ ಮಹಾತ್ಮನಾದ ವಿದುರನು ನನಗೆ ಹಲವು ಬಾರಿ ಹೇಳಿದ್ದನು.

**ಯಾವತ್ಪ್ರಾಣಾ ಧರಿಷ್ಯನ್ತಿ ಧಾರ್ತರಾಷ್ಟ್ರಸ್ಯ ದುರ್ಮತೇಃ ।**
**ತಾವದ್ಯುಷ್ಮಾಸ್ವಪಾಪೇಷು ಪ್ರಚರಿಷ್ಯತಿ ಪಾಪಕಮ್ ॥೪೦॥**

'ದುರ್ಮತಿಯಾದ ದುರ್ಯೋಧನನ ಪ್ರಾಣಗಳು ಎಂದಿನವರೆಗೆ ದೇಹದಲ್ಲಿ ಸ್ಥಿರವಾಗಿರುತ್ತವೆಯೋ–ಅಂದಿನವರೆಗೂ ನಿಷ್ಪಾಪರಾದ ನಿಮ್ಮ ವಿಷಯದಲ್ಲಿ ಅವನು ಪಾಪಪೂರ್ಣವಾದ ವ್ಯವಹಾರವನ್ನೇ ಮಾಡುತ್ತಿರುತ್ತಾನೆ. ಯುದ್ಧವೊಂದು ಹೊರತಾಗಿ ಬೇರೆ ಯಾವುದೇ ಉಪಾಯದಿಂದಲೂ ಅವನನ್ನು ಜಯಿಸಲು ಪ್ರಯತ್ನಿಸುವುದು ಯುಕ್ತವೂ ಅಲ್ಲ; ಸಾಧ್ಯವೂ ಅಲ್ಲ.' ಮಾಧವ! ಹೀಗೆಂಬುದಾಗಿ ಸತ್ಯದರ್ಶನನಾದ ವಿದುರನು ನನ್ನೊಡನೆ ನೂರಾರು ಬಾರಿ ಹೇಳಿದ್ದನು. ಮಹಾತ್ಮನಾದ ವಿದುರನು ಹಿಂದೆ ನನ್ನೊಡನೆ ಹೇಳಿದ್ದಂತೆಯೇ ದುರಾತ್ಮನಾದ ದುರ್ಯೋಧನನ ಎಲ್ಲ ವಿಧವಾದ ದುಷ್ಪ್ರಯತ್ನಗಳನ್ನೂ ನಾನು ತಿಳಿದುಕೊಂಡಿರುತ್ತೇನೆ.

ಜಮದಗ್ನಿಯ ಮಗನಾದ ಪರಶುರಾಮನಿಂದ ಯಥಾರ್ಥವಾದ ಮತ್ತು ಹಿತಕರವಾದ ಮಾತನ್ನು ಕೇಳಿ ಯಾವನು ಅದನ್ನು ತಿರಸ್ಕರಿಸಿದನೋ–ಅವನು ನಿಶ್ಚಯವಾಗಿಯೂ ದುರ್ಬುದ್ಧಿಯವನೇ ಸರಿ. ಅವನು

ನಿಶ್ಚಯವಾಗಿಯೂ ಇಂದು ವಿನಾಶದ ಅಂಚಿನಲ್ಲಿಯೇ ಇದ್ದಾನೆ. ಸುಯೋಧನನು ಹುಟ್ಟಿದೊಡನೆಯೇ ಸಿದ್ಧಪುರುಷರು 'ಏನಂ ಪ್ರಾಪ್ಯ **ದುರಾತ್ಮಾನಂ ಕ್ಷಯಂ ಕ್ಷತ್ರಂ ಗಮಿಷ್ಯತಿ**–ಈ ದುರಾತ್ಮನನ್ನು ಪಡೆದು ಕ್ಷತ್ರಿಯರ ವಂಶವೇ ಕ್ಷಯಿಸಿಹೋಗುತ್ತದೆ' ಎಂಬುದಾಗಿ ಹಲವು ಬಾರಿ ಹೇಳಿದ್ದರು. ಅವರು ಆಗ ಹೇಳಿದ್ದ ಮಾತುಗಳು ಇಂದು ಯಥಾರ್ಥವಾಗಿ ಪರಿಣಮಿಸಿವೆ. ದುರ್ಯೋಧನನ ಸಲುವಾಗಿ ಅನೇಕರಾಜರು ನಿಧನಹೊಂದಿದರು. ಈಗ ನಾನು ಯುದ್ಧದಲ್ಲಿ ಅವನ ಕಡೆಯ ಎಲ್ಲ ಯೋಧರನ್ನೂ ಸಂಹರಿಸುತ್ತೇನೆ. ಬಹಳ ಬೇಗ ಅವನ ಪಕ್ಷದಲ್ಲಿರುವ ಎಲ್ಲ ಕ್ಷತ್ರಿಯರೂ ಹತರಾದನಂತರ, ಅವನ ಯುದ್ಧಶಿಬಿರಗಳು ಶೂನ್ಯವಾದ ನಂತರ ತನ್ನ ವಧೆಗಾಗಿಯೇ ಅವನು ನಮ್ಮೊಡನೆ ಯುದ್ಧಮಾಡಲು ಇಚ್ಛಿಸುತ್ತಾನೆ. ಮಾಧವ! 'ದುರಾತ್ಮನಾದ ದುರ್ಯೋಧನನ ಅಂತ್ಯ ದೊಡನೆಯೇ ನಮ್ಮ ವೈರದ ಅಂತ್ಯವೂ ಆಗುತ್ತದೆ'– ಎಂದು ನಾನು ಅನುಮಾನಪ್ರಮಾಣಗಳಿಂದ ಊಹಿಸುತ್ತೇನೆ. ನನ್ನ ಬುದ್ಧಿಯಿಂದಲೂ, ವಿದುರನ ಮಾತಿನಿಂದಲೂ ಮತ್ತು ದುರಾತ್ಮನಾದ ದುರ್ಯೋಧನನ ದುರ್ವ್ಯವಹಾರದಿಂದಲೂ ವಿಚಾರಮಾಡಿ ನಾನು ಹೀಗಾಗುವುದನ್ನೇ ಕಾಣುತ್ತಿದ್ದೇನೆ. ಆದುದರಿಂದ ವೀರನೇ! ಮಹಾಬಾಹೋ! ನೀನೀಗ ಕೌರವಸೈನ್ಯದ ಕಡೆಗೆ ರಥವನ್ನು ನಡೆಸು. ನಾನು ನಿಶಿತವಾದ ಬಾಣಗಳಿಂದ ದುರ್ಯೋಧನನನ್ನೂ ಅವನ ಸೈನ್ಯವನ್ನೂ ಯುದ್ಧದಲ್ಲಿ ಸಂಹರಿಸುತ್ತೇನೆ. ದುರ್ಯೋಧನನು ನೋಡುತ್ತಿರುವಂತೆಯೇ ಅವನ ದುರ್ಬಲವಾದ ಈ ಸೈನ್ಯವನ್ನು ಸಂಹರಿಸಿ ಧರ್ಮರಾಜನಿಗೆ ಕ್ಷೇಮವನ್ನುಂಟುಮಾಡುತ್ತೇನೆ."

ಮಹಾರಾಜ! ಸವ್ಯಸಾಚಿಯು ಹೀಗೆ ಹೇಳಿದನಂತರ ಶ್ರೀಕೃಷ್ಣನು ಕುದುರೆಗಳ ಲಗಾಮುಗಳನ್ನು ಕೈಯಲ್ಲಿ ಹಿಡಿದು ಸ್ವಲ್ಪವಾದರೂ ಭಯ ವಿಲ್ಲದೇ ಶತ್ರುಗಳ ಸೈನ್ಯಸಮೂಹವನ್ನು ಬಲಪೂರ್ವಕವಾಗಿ ಪ್ರವೇಶಿಸಿದನು. ಆ ಕೌರವಸೈನ್ಯವು ಅರಣ್ಯಸದೃಶವಾಗಿದ್ದಿತು. ಆ ಸೈನ್ಯಾರಣ್ಯವು ಕುಂತ, ಖಡ್ಗ ಮತ್ತು ಬಾಣಗಳೆಂಬ ಕ್ರೂರಮೃಗಗಳಿಂದ ತುಂಬಿ ಭಯಂಕರವಾಗಿ ಕಾಣುತ್ತಿದ್ದಿತು. ಶಕ್ತ್ಯಾಯುಧಗಳ ರೂಪವಾದ ಮುಳ್ಳುಗಳಿಂದ ತುಂಬಿದ್ದಿತು. ಗದೆ ಮತ್ತು ಪರಿಘಾಯುಧಗಳು ಸೈನ್ಯಾರಣ್ಯದ ಮಾರ್ಗ

ಗಳಂತಿದ್ದುವು. ರಥ ಮತ್ತು ಆನೆಗಳು ವೃಕ್ಷಪ್ರಾಯವಾಗಿದ್ದುವು. ಕುದುರೆಗಳು ಮತ್ತು ಪದಾತಿಗಳೆಂಬ ಲತೆಗಳಿಂದ ಸೈನ್ಯಾರಣ್ಯವು ವ್ಯಾಪ್ತವಾಗಿದ್ದಿತು. ಅಂತಹ ಮಹಾಸೈನ್ಯಾರಣ್ಯವನ್ನು ಮಹಾಯಶೋವಂತನಾದ, ಮಹಾಬಲನಾದ ಶ್ರೀಕೃಷ್ಣನು ಅತ್ಯುಚ್ಚವಾದ ಪತಾಕೆಯಿದ್ದ ರಥದಲ್ಲಿ ಕುಳಿತು ಪ್ರವೇಶಿಸಿ ಸುತ್ತಲೂ ಸಂಚರಿಸುತ್ತಿದ್ದನು. ಶ್ರೀಕೃಷ್ಣನಿಂದ ಪ್ರಚೋದಿತವಾದ ಬಿಳಿಯ ಬಣ್ಣದ ಕುದುರೆಗಳು ಯುದ್ಧದಲ್ಲಿ ಅರ್ಜುನನನ್ನು ಒಯ್ಯುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳುತ್ತಿದ್ದುವು. ಶತ್ರುತಾಪಕನಾದ ಧನಂಜಯನು–ಮೋಡವು ನೀರಿನ ಧಾರೆಗಳನ್ನು ಸುರಿಸುವಂತೆ–ತೀಕ್ಷ್ಣವಾದ ನೂರಾರು ಬಾಣಗಳನ್ನು ಸುರಿಸುತ್ತಾ ರಥದ ಮೂಲಕವಾಗಿ ಬಹಳ ಬೇಗ ಮುಂದೆಹೋದನು. ಬಗ್ಗಿದ ಗಿಣ್ಣುಗಳಿದ್ದ ಬಾಣಗಳ ಸೊಯ್ ಎಂಬ ಶಬ್ದಗಳು ಬಹಳ ಗಟ್ಟಿಯಾಗಿ ಕೇಳಿಸುತ್ತಿದ್ದುವು. ಸವ್ಯಸಾಚಿಯು ಕೌರವಯೋಧರ ಮೇಲೆ ಸುರಿಸುತ್ತಿದ್ದ ಬಾಣಗಳು ಅವರ ಕವಚಗಳಲ್ಲಿ ಮಾತ್ರವೇ ಚುಚ್ಚಿಕೊಳ್ಳದೇ ಕವಚಗಳನ್ನೂ ಭೇದಿಸಿ ಒಳಹೊಕ್ಕು ಶರೀರಗಳನ್ನೂ ಕೊರೆದುಕೊಂಡು ಹೊರಬಂದು ಭೂಮಿಯ ಮೇಲೆ ಬೀಳುತ್ತಿದ್ದುವು. ವಜ್ರಾಯುಧದ ಸ್ಪರ್ಶಕ್ಕೆ ಸಮಾನವಾಗಿ ಅತ್ಯಂತಕಠಿನಸ್ಪರ್ಶಿಗಳಾದ ಗಾಂಡೀವಪ್ರಮುಕ್ತವಾದ ಬಾಣಗಳು ನರ-ಗಜಾಶ್ವಗಳನ್ನು ಸಂಹರಿಸಿ, ಶಬ್ದಮಾಡುವ ಪತಂಗದ ಹುಳುಗಳೋಪಾದಿಯಲ್ಲಿ ಧ್ವನಿಮಾಡುತ್ತಾ ರಣಾಂಗಣದಲ್ಲಿ ಬೀಳುತ್ತಿದ್ದುವು. ಗಾಂಡೀವಪ್ರಮುಕ್ತವಾದ ಬಾಣಗಳಿಂದ ರಣಾಂಗಣದಲ್ಲಿ ಎಲ್ಲವೂ ಮುಚ್ಚಿಹೋಗಿದ್ದಿತು. ದಿಕ್ಕುಗಳಾಗಲೀ ಉಪದಿಕ್ಕುಗಳಾಗಲೀ ಯಾವುದೊಂದೂ ತಿಳಿಯುತ್ತಿರಲಿಲ್ಲ.

ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಎಣ್ಣೆಯಿಂದ ಹದಮಾಡಲ್ಪಟ್ಟಿದ್ದ, ಕಮ್ಮಾರರಿಂದ ಹರಿತವಾಗಿ ಮಾಡಲ್ಪಟ್ಟಿದ್ದ, ಪಾರ್ಥನಾಮಾಂಕಿತವಾದ ಬಾಣಗಳಿಂದ ಅಖಂಡಭೂಮಂಡಲವೂ ತುಂಬಿಹೋಗಿದ್ದಿತು. ದಾವಾಗ್ನಿಯಿಂದ ಅರಣ್ಯದ ಆನೆಗಳು ದಹಿಸಲ್ಪಡುವಂತೆ–ಪಾರ್ಥನಿಂದ ದಹಿಸಲ್ಪಡುತ್ತಿದ್ದ ಘೋರರಾದ ಕೌರವಸೈನಿಕರು ನಿಶಿತವಾದ ಬಾಣಗಳಿಂದ ಸತತವಾಗಿ ಹಿಂಸಿಸಲ್ಪಡುತ್ತಿದ್ದರೂ ಪಾರ್ಥನನ್ನು ಬಿಟ್ಟುಹೋಗುತ್ತಿರಲಿಲ್ಲ. ಪ್ರಜ್ವಲಿಸುತ್ತಿರುವ ಸೂರ್ಯನೋಪಾದಿಯಲ್ಲಿ

ಧನುರ್ಬಾಣಗಳನ್ನು ಧರಿಸಿದ್ದ ಪಾರ್ಥನು–ಅಗ್ನಿಯು ಹುಲ್ಲುಮೆದೆಯನ್ನು ದಹಿಸುವಂತೆ–ಕೌರವಯೋಧರನ್ನು ಕ್ಷಣಮಾತ್ರದಲ್ಲಿ ದಹಿಸಿದನು. ಅರಣ್ಯದ ಮಧ್ಯದಲ್ಲಿ ವನಚರರಿಂದ ವಿಸೃಷ್ಟನಾದ, ಸುಘೋಷದಿಂದ ಕೂಡಿದ, ಕೃಷ್ಣ ಗತಿಯಾದ, ತಾಪಯುಕ್ತನಾದ ಅಗ್ನಿಯು ಬಹಳ ಬೇಗ ವರ್ಧಿಸಿ ಪೊದರುಗಳನ್ನೂ, ಅನೇಕವೃಕ್ಷಗಳನ್ನೂ, ಒಣಗಿಹೋದ ಲತಾವಲ್ಲರಿಗಳನ್ನೂ ದಹಿಸುವಂತೆ–ನಾರಾಚಸಮೂಹಗಳಿಂದ ತಾಪವನ್ನುಂಟುಮಾಡುವ, ಬಾಣರೂಪವಾದ ಜ್ವಾಲೆಗಳನ್ನೊಳಗೊಂಡ, ವೇಗವಂತನಾದ, ಪ್ರಚಂಡತೇಜಸ್ವಿಯಾದ, ಕುಪಿತನಾಗಿದ್ದ ಅರ್ಜುನನು ನಿನ್ನ ಎಲ್ಲ ರಥಸೈನಿಕರನ್ನೂ ಬಹಳ ಬೇಗ ಭಸ್ಮಮಾಡಿದನು. ಸುಪ್ರಮುಕ್ತವಾದ, ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಪ್ರಾಣಾಪಹಾರಿಗಳಾದ ಅರ್ಜುನನ ಬಾಣಗಳು ಯೋಧರ ಕವಚಗಳಲ್ಲಿಯೇ ಚುಚ್ಚಿಕೊಳ್ಳುತ್ತಿರಲಿಲ್ಲ. ಕವಚಗಳನ್ನೂ ಭೇದಿಸಿಕೊಂಡು ಶರೀರಗಳನ್ನು ಹೊಕ್ಕು ಅಲ್ಲಿಂದಲೂ ಹೊರಬಂದು ಭೂಮಿಯನ್ನು ಸೇರುತ್ತಿದ್ದುವು. ಅರ್ಜುನನು ಮನುಷ್ಯರ ಮೇಲಾಗಲೀ–ಗಜಾಶ್ವಗಳ ಮೇಲಾಗಲೀ ಎರಡನೆಯ ಬಾರಿಗೆ ಬಾಣವನ್ನು ಪ್ರಯೋಗಿಸುತ್ತಲೇ ಇರಲಿಲ್ಲ. ಅವನು ಬಿಡುತ್ತಿದ್ದ ಪ್ರತಿಯೊಂದು ಬಾಣದಿಂದಲೂ ಒಂದೊಂದು ಪ್ರಾಣಿಯು ಹತವಾಗುತ್ತಿದ್ದಿತು. ವಜ್ರಪಾಣಿಯಾದ ಇಂದ್ರನು ದೈತ್ಯರನ್ನು ಸಂಹಾರಮಾಡಿದಂತೆ–ಏಕಾಕಿಯಾದ ಅರ್ಜುನನು ರಥಿಗಳ ವಿಶಾಲಸೈನ್ಯವನ್ನು ಪ್ರವೇಶಿಸಿ ಅನೇಕರೂಪಗಳಿಂದಲೂ ಆಕೃತಿಗಳಿಂದಲೂ ಯುಕ್ತವಾಗಿದ್ದ ಬಾಣಗಳಿಂದ ನಿನ್ನ ಮಗನ ರಥಸೈನ್ಯವನ್ನು ವಿನಾಶಗೊಳಿಸಿದನು."

೨೪ನೆಯ ಅಧ್ಯಾಯವು ಮುಗಿಯಿತು.

——

## ಭೀಮಾರ್ಜುನರಿಂದ ಕೌರವರ ರಥ-ಗಜಸೈನ್ಯಗಳ ಸಂಹಾರ: ಅಶ್ವತ್ಥಾಮನೇ ಮೊದಲಾದವರು ದುರ್ಯೋಧನನನ್ನು ಹುಡುಕಲು ಹೊರಟುದು: ಕೌರವಸೈನ್ಯದ ಪಲಾಯನ: ಸಾತ್ಯಕಿಯಿಂದ ಸಂಜಯನ ಕೈಸೆರೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ದುರ್ಯೋಧನನ ವಿಜಯಕ್ಕಾಗಿ ಸತತವಾಗಿ ಪ್ರಯತ್ನಿಸುತ್ತಿದ್ದ, ಯುದ್ಧದಿಂದ ಹಿಂದಿರುಗದಿರುವ ಶೂರರ ಸಂಕಲ್ಪಗಳನ್ನು ಅವರು ನೋಡುತ್ತಿದ್ದಂತೆಯೇ ಅರ್ಜುನನು ಗಾಂಡೀವಧನುಸ್ಸಿನಿಂದ ವ್ಯರ್ಥಗೊಳಿಸಿದನು. ಮೋಡಗಳು ನೀರಿನ ಧಾರೆಗಳನ್ನು ಸುರಿಸುವಂತೆ– ಇಂದ್ರನ ವಜ್ರಾಯುಧದಂತೆ ಕಠಿನಸ್ಪರ್ಶಿಗಳಾಗಿದ್ದ, ಸಹಿಸಲು ಅಸಾಧ್ಯ ವಾದುವುಗಳಾಗಿದ್ದ, ಮಹಾತೇಜಸ್ಸಿನಿಂದ ಕೂಡಿದ್ದ ಬಾಣಗಳನ್ನು ಕೌರವ ಸೈನಿಕರ ಮೇಲೆ ಸುರಿಸುತ್ತಾ ಅರ್ಜುನನು ಮೋಡದಂತೆ ಕಾಣಿಸಿಕೊಂಡನು. ಅರ್ಜುನನಿಂದ ಹಿಂಸಿಸಲ್ಪಡುತ್ತಿದ್ದ ಆ ಸೈನ್ಯವು ನಿನ್ನ ಮಗನು ನೋಡುತ್ತಿದ್ದಂತೆಯೇ ಯುದ್ಧಭೂಮಿಯಿಂದ ಪಲಾಯನಮಾಡಿತು. ಕೆಲವರು ಪಿತೃಗಳನ್ನೂ ಸಹೋದರರನ್ನೂ ರಣಾಂಗಣದಲ್ಲಿಯೇ ಬಿಟ್ಟು ಓಡಿಹೋದರು. ಕೆಲವರು ತಮ್ಮ ಪ್ರಾಣಸ್ನೇಹಿತರನ್ನೂ ಬಿಟ್ಟು ಪಲಾಯನ ಮಾಡಿದರು. ಕೆಲವು ರಥಗಳ ಕುದುರೆಗಳೇ ಸತ್ತುಹೋಗಿದ್ದುವು. ಕೆಲವು ಮಹಾರಥರ ಸೂತರು ಸತ್ತುಹೋಗಿದ್ದರು. ಕೆಲವರ ರಥಗಳಲ್ಲಿ ಅಚ್ಚುಮರಗಳೂ, ನೊಗಗಳೂ, ಚಕ್ರಗಳೂ ಮತ್ತು ಈಷಾದಂಡಗಳೂ ಭಗ್ನವಾಗಿ ಹೋಗಿದ್ದುವು. ಕೆಲವು ಯೋಧರ ಹತ್ತಿರ ಬಾಣಗಳೇ ಇರಲಿಲ್ಲ. ಕೆಲವರು ಅರ್ಜುನನ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದರು. ಕೆಲವರು ಬಾಣಗಳಿಂದ ಗಾಯಗೊಳ್ಳದೇ ಇದ್ದರೂ ಭಯಪೀಡಿತರಾಗಿ ಒಂದೇ ಬಾರಿಗೆ ಓಡಿಹೋದರು. ತಮ್ಮ ಬಂಧು-ಬಾಂಧವರೆಲ್ಲರನ್ನೂ ಸಂಪೂರ್ಣವಾಗಿ ಕಳೆದುಕೊಂಡ ಕೆಲವರು ತಮ್ಮ ಮಕ್ಕಳನ್ನೂ ಜೊತೆ ಯಲ್ಲಿಯೇ ಕರೆದುಕೊಂಡು ಪಲಾಯನಮಾಡುತ್ತಿದ್ದರು.

ಕೆಲವರು 'ಅಪ್ಪಾ! ಅಪ್ಪಾ!' –ಎಂದು ಪಿತೃಗಳನ್ನು ಕೂಗುತ್ತಿದ್ದರು. ಕೆಲವರು ಸಹಾಯಕರನ್ನು ಅಪೇಕ್ಷಿಸುತ್ತಿದ್ದರು. ಕೆಲವರು ಬಾಂಧವರನ್ನೂ, ಅಣ್ಣ-ತಮ್ಮಂದಿರನ್ನೂ ಮತ್ತು ಸಂಬಂಧಿಗಳನ್ನೂ ಅಲ್ಲಿಯೇ ಬಿಟ್ಟು ಓಡಿ ಹೋಗುತ್ತಿದ್ದರು. ಅನೇಕಮಹಾರಥರು ಪಾರ್ಥನ ಬಾಣಗಳಿಂದ ಗಾಯ ಗೊಂಡವರಾಗಿ ಮೂರ್ಛಿತರಾಗಿ ಬಿದ್ದಿದ್ದರು. ಪಾರ್ಥನ ಬಾಣಗಳಿಂದ ಗಾಯಗೊಂಡ ಕೆಲವು ಪದಾತಿಸೈನಿಕರು ಸುದೀರ್ಘವಾಗಿ ನಿಟ್ಟುಸಿರುಬಿಡು ತ್ತಿದ್ದರು. ಅಂತಹವರನ್ನು ಕೆಲವರು ತಮ್ಮ ರಥಗಳಲ್ಲಿ ಹತ್ತಿಸಿಕೊಂಡು ಸ್ವಲ್ಪಹೊತ್ತು ಸಮಾಧಾನಹೇಳುತ್ತಿದ್ದರು. ಹೀಗೆ ಅವರು ವಿಶ್ರಾಂತಿಯನ್ನು ಪಡೆದು ಬಾಯಾರಿಕೆಯನ್ನು ತೀರಿಸಿಕೊಂಡವರಾಗಿ ಪುನಃ ಯುದ್ಧಮಾಡುವ ಇಚ್ಛೆಯಿಂದ ನಿನ್ನ ಮಗನ ಆಜ್ಞೆಯಂತೆ ನಡೆದುಕೊಳ್ಳುತ್ತಾ ಗಾಯಗೊಂಡ ವರನ್ನು ಅಲ್ಲಿಯೇ ಬಿಟ್ಟು ಯುದ್ಧಮಾಡಲು ಹೊರಟುಹೋಗುತ್ತಿದ್ದರು. ಕೆಲವರು ನೀರುಕುಡಿದು ದಣಿವಾರಿಸಿಕೊಂಡು ತಮ್ಮ ವಾಹನಗಳನ್ನು ಶೈತ್ಯೋಪಚಾರಾದಿಗಳಿಂದ ಉಪಚರಿಸಿ (ಅವುಗಳ ಬಳಲಿಕೆಯನ್ನು ಹೋಗ ಲಾಡಿಸಿ) ಕವಚಗಳನ್ನು ಧರಿಸಿ ಯುದ್ಧಕ್ಕೆ ಹೋಗುತ್ತಿದ್ದರು. ಕೆಲವರು ಗಾಯಗೊಂಡಿದ್ದ ತಮ್ಮ ಸಹೋದರರನ್ನಾಗಲೀ, ಮಕ್ಕಳನ್ನಾಗಲೀ, ಪಿತೃ ಗಳನ್ನಾಗಲೀ ಸಮಾಧಾನಗೊಳಿಸುತ್ತಾ ಅವರನ್ನು ಶಿಬಿರದಲ್ಲಿ ಬಿಟ್ಟು ಪುನಃ ರಣರಂಗಕ್ಕೇ ಹೊರಟುಹೋಗುತ್ತಿದ್ದರು. ಕೆಲವರು ತಮ್ಮ ರಥಗಳನ್ನು ಪುನಃ ಸಜ್ಜುಗೊಳಿಸಿ ಪಾಂಡವರ ಸೈನ್ಯದ ಮೇಲೆ ಬಿದ್ದು ತಮ್ಮ ಅಂತಸ್ತಿಗೆ ಅನು ಸಾರವಾಗಿ ಶತ್ರುಪಕ್ಷದ ಯೋಧರೊಡನೆ ಪುನಃ ಯುದ್ಧದಲ್ಲಿ ತೊಡಗು ತ್ತಿದ್ದರು. ಮೂರು ಲೋಕಗಳನ್ನೂ ಜಯಿಸುವುದರಲ್ಲಿ ಉತ್ಸುಕರಾದ ದೈತ್ಯ ದಾನವರಂತೆ, ಆ ರಥಶೂರರು ತಮ್ಮ ರಥಗಳಲ್ಲಿದ್ದ ಸಣ್ಣ-ಸಣ್ಣ ಗಂಟೆಗಳ ಸಮೂಹಗಳಿಂದ ಆಚ್ಛಾದಿತರಾಗಿ ಪ್ರಕಾಶಿಸುತ್ತಿದ್ದರು. ಕೆಲವರು ಸ್ವರ್ಣ ವಿಭೂಷಿತವಾದ ರಥಗಳಲ್ಲಿ ಕುಳಿತು ಬಹಳ ಬೇಗ ರಣಾಂಗಣಕ್ಕೆ ಬಂದು ಪಾಂಡವರ ಸೈನ್ಯಗಳಲ್ಲಿ ಧೃಷ್ಟದ್ಯುಮ್ನನನ್ನು ಎದುರಿಸಿ ಯುದ್ಧಮಾಡು ತ್ತಿದ್ದರು. ಧೃಷ್ಟದ್ಯುಮ್ನ, ಪಾಂಚಾಲರಾಜಕುಮಾರನಾದ ಮಹಾರಥನಾದ ಶಿಖಂಡೀ, ನಕುಲಪುತ್ರನಾದ ಶತಾನೀಕ–ಇವರು ದುರ್ಯೋಧನನ ರಥಸೈನ್ಯ ದೊಡನೆ ಯುದ್ಧಮಾಡುತ್ತಿದ್ದರು. ಧೃಷ್ಟದ್ಯುಮ್ನನು ಪರಮಕ್ರುದ್ಧನಾಗಿ

ವಿಶಾಲವಾದ ಸೈನ್ಯದಿಂದ ಪರಿವೃತನಾಗಿ ನಿನ್ನ ಸೈನ್ಯಕ್ಕೆ ಮುತ್ತಿಗೆ ಹಾಕಿ ಅದನ್ನು ಸಂಹರಿಸಲು ಉಪಕ್ರಮಿಸಿದನು. ಆ ಸಮಯದಲ್ಲಿ ನಿನ್ನ ಮಗನು ತನ್ನ ಸೈನಿಕರ ಮೇಲೆ ಆಕ್ರಮಣ ನಡೆಸುತ್ತಿದ್ದ ಧೃಷ್ಟದ್ಯುಮ್ನನ ಮೇಲೆ ಅನೇಕ ಬಾಣಗಳ ಸಮೂಹಗಳನ್ನು ಪ್ರಯೋಗಿಸಿದನು. ಧನುಷ್ಮಂತನಾದ ನಿನ್ನ ಮಗನು ಧೃಷ್ಟದ್ಯುಮ್ನನನ್ನು ನಾರಾಚಗಳಿಂದಲೂ, ಅರ್ಧನಾರಾಚ ಗಳಿಂದಲೂ, ಶೀಘ್ರಪರಿಣಾಮಕಾರಿಗಳಾದ ವತ್ಸದಂತಗಳಿಂದಲೂ, ಕಮ್ಮಾರ ರಿಂದ ಹದಗೊಳಿಸಲ್ಪಟ್ಟ ಬಾಣಗಳಿಂದಲೂ ಪ್ರಹರಿಸಿ, ಅವನ ರಥದ ನಾಲ್ಕು ಕುದುರೆಗಳನ್ನೂ ಸಂಹರಿಸಿ ಪಾಂಚಾಲನ ತೋಳುಗಳನ್ನೂ ಮತ್ತು ವಕ್ಷಃಸ್ಥಳವನ್ನೂ ಗಾಯಗೊಳಿಸಿದನು. ಅಂಕುಶದಿಂದ ಚುಚ್ಚಲ್ಪಟ್ಟ ಆನೆಯಂತೆ-ಮಹಾಧನುಷ್ಮಂತನಾದ ಧೃಷ್ಟದ್ಯುಮ್ನನು ದುರ್ಯೋಧನನ ಬಾಣಗಳಿಂದ ಬಹಳವಾಗಿ ಗಾಯಗೊಂಡು ಪರಮಕ್ರುದ್ಧನಾಗಿ ದುರ್ಯೋಧನನ ನಾಲ್ಕು ಕುದುರೆಗಳನ್ನು ಬಾಣಗಳಿಂದ ಮೃತ್ಯುವಶವನ್ನಾಗಿ ಮಾಡಿ, ಸಾರಥಿಯ ತಲೆಯನ್ನೂ ಭಲ್ಲದಿಂದ ಕತ್ತರಿಸಿದನು. ಅನಂತರ ರಥರಹಿತನಾದ ದುರ್ಯೋಧನನು ಕುದುರೆಯ ಮೇಲೆ ಕುಳಿತು ರಣರಂಗದಿಂದ ಸ್ವಲ್ಪ ದೂರಕ್ಕೆ ಹೋದನು. ತನ್ನ ಸೈನ್ಯದ ಪರಾಕ್ರಮವು ಕುಂಠಿತವಾದುದನ್ನು ಕಂಡು ಮಹಾಬಲನಾದ ನಿನ್ನ ಮಗನು ಶಕುನಿಯಿದ್ದೆಡೆಗೆ ತೆರಳಿದನು. ನಮ್ಮ ಪಕ್ಷದ ರಥಸೈನ್ಯವು ಭಗ್ನವಾಗಲಾಗಿ ಮೂರು ಸಾವಿರ ದೊಡ್ಡ ಆನೆಗಳು ಪಾಂಡವರಥಿಗಳನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿದುವು. ಸಮರಾಂಗಣದಲ್ಲಿ ದುರ್ಯೋಧನನ ಗಜಸೈನ್ಯದಿಂದ ಸಮಾವೃತರಾಗಿದ್ದ ಐವರು ಪಾಂಡವರೂ—ಮೇಘಗಳಿಂದ ವ್ಯಾಪ್ತವಾದ ಐದು ಗ್ರಹಗಳಂತೆಯೇ ಕಾಣುತ್ತಿದ್ದರು. ಅನಂತರ ಮಹಾಭುಜನಾದ, ಶಸ್ತ್ರಪ್ರಹಾರಕುಶಲನಾದ, ಕೃಷ್ಣಸಾರಥಿಯಾದ, ಶ್ವೇತಾಶ್ವ ನಾದ ಅರ್ಜುನನು ತನ್ನ ರಥದ ಮೂಲಕವಾಗಿ ಮುನ್ನಡೆದನು. ಪರ್ವತೋ ಪಮಗಳಾಗಿದ್ದ ಆನೆಗಳಿಂದ ಪರಿವೃತನಾಗಿದ್ದ ಅರ್ಜುನನು ತೀಕ್ಷ್ಣವಾಗಿದ್ದ, ನಿರ್ಮಲವಾದ ನಾರಾಚಗಳಿಂದ ಗಜಸೈನ್ಯದೊಡನೆ ಯುದ್ಧಮಾಡಿದನು.

ಮಹಾರಾಜ! ಅಲ್ಲಿ ನಾವು ಸವ್ಯಸಾಚಿಯ ಒಂದೊಂದೇ ಬಾಣ ದಿಂದ ಹತವಾಗಿ ಕೆಳಗೆ ಬಿದ್ದಿದ್ದ, ಬೀಳುತ್ತಿದ್ದ ಮತ್ತು ಭಿನ್ನಶರೀರವುಳ್ಳ

ಅನೇಕ ಮಹಾಗಜಗಳನ್ನು ನೋಡಿದೆವು. ಮದಿಸಿದ ಆನೆಗೆ ಸಮಾನನಾಗಿದ್ದ ಬಲಿಷ್ಠನಾದ ಭೀಮಸೇನನು ದುರ್ಯೋಧನನ ಗಜಸೈನ್ಯವನ್ನು ನೋಡಿ ಬಹಳ ಬೇಗ ರಥದಿಂದ ಕೆಳಕ್ಕೆ ಧುಮುಕಿ ದಂಡಪಾಣಿಯಾದ ಅಂತಕನೋಪಾದಿಯಲ್ಲಿ ದೊಡ್ಡದಾಗಿದ್ದ ಗದೆಯನ್ನು ಕೈಯಲ್ಲೆತ್ತಿಕೊಂಡು ಗಜಸೈನ್ಯವನ್ನು ಆಕ್ರಮಿಸಿದನು. ಪಾಂಡವಮಹಾರಥನಾದ ಭೀಮಸೇನನು



ಗದೆಯನ್ನೆತ್ತಿಕೊಂಡು ತಮ್ಮ ಕಡೆಗೇ ಬರುತ್ತಿದ್ದುದನ್ನು ಕಂಡು ನಿನ್ನ ಕಡೆಯ ಸೈನಿಕರೆಲ್ಲರೂ ಭಯಗೊಂಡರು. ಆನೆಗಳೂ ಮತ್ತು ಯೋಧರೂ ಮಲ-ಮೂತ್ರಗಳನ್ನು ಉತ್ಸರ್ಜನೆಮಾಡಿದರು. ಭೀಮಸೇನನು ಗದಾ ಪಾಣಿಯಾಗಿ ತಮ್ಮ ಕಡೆಗೆ ಬರುತ್ತಿರಲಾಗಿ ನಿನ್ನ ಎಲ್ಲ ಸೈನಿಕರೂ ಉದ್ವಿಗ್ನ

ರಾದರು. ಭೀಮಸೇನನ ಗದಾಘಾತಗಳಿಂದ ಧೂಲಿಧೂಸರಿತವಾದ, ಪರ್ವತೋಪಮವಾದ ಆನೆಗಳು ಒಡೆದ ಕುಂಭಸ್ಥಳಗಳಿಂದ ಕೂಡಿ ರಣಾಂಗಣದ ಸುತ್ತಲೂ ತಿರುಗುತ್ತಿದ್ದುದನ್ನು ನಾವು ನೋಡಿದೆವು. ಭೀಮಸೇನನ ಗದೆಯಿಂದ ಪ್ರಹೃತವಾದ ಆ ಆನೆಗಳು ದಿಕ್ಕಾಪಾಲಾಗಿ ಓಡಿಹೋದುವು. ಕೆಲವು ಆರ್ತನಾದಗಳನ್ನು ಮಾಡುತ್ತಾ–ರೆಕ್ಕೆಗಳನ್ನು ಕತ್ತರಿಸಿದ ಪರ್ವತಗಳಂತೆ–ಭೂಮಿಯ ಮೇಲೆ ಬಿದ್ದುವು. ಒಡೆದುಹೋದ ಕುಂಭಸ್ಥಳಗಳಿಂದ ಕೂಡಿದ್ದ, ಅಲ್ಲಿಂದಿಲ್ಲಿಗೂ ಇಲ್ಲಿಂದಲ್ಲಿಗೂ ಓಡಾಡುತ್ತಿದ್ದ, ಕೆಳಕ್ಕೆ ಬಿದ್ದು ಪ್ರಾಣಬಿಡುತ್ತಿದ್ದ ಮಹಾಗಜಗಳನ್ನು ನೋಡಿ ನಿನ್ನ ಸೈನಿಕರು ಭಯಗೊಂಡರು. ಪರಮಕ್ರುದ್ಧನಾಗಿದ್ದ ಯುಧಿಷ್ಠಿರನೂ ಮತ್ತು ನಕುಲ-ಸಹದೇವರೂ ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ನಿಶಿತವಾದ ಬಾಣಗಳಿಂದ ಹಲವಾರು ಆನೆಗಳನ್ನು ಯಮಾಲಯಕ್ಕೆ ಕಳುಹಿಸಿದರು. ಕೌರವೇಶ್ವರ! ನಾನು ಈ ಹಿಂದೆ ಹೇಳಿದಂತೆ ಧೃಷ್ಟದ್ಯುಮ್ನನು ದುರ್ಯೋಧನನನ್ನು ಯುದ್ಧದಲ್ಲಿ ಪರಾಜಯ ಗೊಳಿಸಿದನು. ಕುದುರೆಯ ಮೇಲೆ ಕುಳಿತು ನಿನ್ನ ಮಗನು ಹೊರಟುಹೋದನಂತರ ಧೃಷ್ಟದ್ಯುಮ್ನನು, ಮಹಾಗಜಗಳನ್ನು ಸಂಹರಿಸುವ ಇಚ್ಛೆಯಿಂದ ಬಹಳ ಬೇಗ ಅಲ್ಲಿಗೆ ಆಗಮಿಸಿದನು.

ರಥಸೈನ್ಯದಲ್ಲಿ ಅರಿಂದಮನಾದ ದುರ್ಯೋಧನನಿಲ್ಲದುದನ್ನು ಕಂಡು ಅಶ್ವತ್ಥಾಮ-ಕೃಪ-ಕೃತವರ್ಮರು ಅಲ್ಲಿದ್ದ ಕ್ಷತ್ರಿಯರನ್ನು ಕುರಿತು ದುರ್ಯೋಧನನು ಎಲ್ಲಿಗೆ ಹೋದನೆಂದು ಪ್ರಶ್ನಿಸಿದರು. ಅಪಾರಜನಕ್ಷಯ ವಾಗುತ್ತಿದ್ದ ಸಮಯದಲ್ಲಿ ದುರ್ಯೋಧನರಾಜನನ್ನು ಕಾಣದೇ ಅಶ್ವತ್ಥಾ ಮಾದಿಗಳು ನಿನ್ನ ಮಗನು ಶತ್ರುಗಳಿಂದ ಹತನಾದನೆಂದೇ ಭಾವಿಸಿ ವಿವರ್ಣ ಮುಖರಾಗಿ ಅಲ್ಲಿದ್ದ ಎಲ್ಲರನ್ನೂ ದುರ್ಯೋಧನನೆಲ್ಲೆಂದು ಕೇಳುತ್ತಾ ಹೋದರು. ಅವರಲ್ಲಿ ಕೆಲವರು ದುರ್ಯೋಧನನ ವಿಷಯವಾಗಿ ಈ ಸುಳಿವನ್ನು ಕೊಟ್ಟರು.

“ಸೂತನೂ ಹತನಾಗಲಾಗಿ ದುರ್ಯೋಧನನು ಪಾಂಚಾಲರಾಜನ ದುಸ್ಸಹವಾದ ಸೈನ್ಯವನ್ನು ಪರಿತ್ಯಜಿಸಿ ಸೌಬಲನಿರುವೆಡೆಗೆ ಹೊರಟು ಹೋದನು.”

ಬಹಳವಾಗಿ ಗಾಯಗೊಂಡಿದ್ದ ಮತ್ತೆ ಕೆಲವು ಕ್ಷತ್ರಿಯರು ಅಶ್ವತ್ಥಾಮಾದಿಗಳನ್ನು ಕುರಿತು ಹೀಗೆ ಹೇಳಿದರು:

**ದುರ್ಯೋಧನೇನ ಕಿಂ ಕಾರ್ಯಂ ದ್ರಕ್ಷ್ಯಧ್ವಂ ಯದಿ ಜೀವತಿ ।**
**ಯುದ್ಧ್ಯಧ್ವಂ ಸಹಿತಾಃ ಸರ್ವೇ ಕಿಂ ವೋ ರಾಜಾ ಕರಿಷ್ಯತಿ ॥೪೪॥**

"ದುರ್ಯೋಧನನಿಂದ ನಿಮಗೆ ಈಗ ಆಗಬೇಕಾದುದೇನಿದೆ? ಒಂದು ವೇಳೆ ಅವನು ಬದುಕಿರುವುದಾದರೆ ನೀವೆಲ್ಲರೂ ಅವನನ್ನು ನೋಡಿಯೇ ನೋಡುತ್ತೀರಿ. ಈ ಸಮಯದಲ್ಲಿ ನೀವೆಲ್ಲರೂ ಸಂಘಟಿತರಾಗಿ ಯುದ್ಧ ಮಾಡಿರಿ. ರಾಜನು ಇಲ್ಲಿದ್ದು ನಿಮಗೆ ಯಾವ ಸಹಾಯವನ್ನು ತಾನೇ ಮಾಡಬಲ್ಲನು?"

ಯುದ್ಧದಲ್ಲಿ ತೊಡಗಿದ್ದ ಹಲವಾರು ಕ್ಷತ್ರಿಯರ ವಾಹನಗಳೆಲ್ಲವೂ (ಆನೆ-ಕುದುರೆಗಳು) ಸತ್ತುಹೋಗಿದ್ದುವು. ಅವರೂ ಶರೀರಾದ್ಯಂತವಾಗಿ ಕ್ಷತ-ವಿಕ್ಷತರಾಗಿದ್ದರು. ಬಾಣಗಳಿಂದ ಗಾಢವಾಗಿ ಪೀಡಿಸಲ್ಪಡುತ್ತಿದ್ದ ಕ್ಷತ್ರಿಯರು ಅಸ್ಪಷ್ಟವಾಗಿ ಈ ಮಾತುಗಳನ್ನು ಹೇಳಿದರು:

**ಇದಂ ಸರ್ವಂ ಬಲಂ ಹನ್ಮೋ ಯೇನ ಸ್ಮ ಪರಿವಾರಿತಾಃ ।**
**ಏತೇ ಸರ್ವೇ ಗಜಾನ್ಹತ್ವಾ ಉಪಯಾನ್ತಿ ಸ್ಮ ಪಾಣ್ಡವಾಃ ॥೪೬॥**

"ನಮ್ಮನ್ನು ಆಕ್ರಮಿಸಿರುವ ಈ ಎಲ್ಲ ಸೈನ್ಯವನ್ನೂ ನಾವು ಸಂಹರಿಸುತ್ತೇವೆ. ಆದರೆ ಆ ಎಲ್ಲ ಪಾಂಡವರೂ ನಮ್ಮ ಗಜಸೈನ್ಯವನ್ನು ಸಂಹರಿಸಿ ಇತ್ತ ಕಡೆಗೇ ಬರುತ್ತಿದ್ದಾರೆ."

ಮಹಾರಾಜ! ಅವರ ಮಾತುಗಳನ್ನು ಕೇಳಿ ಶೂರರಾದ, ದೃಢ ಧನ್ವಿಗಳಾದ, ಮಹಾಬಲರಾದ ಅಶ್ವತ್ಥಾಮ-ಕೃಪ-ಕೃತವರ್ಮರು ದುಸ್ಸಹವಾದ ಪಾಂಚಾಲರಾಜನ ಸೈನ್ಯವನ್ನು ಬಿಟ್ಟು ತಮ್ಮ ಕಡೆಯ ರಥಸೈನ್ಯವನ್ನು ಪರಿತ್ಯಜಿಸಿ ದುರ್ಯೋಧನನನ್ನು ನೋಡುವ ಇಚ್ಛೆಯಿಂದ ಸೌಬಲನಿದ್ದೆಡೆಗೆ ತೆರಳಿದರು.

ಕೃಪಾಶ್ವತ್ಥಾಮ-ಕೃತವರ್ಮರು ಹೊರಟುಹೋದನಂತರ ಧೃಷ್ಟದ್ಯುಮ್ನಪುರಃಸರರಾದ ಪಾಂಡವರು ನಿನ್ನ ಸೈನಿಕರನ್ನು ಧ್ವಂಸಮಾಡು

ತ್ತಿದ್ದರು. ಸಂಪ್ರಹೃಷ್ಟರಾದ ಮಹಾರಥರಾದ ಪಾಂಡವಯೋಧರು ತಮ್ಮ ಮೇಲೆ ಅವ್ಯಾಹತವಾಗಿ ಆಕ್ರಮಣನಡೆಸುತ್ತಿರುವುದನ್ನು ನೋಡಿ ನಿನ್ನ ಕಡೆಯ ಪರಾಕ್ರಮಿಗಳಾದ ವೀರರು ಜೀವನದಲ್ಲಿ ನಿರಾಶೆಯನ್ನು ಹೊಂದಿದರು. ನಿನ್ನ ಸೈನ್ಯದಲ್ಲಿದ್ದ ಅನೇಕಯೋಧರು ವಿವರ್ಣಮುಖರಾದರು. (ಕಳೆಗುಂದಿದರು.) ಅವರ ಆಯುಧಗಳೆಲ್ಲವೂ ಮುಗಿದುಹೋಗಿದ್ದುವು ಆ ಸಮಯದಲ್ಲಿ ನಾಲ್ಕು ದಿಕ್ಕುಗಳಿಂದಲೂ ನಮ್ಮನ್ನು ಶತ್ರುಗಳು ಆಕ್ರಮಿಸಿದ್ದರು. ಆಗ ನಾನು ಜೀವಿತದ ಹಂಗನ್ನೇ ಸಂಪೂರ್ಣವಾಗಿ ತೊರೆದು, ಅಶ್ವ-ಗಜಸೈನ್ಯಸಹಿತನಾಗಿ, ನಾಲ್ವರು ಮಹಾರಥರನ್ನು ಜೊತೆಯಲ್ಲಿ ಕರೆದುಕೊಂಡು ನಾನೇ ಐದನೆಯವನಾಗಿ ಧೃಷ್ಟದ್ಯುಮ್ನನ ಸೈನ್ಯದೊಡನೆ ವೀರಾವೇಶದಿಂದ ಯುದ್ಧಮಾಡತೊಡಗಿದೆನು. ಮೊದಲು ನಾವು ಕೃಪಾಚಾರ್ಯರು ಇದ್ದ ಸ್ಥಳದಲ್ಲಿಯೇ ಶತ್ರುಗಳೊಡನೆ ಯುದ್ಧಮಾಡುತ್ತಿದ್ದೆವು. ಅಲ್ಲಿ ಕಿರೀಟಿಯ ಬಾಣಗಳಿಂದ ಪೀಡಿತರಾದ ನಾವೈವರೂ ಅಲ್ಲಿಂದ ಪಲಾಯನ ಮಾಡಿ ಮಹಾಭಯಂಕರನಾದ ಧೃಷ್ಟದ್ಯುಮ್ನನು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಬಂದೆವು. ಅಲ್ಲಿ ನಮಗೂ–ಧೃಷ್ಟದ್ಯುಮ್ನನಿಗೂ ಭಯಂಕರವಾದ ಯುದ್ಧವೇ ನಡೆಯಿತು. ಅಲ್ಲಿಯೂ ಕೂಡ ನಾವೈವರೂ ಅವನಿಂದ ಪರಾಜಿತರಾಗಿ ರಣಭೂಮಿಯಿಂದಲೇ ಪಲಾಯನಮಾಡಿದೆವು. ಅಷ್ಟರಲ್ಲಿಯೇ ಮಹಾರಥನಾದ ಸಾತ್ಯಕಿಯು ನಮ್ಮ ಕಡೆಗೆ ಬರುತ್ತಿದ್ದುದನ್ನು ಕಂಡೆವು. ಅವನು ನಾಲ್ಕು ನೂರು ರಥಿಗಳೊಡನೆ ನಮ್ಮ ಮೇಲೆ ಆಕ್ರಮಣನಡೆಸಿದನು. ನಾನು ಹೇಗೋ ಕಷ್ಟಪಟ್ಟುಕೊಂಡು ಬಳಲಿದ ಕುದುರೆಗಳನ್ನು ಹೊಂದಿದ್ದ ಧೃಷ್ಟದ್ಯುಮ್ನನಿಂದ ತಪ್ಪಿಸಿಕೊಂಡು ಬಂದಿದ್ದೆನು. ದುಷ್ಕಾರ್ಯವನ್ನು ಮಾಡಿದವನು ನರಕಕ್ಕೆ ಬೀಳುವಂತೆ–ಧೃಷ್ಟದ್ಯುಮ್ನನಿಂದ ತಪ್ಪಿಸಿಕೊಂಡ ನಾನು ಸಾತ್ಯಕಿಯ ಸೈನ್ಯದಲ್ಲಿ ಸಿಕ್ಕಿಹಾಕಿಕೊಂಡೆನು. ಮುಹೂರ್ತಕಾಲ ನನಗೂ–ಸಾತ್ಯಕಿಗೂ ಅತಿದಾರುಣವಾದ ಮತ್ತು ಘೋರವಾದ ಯುದ್ಧವೇ ನಡೆಯಿತು. ಮಹಾಬಾಹುವಾದ ಸಾತ್ಯಕಿಯು ನನ್ನ ಕುದುರೆಗಳನ್ನೂ ಸಾರಥಿಯನ್ನೂ ಸಂಹರಿಸಿ, ಧ್ವಜವನ್ನು ಕತ್ತರಿಸಿ ನಿಶಿತವಾದ ಬಾಣಗಳಿಂದ ನನ್ನನ್ನು ಮೂರ್ಛೆಗೊಳಿಸಿದನು. ಮೂರ್ಛಿತನಾಗಿ ಬಿದ್ದಿದ್ದ ನನ್ನನ್ನು ಜೀವಸಹಿತ ಸೆರೆಹಿಡಿದನು. ಬಳಿಕ

ಮುಹೂರ್ತಮಾತ್ರದಲ್ಲಿ ಭೀಮಸೇನನು ಗದೆಯಿಂದಲೂ–ಅರ್ಜುನನು ನಾರಾಚಗಳಿಂದಲೂ ನಮ್ಮ ಗಜಸೈನ್ಯವನ್ನು ಸಂಪೂರ್ಣವಾಗಿ ವಿನಾಶ ಗೊಳಿಸಿದರು. ರಣಾಂಗಣದ ಸುತ್ತಲೂ ಅಸುನೀಗಿ ಬಿದ್ದಿದ್ದ ಪರ್ವತೋ ಪಮವಾದ ಆನೆಗಳು ಭೀಮಸೇನನ ಗದಾಪ್ರಹಾರಗಳಿಂದ ಸಮ್ಮರ್ದಿತವಾಗಿ ಬಿದ್ದುಹೋಗಿದ್ದುವು. ಆದರಿಂದ ಪಾಂಡವರಿಗೆ ರಥದಲ್ಲಿ ಕುಳಿತು ಮುಂದೆ ಹೋಗಲು ಸಾಧ್ಯವಾಗಲೇ ಇಲ್ಲ. ಅನಂತರ ಮಹಾಬಲನಾದ ಭೀಮ ಸೇನನು ದೊಡ್ಡ-ದೊಡ್ಡ ಆನೆಗಳನ್ನು ಒಂದು ಪಕ್ಕಕ್ಕೆ ಎಳೆದು ಹಾಕಿ ಪಾಂಡವರು ಮುಂದೆ ಹೋಗಲು ಸಾಧ್ಯವಾಗುವಂತೆ ರಥಮಾರ್ಗವನ್ನು ಮಾಡಿಕೊಟ್ಟನು. ಕೃಪಾಶ್ವತ್ಥಾಮ-ಕೃತವರ್ಮರು ರಥಸೈನ್ಯದಲ್ಲಿಯೂ ಶತ್ರುದಮನನಾದ, ಮಹಾರಥನಾದ ನಿನ್ನ ಮಗ ದುರ್ಯೋಧನನನ್ನು ಕಾಣದೇ ಅವನನ್ನು ಹುಡುಕತೊಡಗಿದರು. ಜನಕ್ಷಯಕರವಾದ ಮಹಾ ಯುದ್ಧವು ನಡೆಯುತ್ತಿರಲಾಗಿ, ರಾಜನನ್ನು ಕಾಣದೇ ಉದ್ವಿಗ್ನರಾಗಿದ್ದ ಅಶ್ವತ್ಥಾಮ-ಕೃಪ-ಕೃತವರ್ಮರು ಶಕುನಿಯಿದ್ದೆಡೆಗೆ ತೆರಳಿದರು.”

೨೫ನೆಯ ಅಧ್ಯಾಯವು ಮುಗಿಯಿತು.

೨೬ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಭೀಮಸೇನನಿಂದ ಧೃತರಾಷ್ಟ್ರನ ಹನ್ನೊಂದು ಮಕ್ಕಳ ಸಂಹಾರ: ಚತುರಂಗಬಲದ ಬಹುಭಾಗದ ವಿನಾಶ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

“ಮಹಾರಾಜ! ಗಜಸೈನ್ಯವೂ ಮತ್ತು ಅಶ್ವ-ಪದಾತಿಸೈನ್ಯಗಳೂ ಪಾಂಡುಪುತ್ರನಾದ ಭೀಮಸೇನನಿಂದ ಹತವಾಗಲಾಗಿ, ಅರಿಂದಮನಾದ ಭೀಮನು ದಂಡಹಸ್ತನಾದ, ಕ್ರುದ್ಧನಾದ, ಪ್ರಾಣಿಗಳ ಪ್ರಾಣಹರನಾದ ಅಂತಕನಂತೆ–ರಣಾಂಗಣದ ಸುತ್ತಲೂ ಸುತ್ತುತ್ತಿರುವುದನ್ನು ಕಂಡು, ನಿನ್ನ ಹಿರಿಯ ಮಗನಾದ ದುರ್ಯೋಧನನು ಎಲ್ಲಿಯೂ ಕಾಣದಿರಲಾಗಿ, ಹತಶೇಷರಾದ ನಿನ್ನ ಮಕ್ಕಳೆಲ್ಲರೂ ಒಟ್ಟಾಗಿ ಸೇರಿ ಭೀಮಸೇನನನ್ನೇ ಆಕ್ರಮಿಸಿದರು.

**ದುರ್ಮರ್ಷಣಃ ಶ್ರುತಾನ್ತಶ್ಚ ಜೈತ್ರೋ ಭೂರಿಬಲೋ ರವಿಃ ।**
**ಜಯತ್ಸೇನಃ ಸುಜಾತಶ್ಚ ತಥಾ ದುರ್ವಿಷಹೋಽರಿಹಾ ॥೪॥**

**ದುರ್ವಿಮೋಚನನಾಮಾ ಚ ದುಷ್ಪ್ರಧರ್ಷಸ್ತಥೈವ ಚ ।**
**ಶ್ರುತರ್ವಾ ಚ ಮಹಾಬಾಹುಃ ಸರ್ವೇ ಯುದ್ಧವಿಶಾರದಾಃ ॥೫॥**

**ಇತ್ಯೇತೇ ಸಹಿತಾ ಭೂತ್ವಾ ತವ ಪುತ್ರಾಃ ಸಮನ್ತತಃ ।**
**ಭೀಮಸೇನಮಭಿದ್ರುತ್ಯ ರುರುಧುಃ ಸರ್ವತೋದಿಶಮ್ ॥೬॥**

ಯುದ್ಧವಿಶಾರದರಾದ ದುರ್ಮರ್ಷಣ, ಶ್ರುತಾಂತ (ಚಿತ್ರಾಂಗ), ಜೈತ್ರ, ಭೂರಿಬಲ (ಭೀಮಬಲ), ರವಿ, ಜಯತ್ಸೇನ, ಸುಜಾತ, ಶತ್ರು ನಾಶಕನಾದ ದುರ್ವಿಷಹ (ದುರ್ವಿಗಾಹ), ದುರ್ವಿಮೋಚನ, ದುಷ್ಪ್ರಧರ್ಷ (ದುಷ್ಪ್ರಧರ್ಷಣ) ಮತ್ತು ಮಹಾಬಾಹುವಾದ ಶ್ರುತರ್ವಾಣ–ಇವರೆಲ್ಲರೂ ಸಂಘಟಿತರಾಗಿ ಎಲ್ಲ ಕಡೆಗಳಿಂದಲೂ ಭೀಮಸೇನನನ್ನು ಆಕ್ರಮಿಸಿ ಅವನನ್ನು ತಡೆದರು.

ಅನಂತರ ಭೀಮಸೇನನು ಪುನಃ ತನ್ನ ರಥವನ್ನು ಹತ್ತಿ ನಿನ್ನ ಮಕ್ಕಳ ಮರ್ಮಸ್ಥಳಗಳಲ್ಲಿ ನಿಶಿತವಾದ ಬಾಣಗಳನ್ನು ಪ್ರಯೋಗಿಸಿದನು. ಭೀಮ ಸೇನನ ಬಾಣಗಳಿಂದ ಪ್ರಹೃತರಾದ ನಿನ್ನ ಮಕ್ಕಳು–ಇಳಿಜಾರಾಗಿರುವ ಪ್ರದೇಶದಿಂದ ಆನೆಯನ್ನು ಮೇಲಕ್ಕೆಳೆಯುವಂತೆ–ಭೀಮಸೇನನನ್ನು ಸೆಳೆ ಯಲು ಉಪಕ್ರಮಿಸಿದರು. ಅದರಿಂದ ಕ್ರುದ್ಧನಾದ ಭೀಮಸೇನನು ಕ್ಷುರಪ್ರ ದಿಂದ ದುರ್ಮರ್ಷಣನ ತಲೆಯನ್ನು ಕತ್ತರಿಸಿ ನೆಲದ ಮೇಲೆ ಕೆಡವಿದನು. ಅನಂತರ ಮಹಾರಥನಾದ ಭೀಮಸೇನನು ಸಕಲವಿಧವಾದ ಆವರಣಗಳನ್ನೂ ಭೇದಿಸಲು ಸಮರ್ಥವಾದ ಮತ್ತೊಂದು ಭಲ್ಲದಿಂದ ನಿನ್ನ ಮಗನಾದ ಶ್ರುತಾಂತನನ್ನು ಸಂಹರಿಸಿದನು. ಪುನಃ ಅರಿಂದಮನಾದ ಭೀಮಸೇನನು ನಗು-ನಗುತ್ತಲೇ ಕುರುವಂಶೀಯನಾದ ಜಯತ್ಸೇನನನ್ನು ನಾರಾಚದಿಂದ ಪ್ರಹರಿಸಿ ರಥದ ಪೀಠದಿಂದ ಕೆಳಕ್ಕೆ ಬೀಳಿಸಿದನು. ಜಯತ್ಸೇನನು ಕೆಳಕ್ಕೆ ಬಿದ್ದೊಡನೆಯೇ ಮರಣಹೊಂದಿದನು. ತನ್ನ ಸಹೋದರರು ಹತರಾದುದನ್ನು ಕಂಡು ಪರಮಕ್ರುದ್ಧನಾದ ಶ್ರುತರ್ವಾಣನು ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ, ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ನೂರು ಬಾಣಗಳಿಂದ ಭೀಮಸೇನನನ್ನು

ಪ್ರಹರಿಸಿದನು. ಅದರಿಂದ ಕ್ರುದ್ಧನಾದ ಭೀಮಸೇನನು ಜೈತ್ರ, ಭೂರಿಬಲ, ರವಿ–ಎಂಬ ಮೂವರು ಕೌರವರನ್ನೂ ವಿಷ ಮತ್ತು ಅಗ್ನಿಗಳಿಗೆ ಸಮಾನವಾದ ಭಯಂಕರವಾದ ಮೂರು ಬಾಣಗಳಿಂದ ಪ್ರಹರಿಸಿದನು. ವಸಂತರ್ತುವಿನಲ್ಲಿ ಕತ್ತರಿಸಲ್ಪಟ್ಟ ಪುಷ್ಪಯುಕ್ತವಾದ ಮುತ್ತುಗದ ಮರಗಳಂತೆ ಆ ಮೂವರು ಮಹಾರಥರೂ ಹತರಾಗಿ ತಮ್ಮ-ತಮ್ಮ ರಥಗಳಿಂದ ಭೂಮಿಯ ಮೇಲೆ ಬಿದ್ದರು. ಅನಂತರ ಭೀಮಸೇನನು ಮತ್ತೊಂದು ತೀಕ್ಷ್ಣವಾದ ಭಲ್ಲದಿಂದ ದುರ್ವಿಮೋಚನನನ್ನೂ ಪ್ರಹರಿಸಿ ಮೃತ್ಯುವಿನ ಬಳಿಗೆ ಕಳುಹಿಸಿಕೊಟ್ಟನು. ಪರ್ವತಶಿಖರದಲ್ಲಿ ಹುಟ್ಟಿದ ವೃಕ್ಷವು ಬಿರುಗಾಳಿಯಿಂದ ಭಗ್ನವಾಗಿ ಕೆಳಗೆ ಬೀಳುವಂತೆ–ರಥಿಗಳಲ್ಲಿ ಶ್ರೇಷ್ಠನಾಗಿದ್ದ ದುರ್ವಿಮೋಚನನು ಭೀಮನಿಂದ ಹತನಾಗಿ ರಥದ ಆಸನದಿಂದ ಭೂಮಿಯಲ್ಲಿ ಬಿದ್ದನು. ಬಳಿಕ ಭೀಮಸೇನನು ರಣಕ್ಷೇತ್ರದಲ್ಲಿ ನಿನ್ನ ಮಕ್ಕಳಾದ ದುಷ್ಪ್ರಧರ್ಷ ಮತ್ತು ಸುಜಾತರಿಬ್ಬರನ್ನೂ ಎರಡೆರಡು ಬಾಣಗಳಿಂದ ಸಂಹರಿಸಿದನು. ಶಿಲೀಮುಖಗಳಿಂದ ಗಾಯಗೊಂಡ ಶರೀರಗಳಿಂದ ಕೂಡಿದ್ದ, ರಥಸತ್ತಮರಾದ ದುಷ್ಪ್ರಧರ್ಷ-ಸುಜಾತರಿಬ್ಬರೂ ರಥದಿಂದ ಕೆಳಕ್ಕೆ ಬಿದ್ದರು. ತನ್ನ ಸಹೋದರರು ಹತರಾದುದನ್ನು ಕಂಡು ಕ್ರುದ್ಧನಾದ ದುರ್ವಿಷಹನು ಭೀಮನನ್ನು ಆಕ್ರಮಿಸಲು ಹೋದನು. ದುರ್ವಿಷಹನು ತನ್ನ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ಭೀಮನು ಅವನನ್ನೂ ಭಲ್ಲದಿಂದ ಪ್ರಹರಿಸಿ ಕೆಳಕ್ಕೆ ಬೀಳಿಸಿದನು. ಎಲ್ಲ ಧನುಷ್ಮಂತರೂ ನೋಡುತ್ತಿರುವಂತೆಯೇ ದುರ್ವಿಷಹನೂ ಹತನಾಗಿ ರಥದಿಂದ ಕೆಳಕ್ಕೆ ಬಿದ್ದನು. ಭೀಮಸೇನನೊಬ್ಬನಿಂದಲೇ ತನ್ನ ಬಹುಮಂದಿ ಸಹೋದರರೂ ಹತರಾದುದನ್ನು ಕಂಡು ಕ್ರೋಧಾಭಿಭೂತನಾದ ಶ್ರುತರ್ವಾಣನು ಭೀಮಸೇನನನ್ನು ಆಕ್ರಮಿಸಿದನು. ಸುವರ್ಣಭೂಷಿತವಾಗಿದ್ದ ಮಹಾಧನುಸ್ಸನ್ನು ಸುದೀರ್ಘವಾಗಿ ಸೆಳೆಯುತ್ತಾ ವಿಷ ಮತ್ತು ಅಗ್ನಿಗಳಿಗೆ ಸಮಾನವಾದ ಬಾಣಗಳನ್ನು ಪ್ರಯೋಗಿಸುತ್ತಾ ಶ್ರುತರ್ವಾಣನು ಭೀಮಸೇನನನ್ನು ಆಕ್ರಮಿಸಿದನು. ನಿನ್ನ ಮಗನು ಆ ಮಹಾಯುದ್ಧದಲ್ಲಿ ಭೀಮಸೇನನ ಧನುಸ್ಸನ್ನು ಕತ್ತರಿಸಿ ಧನುಸ್ಸಿನಿಂದ

ವಿಹೀನನಾಗಿದ್ದ ಅವನನ್ನು ಇಪ್ಪತ್ತು ಬಾಣಗಳಿಂದ ಗಾಯಗೊಳಿಸಿದನು. ಮಹಾಬಲನಾದ ಭೀಮಸೇನನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ನಿನ್ನ ಮಗನ ಮೇಲೆ ಬಾಣಗಳ ಮಳೆಗರೆಯುತ್ತಾ ನಿಲ್ಲು-ನಿಲ್ಲೆಂದು ಹೇಳಿದನು. ಶ್ರುತರ್ವಾಣ-ಭೀಮಸೇನರ ನಡುವೆ–ಹಿಂದೆ ಜಂಭ-ವಾಸವರಿಗೆ ನಡೆದಿದ್ದ ಯುದ್ಧದಂತೆ–ಚಿತ್ರರೂಪವಾದ ಭಯಾನಕವಾದ ಮಹಾಯುದ್ಧವು ನಡೆಯಿತು. ಅವರಿಬ್ಬರಿಂದಲೂ ಬಿಡಲ್ಪಡುತ್ತಿದ್ದ ಯಮದಂಡಸದೃಶವಾದ, ನಿಶಿತವಾದ ಬಾಣಗಳಿಂದ ಭೂಮಿ, ಆಕಾಶ, ದಿಕ್ಕುಗಳು, ಉಪದಿಕ್ಕುಗಳು ಎಲ್ಲವೂ ಮುಚ್ಚಿಹೋದುವು. ಅನಂತರ ಸಂಕ್ರುದ್ಧನಾದ ಶ್ರುತರ್ವಾಣನು ಧನುಸ್ಸನ್ನೆತ್ತಿಕೊಂಡು ಬಾಣಗಳಿಂದ ಭೀಮಸೇನನನ್ನು ತೋಳುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿದನು. ಧನುಷ್ಮಂತನಾದ ನಿನ್ನ ಮಗನಿಂದ ಬಹಳವಾಗಿ ಗಾಯಗೊಂಡ, ಕ್ರುದ್ಧನಾದ ಭೀಮಸೇನನು–ಪರ್ವಕಾಲದಲ್ಲಿ ಮಹೋದಧಿಯು ಕ್ಷೋಭೆಗೊಳ್ಳುವಂತೆ–ಕ್ಷುಭಿತನಾದನು. ಬಳಿಕ ಕೋಪಾವಿಷ್ಟನಾಗಿದ್ದ ಭೀಮಸೇನನು ಶ್ರುತ ರ್ವಾಣನ ಸಾರಥಿಯನ್ನೂ ಮತ್ತು ನಾಲ್ಕು ಕುದುರೆಗಳನ್ನೂ ನಿಶಿತವಾದ ಬಾಣಗಳಿಂದ ಯಮನ ಅರಮನೆಗೆ ಕಳುಹಿಸಿಕೊಟ್ಟನು. ಶ್ರುತರ್ವಾಣನು ರಥಹೀನನಾದುದನ್ನು ಕಂಡು ಮಹಾತ್ಮನಾದ ಭೀಮಸೇನನು ತನ್ನ ಹಸ್ತ ಲಾಘವವನ್ನು ಪ್ರದರ್ಶಿಸುತ್ತಾ ಕೂದಲನ್ನು ಕತ್ತರಿಸುವಷ್ಟು ತೀಕ್ಷ್ಣವಾದ ಬಾಣಗಳಿಂದ ಅವನನ್ನು ಮುಚ್ಚಿಬಿಟ್ಟನು. ರಥಹೀನನಾಗಿದ್ದ ಶ್ರುತರ್ವಾಣನು ಒಡನೆಯೇ ಖಡ್ಗವನ್ನೂ ಗುರಾಣಿಯನ್ನೂ ಕೈಗಳಲ್ಲೆತ್ತಿಕೊಂಡನು. ಖಡ್ಗವನ್ನೂ ಮತ್ತು ಕಾಂತಿಯುಕ್ತವಾದ ಗುರಾಣಿಯನ್ನೂ ತೆಗೆದುಕೊಳ್ಳುತ್ತಿದ್ದಾಗಲೇ ಭೀಮಸೇನನು ಕ್ಷುರಪ್ರದಿಂದ ಅವನ ಶಿರಸ್ಸನ್ನು ಶರೀರದಿಂದ ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಮಹಾತ್ಮನಾದ ಭೀಮಸೇನನ ಕ್ಷುರಪ್ರದಿಂದ ಶ್ರುತರ್ವಾಣನ ತಲೆಯು ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುಹೋಗಲಾಗಿ ಅವನ ಕಬಂಧವು ಶಬ್ದದಿಂದ ಭೂಮಿಯನ್ನೇ ಪ್ರತಿಧ್ವನಿಸುತ್ತಾ ರಥದಿಂದ ಕೆಳಕ್ಕೆ ಬಿದ್ದಿತು. ಮಹಾವೀರನಾದ ಶ್ರುತರ್ವಾಣನು ಹತನಾಗಲಾಗಿ ನಿನ್ನ ಕಡೆಯ ವೀರರು ಭಯಮೋಹಿತರಾಗಿದ್ದರೂ ಭೀಮಸೇನನೊಡನೆ ಯುದ್ಧ ಮಾಡುವ ಇಚ್ಛೆಯಿಂದ ಅವನ ಕಡೆಗೇ ಧಾವಿಸಿದರು. ಹತಶೇಷವಾಗಿದ್ದ

ಸೈನ್ಯಸಮೂಹದಿಂದ ಹೊರಬಂದು ಬಹಳ ಶೀಘ್ರವಾಗಿ ತನ್ನ ಮೇಲೆ ಆಕ್ರಮಣ ನಡೆಸಲು ಬರುತ್ತಿದ್ದ ಕವಚಧಾರಿಗಳಾಗಿದ್ದ ನಿನ್ನ ಕಡೆಯ ಸೈನಿಕರನ್ನು ಪ್ರತಾಪವಂತನಾದ ಭೀಮಸೇನನು ತಡೆದು ನಿಲ್ಲಿಸಿದನು. ಆ



ಕುರುಸೈನಿಕರೆಲ್ಲರೂ ಭೀಮಸೇನನ ಬಳಿಗೆ ಬಂದು ಎಲ್ಲ ಕಡೆಗಳಿಂದಲೂ ಅವನನ್ನು ಮುತ್ತಿದರು. ಕೌರವಸೈನಿಕರಿಂದ ಸಮಾವೃತನಾಗಿದ್ದ ಭೀಮಸೇನನು ಅವರೆಲ್ಲರನ್ನೂ ನಿಶಿತವಾದ ಬಾಣಗಳಿಂದ–ಸಹಸ್ರಾಕ್ಷನಾದ ಇಂದ್ರನು ಅಸುರರನ್ನು ಪೀಡಿಸಿದಂತೆ–ಬಹಳವಾಗಿ ಪೀಡಿಸಿದನು. ಅನಂತರ ಭೀಮಸೇನನು ಆವರಣದಿಂದ ಕೂಡಿದ್ದ ಐದು ನೂರು ಮಹಾರಥಗಳನ್ನು ಧ್ವಂಸಮಾಡಿದನು.

ಏಳು ನೂರು ಗಜಸೈನಿಕರನ್ನೂ ಸಂಹರಿಸಿದನು. ಶ್ರೇಷ್ಠವಾದ ಬಾಣಗಳಿಂದ ಒಂದು ಲಕ್ಷ ಪದಾತಿಸೈನಿಕರನ್ನು ಸಂಹಾರಮಾಡಿದನು. ಭೀಮಸೇನನು ಎಂಟು ನೂರು ಅಶ್ವಸೈನಿಕರನ್ನು ಧ್ವಂಸಮಾಡಿ ರಣಾಂಗಣದಲ್ಲಿ ವಿರಾಜಿಸುತ್ತಿದ್ದನು. ಕುಂತಿಯ ಮಗನಾದ ಭೀಮಸೇನನು ನಿನ್ನ ಮಕ್ಕಳನ್ನು ಸಂಹರಿಸಿ ತಾನು ಕೃತಾರ್ಥನಾದೆನೆಂದೂ, ತನ್ನ ಜನ್ಮವು ಸಾರ್ಥಕವಾಯಿತೆಂದೂ ಭಾವಿಸಿದನು. ಆ ರೀತಿಯಲ್ಲಿ ಭಯಂಕರವಾಗಿ ಯುದ್ಧಮಾಡುತ್ತಿದ್ದ, ನಿನ್ನ ಕಡೆಯ ಸೈನಿಕರನ್ನು ಸತತವಾಗಿ ಧ್ವಂಸಮಾಡುತ್ತಿದ್ದ ಭೀಮಸೇನನನ್ನು ನೋಡಲು ಕೂಡ ನಿನ್ನ ಸೈನಿಕರು ಶಕ್ತರಾಗಿರಲಿಲ್ಲ. ಭೀಮಸೇನನು ಕುರುಗಳೆಲ್ಲರನ್ನೂ ಓಡಿಸಿ, ಅವರ ಅನುಯಾಯಿಗಳೆಲ್ಲರನ್ನೂ ಸಂಹರಿಸಿ, ತನ್ನೆರಡು ಭುಜಗಳನ್ನೂ ತಟ್ಟಿಕೊಳ್ಳುತ್ತಾ ಆ ಭಯಂಕರಶಬ್ದದಿಂದ ಆನೆಗಳನ್ನೂ ಹೆದರಿಸುತ್ತಿದ್ದನು. ಮಹಾರಾಜ! ನಿನ್ನ ಸೈನ್ಯದಲ್ಲಿ ಬಹುಭಾಗ ಯೋಧರು ಹತರಾಗಿಹೋಗಿದ್ದರು. ಸ್ವಲ್ಪಭಾಗ ಮಾತ್ರವೇ ಉಳಿದಿದ್ದಿತು. ಅವರೂ ಸಹ ಬಹಳ ದೀನರಾಗಿದ್ದರು. (ಯುದ್ಧಮಾಡುವ ಉತ್ಸಾಹವು ಅವರಲ್ಲಿ ಯಾರಿಗೂ ಇರಲಿಲ್ಲ.)"

೨೬ನೆಯ ಅಧ್ಯಾಯವು ಮುಗಿಯಿತು.

೨೭ನೆಯ ಅಧ್ಯಾಯ ಶಲ್ಯಪರ್ವ (ಮುಂದುವರಿದಿದೆ.)

## ಕೃಷ್ಣಾರ್ಜುನರ ಮಾತುಕತೆ: ಅರ್ಜುನನು ಸತ್ಯಕರ್ಮಾ, ಸತ್ಯೇಷು ಮತ್ತು ಸುಶರ್ಮರನ್ನು ಸಂಹರಿಸಿದುದು: ಧೃತರಾಷ್ಟ್ರನ ಮಗನಾದ ಸುದರ್ಶನನ ಸಂಹಾರ

ಸಂಜಯನು ಹೇಳುತ್ತಾನೆ:

"ಮಹಾರಾಜ! ನಿನ್ನ ನೂರು ಮಕ್ಕಳಲ್ಲಿ ದುರ್ಯೋಧನ ಮತ್ತು ಸುದರ್ಶನ ಈ ಇಬ್ಬರು ಮಾತ್ರವೇ ಹತಶೇಷರಾಗಿ ಉಳಿದಿದ್ದರು. ಆ ಸಮಯದಲ್ಲವರು ಅಶ್ವಸೈನ್ಯದ ಮಧ್ಯಭಾಗದಲ್ಲಿದ್ದರು. ಅಶ್ವಸೈನ್ಯದ ಮಧ್ಯಭಾಗದಲ್ಲಿದ್ದ ದುರ್ಯೋಧನನನ್ನು ನೋಡಿ ಶ್ರೀಕೃಷ್ಣನು ಕುಂತಿಯ ಮಗನಾದ ಧನಂಜಯನೊಡನೆ ಹೇಳಿದನು:

“ಅರ್ಜುನ! ನಮ್ಮ ಶತ್ರುಗಳಲ್ಲಿ ಅಧಿಕಾಂಶಯೋಧರು ಹತರಾಗಿ ಹೋಗಿದ್ದಾರೆ. ನಮ್ಮ ಬಂಧುಜನರ ರಕ್ಷಣೆಯೂ ಆಗಿದೆ. ಸಾತ್ಯಕಿಯು ಸಂಜಯನನ್ನೂ ಬಂಧಿಸಿ ಕರೆದುಕೊಂಡು ಹೋಗಿರುತ್ತಾನೆ. ಯುದ್ಧದಲ್ಲಿ ಧೃತರಾಷ್ಟ್ರನ ಮಕ್ಕಳನ್ನೂ ಮತ್ತು ಅವರ ಅನುಯಾಯಿಗಳನ್ನೂ ಆಕ್ರಮಿಸಿ



ಅವರೊಡನೆ ಯುದ್ಧಮಾಡಿ ನಕುಲ-ಸಹದೇವರೂ ಬಹಳವಾಗಿ ಬಳಲಿದ್ದಾರೆ. ಕೃಪ, ಕೃತವರ್ಮಾ ಮತ್ತು ಮಹಾರಥನಾದ ಅಶ್ವತ್ಥಾಮಾ–ಈ ಮೂವರೂ ದುರ್ಯೋಧನನನ್ನು ಬಿಟ್ಟು ಬೇರೆಲ್ಲಿಗೋ ಹೋಗಿದ್ದಾರೆ. ನಮ್ಮ ಸೇನಾಪತಿಯಾದ ಧೃಷ್ಟದ್ಯುಮ್ನನು ದುರ್ಯೋಧನನ ಸೈನ್ಯವನ್ನು ಸಂಪೂರ್ಣವಾಗಿ ವಿನಾಶಮಾಡಿ ಪ್ರಭದ್ರಕಸೈನಿಕರೊಡನೆ ಉಜ್ಜ್ವಲಕಾಂತಿಯಿಂದ ರಾರಾಜಿ

ಸುತ್ತಾ ನಿಂತಿದ್ದಾನೆ. ದುರ್ಯೋಧನನು ಶ್ವೇತಛತ್ರವನ್ನು ಧರಿಸಿದವನಾಗಿ ಅಶ್ವಸೈನ್ಯದ ಮಧ್ಯದಲ್ಲಿ ನಿಂತು ಬಾರಿ-ಬಾರಿಗೂ ಇತ್ತಕಡೆಗೇ ನೋಡು ತ್ತಿದ್ದಾನೆ. ಅವನು ತನ್ನ ಅಳಿದುಳಿದ ಸೈನಿಕರನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿ ರಣಮಧ್ಯದಲ್ಲಿ ನಿಂತಿದ್ದಾನೆ. ಅವನನ್ನು ನೀನು ನಿಶಿತವಾದ ಬಾಣಗಳಿಂದ ಸಂಹರಿಸಿದರೆ ಕೃತಕೃತ್ಯನಾಗುವೆ. ತಮ್ಮ ಪಕ್ಷದ ಗಜಸೈನ್ಯವು ಸಂಪೂರ್ಣ ವಾಗಿ ಹತವಾದುದನ್ನು ಕಂಡು, ನೀನು ಇಲ್ಲಿಗೆ ಬಂದುದನ್ನೂ ನೋಡಿ ದುರ್ಯೋಧನಸಹಿತರಾದ ಕುರುಸೈನಿಕರು ಪಲಾಯನಮಾಡುತ್ತಾರೆ. ಅಷ್ಟರೊಳಗಾಗಿ ನೀನು ದುರ್ಯೋಧನನನ್ನು ಸಂಹರಿಸು. ನಮ್ಮ ಯೋಧರಲ್ಲಿ ಯಾವನಾದರೂ ಒಬ್ಬನು ಧೃಷ್ಟದ್ಯುಮ್ನನ ಬಳಿಗೆ ಹೋಗಿ ಅವನನ್ನು ಇಲ್ಲಿಗೆ ಬೇಗ ಬರುವಂತೆ ಹೇಳಲಿ. ಈ ಪಾಪಿಷ್ಠನಾದ ದುರ್ಯೋಧನನು ಇಂದು ತಪ್ಪಿಸಿಕೊಂಡು ಹೋಗಲಾರನು. ಏಕೆಂದರೆ: ಇವನ ಸೈನಿಕರು ಬಹಳವಾಗಿ ಬಳಲಿದ್ದಾರೆ. ಆದರೆ ದುರ್ಯೋಧನನು ಈಗಲೂ ಸಹ–'ಪಾಂಡವರ ಸೈನ್ಯವೆಲ್ಲವನ್ನೂ ಸಂಹರಿಸಿ ಪಾಂಡುಪುತ್ರರನ್ನು ಜಯಿಸುತ್ತೇನೆ'– ಎಂಬುದಾಗಿಯೇ ಭಾವಿಸಿ ಮಹೋಗ್ರರೂಪವನ್ನು ತಾಳಿ ರಣಾಂಗಣದಲ್ಲಿ ನಿಂತಿದ್ದಾನೆ. ತನ್ನ ಸೈನ್ಯವು ಹತವಾದುದನ್ನೂ ಮತ್ತು ಉಳಿದ ಸೈನ್ಯವು ಪಾಂಡವರಿಂದ ಪೀಡಿಸಲ್ಪಡುತ್ತಿರುವುದನ್ನೂ ನೋಡಿಯೂ ದುರ್ಯೋಧನನು ಇತ್ತಕಡೆಗೆ ಬರುತ್ತಿರುವುದನ್ನು ನೋಡಿದರೆ ನಿಶ್ಚಯ ವಾಗಿಯೂ ಅವನು ತನ್ನ ವಧೆಗಾಗಿಯೇ ಇತ್ತ ಬರುತ್ತಿದ್ದಾನೆ."

ಶ್ರೀಕೃಷ್ಣನು ಹೀಗೆ ಹೇಳಿದನಂತರ ಅರ್ಜುನನು ಹೇಳಿದನು:

"ಮಾಧವ! ಧೃತರಾಷ್ಟ್ರನ ಎಲ್ಲ ಮಕ್ಕಳೂ ಭೀಮನಿಂದಲೇ ಹತ ರಾದರು. ಈಗ ಉಳಿದಿರುವ ಈ ಇಬ್ಬರೂ ಉಳಿಯಲಾರರು. ಭೀಷ್ಮ-ದ್ರೋಣರು, ವೈಕರ್ತನಕರ್ಣ, ಮದ್ರರಾಜನಾದ ಶಲ್ಯ, ಜಯದ್ರಥ–ಇವ ರೆಲ್ಲರೂ ಹತರಾಗಿಹೋದರು.

**ಹಯಾಃ ಪಞ್ಚಶತಾಃ ಶಿಷ್ಟಾಃ ಶಕುನೇಃ ಸೌಬಲಸ್ಯ ಚ ।**
**ರಥಾನಾಂ ತು ಶತೇ ಶಿಷ್ಟೇ ದ್ವೇ ಏವ ತು ಜನಾರ್ದನ ।**
**ದನ್ತಿನಾಂ ಚ ಶತಂ ಸಾಗ್ರಂ ತ್ರಿಸಾಹಸ್ರಾಃ ಪದಾತಯಃ ॥೧೬॥**

**ಅಶ್ವತ್ಥಾಮಾ ಕೃಪಶ್ಚೈವ ತ್ರಿಗರ್ತಾಧಿಪತಿಸ್ತಥಾ ।**
**ಉಲೂಕಃ ಶಕುನಿಶ್ಚೈವ ಕೃತವರ್ಮಾ ಚ ಸಾತ್ವತಃ ।**
**ಏತದ್ಬಲಮಭೂಚ್ಛೇಷಂ ಧಾರ್ತರಾಷ್ಟ್ರಸ್ಯ ಮಾಧವ ॥೧೭॥**

ಈಗ ಶಕುನಿಯ ಬಳಿ ಐದು ನೂರು ಅಶ್ವಸೈನ್ಯಗಳು ಮಾತ್ರವೇ ಉಳಿದಿವೆ. ಎರಡು ನೂರು ರಥಿಗಳಿದ್ದಾರೆ. ನೂರಕ್ಕಿಂತಲೂ ಸ್ವಲ್ಪ ಹೆಚ್ಚು ಆನೆಗಳು ಉಳಿದುಕೊಂಡಿವೆ. ಮೂರು ಸಾವಿರ ಪದಾತಿಗಳಿದ್ದಾರೆ. ಅಶ್ವತ್ಥಾಮಾ, ಕೃಪರು, ತ್ರಿಗರ್ತಾಧಿಪತಿಯಾದ ಸುಶರ್ಮಾ, ಉಲೂಕ, ಶಕುನಿ, ಕೃತವರ್ಮಾ–ಈ ಮಹಾರಥರೂ ದುರ್ಯೋಧನನ ಕಡೆಯಲ್ಲಿ ಉಳಿದುಕೊಂಡಿರುತ್ತಾರೆ. ದುರ್ಯೋಧನನ ಸೈನ್ಯದಲ್ಲಿ ಇಷ್ಟುಮಾತ್ರ ಶೇಷವು ಉಳಿದಿದೆ.

ಕೃಷ್ಣ! ಪ್ರಪಂಚದಲ್ಲಿ ಯಾರಿಗೇ ಆದರೂ ಕಾಲನಿಂದ ಬಿಡುಗಡೆಯೇ ಇಲ್ಲ. ತನ್ನ ಎಲ್ಲ ಸೈನಿಕರೂ ಹತರಾದರೂ ವಿಜಯದ ಆಸೆಯನ್ನಿಟ್ಟುಕೊಂಡು ದುರ್ಯೋಧನನು ನಿಂತಿರುವುದನ್ನಾದರೂ ನೋಡು. ಮಾಧವ! ಇಂದು ಸಂಜೆಯೊಳಗೆ ಮಹಾರಾಜನಾದ ಯುಧಿಷ್ಠಿರನು ಶತ್ರುರಹಿತನಾಗುತ್ತಾನೆ.

ಇಂದು ಶತ್ರುಯೋಧರಲ್ಲಿ ಯಾರೂ ನನ್ನಿಂದ ತಪ್ಪಿಸಿಕೊಂಡು ಹೋಗಲಾರರೆಂದೇ ನಾನು ಭಾವಿಸುತ್ತೇನೆ. ಮದೋತ್ಕಟರಾದ ಸೈನಿಕರು ಇಂದು ರಣಾಂಗಣದಿಂದ ಪಲಾಯನಮಾಡದಿದ್ದರೆ, ಅವರು ದೇವತೆಗಳೇ ಆಗಿರಲಿ, ದಾನವರೇ ಆಗಿರಲಿ–ಅವರೆಲ್ಲರನ್ನೂ ನಾನು ಸಂಹರಿಸುತ್ತೇನೆ.

ಇಂದು ನಾನು ಪರಮಕ್ರುದ್ಧನಾಗಿ ಗಾಂಧಾರರಾಜನಾದ ಶಕುನಿಯನ್ನು ನಿಶಿತವಾದ ಬಾಣಗಳಿಂದ ಸಂಹರಿಸಿ ಯುಧಿಷ್ಠಿರನ ಬಹುಕಾಲದ ಜಾಗರಣರೂಪವಾದ ರೋಗವನ್ನು ತೊಲಗಿಸುತ್ತೇನೆ. (ಶಕುನಿಯ ವಧೆಯಾದನಂತರ ರಾಜನು ಸುಖವಾಗಿ ನಿದ್ರಿಸುತ್ತಾನೆ.) ದುರಾಚಾರಿಯಾದ ಶಕುನಿಯು ತುಂಬಿದ ಸಭೆಯಲ್ಲಿ ದ್ಯೂತದ ಮೂಲಕವಾಗಿ ನಮ್ಮಿಂದ ಯಾವ ಯಾವ ರತ್ನಗಳನ್ನು ಮೋಸದಿಂದ ಅಪಹರಿಸಿದ್ದನೋ–ಅವುಗಳೆಲ್ಲವನ್ನೂ

ನಾನು ಯುದ್ಧದ ಮೂಲಕವಾಗಿ ಹಿಂದಕ್ಕೆ ತೆಗೆದುಕೊಳ್ಳುತ್ತೇನೆ. ಹಸ್ತಿನಾಪುರದಲ್ಲಿನ ಸ್ತ್ರೀಯರೆಲ್ಲರೂ ತಮ್ಮ ಪತಿಗಳೂ ಪುತ್ರರೂ ಯುದ್ಧದಲ್ಲಿ ಪಾಂಡವರಿಂದ ಹತರಾದುದನ್ನು ಕೇಳಿ ಬಿಕ್ಕಿ-ಬಿಕ್ಕಿ ಅಳುತ್ತಾರೆ. ಇಂದು ದುರ್ಯೋಧನನು ಉಜ್ಜ್ವಲವಾದ ರಾಜ್ಯಲಕ್ಷ್ಮಿಯಿಂದಲೂ ಪ್ರಾಣ ಗಳಿಂದಲೂ ವಿಮುಕ್ತನಾಗುತ್ತಾನೆ. ನಮ್ಮ ಕಾರ್ಯಗಳೆಲ್ಲವೂ ಇಂದಿಗೆ ಸಮಾಪ್ತವಾದಂತಾಗುತ್ತದೆ.

ವೃಷ್ಣಿನಂದನನೇ! ಬಾಲಬುದ್ಧಿಯವನಾದ (ಮೂರ್ಖನಾದ) ದುರ್ಯೋಧನನು ಭಯಪಟ್ಟುಕೊಂಡು ಸಮರಭೂಮಿಯಿಂದ ಪಲಾಯನ ಮಾಡದಿದ್ದರೆ ಅವನಿಂದು ನನ್ನಿಂದ ಹತನಾದನೆಂದೇ ಭಾವಿಸು. ಅವನ ಸುತ್ತಲೂ ಇರುವ ಅಶ್ವಸೈನ್ಯದ ವಿಷಯವಾಗಿ ಹೇಳುವುದಾದರೆ ನನ್ನ ಗಾಂಡೀವಧನುಸ್ಸಿನ ಟೇಂಕಾರವನ್ನೇ ಸಹಿಸಿಕೊಳ್ಳಲಾರದಷ್ಟು ಅದು ಅಶಕ್ತ ವಾಗಿದೆ. ಆದುದರಿಂದ, ಮುಂದೆ ಹೋಗು ಕೃಷ್ಣ! ನಾನು ಅವರೆಲ್ಲರನ್ನೂ ಸಂಹಾರಮಾಡುತ್ತೇನೆ.”

ಮಹಾರಾಜ! ಅರ್ಜುನನು ಹೀಗೆ ಹೇಳುತ್ತಲೇ ಶ್ರೀಕೃಷ್ಣನು ದುರ್ಯೋಧನನ ಸೈನ್ಯದ ಕಡೆಗೆ ಕುದುರೆಗಳನ್ನು ದೌಡಾಯಿಸಿದನು. ದುರ್ಯೋಧನನ ಸೈನ್ಯವನ್ನು ನೋಡಿ ಮಹಾರಥರಾದ ಭೀಮಾರ್ಜುನ-ಸಹದೇವರು ದುರ್ಯೋಧನನನ್ನು ಸಂಹರಿಸುವ ಇಚ್ಛೆಯಿಂದ ಸಿಂಹನಾದ ಮಾಡುತ್ತಾ ಮುನ್ನಡೆದರು. ಬಿಲ್ಲುಗಳನ್ನೆತ್ತಿಕೊಂಡು ಸಂಘಟಿತರಾಗಿ ವೇಗ ದಿಂದ ತಮ್ಮ ಮೇಲೆ ಬೀಳಲು ಬರುತ್ತಿದ್ದ ಪಾಂಡವರನ್ನು ನೋಡಿದ ಸೌಬಲನು ವಧೋದ್ಯತರಾದ ಪಾಂಡವರನ್ನು ಆಕ್ರಮಿಸಿದನು. ನಿನ್ನ ಮಗ ನಾದ ಸುದರ್ಶನನು ಭೀಮಸೇನನನ್ನು ಆಕ್ರಮಿಸಿದನು. ಸುಶರ್ಮಾ ಮತ್ತು ಶಕುನಿಗಳು ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದರು.

ಕುದುರೆಯ ಮೇಲೆ ಕುಳಿತಿದ್ದ ನಿನ್ನ ಮಗ ದುರ್ಯೋಧನನು ಸಹದೇವನನ್ನು ಆಕ್ರಮಿಸಿದನು. ಸತತಪ್ರಯತ್ನದಿಂದ ನಿನ್ನ ಮಗನು ಬಹಳ ಶೀಘ್ರವಾಗಿ ಸಹದೇವನ ಶಿರಸ್ಸನ್ನು ಪ್ರಾಸಾಯುಧದಿಂದ ಪ್ರಹರಿಸಿದನು.

ನಿನ್ನ ಮಗನಿಂದ ಪ್ರಹೃತನಾದ ಸಹದೇವನು ರಥಪೀಠದ ಪಕ್ಕಕ್ಕೆ ಜರುಗಿ ಕುಳಿತನು. ಅವನ ಅಂಗಾಂಗಗಳೆಲ್ಲವೂ ರಕ್ತದಿಂದ ತೋಯ್ದು ಹೋಗಿದ್ದುವು. ವಿಷಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ಸ್ವಲ್ಪಹೊತ್ತು ಕಳೆದನಂತರ ಚೇತರಿಸಿಕೊಂಡ ಸಹದೇವನು ಅತ್ಯಂತಕ್ರುದ್ಧನಾಗಿ ತೀಕ್ಷ್ಣವಾದ ಬಾಣಗಳಿಂದ ದುರ್ಯೋಧನನನ್ನು ಮುಚ್ಚಿದನು. ಕುಂತಿಯ ಮಗನಾದ ಧನಂಜಯನು ಅತುಲಪರಾಕ್ರಮದಿಂದ ಕುದುರೆಗಳ ಮೇಲೆ ಕುಳಿತಿದ್ದ ಶೂರರ ತಲೆಗಳನ್ನು ತುಂಡರಿಸುತ್ತಿದ್ದನು. ಅನೇಕ ಬಾಣಗಳಿಂದ ಪಾರ್ಥನು ಅಶ್ವಸೈನ್ಯವನ್ನು ಧ್ವಂಸಮಾಡಿದನು. ಅನೇಕ ಕುದುರೆಗಳನ್ನೂ ನಿಶಿತವಾದ ಬಾಣಗಳಿಂದ ನೆಲಕ್ಕೆ ಕೆಡವಿ ಬಳಿಕ ತ್ರಿಗರ್ತರಥಿಗಳ ಬಳಿಗೆ ಧಾವಿಸಿದನು. ತ್ರಿಗರ್ತಮಹಾರಥರು ಬಹಳ ಬೇಗ ಸಂಘಟಿತರಾಗಿ ಅರ್ಜುನನನ್ನೂ ಮತ್ತು ವಾಸುದೇವನನ್ನೂ ಬಾಣಗಳ ವೃಷ್ಟಿಯಿಂದ ಮುಚ್ಚಿದರು. ಅದಕ್ಕೆ ಪ್ರತಿಯಾಗಿ ಮಹಾಯಶೋವಂತನಾದ ಅರ್ಜುನನು ಕ್ಷುರಪ್ರದಿಂದ ಸತ್ಯಕರ್ಮನನ್ನು ಪ್ರಹರಿಸಿ ಅನಂತರ ರಥದ ಈಷಾದಂಡವನ್ನೂ ಕತ್ತರಿಸಿದನು. ಮರುಕ್ಷಣದಲ್ಲಿಯೇ ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಕ್ಷುರಪ್ರ ದಿಂದ ಸುವರ್ಣಮಯವಾದ ಕರ್ಣಕುಂಡಲಗಳಿಂದ ಭೂಷಿತವಾಗಿದ್ದ ಸತ್ಯಕರ್ಮನ ತಲೆಯನ್ನೂ ಬಹಳ ಬೇಗ ಕತ್ತರಿಸಿದನು. ಅರಣ್ಯದಲ್ಲಿ ಹಸಿ ದಿರುವ ಸಿಂಹವು ಮೃಗವನ್ನು ಕಬಳಿಸುವಂತೆ–ಅರ್ಜುನನು ಸತ್ಯೇಷುವನ್ನು ಎಲ್ಲ ಯೋಧರೂ ನೋಡುತ್ತಿರುವಂತೆಯೇ ಸಂಹರಿಸಿದನು. ಸತ್ಯೇಷುವನ್ನು ಸಂಹರಿಸಿದನಂತರ ಪಾರ್ಥನು ಸುಶರ್ಮನನ್ನು ಮೂರು ಬಾಣಗಳಿಂದ ಪ್ರಹರಿಸಿ ಸುವರ್ಣದಿಂದ ವಿಭೂಷಿತನಾಗಿದ್ದ ಸುಶರ್ಮನ ಕಡೆಯ ಎಲ್ಲ ರಥ ಗಳನ್ನೂ ಧ್ವಂಸಮಾಡಿದನು. ಅನಂತರ ಪಾರ್ಥನು ಬಹಳ ಕಾಲದಿಂದ ಸಂಚಯಿಸಿದ್ದ ತೀಕ್ಷ್ಣವಾದ ಕ್ರೋಧವಿಷವನ್ನು ಪ್ರಸ್ಥಲಾಧಿಪತಿಯಾದ ಸುಶರ್ಮನ ಮೇಲೆ ಕಕ್ಕುತ್ತಾ ಅವನ ಬಳಿಗೆ ಧಾವಿಸಿದನು. ಅರ್ಜುನನು ನೂರು ಬಾಣಗಳಿಂದ ಸುಶರ್ಮನನ್ನು ಪ್ರಹರಿಸಿ ಧನುಷ್ಮಂತನಾದ ಸುಶರ್ಮನ ಕುದುರೆಗಳನ್ನೂ ಬಾಣಗಳಿಂದ ಆಚ್ಛಾದಿಸಿ ಗಾಯಗೊಳಿಸಿದನು. ಬಳಿಕ ಅರ್ಜುನನು ನಗುತ್ತಿರುವನೋ ಎಂಬಂತೆ ಯಮದಂಡಸದೃಶವಾದ ಬಾಣ ವನ್ನು ತೆಗೆದುಕೊಂಡು ಸುಶರ್ಮನನ್ನು ಅನುಲಕ್ಷಿಸಿ ಬಹಳ ಶೀಘ್ರವಾಗಿ

ಪ್ರಯೋಗಿಸಿದನು. ಧನುಷ್ಮಂತನಾದ ಅರ್ಜುನನಿಂದ ಬಿಡಲ್ಪಟ್ಟ ಕ್ರೋಧ ದೀಪ್ತವಾಗಿದ್ದ ಆ ಬಾಣವು ಸುಶರ್ಮನ ಬಳಿಗೆ ರಭಸದಿಂದ ಹೋಗಿ ಅವನ ಹೃದಯವನ್ನು ಭೇದಿಸಿತು. ಆ ಘೋರಪ್ರಹಾರದಿಂದ ಸುಶರ್ಮನು ಗತ ಪ್ರಾಣನಾಗಿ ಎಲ್ಲ ಪಾಂಡವರನ್ನೂ ಸಂತೋಷಗೊಳಿಸುತ್ತಾ ನಿನ್ನ ಕಡೆಯವ



ರಿಗೆ ದುಃಖವನ್ನುಂಟುಮಾಡುತ್ತಾ ಭೂಮಿಯ ಮೇಲೆ ಬಿದ್ದನು. ಹೀಗೆ ಅರ್ಜುನನು ಯುದ್ಧದಲ್ಲಿ ಸುಶರ್ಮನನ್ನು ಸಂಹರಿಸಿ ಮಹಾರಥರಾದ ಅವನ ನಲವತ್ತೈದು ಮಂದಿ ಮಕ್ಕಳನ್ನೂ ಬಾಣಗಳಿಂದ ಯಮಾಲಯಕ್ಕೆ ಕಳುಹಿಸಿದನು. ಅನಂತರ ಮಹಾರಥನಾದ ಅರ್ಜುನನು ತ್ರಿಗರ್ತರಾಜನ

ಅನುಯಾಯಿಗಳೆಲ್ಲರನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿ ಹತಶೇಷ ವಾಗಿದ್ದ ಕೌರವಸೈನ್ಯವನ್ನು ಆಕ್ರಮಿಸಿದನು.

ಮತ್ತೊಂದು ವಿಭಾಗದಲ್ಲಿ ಕ್ರುದ್ಧನಾದ ಭೀಮಸೇನನು ನಗು-ನಗುತ್ತಲೇ ನಿನ್ನ ಮಗನಾದ ಸುದರ್ಶನನನ್ನು ಬಾಣಗಳಿಂದ ಅದೃಶ್ಯನನ್ನಾಗಿ ಮಾಡಿದನು. ಅನಂತರ ಭೀಮಸೇನನು ಗಹ-ಗಹಿಸಿ ನಗುತ್ತಾ ಸುತೀಕ್ಷ್ಣವಾದ ಕ್ಷುರಪ್ರದಿಂದ ಸುದರ್ಶನನ ಶಿರಸ್ಸನ್ನು ಶರೀರದಿಂದ ಬೇರ್ಪಡಿಸಿ ಕೆಳಕ್ಕೆ ಕೆಡವಿದನು. ಸುದರ್ಶನನು ಹತನಾಗಿ ರಥದಿಂದ ಕೆಳಕ್ಕೆ ಬಿದ್ದನು.

ವೀರನಾದ ಸುದರ್ಶನನು ಹತನಾಗಲಾಗಿ ಅವನು ಅನುಯಾಯಿಗಳು ನಾನಾವಿಧವಾದ ಬಾಣಗಳನ್ನು ಸುರಿಸುತ್ತಾ ಭೀಮನನ್ನು ಎಲ್ಲ ಕಡೆ ಗಳಿಂದಲೂ ಆಕ್ರಮಿಸಿದರು. ಅನಂತರ ಭೀಮಸೇನನು ವಜ್ರಾಯುಧ ಸ್ಪರ್ಶಕ್ಕೆ ಸಮಾನವಾದ ಕಠಿನಸ್ಪರ್ಶವುಳ್ಳ ನಿಶಿತವಾದ ಬಾಣಗಳಿಂದ ನಿನ್ನ ಸೈನ್ಯವನ್ನು ಎಲ್ಲ ಕಡೆಗಳಿಂದಲೂ ಮುಚ್ಚಿದನು. ಕ್ಷಣಮಾತ್ರದಲ್ಲಿ ಭೀಮಸೇನನು ತನ್ನನ್ನು ಆಕ್ರಮಿಸಿದ್ದ ಸೈನಿಕರನ್ನು ಧ್ವಂಸಮಾಡಿದನು. ಸೈನಿಕರೆಲ್ಲರೂ ಹತರಾಗಲಾಗಿ ಮಹಾರಥರಾದ ಸೇನಾಧ್ಯಕ್ಷರು ಭೀಮ ಸೇನನ ಬಳಿಗೆ ಬಂದು ಅವನೊಡನೆ ಯುದ್ಧದಲ್ಲಿ ತೊಡಗಿದರು. ಭೀಮಸೇನನು ಅವರೆಲ್ಲರನ್ನೂ ಘೋರವಾದ ಬಾಣಗಳಿಂದ ಮುಚ್ಚಿದನು. ಅದಕ್ಕೆ ಪ್ರತಿಯಾಗಿ ನಿನ್ನ ಕಡೆಯ ಸೇನಾಧ್ಯಕ್ಷರೂ ಎಲ್ಲ ಕಡೆಗಳಲ್ಲಿಯೂ ಬಾಣ ಗಳನ್ನು ಸುರಿಸುತ್ತಾ ಪಾಂಡವಮಹಾರಥರನ್ನು ಮುಚ್ಚಿದರು.

ಆ ಸಮಯದಲ್ಲಿ ಶತ್ರುಗಳೊಡನೆ ಯುದ್ಧಮಾಡುತ್ತಿದ್ದ ಪಾಂಡವ ರಿಗೂ–ಪಾಂಡವರೊಡನೆ ಯುದ್ಧಮಾಡುತ್ತಿದ್ದ ನಿನ್ನ ಕಡೆಯವರಿಗೂ ದೊಡ್ಡ ವ್ಯಾಕುಲವೇ ಉಂಟಾಯಿತು. ಪರಸ್ಪರವಾಗಿ ಯುದ್ಧದಲ್ಲಿ ತೊಡಗಿದ್ದ ಎರಡೂ ಪಕ್ಷಗಳ ಯೋಧರು ತಮ್ಮ ಬಂಧು-ಬಾಂಧವರು ಹತರಾದುದಕ್ಕಾಗಿ ದುಃಖಿಸುತ್ತಾ ತಾವೂ ಪರಸ್ಪರವಾದ ಪ್ರಹಾರಗಳಿಂದ ಅಸುನೀಗುತ್ತಾ ರಣಾಂಗಣದಲ್ಲಿ ಬೀಳುತ್ತಿದ್ದರು.”

೨೭ನೆಯ ಅಧ್ಯಾಯವು ಮುಗಿಯಿತು.

## ಸಹದೇವನಿಂದ ಶಕುನಿ-ಉಲೂಕರ ಸಂಹಾರ: ಅಳಿದುಳಿದ ಸೈನ್ಯದೊಡನೆ ದುರ್ಯೋಧನನ ಪಲಾಯನ

ಸಂಜಯನು ಯುದ್ಧದ ಕಡೆಯ ಭಾಗವನ್ನು ವಿವರಿಸುತ್ತಾ ಹೇಳುತ್ತಾನೆ:

"ಮಹಾರಾಜ! ಗಜಾಶ್ವ-ಪದಾತಿಗಳ ಕ್ಷಯವನ್ನುಂಟುಮಾಡುತ್ತಿದ್ದ ಆ ಮಹಾಯುದ್ಧವು ನಡೆಯುತ್ತಿರಲಾಗಿ ಸುಬಲನ ಮಗನಾದ ಶಕುನಿಯು ಸಹದೇವನನ್ನು ಆಕ್ರಮಿಸಿದನು. ಪ್ರತಾಪವಂತನಾದ ಸಹದೇವನು ತನ್ನ ಮೇಲೆ ಬೀಳಲು ಬರುತ್ತಿದ್ದ ಶಕುನಿಯ ಮೇಲೆ ಬಹಳ ಬೇಗ ಪತಂಗದ ಹುಳುಗಳೋಪಾದಿಯಲ್ಲಿದ್ದ ಶೀಘ್ರವಾಗಿ ಹೋಗುವ ಬಾಣಗಳ ಸಮೂಹಗಳನ್ನು ಪ್ರಯೋಗಿಸಿದನು. ಶಕುನಿಯ ಮಗನಾದ ಉಲೂಕನು ಭೀಮಸೇನನನ್ನು ಹತ್ತು ಬಾಣಗಳಿಂದ ಪ್ರಹರಿಸಿದನು. ಶಕುನಿಯೂ ಸಹ ಭೀಮಸೇನನನ್ನು ಮೂರು ಬಾಣಗಳಿಂದ ಪ್ರಹರಿಸಿ, ತೊಂಬತ್ತು ಬಾಣಗಳಿಂದ ಸಹದೇವನನ್ನೂ ಮುಚ್ಚಿದನು. ಆ ಶೂರರು ಸಮರಾಂಗಣದಲ್ಲಿ ಪರಸ್ಪರವಾಗಿ, ಸಂಘರ್ಷಿಸುತ್ತಾ ನಿಶಿತವಾದ, ರಣಹದ್ದುಗಳ ರೆಕ್ಕೆಗಳನ್ನು ಹೊಂದಿದ್ದ, ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಕಿವಿಯ ತುದಿಯವರೆಗೂ ಸೆಳೆದು ಬಿಡಲ್ಪಡುತ್ತಿದ್ದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಮೇಘಗಳ ಜಲಧಾರೆಗಳು ಎಲ್ಲ ದಿಕ್ಕುಗಳನ್ನೂ ಮುಚ್ಚುವಂತೆ–ವೀರರ ಧನುಸ್ಸುಗಳಿಂದಲೂ ಮತ್ತು ಭುಜಗಳಿಂದಲೂ ಉತ್ಸೃಷ್ಟವಾದ ಬಾಣಗಳ ಮಳೆಯು ಎಲ್ಲ ದಿಕ್ಕುಗಳನ್ನೂ ಮುಚ್ಚಿತು. ಅನಂತರ ಕ್ರುದ್ಧನಾದ ಸುಮಹಾಬಲನಾದ ಭೀಮಸೇನನೂ ಮತ್ತು ಸಹದೇವನೂ ಶತ್ರುಗಳನ್ನು ಸಂಹಾರಮಾಡುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದರು. ಭೀಮ-ಸಹದೇವರ ನೂರಾರು ಬಾಣಗಳಿಂದ ಮುಚ್ಚಲ್ಪಟ್ಟ ನಿನ್ನ ಸೈನ್ಯವು ಅಂಧಕಾರದಿಂದ ಮುಚ್ಚಲ್ಪಟ್ಟ ಆಕಾಶದಂತೆ ಕಾಣುತ್ತಿದ್ದಿತು. ಬಾಣಗಳಿಂದ ಆಚ್ಛಾ

ದಿತರಾಗಿ ಸತ್ತುಹೋಗಿದ್ದ ಸವಾರರನ್ನು ಎಳೆದುಕೊಂಡು ಹೋಗುತ್ತಿದ್ದ ಹಲವು ಕುದುರೆಗಳಿಂದ ಮಾರ್ಗವು ಅಲ್ಲಲ್ಲಿ ಮುಚ್ಚಿಹೋಗಿದ್ದಿತು. ಸತ್ತುಹೋಗಿದ್ದ ಕುದುರೆಸವಾರರಿಂದ ಕೂಡಿದ್ದ ಕುದುರೆಗಳಿಂದಲೂ, ಕತ್ತರಿಸಲ್ಪಟ್ಟ ಕವಚಗಳಿಂದಲೂ, ಛಿನ್ನ-ಭಿನ್ನವಾಗಿದ್ದ ಪ್ರಾಸಗಳಿಂದಲೂ, ಋಷ್ಟಿ-ಶಕ್ತಿಗಳಿಂದಲೂ, ಖಡ್ಗ-ಪ್ರಾಸ-ಪರಶ್ವಧಗಳಿಂದಲೂ ಆಚ್ಛಾದಿತವಾಗಿದ್ದ ರಣಭೂಮಿಯು ಹೂಗಳಿಂದ ಆಚ್ಛಾದಿತವಾಗಿ ನಾನಾವರ್ಣಗಳಿಂದ ಕೂಡಿರುವುದೋ ಎಂಬಂತಿದ್ದಿತು. ಉಭಯಪಕ್ಷಗಳ ಯೋಧರೂ ಶತ್ರುಸೈನಿಕರೊಡನೆ ಪರಸ್ಪರವಾಗಿ ಸಂಘರ್ಷಿಸುತ್ತಾ ಒಬ್ಬರು ಮತ್ತೊಬ್ಬರನ್ನು ಸಂಹರಿಸುತ್ತಾ ಪರಮಕ್ರುದ್ಧರಾಗಿ ರಣಭೂಮಿಯಲ್ಲಿ ಸಂಚರಿಸುತ್ತಿದ್ದರು. ಕಮಲದ ಕೇಸರಗಳಂತೆ ಕಾಂತಿಯುಕ್ತವಾಗಿದ್ದ, ಕುಂಡಲಗಳಿಂದ ಸಮಲಂಕೃತವಾಗಿದ್ದ ಮುಖಗಳಿಂದ ಆ ರಣಾಂಗಣವು ತುಂಬಿಹೋಗಿದ್ದಿತು. ಮುಖಗಳಲ್ಲಿದ್ದ ಕಣ್ಣುಗಳು ಉಬ್ಬಿಕೊಂಡಿದ್ದುವು. ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದಿದ್ದ ಆನೆಯ ಸೊಂಡಿಲಿನಂತಿರುವ, ಅಂಗದಾಭರಣಯುಕ್ತವಾದ, ಕವಚ ಸಹಿತವಾದ, ಶಕ್ತಿ-ಪ್ರಾಸ-ಪರಶ್ವಧಯುಕ್ತವಾದ ತೋಳುಗಳಿಂದ ರಣಾಂಗಣವು ತುಂಬಿಹೋಗಿದ್ದಿತು. ಛಿನ್ನ-ಭಿನ್ನವಾಗಿ ಮೇಲೆದ್ದು ಕುಣಿಯುತ್ತಿರುವ ಕಬಂಧಗಳಿಂದಲೂ, ಇತರ ವಸ್ತುಗಳಿಂದಲೂ ರಣಾಂಗಣವು ಮುಚ್ಚಿಹೋಗಿದ್ದಿತು. ಮಾಂಸಾಶಿಗಳಾದ ಪ್ರಾಣಿಗಳಿಂದ ವ್ಯಾಪ್ತವಾಗಿದ್ದ ಆ ರಣಭೂಮಿಯು ಬಹಳ ಭಯಂಕರರೂಪವನ್ನು ತಾಳಿದ್ದಿತು. ಆ ಮಹಾ ಸಮರದಲ್ಲಿ ಕೌರವರ ಸೈನ್ಯವು ಸ್ವಲ್ಪವೇ ಉಳಿದಿರಲಾಗಿ ಪಾಂಡವರು ಅಳಿದುಳಿದಿದ್ದ ಆ ಅಲ್ಪಸೈನ್ಯವನ್ನೂ ಅತ್ಯಂತಸಂತೋಷದಿಂದ, ಯಮಾಲಯಕ್ಕೆ ಕಳುಹಿಸುತ್ತಿದ್ದರು. ಆ ಮಧ್ಯದಲ್ಲಿ ಪ್ರತಾಪವಂತನಾದ, ಶೂರನಾದ ಶಕುನಿಯು ಪ್ರಾಸಾಯುಧದಿಂದ ಸಹದೇವನ ತಲೆಯಲ್ಲಿ ಬಲವಾಗಿ ಪ್ರಹರಿಸಿದನು. ವಿಹ್ವಲನಾದ ಸಹದೇವನು ಪೀಠದಿಂದ ಪಕ್ಕಕ್ಕೆ ಸರಿದು ಕುಳಿತನು. ಪ್ರತಾಪವಂತನಾದ ಭೀಮಸೇನನು ಅಂತಹ ಅವಸ್ಥೆಯಲ್ಲಿದ್ದ ಸಹದೇವನನ್ನು ನೋಡಿ ಪರಮಕ್ರುದ್ಧನಾಗಿ ಮುನ್ನುಗ್ಗಿ ಬರುತ್ತಿದ್ದ ಎಲ್ಲ ಸೈನ್ಯಗಳನ್ನೂ ತಡೆದು ನಿಲ್ಲಿಸಿದನು. ನೂರಾರು-ಸಾವಿರಾರು ನಾರಾಚಗಳಿಂದ

ಕೌರವಸೈನ್ಯವನ್ನು ಭೇದಿಸಿಬಿಟ್ಟನು. ಎಲ್ಲ ಸೈನಿಕರನ್ನೂ ಧ್ವಂಸಮಾಡಿ ಭೀಮಸೇನನು ಗಟ್ಟಿಯಾಗಿ ಸಿಂಹನಾದಮಾಡಿದನು.

ಆ ಭಯಂಕರವಾದ ಸಿಂಹಗರ್ಜನೆಯಿಂದ ಭಯಗೊಂಡ ಶಕುನಿಯ ಅನುಯಾಯಿಗಳಾದ ಗಜಾಶ್ವಸೈನಿಕರು ಪಲಾಯನಮಾಡಿದರು. ತನ್ನ ಸೈನ್ಯವು ಭಗ್ನಗೊಂಡು ಓಡಿಹೋಗುತ್ತಿರುವುದನ್ನು ನೋಡಿ ದುರ್ಯೋಧನನು ಅವರೊಡನೆ ಹೇಳಿದನು:

"ಧರ್ಮಜ್ಞಾನಹೀನರೇ! ರಣಾಂಗಣಕ್ಕೆ ಹಿಂದಿರುಗಿಬಂದು ಶತ್ರುಗಳೊಡನೆ ಯುದ್ಧಮಾಡಿರಿ. ಓಡಿಹೋಗುವುದರಿಂದ ಪ್ರಯೋಜನ ವೇನಿದೆ?

**ಇಹ ಕೀರ್ತಿಂ ಸಮಾಧಾಯ ಪ್ರೇತ್ಯ ಲೋಕಾನ್ಸಮಶ್ನುತೇ ।**
**ಪ್ರಾಣಾಞ್ಜಹಾತಿ ಯೋ ಧೀರೋ ಯುದ್ಧೇ**
**ಪೃಷ್ಠಮದರ್ಶಯನ್ ॥೨೨॥**

ಯಾವ ಧೀರನು ಯುದ್ಧದಲ್ಲಿ ಶತ್ರುವಿಗೆ ಬೆನ್ನುತೋರಿಸದೇ ಯುದ್ಧ ಮಾಡುತ್ತಾ, ಪ್ರಾಣಬಿಡುತ್ತಾನೆಯೋ–ಅವನು ಈ ಲೋಕದಲ್ಲಿ ತನ್ನ ಕೀರ್ತಿಯನ್ನು ಪ್ರತಿಷ್ಠಾಪಿಸಿ ಅವಸಾನಾನಂತರ ಉತ್ತಮವಾದ ಪುಣ್ಯ ಲೋಕಗಳನ್ನು ಹೊಂದಿ ಅಲ್ಲಿಯ ಸುಖೋಪಭೋಗಗಳನ್ನೂ ಅನುಭವಿಸುತ್ತಾನೆ."

ಮಹಾರಾಜ! ದುರ್ಯೋಧನನಿಂದ ಹೀಗೆ ಹೇಳಲ್ಪಟ್ಟ ಶಕುನಿಯ ಅನುಯಾಯಿಗಳಾದ ಗಜಾಶ್ವಯೋಧರು ಮೃತ್ಯುವನ್ನೇ ಹಿಂದಿರುಗುವ ಸ್ಥಾನವನ್ನಾಗಿ ಮಾಡಿಕೊಂಡು ಪಾಂಡವರನ್ನು ಪುನಃ ಆಕ್ರಮಿಸಿದರು. ನಿನ್ನ ಸೈನಿಕರು ಶತ್ರುಗಳ ಕಡೆಗೆ ಓಡುತ್ತಿದ್ದಾಗ ಅತಿದಾರುಣವಾದ ಕೋಲಾಹಲವನ್ನು ಮಾಡುತ್ತಿದ್ದರು. ಅಲ್ಲೋಲ-ಕಲ್ಲೋಲಗೊಂಡ ಸಮುದ್ರಪ್ರಾಯರಾಗಿದ್ದ ಅವರು ಸರ್ವತ್ರ ಕ್ಷುಭಿತರಾಗಿದ್ದರು. ಅಂತಹ ಶಕುನಿಯ ಸೈನಿಕರು ಪುನಃ ತಮ್ಮೆದುರಾಗಿ ಬಂದುದನ್ನು ನೋಡಿ ವಿಜಯೋದ್ಯತರಾದ ಪಾಂಡವರು ಅವರನ್ನು ಎದುರಿಸಿದರು. ಆ ವೇಳೆಗೆ ಚೇತರಿಸಿಕೊಂಡಿದ್ದ

ಸಹದೇವನೂ ಶಕುನಿಯನ್ನು ಹತ್ತು ಬಾಣಗಳಿಂದ ಪ್ರಹರಿಸಿ ಅವನ ಕುದುರೆಗಳನ್ನೂ ಮೂರು ಬಾಣಗಳಿಂದ ಗಾಯಗೊಳಿಸಿ ನಗು-ನಗುತ್ತಲೇ ಶಕುನಿಯ ಧನುಸ್ಸನ್ನೂ ಅನೇಕಬಾಣಗಳಿಂದ ಕತ್ತರಿಸಿದನು. ಯುದ್ಧದುರ್ಮದನಾದ ಶಕುನಿಯು ಮತ್ತೊಂದು ಧನುಸ್ಸನ್ನೆತ್ತಿಕೊಂಡು ನಕುಲನನ್ನು ಅರುವತ್ತು ಬಾಣಗಳಿಂದಲೂ, ಭೀಮಸೇನನನ್ನು ಏಳು ಬಾಣಗಳಿಂದಲೂ ಪ್ರಹರಿಸಿದನು. ಉಲೂಕನೂ ಭೀಮಸೇನನನ್ನು ಏಳು ಬಾಣಗಳಿಂದ ಪ್ರಹರಿಸಿದನು. ತಂದೆಯಾದ ಶಕುನಿಯನ್ನು ರಕ್ಷಿಸುವ ಇಚ್ಛೆಯಿಂದ ಉಲೂಕನು ಸಹದೇವನನ್ನು ಎಪ್ಪತ್ತು ಬಾಣಗಳಿಂದ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಭೀಮಸೇನನು ಉಲೂಕನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಶಕುನಿಯನ್ನು ಅರುವತ್ತುನಾಲ್ಕು ಬಾಣಗಳಿಂದ ಪ್ರಹರಿಸಿ ಅವನ ಪಾರ್ಶ್ವರಕ್ಷಕರನ್ನು ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಭೀಮಪ್ರಮುಕ್ತವಾದ, ಎಣ್ಣೆಯಿಂದ ಹದಮಾಡಲ್ಪಟ್ಟಿದ್ದ ನಾರಾಚಗಳಿಂದ ಪ್ರಹೃತರಾದ ಶಕುನಿಯ ಸೈನಿಕರು ಪರಮಕ್ರುದ್ಧರಾಗಿ–ವಿದ್ಯುತ್ತಿನಿಂದ ಕೂಡಿದ ಮೇಘಗಳು ಪರ್ವತವನ್ನು ನೀರಿನ ಧಾರೆಯಿಂದ ಮುಚ್ಚುವಂತೆ ಸಹದೇವನನ್ನು ಶರವೃಷ್ಟಿಗಳಿಂದ ಮುಚ್ಚಿದರು. ಅನಂತರ ಪ್ರತಾಪವಂತನಾದ, ಶೂರನಾದ ಸಹದೇವನು ತನ್ನ ಮೇಲೆ ಆಕ್ರಮಣನಡೆಸುತ್ತಿದ್ದ ಉಲೂಕನ ತಲೆಯನ್ನು ಭಲ್ಲದಿಂದ ಕತ್ತರಿಸಿದನು. ಸಹದೇವನಿಂದ ಹತನಾದ ಉಲೂಕನು ಪಾಂಡವರಿಗೆ ಆನಂದವನ್ನುಂಟುಮಾಡುತ್ತಾ ರಥದಿಂದ ಭೂಮಿಗೆ ಬಿದ್ದನು. ಆ ಸಮಯದಲ್ಲಿ ಉಲೂಕನ ಅಂಗಾಂಗಗಳು ರಕ್ತದಿಂದ ತೋಯ್ದುಹೋಗಿದ್ದುವು. ಶಕುನಿಯು ತನ್ನ ಮಗನು ಹತನಾದುದನ್ನು ನೋಡಿ ಕಣ್ಣೀರಿನಿಂದ ಗದ್ಗದಕಂಠನಾಗಿ ವಿದುರನ ಮಾತನ್ನು ಸ್ಮರಿಸಿ ನಿಟ್ಟುಸಿರುಬಿಡುತ್ತಾ ಕಂಬನಿದುಂಬಿದ ಕಣ್ಣುಗಳುಳ್ಳವನಾಗಿ ಸ್ವಲ್ಪಹೊತ್ತು ಚಿಂತಾಮಗ್ನನಾಗಿ ಕುಳಿತಿದ್ದನು. ಮರುಕ್ಷಣದಲ್ಲಿಯೇ ಪುತ್ರನ ಮರಣದಿಂದ ಪರಮಕ್ರುದ್ಧನಾಗಿದ್ದ ಶಕುನಿಯು ಸಹದೇವನ ಬಳಿಗೆ ಹೋಗಿ ಅವನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಪ್ರತಾಪವಂತನಾದ ಸಹದೇವನು ಶಕುನಿಯು ಪ್ರಯೋಗಿಸಿದ ಆ ಮೂರು ಬಾಣಗಳನ್ನೂ ಬಾಣಗಳ ಸಮೂಹಗಳ ಮೂಲಕವಾಗಿ

ನಿರಸನಗೊಳಿಸಿ ಶಕುನಿಯ ಧನುಸ್ಸನ್ನು ಕತ್ತರಿಸಿದನು. ಧನುಸ್ಸು ಕತ್ತರಿಸಿಹೋದನಂತರ ಸುಬಲನ ಮಗನಾದ ಶಕುನಿಯು ವಿಶಾಲವಾದ ಕತ್ತಿಯನ್ನೆತ್ತಿಕೊಂಡು ಸಹದೇವನ ಮೇಲೆ ರಭಸದಿಂದ ಬೀಸಿದನು.

ಘೋರರೂಪವಾದ ಶಕುನಿಯ ಖಡ್ಗವು ರಭಸದಿಂದ ತನ್ನ ಕಡೆಗೆ ಬರುತ್ತಿರಲಾಗಿ ಸಹದೇವನು ನಗುತ್ತಲೇ ಅದನ್ನು ಎರಡು ಭಾಗವಾಗಿ ಕತ್ತರಿಸಿದನು. ತಾನೆಸೆದ ಕತ್ತಿಯು ಸಹದೇವನಿಂದ ಕತ್ತರಿಸಲ್ಪಟ್ಟುದನ್ನು ನೋಡಿ ಶಕುನಿಯು ದೊಡ್ಡದಾದ ಗದೆಯನ್ನೆತ್ತಿಕೊಂಡು ರಭಸದಿಂದ ಸಹದೇವನ ಮೇಲೆ ಪ್ರಯೋಗಿಸಿದನು. ಅದೂ ಸಹ ನಿಷ್ಫಲವಾಗಿ ಕೆಳಕ್ಕೆ ಬಿದ್ದುಹೋಯಿತು. ಅನಂತರ ಸಂಕ್ರುದ್ಧನಾದ ಶಕುನಿಯು, ಮೇಲೆದ್ದು ಬಂದ ಕಾಳರಾತ್ರಿಯಂತೆಯೇ ಇದ್ದ, ಮಹಾಘೋರವಾಗಿದ್ದ ಶಕ್ತ್ಯಾಯುಧವನ್ನು ಸಹದೇವನ ಮೇಲೆ ಪ್ರಯೋಗಿಸಿದನು. ಬಹಳ ಶೀಘ್ರವಾಗಿ ತನ್ನ ಕಡೆಗೆ ಬರುತ್ತಿದ್ದ ಶಕ್ತ್ಯಾಯುಧವನ್ನು ಸುವರ್ಣಭೂಷಿತವಾದ ಬಾಣಗಳಿಂದ ಸಹದೇವನು ನಗು-ನಗುತ್ತಲೇ ಮೂರು ಭಾಗಗಳಾಗಿ ಕತ್ತರಿಸಿದನು. ಪ್ರದೀಪ್ತವಾದ ಮಿಂಚು ಆಕಾಶದಿಂದ ಕೆಳಗೆ ಬೀಳುವಂತೆ–ಸುವರ್ಣಭೂಷಿತವಾಗಿದ್ದ ಶಕ್ತ್ಯಾಯುಧವು ಮೂರು ವಿಭಾಗಗಳಾಗಿ ಕೆಳಕ್ಕೆ ಬಿದ್ದಿತು. ಶಕುನಿಯು ಪ್ರಯೋಗಿಸಿದ ಶಕ್ತಿಯೂ ವಿನಾಶವಾದುದನ್ನೂ ಮತ್ತು ಮುಂದೇನು ಮಾಡಬೇಕೆಂಬುದೇ ತಿಳಿಯದೇ ಭಯದಿಂದ ಪೀಡಿತನಾಗಿದ್ದ ಶಕುನಿಯನ್ನೂ ನೋಡಿ ನಿನ್ನ ಎಲ್ಲ ಸೈನಿಕರೂ ಭಯಗೊಂಡವರಾಗಿ ಪಲಾಯನಮಾಡಿದರು. ಅವರ ಜೊತೆಯಲ್ಲಿಯೇ ಶಕುನಿಯೂ ಪಲಾಯನಮಾಡಿದನು. ವಿಜಯೋಲ್ಲಸಿತರಾದ ಪಾಂಡವರು ಜಯಕಾರಗಳನ್ನೂ ಸಿಂಹನಾದಗಳನ್ನೂ ಗಟ್ಟಿಯಾಗಿ ಮಾಡಿದರು. ಆ ಸಮಯದಲ್ಲಿ ಪ್ರಾಯಶಃ ದುರ್ಯೋಧನನ ಎಲ್ಲ ಸೈನಿಕರೂ ಯುದ್ಧದಿಂದ ವಿಮುಖರಾಗಿದ್ದರು. ದುರ್ಯೋಧನನ ಸೈನಿಕರು ಯುದ್ಧದಲ್ಲಿ ಔದಾಸೀನ್ಯವನ್ನು ಹೊಂದಿ ಯುದ್ಧದಿಂದ ಹಿಮ್ಮೆಟ್ಟುತ್ತಿದ್ದುದನ್ನು ಕಂಡು ಪ್ರತಾಪವಂತನಾದ ಸಹದೇವನು ಅನೇಕಸಹಸ್ರಬಾಣಗಳಿಂದ ಅವರನ್ನು ರಣಭೂಮಿಯಿಂದ

ಹೊರಕ್ಕೆ ಹೋಗದಂತೆ ತಡೆದನು. ಸುಪುಷ್ಟವಾದ ಗಾಂಧಾರದೇಶದ ಅಶ್ವ ದಳಗಳಿಂದ ರಕ್ಷಿತನಾಗಿದ್ದ, ಜಯಗಳಿಸಬೇಕೆಂದು ದೃಢಸಂಕಲ್ಪಮಾಡಿ ರಣಾಂಗಣದಲ್ಲಿ ಹೋಗುತ್ತಿದ್ದ ಶಕುನಿಯನ್ನು ಸಹದೇವನು ಆಕ್ರಮಿಸಿದನು. ಕೌರವರ ಪಕ್ಷದಲ್ಲಿ ಉಳಿದಿರುವ ಶಕುನಿಯು ತನ್ನ ಭಾಗಕ್ಕೆ ಸೇರಿದವನೆಂಬು ದನ್ನು ಸಹದೇವನು ಸ್ಮರಿಸಿಕೊಂಡು ಸುವರ್ಣಮಯವಾದ ರಥದಲ್ಲಿ ಕುಳಿತು ಶಕುನಿಯನ್ನೇ ಆಕ್ರಮಿಸಿದನು. ಧನುಸ್ಸಿಗೆ ಶಿಂಜಿನಿಯನ್ನು ಬಲವಾಗಿ ಸೆಳೆದುಕಟ್ಟಿ ಟೇಂಕರಿಸುತ್ತಾ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ–ಮಹಾಗಜವನ್ನು ಅಂಕುಶಗಳಿಂದ ತಿವಿಯುವಂತೆ–ಕ್ರುದ್ಧನಾಗಿದ್ದ ಸಹದೇವನು ಸೌಬಲನನ್ನು ಆಕ್ರಮಿಸಿ ಪ್ರಹರಿಸಿದನು. ಮೇಧಾವಿಯಾದ ಸಹದೇವನು ಶಕುನಿಯನ್ನು ಆಕ್ರಮಿಸಿ ಹಿಂದಿನ ವಿಷಯಗಳನ್ನು ಸ್ಮರಣೆಗೆ ತರುತ್ತಾ ಅವನೊಡನೆ ಈ ಮಾತುಗಳನ್ನು ಹೇಳಿದನು:

**ಕ್ಷತ್ರಧರ್ಮೇ ಸ್ಥಿರೋ ಭೂತ್ವಾ ಯುಧ್ಯಸ್ವ ಪುರುಷೋ ಭವ ।**
**ಯತ್ತದಾ ಹೃಷ್ಯಸೇ ಮೂಢ ಗ್ಲಹನ್ನಕ್ಷೈಃ ಸಭಾತಲೇ ।**
**ಫಲಮದ್ಯ ಪ್ರಪಶ್ಯಸ್ವ ಕರ್ಮಣಸ್ತಸ್ಯ ದುರ್ಮತೇ ॥೫೧॥**

“ಸೌಬಲನೇ! ಕ್ಷತ್ರಧರ್ಮದಲ್ಲಿ ಸ್ಥಿರನಾಗಿದ್ದುಕೊಂಡು ಯುದ್ಧಮಾಡು. ವೀರಪುರುಷನಾಗು. ಮೂಢನೇ! ಸಭಾಮಧ್ಯದಲ್ಲಿ ಪಗಡೆ ಕಾಯಿಗಳು ಮತ್ತು ದಾಳಗಳಿಂದ ಜೂಜಾಡುತ್ತಿದ್ದಾಗ ಕ್ಷಣ-ಕ್ಷಣಕ್ಕೂ ಆನಂದಿಸುತ್ತಿದ್ದೆಯಲ್ಲವೇ? ದುರ್ಮತಿಯೇ! ಆ ಪಾಪಕರ್ಮದ ಫಲವೇನೆಂಬುದನ್ನು ಈಗ ಚೆನ್ನಾಗಿ ನೋಡು.

**ನಿಹತಾಸ್ತೇ ದುರಾತ್ಮಾನೋ ಯೇಽಸ್ಮಾನವಹಸನ್ಪುರಾ ।**
**ದುರ್ಯೋಧನಃ ಕುಲಾಙ್ಗಾರಃ ಶಿಷ್ಟಸ್ತ್ವಂ ಚಾಸ್ಯ ಮಾತುಲಃ ॥೫೨॥**

**ಅದ್ಯ ತೇ ನಿಹನಿಷ್ಯಾಮಿ ಕ್ಷುರೇಣೋನ್ಮಥಿತಂ ಶಿರಃ ।**
**ವೃಕ್ಷಾತ್ಫಲಮಿವಾವಿದ್ಧಂ ಲಗುಡೇನ ಪ್ರಮಾಥಿನಾ ॥೫೩॥**

ನಮ್ಮನ್ನು ನೋಡಿ ಯಾರು ಅಪಹಾಸ್ಯಮಾಡುತ್ತಿದ್ದರೋ–ಅವ

ರೆಲ್ಲರೂ ಅವಸಾನಹೊಂದಿದರು. ಕುಲಕ್ಕೇ ಅಗ್ನಿಪ್ರಾಯನಾದ (ಹುಟ್ಟಿದ ಕುಲಕ್ಕೆ ಬೆಂಕಿಯನ್ನು ಹಚ್ಚುವ ಸ್ವಭಾವದವನಾದ) ದುರ್ಯೋಧನನೂ ಮತ್ತು ಅವನ ಸೋದರಮಾವನಾದ ನೀನೂ ಉಳಿದುಕೊಂಡಿರುವಿರಿ. ಬೀಸಿ ಎಸೆದ ದೊಣ್ಣೆಯಿಂದ ಫಲವನ್ನು ವೃಕ್ಷದಿಂದ ಕೆಳಕ್ಕೆ ಕೆಡಹುವಂತೆ–ಕ್ಷುರದಿಂದ ನಿನ್ನ ತಲೆಯನ್ನು ಕತ್ತರಿಸಿ ಕೆಡುಹಿ ಇಂದು ನಿನ್ನನ್ನು ಸಂಹಾರಮಾಡುತ್ತೇನೆ."

ಮಹಾರಾಜ! ಮಹಾಬಲನಾದ, ರಣಶಾರ್ದೂಲನಾದ ಸಹದೇವನು ಪರಮಕ್ರುದ್ಧನಾಗಿ ಬಹಳ ಬೇಗ ಶಕುನಿಯನ್ನು ಆಕ್ರಮಿಸಿದನು. ಯೋಧ ಶ್ರೇಷ್ಠನಾದ ಸುದುರ್ಧರ್ಷನಾದ ಸಹದೇವನು ಶಕುನಿಯ ಬಳಿಗೆ ಹೋಗಿ ಕ್ರೋಧದಿಂದ ಪ್ರಜ್ವಲಿಸುತ್ತಾ ಬಲಪೂರ್ವಕವಾಗಿ ಬಿಲ್ಲನ್ನು ಸೆಳೆದು ಶಕುನಿ ಯನ್ನು ಹತ್ತು ಬಾಣಗಳಿಂದ ಗಾಯಗೊಳಿಸಿದನು. ಬಳಿಕ ನಾಲ್ಕು ಬಾಣ ಗಳಿಂದ ಅವನ ನಾಲ್ಕು ಕುದುರೆಗಳನ್ನೂ ಗಾಯಗೊಳಿಸಿ ಛತ್ರ-ಧ್ವಜ-ಧನುಸ್ಸುಗಳನ್ನೂ ಕತ್ತರಿಸಿ ಸಿಂಹನಾದವನ್ನು ಮಾಡಿದನು. ಸಹದೇವನ ಬಾಣಗಳಿಂದ ಧ್ವಜ-ಛತ್ರ-ಧನುಸ್ಸುಗಳನ್ನು ಕಳೆದುಕೊಂಡ ಶಕುನಿಯು ಸಹದೇವನು ಪ್ರಯೋಗಿಸಿದ ಅನೇಕ ಬಾಣಗಳಿಂದ ಎಲ್ಲ ಮರ್ಮಸ್ಥಳ ಗಳಲ್ಲಿಯೂ ಪೀಡಿತನಾದನು. ಪುನಃ ಪ್ರತಾಪವಂತನಾದ ಸಹದೇವನು ಶಕುನಿಯ ಮೇಲೆ ದುರಾಸದವಾದ ಬಾಣಗಳ ಮಳೆಗರೆದನು. ಅದಕ್ಕೆ ಪ್ರತಿಯಾಗಿ ಕ್ರುದ್ಧನಾದ ಶಕುನಿಯು ಸುವರ್ಣಭೂಷಿತವಾದ ಪ್ರಾಸದಿಂದ ಸಹದೇವನನ್ನು ಸಂಹರಿಸುವ ಇಚ್ಛೆಯಿಂದ ಏಕಾಕಿಯಾಗಿ ಸಹದೇವನ ಮೇಲೆ ಬಿದ್ದನು. ಮಾದ್ರಿಯ ಮಗನಾದ ಸಹದೇವನು ಮೇಲೆತ್ತಿದ್ದ ಪ್ರಾಸಾ ಯುಧವನ್ನೂ–ಪ್ರಾಸಾಯುಧಪ್ರಹಾರಕ್ಕಾಗಿ ಎತ್ತಿದ್ದ ದುಂಡಾದ ಶಕುನಿಯ ಎರಡು ಭುಜಗಳನ್ನೂ ಮೂರು ಭಲ್ಲಗಳಿಂದ ಒಂದೇ ಬಾರಿಗೆ ಕತ್ತರಿಸಿದನು ಮತ್ತು ಒಡನೆಯೇ ಗಟ್ಟಿಯಾಗಿ ಸಿಂಹನಾದವನ್ನೂ ಮಾಡಿದನು. ಅನಂತರ ಶೀಘ್ರವಾಗಿ ಕೆಲಸಮಾಡಿ ಮುಗಿಸುವ ಸಹದೇವನು ಸುಪ್ರಮುಕ್ತವಾದ, ಸುವರ್ಣಮಯವಾದ ಮೂಲಭಾಗವನ್ನು ಹೊಂದಿದ್ದ, ದೃಢವಾಗಿದ್ದ, ಲೋಹಮಯವಾಗಿದ್ದ, ಸಕಲವಿಧವಾದ ಆವರಣಗಳನ್ನೂ ಅತಿಕ್ರಮಿಸಿ ಹೋಗಲು ಸಮರ್ಥವಾದ ಭಲ್ಲದಿಂದ ಶಕುನಿಯ ಶಿರಸ್ಸನ್ನು ಶರೀರದಿಂದ

ಕೆಳಕ್ಕೆ ಕೆಡುಹಿದನು. ಸುವರ್ಣಭೂಷಿತವಾದ, ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಸಹದೇವನಿಂದ ಸುಪ್ರಮುಕ್ತವಾದ ಬಾಣದಿಂದ ಉತ್ತಮಾಂಗವನ್ನು ಕಳೆದುಕೊಂಡ ಸೌಬಲನು ಭೂಮಿಯಲ್ಲಿ ಬಿದ್ದನು. ಕುಪಿತನಾದ ಸಹದೇವನು ಮಸೆಗಲ್ಲಿನಿಂದ ನಿಶಿತವಾಗಿ ಮಾಡ



ಲ್ಪಟ್ಟಿದ್ದ, ಸುವರ್ಣದ ಮೂಲಭಾಗವನ್ನು ಹೊಂದಿದ್ದ, ವೇಗದಿಂದ ಕೂಡಿದ್ದ ಬಾಣದಿಂದ ಕೌರವರ ಅನ್ಯಾಯಕ್ಕೆ ಮೂಲಕಾರಣನಾದ ಶಕುನಿಯ ತಲೆಯನ್ನು ಈ ರೀತಿಯಲ್ಲಿ ಕತ್ತರಿಸಿ ಕೆಳಕ್ಕೆ ಕೆಡುಹಿದನು. ವೀರನಾದ ಸಹದೇವನು ದುಂಡು-ದುಂಡಾಗಿದ್ದ ಶಕುನಿಯ ಭುಜಗಳನ್ನೂ ಕತ್ತರಿಸಿದನು. ಅನಂತರ ರಕ್ತದಿಂದ ತೋಯ್ದುಹೋಗಿದ್ದ ಪಾರ್ಥಿವನಾದ ಶಕುನಿಯ

ಘೋರವಾಗಿದ್ದ ಕಬಂಧವು (ಮುಂಡವು) ತರ-ತರನೆ ನಡುಗುತ್ತಾ (ಒದ್ದಾಡುತ್ತಾ) ಶ್ರೇಷ್ಠವಾದ ರಥದಿಂದ ಕೆಳಕ್ಕೆ ಬಿದ್ದಿತು. ಉತ್ತಮಾಂಗದಿಂದ ರಹಿತನಾಗಿದ್ದ ರಕ್ತದಿಂದ ತೋಯ್ದುಹೋದ ಅವಯವವುಳ್ಳವನಾಗಿದ್ದ, ಭೂಮಿಯಲ್ಲಿ ಮಲಗಿದ್ದ ಸುಬಲನ ಮಗನಾದ ಶಕುನಿಯನ್ನು ನೋಡಿ ನಿನ್ನ ಕಡೆಯ ಯೋಧರು ಭಯದಿಂದ ಸತ್ತ್ವವನ್ನು ಕಳೆದುಕೊಂಡು ಶಸ್ತ್ರಪಾಣಿಗಳಾಗಿಯೇ ದಿಕ್ಕು-ದಿಕ್ಕುಗಳಿಗೂ ಓಡಿಹೋದರು. ಆ ಸಮಯದಲ್ಲಿ ಕೌರವಯೋಧರ ಮುಖಗಳು ಒಣಗಿಹೋಗಿದ್ದುವು. ಎಲ್ಲರೂ ಬುದ್ಧಿಗೆಟ್ಟವರಾಗಿದ್ದರು. ಅರ್ಜುನನ ಗಾಂಡೀವಧನುಸ್ಸಿನ ಟೇಂಕಾರವನ್ನು ಕೇಳಿ ಅವರೆಲ್ಲರೂ ಮೃತಪ್ರಾಯರೇ ಆಗಿದ್ದರು. ಭಯದಿಂದ ಪೀಡಿತರಾಗಿದ್ದರು. ಅವರ ರಥಾಶ್ವ-ಗಜಸೈನ್ಯಗಳೆಲ್ಲವೂ ಭಗ್ನವಾಗಿಹೋಗಿದ್ದುವು. ನಿನ್ನ ಮಗ ದುರ್ಯೋಧನನೊಡನೆ ಪದಾತಿಸೈನಿಕರೆಲ್ಲರೂ ರಣರಂಗದಿಂದ ಪಲಾಯನಮಾಡಿದರು. ಶಕುನಿಯನ್ನು ರಥದಿಂದ ಕೆಳಕ್ಕೆ ಕೆಡುಹಿ ಸಂತೋಷಭರಿತರಾದ, ಶ್ರೀಕೃಷ್ಣಸಹಿತರಾದ ಪಾಂಡುವಿನ ಮಕ್ಕಳು ಅತಿಹೃಷ್ಟರಾಗಿ ರಣರಂಗದಲ್ಲಿ ಸೈನಿಕರನ್ನು ಸಂತೋಷಗೊಳಿಸುತ್ತಾ ಶಂಖಗಳನ್ನೂದಿದರು. ರಣರಂಗದಲ್ಲಿ ಸಹದೇವನನ್ನು ನೋಡಿ ಪಾಂಡವ ಯೋಧರೆಲ್ಲರೂ ಅವನನ್ನು ಪ್ರಶಂಸೆಮಾಡುತ್ತಾ ಹೇಳಿದರು: "ವೀರ! ಸಹದೇವ! ಅದೃಷ್ಟದ ಕಾರಣದಿಂದ ನೀನಿಂದು ಪುತ್ರಸಹಿತನಾದ, ವಂಚಕನಾದ, ದುರಾತ್ಮನಾದ ಶಕುನಿಯನ್ನು ಸಂಹಾರಮಾಡಿರುವೆ. ನಿನಗೆ ಮಂಗಳವಾಗಲಿ."

೨೮ನೆಯ ಅಧ್ಯಾಯವು ಮುಗಿಯಿತು.

೨೯ನೆಯ ಅಧ್ಯಾಯ ಹ್ರದಪ್ರವೇಶ (ಉಪಪರ್ವ)

## ಅಳಿದುಳಿದಿದ್ದ ಎಲ್ಲ ಕೌರವಸೈನಿಕರ ಸಂಹಾರ: ಸಂಜಯನನ್ನು ಬಂಧನದಿಂದ ವಿಮುಕ್ತಿಗೊಳಿಸಿದುದು: ದುರ್ಯೋಧನನ ಸರೋವರಪ್ರವೇಶ: ಯುಯುತ್ಸುವು ರಾಜಮಹಿಷಿಯರೊಡನೆ ಹಸ್ತಿನಾಪುರಕ್ಕೆ ಪ್ರಯಾಣಮಾಡಿದುದು

ಸಂಜಯನು ಶಕುನಿಯ ಸಂಹಾರವಾದನಂತರದ ವಿಷಯವನ್ನು ಧೃತರಾಷ್ಟ್ರನಿಗೆ ತಿಳಿಸುತ್ತಾನೆ:

"ಮಹಾರಾಜ! ಶಕುನಿಯು ಹತನಾದನಂತರ ಅವನ ಅನುಯಾಯಿಗಳು ಕ್ರೋಧವಶರಾಗಿ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡಲು ನಿಶ್ಚಯಿಸಿ ಪುನಃ ಪಾಂಡವರನ್ನು ಆಕ್ರಮಿಸಿದರು. ಸಹದೇವನ ವಿಜಯವನ್ನು ದೃಢಪಡಿಸುವ ಸಲುವಾಗಿ ಅರ್ಜುನನು ಶಕುನಿಯ ಸೈನಿಕರನ್ನು ಎದುರಿಸಿ ನಿಂತನು. ಕೋಪಗೊಂಡ ವಿಷಸರ್ಪದಂತೆಯೇ ಕಾಣುತ್ತಿದ್ದ ಭೀಮಸೇನನೂ ಅವನ ಜೊತೆಯಲ್ಲಿಯೇ ಇದ್ದನು. ಸಹದೇವನನ್ನು ಸಂಹರಿಸಲಿಚ್ಛಿಸಿ ಶಕ್ತಿ, ಋಷ್ಟಿ, ಪ್ರಾಸಗಳನ್ನು ಹಿಡಿದು ಬಂದಿದ್ದ ಶಕುನಿಯ ಸೈನಿಕರ ಸಂಕಲ್ಪವನ್ನು ಗಾಂಡೀವಧನ್ವನಾದ ಅರ್ಜುನನು ನಿಷ್ಫಲಗೊಳಿಸಿದನು. ತಮ್ಮನ್ನು ಆಕ್ರಮಿಸಲು ಅವಸರದಿಂದ ನುಗ್ಗಿಬರುತ್ತಿದ್ದ ಯೋಧರ, ಆಯುಧಗಳಿಂದ ಯುಕ್ತವಾಗಿದ್ದ ಬಾಹುಗಳನ್ನು ಅರ್ಜುನನು ಭಲ್ಲಗಳಿಂದ ಕತ್ತರಿಸಿದನು. ಅಂತೆಯೇ ಅವರ ಶಿರಸ್ಸುಗಳನ್ನೂ ಮತ್ತು ಅವರು ಹತ್ತಿದ್ದ ಕುದುರೆಗಳನ್ನೂ ಸಂಹರಿಸಿದನು. ರಣಾಂಗಣದಲ್ಲಿ ಸಂಚರಿಸುತ್ತಿದ್ದ ಲೋಕವೀರನಾದ ಸವ್ಯಸಾಚಿಯಿಂದ ಪ್ರಹೃತವಾದ ಆ ಕುದುರೆಗಳು ಪ್ರಾಣಗಳನ್ನು ತೊರೆದು ಭೂಮಿಯಲ್ಲಿ ಬೀಳುತ್ತಿದ್ದುವು. ಅನಂತರ ದುರ್ಯೋಧನನು ತನ್ನ ಸೈನ್ಯವು ಸಂಪೂರ್ಣವಾಗಿ ವಿನಾಶವಾಗುತ್ತಿರುವುದನ್ನು ನೋಡಿ ಕ್ರುದ್ಧನಾಗಿ ಹತಶೇಷರಾಗಿದ್ದ ಗಜಸೈನಿಕರನ್ನೂ, ಅಶ್ವಸೈನಿಕರನ್ನೂ, ರಥಸೈನಿಕರನ್ನೂ, ಪದಾತಿಸೈನಿಕರನ್ನೂ ಎಲ್ಲ ಕಡೆಗಳಿಂದಲೂ ಕರೆಯಿಸಿ ಅವರೊಡನೆ ಈ ಮಾತುಗಳನ್ನು ಹೇಳಿದನು:

ಸಮಾಸಾದ್ಯ ರಣೇ ಸರ್ವಾನ್ಪಾಣ್ಡವಾನ್ಸಸುಹೃದ್ಗಣಾನ್ ।
ಪಾಞ್ಚಾಲ್ಯಂ ಚಾಪಿ ಸಬಲಂ ಹತ್ವಾ ಶೀಘ್ರಂ ನ್ಯವರ್ತತ ॥೮॥

"ನೀವೀಗಲೇ ರಣಾಂಗಣಕ್ಕೆ ಹೋಗಿ ಸುಹೃದರಿಂದ ಕೂಡಿರುವ ಪಾಂಡವರನ್ನೂ, ಸೈನಿಕರಿಂದ ಕೂಡಿರುವ ಧೃಷ್ಟದ್ಯುಮ್ನನನ್ನೂ ಎದುರಿಸಿ ಸಂಹರಿಸಿ ಶೀಘ್ರವಾಗಿ ಹಿಂದಿರುಗಿರಿ."

ಮಹಾರಾಜ! ಅಳಿದುಳಿದಿದ್ದ ಯುದ್ಧದುರ್ಮದರಾದ ಆ ರಥ-ಗಜಾಶ್ವ-ಪದಾತಿಸೈನಿಕರು ನಿನ್ನ ಮಗನ ಆಜ್ಞೆಯನ್ನು ಶಿರಸಾವಹಿಸಿ ಅವನ ಆಜ್ಞೆಯಂತೆಯೇ ರಣರಂಗದಲ್ಲಿ ಪಾರ್ಥರನ್ನು ಪುನಃ ಆಕ್ರಮಿಸಿದರು.

ಪಾಂಡವರು ತಮ್ಮ ಮೇಲೆ ರಭಸದಿಂದ ಬೀಳಲು ಬರುತ್ತಿದ್ದ ಹತಶೇಷರಾದ ಕುರುಯೋಧರನ್ನು ವಿಷಸರ್ಪಗಳ ಆಕಾರಗಳನ್ನು ಹೊಂದಿದ್ದ ಬಾಣಗಳಿಂದ ಆಚ್ಛಾದಿಸಿದರು. ಕುರುಶ್ರೇಷ್ಠನೇ! ಮಹಾತ್ಮರಾದ ಪಾಂಡವರು ಸ್ವಲ್ಪ ಹೊತ್ತಿನಲ್ಲಿಯೇ ಆ ಎಲ್ಲ ಕೌರವಸೈನ್ಯವನ್ನೂ ಧ್ವಂಸಮಾಡಿದರು. ಆ ಸೈನ್ಯ ವನ್ನು ರಕ್ಷಿಸುವವರೇ ಇರಲಿಲ್ಲ. ಯದ್ಯಪಿ ಕವಚಗಳನ್ನು ಧರಿಸಿ ಯುದ್ಧ ಸನ್ನದ್ಧರಾಗಿದ್ದರೂ ಭಯಗೊಂಡು ಹತಶೇಷರಾಗಿದ್ದ ಕೌರವಸೈನಿಕರು ರಣ ರಂಗದಲ್ಲಿ ಹೆಚ್ಚುಹೊತ್ತು ನಿಲ್ಲಲಾಗಲಿಲ್ಲ. ಕುದುರೆಗಳ ಮೇಲೆ ಕುಳಿತು ಪಲಾಯನಮಾಡುತ್ತಿದ್ದ ಅಶ್ವಸೈನ್ಯದಿಂದ ಉದ್ಭೂತವಾದ ಧೂಳಿಯಿಂದ ರಣಾಂಗಣವು ಆವೃತವಾಗಲಾಗಿ ದಿಕ್ಕುಗಳಾಗಲೀ ಉಪದಿಕ್ಕುಗಳಾಗಲೀ ತಿಳಿಯುತ್ತಲೇ ಇರಲಿಲ್ಲ. ಅನಂತರ ಪಾಂಡವರ ಸೈನ್ಯದಿಂದ ಅನೇಕಯೋಧರು ಹೊರಬಂದು ಸ್ವಲ್ಪಹೊತ್ತಿನಲ್ಲಿಯೇ ಪಲಾಯನಪರಾಯಣರಾಗಿದ್ದ ನಿನ್ನ ಕಡೆಯ ಸೈನಿಕರನ್ನು ಸಂಪೂರ್ಣವಾಗಿ ಧ್ವಂಸಮಾಡಿದರು. ಆ ಸಮಯದಲ್ಲಿ ನಿನ್ನ ಸೈನ್ಯವು ನಿಃಶೇಷವಾಗಿ ವಿನಾಶಹೊಂದಿತು.

ಸಂಘಟಿತರಾಗಿ ಯುದ್ಧದಲ್ಲಿ ತೊಡಗಿದ್ದ ದುರ್ಯೋಧನನ ಕಡೆಯ ಹನ್ನೊಂದು ಅಕ್ಷೌಹಿಣೀಸೈನಿಕರೂ ಪಾಂಡವ-ಸೃಂಜಯಯೋಧರಿಂದ ಹತರಾದರು. ನಿನ್ನ ಪಕ್ಷದಲ್ಲಿದ್ದ ಸಾವಿರಾರು ರಾಜರಲ್ಲಿ ಬಹಳವಾಗಿ ಗಾಯ ಗೊಂಡಿದ್ದ ದುರ್ಯೋಧನನೊಬ್ಬನು ಮಾತ್ರವೇ ಅಲ್ಲಿ ಕಾಣುತ್ತಿದ್ದನು. ಆಗ ಅವನು ಎಲ್ಲ ದಿಕ್ಕುಗಳನ್ನೂ ನೋಡುತ್ತಿದ್ದನು. ಅವನ ಪಾಲಿಗೆ ಎಲ್ಲ ದಿಕ್ಕುಗಳೂ ಶೂನ್ಯವಾಗಿರುವಂತೆಯೇ ಕಾಣುತ್ತಿದ್ದುವು. ಪ್ರಪಂಚವೇ ಶೂನ್ಯ ವಾಗಿರುವಂತೆ ಕಾಣುತ್ತಿದ್ದಿತು. ಅವನು ಸರ್ವಯೋಧರಿಂದಲೂ ವಿಹೀನ ನಾಗಿದ್ದನು. ಶತ್ರುಗಳಾದ ಪಾಂಡವರು ಸಂತೋಷಭರಿತರಾಗಿದ್ದರು. ಸಫಲ ಮನೋರಥರಾಗಿದ್ದರು. ಎಲ್ಲ ಕಡೆಗಳಲ್ಲಿಯೂ ಸಿಂಹನಾದಗಳನ್ನು ಮಾಡು ತ್ತಿದ್ದರು. ಮಹಾತ್ಮರಾದ ಪಾಂಡವರು ಮಾಡುತ್ತಿದ್ದ ಸಿಂಹನಾದಗಳನ್ನೂ ಬಾಣಗಳ ಶಬ್ದವನ್ನೂ ಕೇಳುತ್ತಿದ್ದ ಮತ್ತು ಬಲ-ವಾಹನಗಳಿಂದ ವಿಹೀನನಾಗಿದ್ದ ದುರ್ಯೋಧನನು ಶೋಕಸಂತಪ್ತನಾಗಿ ಯುದ್ಧದಿಂದ ಹಿಮ್ಮೆಟ್ಟಲು ಮನಸ್ಸುಮಾಡಿದನು."

ಸಂಜಯನ ಈ ಮಾತನ್ನು ಕೇಳಿ ಧೃತರಾಷ್ಟ್ರನು ಪ್ರಶ್ನಿಸುತ್ತಾನೆ:

“ಸಂಜಯ! ನನ್ನ ಕಡೆಯ ಸೈನ್ಯವು ಹತವಾಗಲಾಗಿ, ಶಿಬಿರಗಳು ಸೈನಿಕರಿಂದ ನಿಶ್ಶೇಷವಾಗಲಾಗಿ, ಪಾಂಡವರ ಸೈನ್ಯದಲ್ಲಿ ಎಷ್ಟು ಶೇಷವು ಉಳಿದಿದ್ದಿತು? ನೀನು ವಿಷಯನಿರೂಪಣೆಯಲ್ಲಿ ಬಹಳ ಕುಶಲನಾಗಿರುವೆ. ಆದುದರಿಂದ ಪ್ರಶ್ನಿಸುತ್ತಿರುವ ನನಗೆ ಈ ವಿಷಯವನ್ನು ವಿಷದವಾಗಿ ಹೇಳು. ತನ್ನ ಕಡೆಯ ಸೈನ್ಯವು ನಿಃಶೇಷವಾಗಲಾಗಿ ಏಕಾಕಿಯಾದ ಪೃಥಿವೀಪತಿಯಾದ ನನ್ನ ಮಗ, ಮೂರ್ಖನಾದ ದುರ್ಯೋಧನರಾಜನು ಮುಂದೇನು ಮಾಡಿದನು?–ಎಂಬುದನ್ನೂ ವಿವರಿಸಿ ಹೇಳು.”

**ರಥಾನಾಂ ದ್ವೇ ಸಹಸ್ರೇ ತು ಸಪ್ತ ನಾಗಶತಾನಿ ಚ ।**
**ಪಞ್ಚ ಚಾಶ್ವಸಹಸ್ರಾಣಿ ಪತ್ತೀನಾಂ ಚ ಶತಂ ಶತಾಃ ।**
**ಏತಚ್ಛೇಷಮಭೂದ್ರಾಜನ್ಪಾಣ್ಡವಾನಾಂ ಮಹದ್ಬಲಮ್ ॥೨೩॥**

“ಪಾಂಡವರ ವಿಶಾಲವಾದ ಏಳು ಅಕ್ಷೌಹಿಣೀಸೈನ್ಯದಲ್ಲಿ ಎರಡು ಸಾವಿರ ರಥಗಳೂ, ಏಳು ನೂರು ಆನೆಗಳೂ, ಐದು ಸಾವಿರ ಕುದುರೆಗಳೂ, ಹತ್ತು ಸಾವಿರ ಪದಾತಿಗಳೂ ಉಳಿದುಕೊಂಡಿದ್ದುವು. ಆ ಸೈನ್ಯದೊಡನೆ ಸೇನಾಪತಿಯಾದ ಧೃಷ್ಟದ್ಯುಮ್ನನು ರಣರಂಗದಲ್ಲಿ ನಿಂತಿದ್ದನು. ನಿನ್ನ ಪಕ್ಷದಲ್ಲಿ ಏಕಾಕಿಯಾದ ದುರ್ಯೋಧನನು ಮಾತ್ರವೇ ನಿಂತಿದ್ದನು. ರಥಿಗಳಲ್ಲಿ ಶ್ರೇಷ್ಠನಾದ ದುರ್ಯೋಧನನು ರಣಭೂಮಿಯಲ್ಲಿ ತನ್ನ ಸಹಾಯಕನೊಬ್ಬನನ್ನೂ ಕಾಣಲಿಲ್ಲ. ತನ್ನ ಸೈನ್ಯವು ಸಂಪೂರ್ಣವಾಗಿ ನಾಶವಾದುದನ್ನೂ ಮತ್ತು ಶತ್ರುಗಳು ಗರ್ಜನೆಮಾಡುತ್ತಿರುವುದನ್ನೂ ನೋಡಿ ಏಕಾಕಿಯಾದ ಮಹೀಪತಿಯು ಸತ್ತುಹೋಗಿದ್ದ ತನ್ನ ಕುದುರೆಯನ್ನು ಬಿಟ್ಟು ಭಯದಿಂದ ಪೂರ್ವದಿಕ್ಕಿಗೆ ಓಡಲಾರಂಭಿಸಿದನು.

**ಏಕಾದಶಚಮೂಭರ್ತಾ ಪುತ್ರೋ ದುರ್ಯೋಧನಸ್ತವ ।**
**ಗದಾಮಾದಾಯ ತೇಜಸ್ವೀ ಪದಾತಿಃ ಪ್ರಸ್ಥಿತೋ ಹ್ರದಮ್ ॥೨೮॥**

ಹನ್ನೊಂದು ಅಕ್ಷೌಹಿಣೀಸೈನ್ಯಕ್ಕೆ ಒಡೆಯನಾಗಿದ್ದ ತೇಜಸ್ವಿಯಾದ ನಿನ್ನ ಮಗ ದುರ್ಯೋಧನನು ಗದೆಯನ್ನೆತ್ತಿಕೊಂಡು ಏಕಾಕಿಯಾಗಿ ಕಾಲ್ನಡಿಗೆ ಯಲ್ಲಿಯೇ ಸರೋವರದ ಬಳಿಗೆ ಹೋದನು.

ನಡೆದುಕೊಂಡೇ ಸ್ವಲ್ಪದೂರ ಹೋದನಂತರ ನರಾಧಿಪನಾದ ದುರ್ಯೋಧನನು ಧರ್ಮಶೀಲನಾದ ಧೀಮಂತನಾದ ವಿದುರನ ಮಾತುಗಳನ್ನು ಸ್ಮರಿಸಿಕೊಂಡನು:



"ಯುದ್ಧದಲ್ಲಿ ಕ್ಷತ್ರಿಯರ ಈ ಮಹಾವಿನಾಶವನ್ನು ಬಹಳ ಹಿಂದೆಯೇ ಮಹಾಪ್ರಾಜ್ಞನಾದ ವಿದುರನು ದೂರದೃಷ್ಟಿಯಿಂದ ತಿಳಿದುಕೊಂಡಿದ್ದನು."

ಮಹಾರಾಜ! ತನ್ನ ಅಪಾರಸೈನ್ಯವೂ ವಿನಾಶವಾದುದನ್ನು ನೋಡಿ ದುಃಖಸಂತಪ್ತಹೃದಯನಾದ ದುರ್ಯೋಧನನು ಹೀಗೆ ಚಿಂತಿಸುತ್ತಾ ಸರೋವರವನ್ನು ಪ್ರವೇಶಿಸಲು ಉದ್ಯುಕ್ತನಾದನು.

ಮಹಾರಾಜ! ನಾನು ಹಿಂದೆಯೇ ಹೇಳಿದ್ದಂತೆ ಧೃಷ್ಟದ್ಯುಮ್ನ ಪ್ರಮುಖರಾದ ಪಾಂಡವರು ಅತ್ಯಂತಕ್ರುದ್ಧರಾಗಿ ನಿನ್ನ ಸೈನ್ಯವನ್ನು ಆಕ್ರಮಿಸಿದರು. ಅರ್ಜುನನು ಗಾಂಡೀವಧನುಸ್ಸಿನಿಂದ ಶಕ್ತಿ-ಋಷ್ಟಿ-ಪಾಶಹಸ್ತರಾಗಿದ್ದ, ಗರ್ಜನೆಮಾಡುತ್ತಿದ್ದ ನಿನ್ನ ಕಡೆಯ ಯೋಧರ (ಪಾಂಡವರನ್ನು ಸಂಹರಿಸಬೇಕೆಂದು ಮಾಡಿದ್ದ.) ಸಂಕಲ್ಪವನ್ನು ವ್ಯರ್ಥ ಗೊಳಿಸಿದನು.

ಅಮಾತ್ಯ-ಬಂಧುಗಳಿಂದ ಸಹಿತರಾಗಿದ್ದ ಆ ಎಲ್ಲ ದುರ್ಯೋಧನನ ಯೋಧರನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿ ಬಿಳಿಯದಾದ ಕುದುರೆ ಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತಿದ್ದ ಅರ್ಜುನನು ಬಹಳವಾಗಿ ಶೋಭಿಸಿದನು. ಅಶ್ವ-ರಥ-ಗಜಗಳಿಂದ ಯುಕ್ತನಾಗಿದ್ದ, ಸುಬಲನ ಮಗ ನಾದ ಶಕುನಿಯು ಹತನಾದನಂತರ ನಿನ್ನ ಸೈನ್ಯವು ಕತ್ತರಿಸಿಹಾಕಿದ ವೃಕ್ಷಗಳುಳ್ಳ ಮಹಾವನದಂತೆ ಕಾಣುತ್ತಿದ್ದಿತು. ಅನೇಕಲಕ್ಷಸಂಖ್ಯಾತವಾಗಿದ್ದ ದುರ್ಯೋಧನನ ಸೈನ್ಯದಲ್ಲಿ ವೀರನಾದ ದ್ರೋಣಪುತ್ರ, ಕೃತವರ್ಮಾ, ಗೌತಮಪುತ್ರರಾದ ಕೃಪರು ಮತ್ತು ನಿನ್ನ ಮಗನಾದ ದುರ್ಯೋಧನ ರಾಜ–ಈ ನಾಲ್ವರ ಹೊರತಾಗಿ ಮತ್ತಾವ ಮಹಾರಥನೂ ಜೀವಂತ ನಾಗಿರುವುದು ಕಂಡುಬರಲಿಲ್ಲ. ಆ ಸಮಯದಲ್ಲಿ ಧೃಷ್ಟದ್ಯುಮ್ನನು ಬಂಧನ ದಲ್ಲಿದ್ದ ನನ್ನನ್ನು ನೋಡಿ ಸಾತ್ಯಕಿಯೊಡನೆ ಹೇಳಿದನು: “ಶೈನೇಯ! ಇವನನ್ನು ಹಿಡಿದಿಟ್ಟುಕೊಂಡು ನಾವೇನು ಮಾಡಬೇಕಾಗಿದೆ? ಇವನು ಜೀವಂತನಾಗಿ ನಮ್ಮ ಬಳಿಯಲ್ಲಿರುವುದರಿಂದ ನಮಗಾವ ಪ್ರಯೋಜನವೂ ಇಲ್ಲ.” ಧೃಷ್ಟದ್ಯುಮ್ನನು ಹೇಳಿದ ಮಾತನ್ನು ಕೇಳಿದೊಡನೆಯೇ ಸಾತ್ಯಕಿಯು ನಿಶಿತವಾದ ಕತ್ತಿಯನ್ನು ಮೇಲೆತ್ತಿ ನನ್ನನ್ನು ಸಂಹರಿಸಲು ಉದ್ಯುಕ್ತನಾದನು. ಆದರೆ ಆ ವೇಳೆಗೆ ಸರಿಯಾಗಿ ಶ್ರೀಕೃಷ್ಣದ್ವೈಪಾಯನರು ಅಲ್ಲಿಗೆ ಬಂದು ಹೇಳಿದರು:

**ಮುಚ್ಯತಾಂ ಸಂಜಯೋ ಜೀವನ್ನ ಹನ್ತವ್ಯಃ ಕಥಂಚನ ॥೩೯॥**

“ಈ ಸಂಜಯನನ್ನು ಜೀವಸಹಿತವಾಗಿ ಬಿಟ್ಟುಬಿಡಿರಿ. ಯಾವುದೇ ಕಾರಣದಿಂದಲೂ ನೀವು ಈ ಸೂತನನ್ನು ಸಂಹರಿಸಬಾರದು.”

ವ್ಯಾಸರ ಆ ಮಾತನ್ನು ಕೇಳಿ ಶೈನೇಯನು ಬದ್ಧಾಂಜಲಿಯಾಗಿ ವ್ಯಾಸರಿಗೆ ಪ್ರಣಾಮಮಾಡಿ ನನ್ನನ್ನು ಬಂಧನದಿಂದ ವಿಮೋಚನೆಗೊಳಿಸಿ ಹೇಳಿದನು: 'ಸ್ವಸ್ತಿ ಸಂಜಯ! ಸಾಧಯ-ಸಂಜಯ! ನಿನಗೆ ಮಂಗಳವಾಗಲಿ! ನೀನಿನ್ನು ಹೊರಡು.'



ಹೀಗೆ ಸಾತ್ಯಕಿಯಿಂದ ಅನುಜ್ಞಾತನಾದ ನಾನು ಕವಚವನ್ನು ಅಲ್ಲಿಯೇ ಬಿಚ್ಚಿಟ್ಟು ನಿರಾಯುಧನಾಗಿ ಸಾಯಂಕಾಲದ ವೇಳೆಗೆ ನಗರಕ್ಕೆ ಹಿಂದಿರುಗಿದೆನು. ಆ ಸಮಯದಲ್ಲಿ ನಾನು ರಕ್ತದಿಂದ ತೋಯ್ದು ಹೋಗಿದ್ದೆನು. ರಣಾಂಗಣದಿಂದ ಹೊರಟು ಒಂದು ಕ್ರೋಶದಷ್ಟು ದೂರ ಬಂದನಂತರ ಅಲ್ಲಿ ನಾನು, ಬಹಳವಾಗಿ ಗಾಯಗೊಂಡು, ಗದಾಪಾಣಿಯಾಗಿ ಏಕಾಕಿಯಾಗಿ

ನಿಂತಿದ್ದ ದುರ್ಯೋಧನನನ್ನು ನೋಡಿದೆನು. ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿದ್ದುದರಿಂದ ಅವನಿಗೆ ನನ್ನನ್ನು ನೋಡಲಾಗಲಿಲ್ಲ. ನಾನು ಬಹಳ ದೀನನಾಗಿ ಸ್ವಲ್ಪಹೊತ್ತು ಅವನ ಸಮೀಪದಲ್ಲಿಯೇ ನಿಂತುಕೊಂಡೆನು. ಅನಂತರ ರಾಜನು ಕಣ್ಣುಗಳನ್ನೊರೆಸಿಕೊಂಡು ನನ್ನನ್ನು ನೋಡಿದನು. ಬಹಳವಾಗಿ ದುಃಖಿಸುತ್ತಿದ್ದ, ಏಕಾಕಿಯಾಗಿದ್ದ ಅವನನ್ನು ನೋಡಿ ನಾನೂ ಸಹ ದುಃಖ-ಶೋಕದಲ್ಲಿ ಮುಳುಗಿದುದರಿಂದ ಸ್ವಲ್ಪಹೊತ್ತು ಅವನೊಡನೆ ಯಾವ ಮಾತನ್ನಾಡಲೂ ನನಗೆ ಸಾಧ್ಯವಾಗಲೇ ಇಲ್ಲ. ಅನಂತರ ದುರ್ಯೋಧನರಾಜನಿಗೆ ನನ್ನ ಬಂಧನದ ವಿಷಯವನ್ನೂ ಮತ್ತು ದ್ವೈಪಾಯನರ ಅನುಗ್ರಹದಿಂದಾಗಿ ಜೀವಸಹಿತ ನನ್ನನ್ನವರು ಬಿಟ್ಟುದನ್ನೂ ವಿವರಿಸಿ ಹೇಳಿದೆನು. ದುರ್ಯೋಧನನು ಸ್ವಲ್ಪಹೊತ್ತು ಚಿಂತಿಸುತ್ತಲೇ ಇದ್ದು, ಯಾವ ವಿಷಯದಲ್ಲಿಯೋ ಮಗ್ನವಾಗಿ ಹೋಗಿದ್ದ ಮನಸ್ಸನ್ನು ಪುನಃ ತನ್ನ ಹಿಡಿತಕ್ಕೆ ತೆಗೆದುಕೊಂಡು ನನ್ನ ಕಡೆಗೆ ತಿರುಗಿ ತನ್ನ ಸಹೋದರರ ವಿಷಯವಾಗಿಯೂ ಮತ್ತು ತನ್ನ ಸೈನಿಕರ ವಿಷಯವಾಗಿಯೂ ಪ್ರಶ್ನಿಸಿದನು. ಎಲ್ಲ ವಿಷಯಗಳನ್ನೂ ಪ್ರತ್ಯಕ್ಷವಾಗಿಯೇ ನೋಡಿದ್ದ ನಾನು ಅವನೊಡನೆ, ನಿನ್ನ ಎಲ್ಲ ಸಹೋದರರೂ ಮತ್ತು ಸೈನಿಕರೂ ನಿಧನಹೊಂದಿದರೆಂಬ ವಾರ್ತೆಯನ್ನು ಹೇಳಿದೆನು.

**ತ್ರಯಃ ಕಿಲ ರಥಾಃ ಶಿಷ್ಟಾಸ್ತಾವಕಾನಾಂ ನರಾಧಿಪ ।**
**ಇತಿ ಪ್ರಸ್ಥಾನಕಾಲೇ ಮಾಂ ಕೃಷ್ಣದ್ವೈಪಾಯನೋಽಬ್ರವೀತ್ ॥೪೮॥**

"ನಿನ್ನ ಕಡೆಯಲ್ಲಿ ಮೂವರು ಮಹಾರಥರು ಮಾತ್ರವೇ ಉಳಿದುಕೊಂಡಿದ್ದಾರೆ. ಈ ವಿಷಯವನ್ನು ನನಗೆ ವ್ಯಾಸರು, ನಾನು ಯುದ್ಧಭೂಮಿಯಿಂದ ಹೊರಡುವ ಸಮಯದಲ್ಲಿ ಹೇಳಿದ್ದರು."

ಮಹಾರಾಜ! ನನ್ನ ಆ ಮಾತನ್ನು ಕೇಳಿ ನಿನ್ನ ಮಗನು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ನನ್ನನ್ನೇ ಬಾರಿ-ಬಾರಿಗೂ ನೋಡುತ್ತಾ ಕೈಯಿಂದ ಮುಟ್ಟಿ ಹೇಳಿದನು:

**ತ್ವದನ್ಯೋ ನೇಹ ಸಂಗ್ರಾಮೇ ಕಶ್ಚಿಜ್ಜೀವತಿ ಸಂಜಯ ।**
**ದ್ವಿತೀಯಂ ನೇಹ ಪಶ್ಯಾಮಿ ಸಸಹಾಯಾಶ್ಚ ಪಾಣ್ಡವಾಃ ॥೫೦॥**

"ಸಂಜಯ! ಈ ಮಹಾಯುದ್ಧದಲ್ಲಿ ನಮ್ಮ ಕಡೆಯವನಾಗಿ ನಿನ್ನೊಬ್ಬನನ್ನು ಬಿಟ್ಟು ಮತ್ತಾರೂ ಜೀವಿಸಿರುವುದಿಲ್ಲ. ಏಕೆಂದರೆ: ನಿನ್ನೊಬ್ಬನನ್ನು ಬಿಟ್ಟು ಎರಡನೆಯವನನ್ನು ನಾನು ಕಾಣುತ್ತಲೇ ಇಲ್ಲ. ಆದರೆ ಅತ್ತಕಡೆ ಪಾಂಡವರು ತಮ್ಮ ಸಹಾಯಕರಿಂದ ಸಂಪನ್ನರಾಗಿರುತ್ತಾರೆ.



ಸಂಜಯ! ಪ್ರಜ್ಞಾಚಕ್ಷುವಾದ ಕೌರವೇಶ್ವರನಾದ ಧೃತರಾಷ್ಟ್ರ ರಾಜನಿಗೆ–ನಿನ್ನ ಮಗ ದುರ್ಯೋಧನನು ಸರೋವರವನ್ನು ಪ್ರವೇಶಿಸಿದನೆಂದು ಹೇಳು. ಅಂತಹ ಶ್ರೇಷ್ಠರಾದ ಸುಹೃದರಿಂದಲೂ, ಸಹೋದರರಿಂದಲೂ, ಮಕ್ಕಳಿಂದಲೂ ವಿಹೀನನಾದ ನನ್ನಂತಹವನು, ಪಾಂಡವರು ರಾಜ್ಯವನ್ನು ಅಪಹರಿಸಿದನಂತರ ಹೇಗೆತಾನೇ ಜೀವಿಸಿರುವನು? ಸೂತ! ಈ ಎಲ್ಲ ವಿಷಯ

ಗಳನ್ನೂ ರಾಜನಿಗೆ ಹೇಳು. 'ದುರ್ಯೋಧನನು ಕ್ಷತ-ವಿಕ್ಷತನಾಗಿ ಯುದ್ಧ ಭೂಮಿಯಿಂದ ತಪ್ಪಿಸಿಕೊಂಡು ಜೀವಂತನಾಗಿ ನೀರಿನಿಂದ ತುಂಬಿರುವ ಈ ಸರೋವರದಲ್ಲಿ ಬಚ್ಚಿಟ್ಟುಕೊಂಡಿರುವನು'–ಎಂದು ಅವನಿಗೆ ತಿಳಿಸು."

ಮಹಾರಾಜ! ದುರ್ಯೋಧನನು ನನ್ನೊಡನೆ ಹೀಗೆ ಹೇಳಿ ಸರೋವರವನ್ನು ಪ್ರವೇಶಿಸಿದನು. ತನ್ನ ಮಾಯಾವಿದ್ಯೆಯಿಂದ ಸರೋವರದಲ್ಲಿದ್ದ ನೀರನ್ನು ಸ್ತಂಭಿಸಿದನು. (ಜಲಸ್ತಂಭನಮಾಡಿದನು.) ದುರ್ಯೋಧನನು ಸರೋವರವನ್ನು ಪ್ರವೇಶಿಸಿದನಂತರ ಏಕಾಕಿಯಾಗಿ ಅಲ್ಲಿಯೇ ನಿಂತಿದ್ದ ನಾನು ಆ ಸ್ಥಳಕ್ಕೆ ಬರುತ್ತಿದ್ದ ನಮ್ಮ ಪಕ್ಷದ ಮೂವರು ಮಹಾರಥರನ್ನು ನೋಡಿದೆನು. ಅವರೆಲ್ಲರೂ ಒಟ್ಟಾಗಿಯೇ ಅಲ್ಲಿಗೆ ಬರುತ್ತಿದ್ದರು. ಅವರ ವಾಹನಗಳು (ಕುದುರೆಗಳು) ಬಹಳವಾಗಿ ಆಯಾಸಗೊಂಡಿದ್ದುವು. ಶತ್ರುಪಕ್ಷದವರ ಬಾಣಗಳಿಂದ ಕ್ಷತ-ವಿಕ್ಷತರಾಗಿದ್ದ ಶರದ್ವಂತರ ಮಕ್ಕಳಾದ ಕೃಪರನ್ನೂ, ರಥಿಗಳಲ್ಲಿ ಶ್ರೇಷ್ಠನಾದ ಅಶ್ವತ್ಥಾಮನನ್ನೂ, ಭೋಜವಂಶೀಯನಾದ ಕೃತವರ್ಮನನ್ನೂ ನಾನಲ್ಲಿ ನೋಡಿದೆನು. ನನ್ನನ್ನು ಬಹಳ ದೂರದಿಂದಲೇ ನೋಡಿದ ಅವರು ಕುದುರೆಗಳನ್ನು ಶೀಘ್ರವಾಗಿ ನನ್ನ ಕಡೆಗೆ ಓಡಿಸಿಕೊಂಡು ಬಂದು ನನ್ನೊಡನೆ ಹೇಳಿದರು: '**ದಿಷ್ಟ್ಯಾ ಜೀವಸಿ ಸಂಜಯ**–ಅದೃಷ್ಟವಶಾತ್ ನೀನು ಜೀವಿಸಿರುವೆ, ಸಂಜಯ!' ಜನಾಧಿಪನಾದ ನಿನ್ನ ಪುತ್ರನ ವಿಷಯವಾಗಿಯೂ ಅವರು ಪ್ರಶ್ನಿಸುತ್ತಾ– '**ಕಚ್ಚಿದ್ದುರ್ಯೋಧನೋ ರಾಜಾ ಸ ನೋ ಜೀವತಿ ಸಂಜಯ**-ಸಂಜಯ! ನಮ್ಮ ರಾಜನಾದ ದುರ್ಯೋಧನನು ಬದುಕಿರುವನೇ?'–ಎಂಬುದಾಗಿಯೂ ಆ ಮೂವರೂ ಕೇಳಿದರು. ಅವರೊಡನೆ ನಾನು ದುರ್ಯೋಧನನು ಕುಶಲಿಯಾಗಿರುವನೆಂದು ಹೇಳಿ ದುರ್ಯೋಧನನು ನನ್ನೊಡನೆ ಹೇಳಿದ್ದ ಎಲ್ಲ ವಿಷಯಗಳನ್ನೂ ಅವರೊಡನೆ ಹೇಳಿದೆನು. ನರಾಧಿಪನಾದ ದುರ್ಯೋಧನನು ಸರೋವರವನ್ನು ಪ್ರವೇಶಿಸಿದನೆಂಬ ವಿಷಯವನ್ನೂ ಹೇಳಿದೆನು. ಮಹಾಬಲನಾದ ಅಶ್ವತ್ಥಾಮನು ನಾನು ಹೇಳಿದ ಮಾತನ್ನು ಕೇಳಿ ವಿಶಾಲವಾಗಿದ್ದ ಆ ಸರೋವರವನ್ನು ನೋಡಿ ದುಃಖದಿಂದ ವಿಲಪಿಸಿದನು.

**ಅಹೋ ಧಿಕ್ಸ ನ ಜಾನಾತಿ ಜೀವತೋಽಸ್ಮಾನ್ನರಾಧಿಪಃ ।**
**ಪರ್ಯಾಪ್ತಾಹಿ ವಯಂ ತೇನ ಸಹ ಯೋಧಯಿತುಂ ಪರಾನ್ ॥೬೧॥**

“ಅಯ್ಯೋ! ನಮಗೆ ಧಿಕ್ಕಾರವಿರಲಿ! ನರಾಧಿಪನಾದ ದುರ್ಯೋಧನನಿಗೆ ನಾವಿನ್ನೂ ಬದುಕಿದ್ದೇವೆಂಬ ವಿಷಯವು ತಿಳಿದಿರುವುದಿಲ್ಲ. ಅವನ ಜೊತೆಯಲ್ಲಿ ಸೇರಿಕೊಂಡು ಶತ್ರುಗಳೊಡನೆ ಯುದ್ಧಮಾಡಲು ಈಗಲೂ ನಾವು ಪರ್ಯಾಪ್ತರಾಗಿದ್ದೇವೆ.”

ಆ ಮೂವರು ಮಹಾರಥರೂ ಬಹಳ ಹೊತ್ತಿನವರೆಗೆ ಅಲ್ಲಿಯೇ ವಿಲಾಪಮಾಡಿಕೊಂಡು ಕುಳಿತಿದ್ದರು. ಆದರೆ ರಣಭೂಮಿಯಲ್ಲಿ ಪಾಂಡವರನ್ನು ನೋಡುತ್ತಲೇ ರಥಿಗಳಲ್ಲಿ ಶ್ರೇಷ್ಠರಾದ ಆ ಮೂವರೂ ಶಿಬಿರಗಳಿಗೆ ಹಿಂದಿರುಗುವ ಮನಸ್ಸುಮಾಡಿದರು.

ಅಳಿದುಳಿದಿದ್ದ ಆ ಮೂವರು ಮಹಾರಥರೂ ನನ್ನನ್ನು ಸುಪರಿಷ್ಕೃತವಾಗಿದ್ದ ಕೃಪರ ರಥದಲ್ಲಿ ಕುಳ್ಳಿರಿಸಿಕೊಂಡು ಶಿಬಿರಗಳಿಗೆ ತೆರಳಿದರು. ಸೂರ್ಯನು ಅಸ್ತಮಿಸಲಾಗಿ ಶಿಬಿರವನ್ನು ಕಾಯುತ್ತಿದ್ದ ಸೈನಿಕರು ಬಹಳವಾಗಿ ಭಯಗೊಂಡರು. ನಿನ್ನ ಪುತ್ರರೆಲ್ಲರೂ ಹತರಾದುದನ್ನು ಕೇಳಿ ಅವರೆಲ್ಲರೂ ಗಟ್ಟಿಯಾಗಿ ರೋದನಮಾಡಿದರು. ಅಂತಃಪುರದ ಸ್ತ್ರೀಯರ ರಕ್ಷಣೆಯಲ್ಲಿ ನಿರತರಾಗಿದ್ದ ವೃದ್ಧರು ರಾಜಮಹಿಷಿಯರನ್ನು ಕರೆದುಕೊಂಡು ಹಸ್ತಿನಾಪಟ್ಟಣಕ್ಕೆ ತೆರಳಿದರು. ಕೌರವರ ಕಡೆಯ ಸೈನ್ಯವು ಸಂಪೂರ್ಣವಾಗಿ ವಿನಾಶಹೊಂದಿದುದನ್ನು ಕೇಳಿ ತಮ್ಮ-ತಮ್ಮ ಗಂಡಂದಿರನ್ನು ಕೂಗಿಕೊಂಡು ರೋದನಮಾಡುತ್ತಿದ್ದ ರಾಜಮಹಿಷಿಯರ ಆರ್ತನಾದಗಳು ಎಲ್ಲ ಕಡೆಗಳಿಂದಲೂ ಕೇಳಿಬರುತ್ತಿದ್ದುವು. ಕಡಲಹದ್ದುಗಳು ಶಬ್ದಮಾಡುವಂತೆ ರಾಜಮಹಿಷಿಯರು ಬಾರಿ-ಬಾರಿಗೂ ಬಿಕ್ಕಿ-ಬಿಕ್ಕಿ ಅಳುತ್ತಾ ಆ ರೋದನ ಶಬ್ದದಿಂದ ಭೂತಲವನ್ನೇ ನಿನಾದಗೊಳಿಸುತ್ತಿದ್ದರು. ದುಃಖಿತಪ್ತರಾಗಿದ್ದ ಅಂತಃಪುರದ ಸ್ತ್ರೀಯರು ತಮ್ಮ ಉಗುರುಗಳಿಂದಲೇ ತಮ್ಮನ್ನು ಪರಚಿಕೊಳ್ಳುತ್ತಿದ್ದರು. ‘ಅಯ್ಯೋ ಪತಿದೇವ! ನನ್ನನ್ನು ಬಿಟ್ಟುಹೋದೆಯಾ? ನಾನು ಹೇಗೆ ಬದುಕಿರಲಿ?’–ಮುಂತಾಗಿ ಹೇಳಿಕೊಂಡು ಕೂಗಿಕೊಳ್ಳುತ್ತಿದ್ದರು. ತಲೆಗೂದಲನ್ನು ಕಿತ್ತುಕೊಳ್ಳುತ್ತಿದ್ದರು. ಹಾಹಾಕಾರಮಾಡುತ್ತಿದ್ದರು. ಎದೆಗಳನ್ನು ಬಡಿದುಕೊಳ್ಳುತ್ತಿದ್ದರು. ಶೋಕತಪ್ತರಾಗಿ ಗಂಡಂದಿರನ್ನು ಕೂಗಿಕೊಂಡು ಗಟ್ಟಿಯಾಗಿ ಗೋಳಾಡುತ್ತಿದ್ದರು.

ದುರ್ಯೋಧನನ ಮಂತ್ರಿಗಳು ಕಣ್ಣೀರಿನಿಂದಲೂ ಗದ್ಗದಧ್ವನಿಯಿಂದಲೂ ಕೂಡಿದವರಾಗಿ ಅತ್ಯಂತವಿಹ್ವಲರಾಗಿ ರಾಜಮಹಿಷಿಯರನ್ನು ಕರೆದುಕೊಂಡು ಹಸ್ತಿನಾಪಟ್ಟಣಕ್ಕೆ ಹಿಂದಿರುಗಿದರು. ಅವರ ಜೊತೆಯಲ್ಲಿಯೇ ದಂಡಗಳನ್ನು ಹಿಡಿದಿದ್ದ ದ್ವಾರಪಾಲಕರೂ ನಗರಕ್ಕೆ ಹಿಂದಿರುಗಿದರು. ರಾಜಪತ್ನಿಯರ ರಕ್ಷಣೆಯಲ್ಲಿ ನಿಯುಕ್ತರಾಗಿದ್ದ ಸೇವಕರು ಸುಭದ್ರವಾಗಿದ್ದ ಮತ್ತು ಬಹು ಮೂಲ್ಯವಾಗಿದ್ದ ಹಂಸತೂಲಿಕಾತಲ್ಪಗಳನ್ನೆತ್ತಿಕೊಂಡು ಬಹಳ ಬೇಗ ನಗರಕ್ಕೆ ಧಾವಿಸಿದರು. ಅನೇಕ ರಾಜಪುರುಷರು ಹೇಸರಗತ್ತೆಗಳಿಂದ ಯುಕ್ತವಾಗಿದ್ದ ರಥಗಳಲ್ಲಿ ತಮ್ಮ-ತಮ್ಮ ಪತ್ನಿಯರನ್ನು ಕರೆದುಕೊಂಡು ಹಸ್ತಿನಾಪಟ್ಟಣಕ್ಕೆ ತೆರಳಿದರು. ಸೂರ್ಯನ ಕಣ್ಣುಗಳಿಗೂ ಬೀಳದಿದ್ದ ಅಂತಃಪುರದ ಸ್ತ್ರೀಯರು ನಗರಾಭಿಮುಖವಾಗಿ ಹೋಗುತ್ತಿದ್ದಾಗ ಸಾಧಾರಣ ಮನುಷ್ಯರ ಕಣ್ಣುಗಳಿಗೂ ಗೋಚರಿಸಿದರು. ಸ್ವಜನರಿಂದಲೂ (ಪತಿ-ಪುತ್ರರಿಂದಲೂ) ಬಾಂಧವರಿಂದಲೂ ರಹಿತರಾಗಿದ್ದ ಸುಕುಮಾರಿಯರಾಗಿದ್ದ ಆ ಸ್ತ್ರೀಯರು ಬೇಗ-ಬೇಗನೆ ನಗರದ ಕಡೆಗೆ ಹೋಗುತ್ತಿದ್ದರು. ಭೀಮಸೇನನ ಭಯದಿಂದ ಪೀಡಿತರಾಗಿದ್ದ ಗೊಲ್ಲ-ಕುರುಬರಾದಿಯಾಗಿ ಎಲ್ಲ ಮನುಷ್ಯರೂ ಗಾಬರಿಗೊಂಡವರಾಗಿ ಹಸ್ತಿನಾಪಟ್ಟಣದ ಕಡೆಗೆ ಓಡಿಹೋಗುತ್ತಿದ್ದರು. ಅವರೆಲ್ಲರಿಗೂ ಕುಂತಿಯ ಮಕ್ಕಳಾದ ಪಾಂಡವರಿಂದ ದಾರುಣವಾದ ಮತ್ತು ತೀವ್ರವಾದ ಭಯವುಂಟಾಗಿದ್ದಿತು. ಪರಸ್ಪರವಾಗಿ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾ ನಗರದ ಕಡೆಗೆ ಓಡಿಹೋಗುತ್ತಿದ್ದರು. ಈ ಪ್ರಕಾರವಾಗಿ ಅತ್ಯಂತದಾರುಣವಾದ ಓಡಾಟವು ನಡೆಯುತ್ತಿರಲಾಗಿ ಶೋಕಾಭಿಭೂತನಾಗಿದ್ದ ಯುಯುತ್ಸುವು ಆ ಸಮಯದಲ್ಲಿ ತನ್ನ ಕರ್ತವ್ಯದ ವಿಷಯವಾಗಿ ಆಲೋಚಿಸತೊಡಗಿದನು.

"ಭಯಂಕರಪರಾಕ್ರಮರಾದ ಪಾಂಡವರಿಂದ ಹನ್ನೊಂದು ಅಕ್ಷೌಹಿಣೀಸೈನ್ಯಕ್ಕೆ ನಾಯಕನಾಗಿದ್ದ ದುರ್ಯೋಧನನು ಜಯಿಸಲ್ಪಟ್ಟನು. ಅವನ ಸಹೋದರರೂ ಪಾಂಡವರಿಂದ ಕೊಲ್ಲಲ್ಪಟ್ಟರು. ಭೀಷ್ಮ-ದ್ರೋಣ ಪುರಃಸರರಾದ ಕುರುಯೋಧರೆಲ್ಲರೂ ಹತರಾಗಿಹೋದರು. ಪರಮಾತ್ಮನ ಇಚ್ಛೆಯಿಂದಲೂ ಮತ್ತು ಸೌಭಾಗ್ಯದ ಯೋಗದಿಂದಲೂ ನಾನೊಬ್ಬನು ಮಾತ್ರವೇ ಉಳಿದುಕೊಂಡಿರುತ್ತೇನೆ. ಶಿಬಿರಗಳಲ್ಲಿದ್ದವರೆಲ್ಲರೂ ದಿಕ್ಕಾ

ಪಾಲಾಗಿ ಓಡಿಹೋಗುತ್ತಿದ್ದಾರೆ. ತಮ್ಮ ನಾಯಕನು ಹತನಾದನಂತರ ಅವರು ಉತ್ಸಾಹರಹಿತರಾಗಿ ಕಂಡ-ಕಂಡ ದಿಕ್ಕುಗಳಿಗೆ ಪಲಾಯನಮಾಡುತ್ತಿದ್ದಾರೆ. ಇಂತಹ ಒಂದು ದುಃಸ್ಥಿತಿಯನ್ನು ಅವರು ಹಿಂದೆಂದೂ ಕಂಡಿರಲಿಲ್ಲ. ರಾಜಸೇವಕರೆಲ್ಲರೂ ಬಹಳ ದುಃಖಾರ್ತರಾಗಿದ್ದಾರೆ. ಭಯದಿಂದ ವ್ಯಾಕುಲವಾದ ಕಣ್ಣುಗಳಿಂದ ಕೂಡಿರುತ್ತಾರೆ. ಹೆದರಿದ ಜಿಂಕೆಗಳಂತೆ ಬಹಳ ಭಯಪಡುತ್ತಿದ್ದಾರೆ. ಹತ್ತು ದಿಕ್ಕುಗಳನ್ನೂ ಶೂನ್ಯದೃಷ್ಟಿಯಿಂದ ನೋಡುತ್ತಿದ್ದಾರೆ. ಹತರಾಗದೇ ಉಳಿದಿರುವ ಕೆಲವರು ದುರ್ಯೋಧನನ ಮಂತ್ರಿಗಳು ರಾಜಮಹಿಷಿಯರನ್ನು ಕರೆದುಕೊಂಡು ನಾಗಪಟ್ಟಣಕ್ಕೆ ಹೋಗುತ್ತಿದ್ದಾರೆ.

ಪ್ರಭುವಾದ ಯುಧಿಷ್ಠಿರನ ಮತ್ತು ಭಗವಾನ್ ವಾಸುದೇವನ ಅನುಮತಿಯನ್ನು ಪಡೆದು ಈ ಮಂತ್ರಿಗಳೊಡನೆಯೇ ಹಸ್ತಿನಾಪಟ್ಟಣವನ್ನು ಪ್ರವೇಶಿಸಲು ನನಗೂ ಇದು ಸಕಾಲವಾಗಿರುವುದೆಂದೇ ಭಾವಿಸುತ್ತೇನೆ.”

ಹೀಗೆ ಯೋಚಿಸಿದ ಮಹಾಬಾಹುವಾದ ಯುಯುತ್ಸುವು ತನ್ನ ಅಭಿಪ್ರಾಯವನ್ನು ಯುಧಿಷ್ಠಿರನಿಗೂ ಮತ್ತು ವಾಸುದೇವನಿಗೂ ನಿವೇದಿಸಿಕೊಂಡನು. ನಿರಂತರಕರುಣಾಶಾಲಿಯಾದ, ಮಹಾಬಾಹುವಾದ ಯುಧಿಷ್ಠಿರ ರಾಜನು ಯುಯುತ್ಸುವಿನ ವಿಷಯದಲ್ಲಿ ಸುಪ್ರೀತನಾಗಿ ವೈಶ್ಯಾಪುತ್ರನನ್ನು ಗಾಢವಾಗಿ ಆಲಿಂಗಿಸಿಕೊಂಡು ಅವನ ಇಚ್ಛೆಯಂತೆ ಹಸ್ತಿನಾಪುರಕ್ಕೆ ಹೋಗಲು ಅನುಮತಿಯನ್ನಿತ್ತನು. ಒಡನೆಯೇ ಯುಯುತ್ಸುವು ರಥದಲ್ಲಿ ಕುಳಿತು ಅಂತಃಪುರದ ಸ್ತ್ರೀಯರನ್ನೂ ರಥಗಳಲ್ಲಿ ಕುಳ್ಳಿರಿಸಿಕೊಂಡು ನಾಗಪಟ್ಟಣದ ಕಡೆಗೆ ಕುದುರೆಗಳನ್ನು ಪ್ರಚೋದಿಸಿದನು. ಸೂರ್ಯನು ಅಸ್ತನಾಗುತ್ತಿರಲಾಗಿ ಕಣ್ಣೀರು ಸುರಿಸುತ್ತಿದ್ದ, ಗದ್ಗದಧ್ವನಿಯಿಂದ ಕೂಡಿದ್ದ, ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ ಯುಯುತ್ಸುವು ದುರ್ಯೋಧನನ ಮಂತ್ರಿಗಳೊಡನೆ ಬಹಳ ಬೇಗ ಹಸ್ತಿನೆಯನ್ನು ಸೇರಿದನು. ಅಲ್ಲವನು ನಿನ್ನ (ಧೃತರಾಷ್ಟ್ರನ) ಸಮೀಪದಿಂದ ಹೊರಬರುತ್ತಿದ್ದ, ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ, ಶೋಕಪರೀತನಾಗಿದ್ದ, ಮಹಾಪ್ರಾಜ್ಞನಾದ ವಿದುರನನ್ನು ನೋಡಿದನು. ನಮಸ್ಕಾರಮಾಡಿ ತನ್ನ

ಮುಂದೆ ನಿಂತಿದ್ದ ಯುಯುತ್ಸುವನ್ನು ನೋಡಿ ಸತ್ಯಧೃತಿಯಾದ ವಿದುರನು ಹೇಳಿದನು: “ಮಗು! ಕೌರವರ ಈ ಮಹಾವಿನಾಶವಾಗುತ್ತಿರಲಾಗಿ ನೀನೊಬ್ಬನು ಮಾತ್ರ ಉಳಿದುಕೊಂಡುದು ಅದೃಷ್ಟದ ವಿಷಯವೇ ಸರಿ. ಆದರೆ ಯುಧಿಷ್ಠಿರರಾಜನು ನಗರಪ್ರವೇಶಮಾಡುವ ಮೊದಲೇ ನೀನೇಕೆ ಹಸ್ತಿನೆಗೆ ಬಂದೆ? ಇದಕ್ಕೆ ಕಾರಣವನ್ನು ನೀನು ನನಗೆ ಸವಿಸ್ತರವಾಗಿ ಹೇಳು.”



“ಮಹಾಪ್ರಾಜ್ಞನೇ! ಶಕುನಿಯು ಜ್ಞಾತಿ-ಸುತ-ಬಾಂಧವರೊಡನೆ ಹತನಾಗಲಾಗಿ ಸಮಸ್ತವಾದ ಪರಿವಾರದಿಂದಲೂ ವಿಹೀನನಾದ ದುರ್ಯೋಧನ

ರಾಜನು ಸತ್ತುಹೋಗಿದ್ದ ತನ್ನ ಕುದುರೆಯನ್ನು ಬಿಟ್ಟು ಭಯದಿಂದ ಪೂರ್ವಾಭಿಮುಖವಾಗಿ ಓಡಿಹೋದನು. ರಾಜನು ಹೊರಟುಹೋದನಂತರ ಎಲ್ಲರೂ ಭಯದಿಂದ ವ್ಯಾಕುಲರಾಗಿ ಶಿಬಿರಗಳಿಂದ ಹಸ್ತಿನೆಯ ಕಡೆಗೆ ಓಡಿ ಬಂದರು. ದುರ್ಯೋಧನನ ಪತ್ನಿಯರೂ ಮತ್ತು ಅವನ ಸಹೋದರರ ಪತ್ನಿಯರೂ ಎಲ್ಲರನ್ನೂ ವಾಹನಗಳಲ್ಲಿ ಕೂರಿಸಿಕೊಂಡು ಶಿಬಿರಾಧ್ಯಕ್ಷರೆಲ್ಲರೂ ಭಯದಿಂದ ನಗರದ ಕಡೆಗೆ ಓಡಿಬಂದರು. ಅನಂತರ ನಾನು ಶ್ರೀಕೇಶವನೊಡನಿದ್ದ ಯುಧಿಷ್ಠಿರರಾಜನ ಅನುಜ್ಞೆಯನ್ನು ಪಡೆದುಕೊಂಡು ಶಿಬಿರಗಳಿಂದ ಓಡಿಬರುತ್ತಿದ್ದ ರಾಜಮಹಿಷಿಯರನ್ನೂ ಇತರ ಜನರನ್ನೂ ಸಂರಕ್ಷಿಸುತ್ತಾ ಹಸ್ತಿನಾಪಟ್ಟಣವನ್ನು ಪ್ರವೇಶಿಸಿದೆನು."

ವೈಶ್ಯಾಪುತ್ರನಾದ ಯುಯುತ್ಸುವು ಹೇಳಿದುದನ್ನು ಕೇಳಿ, ಅವನು ಮಾಡಿದುದು ಸಮಯೋಚಿತವಾದುದೆಂದು ಭಾವಿಸಿದ ಸರ್ವಧರ್ಮಗಳನ್ನೂ ತಿಳಿದಿದ್ದ ಮಹಾತ್ಮನಾದ ವಿದುರನು ಯುಯುತ್ಸುವನ್ನು ಪ್ರಶಂಸೆ ಮಾಡುತ್ತಾ ಹೇಳಿದನು:

"ಭರತವಂಶೀಯರ ಈ ವಿನಾಶದ ಸಮಯದಲ್ಲಿ ದಯಾಪರತೆಯಿಂದ ನೀನು ಸಮಯೋಚಿತವಾದ ಕಾರ್ಯವನ್ನೇ ಮಾಡಿರುವೆ. ನಿನ್ನಿಂದ ನಮ್ಮ ಕುಲಧರ್ಮವೂ ರಕ್ಷಿಸಲ್ಪಟ್ಟಿತು. ವೀರಕ್ಷಯಕರವಾದ ಈ ಮಹಾ ಸಮರದಿಂದ ಸೌಭಾಗ್ಯವಶಾತ್ ವಿಮುಕ್ತನಾದ ನೀನು ಪಟ್ಟಣಕ್ಕೆ ಆಗಮಿಸಿರುವೆ. ರಾತ್ರಿಯು ಕಳೆದನಂತರ ಪ್ರಜೆಗಳು ಸೂರ್ಯನನ್ನು ವೀಕ್ಷಿಸುವಂತೆ–ನಾವೀಗ ಯುದ್ಧಾಂಧಕಾರದಿಂದ ಹೊರಬಂದಿರುವ ನಿನ್ನನ್ನು ಕಾಣುತ್ತಿದ್ದೇವೆ. ಲೋಭಿಯಾದ, ದೂರದೃಷ್ಟಿಯಿಲ್ಲದ, ಅಂಧನಾದ ಧೃತರಾಷ್ಟ್ರರಾಜನಿಗೆ ನೀನೇ ಊರುಗೋಲಿನ ರೂಪದಲ್ಲಿರುವೆ. ಈ ಯುದ್ಧವು ಬೇಡವೆಂದು ನಾನು ಎಷ್ಟೋ ಸಲ ಹೇಳಿದೆನು. ಆದರೆ ಅವನ ಮನಸ್ಸನ್ನು ದೈವವೇ ಹಾಳುಮಾಡಿಬಿಟ್ಟಿದ್ದಿತು. ನನ್ನ ಹಿತವಚನವನ್ನು ಅವನು ಕೇಳಲಿಲ್ಲ. ಈಗವನು ಪುತ್ರವ್ಯಸನದಿಂದ ಬಹಳವಾಗಿ ಪೀಡಿತನಾಗಿದ್ದಾನೆ. ಈ ಸಮಯದಲ್ಲಿ ನೀನೊಬ್ಬನೇ ಅವನಿಗೆ ಆಶ್ರಯನಾಗಿ ನಿಲ್ಲಬೇಕಾಗಿದೆ. ನೀನು ಇಂದು ರಾತ್ರಿ ಇಲ್ಲಿಯೇ ವಿಶ್ರಾಂತಿಯನ್ನು ಪಡೆದುಕೊಂಡು ನಾಳೆ ಪುನಃ ಯುಧಿಷ್ಠಿರನ ಬಳಿಗೆ ಹೋಗಬಹುದು."

ವಿದುರನು ಹೀಗೆ ಹೇಳಿ ಕಣ್ಣೀರು ಸುರಿಸುತ್ತಾ ಯುಯುತ್ಸುವಿನೊಡನೆ ರಾಜಗೃಹವನ್ನು ಪ್ರವೇಶಿಸಿದನು. ಪಟ್ಟಣಿಗರು ದುಃಖದಿಂದ ಮಾಡುತ್ತಿದ್ದ ಆರ್ತನಾದಗಳಿಂದ ರಾಜಗೃಹವು ನಿನಾದಿತವಾಗಿದ್ದಿತು.

ರಾಜಗೃಹವು ಆನಂದಶೂನ್ಯವಾಗಿದ್ದಿತು. ಎಲ್ಲಿ ನೋಡಿದರೂ ಗೋಳು ಕರೆಯಿದ್ದಿತೇ ಹೊರತು ಕಾಂತಿಯೆಂಬುದೇ ಇರಲಿಲ್ಲ. ಆ ರಾಜಭವನವು–



ಉದ್ಯಾನದಿಂದ ರಹಿತವಾದ, ಜನಶೂನ್ಯವಾದ ಮತ್ತು ವಿಧ್ವಸ್ತವಾದ ಸರೋವರದಂತೆಯೇ ಕಾಣುತ್ತಿದ್ದಿತು. ಮೊದಲೇ ದುಃಖಿತನಾಗಿದ್ದ ವಿದುರನು ರಾಜಭವನವನ್ನು ನೋಡಿ ಅತ್ಯಂತ ದುಃಖಿತನಾದನು. ಸರ್ವಧರ್ಮಜ್ಞನಾದ ವಿದುರನು ವ್ಯಾಕುಲಗೊಂಡ ಅಂತಃಕರಣದಿಂದ ಕೂಡಿದವನಾಗಿ ಮಂದ-ಮಂದವಾಗಿ ನಿಟ್ಟುಸಿರುಬಿಡುತ್ತಾ ನಗರವನ್ನು ಪ್ರವೇಶಿಸಿದನು.

ಯುಯುತ್ಸುವೂ ಆ ರಾತ್ರಿಯನ್ನು ಹಸ್ತಿನಾಪುರದಲ್ಲಿದ್ದ ತನ್ನ ಅರಮನೆಯಲ್ಲಿಯೇ ಕಳೆದನು. ಯುದ್ಧದಿಂದ ಬದುಕಿ ಬಂದುದಕ್ಕಾಗಿ ಅವನ ಬಂಧು ಮಿತ್ರರು ಯುಯುತ್ಸುವನ್ನು ಅಭಿನಂದಿಸುತ್ತಿದ್ದರು. ಸುದುಃಖಿತನಾಗಿದ್ದ ವೈಶ್ಯಾಪುತ್ರನು ಪರಸ್ಪರವಾಗಿ ನಡೆದ ಭರತವಂಶೀಯರ ಯುದ್ಧದಿಂದ ಉಂಟಾದ ಅಪಾರಜನಕ್ಷಯವನ್ನು ನಿರಂತರವಾಗಿ ಯೋಚಿಸುತ್ತಾ ಸ್ವಲ್ಪವಾದರೂ ಹರ್ಷಯುಕ್ತನಾಗಲಿಲ್ಲ. (ದುಃಖಿತನಾಗಿಯೇ ಇದ್ದನು.)"

೨೯ನೆಯ ಅಧ್ಯಾಯವು ಮುಗಿಯಿತು.

**೧೯ನೆಯ ಸಂಪುಟವು ಮುಗಿಯಿತು.**

---

**ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ**
**ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥**
**ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।**
**ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥**

**ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।**
**ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥**

**ಕಾಯೇನ ವಾಚಾ ಮನಸೇನ್ದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।**
**ಕರೋಮಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**
**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥**

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ಶ್ರೀ ಸದ್ಗುರುಚರಣಾರವಿನ್ದಾರ್ಪಣಮಸ್ತು

ಓಂ ತತ್ಸತ್

# ೧೭ನೆಯ ದಿನದ ಯುದ್ಧದ ವಿಶ್ಲೇಷಣೆ

ಕರ್ಣಪರ್ವದ ೩೧ನೆಯ ಅಧ್ಯಾಯದಿಂದ ೯೬ನೆಯ ಅಧ್ಯಾಯದ ವರೆಗೂ ೧೭ನೆಯ ದಿನದ ಯುದ್ಧವರ್ಣನೆಯಿದೆ. ಕರ್ಣಪರ್ವದೊಡನೆ ೧೭ನೆಯ ದಿನದ ಯುದ್ಧವೂ ಮುಗಿಯುತ್ತದೆ. ಆದುದರಿಂದ ಈ ವಿಶ್ಲೇಷಣೆಯಲ್ಲಿ ೧೮ನೆಯ ಸಂಪುಟದಲ್ಲಿರುವ ಕಥಾವಸ್ತುವೂ ಸೇರುತ್ತದೆ.

೧೮ನೆಯ ಸಂಪುಟದಲ್ಲಿ ೩೧ನೆಯ ಅಧ್ಯಾಯ: ಕರ್ಣನು ಸೇನಾಪತಿ ಯಾದನಂತರ ಮೊದಲನೆಯ ದಿನದ ಯುದ್ಧದಲ್ಲಿ ಕೌರವರಿಗೆ ಹೆಚ್ಚಿನ ಫಲ ವೇನೂ ಲಭಿಸಲಿಲ್ಲ. ಇದರಿಂದಾಗಿ ಧೃತರಾಷ್ಟ್ರನಿಗೆ ಬಹಳ ನಿರಾಸೆ ಯುಂಟಾಯಿತು. ದುರ್ಯೋಧನನು ಭಾವಿಸಿದ್ದಂತೆ ಧೃತರಾಷ್ಟ್ರನೂ ಕರ್ಣ ನೊಬ್ಬನೇ ತಮಗೆ ಜಯಗಳಿಸಿಕೊಡುವನೆಂದು ಭಾವಿಸಿದ್ದನು. ನಿರಾಸೆ ಗೊಂಡ ಧೃತರಾಷ್ಟ್ರನು ಅಧ್ಯಾಯದ ಪ್ರಾರಂಭದಲ್ಲಿ ಅರ್ಜುನನನ್ನೇ ಹೊಗಳುತ್ತಾನೆ. ತನ್ನ ಮಗ ದುರ್ಯೋಧನ ಮತ್ತು ಸೈನಿಕರು ಮುಂದೇನು ಮಾಡಿದರೆಂದು ಪ್ರಶ್ನಿಸುತ್ತಾನೆ. ಆಗ ಸಂಜಯನು ಶಿಬಿರದಲ್ಲಿ ಅಂದು ರಾತ್ರಿ ನಡೆದ ವೃತ್ತಾಂತವನ್ನು ತಿಳಿಸುತ್ತಾನೆ. ದುರ್ಯೋಧನನಿಗೆ ಸಮಾಧಾನ ವಾಗುವ ರೀತಿಯಲ್ಲಿ ಶತ್ರುಗಳನ್ನು ಸಂಹರಿಸಲಿಲ್ಲವೆಂಬುದು ಕರ್ಣನಿಗೂ ಗೊತ್ತು. ಅದಕ್ಕೆ ಕೃಷ್ಣಸಾಚಿವ್ಯ ಮತ್ತು ಅರ್ಜುನನ ಹಸ್ತಲಾಘವ–ಎರಡನ್ನೇ ಕಾರಣಗಳನ್ನಾಗಿ ಸೂಚಿಸಿ ಮರುದಿನ ಚೆನ್ನಾಗಿ ಯುದ್ಧಮಾಡುವುದಾಗಿ ಆಶ್ವಾಸನೆನೀಡುತ್ತಾನೆ.

ಬೆಳಗಾಗುತ್ತಲೇ ದುರ್ಯೋಧನನು ಕರ್ಣನನ್ನು ಸ್ಮರಿಸುತ್ತಾನೆ. ಆ ಮಾತನ್ನು ಕೇಳಿದೊಡನೆಯೇ ಧೃತರಾಷ್ಟ್ರನಿಗೆ ಕೋಪವು ಉಕ್ಕೇರಿಬರುತ್ತದೆ. ಕರ್ಣನ ಪರಾಕ್ರಮವನ್ನು ಒಂದು ದಿವಸ ಒರೆಹಚ್ಚಿಯೂ ಪುನಃ ಅವನನ್ನೇ ಆಶ್ರಯಿಸಿದುದು ಏಕೆಂದು ಧೃತರಾಷ್ಟ್ರನು ಪ್ರಶ್ನಿಸುತ್ತಾನೆ. ಸಂಜಯನು ಮಾತನಾಡುತ್ತಾ ಎಲ್ಲಕ್ಕೂ 'ನೀನೇ ಹೊಣೆ' ಎಂಬುದನ್ನು ವಿಶದೀಕರಿಸಿ ರಾಜನಿಗೆ ಮನಗಾಣಿಸುತ್ತಾನೆ. ಪ್ರಾತಃಕಾಲದಲ್ಲಿ ದುರ್ಯೋಧನನ ಬಳಿಗೆ ಬಂದ ಕರ್ಣನು ಹದಿನೇಳನೆಯ ದಿನದ ಯುದ್ಧದಲ್ಲಿ ಅರ್ಜುನನನ್ನು ಸಂಹರಿಸು ವುದಾಗಿ ಪ್ರತಿಜ್ಞೆಮಾಡುತ್ತಾನೆ. ಇಲ್ಲಿ ಸಂದರ್ಭಾನುಸಾರವಾಗಿ ಕರ್ಣನು

ತನ್ನ ಆಧಿಕ್ಯವನ್ನೂ, ತನಗೂ ಮತ್ತು ಅರ್ಜುನನಿಗೂ ಇರುವ ಸಾಮ್ಯವನ್ನೂ ಹೇಳುತ್ತಾನೆ. ಕೆಲವು ವಿಷಯಗಳಲ್ಲಿ ಮಾತ್ರವೇ ತನಗೆ ನ್ಯೂನತೆ ಯಿರುವುದೆಂದು ಹೇಳುತ್ತಾನೆ. ಶ್ರೀಕೃಷ್ಣನಂತಹ ಸಾರಥಿಯು ತನಗಿಲ್ಲ ವೆನ್ನುತ್ತಾನೆ. ಶಲ್ಯನೇ ತನಗೆ ಸಾರಥಿಯಾಗಬೇಕೆಂದೂ ಹೇಳುತ್ತಾನೆ. ಶಲ್ಯನನ್ನು ಸಾರಥಿಯನ್ನಾಗಿ ಕಳುಹಿಸಿಕೊಟ್ಟರೆ ವಿಜಯದಲ್ಲಿ ಸಂಶಯವೇ ಇಲ್ಲವೆನ್ನುತ್ತಾನೆ.

**ಏವಂ ಕೃತೇ ರಥಸ್ಥೋಽಹಂ ಗುಣೈರಭ್ಯಧಿಕೋಽರ್ಜುನಾತ್ ।**
**ಭವೇ ಯುಧಿ ಜಯೇಯಂ ಚ ಫಾಲ್ಗುನಂ ಕುರುಸತ್ತಮ ॥೬೫॥**

ಹಾಗೆಯೇ ಆಗಲೆಂದು ಹೇಳಿ ದುರ್ಯೋಧನನು ಶಲ್ಯನ ಬಳಿಗೆ ಹೋಗುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೩೨ನೆಯ ಅಧ್ಯಾಯ: ದುರ್ಯೋಧನನು ಶಲ್ಯನೊಡನೆ ನಯ-ವಿನಯಗಳಿಂದಲೇ ಮಾತನಾಡುತ್ತಾನೆ. ಶಲ್ಯನನ್ನು ಕರ್ಣನ ಸಾರಥ್ಯಕ್ಕೆ ಒಪ್ಪಿಸುವುದು ಕಷ್ಟವೆಂಬುದು ದುರ್ಯೋಧನನಿಗೂ ತಿಳಿದಿದ್ದಿತು. ಶ್ರೀಕೃಷ್ಣನು ಅರ್ಜುನನಿಗೆ ಸಾರಥ್ಯಮಾಡುತ್ತಿರುವಂತೆ ಶಲ್ಯನು ಕರ್ಣನಿಗೆ ಸಾರಥ್ಯಮಾಡಬೇಕೆಂದು ಹೇಳುವಾಗ ದುರ್ಯೋಧನನು ಶಲ್ಯನನ್ನು ಶ್ರೀಕೃಷ್ಣನಿಗೆ ಹೋಲಿಸುತ್ತಾ ಮಾತನಾಡುತ್ತಾನೆ. ಆದರೆ ದುರ್ಯೋಧನನ ಮಾತಿನಿಂದ ಶಲ್ಯನಿಗೆ ಕೋಪವೇ ಬರುತ್ತದೆ. ಈ ಸಂದರ್ಭದಲ್ಲಿ ವರ್ಣಾಶ್ರ ಮದ ವ್ಯವಸ್ಥೆಯನ್ನು ಶಲ್ಯನು ಸಂಕ್ಷೇಪವಾಗಿ ಹೇಳುತ್ತಾನೆ. ಸೂತರು ಬ್ರಾಹ್ಮಣ-ಕ್ಷತ್ರಿಯರಿಗೆ ಪರಿಚಾರಕರೆಂಬುದು ಶಲ್ಯನ ಅಭಿಪ್ರಾಯವಾಗಿರು ತ್ತದೆ. ತನಗೆ ಅವಮಾನವಾಯಿತೆಂದೂ ತಾನು ತನ್ನ ದೇಶಕ್ಕೆ ಹೊರಟು ಹೋಗುವೆನೆಂದೂ ಹೇಳಿ ಶಲ್ಯನು ಹೊರಟೇಬಿಡುತ್ತಾನೆ. ಆ ಸಮಯದಲ್ಲಿ ದುರ್ಯೋಧನನು ಹೇಳುವ ಯುಕ್ತಿಯುಕ್ತವಾದ ಮಾತುಗಳು ನಿಶ್ಚಯ ವಾಗಿಯೂ ಹೃದಯಂಗಮವಾಗಿವೆ. 'ನೀನು ಕೃಷ್ಣನಿಗಿಂತಲೂ ಅಧಿಕ ನಾದವನು'–ಎಂದು ದುರ್ಯೋಧನನು ಹೇಳುವ ಮಾತು ಶಲ್ಯನಿಗೆ ಆಪ್ಯಾಯಮಾನವಾಗುತ್ತದೆ. ಆದರೂ ಒಂದು ನಿಬಂಧನೆಯೊಡನೆ ಕರ್ಣನ ಸಾರಥ್ಯಮಾಡಲು ಶಲ್ಯನು ಒಪ್ಪಿಕೊಳ್ಳುತ್ತಾನೆ. ಆ ನಿಬಂಧನೆಯನ್ನು

ಕರ್ಣ-ದುರ್ಯೋಧನರಿಬ್ಬರೂ ಒಪ್ಪಿಕೊಳ್ಳುತ್ತಾರೆ. **ತಥೇತಿ ರಾಜಪುತ್ರಸ್ತೇ ಸಹ ಕರ್ಣೇನ ಭಾರತ** । ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ.

೩೩ನೆಯ ಅಧ್ಯಾಯ: ಇದು ತ್ರಿಪುರಾಸುರಸಂಹಾರಾಧ್ಯಾಯ. ಕಥೆಯ ಮುಖ್ಯವಸ್ತು ಶಿವನಿಗಿಂತಲೂ ಅಧಿಕನಾದ ಬ್ರಹ್ಮನು ತ್ರಿಪುರಾಸುರಸಂಹಾರ ಕಾಲದಲ್ಲಿ ಶಿವನಿಗೆ ಸಾರಥ್ಯಮಾಡಿದನೆಂಬುದು. ರಥಿಗಳಿಗಿಂತಲೂ ಸಾರಥಿಗಳೇ ಅಧಿಕರಾಗಿರುತ್ತಾರೆಂಬುದಕ್ಕೆ ನಿದರ್ಶನವನ್ನು ಕೊಡುವ ಸಲುವಾಗಿ ದುರ್ಯೋಧನನು ಈ ಕಥೆಯನ್ನು ಹೇಳುತ್ತಾನೆ. ದ್ರೋಣಪರ್ವದ ೧೦೨ನೆಯ ಅಧ್ಯಾಯದಲ್ಲಿ ಈ ಕಥೆಯೇ ಸೂಕ್ಷ್ಮರೂಪದಲ್ಲಿ ಬಂದಿದೆ. ಬ್ರಹ್ಮನು ಸಾರಥಿಯಾಗಿದ್ದನೆಂದು ಅಲ್ಲಿಯೂ ಇದ್ದರೂ **ಕೃತ್ವೋಙ್ಕಾರಂ ಪ್ರತೋದಂ ಚ ಬ್ರಹ್ಮಾಣಂ ಚೈವ ಸಾರಥಿಮ್** (೭೬) ಬ್ರಹ್ಮನು ಶಂಕರನಿಗಿಂತಲೂ ಅಧಿಕನೆಂಬ ಪ್ರಸ್ತಾಪ ಅಲ್ಲಿ ಬಂದಿರುವುದಿಲ್ಲ. ಶಿವನ ರಥದ ಕಲ್ಪನೆಯಲ್ಲಿಯೂ ಎರಡು ಕಡೆಯಲ್ಲಿಯೂ ವ್ಯತ್ಯಾಸಗಳಿವೆ. ಈ ಅಧ್ಯಾಯದಲ್ಲಿ ಬಂದಿರುವ ಇಂದ್ರಾದಿಗಳು ಮಾಡುವ ಶಿವಸ್ತೋತ್ರವು ಹೃದಯಂಗಮವಾಗಿದೆ. ಈ ಸ್ತೋತ್ರದೊಡನೆ ಅಧ್ಯಾಯವು ಮುಗಿಯುತ್ತದೆ.

೩೪ನೆಯ ಅಧ್ಯಾಯ: ತ್ರಿಪುರಾಸುರಸಂಹಾರಕಥೆಯೇ ಈ ಅಧ್ಯಾಯದಲ್ಲಿಯೂ ಮುಂದುವರಿದಿದೆ. ಈ ಅಧ್ಯಾಯದಲ್ಲಿ ಶಿವನ ರಥದ ವರ್ಣನೆಯಿದೆ. ಈ ಅಧ್ಯಾಯದ ೯೬ನೆಯ ಶ್ಲೋಕದಿಂದ ೧೦೬ನೆಯ ಶ್ಲೋಕಗಳವರೆಗೆ ಯಥಾವತ್ತಾದ ಅರ್ಥವನ್ನೇನೋ ಕೊಡಲಾಗಿದೆ. ಆದರೆ ಆ ಪ್ರಕರಣವನ್ನು ಅರ್ಥಮಾಡಿಕೊಂಡು ಅನುವಾದಮಾಡಲು ಸಾಧ್ಯವಾಗಲಿಲ್ಲ. ಈಶ್ವರನ ರಥದ ಮೇಲ್ಭಾಗದಲ್ಲಿ ವೃಷಭನು ಧ್ವಜದಲ್ಲಿರುತ್ತಾನೆ. ಶಿವನಿಗೆ ವೃಷಭಧ್ವಜನೆಂದೇ ಹೆಸರು. ವಿಷ್ಣುವು ಬಾಣರೂಪದಲ್ಲಿರುತ್ತಾನೆ. ಈ ವಿಷಯವು ಪುರಾಣಾಂತರಗಳಲ್ಲಿಯೂ ಇದೆ. ಧನುಸ್ಸಿನ ಅಲುಗಾಟದ ಕ್ಷೋಭೆಯಿಂದ ರಥವು ಕುಸಿದುದು; ಬಾಣದಲ್ಲಿದ್ದ ವಿಷ್ಣುವು ವೃಷಭನಾಗಿ ರಥವನ್ನು ಮೇಲೆತ್ತಿದುದು; ವೃಷಭದ ಮೇಲೂ ಕುದುರೆಯ ಬೆನ್ನಿನ ಮೇಲೂ ಕುಳಿತಿದ್ದ ರುದ್ರನು ದಾನವರನ್ನು ನೋಡಿದುದು; ಕುದುರೆಗಳ ಸ್ತನಗಳನ್ನು ಕಿತ್ತುದು; ವೃಷಭದ ಗೊರಸುಗಳನ್ನು ಎರಡಾಗಿ ಸೀಳಿದುದು.

(೧೦೪-೧೦೫) ರಥದಲ್ಲಿ ಕುಳಿತಿದ್ದವನು ಕುದುರೆಯ ಮೇಲೂ ವೃಷಭದ ಮೇಲೂ ಕಾಲಿಟ್ಟುದೇಕೆ? ಗೊರಸುಗಳನ್ನು ಸೀಳಲೂ ಅಥವಾ ಸ್ತನಗಳನ್ನು ಕೀಳಲೂ ಕಾರಣವೇನು? ಈ ಪ್ರಶ್ನೆಗಳಿಗೆ ಉತ್ತರವು ಸಿಕ್ಕುವುದಿಲ್ಲ. ಆಧ್ಯಾತ್ಮಿಕವಾಗಿ ಯಾವುದಾದರೂ ಅರ್ಥವಿರುವುದೇ ಎಂಬುದು ತಿಳಿಯದು. ಈ ಶ್ಲೋಕಗಳೂ ಮತ್ತು ಈ ಎರಡು ಅಧ್ಯಾಯಗಳಲ್ಲಿರುವ ಅನೇಕಶ್ಲೋಕಗಳೂ ಭಂ. ರಿ. ಇನ್‌ಸ್ಟಿಟ್ಯೂಟ್‌ನವರು ಪ್ರಕಟಿಸಿರುವ ಪ್ರತಿಯಲ್ಲಿರುವುದಿಲ್ಲ. ಈ ಎರಡು ಅಧ್ಯಾಯಗಳೂ ಅವರ ಪುಸ್ತಕದಲ್ಲಿ ಒಂದೇ ಅಧ್ಯಾಯವಾಗಿದ್ದು ೧೬೧ ಶ್ಲೋಕಗಳನ್ನೊಳಗೊಂಡಿದೆ. ಇಲ್ಲಿ ಈ ಎರಡು ಅಧ್ಯಾಯಗಳ ಶ್ಲೋಕಗಳ ಮೊತ್ತ ೨೨೬. ಶಲ್ಯನು ಕರ್ಣನ ಸಾರಥ್ಯವನ್ನು ಮಾಡುವುದಾಗಿ ಒಪ್ಪಿಕೊಂಡನಂತರ ಈ ಪ್ರಸಂಗ ಏಕೆ ಬಂದಿತೆಂಬುದು ಅರ್ಥವಾಗುವುದಿಲ್ಲ. ತ್ರಿಮೂರ್ತಿಗಳಲ್ಲಿ ಯಾವ ಭೇದವಿರದಿದ್ದರೂ ಶಿವನೇ ತನಗಿಂತಲೂ ಬ್ರಹ್ಮನು ಅಧಿಕನೆಂದು ಹೇಳಿಕೊಂಡುದು ಅಚ್ಚರಿಯಾಗಿ ಕಾಣುತ್ತದೆ. ತ್ರಿಪುರಾಸುರರನ್ನು ಸಂಹಾರಮಾಡಲು ಶಿವನೊಬ್ಬನಿಗಲ್ಲದೇ ಮತ್ತಾರಿಂದಲೂ ಸಾಧ್ಯವಾಗುವುದಿಲ್ಲ. ಇದನ್ನು ಬ್ರಹ್ಮನೇ ಹೇಳುತ್ತಾನೆ: ನ ಚ ಸ್ಥಾಣುಮೃತೇ ಶಕ್ತೋ ಭೇತ್ತುಮೇಕೇಷುಣಾ ಪುರಃ (೪೪) ೩೪ನೆಯ ಅಧ್ಯಾಯದ ೨ನೆಯ ಶ್ಲೋಕದಲ್ಲಿ ಬ್ರಹ್ಮನೇ ಹೀಗೆ ಹೇಳುತ್ತಾನೆ. “ನಿನ್ನ ಆದೇಶಾನುಸಾರವಾಗಿ ಪ್ರಜಾಪತಿಯ ಸ್ಥಾನವನ್ನು ವಹಿಸಿಕೊಂಡಿರುವ ನಾನು ದಾನವರಿಗೆ ಮಹತ್ತರವಾದ ವರವೊಂದನ್ನು ದಯಪಾಲಿಸಿದೆನು.” ಆದುದರಿಂದ ಯಾರು ಹೆಚ್ಚು ಯಾರು ಕಡಿಮೆ ಎಂಬ ಜಿಜ್ಞಾಸೆಗೆ ಅವಕಾಶವೇ ಇಲ್ಲ. ೩೩-೩೪-೩೫ ಈ ಮೂರು ಅಧ್ಯಾಯಗಳೂ ಬಗೆಹರಿಸಲಾಗದ ಹಲವಾರು ವಿರೋಧಾಭಾಸಗಳಿಂದ ಕೂಡಿವೆ. ಈ ಅಧ್ಯಾಯಗಳನ್ನು ಬಿಟ್ಟು ಓದಿದರೂ ಕಥೆಯ ಓಟದಲ್ಲಾಗಲೀ ವಸ್ತುನಿರೂಪಣೆಯಲ್ಲಾಗಲೀ ಲೋಪವೇನೂ ಕಂಡುಬರುವುದಿಲ್ಲ. ಆದರೆ ಎಲ್ಲ ಪುಸ್ತಕಗಳಲ್ಲಿಯೂ ಈ ಅಧ್ಯಾಯಗಳಿವೆ. ಭಂ. ರಿ. ಇನ್‌ಸ್ಟಿಟ್ಯೂಟಿನ ಪುಸ್ತಕದಲ್ಲಿ ಹಿಂದೆ ನಿರೂಪಿಸಿರುವಂತೆ ಶ್ಲೋಕಗಳ ಸಂಖ್ಯೆಯು ಕಡಿಮೆಯಾಗಿರುತ್ತದೆ. ಇಷ್ಟು ಮಾತ್ರ ವ್ಯತ್ಯಾಸ.

ಈ ಪ್ರಕರಣವು ಮುಗಿದನಂತರ ಮುಂದೆ ಪರಶುರಾಮನು ಈಶ್ವರನನ್ನು ಕುರಿತು ತಪಸ್ಸುಮಾಡಿದುದನ್ನು ದುರ್ಯೋಧನನೇ ಹೇಳುತ್ತಾನೆ.

ಮಹಾಮಹಿಮನಾದ ಪರಶುರಾಮನೇ ಕರ್ಣನಿಗೆ ವಿದ್ಯೋಪದೇಶಮಾಡಿರುವಾಗ ಕರ್ಣನ ಮಹತ್ತ್ವವೆಷ್ಟೆಂಬುದನ್ನು ಪ್ರಕಟಪಡಿಸುವ ಆಶಯವು ದುರ್ಯೋಧನನದಾಗಿರುತ್ತದೆ. ಅದೇ ಸಂದರ್ಭದಲ್ಲಿ ದುರ್ಯೋಧನನು ಕರ್ಣನು ಸೂತಕುಲದಲ್ಲಿ ಹುಟ್ಟಿದವನಲ್ಲವೆಂದೂ ಕ್ಷತ್ರಿಯವಂಶದಲ್ಲಿಯೇ ಹುಟ್ಟಿದವನಾಗಿರಬೇಕೆಂದೂ ಅನುಮಾನದಿಂದ ಹೇಳುತ್ತಾನೆ. ಆದರೆ ಪರಶುರಾಮನು ಕರ್ಣನಿಗೆ ಶಾಪವಿತ್ತುದನ್ನು ಇಲ್ಲಿ ಪ್ರಸ್ತಾಪಿಸುವುದಿಲ್ಲ. ಕರ್ಣನ ಪ್ರಶಂಸೆಯೊಂದಿಗೆ ಈ ಅಧ್ಯಾಯವು ಮುಗಿಯುತ್ತದೆ.

೩೫ನೆಯ ಅಧ್ಯಾಯ:- ಈ ಅಧ್ಯಾಯದಲ್ಲಿ ಒಂದು ಸ್ವಾರಸ್ಯವಿದೆ. ೩೨ನೆಯ ಅಧ್ಯಾಯದಲ್ಲಿಯೇ ಶಲ್ಯನು ಕರ್ಣನ ಸಾರಥ್ಯಮಾಡುವುದಾಗಿ ಒಪ್ಪಿದನು. ಮುಂದೆ ಶಲ್ಯನನ್ನು ಮತ್ತಷ್ಟು ಪ್ರೋತ್ಸಾಹಿಸಲು ದುರ್ಯೋಧನನು ಪರಮಶ್ರೇಷ್ಠನಾದ ಬ್ರಹ್ಮನು ಅವನಿಗಿಂತ ಅಧಿಕನಲ್ಲದ ಶಿವನಿಗೆ ಸಾರಥಿಯಾದ ಕಥೆಯನ್ನೂ ಹೇಳಿದನು. ಪ್ರಕರಣವು ಅಲ್ಲಿಗಾದರೂ ಮುಗಿಯಬೇಕಾಗಿದ್ದಿತು. ಆದರೆ ಈ ಅಧ್ಯಾಯದಲ್ಲಿ ಪುನಃ ಪ್ರಕರಣವು ಪ್ರಾರಂಭವಾದ ರೀತಿಯಲ್ಲಿದೆ. ಶಲ್ಯನು ಒಂದು ಸಂದೇಹವನ್ನು ವ್ಯಕ್ತಪಡಿಸುತ್ತಾನೆ. “ಕರ್ಣನು ಅರ್ಜುನನನ್ನು ಸಂಹರಿಸಿದರೆ ಶಂಖ-ಚಕ್ರ-ಗದಾಪಾಣಿಯಾದ ಶ್ರೀಕೃಷ್ಣನು ನಿನ್ನ ಸೈನ್ಯವನ್ನು ದಹಿಸುತ್ತಾನೆ. ಅವನನ್ನೆದುರಿಸಿ ನಿನ್ನ ಸೈನ್ಯದಲ್ಲಿ ಯಾರೂ ನಿಲ್ಲಲಾರರು.” (೧೦-೧೧) ಇದರಲ್ಲಿ ಕರ್ಣನನ್ನು ಅವಮಾನಗೊಳಿಸಿದ ಪ್ರಸಂಗವೇನೂ ಕಾಣುವುದಿಲ್ಲ. ಆದರೂ ಸಹ ದುರ್ಯೋಧನನು ‘ಕರ್ಣನನ್ನು ಅವಮಾನಿಸಬೇಡ’ ಎಂದು ಪ್ರಾರಂಭಿಸಿ ಅವನ ಸಾಹಸಕಾರ್ಯಗಳನ್ನು ಪಟ್ಟಿಮಾಡಿ ಹೇಳುತ್ತಾನೆ. ಈ ಪ್ರಸಂಗದಲ್ಲಿಯೇ ಭೀಮಸೇನನನ್ನೂ ‘ಹೊಟ್ಟೆಬಾಕ’ ಎಂದು ನಿಂದಿಸಿದ ಕರ್ಣನ ಧೀರತ್ವವನ್ನೂ ಉದಾಹರಿಸುತ್ತಾನೆ. ಇಂತಹ ಪರಮಬಲಶಾಲಿಯನ್ನು ಪಾಂಡವರು ಹೇಗೆ ಜಯಿಸುತ್ತಾರೆ? **ತಂ ಕಥಂ ಪಾಣ್ಡವಾ ಯುದ್ಧೇ ವಿಜೇಷ್ಯನ್ತಿ ಮಹಾರಥಮ್** (೧೨) ಎಂದು ದುರ್ಯೋಧನನು ಪ್ರಶ್ನಿಸುತ್ತಾನೆ. ಇಲ್ಲಿ ಶಲ್ಯನ ಪ್ರಶ್ನೆ–‘ಕರ್ಣನು ಅರ್ಜುನನನ್ನು ಕೊಂದನಂತರ ಕೃಷ್ಣನು ಯುದ್ಧಕ್ಕೆ ನಿಂತರೆ ಅವನನ್ನು ಯಾರು ಎದುರಿಸುತ್ತಾರೆ?’– ಎಂಬುದು. ಇದಕ್ಕೆ ದುರ್ಯೋಧನನ ಉತ್ತರ–‘ಕರ್ಣನು ಪಾಂಡವರನ್ನು

ಜಯಿಸುತ್ತಾನೆ' -ಎಂಬುದು. ಇದು ಸ್ವಲ್ಪ ಅಸಂಗತವಾಗಿ ಕಾಣುತ್ತದೆ. 'ಕರ್ಣನೇ ಶ್ರೀಕೃಷ್ಣನನ್ನು ಎದುರಿಸಬಲ್ಲನು' ಎಂದು ಹೇಳಬಹುದಾಗಿದ್ದಿತು. ಒಂದು ವೇಳೆ ಶ್ರೀಕೃಷ್ಣನಿಂದ ಕರ್ಣನು ಹತನಾದರೆ 'ನೀನೇ ಶ್ರೀಕೃಷ್ಣನನ್ನು ಎದುರಿಸುವೆ' ಎಂದಾದರೂ ಹೇಳಬಹುದಾಗಿದ್ದಿತು. ಮುಂದೆ ಮಾತನಾಡುವಾಗ ದುರ್ಯೋಧನನು ಶ್ರೀಕೃಷ್ಣನನ್ನು ಕರ್ಣನು ಎದುರಿಸುವನೆಂದು ಹೇಳದಿದ್ದರೂ 'ಅರ್ಜುನನು ಹತನಾಗಿ ಶ್ರೀಕೃಷ್ಣನು ಪಾಂಡವಬಲದ ನಾಯಕತ್ವವನ್ನು ವಹಿಸುವುದಾದರೆ ಕರ್ಣನು ಹತನಾದ ನಂತರ ನೀನು ನಮ್ಮ ಸೈನ್ಯದ ನಾಯಕತ್ವವನ್ನೇಕೆ ವಹಿಸಬಾರದು?' ಎಂದೆನ್ನುತ್ತಾನೆ. (೨೫) ಒಟ್ಟಿನಲ್ಲಿ ಶಲ್ಯನು ಶ್ರೀಕೃಷ್ಣನಿಗೆ ಸಮನೆಂದು ತಾತ್ಪರ್ಯ ಬರುವ ಶ್ಲೋಕಗಳು ಇಲ್ಲಿವೆ. ಆದರೆ ೩೬ನೆಯ ಅಧ್ಯಾಯದ ೬೦-೬೧-೬೨ನೆಯ ಶ್ಲೋಕಗಳಲ್ಲಿ ಸ್ಪಷ್ಟವಾಗಿ ಹೇಳಿರುವಂತೆ ಶ್ರೀಕೃಷ್ಣನಿಗಿಂತಲೂ ಶಲ್ಯನು ಅಧಿಕನಾದವನೆಂಬ ಅರ್ಥಬರುವ ಶ್ಲೋಕಗಳು ಇಲ್ಲಿಲ್ಲ. ಆದರೂ ಶಲ್ಯನು ಅಲ್ಲಿ ಹೇಳಿದ ಈ ಶ್ಲೋಕಗಳನ್ನೇ ಇಲ್ಲಿಯೂ ಹೇಳುತ್ತಾನೆ. ಸ್ವಲ್ಪವೂ ವ್ಯತ್ಯಾಸವಿಲ್ಲದೆಯೇ ಹೇಳುತ್ತಾನೆ. ಅಲ್ಲಿ ಹೇಳಿರುವ ಸಂಜಯನ ಶ್ಲೋಕವೇ ಇಲ್ಲಿಯೂ ಪುನರಾವರ್ತಿತವಾಗಿದೆ. ಪ್ರಕರಣವು ಇಲ್ಲಿಗೂ ಮುಗಿಯುವುದಿಲ್ಲ. ಮದ್ರರಾಜನು ಮನಃಪೂರ್ವಕವಾಗಿ ಸಾರಥ್ಯಮಾಡುವ ವಿಷಯದಲ್ಲಿ ಕರ್ಣನು ಸಂಶಯವನ್ನೇ ವ್ಯಕ್ತಪಡಿಸುತ್ತಾನೆ. ಪುನಃ ದುರ್ಯೋಧನನು ಶಲ್ಯನನ್ನು ಪ್ರಾರ್ಥಿಸುತ್ತಾನೆ. ಆಗ ಪುನಃ ಶಲ್ಯನು ಕರ್ಣನ ಸಾರಥ್ಯಮಾಡುವುದಾಗಿ ಆಶ್ವಾಸನೆನೀಡುತ್ತಾನೆ. ಶಲ್ಯನು ಸಾಧಾರಣ ಮನುಷ್ಯನಲ್ಲ; ಕೊಟ್ಟಮಾತಿಗೆ ತಪ್ಪುವುದು ಅವನ ಸ್ವಭಾವವಲ್ಲ. ಮೇಲಾಗಿ ತಾನು ಕರ್ಣನ ಸಾರಥ್ಯವನ್ನು ವಹಿಸಲೇಬೇಕೆಂಬುದು ಅವನಿಗೆ ಈಗಾಗಲೇ ತಿಳಿದಿರುತ್ತದೆ. ಈ ಪಾಠದಲ್ಲಿ ಸಾಂಗತ್ಯವೂ ಇಲ್ಲ. ಆದುದರಿಂದ ಈ ಪ್ರಕರಣವೂ ಹೆಚ್ಚಿನದಿರಬಹುದೆಂಬ ಭಾವನೆಯುಂಟಾಗುತ್ತದೆ.

೩೬ನೆಯ ಅಧ್ಯಾಯ: ಶಲ್ಯನು ಕರ್ಣನ ಸಾರಥ್ಯವನ್ನು ವಹಿಸಿಕೊಂಡುದಕ್ಕಾಗಿ ದುರ್ಯೋಧನನಿಗೆ ಬಹಳ ಸಂತೋಷವಾಗುತ್ತದೆ. ಕರ್ಣನು ತನ್ನ ಸಾರಥಿಗೆ ರಥವನ್ನು ಸಿದ್ಧಗೊಳಿಸಲು ಹೇಳುತ್ತಾನೆ. ರಥವು ಸಿದ್ಧವಾದೊಡನೆಯೇ ಅದಕ್ಕೆ ಪ್ರದಕ್ಷಿಣ-ನಮಸ್ಕಾರಗಳನ್ನು ಮಾಡಿ

ಮೊದಲು ಶಲ್ಯನನ್ನು ರಥಾರೋಹಣಮಾಡುವಂತೆ ಹೇಳಿ ಅನಂತರ ತಾನು ರಥಾರೋಹಣಮಾಡುತ್ತಾನೆ. ರಥಸ್ಥನಾದ ಕರ್ಣನಿಗೆ ಪುನಃ ದುರ್ಯೋಧನನು, ಭೀಷ್ಮ-ದ್ರೋಣರು ಮಾಡದಿದ್ದ ಕಾರ್ಯವನ್ನು ಮಾಡಬೇಕಾಗಿ ಹೇಳುತ್ತಾನೆ. 'ಧರ್ಮರಾಜನನ್ನು ಜೀವಗ್ರಹಣಮಾಡು ಅಥವಾ ಉಳಿದವರಲ್ಲಿ ಯಾರೊಬ್ಬರನ್ನಾದರೂ ಸಂಹರಿಸು' ಎನ್ನುತ್ತಾನೆ ದುರ್ಯೋಧನ. ಪರಮೋತ್ಸಾಹದಿಂದಲೇ ಕರ್ಣನು ಯುದ್ಧಕ್ಕೆ ಹೊರಡುತ್ತಾನೆ. ಸಾರಥಿಯ ಸ್ಥಾನದಲ್ಲಿ ಕುಳಿತಿದ್ದ ಶಲ್ಯನೊಡನೆ ಕರ್ಣನು ವೀರೋಚಿತವಾದ ಮಾತುಗಳನ್ನಾಡುತ್ತಾನೆ. ಶಲ್ಯನು ಅವನ ಮಾತುಗಳನ್ನು ಖಂಡಿಸುತ್ತಾನೆ. ಕರ್ಣನು ಶಲ್ಯನ ಮಾತುಗಳನ್ನು ಗಣನೆಗೆ ತೆಗೆದುಕೊಳ್ಳದೇ ಮುಂದೆ ಹೋಗುವಂತೆ ಶಲ್ಯನಿಗೆ ಹೇಳುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೩೭ನೆಯ ಅಧ್ಯಾಯ: ಕೌರವರ ಕಡೆಯಲ್ಲಿ ಅಪಶಕುನಗಳಾಗುತ್ತವೆ. ಆದರೆ ಕೌರವಯೋಧರು ಇದನ್ನು ಲೆಕ್ಕಿಸುವುದಿಲ್ಲ. ಮುಂದೆ ಪುನಃ ಕರ್ಣನು ಶಲ್ಯನೊಡನೆ ವೀರೋಚಿತವಾದ ಮಾತುಗಳನ್ನೇ ಆಡಿಕೊಂಡು ಹೋಗುತ್ತಾನೆ. ಕರ್ಣನ ತೇಜೋಭಂಗಮಾಡಬೇಕೆಂದು ಮೊದಲೇ ನಿಶ್ಚಯಿಸಿದ್ದ ಶಲ್ಯನು ಕರ್ಣನನ್ನು ಹಳಿದು ಮಾತನಾಡಿ ಅರ್ಜುನನನ್ನು ಶ್ಲಾಘಿಸುತ್ತಾನೆ. ಕರ್ಣನು ಮೊದಲೇ ಶಲ್ಯನ ನಿಬಂಧನೆಗೆ ಒಪ್ಪಿದ್ದನಾದುದರಿಂದ ಅವನನ್ನು ಪ್ರತಿಭಟಿಸಿ ಮಾತನಾಡುವುದಿಲ್ಲ. 'ಅರ್ಜುನನು ಯುದ್ಧದಲ್ಲಿ ಗೆದ್ದರೆ ನಿನ್ನ ಮಾತಿಗೊಂದು ಬೆಲೆಯಿದೆ' ಎಂಬ ಧಾಟಿಯಲ್ಲಿ ಮಾತನಾಡಿ ಶಲ್ಯನಿಗೆ ಮುಂದೆ ಹೋಗುವಂತೆ ಹೇಳುತ್ತಾನೆ. ರಣರಂಗವನ್ನು ತಲುಪಿದೊಡನೆಯೇ ಕರ್ಣನು ಅರ್ಜುನನೆಲ್ಲಿರುವನೆಂದು ತಿಳಿಯಲು ತವಕಪಡುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೩೮ನೆಯ ಅಧ್ಯಾಯ: ಈ ಅಧ್ಯಾಯದ ಪೂರ್ತಿಯಾಗಿ ಸ್ವಾರಸ್ಯದ ಸಂಗತಿಯಿದೆ. ಕರ್ಣನು ಅರ್ಜುನನನ್ನು ಹುಡುಕಿಕೊಡುವವರಿಗೆ ಪಾರಿತೋಷಕಗಳನ್ನು ಕೊಡುವುದಾಗಿ ಘೋಷಿಸುತ್ತಾನೆ. ಅಧ್ಯಾಯಪೂರ್ತಿಯಾಗುವವರೆಗೂ ಇದೇ ವಿಷಯವೇ ಇದೆ. ರಣೋತ್ಸಾಹದಲ್ಲಿ ಹೀಗೆ ಮಾತನಾಡುವ ಸಾಧ್ಯತೆಯಿದೆ. ಆ ಸಮಯದಲ್ಲಿ ಅರ್ಜುನನು ಮತ್ತೊಂದು

ರಣರಂಗದಲ್ಲಿ ಯುದ್ಧಮಾಡುತ್ತಿದ್ದಿರಬಹುದು. ಅರ್ಜುನನು ಕರ್ಣನೊಡನೆ ಯುದ್ಧಕ್ಕೆ ಬರುವುದಿಲ್ಲವೆಂಬ ವಿಷಯವಿಲ್ಲ. ಅಂದು ಅರ್ಜುನನೊಡನೆ ಯುದ್ಧಮಾಡಲು ಕರ್ಣನ ಉತ್ಸಾಹವೆಷ್ಟಿತ್ತೆಂಬುದನ್ನು ಈ ಅಧ್ಯಾಯವು ಸೂಚಿಸುತ್ತದೆ.

೩೯ನೆಯ ಅಧ್ಯಾಯ: ಕರ್ಣನ ಉತ್ಸಾಹಪೂರ್ಣವಾದ ಮಾತುಗಳನ್ನು ನಿಜವಾದ ಮಾತಿನ ಅರ್ಥದಲ್ಲಿಯೇ ತೆಗೆದುಕೊಂಡು ಶಲ್ಯನು ಪುನಃ ಕರ್ಣನನ್ನು ಹಳಿಯುತ್ತಾನೆ. ನಿಬಂಧನೆಗೆ ಒಪ್ಪಿರುವುದರಿಂದ ಪರಸ್ಪರ ಘರ್ಷಣೆಗೆ ಅವಕಾಶಕೊಡಬಾರದೆಂಬುದು ಕರ್ಣನ ಅಭಿಪ್ರಾಯವಿದ್ದರೂ ಶಲ್ಯನ ಚುಚ್ಚುಮಾತುಗಳು ಕರ್ಣನನ್ನು ಸುಮ್ಮನಿರಿಸುವುದಿಲ್ಲ. 'ನೀನು ಹಿತಶತ್ರು' ಎಂದು ಶಲ್ಯನನ್ನು ಕರ್ಣನು ನಿಂದಿಸುತ್ತಾನೆ. ಅದಕ್ಕೆ ಪ್ರತಿಯಾಗಿ ಶಲ್ಯನು ಅತಿನಿಂದ್ಯವಾದ ಮಾತುಗಳನ್ನೇ ಆಡುತ್ತಾನೆ. ಅವನು ಆಡುವ ಒಂದೊಂದು ಮಾತೂ ಒಂದೊಂದು ಶಲ್ಯದಂತೆ ಕರ್ಣನ ಮರ್ಮಸ್ಥಳಗಳನ್ನು ಚುಚ್ಚುತ್ತಿರುತ್ತದೆ. ಅಧ್ಯಾಯದ ಕಡೆಯವರೆಗೂ ಶಲ್ಯನ ಇಂತಹ ಮಾತುಗಳೇ ಇವೆ.

೪೦ನೆಯ ಅಧ್ಯಾಯ: ಶಲ್ಯನಿಂದ ಇಷ್ಟು ನಿಷ್ಠುರವಾದ ಮಾತನ್ನು ಕೇಳಿದನಂತರ ಕರ್ಣನಿಗೆ ಬಾಯಿಮುಚ್ಚಿಕೊಂಡು ಕುಳಿತಿರಲು ಸಾಧ್ಯವಾಗುವುದಿಲ್ಲ. ತನ್ನ ಪರಾಕ್ರಮವೆಷ್ಟು? ಯಾವುದನ್ನು ಅವಲಂಬಿಸಿ ತಾನು ಅರ್ಜುನನೊಡನೆ ಯುದ್ಧಮಾಡಲು ಹೊರಟಿದ್ದೇನೆ?–ಎಂಬುದನ್ನು ಕರ್ಣನು ಸ್ಪಷ್ಟಪಡಿಸಿ ಹೇಳುತ್ತಾನೆ. ಇದೇ ಸಂದರ್ಭದಲ್ಲಿಯೇ ಅವನು ತನ್ನಲ್ಲಿರುವ ಸರ್ಪಾಸ್ತ್ರದ ವಿಷಯವನ್ನೂ ಶಲ್ಯನಿಗೆ ಹೊರಗೆಡಹುತ್ತಾನೆ. ಕೃಷ್ಣಾರ್ಜುನರನ್ನು ಕರ್ಣನು ಯಾವುದೇ ರೀತಿಯಲ್ಲಿಯೂ ತೆಗಳುವುದಿಲ್ಲ. 'ಮಹಾಮಹಿಮರಾದ ಅವರಿಬ್ಬರನ್ನೂ ಎದುರಿಸಿ ನಿಲ್ಲುವ ಪರಾಕ್ರಮವು ತನ್ನೊಬ್ಬನಿಗಲ್ಲದೆ ಮತ್ತಾರಿಗಿದೆ?' ಎಂದು ಶಲ್ಯನನ್ನು ಪ್ರಶ್ನಿಸುತ್ತಾನೆ. 'ನಾನು ಕೃಷ್ಣಾರ್ಜುನರಿಗೆ ಹೆದರುವುದಿಲ್ಲ. ಸಾವಿರ ಕೃಷ್ಣರನ್ನಾಗಲೀ ನೂರು ಅರ್ಜುನರನ್ನಾಗಲೀ ನಾನೊಬ್ಬನೇ ಸಂಹರಿಸುತ್ತೇನೆ. ನೀನು ಮಾತ್ರ ಬಾಯಿಮುಚ್ಚಿಕೊಂಡು ಮಾತನಾಡದೇ ಕುಳಿತಿರು'–ಎನ್ನುತ್ತಾನೆ ಕರ್ಣ.

ಮುಂದೆ ಕರ್ಣನು ವ್ಯಾಜಾಂತರದಿಂದ ಶಲ್ಯನನ್ನು ನಿಂದಿಸಲು ಉಪಕ್ರಮಿಸುತ್ತಾನೆ. ಮದ್ರದೇಶದ ಜನಗಳ ಕೆಟ್ಟಚಾಳಿಗಳನ್ನು ವಿವರಿಸಿ ಹೇಳುತ್ತಾ ಹೋಗುತ್ತಾನೆ. ಈಗಿನ ಪಾಶ್ಚಾತ್ಯದೇಶಗಳಲ್ಲಿರುವ ಸಾಮಾಜಿಕವ್ಯವಸ್ಥೆಯನ್ನೇ ಬಹುಮಟ್ಟಿಗೆ ಹೋಲುವ ವೇದಧರ್ಮವಿರುದ್ಧವಾದ ಸಾಮಾಜಿಕ ಸ್ಥಿತಿಯನ್ನು ಕರ್ಣನು ವರ್ಣಿಸುತ್ತಾನೆ. ಮದ್ರ-ಸಿಂಧು-ಸೌವೀರದೇಶಗಳ ಪ್ರಜೆಗಳ ದುರಾಚಾರಗಳನ್ನು ವಿವರಿಸಿ ಹೇಳಿದನಂತರ ತನ್ನ ಕರ್ತವ್ಯವನ್ನೂ ವಿವರಿಸಿ, ಮುಂದೆ ಮಾತನಾಡಿದರೆ ತಲೆಯನ್ನೇ ಒಡೆದುಬಿಡುವುದಾಗಿ ಕರ್ಣನು ಶಲ್ಯನನ್ನು ಎಚ್ಚರಿಸುತ್ತಾನೆ. ಕಡೆಗೆ ಮುಂದೆ ಹೋಗುವಂತೆ ಶಲ್ಯನಿಗೆ ಆಜ್ಞೆಮಾಡುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೪೧ನೆಯ ಅಧ್ಯಾಯ: ಮುಂದೆ ಮಾತನಾಡಿದರೆ ತಲೆಯನ್ನೇ ಕತ್ತರಿಸುವೆನೆಂದು ಕರ್ಣನು ಹೇಳಿದ್ದರೂ ಶಲ್ಯನು ಭಯಪಡುವುದಿಲ್ಲ. ಮದ್ರಕರ ನಿಂದನೆಗೆ ಎರಡೇ ಮಾತಿನಲ್ಲಿ ಉತ್ತರಕೊಟ್ಟು ಕಾಕ-ಹಂಸಗಳ ಕಥೆಯನ್ನು ಹೇಳುತ್ತಾನೆ. ಕಾಗೆಯು ಎಷ್ಟೇ ಬಡಾಯಿಕೊಚ್ಚಿದರೂ ಕಾರ್ಯಮಾಡಬೇಕಾಗಿ ಬಂದಾಗ ಹಂಸಕ್ಕೆ ಸಾಟಿಯಾಗಲಾರದೆಂಬ ಮುಖ್ಯಾಭಿಪ್ರಾಯವು ಈ ಕಥೆಯಲ್ಲಿದೆ. "ದುರ್ಯೋಧನನು ಕರ್ಣನನ್ನು ಚೆನ್ನಾಗಿ ಬೆಳೆಸಿ ಕೊಬ್ಬಿಸಿಬಿಟ್ಟಿದ್ದಾನೆ. ಕರ್ಣನು ಅರ್ಜುನನನ್ನು ಅಥವಾ ಪಾಂಡವರನ್ನು ಧ್ವಂಸಮಾಡಿಬಿಡುತ್ತಾನೆ–ಎಂಬುದೇ ಅವನ ಭಾವನೆಯಾಗಿದೆ. ಆದರೆ ಯುದ್ಧದಲ್ಲಿ ಕರ್ಣನ ಬಣ್ಣ ಬಯಲಾಗುತ್ತದೆ" ಎಂಬುದನ್ನು ಶಲ್ಯನು ಕಥೆಯ ಮೂಲಕ ಸ್ಪಷ್ಟಪಡಿಸುತ್ತಾನೆ. **ಉಚ್ಛಿಷ್ಟಭೋಜನಃ ಕಾಕೋ ಯಥಾ ವೈಶ್ಯಕುಲೇ ಪುರಾ। ಏವಂ ತ್ವಮುಚ್ಛಿಷ್ಟಭೃತೋ ಧಾರ್ತರಾಷ್ಟ್ರೈರ್ನ ಸಂಶಯಃ** (೭೨) ಎಂದು ಬಹುಸ್ಪಷ್ಟವಾಗಿಯೇ ಶಲ್ಯನು ಹೇಳುತ್ತಾನೆ. ಈ ಹಿಂದೆ ಕರ್ಣನು ಅರ್ಜುನನಿಂದ ಪರಾಜಿತನಾದ ಸಂದರ್ಭಗಳನ್ನೂ ಶಲ್ಯನು ಪಟ್ಟಿಮಾಡಿ ಹೇಳುತ್ತಾನೆ. ಕಟ್ಟಕಡೆಗೆ ಕೃಷ್ಣಾರ್ಜುನರಿಗೆ ಶರಣಾಗತನಾಗುವಂತೆ ಶಲ್ಯನು ಕರ್ಣನಿಗೆ ಸಲಹೆನೀಡುತ್ತಾನೆ. ನರಶ್ರೇಷ್ಠರಾದ ಕೃಷ್ಣಾರ್ಜುನರನ್ನು ಮಾತಿನ ಮೂಲಕವಾಗಿ ಅವಮಾನಿಸಲು ಹೋಗದೇ ಸುಮ್ಮನಿರಬೇಕೆಂದು ಕರ್ಣನಿಗೆ ಶಲ್ಯನು ಎಚ್ಚರಿಸುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೪೨ನೆಯ ಅಧ್ಯಾಯ: ಈ ಅಧ್ಯಾಯದಲ್ಲಿಯೂ ಕರ್ಣನು ತನ್ನ ಆತ್ಮ ಪ್ರಶಂಸೆಯನ್ನೇ ಮುಂದುವರಿಸುತ್ತಾನೆ. ಇದರ ಜೊತೆಗೆ ಪರಶುರಾಮನಿಂದ ಮತ್ತು ಬ್ರಾಹ್ಮಣನಿಂದ ಪ್ರಾಪ್ತವಾದ ಶಾಪದ ವಿಷಯವನ್ನೂ ಶಲ್ಯನಿಗೆ ಹೇಳುತ್ತಾನೆ. ಈ ಪ್ರಸಂಗವು ಇಲ್ಲಿ ಅಸ್ವಾಭಾವಿಕವಾಗಿ ಕಾಣುತ್ತದೆ. ತನ್ನ ಪ್ರಶಂಸೆಯನ್ನು ಮಾಡಿಕೊಳ್ಳುತ್ತಿರುವಾಗ ತನಗೆ ಪ್ರಾಪ್ತವಾಗಿರುವ ಶಾಪದ ವಿಷಯವನ್ನು ಹೇಳಿದರೆ ತನ್ನಲ್ಲಿರುವ ನ್ಯೂನತೆಯನ್ನೇ ಹೇಳಿಕೊಂಡಂತಾಗುತ್ತದೆ. 'ಯುದ್ಧಮಾಡುವ ಸಮಯದಲ್ಲಿ ಅರ್ಜುನನಿಂದ ನಾನು ಹತನಾಗುತ್ತೇನೆ' ಎಂಬುದನ್ನು ಸ್ಪಷ್ಟವಾಗಿ ಇಲ್ಲಿ ಹೇಳಿದಂತಾಗಿದೆ. **'ಸೂತೋಪಧಾವಾಪ್ತಮಿದಂ ತವಾಸ್ತ್ರಂ ನ ಕರ್ಮಕಾಲೇ ಪ್ರತಿಭಾಸ್ಯತಿ ತ್ವಾಮ್ ॥೮॥** ಬ್ರಹ್ಮಾಸ್ತ್ರವು ಮೃತ್ಯುಕಾಲದಲ್ಲಿ ನಿನ್ನ ಸ್ಮರಣೆಗೆ ಬರುವುದಿಲ್ಲ' ಎಂಬುದು ಪರಶುರಾಮನ ಶಾಪ. ಇದನ್ನು ಕರ್ಣನೇ ಹೇಳುತ್ತಾನೆ. **'ಅಬ್ರಾಹ್ಮಣೇ ಬ್ರಹ್ಮ ನ ಧ್ರುವಂ ಸ್ಯಾತ್** ಅಬ್ರಾಹ್ಮಣನಲ್ಲಿ ಬ್ರಹ್ಮಾಸ್ತ್ರವು ಶಾಶ್ವತವಾಗಿರುವುದಿಲ್ಲ.' ಹೀಗೂ ಪರಶುರಾಮನು ಶಾಪವಿತ್ತನೆಂದು ಕರ್ಣನು ಹೇಳುತ್ತಾನೆ. ಆದರೆ ಯುದ್ಧಪ್ರಕರಣದಲ್ಲಿ ಕರ್ಣನ ಅವಸಾನಕಾಲವು ಪ್ರಾಪ್ತವಾದಾಗಲೂ ಕರ್ಣನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಅದು ಸಫಲವಾದ ಉಕ್ತಿಯಿದೆ.

**ತತ್ಸಮೀಕ್ಷ್ಯ ತತಃ ಕರ್ಣೋ ಬ್ರಹ್ಮಾಸ್ತ್ರೇಣ ಧನಂಜಯಮ್ ।**
**ಅಭ್ಯವರ್ಷತ್ಪುನರ್ಯತ್ನಮಕರೋದ್ರಥಸರ್ಜನೇ॥**

ಕೇವಲ ಬ್ರಹ್ಮಾಸ್ತ್ರವು ಮಾತ್ರವಲ್ಲ; ಆಗ್ನೇಯ, ವಾಯವ್ಯ, ಭಾರ್ಗವಾಸ್ತ್ರಗಳನ್ನೂ ಕರ್ಣನು ಪ್ರಯೋಗಿಸುತ್ತಾನೆ. ಯಾವ ಒಂದು ಅಸ್ತ್ರವೂ ವ್ಯರ್ಥವಾಗುವುದಿಲ್ಲ. ಆ ಸಮಯದಲ್ಲಿ ಭಾರ್ಗವನ ಶಾಪದಿಂದ ಅಸ್ತ್ರಗಳ ವಿಸ್ಮರಣೆಯ ವಿಷಯವನ್ನು ಆ ಪ್ರಕರಣದಲ್ಲಿ ಪುನರ್ವಿಮರ್ಶಿಸಲಾಗುವುದು. ಶಾಂತಿಪರ್ವದ ೩ನೆಯ ಅಧ್ಯಾಯದಲ್ಲಿ ಕರ್ಣನಿಗೆ ಪರಶುರಾಮನು ಶಾಪವಿತ್ತ ಪ್ರಕರಣವು ಬರುತ್ತದೆ. ಆದರೆ ಕರ್ಣನು ಇಲ್ಲಿ ಹೇಳಿರುವಂತೆ ಇಂದ್ರನು ಕೀಟರೂಪವನ್ನು ಧರಿಸಿ ಬರುವುದಿಲ್ಲ. ಸತ್ಯಯುಗದಲ್ಲಿ ಭೃಗುಮಹರ್ಷಿಗಳ ಶಾಪಕ್ಕೊಳಗಾದ ದಂಶನೆಂಬ ರಾಕ್ಷಸನು ಕ್ರಿಮಿಯಾಗಿದ್ದನು. ಇಂದ್ರನ

ಪ್ರಸ್ತಾಪವೇ ಅಲ್ಲಿ ಬರುವುದಿಲ್ಲ. ಈ ಕಾರಣಗಳಿಂದ ಈ ಅಧ್ಯಾಯವು ಹೆಚ್ಚು ಪಾಠವಿರಬಹುದೆಂಬ ಸಂಶಯವು ಬರುತ್ತದೆ.

೪೩ನೆಯ ಅಧ್ಯಾಯದ ೨ನೆಯ ಶ್ಲೋಕವನ್ನು ಪರಿಶೀಲಿಸಿದರೆ ಈ ಕಥೆಯು ೪೧ನೆಯ ಅಧ್ಯಾಯದಿಂದ ಅನುವರ್ತಿತವಾಗಿರುವಂತೆ ಕಾಣುತ್ತದೆ.
**ಯತ್ತ್ವಂ ನಿದರ್ಶನಾರ್ಥಂ ಮಾಂ ಶಲ್ಯ ಜಲ್ಪಿತವಾನಸಿ। ನಾಹಂ ಶಕ್ಯಸ್ತ್ವಯಾ ವಾಚಾ ಬಿಭೀಷಯಿತುಮಾಹವೇ (೨)**

'ನೀನು ನಿದರ್ಶನಾರ್ಥವಾಗಿ ಕಾಗೆ-ಹಂಸಗಳ ಕಥೆಯನ್ನು ಹೇಳಿ ತನ್ಮೂಲಕವಾಗಿ ನನ್ನನ್ನು ಹಳಿದು ಮಾತನಾಡುತ್ತಿರುವೆ. ಆದರೆ ಯುದ್ಧ ರಂಗದಲ್ಲಿ ಮಾತಿನಿಂದಲೇ ನನ್ನನ್ನು ಭಯಪಡಿಸಲಾರೆ.' ೪೧ನೆಯ ಅಧ್ಯಾಯದಿಂದ ೪೩ನೆಯ ಅಧ್ಯಾಯಕ್ಕೆ ನೇರವಾದ ಮತ್ತು ಸಮಂಜಸವಾದ ಕಥಾನುವರ್ತನೆಯು ಇರುವುದರಿಂದಲೂ ೪೨ನೆಯ ಅಧ್ಯಾಯವು ಹೆಚ್ಚಿನದೆಂದು ಅನುಮಾನಿಸಬಹುದಾಗಿದೆ. ಈ ೪೩ನೆಯ ಅಧ್ಯಾಯದಲ್ಲಿ ಕರ್ಣನು ಶಲ್ಯನಿಗೆ ಸಮಂಜಸವಾಗಿಯೇ ಉತ್ತರಕೊಡುತ್ತಾನೆ. ಕಡೆಯದಾಗಿ 'ನೀನಿಲ್ಲದಿದ್ದರೂ ನಾನು ಯುದ್ಧಮಾಡಬಲ್ಲೆನು. ಮಿತ್ರದ್ರೋಹವು ಮಹಾ ಪಾಪವೆಂದು ನಾನು ಭಾವಿಸಿರುವುದರಿಂದ ನೀನು ಇದುವರೆಗೂ ಜೀವಿಸಿರಲು ಸಾಧ್ಯವಾಗಿದೆ'–ಎನ್ನುತ್ತಾನೆ ಕರ್ಣ.

೪೪ನೆಯ ಅಧ್ಯಾಯ: ಶಲ್ಯನೂ ಸಹ ಕರ್ಣನ ಧಾಟಿಯಲ್ಲಿಯೇ ಪ್ರತ್ಯುತ್ತರಕೊಡುತ್ತಾನೆ. '**ಋತೇ ಕರ್ಣಸಹಸ್ರೇಣ ಶಕ್ಯಾ ಜೇತುಂ ಪರೇ ಯುಧಿ**'-ಕರ್ಣನು ಪುನಃ ಮಾತನ್ನಾರಂಭಿಸಿ ಮದ್ರ-ವಾಹೀಕ ದೇಶೀಯರನ್ನು ಬಹಳವಾಗಿ ತೆಗಳುತ್ತಾನೆ. ಈ ಅಧ್ಯಾಯವು ಆಗಿನ ಕಾಲ ದಲ್ಲಿ ವಾಹೀಕದೇಶದಲ್ಲಿದ್ದ ಜನರ ನಡೆ-ನುಡಿಗಳನ್ನು ತಿಳಿಸುವುದಾಗಿದೆ. ಮದ್ರದೇಶದ ಜೊತೆಗೆ ವಾಹೀಕದೇಶವನ್ನೂ ಕರ್ಣನು ಏಕೆ ತೆಗಳಿದನೆಂಬುದು ತಿಳಿಯದು. ವಾಹೀಕದೇಶವೂ ಶಲ್ಯನ ಆಧಿಪತ್ಯಕ್ಕೇ ಒಳಪಟ್ಟಿದ್ದಿತೆಂದು ಹೇಳಬಹುದಾಗಿದೆ. ಆರಟ್ಟ ಎಂಬ ದೇಶದ ಹೆಸರನ್ನೂ ಕರ್ಣನಿಲ್ಲಿ ಹೇಳುತ್ತಾನೆ. ಕಟ್ಟಕಡೆಗೆ ಪ್ರಸ್ಥಲ, ಮದ್ರ, ಗಾಂಧಾರ, ಆರಟ್ಟ, ಖಶ, ವಸಾತಿ, ಸಿಂಧು ಮತ್ತು ಸೌವೀರ–ಈ ದೇಶಗಳನ್ನೂ ಕರ್ಣನು ನಿಂದ್ಯವಾದ ದೇಶಗಳೆಂದು ಹೇಳುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೪೫ನೆಯ ಅಧ್ಯಾಯ: ಈ ಅಧ್ಯಾಯದಲ್ಲಿಯೂ ಕರ್ಣನು ಮದ್ರ-ವಾಹೀಕರ ನಿಂದನೆಯನ್ನೇ ಮುಂದುವರಿಸುತ್ತಾನೆ. ಇಷ್ಟು ನಿಂದನೆಗಳಿಗೂ ಶಲ್ಯನು ಕೊಡುವ ಉತ್ತರವು ಎಲ್ಲ ಕಾಲಗಳಿಗೂ ಅನ್ವಯಿಸುವುದಾಗಿದೆ. 'ನ ಕರ್ಣ ದೇಶಸಾಮಾನ್ಯಾತ್ಸರ್ವಃ ಪಾಪಂ ನಿಷೇವತೇ' (೪೬) ಒಂದು ದೇಶದಲ್ಲಿ ವಾಸವಾಗಿರುವ ಮಾತ್ರದಿಂದಲೇ ಆ ದೇಶದವರೆಲ್ಲರೂ ಪಾಪಕರ್ಮಗಳನ್ನೇ ಮಾಡುತ್ತಿರುವುದಿಲ್ಲ.' ಅನಂತರ ದುರ್ಯೋಧನನು ಇಬ್ಬರನ್ನೂ ಸಮಾಧಾನಗೊಳಿಸುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೪೬ನೆಯ ಅಧ್ಯಾಯ: ಕರ್ಣನು ವ್ಯೂಹವನ್ನು ರಚಿಸುತ್ತಾನೆ. ಯಾವ ವ್ಯೂಹವೆಂಬುದನ್ನಿಲ್ಲಿ ಹೇಳಿಲ್ಲ. ಬೃಹಸ್ಪತಿಗೆ ಸಂಬಂಧಿಸಿದ ವ್ಯೂಹವೆಂದು ಮಾತ್ರ ಹೇಳಿದ್ದಾರೆ. ಬಾರ್ಹಸ್ಪತ್ಯ ಎಂಬ ಹೆಸರಿನ ವ್ಯೂಹವೆಂದೂ ಹೇಳಬಹುದು. (೨೬) ಇದನ್ನು ನೋಡಿದ ಯುಧಿಷ್ಠಿರನು ಅರ್ಜುನನಿಗೆ ಪ್ರತಿವ್ಯೂಹವನ್ನು ರಚಿಸಲು ಹೇಳುತ್ತಾನೆ. ಯಾರು ಯಾರೊಡನೆ ಯುದ್ಧ ಮಾಡಬೇಕೆಂಬುದನ್ನೂ ನಿರ್ದೇಶಿಸಿ ಅರ್ಜುನನಿಗೆ ಕರ್ಣನೊಡನೆಯೇ ಯುದ್ಧಮಾಡುವಂತೆ ಹೇಳುತ್ತಾನೆ. ಮುಂದಿನ ಶ್ಲೋಕದಲ್ಲಿ 'ಹಾಗೆಯೇ ಆಗಲೆಂದು ಹೇಳಿ ಅರ್ಜುನನು ಸೇನಾಮುಖದಲ್ಲಿ ಹೋಗಿ ನಿಂತನು' ಎಂದೂ ಇದೆ. ಆದರೆ ಮುಂದೆ ಧರ್ಮರಾಜನ ನಿರ್ದೇಶದಂತೆ ಯುದ್ಧವು ನಡೆಯುವುದಿಲ್ಲ. ಅರ್ಜುನನು ಸೇನಾಮುಖದಲ್ಲಿ ನಿಂತಿರುವನೆಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿದ್ದರೂ, ಶಲ್ಯನು ಕರ್ಣನೊಡನೆ, ಅರ್ಜುನನು ರಥದಲ್ಲಿ ಕುಳಿತು ಹೇಗೆ ಬರುತ್ತಿರುವನೆಂಬುದನ್ನು ವರ್ಣನೆಮಾಡುತ್ತಾನೆ. ಈ ಮಧ್ಯದಲ್ಲಿ ರಥದ ವರ್ಣನೆಯನ್ನು ಮಾಡುವ ಎರಡು ಶ್ಲೋಕಗಳಿವೆ. ಈ ಶ್ಲೋಕಾರ್ಥಗಳು ಅಷ್ಟು ಸ್ಪಷ್ಟವಾಗಿಲ್ಲ. ೩೯ನೆಯ ಶ್ಲೋಕದ ಕಡೆಯಲ್ಲಿ **ತಮಾದ್ಯಂ ರಥಮಾಸ್ಥಾಯ ಪ್ರಯಾತೌ ಕೇಶವಾರ್ಜುನೌ** ಎಂಬುದಾಗಿದೆ. ಈ ಎರಡು ಶ್ಲೋಕಗಳೂ ಭಂ. ರಿ. ಇನ್‌ಸ್ಟಿಟ್ಯೂಟಿನ ಪುಸ್ತಕದಲ್ಲಿಲ್ಲ.

ಮುಂದೆ ಶಲ್ಯನು ೫೯ ಮತ್ತು ೬೦ನೆಯ ಶ್ಲೋಕಗಳಲ್ಲಿ 'ಅವುಗಳೇ ಧೀಮಂತನಾದ ಶ್ರೀಕೃಷ್ಣನ ಶಂಖ-ಚಕ್ರ-ಗದಾ-ಶಾರ್ಙ್ಗಗಳು. ಕೌಸ್ತುಭ

ಮಣಿಯು ಶ್ರೀಕೃಷ್ಣನ ವಕ್ಷಃಸ್ಥಳದಲ್ಲಿ ಅತಿಶಯವಾಗಿ ಪ್ರಕಾಶಿಸುತ್ತಿದೆ'–ಎಂಬುದಾಗಿ ಹೇಳುತ್ತಾನೆ. ಶ್ರೀಕೃಷ್ಣನು ಯುದ್ಧಸಮಯದಲ್ಲಿ ಶಂಖ-ಚಕ್ರ-ಗದಾಪಾಣಿಯಾಗಿರುವ ಪ್ರಕರಣವು ಎಲ್ಲಿಯೂ ಬಂದಿಲ್ಲ. ಆದುದರಿಂದ ಇದು ಹೆಚ್ಚು ಪಾಠವಿರಬಹುದೆಂದು ಹೇಳಬಹುದಾಗಿದೆ. ಇದೇ ಮುಂತಾದ ೧೨ ಶ್ಲೋಕಗಳು ಭಂ .ರಿ. ಇನ್‌ಸ್ಟಿಟ್ಯೂಟಿನ ಪುಸ್ತಕದಲ್ಲಿಲ್ಲ.

ಮುಂದೆ ಅರ್ಜುನನು ಸಂಶಪ್ತಕರೊಡನೆ ಯುದ್ಧಕ್ಕೆ ಹೋಗುತ್ತಾನೆ. ಕರ್ಣನ ಬಳಿಗೆ ಯುದ್ಧಕ್ಕೆ ಬರುವುದಿಲ್ಲ. ಆದರೆ ಶಲ್ಯನು ಮಾತ್ರ–'ಅಯಂ ಸ ರಥ ಆಯಾತಿ'–ಎಂದೇ ಪ್ರಾರಂಭಮಾಡಿ ಹೇಳುತ್ತಾನೆ. ಕರ್ಣನ ಬಳಿಗೆ ಹೋಗುತ್ತಿದ್ದಾಗ ಮಧ್ಯದಲ್ಲಿ ಸಂಶಪ್ತಕರು ಯುದ್ಧಕ್ಕೆ ಆಹ್ವಾನಿಸಿದರೆಂದು ಭಾವಿಸಬಹುದಾಗಿದೆ. ಈ ಅಧ್ಯಾಯದಲ್ಲಿಯೂ ಶಲ್ಯನು ಅರ್ಜುನನನ್ನು ಬಹಳವಾಗಿ ಹೊಗಳುತ್ತಾನೆ. ಅಂತೆಯೇ ಭೀಮಾರ್ಜುನ-ನಕುಲ-ಸಹದೇವ-ಸಾತ್ಯಕಿಯರನ್ನೂ ಹೊಗಳುತ್ತಾನೆ. ಹೀಗೆ ಶಲ್ಯ-ಕರ್ಣರು ಮಾತನಾಡುತ್ತಿರುವಾಗ ಪರಸ್ಪರ ಯುದ್ಧವು ಪ್ರಾರಂಭವಾಗುತ್ತದೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೪೭ನೆಯ ಅಧ್ಯಾಯ: ಈ ಅಧ್ಯಾಯದಲ್ಲಿ ಅರ್ಜುನನಿಗೂ ಸಂಶಪ್ತಕರಿಗೂ ನಡೆದ ಯುದ್ಧದ ವರ್ಣನೆಯಿದೆ. ಈ ಅಧ್ಯಾಯದ ೧೮ನೆಯ ಶ್ಲೋಕದಲ್ಲಿ ಕ್ಷತ್ರಿಯ-ವೈಶ್ಯ-ಶೂದ್ರವೀರರ ಯುದ್ಧವು ಶರೀರ-ಪಾಪ-ಪ್ರಾಣಾಪಹಾರಕವೂ, ಧರ್ಮಸಮ್ಮತವೂ, ಸ್ವರ್ಗಪ್ರಾಪಕವೂ, ಯಶಸ್ಕರವೂ ಆಗಿದ್ದಿತು–

**ತೇಷಾಮನ್ತಕರಂ ಯುದ್ಧಂ ದೇಹಪಾಪ್ಮಾಸುನಾಶನಮ್ ।**
**ಕ್ಷತ್ರವಿಟ್ಶೂದ್ರವೀರಾಣಾಂ ಧರ್ಮ್ಯಂ ಸ್ವರ್ಗ್ಯಂ ಯಶಸ್ಕರಮ್ ॥**

ಎಂಬುದಾಗಿದೆ. ಈ ಶ್ಲೋಕದಂತೆ ಹಿಂದೆ ಸೈನ್ಯಕ್ಕೆ ಕ್ಷತ್ರಿಯ-ವೈಶ್ಯ-ಶೂದ್ರರೂ ಸೇರುತ್ತಿದ್ದರೆಂದೂ ಯುದ್ಧವೃತ್ತಿಯು ಕ್ಷತ್ರಿಯರಿಗೆ ಮಾತ್ರವೇ ಸೀಮಿತವಾಗಿರಲಿಲ್ಲವೆಂದೂ ಹೇಳಬಹುದಾಗಿದೆ. ಕರ್ಣನು ಪಾಂಡವರೊಡನೆ

ಯುದ್ಧಮಾಡುತ್ತಾ ಯುಧಿಷ್ಠಿರನನ್ನು ಪೀಡಿಸುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೪೮ನೆಯ ಅಧ್ಯಾಯ: ಕರ್ಣ, ಕರ್ಣನ ಮಕ್ಕಳು, ಕೌರವಯೋಧರು ಮತ್ತು ಧೃಷ್ಟದ್ಯುಮ್ನ, ಸಾತ್ಯಕಿ, ಭೀಮಸೇನ–ಇವರೇ ಮೊದಲಾದ ಪಾಂಡವರೂ ಯುದ್ಧಮಾಡುತ್ತಿರುತ್ತಾರೆ. ೧೮ನೆಯ ಶ್ಲೋಕದಲ್ಲಿ ಸುಷೇಣ ಮತ್ತು ಸತ್ಯಸೇನ ಎಂಬ ಅವನ ಇಬ್ಬರೇ ಮಕ್ಕಳು ಕರ್ಣನ ಚಕ್ರರಕ್ಷಕ ರಾಗಿದ್ದರೆಂದು ಹೇಳಿದೆ. ಇಲ್ಲಿ 'ಭಾನುಸೇನ' ಎಂಬ ಹೆಸರಿಲ್ಲ. ೨೭ನೆಯ ಶ್ಲೋಕದಲ್ಲಿ ಕರ್ಣನ ಮಗನಾದ ಭಾನುಸೇನನನ್ನು ಭೀಮಸೇನನು ಸಂಹರಿ ಸಿದನೆಂದಿದೆ. ಭಾನುಸೇನನು ಯುದ್ಧದಲ್ಲಿ ಭಾಗವಹಿಸಿದನೆಂಬ ವಿಷಯವೇ ಈ ಹಿಂದೆ ಈ ಅಧ್ಯಾಯದಲ್ಲಿ ಇಲ್ಲ. ಕರ್ಣನ ಮಗನಾದ ವೃಷಸೇನನ ಪರಾಕ್ರಮವು ವರ್ಣಿಸಲ್ಪಟ್ಟಿದೆ. ಕರ್ಣನೂ ಸಹ ಅತುಲಪರಾಕ್ರಮವನ್ನು ತೋರಿಸುತ್ತಾನೆ. ಎರಡು ಪಕ್ಷಗಳವರಿಗೂ ಯುದ್ಧವು ನಡೆಯುತ್ತಿರು ವಂತೆಯೇ ಅಧ್ಯಾಯವು ಮುಗಿಯುತ್ತದೆ. ಭಂ. ರಿ. ಇನ್‌ಸ್ಟಿಟ್ಯೂಟಿನ ಪುಸ್ತಕದಲ್ಲಿ ಭಾನುಸೇನ ಎಂಬುದಕ್ಕೆ ಬದಲಾಗಿ ಸತ್ಯಸೇನ ಎಂದೇ ಇದೆ. ಆದರೆ ಈ ಅಧ್ಯಾಯದಲ್ಲಿ ಮುಂದೆ ಸತ್ಯಸೇನನು ಯುದ್ಧಮಾಡುವ ಪ್ರಸಂಗವು ಬರದೆ ಸುಷೇಣನೊಬ್ಬನೇ ಯುದ್ಧಮಾಡುವ ಪ್ರಸಂಗವು ಬಂದಿದ್ದರೂ ಮುಂದೆ ಸತ್ಯಸೇನನ ಹೆಸರು ಸುಷೇಣನ ಹೆಸರಿನೊಡನೆಯೇ ಬರುತ್ತದೆ. ಅವನೂ ಸಹ ಯುದ್ಧಮಾಡುತ್ತಾನೆ. ಆದುದರಿಂದ ಯಾವುದು ಸರಿ ಎಂದು ನಿರ್ಧರಿಸುವುದು ಕಷ್ಟವೇ ಸರಿ.

೪೯ನೆಯ ಅಧ್ಯಾಯ: ಇದೂ ಒಂದು ಮುಖ್ಯವಾದ ಅಧ್ಯಾಯ ಅಥವಾ ಸಮಸ್ಯಾಪೂರ್ಣವಾದ ಅಧ್ಯಾಯ. ಕರ್ಣನು ಯುಧಿಷ್ಠಿರನನ್ನು ಆಕ್ರಮಿಸುತ್ತಾನೆ. ಆ ಸಮಯದಲ್ಲಿ ರಾಜನನ್ನು ರಕ್ಷಿಸುವ ಸಲುವಾಗಿ ಪಾಂಡು-ಪಾಂಚಾಲಯೋಧರೂ ಅವನ ಜೊತೆಯಲ್ಲಿಯೇ ಇರುತ್ತಾರೆ. (೯)ಯುಧಿಷ್ಠಿರನೇ ಕರ್ಣನನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆ. ಘೋರವಾದ ಯುದ್ಧವು ನಡೆಯುತ್ತಿರುವಾಗ ಯುಧಿಷ್ಠಿರನು ಮಹಾಬಾಣವೊಂದನ್ನು ಕರ್ಣನ ಮೇಲೆ ಪ್ರಯೋಗಿಸುತ್ತಾನೆ. ಕರ್ಣನು ಮೂರ್ಛಿತನಾಗಿ ಕೆಳಗೆ ಬೀಳುತ್ತಾನೆ. ಕೌರವರ ಕಡೆಯಲ್ಲಿ ಹಾಹಾಕಾರವಾಗುತ್ತದೆ. ಪಾಂಡವರ

ಕಡೆಯಲ್ಲಿ ಜಯಘೋಷವಾಗುತ್ತದೆ. ಎಚ್ಚೆತ್ತ ಕರ್ಣನು ಯುಧಿಷ್ಠಿರನೊಡನೆ ಪುನಃ ಯುದ್ಧದಲ್ಲಿ ತೊಡಗುತ್ತಾನೆ. ಯುದ್ಧವು ನಡೆಯುತ್ತಿದ್ದಾಗ ಕರ್ಣನು ಯುಧಿಷ್ಠಿರನ ಧನುಸ್ಸನ್ನು ಕತ್ತರಿಸುತ್ತಾನೆ. (೩೧) ಸಾತ್ಯಕಿ ಮೊದಲಾದವರು ಧರ್ಮರಾಜನನ್ನು ರಕ್ಷಿಸುವ ಇಚ್ಛೆಯಿಂದ ಕರ್ಣನನ್ನು ಪ್ರಹರಿಸುತ್ತಾರೆ. (೩೭) ಆ ಸಮಯದಲ್ಲಿ ಕರ್ಣನು ಬ್ರಹ್ಮಾಸ್ತ್ರಪ್ರಯೋಗ ಮಾಡುತ್ತಾನೆ. ಇದರಿಂದ ಅನೇಕರು ಅಸುನೀಗುತ್ತಾರೆ.

೪೦ನೆಯ ಶ್ಲೋಕದಲ್ಲಿ ಪುನಃ 'ಕರ್ಣನು ಯುಧಿಷ್ಠಿರನ ಧನುಸ್ಸನ್ನು ಕತ್ತರಿಸಿದನು' ಎಂದಿದೆ. ೩೧ನೆಯ ಶ್ಲೋಕದಲ್ಲಿಯೂ ಧನುಸ್ಸನ್ನು ಕತ್ತರಿಸಿದ ವಿಷಯವಿದೆ. ಮುಂದೆ ಯುಧಿಷ್ಠಿರನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡ ವಿಷಯವಾಗಲೀ–ಕರ್ಣನನ್ನು ಪ್ರಹರಿಸಿದ ವಿಷಯವಾಗಲೀ ಈ ಮಧ್ಯದಲ್ಲಿ ಬರುವುದಿಲ್ಲ. ಭಂ.ರಿ. ಇನ್‌ಸ್ಟಿಟ್ಯೂಟಿನ ಪುಸ್ತಕದಲ್ಲಿಯೂ ಹೀಗೆಯೇ ಇದೆ. ಪುನಃ ಧನುಸ್ಸನ್ನೆತ್ತಿಕೊಂಡು ಯುಧಿಷ್ಠಿರನು ಯುದ್ಧ ಮಾಡುತ್ತಿದ್ದನೆಂದು ಅಧ್ಯಾಹಾರಮಾಡಿಕೊಳ್ಳಬೇಕಾಗುತ್ತದೆ. ಧನುಸ್ಸನ್ನು ಕತ್ತರಿಸಿದರೆ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಯುದ್ಧಮಾಡುವ ಪ್ರಕರಣವು ಬರುತ್ತದೆಯೇ ಹೊರತು ಅಧ್ಯಾಹಾರಮಾಡಿಕೊಳ್ಳಬೇಕಾದ ಸಂದರ್ಭವು ಸಾಮಾನ್ಯವಾಗಿ ಬರುವುದಿಲ್ಲ. ಪುನಃ ಕರ್ಣನು ಯುಧಿಷ್ಠಿರನ ಕವಚವನ್ನು ಕತ್ತರಿಸುತ್ತಾನೆ. ಯುಧಿಷ್ಠಿರನು ಬಿಟ್ಟ ಶಕ್ತಿಯನ್ನೂ ಕತ್ತರಿಸುತ್ತಾನೆ. ತೋಮರಗಳಿಂದ ಕರ್ಣನನ್ನು ಯುಧಿಷ್ಠಿರನು ಬಹಳವಾಗಿ ಗಾಯಗೊಳಿಸುತ್ತಾನೆ. ಅದರಿಂದ ಕುಪಿತನಾದ ಕರ್ಣನು ಯುಧಿಷ್ಠಿರನ ಧ್ವಜ, ಬತ್ತಳಿಕೆ ಮತ್ತು ರಥಗಳನ್ನು ಛಿನ್ನ-ಭಿನ್ನಮಾಡಿಬಿಡುತ್ತಾನೆ. ಅರ್ಥಾತ್ ಯುಧಿಷ್ಠಿರನು ಆ ಸಮಯದಲ್ಲಿ ಧನುಸ್ಸು-ಕವಚ-ಬತ್ತಳಿಕೆ-ಧ್ವಜ-ರಥ–ಎಲ್ಲದರಿಂದಲೂ ವಿಹೀನನಾಗಿರುತ್ತಾನೆ. ಮುಂದೆ ತನ್ನ ರಥದಲ್ಲಿದ್ದ ಕಪ್ಪುಬಣ್ಣದ ಬಾಲಗಳಿಂದ ಕೂಡಿದ್ದ ಬಿಳಿಯ ಬಣ್ಣದ ಕುದುರೆಗಳನ್ನು ಕಟ್ಟಿದ್ದ ಮತ್ತೊಂದು ರಥದಲ್ಲಿ ಕುಳಿತು ಯುಧಿಷ್ಠಿರನು ಯುದ್ಧದಿಂದ ಪರಾಙ್ಮುಖನಾದನೆಂದಿದೆ. (೪೮) ಕರ್ಣನು ರಥವನ್ನು ಧ್ವಂಸಮಾಡಿದ ನಂತರ ಕುದುರೆಗಳು ಉಳಿದುಕೊಳ್ಳುವ ಸಾಧ್ಯತೆಯಿಲ್ಲ. ಕುದುರೆಗಳಿಲ್ಲದ ರಥವನ್ನು ತಂದು ನಿಲ್ಲಿಸುವ ಪ್ರಕರಣವು ಇದುವರೆಗೂ ಬಂದಿರುವುದಿಲ್ಲ.

ಈ ಶ್ಲೋಕವು ಭಂ. ರಿ. ಇನ್‌ಸ್ಟಿಟ್ಯೂಟಿನವರ ಪುಸ್ತಕದಲ್ಲಿಲ್ಲ. ಮುಂದೆ ಕರ್ಣನು ಯುಧಿಷ್ಠಿರನನ್ನು ಹಿಂಬಾಲಿಸಿ ಹೋಗುತ್ತಾನೆ. ಹಿಂದೆ ಬಂದಿದ್ದ ಭೀಮಸೇನ-ನಕುಲ-ಸಹದೇವರ ಪ್ರಕರಣವೇ ಇಲ್ಲಿಯೂ ಪುನರಾವರ್ತ ವಾಗಿದೆ. ರಥದಲ್ಲಿ ಹೋಗುತ್ತಿರುವ ಯುಧಿಷ್ಠಿರನನ್ನು ಅಥವಾ ನಡೆದು ಹೋಗುತ್ತಿರುವ ಯುಧಿಷ್ಠಿರನನ್ನು ಕರ್ಣನು ಹಿಂಬಾಲಿಸಿ ಹೋಗಿ ಅವನನ್ನು ಹಿಡಿದು ಜೀವಗ್ರಹಣಮಾಡಲು ಪ್ರಯತ್ನಿಸಿದನೆಂದಿದೆ. (೫೦) ಇಬ್ಬರೂ ರಥದ ಮೇಲೆ ಹೋಗುತ್ತಿರುವಾಗ ಮುಟ್ಟಲು ಹೇಗೆ ಸಾಧ್ಯ? ಜೀವಗ್ರಹಣ ಮಾಡಲು ಹೇಗೆ ಸಾಧ್ಯ? ಯುಧಿಷ್ಠಿರನ ರಕ್ಷಣೆಗಾಗಿಯೇ ಪಾಂಡವ ಯೋಧರು ಸಿದ್ಧರಾಗಿದ್ದರು. ಆ ಸಮಯದಲ್ಲಿ ಅವರಾರೂ ಯುಧಿಷ್ಠಿರನ ರಕ್ಷಣೆಗೆ ಬರಲೇ ಇಲ್ಲವೇ? ಆ ಸಮಯದಲ್ಲಿ ಕರ್ಣನಿಗೆ ಕುಂತಿಯು ಹೇಳಿದ ಮಾತು ಸ್ಮರಣೆಗೆ ಬಂದಿತೆಂದು ಇಲ್ಲಿಯೂ ವಾಕ್ಯವಿದೆ. ಇದನ್ನು ಸಂಜಯನು ಹೇಗೆ ಹೇಳುತ್ತಾನೆಂಬುದು ನಮ್ಮ ಪ್ರಶ್ನೆಯಾಗಿದೆ. ಕುಂತೀ-ಕೃಷ್ಣರ ಮಾತು ರಹಸ್ಯದ್ದು. ಅನಂತರ ಶಲ್ಯನೂ ಸಹ ಜೀವಗ್ರಹಣ ಮಾಡಬೇಡವೆಂದು ಕರ್ಣನಿಗೆ ಸಲಹೆನೀಡುತ್ತಾನೆ. ಕರ್ಣನು ಹಿಂದೆ ಭೀಮ-ನಕುಲ-ಸಹದೇವರನ್ನು ನಿಂದಿಸಿದಂತೆಯೇ ಇಲ್ಲಿಯೂ ಯುಧಿಷ್ಠಿರ ನನ್ನು ಹೇಡಿ ಎಂದು ಅರ್ಥದಲ್ಲಿ ನಿಂದಿಸುತ್ತಾನೆ. ಸ್ವಲ್ಪ ಹಿಂದೆ ಕರ್ಣನೇ ಯುಧಿಷ್ಠಿರನ ಬಾಣಗಳಿಂದ ಮೂರ್ಛಿತನಾಗಿ ಬಿದ್ದಿದ್ದನು. ಬಲವಾಗಿ ಪೆಟ್ಟುತಿಂದ ಅನುಭವವಿರುವವನು ಅಷ್ಟು ಕುತ್ಸಿತವಾಗಿ ಮಾತನಾಡಲು ಸಾಧ್ಯವೇ? ಅದರಲ್ಲಿಯೂ ಕರ್ಣನು ಹಾಗೆ ಮಾತನಾಡುವನೇ? ಭೀಮ-ನಕುಲ- ಸಹದೇವರಿಗೆ ಹೇಳಿದ್ದಂತೆಯೇ ಕರ್ಣನು ಇಲ್ಲಿಯೂ **ಸ್ವಗೃಹಂ ಗಚ್ಛ ಕೌಂತೇಯ ಯತ್ರ ತೌ ಕೇಶವಾರ್ಜುನೌ।** (೫೮) ಎಂದೇ ಹೇಳುತ್ತಾನೆ. ಪುನಃ ೬೪ನೆಯ ಶ್ಲೋಕದಲ್ಲಿ-

**ಯುಧಿಷ್ಠಿರಸ್ತು ಕೌರವ್ಯ ರಥಮಾರುಹ್ಯ ಸತ್ವರಮ್ ।**
**ಶ್ರುತಕೀರ್ತೇರ್ಮಹಾರಾಜ ದೃಷ್ಟವಾನ್ಕರ್ಣವಿಕ್ರಮಮ್ ॥೬೪॥**

ಈ ಹಿಂದೆ ಯುಧಿಷ್ಠಿರನು ರಥವನ್ನು ಹತ್ತಿಕೊಂಡು ಹೋಗುತ್ತಿದ್ದ ನೆಂಬುದು ಈ ಶ್ಲೋಕದಿಂದ ಸುಳ್ಳಾಗುತ್ತದೆ. ಏಕೆಂದರೆ: ರಥದಿಂದಿಳಿದ

ಪ್ರಕರಣವು ಬಂದಿರುವುದಿಲ್ಲ. ಆದುದರಿಂದ ೪೭ನೆಯ ಶ್ಲೋಕವಾದೊಡ ನೆಯೇ ಈ ಶ್ಲೋಕವು ಬರುವುದು ಬಹಳ ಸಮಂಜಸವಾಗಿದೆ.

ಧ್ವಜಂ ಚಿಚ್ಛೇದ ಭಲ್ಲೇನ ತ್ರಿಭಿರ್ವಿವ್ಯಾಧ ಪಾಣ್ಡವಮ್ ।
ಇಷುಧೀ ಚಾಸ್ಯ ಚಿಚ್ಛೇದ ರಥಂ ತಿಲಶೋಽಚ್ಛಿನತ್ ॥೪೭॥

ಯುಧಿಷ್ಠಿರಸ್ತು ಕೌರವ್ಯ ರಥಮಾರುಹ್ಯ ಸತ್ವರಮ್ ।
ಶ್ರುತಕೀರ್ತೇರ್ಮಹಾರಾಜ ದೃಷ್ಟವಾನ್ಕರ್ಣವಿಕ್ರಮಮ್ ॥೬೪॥

ಈ ಶ್ಲೋಕಗಳೆರಡರ ಮಧ್ಯದ ಪಾಠವು ಹೆಚ್ಚಿನದೆಂಬುದು ನಮ್ಮ ಅಭಿಪ್ರಾಯವಾಗಿದೆ. ಕುಂತಿಯ ಮಾತು ಕರ್ಣನ ಸ್ಮರಣೆಯಲ್ಲಿರಬಹುದು. ಅವನು ನಾಲ್ವರು ಪಾಂಡವರನ್ನು ಸಂಹರಿಸಬಹುದಾದ ಸಂದರ್ಭದಲ್ಲಿ ಸಂಹರಿಸದೆಯೂ ಇರಬಹುದು. ಆದರೆ ಕುತ್ಸಿತವಾದ ಮಾತುಗಳನ್ನಾಡಿ ನಾಲ್ವರನ್ನೂ ಅವಮಾನಗೊಳಿಸಿದನೆಂದು ಹೇಳುವುದು; ಈ ವಿಷಯವನ್ನು ಧೃತರಾಷ್ಟ್ರನು ಕೇಳುವುದು ಅಥವಾ ಸಂಜಯನು ಹೇಳುವುದು– ಅಸಂಗತ ವಾಗಿ ಕಾಣುತ್ತದೆ. ಮೇಲಾಗಿ ಈ ಸಂದರ್ಭದಲ್ಲಿ ಮಧ್ಯೆ ಪೋಣಿಸಿರುವ ಶ್ಲೋಕಗಳು ಸ್ಪಷ್ಟವಾಗಿಯೂ ಕಾಣುತ್ತವೆ. ಅವುಗಳನ್ನು ಬಿಟ್ಟು ಓದಿದರೆ ಕಥೆಯು ಯಾವ ವಿಧವಾದ ವಿರೋಧಾಭಾಸಗಳೂ ಇಲ್ಲದೇ ಸಾಂಗತ್ಯದಿಂದ ಮುಂದುವರಿಯುತ್ತದೆ.

ಯುಧಿಷ್ಠಿರನು ಪುನಃ ತನ್ನ ಕಡೆಯ ಯೋಧರನ್ನು ಕೌರವಯೋಧ ರೊಡನೆ ಯುದ್ಧಮಾಡುವಂತೆ ಪ್ರೋತ್ಸಾಹಿಸುತ್ತಾನೆ. ಘೋರವಾದ ಯುದ್ಧ ವಾಗುತ್ತದೆ. ಭೀಮಸೇನ-ಸಾತ್ಯಕಿಯರ ಪ್ರಹಾರದಿಂದ ಗಾಯಗೊಂಡ ಕೌರವಯೋಧರು ಪಲಾಯನಮಾಡುತ್ತಾರೆ. ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ.

೫೦ನೆಯ ಅಧ್ಯಾಯ: ಕೌರವಸೈನ್ಯವು ಪಲಾಯನಮಾಡುತ್ತಿರುವುದನ್ನು ನೋಡಿ ಕರ್ಣನು ತನ್ನ ರಥವನ್ನು ಭೀಮಸೇನನ ರಥದ ಬಳಿಗೆ ನಡೆಸಲು ಶಲ್ಯನಿಗೆ ಹೇಳುತ್ತಾನೆ. ಧರ್ಮರಾಜನನ್ನು ಸಾತ್ಯಕಿಯೇ ಮೊದಲಾದ ಯೋಧರಿಗೊಪ್ಪಿಸಿ ಭೀಮಸೇನನು ಕರ್ಣನೊಡನೆ ಯುದ್ಧಮಾಡಲು ಹೋಗುತ್ತಾನೆ. ಕರ್ಣನೂ ಅನುಮೋದಿಸಿ ಭೀಮನೊಡನೆ ಯುದ್ಧಮಾಡಿ ಅವನನ್ನು ಸಂಹರಿಸಿದನಂತರ ಧನಂಜಯನೊಡನೆ ಯುದ್ಧಮಾಡುವೆನೆನ್ನು

ತ್ತಾನೆ. ಶಲ್ಯನು ಭೀಮಸೇನನಿಗೆದುರಾಗಿ ರಥವನ್ನು ನಿಲ್ಲಿಸುತ್ತಾನೆ. ಕರ್ಣ ಭೀಮರಿಬ್ಬರಿಗೂ ಮಹಾಘೋರವಾದ ಯುದ್ಧವು ನಡೆಯುತ್ತದೆ. ಭೀಮ ಸೇನನ ವಜ್ರಾಯುಧಕ್ಕೆ ಸಮಾನವಾದ ಬಾಣದಿಂದ ಪ್ರಹೃತನಾದ ಕರ್ಣನು ಮೂರ್ಛಿತನಾಗುತ್ತಾನೆ. ಕರ್ಣನು ಮೂರ್ಛಿತನಾದುದನ್ನು ಕಂಡು ಶಲ್ಯನು ರಥವನ್ನು ರಣಭೂಮಿಯಿಂದ ಹೊರಕ್ಕೆ ನಡೆಸಿಕೊಂಡುಹೋಗುತ್ತಾನೆ. ಕರ್ಣನು ಹೊರಟುಹೋದನಂತರ ಭೀಮಸೇನನು ಕೌರವರ ಸೈನ್ಯವನ್ನು ಸದೆಬಡಿಯುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೫೧ನೆಯ ಅಧ್ಯಾಯ: ಭೀಮಸೇನನನ್ನು ವಧೆಮಾಡಿ ಅನಂತರ ಅರ್ಜುನನನ್ನೂ ವಧೆಮಾಡುತ್ತೇನೆಂದು ಹೇಳಿದ್ದ ಕರ್ಣನೇ ಭೀಮನಿಂದ ಪ್ರಹಾರ ತಿಂದು ಓಡಿಹೋಗುವಂತಾಯಿತು. ಇದರಿಂದ ಧೃತರಾಷ್ಟ್ರನಿಗೆ ತಡೆಯಲಾಗದಷ್ಟು ದುಃಖವಾಗುತ್ತದೆ. ಅದನ್ನೇ ಸಂಜಯನ ಸಂಗಡ ಹೇಳಿ ಕೊಳ್ಳುತ್ತಾನೆ. 'ಪಾಂಡವರೆಲ್ಲರನ್ನೂ ಸಂಹರಿಸುತ್ತೇನೆಂದು ಪದೇ ಪದೇ ಹೇಳಿಕೊಳ್ಳುತ್ತಿದ್ದ ಕರ್ಣನು ಭೀಮಸೇನನಿಂದ ಪರಾಜಿತನಾಗಿ ಪಲಾಯನ ಮಾಡಿದನಂತರ ನನ್ನ ಮೂರ್ಖಮಗ ಮುಂದೇನು ಮಾಡಿದನು?' ಕರ್ಣ ನನ್ನು ರಕ್ಷಿಸುವ ಸಲುವಾಗಿ ದುರ್ಯೋಧನನು ತನ್ನ ಇಪ್ಪತ್ತು ಸಹೋದರ ರನ್ನು ಕಳುಹಿಸುತ್ತಾನೆ. ಅವರಲ್ಲಿ ಆರು ಜನರ ತಲೆಗಳನ್ನು ಭೀಮಸೇನನು ಕತ್ತರಿಸುತ್ತಾನೆ. ಉಳಿದವರು ಓಡಿಹೋಗುತ್ತಾರೆ. ಕರ್ಣನಿಗೆ ಸಹಾಯ ಮಾಡಲು ತನ್ನ ತಮ್ಮಂದಿರನ್ನು ಭೀಮನೊಡನೆ ಯುದ್ಧಕ್ಕೆ ಕಳುಹಿಸಿದಾಗ ಲೆಲ್ಲಾ ಅವರ ವಧೆಯಾಗುವುದು ಒಂದು ವಿಪರ್ಯಾಸ. ಕರ್ಣನನ್ನು ಉಳಿಸಿ ಕೊಳ್ಳಲು ತಮ್ಮಂದಿರನ್ನು ಬಲಿಗೊಟ್ಟಂತೆ ಭಾಸವಾಗುತ್ತದೆ. ಹಿಂದಿನ ಮೂರು-ನಾಲ್ಕು ಕಡೆಗಳಲ್ಲಿಯೂ ಸಂದರ್ಭವು ಹೀಗೆಯೇ ಬಂದಿದೆ. ಇದ ರಿಂದ ದುಃಖಿತನಾದ ಕರ್ಣನು ಭೀಮಸೇನನೊಡನೆ ಪುನಃ ಯುದ್ಧಮಾಡು ತ್ತಾನೆ. ಕಟ್ಟಕಡೆಗೆ ಭೀಮನನ್ನು ರಥಹೀನನನ್ನಾಗಿ ಮಾಡುತ್ತಾನೆ. ಭೀಮ ಸೇನನು ಗದಾಪಾಣಿಯಾಗಿ ಕೌರವಗಜಸೇನೆಯನ್ನು ಧ್ವಂಸಮಾಡಲು ಉಪ ಕ್ರಮಿಸುತ್ತಾನೆ. ಕೌರವರ ಸೈನಿಕರು ಪಲಾಯನಮಾಡುತ್ತಾರೆ. ಅನಂತರ ಶಕುನಿಯ ಮೂರು ಸಾವಿರ ಅಶ್ವಸೈನ್ಯವನ್ನೂ ಧ್ವಂಸಮಾಡಿ ಮತ್ತೊಂದು ರಥದಲ್ಲಿ ಹತ್ತಿ ಪುನಃ ಕರ್ಣನ ಬಳಿಗೆ ಹೋಗುತ್ತಾನೆ. ಆ ಸಮಯದಲ್ಲಿ

ಕರ್ಣನು ಯುಧಿಷ್ಠಿರನೊಡನೆ ಯುದ್ಧಮಾಡುತ್ತಿರುತ್ತಾನೆ. ಭೀಮ ಮತ್ತು ಸಾತ್ಯಕಿಯರು ಕರ್ಣನೊಡನೆ ಯುದ್ಧವನ್ನಾರಂಭಿಸುತ್ತಾರೆ. ಘೋರವಾದ ಯುದ್ಧವು ನಡೆಯುತ್ತದೆ. ಅಂತೆಯೇ ಕೌರವ-ಪಾಂಡವಯೋಧರಿಗೂ ಭಯಂಕರವಾದ ಪರಸ್ಪರ ವಿನಾಶಕರವಾದ ಯುದ್ಧವು ನಡೆಯುತ್ತದೆ.

೫೨ನೆಯ ಅಧ್ಯಾಯ: ಈ ಅಧ್ಯಾಯದ ಪೂರ್ತಿಯಾಗಿ ಯುದ್ಧದ ವರ್ಣನೆಯಿದೆ. ಅಧ್ಯಾಯದ ಕಡೆಯಲ್ಲಿ ಕೌರವರ ಸೈನ್ಯವು ಸಮುದ್ರದಲ್ಲಿರುವ ಭಿನ್ನವಾದ ನೌಕೆಯಂತೆ ಭಗ್ನವಾಗಿ ಹೋಯಿತು–ಎಂಬ ಯುದ್ಧ ಫಲಿತಾಂಶದ ಕಥನವೂ ಇದೆ.

೫೩ನೆಯ ಅಧ್ಯಾಯ: ೪೮ನೆಯ ಅಧ್ಯಾಯದ ೭೫ನೆಯ ಶ್ಲೋಕದಲ್ಲಿ ಕರ್ಣನು– 'ಅರ್ಜುನನು ಸಂಶಪ್ತಕಸೈನ್ಯಸಮೂಹದಲ್ಲಿ ಮುಳುಗಿ ಹೋದನು' –ಎಂದು ಹೇಳಿರುತ್ತಾನೆ. ಅರ್ಜುನನು ಸಂಶಪ್ತಕರೊಡನೆ ಮಾಡುತ್ತಿರುವ ಆ ಯುದ್ಧವನ್ನೇ ಈ ಅಧ್ಯಾಯದಲ್ಲಿ ವರ್ಣಿಸಲಾಗಿದೆ. ಈಗಿನ ಕಾಲದಲ್ಲಿ ರೊಚ್ಚಿಗೆದ್ದ ಜನರು ಗಲಾಟೆಮಾಡುವಂತೆ ಸಂಶಪ್ತಕ ಯೋಧರು ಅರ್ಜುನನ ರಥದ ಮೇಲೆ ಹತ್ತಿ ಗಲಾಟೆಯನ್ನಾರಂಭಿಸುತ್ತಾರೆ. ಅವರಲ್ಲನೇಕರನ್ನು ಶ್ರೀಕೃಷ್ಣನೇ ಎತ್ತಿ ಕೆಳಕ್ಕೆ ಹಾಕುತ್ತಾನೆ. ಅಂತಹ ಸ್ವಾರಸ್ಯವಾದ ಯುದ್ಧಪ್ರಕರಣವು ಈ ಅಧ್ಯಾಯದಲ್ಲಿದೆ. (೧೩-೧೯) ಈ ಅಧ್ಯಾಯದಲ್ಲಿ ಮತ್ತೊಂದು ವಿಶೇಷವೆಂದರೆ ಅರ್ಜುನನಿಂದ ನಾಗಾಸ್ತ್ರ ಪ್ರಯೋಗ. ಅದರಿಂದ ಸಂಶಪ್ತಕಸೈನಿಕರೆಲ್ಲರೂ ಬಂಧಿತರಾಗುತ್ತಾರೆ. ಅದಕ್ಕೆ ಪ್ರತಿಯಾಗಿ ಸುಶರ್ಮನು ಗಾರುಡಾಸ್ತ್ರವನ್ನು ಪ್ರಯೋಗಿಸುತ್ತಾನೆ. ಯೋಧರನ್ನು ಬಂಧಿಸಿದ್ದ ಸರ್ಪಗಳೆಲ್ಲವೂ ಓಡಿಹೋಗುತ್ತವೆ. ಸುಶರ್ಮನ ಬಾಣಗಳಿಂದ ಬಹಳ ಪೀಡಿತನಾದ ಅರ್ಜುನನು ಅದೇ ಸಮಯದಲ್ಲಿ ಐಂದ್ರಾಸ್ತ್ರವನ್ನು ಪ್ರಕಟಿಸುತ್ತಾನೆ. ಹೀಗೆ ಅರ್ಜುನನು ಆ ಯುದ್ಧದಲ್ಲಿ ಹತ್ತು ಸಾವಿರ ಸಂಶಪ್ತಕರನ್ನು ಸಂಹರಿಸುತ್ತಾನೆ. ಸಂಶಪ್ತಕಸೈನ್ಯದ ಹದಿನಾಲ್ಕು ಸಾವಿರ ಪದಾತಿಗಳು, ಹತ್ತು ಸಾವಿರ ರಥಿಗಳು ಮತ್ತು ಮೂರು ಸಾವಿರ ಆನೆಗಳು ಮಾತ್ರವೇ ಉಳಿದಿರುತ್ತವೆ. ಇಷ್ಟಾದರೂ ಸಂಶಪ್ತಕರು ಯುದ್ಧದಿಂದ ಕದಲುವುದಿಲ್ಲ. ಪುನಃ ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೫೪ನೆಯ ಅಧ್ಯಾಯ: ಕೌರವಯೋಧರಿಗೂ ಪಾಂಡವಯೋಧರಿಗೂ ಯುದ್ಧವು ಪ್ರಾರಂಭವಾಗುತ್ತದೆ. ಶಿಖಂಡೀ ಮತ್ತು ಕೃಪರ ಯುದ್ಧವನ್ನು ಈ ಅಧ್ಯಾಯದಲ್ಲಿ ಮೊದಲು ವರ್ಣಿಸಲಾಗಿದೆ. ಶಿಖಂಡಿಯು ಕೃಪರ ಬಾಣಪ್ರಹಾರದಿಂದ ಧನುಸ್ಸಿನಿಂದಲೂ, ರಥದಿಂದಲೂ ಹೀನನಾಗಿ ಗುರಾಣಿ, ಕತ್ತಿಗಳನ್ನು ಹಿಡಿದು ರಥದಿಂದ ಕೆಳಕ್ಕಿಳಿಯುತ್ತಾನೆ. ಕೃಪರು ಗುರಾಣಿಯನ್ನೂ ಕತ್ತರಿಸಿಬಿಡುತ್ತಾರೆ. ಶಿಖಂಡಿಯು ಖಡ್ಗಹಸ್ತನಾಗಿಯೇ ಅವರ ಕಡೆಗೆ ನುಗ್ಗುತ್ತಾನೆ. ಕೃಪಾಚಾರ್ಯರು ಬಾಣಗಳನ್ನು ಅವನ ಮೇಲೆ ಪ್ರಯೋಗಿಸುತ್ತಲೇ ಇರುತ್ತಾರೆ. ಶಿಖಂಡಿಯು ಸಂಕಟದಲ್ಲಿರುವುದನ್ನು ನೋಡಿ ಸುಕೇತುವು ಕೃಪರನ್ನೆದುರಿಸುತ್ತಾನೆ. ಈ ಮಧ್ಯದಲ್ಲಿ ಶಿಖಂಡಿಯು ತಪ್ಪಿಸಿಕೊಂಡು ಹೊರಟುಹೋಗುತ್ತಾನೆ. ಸುಕೇತುವು ಕೃಪರ ಬಾಣದಿಂದ ಹತನಾಗುತ್ತಾನೆ. ಅನಂತರ ಕೃತವರ್ಮಾ-ಧೃಷ್ಟದ್ಯುಮ್ನರ ಯುದ್ಧದ ವರ್ಣನೆಯಿದೆ. ಧೃಷ್ಟದ್ಯುಮ್ನನು ಕೃತವರ್ಮನ ಸಾರಥಿಯನ್ನು ಸಂಹರಿಸಿ ಅವನನ್ನು ಪರಾಜಯಗೊಳಿಸುತ್ತಾನೆ. ಬಳಿಕ ಕೌರವಯೋಧರು ಧೃಷ್ಟದ್ಯುಮ್ನನನ್ನು ಆಕ್ರಮಿಸುತ್ತಾರೆ. ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ.

೫೫ನೆಯ ಅಧ್ಯಾಯವು ಯುಧಿಷ್ಠಿರಾಶ್ವತ್ಥಾಮರ ಯುದ್ಧದಿಂದ ಪ್ರಾರಂಭವಾಗುತ್ತದೆ. ಅಶ್ವತ್ಥಾಮನು ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚಿಬಿಡುತ್ತಾನೆ. ಆ ಸಮಯದಲ್ಲಿ ಅವನನ್ನು ಯಾರಿಂದಲೂ ಎದುರಿಸಲು ಸಾಧ್ಯವಾಗುವುದಿಲ್ಲ. ಕಡೆಗೆ ಸಾತ್ಯಕಿಯು ದ್ರೌಣಿಯನ್ನು ಎದುರಿಸುತ್ತಾನೆ. ಉಳಿದ ಪಾಂಡವಯೋಧರೂ ಅಶ್ವತ್ಥಾಮನ ಸುತ್ತಲೂ ನಿಂತು ಅವನ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಿರುತ್ತಾರೆ. ಅಶ್ವತ್ಥಾಮನು ಅವ್ಯಾಹತವಾಗಿ ತನ್ನ ಸೈನಿಕರನ್ನೂ, ತನ್ನ ಕಡೆಯ ಯೋಧರನ್ನೂ ಮತ್ತು ತನ್ನನ್ನೂ ಪೀಡಿಸುತ್ತಿರುವುದನ್ನು ನೋಡಿ ಯುಧಿಷ್ಠಿರನು ಅಶ್ವತ್ಥಾಮನನ್ನು 'ಬ್ರಹ್ಮಬಂಧು, ಬ್ರಹ್ಮಬ್ರುವ' ಮುಂತಾಗಿ ನಿಂದಿಸುತ್ತಾನೆ. ಅದಕ್ಕೆ ಯಾವ ಉತ್ತರವನ್ನೂ ನೀಡದೇ ಅಶ್ವತ್ಥಾಮನು ಬಾಣಗಳನ್ನು ಬಿಡುತ್ತಲೇ ಇರುತ್ತಾನೆ. ಆಘಾತವನ್ನು ತಾಳಲಾರದೇ ಯುಧಿಷ್ಠಿರನು ರಣಭೂಮಿಯಿಂದ ಹೊರಟುಹೋಗುತ್ತಾನೆ. ದ್ರೌಣಿಯೂ ಸಹ ಯುದ್ಧದಿಂದ ವಿರಮಿಸುತ್ತಾನೆ.

(ಮುಂದಿನ ಸಂಪುಟದಲ್ಲಿ ಮುಂದುವರಿಯುವುದು)

